ಸಂ.೩೧.

# ಶಿವಾನುಭವ

೧೯೫೭.

ಸಂಪುಟ ೩೧ ಸಂಚಿಕೆ ೪-೫

# ಶಿವಾನುಭವ

ಸಂಪಾದಕರು

ಡಾ॥ ರಾ. ಬ. ಫ. ಗು. ಹಳಕಟ್ಟಿ,

ಬಿ. ಏ. ಎಲ್. ಎಲ್. ಬಿ.

ವಿಜಾಪುರ.

[ವಾರ್ಷಿಕ ಚಂದಾ ೫-೧೨-೦ ಅಂಚೆಯ ವೆಚ್ಚ ಬೇರೆ]

ಎಪ್ರೇಲ, ಮೇ ೧೯೫೭

# ★ ವಿಷಯಾನುಕ್ರಮಣಿಕೆ ★



# ಶಿವಾನುಭವ

ಸಂಪುಟ ೩೧ ಎಪ್ರೇಲ ೧೯೫೭ ಸಂಚಿಕೆ ೪+5

## ವೀರಶೈವವು ಶಕ್ತಿವಿಶಿಷ್ಟಾದ್ವೈತವೇ ಹೌದು.

( ಬರೆದವರು:- ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ )

ಆತ್ಮ ವಿಚಾರ ಮಂದಿರದ ಅಧ್ಯಕ್ಷ ಶ್ರೀ ಎಮ್. ಎಲ್. ನಾಗಣ್ಣನವರು ಆತ್ಮ ವಿಚಾರ ಮಾಸಪತ್ರಿಕೆಯನ್ನು ಪ್ರಸಿದ್ಧಿಸುತ್ತಿರುವರು. ಅಲ್ಲದೆ ಅನೇಕರಿಗೆ ಅನೇಕ ಬಿನ್ನವತ್ತಳೆಗಳನ್ನು ಮುದ್ರಿಸಿ ಕಳಿಸಿ ಸೇವೆಯನ್ನು ಸಲ್ಲಿಸುತ್ತಿರುವರು. ಇದಕ್ಕೆ ನಮಗೆ ಬಹು ಆನಂದ ಮತ್ತು ಹೆಮ್ಮೆ ಅನಿಸುವದು. ಆದರೆ ಅವರು ವೀರಶೈವವು ಶಿವಾದ್ವೈತ ಅಥವಾ ಅದ್ವೈತ ಎಂದು ಪ್ರತಿಪಾದಿಸುತ್ತಿರುವರು. ಶಂಕರಾಚಾರ್ಯರ ಮಾಯಾ ವಾದವೇ ವೀರಶೈವ ಸಿದ್ಧಾಂತವೆಂದು ಸಹ ಪ್ರತಿಪಾದಿಸುವರು. ಮತ್ತು ನಿಜಗುಣ ಶಿವಯೋಗಿಗಳೂ ಕೂಡ ಅದ್ವೈತ ( ಮಾಯಾ ) ವಾದವನ್ನೇ ಪ್ರತಿಪಾದಿಸಿದ್ದಾರೆಂದು ಬರೆಯುತ್ತಿರುವರು. ವೇದಾಂತಕ್ಕೂ ವೀರಶೈವ ಸಿದ್ಧಾಂತಕ್ಕೂ ಅತಿ ಹೋಲಿಕೆಯನ್ನು ಹೇಳುವರು. ಅದರಂತೆ ಅವರು ವೀರಶೈವ ಮಹಾಸಭೆಯ ಅಧ್ಯಕ್ಷರಿಗೆ, ರಂಭಾಪುರಿ ಜಗದ್ಗುರುಗಳಿಗೆ, ಸಂಸ್ಕೃತ ಕಾಲೇಜ ಪ್ರಿನ್ಸಿಪಾಲರಿಗೆ, ಪಂಚ ಸಿಂಹಾಸನದವರಿಗೆ, ಸಂಸ್ಕೃತ ವಿದ್ಯಾಭ್ಯಾಸ ಹಾಗೂ ಪರೀಕ್ಷೆಗಳ ಅಧ್ಯಕ್ಷರಿಗೆ ಹೀಗೆ ಅನೇಕ ಬಿನ್ನವತ್ತಳಿಕೆಗಳನ್ನು ಮೇಲ್ಕಂಡ ವಿಷಯವನ್ನು ಸಿದ್ಧಾಂತ ಶಿಖಾಮಣಿಯ ಕೆಲ ಶ್ಲೋಕಗಳೊಂದಿಗೆ ಶಕ್ತಿ ವಿಶಿಷ್ಟಾದ್ವೈತವನ್ನು ಖಂಡಿಸಿ, ಶಿವಾದ್ವೈತ ಅಥವಾ ಅದ್ವೈತವನ್ನು ಪ್ರತಿಪಾದಿಸಿ ಪ್ರಕಟಿಸಿದ್ದಾರೆ. ಇದನ್ನು ಅನೇಕರಿಗೆ ವಿಮರ್ಶಿಸಬೇಕೆಂದು ಅವರು ಕೋರಿರುವರು.

ಆತ್ಮ ವಿಚಾರ ಮಾಸ ಪತ್ರಿಕೆಯ ಮುಖಪುಟದ ಮೇಲೆ ಪ್ರತಿಸಲವೂ ಅಂಬಿಕೆಯ ಅಂದರೆ ಶಕ್ತಿದೇವತೆಯ ಚಿತ್ರವನ್ನು ಹಾಕುತ್ತಿರುವರು. ಇದರಿಂದ ಅಪ್ರತ್ಯಕ್ಷ ಆಕೆಯ ಉಪಾಸನೆ ಮಾಡುತ್ತಿರುವದು ಎಲ್ಲರಿಗೂ ಸಹಜವಾಗಿ ಕಂಡು ಬರುವಂತಿದೆ. ಆದರೂ ಅವರು ಅದ್ವೈತ (ಮಾಯಾವಾದ) ವನ್ನೇ ಏಕೆ ಪ್ರತಿಪಾದಿಸುತ್ತಿರುವರೋ ತಿಳಿಯದಾಗಿದೆ. ಶಕ್ತಿ ಇಲ್ಲೆನ್ನುವವರು ಆಕೆಯ ಬಗ್ಗೆ ಆದರವೇಕೆ? ಆಕೆಯ ಚಿತ್ರ ಮೂರ್ತಿಗಳೇಕೆ ?

ವೀರಶೈವ ಎಂದರೆ ಏನೆಂದು ವಿಚಾರಿಸಿ ನೋಡುವಾ. ವೀರ ಅಂದರೆ ಶಕ್ತಿ ಬಲಗಳನ್ನೇ ಸೂಚಿಸುವದು. ವೀರ ಶೂರ ಎಂದರೆ ಒಂದೇ ಸರಿ. ಶೂರರಿಗೆ ಬಲ ಮತ್ತು ಶಕ್ತಿಗಳು ಅವಶ್ಯ ಬೇಕು. ಶೈವ ಶಿವೋಪಾಸಕ ವೀರಶೈವವೆಂದರೆ ಶಕ್ತಿ ಶಿವರ ಉಪಾಸಕರೆಂದು ಸರಳ ಅರ್ಥವಾಗುವದು. ಆದಕ್ಕಾಗಿಯೇ ನಮಗೆ ಶಕ್ತಿವಿಶಿಷ್ಟಾದ್ವೈತಿಗಳೆಂದೂ ವೀರಶೈವರೆಂದೂ ಅನ್ನುತ್ತಾರೆ.

**ಶಕ್ತಿವಿಶಿಷ್ಟಾದ್ವೈತಃ—** ಇದಾದರೂ ಕೂಡ ಅಂತ್ಯದಲ್ಲಿ ಅದ್ವೈತಕ್ಕೆ ಹೋಗುವದು. ಆದರೆ ಶಕ್ತಿಯು ಮಾತ್ರ ವಿಶಿಷ್ಟವಾಗಿರುವದು. ಅಂದರೆ ಶಕ್ತಿಯು ಸತ್ಯ ನಿತ್ಯ ಪರಿಪೂರ್ಣ ಎಂದು ಒಪ್ಪಿಕೊಂಡು ಸಾಗುವರು. ಆಕೆಯೇ ಪರಶಿವನ ದರ್ಶನ ಮಾಡಿಸಿ ಅದ್ವೈತ ಸ್ಥಿತಿಯನ್ನು ತಂದು ಕೊಡುವಳು. ಶಿವನ ಕೀಲಿ ಹಾಗೂ ಕೀಲಿಕೈಗಳೆರಡೂ ಈ ಶಕ್ತಿಯ ಕೈಯ್ಯಲ್ಲಿಯೇ ಇರುವವೆಂದು ಅನುಭವದಿಂದ ಶ್ರೀ ರಾಮಕೃಷ್ಣ ಪರಮಹಂಸರೂ, ಶ್ರೀ ವಿವೇಕಾನಂದ ಮೊದಲಾದವರೂ ಕೂಡ ೨೦ನೇ ಶತಮಾನದಲ್ಲಿ ಹೇಳಿರುವರು. ಶ್ರೀ ಅರವಿಂದರೂ ಕೂಡ ಒಪ್ಪಿರುವರು. ಆದರೂ ಇವರು ವೀರಶೈವ ಶರಣರಷ್ಟು ವ್ಯಾಪಕ ಮತ್ತು ವಿಶಾಲ ವಿಚಾರಕ್ಕೆ ಹೋಗಿಲ್ಲ.

ವೀರಶೈವರು ಜಗತ್ತಿಗೇ ಹೊಸ ಹೆಚ್ಚಿನ ಸಿದ್ಧಾಂತವೆನಿಸುವ ಶಕ್ತಿ ವಿಶಿಷ್ಟಾದ್ವೈತವನ್ನು ಎಂದೋ ಕಂಡು ಹಿಡಿದಿದ್ದಾರೆ. ಎಲ್ಲರೂ ಒಂದನ್ನೇ ಒಪ್ಪಿಕೊಂಡಿದ್ದಾರೆ. ಕೆಲವರು ನಿರ್ಗುಣ, ಕೆಲವರು ಸಗುಣ, ಕೆಲವರು ಶಿವ, ಕೆಲವರು ವಿಷ್ಣು, ಕೆಲವರು ಗಣಪತಿ, ಕೆಲವರು ಶಕ್ತಿ, ಕೆಲವರು ಸೂರ್ಯ, ಕೆಲವರು ಅಲ್ಲಾ, ಕೆಲವರು ಕ್ರಿಸ್ತ, ಕೆಲವರು ಬೌದ್ಧ, ಕೆಲವರು ಜಿನ ಹೀಗೆ ಇವು ಒಂದೇ ದೇವತೆಯೆಂದು ಒಪ್ಪಿಕೊಂಡು ಮಹಾ ದೋಷವನ್ನು ಮಾಡಿದ್ದಾರೆ. ಇವರದು ಪೂರ್ಣ ಪೂಜೆಯಲ್ಲ. ಇವರು ಪೂರ್ಣ ಯೋಗಿ

ಗಳೂ ಅಲ್ಲ. ಆದರೆ ಜಗತ್ತಿನಲ್ಲೇ ವೀರಶೈವರು ಒಬ್ಬರೇ ಮಾತ್ರ. ಶಿವ+ ಶಕ್ತಿಗಳೆರಡನ್ನು (ತಂದೆ+ತಾಯಿ) ಗಳನ್ನು ಒಪ್ಪಿಕೊಂಡು ಸಾಗಿದ್ದಾರೆ. ಅದಕ್ಕೆ ವೀರಶೈವವೆಂದು ಅಭಿಧಾನವಿರುವದು. ಇವರೇ ಪೂರ್ಣ ಮಾನವರು; ಯೋಗಿಗಳು.

ಲಿಂಗವನ್ನು ಅಂಗದ ಮೇಲೆ ಧರಿಸುವ ಧರ್ಮವು ಇದೊಂದೇ ಜಗದಲ್ಲಿರುವದು. ಉಳಿದ ಯಾವ ಧರ್ಮೀಯರು ತಮ್ಮ ಇಷ್ಟ ದೈವವನ್ನು ಅಂಗದ ಮೇಲೆ ಧರಿಸುವದೇ ಇಲ್ಲ. ಆದರೂ ಉಳಿದವರೆಲ್ಲ ಮೂರ್ತಿ ಪೂಜಕರು. ವೀರಶೈವರು ಮಾತ್ರ ಮೂರ್ತಿಪೂಜಕರಲ್ಲ. ಇವರು ಇಷ್ಟ ಲಿಂಗದ ಸಹಾಯದಿಂದ ಪ್ರಾಣಲಿಂಗವನ್ನೂ ಪ್ರಾಣಲಿಂಗದಿಂದ ಭಾವಲಿಂಗವನ್ನೂ ಕಾಣುವರು. ಅದಕ್ಕೆ ಅದು ಮೂರ್ತಿಯಲ್ಲ. ಈ ಇಷ್ಟಲಿಂಗದಲ್ಲಿ ಸಹ ಶಿವ+ಶಕ್ತಿಯರೇ ಇದ್ದಾರೆ. ಪೀಠವು ಶಕ್ತಿ, ಅದು ಪಾರ್ವತಿಯ ಗುರ್ತು. ಪೆಂಡಿಕೆಯು ಶಿವನ ಗುರ್ತು. ಲಿಂಗ ಪೂಜೆಯಿಂದ ಈ ಇಬ್ಬರ ಪೂಜೆಯಾಗುವದು. ನಾವು ಶಕ್ತಿ ವಿಶಿಷ್ಟಾದ್ವೈತಿಗಳೆಂಬುವದಕ್ಕೆ ಲಿಂಗವು ಬಲವಾದ ಉದಾಹರಣೆಯಾಗಿರುವದು. ಇದರ ಬಗ್ಗೆ ಶಿವಾನುಭವ ೧೯೫೬ ನೇ ಇಸ್ವಿಯ ಅಗಷ್ಟ ಸಂಚಿಕೆಯನ್ನು ನೋಡಿರಿ.

(೧) ಸತ್ವ (೨) ರಜ (೩) ತಮ (ಇದು ಅಪರಾ ಪ್ರಕೃತಿ ಅಂದರೆ ಮಾಯಾ.) (೪) ಸತ್ (೫) ಚಿತ್ (೬) ಆನಂದ (ಇದು ಪರಾ ಪ್ರಕೃತಿ ಅಂದರೆ ಚಿಚ್ಛಕ್ತಿ ಪಾರ್ವತಿ.) (೭) ಪರಶಿವ.

**ಶಿವಯೋಗಃ—** ಶಿವನನ್ನು ಕೂಡುವದು ಶಿವಯೋಗ. ಶಿವನನ್ನು ಯಾರು ಕೂಡುವದು? ಆದಿಶಕ್ತಿ ಶಿವನನ್ನು ಕೂದುವದೇ ಶಿವಯೋಗ. ಅನ್ಯರಾರೂ ಶಿವನ ಕೂಡ ಕೂಡಲು ಶಕ್ಯವಿಲ್ಲ. ಅಂದರೆ ಸಹಸ್ರ ದಳದಲ್ಲಿ ಶಿವನು ವಿರಾಜಿಸುವನು. ಮೂಲಾಧಾರದಲ್ಲಿ ಕುಂಡಲಿನಿ ಶಕ್ತಿಯು ಕೆಳ ಮುಖ ಮಾಡಿ ಬಿದ್ದಿರುವಳು. ಆಕೆಯನ್ನೇ ಆರು ಚಕ್ರಗಳನ್ನೇರಿಸಿ ಶಿವನ ಕೂಡ ಕೂಡಿಸಿದರೆ ಶಿವಯೋಗವಾಗುವದು. ಶಕ್ತಿಯ ಕೂಡ ನಮ್ಮ ವಿಶೇಷ ಕೆಲಸವಿರುವದರಿಂದ ಶಕ್ತಿವಿಶಿಷ್ಟಾದ್ವೈತವೆಂದು ವೀರಶೈವರು ಶೋಧ ಮಾಡಿಯೇ ಈ ಹೆಸರನ್ನಿಟ್ಟಿರುವರು. ಉಳಿದವರು ಯಾರೂ ಹೇಳಿಲ್ಲ. ಭಕ್ತಿ ಯೋಗ, ರಾಜಯೋಗ, ಜ್ಞಾನಯೋಗ ಎಂದು ಹೇಳಿದ್ದಾರೆ. ಇವುಗಳಿಗೆ ಸರಿಯಾದ ಅರ್ಥವು ನಮ್ಮ ಶಿವಯೋಗದಂತೆ ಹೊಂದುವದಿಲ್ಲ. ಇದನ್ನೂ

ಕೂಡ ಬಹಳ ವಿಚಾರಿಸಿ ನಮ್ಮವರು ಶಿವಯೋಗವೆಂದಿದ್ದಾರೆ. ಉಳಿದೆಲ್ಲ ಧರ್ಮದವರಿಗಂತು ನಮ್ಮ ಧರ್ಮದಲ್ಲಿ ವೈಶಿಷ್ಟ್ಯವಿದೆ. ಹೀಗಿದ್ದ ಇದನ್ನು ವೇದಾಂತದ ಮಾಯಾ ವಾದಕ್ಕೆ ಅಥವಾ ಶಂಕರಾಚಾರ್ಯರ ಅದ್ವೈತಕ್ಕೆ ಹೋಲಿಸುವದು ಸಮಂಜಸವಲ್ಲ.

ಅದ್ವೈತ ಎಲ್ಲವೂ ಒಂದೇ ಎರಡೆಂಬುದೇ ಇಲ್ಲ. "ಬ್ರಹ್ಮ ಸತ್ಯಂ ಜಗನ್ಮಿಥ್ಯಾ" "ಸರ್ವಂ ಖಲ್ವಿದಂ ಬ್ರಹ್ಮಂ" ಮಾಯೆ, ಭ್ರಮೆ, ಭ್ರಾಂತಿ, ಅವಿದ್ಯೆಗಳ ಮೂಲಕ ಎರಡಾಗಿ ಬಹುವಾಗಿ ತೋರುವದೇ ಹೊರತು ಇರುವದೆಲ್ಲ ಒಂದೇ ಇರುವದೆಂದು ಹೇಳುವರು. ಆದರೆ ಶುದ್ಧ ಪರಬ್ರಹ್ಮದಲ್ಲಿ ಈ ಮಾಯೆ, ಭ್ರಮೆ, ಭ್ರಾಂತಿ, ಅವಿದ್ಯೆಗಳು ಎಲ್ಲಿಂದ ಬಂದವು ? ಇವೇ ಶಕ್ತಿಯ ರೂಪುಗಳು. ಶಕ್ತಿಗೆ ಬೇರೆ ಹೆಸರಿಟ್ಟಿರುವರು.

ಜಗತ್ತಿಗೆ ಕನ್ನಡ ನಾಡಿನ ವೀರಶೈವ ಶಿರೋಮಣಿಗಳು ಬಹು ವಿಚಾರಿಸಿ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ಕಂಡುಂಡು ಹೇಳಿದ್ದಾರೆ. ಇದೊಂದು ಜಗತ್ತಿಗೆ ನಮ್ಮವರು ನೀಡಿದ ಮಹಾ ದಾನವೇ ಸರಿ. ಈ ಸಿದ್ಧಾಂತವನ್ನು ಕ್ರಿ. ಶ. ೮ನೆಯ ಶತಮಾನದಲ್ಲಿ ನೀಲಕಂಠಾಚಾರ್ಯರು ಹೇಳಿದರೆಂದು ಹೇಳುವರು. ರೇಣುಕಾಚಾರ್ಯರೇ ಇವರ ಆಚಾರ್ಯರೆಂದು ಅನ್ನುವರು. ಆದರೆ ಇದನ್ನು ಇನ್ನೂ ಸರಿಯಾಗಿ ಶೋಧಿಸಬೇಕಾಗಿದೆ. ಅಂತೂ ಇದನ್ನು ವೀರಶೈವರೇ ಮೊದಲು ಕಂಡು ಹಿಡಿದಿದ್ದಾರೆಂದು ಹೇಳಲಿಕ್ಕೆ ಅಭ್ಯಂತರವಿಲ್ಲ. ಅದ್ವೈತಕ್ಕೆ ಶಂಕರಾಚಾರ್ಯರು, ದ್ವೈತಕ್ಕೆ ಮಧ್ವಾಚಾರ್ಯರು, ವಿಶಿಷ್ಟಾದ್ವೈತಕ್ಕೆ ರಾಮಾನುಜಾಚಾರ್ಯರು ಇದ್ದಂತೆ ಶಕ್ತಿವಿಶಿಷ್ಟಾದ್ವೈತಕ್ಕೆ ನೀಲಕಂಠಾಚಾರ್ಯರೇ ಮೊದಲಿಗರೆಂದು ಹೇಳಲಿಕ್ಕೆ ಅಡ್ಡಿ ಇಲ್ಲ. ಈ ಶಕ್ತಿವಿಶಿಷ್ಟಾದ್ವೈತಕ್ಕೆ ಶಿವಾದ್ವೈತ, ದ್ವೈತಾದ್ವೈತ, ವಿಶೇಷಾದ್ವೈತ, ಭೇದಾ ಭೇದಾತ್ಮಕ ವಿಶೇಷಾದ್ವೈತ ಎಂದು ಬೇರೆ ಬೇರೆ ಹೆಸರುಗಳಿಂದಲೂ ಕರೆಯುವರು.

ಶ್ರೀ ನಾಗಣ್ಣನವರು ಶಿವಾದ್ವೈತಕ್ಕೆ ಅದ್ವೈತ ಎಂದು ಮಾಯಾವಾದದ ಅರ್ಥವನ್ನು ಹಚ್ಚಿ ಬರೆಯುತ್ತಿರುವರು. ಹಾಗಾದರೆ ನಮ್ಮವರು ಶಿವಾದ್ವೈತ ಅನ್ನುವ ಕಾರಣವೇನಿತ್ತು ? ಶಂಕರಾಚಾರ್ಯರಂತೆ ಅದ್ವೈತ ಮತದವರೆಂದು ವೀರಶೈವರಿಗೂ ಅನ್ನುತ್ತಿದ್ದರು. ನಾವು ಬರೀ "ಅದ್ವೈತ

ಗಳಲ್ಲೆಂದು ತಿಳಿದೇ ಶಿವಾದ್ವೈತ, ಶಕ್ತಿವಿಶಿಷ್ಟಾದ್ವೈತ ಎಂದು ಹೇಳು ರುವರು.

ಶಕ್ತಿಯು ಶಿವನ ಅಂಗವಾಗಿರುವಳು. ಸತ್ಯ ಸಂಕಲ್ಪ ಶಕ್ತಿಗಳಲ್ಲಿ ಸಮುತೂಕವನ್ನು ಇದು ಹೇಳುವದು. ವೀರಶೈವರು ಪ್ರಕೃತಿ ಪುರುಷ, ಪರಶಕ್ತಿ, ಪರಶಿವ, ಇವು ನಾಲ್ಕನ್ನು ಒಪ್ಪುವರು. ಪ್ರಕೃತಿ ಇದು ಜಡವಾದ ಶಕ್ತಿಯಾಗಿದ್ದಾಳೆ. ಇದರ ಸಂಬಂಧದಿಂದ ಪುರುಷನು ಜಾಡ್ಯಕ್ಕೊಳಗಾಗಿರುವನು. ಪರಶಕ್ತಿಯು ಮಾತ್ರ ಚೈತನ್ಯ ಸೂಚಕವಾಗಿರುವಳು. ಆದ್ದರಿಂದ ಪರಶಕ್ತಿಯುತನಾದ ಪರಶಿವನು ಚೈತನ್ಯಾತ್ಮಕನಾಗಿರುವನು. ಇದೇ ವೀರಶೈವದ ಶಕ್ತಿವಿಶಿಷ್ಟಾದ್ವೈತದ ಸಿದ್ಧಾಂತವು. ಶಿವಶಕ್ತಿಯರು ಅವಿನಾಭಾವ ಸಂಬಂಧದಿಂದ ಕೂಡಿದ್ದಾರೆ.

ಕಾರ ಮೇಘದೊಳಗಿನ ಮಿಂಚಿನಂತೆ, ನೀರೊಳಗಿನ ಕಿಚ್ಚಿನಂತೆ, ಫಲದೊಳಗಿನ ನವರುಚಿಯಂತೆ, ಚಂದ್ರನೊಳಗಿನ ತಂಪಿನಂತೆ, ಮರೀಚಿಯೊಳಗಿನ ಬಿಸಿಲಿನಂತೆ, ಆಲಿಯೊಳಗಿನ ತೇಜದಂತೆ, ಶಿಲೆಯೊಳಗಿನ ಪಾವಕದಂತೆ, ಉದಕದೊಳಗಿನ ಪ್ರತಿಬಿಂಬದಂತೆ, ಚಿನ್ನದೊಳಗಿನ ಬಣ್ಣದಂತೆ, ಬೀಜದೊಳಗಿನ ವೃಕ್ಷದಂತೆ, ನನೆಯೊಳಗಿನ ಪರಿಮಳದಂತೆ, ಕೆನ್ನೆಯೊಳಗಿನ ಸ್ನೇಹದಂತೆ, ಹಸುಳೆಯೊಳಗಿನ ಸ್ವಪ್ನದಂತೆ, ಶಬ್ದದೊಳಗಿನ ನಿಶ್ಶಬ್ದದಂತೆ, ಮೆಣಸಿನಕಾಯಿಯೊಳಗಿನ ಕಾರದಂತೆ, ಹಾಲಿನೊಳಗಿನ ಜೆಣ್ಣೆಯಂತೆ, ಬೆಲ್ಲದೊಳಗಿನ ರುಚಿಯಂತೆ, ಬೆಂಕಿಯೊಳಗಿನ ಉರಿಯಂತೆ, ಉಸಿರೊಳಗಿನ ಚೈತನ್ಯದಂತೆ ಶಿವಶಕ್ತಿಯರು ಅವಿನಾಭಾವ ಸಂಬಂಧವಿದೆ ಎಂದು ವಚನಕಾರರು ಹೇಳಿದ್ದು ಬಹು ವಿಚಾರಿಸತಕ್ಕದ್ದೇ ಇರುವದು.

ಶ್ರೀ ಚನ್ನ ಬಸವಣ್ಣನವರು:— "ಕಾಯವು ಜೀವವು, ಜೀವವು ಕಾಯವು. ಇವು ಎಂತು ಬೆರಸಿಪ್ಪವಂತೆ, ಲಿಂಗದೊಳಗೆ ಜಂಗನು, ಜಂಗಮದೊಳಗೆ ಲಿಂಗ ಬೆರಸಿಪ್ಪುದು ಭಿನ್ನಭಾವವಿಲ್ಲದೆ." "ನ ಶಿವೇನ ವಿನಾಶಕ್ತಿ । ರ್ನಶಕ್ತಿ ರಹಿತಃ ಶಿವಃ । ಪುಷ್ಪ ಗಂಧ ವಿನಾದ್ವೈವ ಮರುತಾಂಬರ ಯೋರಿವ." ಭಾವ ಭೇದವಿಲ್ಲದ ಜಂಗಮವೇ ಲಿಂಗವು ಕೂಡಲ ಚನ್ನ ಸಂಗಮದೇವಾ."

ಸಿದ್ಧರಾಮೇಶ್ವರರು: –"ಭಕ್ತನಾದರೇನು, ಮಹೇಶನಾದರೇನು? ಮೊದಲಲ್ಲಿ ಶಕ್ತಿಯ ಜಪ ನೋಡಾ, ಕಡೆಯಲ್ಲಿ ಶಿವನ ಜಪ ನೋಡಾ. ಜಪ

ರೀತಿ, ಜಪಲಕ್ಷಣ, ಜಪಪ್ರಣವಗಳನರಿಯದೆ ತಾಪತ್ರಯಕ್ಕೊಳಗಾಗಿ ಭವಕ್ಕೀಡಾಗಿ ಹೋದರು ಕಪಿಲಸಿದ್ಧ ಮಲ್ಲಿಕಾರ್ಜುನಾ."

ಶ್ರೀ ನಿಜಗುಣ ಶಿವಯೋಗಿಗಳು— "ಇಂಗಡಲೊಳಿಂಪು, ಬೆಳದಿಂಗಳೊಳು ತಂಪು, ಕುಸುಮಂಗಳೊಳು ಕಂಪು ಬೆರೆದಂತೆ ನತನಪ್ಪೆ."

ನಿಜದೊಳು ಸದಸತ್ತಾಗಿಹ ಶಕ್ತಿ । ಅಜೆ ಎನಿಸುವದು ಮಾಯಾಶಕ್ತಿ । ಅದುವೆ ಜಗತ್ಕಾರಣವಾಗಿಹುದು । ಆನಂದಾಚ್ಛಾದಕವಾಗಿಹುದು। ಸದ್ಭಾವವನದು ಮುಸುಕಿರುತಿಹುದು । ಉಳ್ಳ ಬ್ರಹ್ಮನಿಲ್ಲೆನಿಸುವದು । ಇಲ್ಲದ ಲೋಕವನುಂಟೆನಿಸುವದು । ಮಾನ್ಯನೆ ಇದು ನಿನ್ನನು ನೆಮ್ಮಿಹದು । ಅನ್ಯಾನನ್ಯೇತರವಾಗಿಹುದು ॥ — (ಪಾರಮಾರ್ಥ ಗೀತೆ)

ಶರ್ವಂಗೆ ಸರ್ವೇಶಿ ಸರ್ವಾತ್ಮ । ಸರ್ವ ಶಕ್ತಿತ್ವವಹುದಾರ ಬಲದಿನಾ । ಸರ್ವ ಮಂಗಲೆಗೆ ನತನಪ್ಪೆ ॥ — (ಅನುಭವಸಾರ)

ಉಂಟೆನಿಸದಿಲ್ಲೆನಿಸದುಂಟೆನಿಸದಖಿಳ । ಕೂಟಕದ ಬೀಳವೆನಿಸನಾದಿಯವಿದ್ಯೆ । ಯುಂಟಾತ್ಮ ಸತ್ತೆಯೊಡಗೂಡಿ ಆಧಾರವಾಬ್ರಹ್ಮವಾದೇಯವೀ ಮಾಯೆ । ಮಾಧಾರದಲ್ಲಿ ಬೆರಸಿ ಬೇರಿಲ್ಲದಂತಾ ಧೇಯವಿದು [illegible] ಸುತ್ರ॥ ದೇವಾತ್ಮ ಶಕ್ತಿಯೆಂಬಾ ವಾಕ್ಯದಿಂ ಸಾರು । ವಾ ವೇದದಲ್ಲಿ ತಿಳಿ ಮಾಯೆ ತತ್ವದೊಳೋಡಿ ಬೇರಿಲ್ಲದಿಹುದೆಂದು ॥ — (ಅನುಭವ)

ಶಿವ ಶಕ್ತಿ; ಸಗುಣ ನಿರ್ಗುಣ; ಬ್ರಹ್ಮ ಮಾಯೆ; ಸತ್ಯ ಮಿಥ್ಯ; ನಿತ್ಯಾನಿತ್ಯ ದೃಗ್ದೃಶ್ಯ । ಎಂದು ವಸ್ತುದ್ವಯಗಳುಂಟು. (ವಿವೇಕ ಚಿಂತಾಮಣಿ) ಮಲ, ಮಾಯಾ, ಕರ್ಮ, ಬಿಂದು, ತಿರೋಧಾನ ( ಶಿವಶಕ್ತಿ ವಿಶೇಷ ) ಪಾಳ ಪಂಚಕಗಳುಂಟು. ಸದಾ ತುಷ್ಟಿ, ಸರ್ವಜ್ಞತಾ, ನಿತ್ಯ ಸುಬೋಧತ್ವ, ಸ್ವಾತಂತ್ರ್ಯ, ನಿತ್ಯ ಶಕ್ತಿತ್ವಂ, ಅನಂತ ಶಕ್ತಿತ್ವಂ ಎಂದು ಷಡಂಗಗಳುಂಟು.

ಶೈವ ವೈಷ್ಣವ, ಶಾಕ್ತೇಯ, ಜೈನ, ಬೌದ್ಧ, ಸಾಂಖ್ಯ ಷಣ್ಮತಗಳುಂಟು. ಈ ಆರರಲ್ಲಿ ಶಕ್ತಿ ಪಾತ ಲಕ್ಷಣವನ್ನು ಹೇಳಲಾಗಿದೆ.

ಪರಿಪೂರ್ಣ ಪರಂಜ್ಯೋತಿ ಸ್ವರೂಪಮಪ್ಪ ಬಿಂದುವು ಮಹಾಮಾಯೆ ಕಾಟಲೆ, ಕುಂಡಲೆ, ಕ್ರಿಯಾಶಕ್ತಿ, ಪರನಾದ, ಪರಬಿಂದು, ಪರಿಗ್ರಹ ಶಕ್ತಿ,

ಪರವಿದ್ಯ, ಶಬ್ದತತ್ವ, ಶಬ್ದಬ್ರಹ್ಮ, ಶುದ್ಧ ಮಾಯೆ, ಶಿವತತ್ವ, ಶಿವಲಿಂಗ ಪೀಠ, ವ್ಯೋಮವಿದ್ಯ, ವಿದ್ಯಾಶಕ್ತಿ, ವಾಗೀಶ್ವರಿ, ಅನಾಹತೆ, ಅಘೋರ, ವಾಕ್ಯ, ಬ್ರಹ್ಮ ಎಂದು ಬೇರೆ ಬೇರೆ ಹೆಸರು ಆ ಶಕ್ತಿಗೆ ಇರುವವೆಂದು ವಿವೇಕಚಿಂತಾಮಣಿಯಲ್ಲಿ ಹೇಳಿದೆ.

ಕೈವಲ್ಯದಲ್ಲಿ, ಶ್ರೀ ನಿಜಗುಣ ಶಿವಯೋಗಿಗಳು ೬ನೇ ೮ನೇ ೯ನೇ ಸೂತ್ರಗಳಲ್ಲಿ ಪಾರ್ವತಿಯ ಸ್ತೋತ್ರಗಳೇ ಇರುವವು. ೧೫೫೬ನೇ ಸಪ್ಟಂಬರ ಶಿವಾನುಭವವನ್ನು ನೋಡಿರಿ. ನಿಜಗುಣರು ಶಕ್ತಿವಿಶಿಷ್ಟಾದ್ವೈತವನ್ನೇ ಆರು ಗ್ರಂಥಗಳಲ್ಲಿ ಪ್ರತಿಪಾದಿಸಿದ್ದರೆಂದು ಬರೆದಿದ್ದೇನೆ.

ಪರಮಾನುಭವ ಬೋಧೆಯಲ್ಲಿ—ಪಾರ್ವತಿಯ ಕ್ರಿಯಾಶಕ್ತಿಯ ಸ್ತೋತ್ರವನ್ನೂ ಮಾಡಿರುವರು. ಕಲ್ಪಿತ ಪುರುಷನ ಉತ್ಪತ್ತಿಯನ್ನು ಹೇಳಿದ್ದಾರೆ. ಇದೇ ಆದಿಶಕ್ತಿಯೇ ಸರಿ.

ಓಂ ಪ್ರಣವಮದಃ ಪೂರ್ಣಮಿದಂ । ಪೂರ್ಣಾತ್ ಪೂರ್ಣಮುದುಚ್ಯತೆ । ಪೂರ್ಣಸ್ಯ ಪೂರ್ಣಮಾದಾಯ । ಪೂರ್ಣಮೇವ ಶಿಷ್ಯತೇ ॥

ಸಿದ್ಧಾಂತ ಶಿಖಾಮಣಿಯಲ್ಲಿ— ಶಕ್ತಿವಿಶಿಷ್ಟ ಜೀವನಿಗೂ ಶಕ್ತಿವಿಶಿಷ್ಟ ಶಿವನಿಗೂ ಸಾಮರಸ್ಯ– "ಶಕ್ತಿಶ್ಚ ಶಕ್ತಿಶ್ಚ ಶಕ್ತಿತಾಭ್ಯಾಂ ವಿಶಿಷ್ಟೌ ಜೀವೇಶೌ, ತಯೋಃ ಅದ್ವೈತಂ ಶಕ್ತಿವಿಶಿಷ್ಟಾದ್ವೈತಂ'' ಶಕ್ತಿಯು ಸ್ಥೂಲ ಚಿದಾತ್ಮಕ ಶಕ್ತಿ ಸೂಕ್ಷ್ಮ ಚಿದಾತ್ಮಕ ಶಕ್ತಿ ಅನುಕ್ರಮವಾಗಿ ಜೀವ ಶಿವರು ಆಗುವರು. ಈ ಎರಡು ವಿಧ ಶಕ್ತಿಗಳಿಂದ ಕೂಡಿದ ಜೀವ ಶಿವರ ಐಕ್ಯವೇ ( ಸಾಮರಸ್ಯವೇ ) ಶಕ್ತಿ ವಿಶಿಷ್ಟಾದ್ವೈತವೆನಿಸುವದು. ಶಕ್ತಿಯು ಪರಶಿವನಲ್ಲಿ (ಬ್ರಹ್ಮದಲ್ಲಿ) ಅವಿನಾಭಾವ ಸಂಬಂಧದಿಂದಿದ್ದು ನಿತ್ಯವೆನಿಸುವದು.

—ಶ್ವೇತಾಶ್ವರ ಶ್ರುತಿ

ಪರಾಸ್ಯ ಶಕ್ತಿರ್ವಿವಿಧೈವ ಶೂಯತೇ ಸ್ವಾಭಾವಿಕೀ ಜ್ಞಾನ ಬಲ ಕ್ರಿಯಾ ಚ" ಪರಬ್ರಹ್ಮದಲ್ಲಿ ಶಕ್ತಿಯು ಸ್ವಭಾವಸಿದ್ಧವಾಗಿರುವದೆಂದೂ ಈ ಶಕ್ತಿಯು ಜ್ಞಾನಶಕ್ತಿ ಕ್ರಿಯಾಶಕ್ತಿ ಮೊದಲಾದ ರೂಪದಿಂದ ನಾನಾ ಪ್ರಕಾರವಾಗಿರುವದೆಂದೂ ಸಿದ್ಧವಾಗುವದು.

—ಶ್ವೇತಾಶ್ವರ ಶ್ರುತಿ

ಮಾಯೆಯು ಅದ್ವೈತಿಗಳು ಹೇಳುವಂತೆ ಮೂಲ ವಿದ್ಯಾ ರೂಪ ಮಾಯೆಯಾಗಿರದೆ, ವಿಮರ್ಶೆ, ಶಕ್ತಿರೂಪ ಮಾಯೆಯಾಗಿರುವದು.

— ಸಿದ್ಧಾಗಮ

ಶಕ್ತಿಯು ನಿತ್ಯವಾಗಿರುವಳು. ಪರಮಾತ್ಮನಲ್ಲಿ ಶಕ್ತಿಯು ಸ್ವಾಭಾವಿಕವಾಗಿರುವಳು. (ಯಜುರ್ವೇದ ತೈತ್ತಿರೀಯ ಸಂಹಿತೆ.)

ಪರಮೇಶ್ವರನು ಉಮಾ ರೂಪ ಶಕ್ತಿಯುಕ್ತನಾಗಿರುವನೆಂದು ಸಿದ್ಧವಾಗುವದು. (ತೈ. ಸ. ೪. ೫. ೮.)

ಉಮಾ ಸಹಾಯಂ ಪರಮೇಶ್ವರಂ ಪ್ರಭು (ಕೈವಲ್ಯ ಶ್ರುತಿ)

ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತು ಪ್ರಕಾಶಿನೀ ।
ತಥಾ ಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣೀ ಸ್ಥಿರಾ ॥೩೨॥

ಪ್ರಕಾಶಪಡಿಸುವ ಚಂದ್ರಿಕೆಯು ಚಂದ್ರನಲ್ಲಿ ಹೇಗೆ ಸ್ಥಿರವಾಗಿರುವದೋ ಹಾಗೆ ವಿಮರ್ಶನಾತ್ಮಕವಾದ ಶಕ್ತಿಯು ಪ್ರಕಾಶ ಸ್ವರೂಪನಾದ ಪರಶಿವ ಬ್ರಹ್ಮದಲ್ಲಿ ಸ್ಥಿರವಾಗಿರುವದು. ಚಂದ್ರನನ್ನು ಬಿಟ್ಟು ಚಂದ್ರಿಕೆಯೂ ಚಂದ್ರಿಕೆಯನ್ನು ಬಿಟ್ಟು ಚಂದ್ರನೂ ಹೇಗೆ ಇರುವದಿಲ್ಲವೋ ಹಾಗೆ ಶಿವನನ್ನು ಬಿಟ್ಟು ಶಕ್ತಿಯೂ, ಶಕ್ತಿಯನ್ನು ಬಿಟ್ಟು ಶಿವನೂ ಇರುವದಿಲ್ಲ. ಶಕ್ತಿಯು ಶಿವನಲ್ಲಿ ಅವಿನಾಭಾವ ಸಂಬಂಧದಿಂದ ಸ್ಥಿರವಾಗಿರುವದು.

— ಸಿ. ಶಿ.

ಅಂತಃಕರಣ ರೂಪೇಣ ಜಗದಂಕುರ ರೂಪತಃ । ಯಸ್ಮಿನ್ ವಿಭಾತಿ ಚಿಚ್ಛಕ್ತಿರ್ಬ್ರಹ್ಮಭೂತಃ ಸ ಉಚ್ಯತೇ ॥೩೬॥

ಚಿಚ್ಛಕ್ತಿಯು ಮೂಲಾಹಂಕಾರ ರೂಪದಿಂದಲೂ ಸೂಕ್ಷ್ಮ ಜಗದ್ರೂಪದಿಂದಲೂ ಯಾವನಲ್ಲಿ ಪ್ರಕಾಶಿಸುವದೋ ಆ ಶಿವಯೋಗಿಯೇ ಪರಬ್ರಹ್ಮಸ್ವರೂಪನೆಂದು ಹೇಳಿಸಿಕೊಳ್ಳುವನು.

—ಸಿ. ಶಿ.

ಕಾಳಿದಾಸನು ರಘುವಂಶದಲ್ಲಿ:— "ವಾಗಾರ್ಥಾವಿವ ಸಂಪೃಕ್ತೌ ವಾಗರ್ಥ ಪ್ರತಿಪತ್ತಯೆ ಜಗತಃ ಪಿತರೌ ವಂದೇ ಪಾರ್ವತಿ ಪರಮೇಶ್ವರೌ॥"

ಪಾರ್ವತೀ ಪರಮೇಶ್ವರರಲ್ಲಿ ಶಬ್ದ ಹಾಗೂ ಅದರ ಅರ್ಥಗಳಿಗೆ ಹೇಗೆ ನಿತ್ಯ ಸಂಬಂಧವಿರುವದೋ ಹಾಗೇ ಸಂಬಂಧವಿರುವದು. ಶಬ್ದ ಬಿಟ್ಟು ಅರ್ಥ, ಅರ್ಥ ಬಿಟ್ಟು ಶಬ್ದ ಹೇಗೆ ಇರುವದಿಲ್ಲವೋ ಅದರಂತೆ ಶಿವನ ಬಿಟ್ಟು ಪಾರ್ವತಿ ( ಶಕ್ತಿ ), ಪಾರ್ವತಿ ( ಶಕ್ತಿ ) ಯನ್ನು ಬಿಟ್ಟು ಶಿವನು ಇರುವದಿಲ್ಲೆಂದು ಹೇಳಿದ್ದಾನೆ.

ಸಿದ್ಧಾಂತ ಶಿಖಾಮಣಿಯಲ್ಲಿ ೯, ೧೦, ೧೧, ೧೩ ಶ್ಲೋಕಗಳಲ್ಲಿ ಶಿವನೊಡನೆ ಶಕ್ತಿಯ ನಿತ್ಯತ್ವ ಸತ್ಯತ್ವಗಳ ಸಂಬಂಧವನ್ನು ಬಣ್ಣಿಸುವ ಪದ್ಯಗಳಿರುವವು. ಅವುಗಳನ್ನು ನೋಡಿಕೊಳ್ಳಬಹುದು.

"ಸತ್ತಾ ಪ್ರಾಣಮಯೀ ಶಕ್ತಿ ಸದ್ರೂಪಂ ಪ್ರಾಣಲಿಂಗಕಂ ತತ್ಸಾಮರಸ್ಯ ವಿಜ್ಞಾನಾತ್ ಪ್ರಾಣಲಿಂಗೀಕಥ್ಯತೆ" — ಸಿ. ಶಿ.

ಜಗದುತ್ಪತ್ತಿ ಕಾರಣೀಭೂತ ಮೂಲ ಪ್ರಕೃತಿ ಸ್ವರೂಪಳೂ ಸಮಸ್ತ ಜಗತ್ತುಗಳಿಗೆ ಮಾತೃ ಸ್ವರೂಪಳೂ, ಮಂಗಳಕರಳೂ ಆಗಿರುವಳು. ಯಾವಳು ಪರಶಿವನ ಜ್ಞಾ ಕ್ರಿ ಇಚ್ಛೆ ಶಕ್ತಿಗಳಿಂದ ಜಗತ್ತನ್ನು ಪ್ರಕಾಶಪಡಿಸುವವಳೂ ಆಗಿರುವಳೆಂದು ಸ್ತುತಿ ಮಾಡಿದ್ದಾರೆ. — ಸಿ. ಶಿ.

ಉಮಾ ನಾಮಕ ಮಹಾ ಶಕ್ತಿಯಿಂದ ಪ್ರಕಾಶಿಸುವವನೂ ಹಂಸರೂಪನೂ ಆದ ಪರಮಾತ್ಮನನ್ನು ಸೋಹಂ ಭಾವದಿಂದ ಧ್ಯಾನಿಸು.
— ಸಿ. ಶಿ. ೧೩, ೩೮.

ಈ ಪ್ರಕಾರ ಸಿದ್ಧಾಂತ ಶಿಖಾಮಣಿಯಲ್ಲಿಯೇ ಅನೇಕ ಶ್ಲೋಕಗಳು ಶಕ್ತಿಯು ಸತ್ಯತ್ವ ನಿತ್ಯತ್ವ ಶಿವನೊಡನೆ ಅವಿನಾಭಾವ ಸಂಬಂಧದಿಂದಿರುವ ಬಗ್ಗೆ ಇರುವದನ್ನು ನೆನಸಿದರೆ ಸಿದ್ಧಾಂತ ಶಿಖಾಮಣಿಯೂ ಕೂಡ ಶಕ್ತಿ ವಿಶಿಷ್ಟಾದ್ವೈತವನ್ನೇ ಪ್ರತಿಪಾದಿಸುವದೆಂಬುವದರಲ್ಲಿ ಏನೂ ಸಂಶಯವಿಲ್ಲ.

ನೀವು ನಿಮ್ಮ ಸ್ವಲೀಲೆಯಿಂದ ಜಗದ ವೈಭವಂಗಳನು ನಟಿಸಬೇಕೆಂದು ನಿಮ್ಮಲ್ಲಿ ನೆನಹುದೋರಲು ಆ ನೆನಹು ನಿರ್ಧರಿಸಿ ಚಿತ್ತೆನಿಸಿತ್ತು. ಆ ಚಿತ್ತಿನಿಂದ ಚಿನ್ನಾದ ಚಿದ್ಬಿಂದು ಚಿತ್ಕಳೆಗಳೊದಗಿದವು. ಆ ಚಿನ್ನಾದ ಚಿದ್ಬಿಂದು ಚಿತ್ಕಳೆ ಆ ಮೂಲ ಚಿತ್ತು ಸಹವಾಗಿ ಗಟ್ಟಿಗೊಂಡು ಅಖಂಡ ಗೋಳಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತ್ತು. ಆ ಮಹಾಲಿಂಗವೇ ಪಂಚ ಮುಖವನೈದಿ ಸದಾಶಿವನೆಂದೆನಿಸಿತ್ತು. ಆ ಸದಾಶಿವನಿಂದ ಬ್ರಹ್ಮ, ವಿಷ್ಣು, ರುದ್ರರೆಂಬ ತ್ರೈಮೂರ್ತಿಗಳುದಿಸಿದರು. ಆ ತ್ರೈಮೂರ್ತಿಗಳಿಂದ ಸ್ವರ್ಗ, ಮೃತ್ಯು, ಪಾತಾಳಗಳೆಂಬ ಲೋಕಂಗಳು ಜನಿಸಿದವು. ಅವುಗಳ ಮಧ್ಯದಲ್ಲಿ ಸಚರಾಚರ ಹೆಣ್ಣು ಗಂಡು ನಾಮ ರೂಪ ಕ್ರಿಯಾದಿ ಸಕಲ ವಿಸ್ತಾರವಾಯಿತ್ತು. ಇಂತವೆಲ್ಲವು ನಿಮ್ಮ ನೆನಹು ಮಾತ್ರದಿಂದಾದವೈ ಅಖಂಡೇಶ್ವರಾ.

ಲೋಕಾದಿ ಲೋಕಂಗಳೇನೂ ಇಲ್ಲದಂದು ನೆನಹು ನಿಷ್ಪತ್ತಿಯಾಗಿತ್ತು ನೋಡಾ. ನೆನಹಿಲ್ಲದ ಘನವನ್ನೂ ನೆನೆದ ನೆನಹವೇ ಸವಯವಾಗಿ ಚಿತ್ತೆನಿಸಿಕೊಂಡಿತ್ತು. ಆ ಚಿತ್ತೇ ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣವೆಂದು ಐದಂಗವನಂಗೀಕರಿಸಿ ನಿಃಕಲ ಶಿವತತ್ವವೆನಿಸಿತ್ತು ನೋಡಾ. ಆ ನಿಃಕಲ ಶಿವತತ್ವ ತಾನೊಂದೆ ತನ್ನ ಶಕ್ತಿಯ ಚಲನೆ ಮಾತ್ರದಿಂದ ಎರಡಾಯಿತ್ತು ನೋಡಾ. ಆ ಪರಶಿವನ ಚಿತ್ತೇ ಶಕ್ತಿ ಆರು ತೆರನಾಯಿತ್ತು. ಚಿತ್ಶಕ್ತಿ, ಆದಿಶಕ್ತಿ, ಪರಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ ಕ್ರಿಯಾಶಕ್ತಿ. ಇನ್ನು ಕ್ರಿಯಾಶಕ್ತಿಯಿಂದ ನಿವೃತ್ತಿ ಕಲೆಯ ಸಂಕಲ್ಪಮಾತ್ರದಿಂದ ಮಾಯಾ ಶಕ್ತಿ ಹುಟ್ಟಿತ್ತು ನೋಡಾ. ಈ ಮಾಯಾ ಶಕ್ತಿಯಿಂದ ಸಮಸ್ತ ಜಗತ್ತಿನ ಉತ್ಪತ್ತಿ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ.

ಆ ನಿರಂಜನ ಬ್ರಹ್ಮವು ನೆನೆದ ನೆನಹೇ ನಿರಂಜನೋಂಕಾರ ಶಕ್ತಿ, ಆ ನಿರಂಜನೋಂಕಾರ ಶಕ್ತಿಯ ನೆನಹು ಮಾತ್ರದಿಂದ ವಾಚ್ಯಪ್ರಣವ ಸ್ವರೂಪವಾದ ಶೂನ್ಯಲಿಂಗವು ಹುಟ್ಟಿತ್ತು. ಆ ಶೂನ್ಯಲಿಂಗಕ್ಕಂಗವಾಗಿರುವಂಥಾದ್ದೇ ಮಹಾಜ್ಞಾನಚಿತ್ತು. ಮಹಾಜ್ಞಾನ ಚಿತ್ತುವಿನ ನೆನಹು ಮಾತ್ರದಿಂದ ಕಲಾಪ್ರಣವ ಸ್ವರೂಪವಾದ ನಿಃಕಲಬ್ರಹ್ಮವು ಹುಟ್ಟಿತ್ತು. ಆ ನಿಃಕಲ ಬ್ರಹ್ಮಕ್ಕಂಗವಾಗಿರುವಂಥಾದ್ದೇ ಜ್ಞಾನಚಿತ್ತು. ಆ ಚಿತ್ತಿನ ಚಿನ್ನಾದವೇ ಬಕಾರ ಚಿದ್ಬಿಂದುವೇ ಸಕಾರ ಚಿತ್ಕಳೆಯೇ ವಕಾರ. ಈ ಚಿನ್ನಾದ ಚಿದ್ಬಿಂದು ಚಿತ್ಕಳೆ ಮೂಲ ಚಿತ್ತೆಂಬ ಚತುರ್ವಿಧವು ಗಟ್ಟಿಗೊಂಡು ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತ್ತು.

ಗಗನದ ಮೇಲೊಂದು ಅಭಿನವ ಗಿಳಿ ಹುಟ್ಟಿ ಸ್ವಯಸಂಭ್ರಮದಲ್ಲಿ ಮನೆಯ ಮಾಡಿತ್ತು. ಒಂದು ಗಿಳಿ ಇಪ್ಪತ್ತೈದು ಗಿಳಿಯಾಯಿತ್ತು. ಬ್ರಹ್ಮನಾಗಿಳಿಗೆ ಪಂಜರನಾದ ವಿಷ್ಣುವಾಗಿಳಿಗೆ ಕೊನೆಗೊಳಾದ ರುದ್ರಾನಾಗಿಳಿಗೆ ತಾ ಕೋಲನಾದ ಇಂತೀ ಮೂವರ ಮುಂದಣ ಕಂದನ ನುಂಗಿದ ದೃಷ್ಟ ನಾಮನಷ್ಟವಾಯಿತ್ತು. ಕಾಣಾ ಗುಹೇಶ್ವರಾ.

ಇಲ್ಲಿ ಗಿಳಿ ಅಂದರೆ ಚಿತ್‌ಶಕ್ತಿ, ಈ ಚಿತ್‌ಶಕ್ತಿಯಿಂದಲೇ ಪುರುಷ ಪ್ರಕೃತಿ ಮೊದಲಾದ ೨೫ ತತ್ವಗಳಾದವು.

ಏನೆಂದೆನಲಿಲ್ಲದ ಮಹಾಘನವು ತನ್ನ ಲೀಲೆಯಿಂ ತಾನೆ ಸ್ವಯಂಭು ಲಿಂಗಸ್ಥಲವಾಯಿತ್ತು. ಆ ಲಿಂಗದಿಂದಾಯಿತ್ತು ಶಿವಶಕ್ತ್ಯಾತ್ಮಕ. ಆ ಶಿವ ಶಕ್ತ್ಯಾತ್ಮಕದಿಂದಾದುದು ಆತ್ಮ, ಆ ಆತ್ಮನಿಂದಾದುದು ಆಕಾಶ, ಆ ಆಕಾಶ

ದಿಂದಾಯಿತ್ತು ವಾಯು, ಆ ವಾಯುವಿನಿಂದಾಯಿತ್ತು ಅಗ್ನಿ, ಆ ಅಗ್ನಿಯಿಂದಾಯಿತ್ತು, ಅಪ್ಪು, ಆ ಅಪ್ಪುವಿನಿಂದಾಯಿತ್ತು ಪ್ರಥ್ವಿ ಆ ಪೃಥ್ವಿಯಿಂದಾಯಿತ್ತು ಜಗ ಜೀವವೆಲ್ಲವೂ ನಿಮ್ಮ ನೆನಹು ಮಾತ್ರದಿಂದಾದವು ಸಿಮ್ಮಲಿಗೆಯ ಚನ್ನರಾಮಾ.

ಜಲದಲ್ಲಿ ನೊರೆ ತೆರೆ ಬುದ್ಬುದವಿದ್ದಂತೆ ಕನಕದಲ್ಲಿ ಅಲಂಕಾರವಿದ್ದಂತೆ, ಬೀಜದಲ್ಲಿ ಎಲೆ ಶಾಖೆ ಹಣ್ಣು ಹೂಗಳಿದ್ದಂತೆ ಒಂದೇ ವಸ್ತುವಿನಲ್ಲಿ ಗುಣತ್ರಯವಾದವು. ಗುಣತ್ರಯದಿಂದ ಮಲತ್ರಯಗಳಾದವು. ಮಲತ್ರಯದಿಂದ ಲೋಕ ರಚನೆ ಹೆಚ್ಚಿತ್ತು. ಲೋಕರಚನೆ ಹೆಚ್ಚಿದಲ್ಲಿ ಪಾಪಪುಣ್ಯಗಳಾದವು. ಪಾಪಪುಣ್ಯಗಳಿಂದ ಸ್ವರ್ಗ ನರಕವೆಂದಾಯಿತ್ತು. ಸ್ವರ್ಗನರಕದಿಂದ ಭೇದವಾಗಿ ಕೆಟ್ಟಕೇಡು ನೋಡಿ ತನ್ನ ಮಾಯೆ ಸೆಳೆದನು. ಸೆಳೆವಲ್ಲಿ ಸರ್ವವು ಲಯವಾಗಿ ನೀನೊಬ್ಬನೆ ಉಳಿದೆ ಉಳಿದೆ. ಎಂಬುದು ಶಾಸ್ತ್ರಪ್ರಸಿದ್ಧ. ಸಮುದ್ರದ ನೀರು ಮೇಘವಾಗಿ ಮೇಘದ ನೀರು ಹಳ್ಳಕೊಳ್ಳವಾಗಿ ಮತ್ತೆ ಸಮುದ್ರವಾದಂತೆ ನೀನಾವರೂ ಅದರಂತೆ ಒಂದೇ ಸ್ಥಲದಲ್ಲಿ ನಿಂತು ನೋಡಲೊಲ್ಲದೆ ಅನೇಕ ಸ್ಥಾನಗಳ ಧರಿಸಿ ಹೋಗುವದು ಉಚಿತವಲ್ಲ, ಎಲೇ ಜೀವನೆ ಎಂದು ಬೋಧಿಸಿದ ಸದ್ಗುರು ಚನ್ನಬಸವಣ್ಣನ ಪಾದಕ್ಕೆ ನಮೋ ನಮೋ ಎಂದು ಬದುಕಿದೆನಯ್ಯ ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ.

ಮಹಾಕರ್ತನು ತನ್ನ ಶಕ್ತಿಯ ವಿನೋದಕ್ಕೆ ಜಗವ ನಿರ್ಮಿಸಿದ. ಅನಂತಲೋಕಗಳನ್ನು............ಸಮಸ್ತ ಪ್ರಪಂಚಗಳನ್ನು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನು.

ನಿಮ್ಮಿಂದ ನೀವೇ ಶೂನ್ಯದಲ್ಲಿ ನಿಂದು ಸ್ವಯಂಭುವಾದಿರಲ್ಲಾ! ಬೀಜವೃಕ್ಷವಂತೆ ಸಾಕಾರ ನಿರಾಕಾರ ನೀವೆಯಾದಿರಲ್ಲ. ಮಹಾಕರ್ತನು ತನ್ನ ಶಕ್ತಿಯ ವಿನೋದಕ್ಕೆ ಜಗವನಿರ್ಮಿಸಿದ. (ನಿ. ಹ. ಸ್ವ. ಸಿದ್ಧ)

"ಶಿವೋ ಉಮಾ ಪಿತರಾ ಪಿತೃದೇವೋ ಭವತಿ ಪಿತರಾ ಪಿತೃದೇವೋ ಭವತಿ ಪಿತರಾ ತಸ್ಯ ಮಹಿ.'' — ಅಥರ್ವ ವೇದ

ನಿಮ್ಮ ನೆನಹೇ ನಿಮಗೆ ಶಕ್ತಿಯಾಯಿತ್ತಲ್ಲಾ, ಆ ನಿಮ್ಮಿಬ್ಬರ ಸಮರತಿಯೇ ನಿಮಗೆ ಅಖಂಡವೆಂಬ ನಾಮ ಸೂಚನೆಯಾಯಿತ್ತಲ್ಲಾ ಮಹಾಲಿಂಗ ಕಲ್ಲೇಶ್ವರ ನಿಮ್ಮ ಆದಿಗೆ ಇದೇ ಪ್ರಥಮವಾಯಿತ್ತಲ್ಲಾ.

ಅರ್ಥ:— ನಿಃಕಲವಾಗಿಪ್ಪ 'ಪರಬ್ರಹ್ಮವೆಂಬ' ಪರಮ ಚೈತನ್ಯ ಚಿತ್ ಸ್ವರೂಪು ಅಂತಪ್ಪ ಪರಬ್ರಹ್ಮವು ತನ್ನ ಸ್ವ ಚಿತ್ತಿನಿಂದ ತನ್ನ ನೆನೆವುತ್ತಿಪ್ಪ ಚಿತ್‌ಸಾಮರ್ಥ್ಯವೇ ತನಗೆ ಚಿತ್‌ಶಕ್ತಿಯಾಯಿತ್ತು. ಈ ಪ್ರಕಾರ ಪರಬ್ರಹ್ಮವು ತನ್ನ ಅಭಿನ್ನ ಶಕ್ತಿಯಪ್ಪ ಚಿತ್ತುವಿನ ನೆನಹಿನ ರತಿಸುಖದಿಂದ ಅತಿಶಯ ವಾಗಿ ಅಖಂಡ ತೇಜೋಮೂರ್ತಿಯಾದ ಮಹಾಲಿಂಗವಾಯಿತ್ತು.

ಶರೀರವುಳ್ಳನ್ನಕ್ಕ ನೆಳಲಿಲ್ಲದಿರಬಾರದು. ಭೂಮಿಯುಳ್ಳನ್ನಕ್ಕರ ಆಕಾಶ ವಿಲ್ಲದೆ ಇರಬಾರದು. ನಾಮವುಳ್ಳನ್ನಕ್ಕ ನೀನಿಲ್ಲದೆ ಇರಬಾರದು. ಗುಹೇಶ್ವರ ಲಿಂಗವು ಶಕ್ತಿಗೊಳಗಾಗಿತ್ತಾಗಿ ಬಚ್ಚ ಬರಿಯ ಬಯಲೆಂಬುದಕ್ಕೆ ಉಪ ಮಾನವಿಲ್ಲ.

ಶಿವಶಕ್ತಿ ಸಂಪುಟವೆಂಬುದೆಂತು ಹೇಳಿರಣ್ಣಾ ? ಶಿವನೇ ಚೈತನ್ಯಾ ತ್ಮನು. ಶಕ್ತಿಯೇ ಚಿತ್ತು. ಇಂತು ಚೈತನ್ಯಾತ್ಮನೇ ಚಿತ್‌ಸ್ವರೂಪನೆಂದ ರಿಯಬಲ್ಲರೆ ಭಿನ್ನವಿಲ್ಲೆಯದು ಗುಹೇಶ್ವರ.

ಲಿಂಗವೆಂಬುದು ಪರಶಕ್ತಿಯುತ ಪರಶಿವನ ನಿಜದೇಹ. ನಿಃಕಲ ಶಿವ ತತ್ವದಲ್ಲಿ ಜ್ಞಾನಚಿತ್ತು ಉದಯವಾಯ್ತು. ಆ ಚಿತ್ತಿನಿಂದ ಅ, ಉ, ಮ, ಕಾರಗಳು ಉಂಟಾದವು. ಅಕಾರವೇ ನಾದ, ಉಕಾರವೇ ಬಿಂದು, ಮಕಾ ರವೇ ಕಳೆ. ಇಂತೀ ತ್ರಿವಿಧಕ್ಕೆ ತಾಯಿ ಚಿತ್ತು. ಇಂತೀ ನಾಲ್ಕು ಒಂದಾ ದಲ್ಲಿ ಓಂಕಾರವೆಂಬ ಪ್ರಣವ ಉತ್ಪತ್ತಿಯಾಯಿತ್ತು. ಈ ಓಂಕಾರವೇ ಅಖಂಡ ಪರಿಪೂರ್ಣ ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗ ನೋಡಾ.

ಮೇಲೆ ಅನೇಕರ ವಚನಗಳನ್ನು ವೇದ, ಆಗಮ, ಸಿದ್ಧಾಂತ ಶಿಖಾ ಮಣಿ ಮೊದಲಾದ ಗ್ರಂಥಗಳ ಆಧಾರಗಳನ್ನು ವಿವರಿಸಿದ್ದಾಗಿದೆ. ಆ ಎಲ್ಲರ ನುಡಿಗಳನ್ನು ವಚನಗಳನ್ನು ಬಲ್ಲವರು ಪರಿಶೀಲಿಸಿದರೆ ಅದರಲ್ಲಿಯೂ ಪರ ಮಾತ್ಮ ಪರಶಿವನಲ್ಲಿ ಪರಶಕ್ತಿಯು ಅವಿನಾಭಾವದಿಂದ ಇದ್ದು ಪರಮಾತ್ಮನ ವಿನೋದಕ್ಕಾಗಿ ಈ ಪರಶಕ್ತಿಯು ಅನೇಕ ಆಟ ಲೀಲೆಗಳನ್ನು ಆಡಲು, ಜಗತ್ತನ್ನೂ ಜೀವಕೋಟಿಗಳನ್ನೂ ಬ್ರಹ್ಮಾಂಡ ಮೊದಲಾದ ಚರಾಚರ ಚೇತನ ಅಚೇತನ ಹೀಗೆ ಅನೇಕ ವಸ್ತುಗಳನ್ನು ಹುಟ್ಟಿಸಿ ಆಳುತ್ತಿರುವ ಳೆಂದೇ ಹೊಳೆಯುವದು. ಇದರಿಂದ ಜಗತ್ತೇ ಶಕ್ತಿವಿಶಿಷ್ಟಾದ್ವೈತ ತತ್ವ ದಂತೆ ನಡೆಯುತ್ತಿದ್ದರೂ ಸರಿಯಾದ ತಿಳುವಿಲ್ಲದ್ದರಿಂದ ನಾವು ಬರೇ

ಅದ್ವೈತಿಗಳು, ನಾವು ದ್ವೈತಿಗಳು, ನಾವು ವಿಶಿಷ್ಟಾದ್ವೈತಿಗಳು, ನಾವು ಶಾಕ್ತರು, ನಾವು ಗಾಣಪತ್ಯರು ಎಂದು ಮೊದಲಾಗಿ ಹೇಳಿಕೊಳ್ಳುತ್ತಿರುವರು. ಜಗತ್ತಿನ ಸರ್ವಮತೀಯರು ಶಿವಶಕ್ತಿಯರಿಂದಲೇ ಹೊಂದಿಕೊಂಡು ಶಕ್ತಿವಿಶಿಷ್ಟಾದ್ವೈತಿಗಳೇ ಹೊರತು ಬೇರೆಯಲ್ಲ.

(ಮುಂದುವರೆವುದು)

# ಭಕ್ತಿಯೋಗ.

[ ಹಿಂದಿನ ಸಂಚಿಕೆಯಿಂದ ಮುಂದುವರಿಸುದು ]

(ಬರೆದವರುः— ಶ್ರೀ ಶಿವಾನಂದಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ)

ಜಗತ್ತಿನ ಸರ್ವ ಧರ್ಮಗಳಲ್ಲಿ ಹಿಂದೂ ಧರ್ಮವು ಹೆಚ್ಚಿನದೆಂದು ಶ್ರೀ ವಿವೇಕಾನಂದ ಸ್ವಾಮಿಗಳು ಚಿಕಾಗೋದಲ್ಲಿ ಸಿಂಹನಾದವನ್ನು ಮಾಡಿದ್ದಾರೆ. ಅದರಲ್ಲಿ ವೀರಶೈವವೇ ಹೆಚ್ಚಿನದೆಂದು ಈಗೀಗ ಬಹುಜನರಿಗೆ ಅನಿಸಿದೆ. ಅಂಥ ಧರ್ಮದ ಅನುಭವವು ಸರಿಯಾಗಿ ಇದ್ದವರು ಎಷ್ಟು ಜನ ಗುರುಗಳು ಸಿಗಬಹುದು? ಹೆಚ್ಚಾಗಿ ಎಲ್ಲಕಡೆಗೂ ಸಿಕ್ಕರೆ ಬೇರೆ ಕಡೆ ಜನರು ಹೋಗುವ ಅವಶ್ಯಕತೆ ಇಲ್ಲ. ಮೇಲಿನ ಸರ್ವಜ್ಞನ ವಚನವು ಸರಿಯಾದ ಅನುಭವ ಪಡೆದ ಗುರುವಿನ ಜಾತಿ ಉದ್ಯೋಗ ಮೊದಲಾದವುಗಳನ್ನು ನೋಡಬಾರದೆಂದು ಇರುವದು. ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ ಮೊದಲಾದ ಪಂಗಡಗಳಿರುವವು. ಇವೆಲ್ಲವುಗಳಲ್ಲಿ ಶಕ್ತಿವಿಶಿಷ್ಟಾದ್ವೈತವೇ ಅವಶ್ಯ, ಹೆಚ್ಚಿನದು, ಶ್ರೇಷ್ಠವೆಂದು, ನಮ್ಮ ಶರಣರ ಅಭಿಪ್ರಾಯವಾಗಿರುವದು, ಅದಕ್ಕೆ ಇಂಥ ಶ್ರೇಷ್ಠ ತತ್ವವೇತ್ತನಾದ ಯಾವದೇ ಜಾತಿ ಮತ ಪಂಗಡದವನಿಂದ ಉಪದೇಶವನ್ನು ಪಡೆದರೆ ಅಡಿ ಇಲ್ಲ, ಸಿಕ್ಕಸಿಕ್ಕವರ ತತ್ವಗಳನ್ನು ಅನುಸರಿಸಿದರೆ ಸಿಕ್ಕಸಿಕ್ಕಂತೆ ಆಗುವದು. ತಮ್ಮ ರೀತಿ ಮತಗಳಿಗೆ ತಕ್ಕಂತೆ ಗುರುಗಳನ್ನು ಆರಿಸಬಹುದು, ಹೊರತು ಸಿಕ್ಕ ಸಿಕ್ಕ ತತ್ವಗಳನ್ನು ಅನುಸರಿಸಿದ ಬೇರೆ ಬೇರೆಯವರಿಂದ ಪ್ರಯೋಜನವಾಗಲಾರದು. ಹಾಸ್ಯಿಯಾಗುವದು. ಒಂದು ವೇಳೆ ಒಳ್ಳೇ ಸದ್ಗುರುಗಳು ನಮಗೆ ಸಿಗದೆ ಇದ್ದಲ್ಲಿ, ಅದಕ್ಕೂ ಅಲ್ಪಸ್ವಲ್ಪ ಕಡಿಮೆ ಪ್ರಮಾಣ

ದಲ್ಲಿ ಅನುಭವವು ಇದ್ದ ಗುರುಗಳಿಂದಾದರೂ ಸಹಾಯುವನ್ನು ಪಡೆಯು ಬಹುದು. ಆದರೆ ಅವರನ್ನು ಶಿಷ್ಯರು ಪರೀಕ್ಷಿಸಬೇಕು, ಅದರಂತೇ ಗುರು ಗಳು ಸಹ ಶಿಷ್ಯನನ್ನು ಪರೀಕ್ಷಿಸಬೇಕು. ಹಾಗೇ ಏನೂ ಸ್ವೀಕರಿಸ ಕೂಡದು. ಮೊದಲು ಶಿಷ್ಯನ ಬಗ್ಗೆ ಹೇಳಬೇಕಾದರೆ ಅವನು (೧) ಶುದ್ಧ ಪವಿತ್ರವಾದ ಮನಸ್ಸಿನವನಿರಬೇಕು. (೨) ನಿಜವಾದ ಜ್ಞಾನಕಾಂಕ್ಷೆಯು ಳ್ಳವನಿರಬೇಕು. (೩) ಅಲ್ಲದೆ ಸತತ ಪ್ರಯತ್ನಶೀಲನಾಗಿರಬೇಕು. (೪) ದೃಢನಂಬಿಗೆ ಇರಬೇಕು. (೫) ಶುದ್ಧಪವಿತ್ರ ಆಚರಣೆ ಇರಬೇಕು. (೬) ತ್ಯಾಗ ವೈರಾಗ್ಯಗಳಲ್ಲಿ ಆಸಕ್ತನಾಗಿರಬೇಕು. ಇಷ್ಟು ಗುಣಗಳಿದ್ದರೆ ಅವನು ನಿಜವಾದ ಶಿಷ್ಯನಾಗುವದರಲ್ಲಿ ಸಂದೇಹವಿಲ್ಲ. ಧರ್ಮವು ಬೋಧೆ ಗಳನ್ನು ಕೇಳುವದರಲ್ಲಿ ಇಲ್ಲ ಅಥವಾ ಪುಸ್ತಕ ಓದುವದರಲ್ಲಿ ಬರೆಯುವ ದರಲ್ಲಿ ಇಲ್ಲ. ಆದರೆ ಅದು ಸಾಕ್ಷಾತ್ಕಾರದಲ್ಲಿ ಇರುವನು. ಅದಕ್ಕಾಗಿ ಬಹುಕಾಲ ದೀರ್ಘಸಾಧನೆ ಮಾಡಿದರೆ ಸಾಧಿಸುವದು. ಈಗಿದ್ದ ಜೀವನದ ವಿರುದ್ಧ ಹೋರಾಟ ನಡಿಸಿ ಪಾರಮಾರ್ಥ ಜೀವನದ ಕಡೆಗೆ ಸಹಜ ಒಲಿ ಯುವದಕ್ಕೆ ನೆರವಾಗುವದೆಲ್ಲವೂ ಸಾಧನೆಯಾಗಿರುವದು. ಕೆಲವರಿಗೆ ತೀವ್ರ ಸಾಧಿಸಬಹುದು. ಕೆಲವರಿಗೆ ಹೆಚ್ಚುಕಾಲ ಹಿಡಿಯಬಹುದು. ಭೀಮ, ಕೋಳೂರ ಕೊಡಗೂಸು, ನಾಮದೇವನ ಮಗ ಮೊದಲಾದವರಿಗೆ ಅಲ್ಪ ಕಾಲದಲ್ಲಿಯೇ ಸಾಧಿಸಿದರು. ಅರ್ಜುನನಿಗೆ ೯ ತಿಂಗಳ ಹಿಡಿದವು. ತೋತಾಪು ರಿಗೆ ೪೦ ವರ್ಷ ಹಿಡಿದವು. ಇದೆಲ್ಲ ಅವರವರ ಮನಸ್ಸಿನ ಬಲದ ಮೇಲೆ ನಿಂತಿದೆ. ಅಕ್ಕಮಹಾದೇವಿಗೂ ತೀವ್ರ ಸಾಕ್ಷಾತ್ಕಾರವಾಯಿತು. ಹೀಗೆ ಅನೇಕ ಸ್ತ್ರೀಪುರುಷರಿಗೂ ಆಗಿರುವದು. ನಮ್ಮ ಪ್ರಯತ್ನಗಳನ್ನು ಇದೆಲ್ಲ ಅವಲಂಬಿಸಿರುವದು. ಅದಕ್ಕೆ "ಪ್ರಯತ್ನದಂತೆ ಪರಮೇಶ್ವರ"ನೆಂದು ಗಾದೆ ಯಾಗಿರುವದು.

ಇನ್ನು ಸದ್ಗುರುವಿನ ಲಕ್ಷಣವನ್ನು ವಿಚಾರಿಸುವಾ:— ಮೊದಲು ಅವನ ಗುರುಪರಂಪರೆಯನ್ನು ನೋಡಬೇಕು. ಮೇಲೆ ಹೇಳಿದ ಪರಂಪರೆಯುವನಿರ ಬೇಕು. ಎರಡನೆಯದು ಅವನು ಸಾಕ್ಷಾತ್ಕಾರ ಪಡೆದ ಅನುಭವಿಕ ಗುರುವು ಎಂಬುದನ್ನು ತಿಳಿದಿರಬೇಕು ಅಂದರೆ ಅವನಿಗೆ ಸ್ವಾಭಾವಿಕವಾಗಿ ಓದಿಕೊಳ್ಳ ದಿದ್ದರೂ ಶಾಸ್ತ್ರ ಹೇಳಲಿಕ್ಕೆ ಬರುವದು. ಉದಾಹರಣೆಗಾಗಿ ಬಹುತರ ಎಲ್ಲ ಶಿವಶರಣ ಶರಣೆಯರು ಇವರಲ್ಲಿ ಯಾರೂ ಡಿಗ್ರಿ ಪದವಿಗಳನ್ನು ಪಡೆದವರಲ್ಲ. ಯಾವ ಹಾಯಸ್ಕೂಲ ಕಾಲೇಜಗಳಿಗೆ ಹೋದವರಲ್ಲ.

ಏನೋ ತಮ್ಮ ಮನಸ್ಸಿನಲ್ಲಿಯ ಸೂಕ್ಷ್ಮ ಇಂದ್ರಿಯಗಳಿಂದ ಅವರು ಎಲ್ಲ ವನ್ನೂ ಪಡೆದರು. ಅಲ್ಲದೆ ಅಕ್ಷರ ಕಲಿಯದಿದ್ದರೂ ದಿವ್ಯ ಕಾವ್ಯಮಯ ವಚನಗಳನ್ನು ಬರೆದು ಇಟ್ಟರು. ಆದರಂತೆ ತುಕಾರಾಮ ಮೊದಲಾದವರು ಕಲಿಯಲಾರದೆ ಬೋಧಿಸಿದರು. ಬರೆದರು. ಇಂಥವರು ಯಾವ ಶಾಸ್ತ್ರದ ಶಬ್ದ ಉತ್ಪತ್ತಿ ಮೊದಲಾದ ಭಾಷಾಶಾಸ್ತ್ರದ ಗೋಜಿಗೆ ಹೋಗುವದಿಲ್ಲ. ಆದರೆ ಒಳ್ಳೇ ಘನ ಗಂಭೀರವಾದ ತತ್ವಗಳನ್ನು ಅನುಭವದಿಂದ ನಿತ್ಯ ಬಳಿಕೆಯ ತಮ್ಮ ಮಾತುಗಳಲ್ಲಿಯೇ ಸರಳ ಶೈಲಿಯಲ್ಲಿಯೇ ಬೋಧಿಸುವರು. ಇದಾದರೆ ನಿಜವಾದ ಅನುಭವಿಕ ಶಾಸ್ತ್ರವಾಗುವದು. ನಾಲ್ಕನೇ ಗುಣವೆಂದರೆ, ಪಾಪದೂಷನಾಗಿರಬೇಕು. ಪಾಪಕ್ಕೂ ಅಂಜಬೇಕು. ಗುರುವಿನ ಶೀಲವನ್ನು ನಾವು ಅವಶ್ಯ ನೋಡಬೇಕು. ಬರೀ ಅವನು ಹೇಳುವದನ್ನು ಕೇಳಿದರೆ ಸಾಕೆಂದರೆ ನಡೆಯುವದಿಲ್ಲ. ಉಳಿದ ಬೇಕಾದ ವಿಷಯವನ್ನು ಅಂದರೆ ರಸಾಯನ ಶಾಸ್ತ್ರ ಅರ್ಥಶಾಸ್ತ್ರ ಆರೋಗ್ಯಶಾಸ್ತ್ರ ಶಾಸ್ತ್ರೀಯ ವಿಷಯ ಮೊದಲಾದ ಭೌತಿಕ ಶಾಸ್ತ್ರಕ್ಕೆ ಅವಶ್ಯ ಬೇಕಾಗಿರುವದು ಅದು ಬರೀ ಬುದ್ಧಿಮಾತ್ರ. ಇವೆಲ್ಲ ಶಾಸ್ತ್ರಗಳು ಬರೀ ಬುದ್ಧಿಯ ಮೇಲೆ ನಿಂತಿವೆ. ಇವೆಲ್ಲವುಗಳು ಬರೀ ಬುದ್ಧಿಯ ಕಸರತ್ತಿನ ಕೆಲಸಗಳು. ಆದರೆ ಆಧ್ಯಾತ್ಮ ಅನುಭವಕ್ಕೆ ಹೃದಯ ಮಾತ್ರ ಪರಿಶುದ್ಧವಾಗಿರಬೇಕು ನಡೆನುಡಿ ಒಂದಾಗಿರಬೇಕು, ಪಾಪಭೀರು ಇರಬೇಕು. ಒಳ್ಳೇ ಶೀಲವುಳ್ಳವನಿರಬೇಕು. ಅಂದರೆ ಹೃದಯ ಕಮಲವು ಅರಳುವದು. ಹೃದಯಕ್ಕೂ ಬುದ್ಧಿಗೂ ಮಹದಂತರ ಉಂಟು. ಪ್ರಾಣಿಗಳನ್ನು ಕೊಲ್ಲಬಾರದೆಂಬ ಬಗ್ಗೆ ಅನೇಕ ಉಪನ್ಯಾಸಗಳನ್ನೂ ಲೇಖಗಳನ್ನೂ ಬರೆಯಬಹುದು. ಇದೆಲ್ಲ ಬುದ್ಧಿಯ ಕಸರತ್ತೇ ಸರಿ. ಆದರೆ ಒಂದು ಚಿಕ್ಕ ಪ್ರಾಣಿಯ ವಧೆಯ ನೋಡಿ ಕೇಳಿ ಮಹಾ ದುಃಖವಾಗಿ ಬಿಡುವದು. ಹೃದಯವು ಅಷ್ಟು ಕೋಮಲವಾಗುವದು. ಪವಿತ್ರ ಶುದ್ಧ ಹೃದಯದ ಕೆಲಸವು ಬಹು ವಿಚಿತ್ರವಾಗಿರುವದು. ಇದಕ್ಕೆ ಅನುಭವವೆನ್ನುವರು. ಆದಕ್ಕಾಗಿ ಧಾರ್ಮಿಕ ಗುರುಗಳಿಗೆ ಪವಿತ್ರತೆ ಅತ್ಯಾವಶ್ಯಕ. ಕಾಮ ಕಾಂಚನದಿಂದ ದೂರಿರಬೇಕು. "ಕಾಮನಿದ್ದಲ್ಲಿ ರಾಮನಿಲ್ಲ ರಾಮನಿದ್ದಲ್ಲಿ ಕಾಮನಿಲ್ಲ" ಕಾರಣ ಪಕ್ಕಾ ಬ್ರಹ್ಮಚಾರಿಯಾದ ಗುರುಗಳೇ ಇರಬೇಕು. ಆದಕ್ಕಾಗಿ ಇಂಥವರ ಶೀಲವನ್ನು ಅವಶ್ಯ ನೋಡಲೇಬೇಕು. ಆಮೇಲೆ ಅವನ ವಾಣಿನಕಡೆಗೆ ಲಕ್ಷಹಾಕಬೇಕು ಅವನ ಶೀಲ ಗುಣ ತಕೊಂಡು ನಮಗೇನು ಮಾಡತಕ್ಕದ್ದದೆ, ನಾವು ಅವಶ್ಯ ಮಾತನ್ನು ಉಪ

ದೇಶವನ್ನು ಕೇಳಿಕೊಂಡರಾಯಿತು, ಎಂದರೆ ಆಧ್ಯಾತ್ಮ ಎಳ್ಳಷ್ಟು ನಡೆಯು ವದಿಲ್ಲ. ಆದರೆ ಬುದ್ಧಪ್ರಧಾನ್ಯವಾದ ಬೇರೆ ವಿಷಯಗಳನ್ನು ಉಪದೇಶಿಸುವವನ ಶೀಲದಕಡೆಗೆ ನೋಡದೆ ಅವನ ಪಾಂಡಿತ್ಯದಕಡೆಗೆ ಲಕ್ಷ್ಯ ಕೊಡಬಹುದು. ಶೀಲದಿಂದಲೇ ಆಧ್ಯಾತ್ಮಶಕ್ತಿ ನೆಲಗೊಳ್ಳುವದು. ಶೀಲವಿರದಿದ್ದರೆ ಅದು ಇರಲಾರದು ಹೀಗಾದರೆ ಆಧ್ಯಾತ್ಮ ಅನುಭವಗಳನ್ನು ಎಂತು ಹೇಳಬಲ್ಲನು? ತನ್ನಲ್ಲಿ ಆಶಕ್ತಿ ಇಲ್ಲದಿದ್ದರೆ ಅನ್ಯರಿಗೆ ಏನುಕೊಡಲು ಶಕ್ಯವಿದೆ, ಹೇಳಿ ನೋಡುವಾ.

ನಡೆನುಡಿ ಒಂದಾದರೆ ಕೂಡಿಕೊಂಡಿಪ್ಪ, ನುಡಿಗೆ ತಕ್ಕನಡೆಯ ಕಂಡರೆ ಮೆಚ್ಚುವ, ನುಡಿದಂತೆ ನಡೆದರೆ ಈಜನ್ಮಕಡೆ, ನುಡಿಯೊಂದು ನಡೆಯೊಂದಾದರೆ ಶಿವಾಚಾರಕ್ಕೆ ಸಲ್ಲರಯ್ಯ, ಒಳಗೆ ಕುಟಿಲ ಹೊರಗೆ ವಿನಯವಾಗಿ ಭಕ್ತರಾದವರ ಬಲ್ಲನೊಲ್ಲನಯ್ಯ, ಒಳಹೊರಗೊಂದಾದವರಿಗೆ ಮೆಚ್ಚುವನೇ, ಎರದೆಲೆಯಂತೆ ಒಳಗೊಂದು ಹೊರಗೊಂದಾದರೆ ಮೆಚ್ಚುವನೆ? ಹೀಗೆ ಇದ್ದವರೇ ನಿಜವಾದ ಆಧ್ಯಾತ್ಮ ಗುರುಗಳಾಗಬಲ್ಲರು. ಇಂಥವರಿಂದ ನಿಜವಾದ ಧರ್ಮಪ್ರಸಾರ ವಾಗುವದು. ಅದಕ್ಕೆ ಇವರ ಮಾತಿಗೂ ನಡೆತೆಗೂ ತಕ್ಕ ಮೇಳ ಸಾಮ್ಯವಿರಬೇಕು.

ಇನ್ನು ಗುರುಗಳೆಂಬವರು ಹೆಸರು, ಕೀರ್ತಿಗಳಿಕೆ ಲಾಭ ಕಾಮ ಕಾಂಚನದ ಆಶೆ ಮೊದಲಾದವುಗಳಿಗಾಗಿ ಬೋಧಿಸಕೂಡದು. ಈಗಂತೂ ಈತರದಗುರುಗಳೇ ಹೆಚ್ಚಾಗಿದ್ದಾರೆ. ಸಾವಿರಾರು ಶಿಷ್ಯರನ್ನು ಮಾಡಿಕೊಂಡು ಊಟ ಚಹಾ ದಕ್ಷಿಣ ಮಾನ ಮೊದಲಾದವುಗಳಗಾಗಿ ಕಾದಾಡುತ್ತಿರುವರು. ಇದರಿಂದ ದುಡಿಯದೆ ಶ್ರಮವಿಲ್ಲದೆ ಚಯನಿ ಮಾಡುವದು ಗಾಂಜಿ ದಾರುಗಳನ್ನು ಸೇವಿಸಿ ನಿರಂತರವಾಗಿ ಕಾಮಿನಿಯರ ಕೂಡ ವಿಹರಿಸುವರು. ಇಂಥಗುರುಗಳಿಂದ ಧರ್ಮ ದೇಶಗಳು ಹಾಳಾಗುತ್ತಿರುವದನ್ನು ನಾವು ನೋಡುತ್ತಿರುವೆವು. ಆದಕ್ಕೆ ಯಾವ ಉದ್ದೇಶವಿಲ್ಲದೆ ನಿಷ್ಕಾಮವಾಗಿ ಪ್ರೇಮದಿಂದ ಶಿಷ್ಯನಿಗೆ ಉಪದೇಶಿಸಬೇಕು. ಅಂದರೆ ಉಪದೇಶ ನಾಟುವದು. ಇಲ್ಲವಾದರೆ ಇಲ್ಲ. ಈಗಿನ ಗುರುಗಳು ಮಾತ್ರ ಶಿಷ್ಯನ ತನು ಮನ ಧನವೆಲ್ಲ ತಮ್ಮದೆಂದೇ ಹೇಳಿ ತನಗೆ ಒಪ್ಪಿಸಲು ಕೇಳುವರು- ಹೀಗಾಗಿ ಅನಾಚಾರ ನಿರುದ್ಯೋಗಿತನ ಹೆಚ್ಚಾಗಿ ದುರ್ಗುಣಗಳು ಹೆಚ್ಚು ಬೆಳೆದಿವೆ. ಹೀಗಾಗಿ ನಿಜವಾದ ಸದ್ಗುರುಗಳೂ ಒಳ್ಳೇ ಶಿಷ್ಯರೂ ಸಿಗುವದು ದುರ್ಲಭವಾಗಿದೆ. ಗುರು ಎಂದರೆ ಆಧ್ಯಾತ್ಮಿಕ ತಂದೆ, ಶಿಷ್ಯ

ನೆಂದರೆ ಅವನ ಧಾರ್ಮಿಕ ಮಗುವು ಇಂಥ ಗುರು ಶಿಷ್ಯ ಸಂಬಂಧವು ಶ್ರೀರಾಮಕೃಷ್ಣ ಪರಮಹಂಸ ಹಾಗೂ ಶ್ರೀ ವಿವೇಕಾನಂದ ಇವರಿಗೆ ಸಲ್ಲುವದು. ಇದರಂತೆ ಶರಣರ ಸ್ಥಿತಿಯೂ ಇತ್ತು. ವಿವೇಕಾನಂದರು ಅನೇಕ ಸಲ ಅನೇಕ ರೀತಿಯಿಂದ ಪರೀಕ್ಷಿಸುತ್ತಲೇ ಇದ್ದರೆ ಗುರುಗಳು ದೇಹ ಬಿಡುವಾಗ ಸಹ ಅವರನ್ನು ಪರೀಕ್ಷಿಸಿದ್ದು ಕಂಡುಬರುವದು.

ಗುರುಗಳು ಸಿದ್ಧಿಗಳನ್ನು ಎಂದೂ ಉಪಯೋಗಿಸಬಾರದು. ಅದರಿಂದ ಗುರುವಿನ ಸಾಮರ್ಥ್ಯ ಕುಂದುವದು. ತಿರುಗಿ ಅವನು ಹೊರಟಲ್ಲಿಗೆ ಬಂದು ಮುಟ್ಟುವನು. ಇದೇನು ದೊಡ್ಡ ಕೆಲಸವಲ್ಲ. ಮಂತ್ರ, ಚೀಟಿ, ತಾಯಿತ, ವಶೀಕರಣ ಮಾಡುವ ಮದ್ದು ಮೊದಲಾದವುಗಳೆಲ್ಲವೂ ಕೂಡ ರಾಕ್ಷಸೀ ಶಕ್ತಿಗಳು ಮತ್ತೊಂದು ಆಧ್ಯಾತ್ಮಿಕ ಶಕ್ತಿಯಾಗಿರುವದು. ಇವು ಒಂದ ಕ್ಕೊಂದು ಸಂಬಂಧವಲ್ಲ. ಕಾರಣ ಪವಾಡ, ಸಿದ್ಧಿ, ಮಂತ್ರ, ಮಾಟ, ತಂತ್ರ, ಯಂತ್ರ ಮಾಡುವವನು ಗುರುವಾಗಲಾರನು. ಇನ್ನು ಕೆಲವು ಗುರುಗಳು ಜನವಶ ಮಾಡುವಂಥ ಮಯೂರ ಶಿಖೆ, ಹಾತಜೋಡ, ಪಾಯ ಬಂದ, ಹೊರಮುಚಕ, ಒಳಮುಚಕ, ಮರುಳಮಾತಂಗಿ ಮೊದಲಾದ ಬೇರುಗಳನ್ನು ಸಹ ಉಪಯೋಗಿಸಿ ದೊಡ್ಡ ಗುರುಗಳಾಗಿ ಕೂಡುವರು. ಇದಂತೂ ಬಹು ಹೇಯವಾದವುಗಳು. ಇವರು ಗುರುಗಳಲ್ಲ, ಅವು ಮತ ಗಳಲ್ಲ ಅವನ ಹೊಲಸ ಕೃತಿಗಳನ್ನು ನೋಡಿಯೂ ಕೂಡ ಜನರು ಇವು ಗಳ ಮೂಲಕ ಮರುಳಾಗಿ ಬೆನ್ನುಹತ್ತುವರು. ಜನರು ಮರುಳರಂತೆ ಅವರ ಬೆನ್ನುಹತ್ತಿ ಮೆರಿಸುವರು, ಬೇಡಿದ್ದನ್ನು ಕೊಡುವರು ಇದು ಗುರುವಿನ ರೀತಿಯಲ್ಲ.

ಇನ್ನೂ ಕೆಲವು ಗುರುಗಳು ಮಸೋಬಾ ಅಂದರೆ ಭೂತಗಲ್ಲುಗಳಂತೆ ಅವು ತೆಲಂಗಣ, ಕೊಂಕಣ ಮೊದಲಾದ ಮರಾಠಿ ದೇಶಗಳಲ್ಲಿ ಅಥವಾ ಬಂಗಾಲದಲ್ಲಿ ಸಿಗುವದಂತೆ, ಅದನ್ನು ತಂದು ಇಟ್ಟರೆ ಜನರನ್ನು ಮೋಲಿ ನಂತೆ ಮರುಳ ಮಾಡುವಂತೆ ರೊಕ್ಕ ಕೊಟ್ಟು ಕೊಂಡು ಇವುಗಳನ್ನು ನೆಲ ದಲ್ಲಿ ಹುಗಿದು ಕಾರ್ಯವಮಾಡಿಸಿಕೊಳ್ಳುವರಂತೆ ಇಂಥವರೂ ಕೂಡ ಗುರು ಗಳಾಗಲಾರರು. ಇವು ಇದ್ದವರಿಗೆ ಧನ ಕನಕಗಳ ಕೊರತೆಗಳು ಆಗಲಾ ರವು. ಜನರು ಬಂದು ನೆರೆಯುವರು. ಕೀರ್ತಿಗಳಿಸಿ ಸುಖಿಸುವರು. ಇದು ಗುರುಗಳ ಕಾರ್ಯವಲ್ಲ. ಬಹು ಹೇಯವಾದ ಕೆಲಸವಾಗಿದೆ. ಇಂಥವ

ರನ್ನು ನಂಬಬಾರದು. ಇವರು ಆತ್ಮಜ್ಞಾನವನ್ನು ಭಕ್ತರಿಗೆ ದಾನಮಾಡ ಲಾರರು. ಭಕ್ತರು ಇಂಥ ಗುರುಗಳಿಗೆ ಮರುಳಾಗಿ ಬೆನ್ನುಹತ್ತಿದರೆ ತೀರಿತು. ಸರ್ವನಾಶವಾಗಿ ಬಿಡುವದರಲ್ಲಿ ಸಂಶಯವೇ ಇಲ್ಲ. ಈಗಿನ ಕಾಲದಲ್ಲಿ ಗುರುಗಳೆಂಬುವವರ ಗದ್ದಲಗಳಿಗೆ ಲೆಕ್ಕವಿಲ್ಲ. ಸರಿಯಾಗಿ ಸಾಧನ ಮಾಡಿ ತ್ಯಾಗ ಮಾಡಿ ಸೇವೆ ಮಾಡಿ ಗುರುಗಳಾದವರು ಕಡಿಮೆ. ಅನ್ಯರ ಗಂಟಿನ ಮೇಲೆ ಲಾಗ ಹೊಡೆಯುವ ಗುರುಗಳೇ ಹೆಚ್ಚಾಗಿದ್ದಾರೆ. ಕಾರಣ ವಿಚಾರ ವಂತರು ಇವರ ಬೆನ್ನುಹತ್ತುವದಿಲ್ಲ. ಆದರೆ ಅಜ್ಞ ಸಮಾಜಕ್ಕೆ ಹಿಡಿಯು ವದು ಶಕ್ಯವಾಗುವದಿಲ್ಲ. ಬಹುತರ ಇಂಥ ಕೃತ್ರಿಮ ಉಪಾಯಗಳನ್ನೇ ಗುರುಗಳು ಹುಡುಕುತ್ತಿರುವರು. ಶಾಸ್ತ್ರ ಜ್ಞಾನವನ್ನು ಇವರು ಬಯಸು ವದಿಲ್ಲ. ಅದಕ್ಕೆ ಸಮಾಜವು ಇಂಥ ಗುರುಗಳಿಂದ ಜಾಗ್ರತರಾಗಿರಬೇಕು. ಇವರಿಂದ ಧರ್ಮ ನಾಶವಾಗುತ್ತಿರುವದು, ಧನದ ಅಪವ್ಯಯವಾಗುತ್ತಿರು ವದು ದುರ್ಗುಣ ದುರಾಚಾರಕ್ಕೆ ಯಾವ ವಿಧಿನಿಷೇಧಗಳೂ ಇರುವದಿಲ್ಲ. ಶಿಷ್ಯವೃಂದವನ್ನು ಅಸಂಖ್ಯ ಬೆಳಸಿಕೊಂಡು ಸಾಧಿಸುವರು. ಇವರು ಎಂದೂ ಗುರುಗಳಾಗಲಾರರು.

ಸದ್ಗುರುಗಳು ಪ್ರೇಮದ ದೃಷ್ಟಿಯನ್ನು ಶಿಷ್ಯರ ಮೇಲೆ ಹಾಕಿದರೆ ತೀರಿತು ಅವನ ಉದ್ಧಾರವಾಗುವದು. ಹಸ್ತವನ್ನು ಮಸ್ತಕದ ಮೇಲೆ ಇರಿ ಸಿದರೆ ಗುರುವಿನ ಪಾದವು ಶಿಷ್ಯನ ಶರೀರಕ್ಕೆ ತಾಕಿದರೆ, ಅವನು ಉದ್ಧಾ ರಾಗುವನು. ಹೀಗೆ ಮಾಡಿ ಕೆಲವು ಗುರುಗಳು ತಮ್ಮ ಶಿಷ್ಯರಿಗೆ ಸಮಾ ಧಿಯನ್ನು ಹಚ್ಚಿರುವರು. ಆದರೆ ಶಿಷ್ಯನೂ ಕೂಡ ತಕ್ಕವನಿರಬೇಕು, ಅದನ್ನು ಮೇಲೆ ವಿವರಿಸಲಾಗಿದೆ.

# ವೀರಶೈವರ ಸಮತಾವಾದ.

(ಲೇಖಕಃ— ಸತ್ಯವಾದಿ.)



ಲಿಂಗಧಾರಿಗಳೆಲ್ಲ ಒಂದೇ ಎಂಬುದೇ ಸಮತಾವಾದ. ಇವರಲ್ಲಿ ಹೆಚ್ಚು ಕಡಿಮೆಗಳಿಲ್ಲ. ವೀರಶೈವರಲ್ಲಿ ಭಕ್ತರು ಕಡಿಮೆಯಲ್ಲ ಮಾಹೇಶ್ವರರು ಹೆಚ್ಚಲ್ಲ. ಸ್ತ್ರೀಯರು ಕಡಿಮೆಯಲ್ಲ, ಪುರುಷರು ಹೆಚ್ಚಲ್ಲ, ದರಿದ್ರರು ಕಡಿಮೆಯಲ್ಲ, ಶ್ರೀಮಂತರು ಹೆಚ್ಚಲ್ಲ. ಅಧಿಕಾರಿಗಳು ಹೆಚ್ಚಲ್ಲ, ಅಧಿಕಾರರಹಿತರು ಕಡಿಮೆಯಲ್ಲ. ವಂಶೀಯರು ಹೆಚ್ಚಲ್ಲ, ಆಗಂತುಕರು ಕಡಿಮೆಯಲ್ಲ. ಒಂದು ಕಾಯಕದವರು ಹೆಚ್ಚಲ್ಲ, ಇನ್ನೊಂದು ಕಾಯಕದವರು ಕಡಿಮೆಯಲ್ಲ, ಗುರುಗಳು ಹೆಚ್ಚಲ್ಲ, ಜಂಗಮರು ಕಡಿಮೆಯಲ್ಲ. ವಿದ್ಯಾವಂತರು ಹೆಚ್ಚಲ್ಲ, ಅವಿದ್ಯಾವಂತರು ಕಡಿಮೆಯಲ್ಲ. ಕೊರಳಲ್ಲಿ ಲಿಂಗಧರಿಸುವವರೆಲ್ಲ ಸರಿಸಮಾನರು. ಎಲ್ಲರಿಗೂ ಸರಿಸಮಾನವಾಗಿಯೇ ಅಷ್ಟಾವರಣ ಪಂಚಾಚಾರ ಷಟ್‌ಸ್ಥಲಗಳನ್ನನುಸರಿಸಿ ಸದ್ಗತಿಹೊಂದಲು ಅಧಿಕಾರವುಂಟು. ಇದ್ದರೆ ಭಕ್ತ-ಭವಿಗಳೆಂಬೆರಡೇ ಭೇದಗಳವೆ. ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲ ಒಂದೇ ಎಂಬೆ. ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಗಳಾದವರೆಲ್ಲ ಒಂದೇ ಎಂಬೆ" ಎಂದು ಬಸವಣ್ಣನವರು ಹೇಳಿದಪ್ರಕಾರ ಲಿಂಗವಿದ್ದ ಭಕ್ತ ಲಿಂಗವಿಲ್ಲದ ಭವಿ ಇವರಿಬ್ಬರಲ್ಲಿಯೇ ವ್ಯತ್ಯಾಸವುಂಟಲ್ಲದೆ ಲಿಂಗಧಾರಿಗಳಾದ ಭಿನ್ನ ಭಿನ್ನ ಜಾತಿಯವರೆಲ್ಲರೂ ಒಂದೇ. ಅಂದರೆ ಅವರು ಪರಸ್ಪರ ಅನ್ನೋದಕ ಹಾಗೂ ಶರೀರ ಸಂಬಂಧ ಮಾಡಲಿಕ್ಕೆ ಅಡ್ಡಿಯಿಲ್ಲ ಇದಲ್ಲದೆ ಲಿಂಗಧಾರಿಗಳೆಲ್ಲರಿಗೂ ಗುಣಕರ್ಮ ಅಥವಾ ನೀತಿ ಧರ್ಮಗಳ ಸಹಾಯದಿಂದ ಸಮಾಜದಲ್ಲಿ ಪೂಜ್ಯವಾದ ಸ್ಥಾನಮಾನಪಡೆಯಲು ಅಧಿಕಾರವಿರುತ್ತದೆ. ಈ ರೀತಿಯಾಗಿ ಶಿವಶರಣರು ಸಮತಾವಾದವನ್ನು ವೀರಶೈವ ಸಮಾಜದಲ್ಲಿ ಪ್ರಚಾರಗೊಳಿಸಿದರು. ಆದರೆ ಕೆಲವು ಪ್ರತಿಷ್ಠಿತ ಜನರ ಸ್ವಾರ್ಥ ಸಂಕುಚಿತ ಭಾವನೆಗಳ ಮೂಲಕ ಈ ಸಮತಾವಾದವು ಮೂಲಿಗುಂಪಾಗಿ ಸಮಾಜದಲ್ಲಿ ಭೇದಭಾವಗಳು ನೆಲಿಸಿರುತ್ತವೆ. ಅವುಗಳನ್ನು ಕಿತ್ತಿಹಾಕುವದು ವೀರಶೈವ ಮುಖಂಡರ ಮುಖ್ಯ ಕರ್ತವ್ಯವಾಗಿದೆ. ಆಯಾಯ ಭೇದಗಳನ್ನು ಇದರಡಿಯಲ್ಲಿ ವಿವರಿಸಲಾಗಿದೆ.

## ೧. ಭಕ್ತ-ಮಾಹೇಶ್ವರ ಭೇದ.

ವೀರಶೈವ ಸಮಾಜದಲ್ಲಿ ಅಯ್ಯನವರೆಂಬದೊಂದು ವರ್ಗವು ಅಯ್ಯಾಚಾರವೆಂಬ ವಿಶಿಷ್ಟಸಂಸ್ಕಾರಹೊಂದಿ ಭಕ್ತರಿಗಿಂತ ಅಧಿಕರೆಂದು ಹೇಳಿಸಿಕೊಳ್ಳುತ್ತಿದೆ. ನಿಜವಾಗಿ ನೋಡಿದರೆ ಅಯ್ಯಾಚಾರವು ಬ್ರಾಹ್ಮಣರು (ಆರ್ಯರು) ಮಾಡುವ ಉಪನಯನದ ಅಂಧಾನುಕರಣವು. "ಜನ್ಮನಾ ಜಾಯತೇ ಶೂದ್ರಃ ಸಂಸ್ಕಾರೇಣಚ ಬ್ರಾಹ್ಮಣಃ" ಎಂದು ಶಾಸ್ತ್ರವಿರುವದರಿಂದ ಹುಟ್ಟಿದಾಗ ಬ್ರಾಹ್ಮಣ ಶಿಶುವು ಶೂದ್ರನಿದ್ದು ಉಪನಯನ ಸಂಸ್ಕಾರಹೊಂದಿದ ಬಳಿಕ ಬ್ರಾಹ್ಮಣನಾಗುತ್ತಾನೆ. ಆದರೆ ವೀರಶೈವ ಶಿಶುವಿಗೆ ತಾಯಿಯು ಗರ್ಭದಲ್ಲಿದ್ದಾಗಲೇ ೮ನೇ ತಿಂಗಳಿಗೆ ಲಿಂಗಧಾರಣವಾಗುವದರಿಂದ ಹುಟ್ಟಿದಬಳಿಕ ಅದು ಶೂದ್ರವಾಗುವದಿಲ್ಲನಷ್ಟೇ! ಶೂದ್ರನಾಗದಿದ್ದರೆ ಅಯ್ಯಾಚಾರದ ವೈಶಿಷ್ಟ್ಯವೇನು? ಒಂದುವೇಳೆ ಭಕ್ತನಿಗಿಂತ ಆ ಶಿಶುವನ್ನು ಹೆಚ್ಚಿನವನನ್ನಾಗಿ ಮಾಡಲಿಕ್ಕೆ ಅಯ್ಯಾಚಾರವು ಮಾಡಲ್ಪಡುತ್ತದೆಂದರೆ ಆ ಕೂಸು ಹುಟ್ಟಿದಾಗ ಭಕ್ತನಿದ್ದು ಅಯ್ಯಾಚಾರವಾದ ಬಳಿಕ ಮಾಹೇಶ್ವರನಾಗುತ್ತಾನೆಯೋ ಹೇಗೆ? ಹಾಗಿದ್ದರೆ ಭಕ್ತರೆಂಬವರೆಲ್ಲರಿಗೂ ಮಾಹೇಶ್ವರರಾಗಲಿಕ್ಕೇಕೆ ಬರುವದಿಲ್ಲ? ಮಾಹೇಶ್ವರ ಜಾತಿಯಲ್ಲಿ ಹುಟ್ಟಿದ ಕೂಸು ಹುಟ್ಟಿದ ಕೂಡಲೆ ಮಾಹೇಶ್ವರನಾಗಿಯೋ ಇರುವದಿಲ್ಲವೇಕೆ? ಅದಕ್ಕೆ ಬೇರೆ ಅಯ್ಯಾಚಾರವೇಕೆಬೇಕು?

ಮಹೇಶಸ್ಥಲವು ಷಟ್‌ಸ್ಥಲಗಳಲ್ಲೊಂದಾದ್ದರಿಂದ ಬೇಕಾದ ಭಕ್ತನಿಗೂ ಆಧ್ಯಾತ್ಮದೃಷ್ಟಿಯಿಂದ ಮಹೇಶನಾಗಲು ಬರುವದಿಲ್ಲವೇ? ಆದರೆ ಅಯ್ಯನವರಿಗಷ್ಟೇ ಅದನ್ನು ಮೀಸಲಾಗಿರಿಸಿದ್ದೇಕೆ? 'ಅಯ್ಯ' ಈ ಶಬ್ದವು 'ಆರ್ಯ' ಇದರಿಂದ ಹುಟ್ಟಿದ್ದರಿಂದ ಅಯ್ಯನವರು ಮೂಲತಃ ಲಿಂಗಾಯತರಿರದೆ ಆರ್ಯರಿರಬಹುದು. ಆರ್ಯರಲ್ಲಿ ತಾರತಮ್ಯಗಳಿದ್ದದ್ದು ಸರ್ವಶ್ರುತವಿದೆ. ಆಪ್ರಕಾರ ಅವರು ಶಿವಭಕ್ತರಾದ ಲಿಂಗವಂತರ ಮತದನ್ನಂಗೀಕರಿಸಿ ಆ ಶಿವಭಕ್ತರಿಗಿಂತ ತಾವು ಅಧಿಕರೆಂದು ಹೇಳಿಸಿಕೊಳ್ಳಲಿಕ್ಕೆ ತಮ್ಮ ಪೂರ್ವಕುಲದ ಉಪನಯನವನ್ನು ಹಾಗೆಯೇ ಬಳಿಕೆಯಲ್ಲಿ ತಂದಂತೆ ತೋರುತ್ತದೆ. ಮತ್ತು ಶಿವಭಕ್ತರಂತೆ ಕಾಯಕಷ್ಟದಿಂದ ದುಡಿಯದೆ ಭಕ್ತರ ಸೊತ್ತಿನ ಮೇಲೆ ಭಿಕ್ಷಾವೃತ್ತಿಯಿಂದ ಉಪಜೀವಿಸುತ್ತಿರುವಂತೆ ಕಂಡುಬರುತ್ತಿದೆ. ಇದಲ್ಲದೆ ಸ್ವಾರ್ಥದ ದೃಷ್ಟಿಯಿಂದ ಭಕ್ತರ ಮಠಮಾನ್ಯಗಳನ್ನಪಹರಿಸಲಿಕ್ಕೆ ಅಯ್ಯಾಚಾರ ವೈಶಿಷ್ಟ್ಯವನ್ನು ಮುಂದುಮಾಡಿದಂತೆ ತೋರುತ್ತದೆ.

ಭಕ್ತರಿಗಿಂತ ಅಯ್ಯನವರು ಹೆಚ್ಚಿನವರೆಂದು ಯಾವ ಧರ್ಮಗ್ರಂಥಗಳಲ್ಲಿಯು ಹೇಳಿಲ್ಲ. ಹೇಳಿದ್ದರೆ ಅವು ಅಯ್ಯನವರು ನಡುವೆ ಹುಟ್ಟಿಸಿಕೊಂಡ ಗ್ರಂಥಗಳಿರಬಹುದು. ಅಯ್ಯನವರೇ ಮಠಮಾನ್ಯಗಳಿಗೆ ಅಧಿಕಾರಿಗಳೆಂದು ಸಾಧಿಸಿದರೆ ಈ ವರೆಗೆ ಎಷ್ಟೋ ಭಕ್ತರು ಅಧಿಕಾರಿಗಳಾಗಿಲ್ಲವೇ? ಇನ್ನೂ ಆಗುತ್ತಿರುವದಿಲ್ಲವೇ? ಆದ್ದರಿಂದ ಅಯ್ಯಾಚಾರವೆಂಬ ಆರ್ಯರ ಅಂಧಾನುಕರಣವು ಸಮಾಜದಿಂದ ತೊಲಗಲೇಬೇಕು. ಇಲ್ಲದಿದ್ದರೆ ಧರ್ಮದ ವಿರುದ್ಧವಾದ ಸಂಸ್ಕಾರಕ್ಕೆ ಸಮಾಜದವರು ವ್ಯರ್ಥವಾಗಿ ಎಡೆಕೊಟ್ಟಂತಾಗುತ್ತದೆ. ಅದರಿಂದ ವೀರಶೈವ ಸಮತಾವಾದಕ್ಕೆ ಭಂಗಬರುತ್ತದೆ. ಭಕ್ತರೂ ಅಷ್ಟೇ, ಅಯ್ಯನವರೂ ಅಷ್ಟೇ. ಒಬ್ಬರು ಹೆಚ್ಚಲ್ಲ, ಇನ್ನೊಬ್ಬರು ಕಡಿಮೆಯಲ್ಲ. ತಮ್ಮ ಗುಣಕ್ರಿಯೆಗಳಿಂದ ಸಮಾಜದಲ್ಲಿ ಪ್ರತಿಷ್ಠೆಪಡೆಯುವದಕ್ಕಾಗಲಿ ಮಠಾಧಿಕಾರ ಗಳಿಸುವದಕ್ಕಾಗಲಿ ಉಭಯರಿಗೂ ಸಮಾನವಾದ ಹಕ್ಕು ಇದೆ.

## ೨. ಸ್ತ್ರೀಪುರುಷ ಭೇದ.

ವೀರಶೈವ ಸಮಾಜದಲ್ಲಿ ಸ್ತ್ರೀಪುರುಷರೊಳಗೆ ಕೇವಲ ಲಿಂಗಭೇದ ಮಾತ್ರವಲ್ಲದೆ ಉಳಿದ ಯಾವ ಭೇದವೂ ಇಲ್ಲ. ಸ್ತ್ರೀಪುರುಷರಿಬ್ಬರಿಗೂ ಲಿಂಗಧಾರಣವಾಗುತ್ತದೆ. ಇಬ್ಬರೂ ಗುರುಲಿಂಗಜಂಗಮದ ಸೇವೆಗಾಗಿ ಒಂದಿಲ್ಲೊಂದು ಕಾಯಕವನ್ನು ಮಾಡಬೇಕಾಗುತ್ತದೆ. ಹೆಂಡತಿ ಪತಿವ್ರತೆಯಾದರೆ ಗಂಡನು ಪತ್ನೀವ್ರತಸ್ಥನಾಗಬೇಕು. ಹೆಂಡತಿಯು ಗಂಡನ ಕೈಕೆಳಗಿನ ಆಳಲ್ಲ, ದಾಸಿಯಲ್ಲ. ಕೇವಲ ವಿಷಯೋಪಭೋಗದ ವಸ್ತುವಲ್ಲ. ಆರ್ಯಸ್ತ್ರೀಯಳಂತೆ ಇವಳಿಗೆ ಪತಿಯು ಪಾದವೇ ಗತಿಯಲ್ಲ. ಪರಸ್ಪರರು ಸಹಕಾರದಿಂದ ಪ್ರಪಂಚಸಾಗಿಸಿದ ಧಾರ್ಮಿಕ ಕಾರ್ಯಗಳನ್ನು ಜರಗಿಸುವರು. ಸ್ತ್ರೀಯು ತನ್ನ ಆಧ್ಯಾತ್ಮಿಕ ಶಕ್ತಿಯ ಪ್ರಭಾವದಿಂದ ಗಂಡನಿಗೆ ಪೂಜ್ಯಳಾಗಬಹುದು. ಆದರೆ ಗಂಡನು ಎಂಥವನಿದ್ದರೂ ಹೆಂಡತಿಗೆ ಪೂಜ್ಯನೆಂಬ ಆರ್ಯರ ವಾದವು ವೀರಶೈವರಿಗೆ ಸಮ್ಮತವಲ್ಲ. ತನ್ನ ಆಧ್ಯಾತ್ಮಕೋನ್ನತಿಗೆ ಗಂಡನು ಅಡ್ಡಬಂದರೆ ಆ ಸ್ತ್ರೀಯಳು ಗಂಡನನ್ನು ಕೂಡ ಪರಿತ್ಯಜಿಸಿ ಪರಶಿವನನ್ನು ನಂಬಿ ಪಾರಮಾರ್ಥವನ್ನು ಪಡೆಯಬಹುದು. ವೀರಶೈವರಲ್ಲಿ ಅಂಥ ಅನೇಕ ಉದಾಹರಣೆಗಳನ್ನು ನಾವು ಕಾಣಬಹುದು. ಆದರೆ ಆರ್ಯ ಸ್ತ್ರೀಯರಿಗೆ ಗಂಡನೇ ದೇವರು, ಹೆಂಡತಿಯು

ಪತಿಗೆ ದೇವತೆಯಲ್ಲ, ಪ್ರತ್ಯಕ್ಷ ರಾಕ್ಷಸಿಯು. ಗಂಡನ ಪಾದ ಸೇವೆಯಿಂದಲೇ ಆಕೆಗೆ ಮೋಕ್ಷ. ಗಂಡನನ್ನು ಬಿಟ್ಟು ದೇವರ ಮರೆಹೊಕ್ಕರೆ ಆಕೆಯು ಪತಿತಳಾಗುತ್ತಾಳೆ. ಇಂಥ ವಿಚಾರಗಳು ವೀರಶೈವರಲ್ಲಿಲ್ಲ. ಗಂಡಹೆಂಡಿರು ಸರಿಸಮಾನರು. ಪರಸ್ಪರ ಸಹಕಾರದಿಂದ ಪ್ರಪಂಚ ಪಾರಮಾರ್ಥಗಳನ್ನು ಸಾಧಿಸುವಲ್ಲಿ ಸಮಾನಾಧಿಕಾರವುಳ್ಳವರು. ಆದರೆ ಗಂಡನಪಾದವೇ ಹೆಂಡತಿಗೆ ಗತಿಯೆಂಬ ಆರ್ಯರ ಅಂಧಾನುಕರಣವೂ ನಮ್ಮ ಸಮಾಜದಲ್ಲಿ ಅಂತರ್ಗತವಾಗಿದೆ. ಈ ಸಂಕುಚಿತ ದೃಷ್ಟಿಯನ್ನು ತೊಡೆದು ಸ್ತ್ರೀಯರ ಮಟ್ಟವನ್ನು ಹೆಚ್ಚಿಸುವದು ನಮ್ಮಗಳ ಕರ್ತವ್ಯ. ಪೂಜ್ಯ ಪೂಜ್ಯಕ ಭಾವಗಳ ಆಪರ ವ್ಯಕ್ತಿತ್ವದ ಗುಣಕ್ರಿಯೆಗಳನ್ನವಲಂಬಿಸಿವೆಯೇ ಹೊರತು ಸತಿಪತಿತ್ವವನಲ್ಲ.

## ೩. ದರಿದ್ರ ಶ್ರೀಮಂತ ಭೇದ.

ಪ್ರತಿಯೊಂದು ಸಮಾಜದಲ್ಲಾಗಲಿ ದೇಶದಲ್ಲಾಗಲಿ ವ್ಯವಹಾರ ದೃಷ್ಟಿಯಿಂದ ದುಡ್ಡಿದ್ದವನೇ ದೊಡ್ಡವ, ದುಡ್ಡಿಲ್ಲದ ಪಾಮರನೇ ಅಧಮನೆಂಬ ಗ್ರಹಿಕೆಯು ಇದ್ದೇ ಇರುತ್ತದೆ. ಈ ವಿಚಾರ ಭೂತವು ವೀರಶೈವ ಸಮಾಜಕ್ಕೂ ಬಡೆದುಕೊಂಡಂತೆ ಭಾಸವಾಗುತ್ತದೆ. ದರಿದ್ರರು ಕೀಳೆಂದೂ, ಶ್ರೀಮಂತರು ಹೆಚ್ಚೆಂದೂ ಪ್ರತಿಪಾದಿಸುವದು ಆರ್ಯರ ವಾದ ಪಾಶ್ಚಾತ್ಯ ದೇಶಗಳೆಲ್ಲ ಬಹುಶಃ ಈ ವಾದವನ್ನೇ ಅನುಸರಿಸಿ ನಡೆದಿರುತ್ತವೆ. ವೀರಶೈವರಲ್ಲಿ ದರಿದ್ರನಿರಲಿ ಶ್ರೀಮಂತನಿರಲಿ ಇಬ್ಬರೂ ಅಷ್ಟೇ ಆತ್ಮಸಾಕ್ಷಾತ್ಕಾರ ದೃಷ್ಟಿಯಿಂದ ಇಬ್ಬರೂ ಸಮಾನಾಧಿಕಾರಿಗಳು. ಶ್ರೀಮಂತರಿಗಿಂತ ಬಡವರೇ ಹೆಚ್ಚು ಸುದೈವಿಗಳು. ಅಂತೆಯೇ ಕಾಶ್ಮೀರದ ಭೂಪತಿಯಾದ ಮಹಾದೇವರಸನು ರಾಜಸಂಪತ್ತನ್ನು ತ್ಯಾಗ ಮಾಡಿ ಮೋಳಿಗೆಯ ಕಾಯಕವನ್ನು ಕೈಕೊಂಡು ಶರಣರ ಅಡಿಯನ್ನು ಸೇರಿದನು. ಶ್ರೀಮಂತರಿಗಿಂತ ಬಡವರಿಗೇ ದೇವರ ಸಾನ್ನಿಧ್ಯವು ಬೇಗ ಪ್ರಾಪ್ತವಾಗುವದು. ವೀರಶೈವರಿಗೆ ವ್ಯಕ್ತಿಗತವಾದ ಶ್ರೀಮಂತಿಕೆಯಿಲ್ಲ. ಅವರು ಬೇಕಾದಷ್ಟು ಗಳಿಸಬಹುದು. ಆದರೆ ತಮಗೆ ಬೇಕಾದಷ್ಟನ್ನು ಮಾತ್ರ ಇಟ್ಟುಕೊಂಡು ಉಳಿದದ್ದನು ಗುರುಲಿಂಗಜಂಗಮದ ಸೇವಾರ್ಥವಾಗಿ ಅರ್ಥಾತ್ ಸಮಾಜ ಹಿತಕ್ಕಾಗಿ ಧಾರೆಯೆರೆಯಬೇಕೆಂಬ ನೇಮವಿದೆ. ಹೀಗೆ ಮಾಡಿದರೆ ಶ್ರೀಮಂತನು ಕೂಡ ಬಡವನಾಗೇ ಬಿಡುತ್ತಾನೆ. ಈ ಬಡವನೂ ಹುಟ್ಟಬಡವನೂ ಆಸ್ತಿಯ ದೃಷ್ಟಿಯಿಂದ ಸರಿಸಮಾನರೇ ಸರಿ. ಯಾಕೆಂದರೆ ಇಬ್ಬರಿಗೆಯು ನಿಜ

ವಾದ ಆಸ್ತಿಯಿಲ್ಲ. ಸಮಾಜವೇ ಇವರಿಬ್ಬರ ಆಸ್ತಿಯು. ಸಮಾಜ ಹಿತಕ್ಕಾಗಿ ಅವರು ದುಡಿಯಬೇಕು. ದುಡಿದದ್ದನ್ನು ಧಾರೆಯೆರೆಯಬೇಕು. ಆದಕ್ಕಂತೆಯೇ ಬಸವಣ್ಣನವರು "ಗುರುಲಿಂಗಜಂಗಮ ದಾಸೋಹಕ್ಕಲ್ಲದೆ ಎನಗೆಂದ, ಎನ್ನ ಮಡದಿಮಕ್ಕಳ ಒಡಲಿಗೆಂದು ಒಂದು ಕಾಸನ್ನಾದರೂ ಇಟ್ಟುಕೊಂಡೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ಕೂಡಲಸಂಗಮದೇವಾ" ಎಂಬ ತತ್ವವು ಎಷ್ಟು ಮಹತ್ವದ್ದಾಗಿದೆಯೆಂಬದನ್ನು ವಿಚಾರಿಸಬೇಕು.

ಇಂದಿನದು ನಾಳಿಗೆ ಬಂದೀತೆಂದು ಸರ್ವಥಾ ಕೂಡಿಟ್ಟುಕೊಳ್ಳಬಾರದು. ಈ ಶರಣರ ತತ್ವವನ್ನು ಅಕ್ಷರಶಃ ಪಾಲಿಸಿದರೆ ಶ್ರೀಮಂತರಾರು, ಬಡವರಾರು, ಎಲ್ಲರೂ ಸುಖಿಗಳು. ಎಲ್ಲರೂ ಸರಿಸಮಾನರು. ಆದರೆ ಅಂಥ ಪ್ರಾಮಾಣಿಕತನವು ಮಾತ್ರ ಸಮಾಜ ಮುಂದಾಳುಗಳಲ್ಲಿರಬೇಕು. ಶರಣರ ರಾಜ್ಯದಲ್ಲಿ ಒತ್ತಟ್ಟಿಗೆ ದುಡ್ಡು ಶೇಖರವಾಗಿ ಬಹು ಸಂಖ್ಯಾಕರ ಬಾಯಿಗೆ ಗಡ್ಡಿಕೊಡುವ ವಿಚಾರಕ್ಕೆ ಆಸ್ಪದವೇ ಇಲ್ಲ. ಕಾಯಕದಿಂದ ಗಳಿಸಲೂ ಭೋಗಿಸಲೂ ವೀರಶೈವನಿಗೆ ಸ್ವಾತಂತ್ರ್ಯವಿದ್ದರೂ ಉಳಿಸಿಕೊಂಡಿರಲು ಆಸ್ಪದವಿಲ್ಲ. ಅದನ್ನು ಆತನ ಗುರುಲಿಂಗಜಂಗಮದ ಸೇವೆಗಾಗಿ ಅರ್ಥಾತ್ ಸಮಾಜ ಪ್ರಗತಿಗಾಗಿ ಸಲ್ಲಿಸಲೇಬೇಕು. ಹೀಗಿದ್ದ ಮೇಲೆ ಸಮಾಜದ ಸರ್ವಾಂಗೀಣ ಉನ್ನತಿಯು ಶೀಘ್ರದಲ್ಲಿ ಆಗಲಾರದೇ? ಇಡೀ ಜಗತ್ತಿಗೇನೇ ಇದು ಮಾದರಿಯ ತತ್ವವಾಗಲಿಕ್ಕಿಲ್ಲವೇ? ವೀರಶೈವ ಸಮತಾವಾದದಲ್ಲಿ ದರಿದ್ರ ಶ್ರೀಮಂತರೆಂಬ ಭೇದಕ್ಕೆ ಎಡೆಯುಂಟೇ? ಶರಣರು ತಮಗೆ ಬೇಕಾಗಿ ಬಡವರಾದರು. ಬಡವರಾಗಿ ವ್ಯಡನಡಿವಿಡಿದರು. ಈ ಸಂಸ್ಕೃತಿಯೇ ನಮ್ಮದು. ಬಡವರ ಸೊತ್ತನ್ನು ಅನ್ಯಾಯದಿಂದ ಹಿರಿಕಾನು ಸೊಕ್ಕುವದು ವೀರಶೈವ ಸಂಸ್ಕೃತಿಯೇ ಅಲ್ಲ. ಆದ್ದರಿಂದ ಸಮಾಜ ಸೇವಾ ದೃಷ್ಟಿಯಲ್ಲಿ ಶ್ರೀಮಂತರೂ, ಬಡವರೂ ಸಮಾನವಾಗಿದ್ದಾರೆ.

## ೪. ಅಧಿಕಾರ ನಿರಧಿಕಾರ ಭೇದ.

ಸಾಮಾಜಿಕ, ರಾಜಕೀಯ, ಧಾರ್ಮಿಕ ಕ್ಷೇತ್ರಗಳಲ್ಲಿ ಪ್ರತಿಷ್ಠಿತರಾದ ಅಧಿಕಾರಿಗಳು ಉಳಿದವರಿಗಿಂತ ಅಧಿಕರೆಂದು ಗ್ರಹಿಸಲ್ಪಡುತ್ತಾರೆ. ಆದರೆ ಪ್ರಜಾರಾಜ್ಯದಲ್ಲಿ ಆ ಅಧಿಕಾರಿಗಳೆಲ್ಲ ಜನತೆಯ ಸೇವಕರೇ ಹೊರತು ಪ್ರಭುಗಳಲ್ಲ. ಯಾಕಂದರೆ ಜನತೆಯ ಕಲ್ಯಾಣಕ್ಕಾಗಿಯೇ ಸರಕಾರವಾಗಲಿ,

ಸಮಾಜವಾಗಲಿ ಆಯಾಯ ಅಧಿಕಾರಿಗಳನ್ನು ನೇಮಿಸುತ್ತಾರೆ. ಜನತಾ ಸೇವೆ ಮಾಡುವದಕ್ಕಾಗಿ ಜನತೆಯು ಲೋಕಸಭೆಗೆ ಮತ್ತು ವಿಧಾನ ಸಭೆಗೆ ಉಮೇದವಾರರನ್ನು ಆರಿಸಿ ಕಳಿಸುತ್ತಾರೆ. ಮತಗಳ ಸಲುವಾಗಿ ಆ ಉಮೇದವಾರರು ಜನಗಳ ಮರ್ಜಿಯನ್ನು ಕಾಯಬೇಕಾಗುತ್ತದೆ. ಅಂದಮೇಲೆ ಅಧಿಕಾರಿಗಳು ಹೆಚ್ಚುಹೇಗೆ? ಸಮಾಜವು ಮಠ ಪೀಠಾಧಿಕಾರಿಗಳನ್ನು ಆರಿಸುವಾಗ ಧಾರ್ಮಿಕ, ಸಾಮಾಜಿಕ ಸೇವೆಗೆಂದೇ ಆರಿಸುತ್ತಾರೆ. ಆದರೆ ಆತ್ಮಾಡಂಬರ ವಿಷಯೋಪಭೋಗಕ್ಕಲ್ಲ, ಭಕ್ತರಿಂದ ದುಡ್ಡು ಸೆಳೆಯ ಆನೆ ಅಂಬಾರಿ ಪಲ್ಲಕ್ಕಿಯಲ್ಲಿ ಮೆರೆಯುವದಕ್ಕಲ್ಲ. ಜನತಾ ಸೇವೆಯನ್ನು ಅವರವರು ನಿಷ್ಠೆಯಿಂದಲೂ, ಪ್ರಾಮಾಣಿಕತನದಿಂದಲೂ ಮಾಡಿದರೆ ತೀರಿತು. ಅಂದಮೇಲೆ ಜನತಾ ಸೇವೆಯನ್ನು ಅಧಿಕಾರಿಗಳು ಮಾಡಿದರೇನು? ಇಬ್ಬರೂ ಒಂದೇ ಅಧಿಕಾರ ಮಹತ್ವವಲ್ಲ. ಕಾರ್ಯ ಮಹತ್ವ ಗುರುಗಳೇ ಇರಲಿ, ವಿರಕ್ತರೇ ಇರಲಿ, ಭಕ್ತರೇ ಇರಲಿ ಆತ್ಮೋನ್ನತಿಯ ಹಾಗೂ ಸಮಾಜ ಹಿತದ ಕಾರ್ಯಗಳನ್ನು ನಿಷ್ಠೆಯಿಂದ ಮಾಡುವರೆ ಅವರೆಲ್ಲರೂ ಸಂಸಮಾನರು. "ಯೋಗಃ ಕರ್ಮಸು ಕೌಶಲಂ" ಎಂದು ಗೀತೆಯಲ್ಲಿ ಹೇಳಿದಂತೆ ನಿಷ್ಠೆಯಿಂದ ಕಾರ್ಯ ತತ್ಪರರಾಗುವದೇ ಯೋಗವು. ಅಥಣಿ ಶಿವಯೋಗಿಗಳಾಗಲಿ, ನಾಲ್ವತವಾಡದ ಶರಣರಾಗಲಿ ಯಾವ ಮಠಾಧಿಕಾರ ಪಡೆದಿದ್ದರು? ಅವರು ತಮ್ಮ ಯೋಗಬಲದಿಂದ ಕರ್ತವ್ಯನಿಷ್ಠೆಯಿಂದ ಎಲ್ಲರಿಗೂ ಪೂಜ್ಯರಾಗಲಿಲ್ಲವೇ? ನಿಜವಾದ ಕಾರ್ಯನಿಷ್ಠವಾದವರೆಲ್ಲ ಸಂಸಮಾನರು. ಆದ್ದರಿಂದ ಅಧಿಕಾರಿಗಳಿರಲಿ, ನಿರಧಿಕಾರಿಗಳಿರಲಿ ಒಳ್ಳೆ ನಿಷ್ಠೆಯಿಂದ ತಮ್ಮ ತಮ್ಮ ಕರ್ತವ್ಯಗಳನ್ನು ಮಾಡುವವರೆಲ್ಲ ಸಂಸಮಾನರು. ಇದೇ ಸಮತಾವಾದವು.

## ೫. ವಂಶ್ಯ ಆಗಂತುಕ ಭೇದ.

ವೀರಶೈವರಲ್ಲಿ ಕೆಲವರು ಮೂಲ ವೀರಶೈವ ಜಾತಿಯವರಿರುವರು. ಉಳಿದವರು ವೀರಶೈವ ಮತದಲ್ಲಿ ನಡುವೆ ಸೇರಿಕೊಂಡವರಿರುವರು. ಆದಾಗ್ಯೂ ಲಿಂಗಧಾರಿಗಳಾದ್ದರಿಂದ ಅವರೆಲ್ಲರೂ ಒಂದೇ. ಆಗಂತುಕರೆಂದು ಕಡೆಗಣ್ಣಿ ನೋಡಲಾಗದು. ಬಸವಾದಿ ಪ್ರಮಥರ ಕಾಲದಲ್ಲಿ ಭಿನ್ನ ಭಿನ್ನ ಜಾತಿಯ ಶರಣರು ಗುರುವಿರಕ್ತಪೀಠಗಳನ್ನಲಂಕರಿಸಿ ಪೂಜ್ಯರಾಗಿ ಹೋಗಿಲ್ಲವೇ? ಆಗಂತುಕರನ್ನು ನಾವು ಕಡಿಮೆಯೆಂದು ತಿಳಿದರೆ ಲಿಂಗಕ್ಕೆ ಭಂಗವುಂಟಾ

ಗುತ್ತದೆ. 'ಲಿಂಗಧರಿಸಿದವರನ್ನೆಲ್ಲ ಸಂಗಮನಾಥನಂತೆ ಕಾಂಬೆ" ಎಂದು ಬಸವಣ್ಣನವರು ಹೇಳುವ ತತ್ವಕ್ಕೆ ಕಲಂಕವುಂಟಾಗುತ್ತದೆ. ಅವರು ಶುದ್ಧಾಂತಃಕರಣಿಗಳೆಂದೇ ವೀರಶೈವ ಮತದಲ್ಲಿ ತೆಗೆದುಕೊಂಡಿರುವದಿಲ್ಲವೇ ? ಒಮ್ಮೆ ತೆಗೆದುಕೊಂಡ ಬಳಿಕ ವೀರಶೈವ ನಾಗರಿಕ ಹಕ್ಕುಗಳು ಆಗಂತುಕರಿಗೂ ಉಂಟಾಗುತ್ತವೆ. ಅಷ್ಟಾವರಣ ಪಂಚಾಚಾರ-ಷಟ್‌ಸ್ಥಲ ಮಾರ್ಗವಿಡಿದು ಸದ್ಗತಿ ಹೊಂದಲು ಅವರಿಗೂ ಅಧಿಕಾರವುಂಟಾಗುತ್ತದೆ. ಅಲ್ಲದೆ ಆಧ್ಯಾತ್ಮಿಕ ಪ್ರಗತಿಯನ್ನು ಸಾಧಿಸಿ ಮಠ ಪೀಠಾಧಿಕಾರಿಗಳನ್ನು ಪಡೆಯಲು ಅವರಿಗೆ ಹಕ್ಕು ಇರುತ್ತದೆ. ವಂಶೀಯರೊಡನೆ ಊಟೋಪಚಾರ ಶರೀರ ಸಂಬಂಧವನ್ನು ಆಚರಿಸಲು ಅವರು ಬದ್ಧರಾಗುತ್ತಾರೆ. ಹಾಗಿಲ್ಲದಿದ್ದರೆ ವೀರಶೈವ ಮತದ ಔದಾರ್ಯದ ಸದ್ದಡಗಿ ಅದನ್ನು ಸಂಕುಚಿತ ಮಹತ್ವಕ್ಕೆ ಇಳಿಸಬೇಕಾಗುತ್ತದೆ. ಆದ್ದರಿಂದ ಆಗಂತುಕರನ್ನು ಅನ್ಯಕುಲದವರೆಂದು ಅವರ ಪೂರ್ವಾಶ್ರಮವನ್ನೆಣಿಸದೆ ಅವರೂ ನಮ್ಮವರೇ ಎಂದು ಅಪ್ಪಿಕೊಂಡು ಅವರಿಗೆ ವೀರಶೈವ ಹಕ್ಕುಬಾಧ್ಯತೆಗಳನ್ನು ಒಪ್ಪಿಸುವದು ಸಮಾಜದ ಕರ್ತವ್ಯ. ಹಾಗೆ ನಡೆದರೆ ವಂಶ್ಯ ಆಗಂತುಕರಲ್ಲಿರುವ ಭೇದ ವಳಿದು ವೀರಶೈವ ಸಮತಾವಾದಕ್ಕೆ ಹೆಚ್ಚು ಕಳೆಬರುತ್ತದೆ.

## ೬. ಕಾಯಕಗಳಲಿ ಕುಲಭೇದ.

"ದೇವಸಹಿತವಾಗಿ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡೆನಾದರೆ ಆಣೆ, ನಿಮ್ಮಾಣೆ ಕೂಡಲಸಂಗಮದೇವಾ. ಕಾಯಕದಲ್ಲಿ ಕುಲವನಾರಿಸಿದರೆ ನಿಮ್ಮ ರಾಣಿವಾಸದಾಣೆ" ಎಂದು ಬಸವಣ್ಣನವರು ಅಪ್ಪಣೆ ಕೊಡಿಸಿದ್ದಾರೆ. ಈಗ ಸಮಾಜದಲ್ಲಿ ಕಾಯಕದಿಂದಲೇ ಅನೇಕ ಕುಲಗಳಾಗಿವೆ. ಒಕ್ಕಲಿಗ, ವ್ಯಾಪಾರಸ್ಥ, ಮಡಿವಾಳ, ಹಡಪಿಗ, ಉಪ್ಪಾರ, ಕಮ್ಮಾರ, ಕುಂಬಾರ, ಗಾಣಿಗ ಇತ್ಯಾದಿ ಇವರಲ್ಲಿ ಯಾರು ಹೆಚ್ಚು ? ಯಾರು ಕಡಿಮೆ ? ಎಲ್ಲರೂ ಲಿಂಗಧಾರಿಗಳಾಗಿದ್ದಾರೆ. ಅವರೆಲ್ಲರೂ ಸರಿ ಸಮಾನರು. ಒಂದು ಕಾಯಕ ಹೆಚ್ಚಲ್ಲ. ಇನ್ನೊಂದು ಕಾಯಕ ಕಡಿಮೆಯಲ್ಲ. ಎಲ್ಲ ಕಾಯಕಗಳೂ ಗುರುಲಿಂಗಜಂಗಮ ದಾಸೋಹಕ್ಕಾಗಿಯೇ ನೇರ್ಪಟ್ಟಿದ್ದರಿಂದ ಅವುಗಳಲ್ಲಿ ಹೆಚ್ಚುಕಡಿಮೆಗಳನ್ನೆಣಿಸಲಿಕ್ಕೆ ಬರುವದಿಲ್ಲ. ಆರ್ಯರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಜಾತಿಗಳು ಗುಣಕಾರ್ಯಗಳಿಂದುಂಟಾಗಿದ್ದರೂ ಮನುಸ್ಮೃತಿಯಲ್ಲಿ ವಂಶಗತವಾಗಿ ತಾರ

ತವ್ಯಗಳಿಂದ ಪ್ರತಿಪಾದಿಸಲ್ಪಟ್ಟಿವೆ. ಆದರೆ ವೀರಶೈವರಲ್ಲಿ ಯಾವ ಕಾಯಕ ಮಾಡಿದರೂ ಹೆಚ್ಚುಕಡಿಮೆಯಿಲ್ಲ. ಮೊಚ್ಚೆಯ ಕಾಯಕ ಮಾಡುವ ಹರಳಯ್ಯನು ಅಂತಃಕರಣ ಶುದ್ಧಿಯಲ್ಲಿ ಮಂತ್ರಿಯ ಕಾಯಕ ಮಾಡುವ ಬಸವಣ್ಣನಿಗಿಂತ ಕಡಿಮೆಯಲ್ಲ. ಇಬ್ಬರೂ ಸರಿಸಮಾನರು. ಮುಪ್ಪಿನ ಷಟಕ್ಷರ ಸ್ವಾಮಿಗಳು "ಕುರಿಯ ಕಾಯುತಿರಲಿ ಅವರು । ಕೆರವ ಹೊಲಿಯುತಿರಲಿ ಅವರು । ಕೊರಳಿನಲ್ಲಿ ಲಿಂಗ ಧರಿಸೆ ಶರಣುಯೆಂಬೆನು ॥" ಎಂದು ಹಾಡಿದ್ದಾರೆ. ಸಮಾಜದ ಸರ್ವಾಂಗೀಣ ಉನ್ನತಿಗಾಗಿಯೇ ವಿವಿಧ ಕಾಯಕಗಳ ಏರ್ಪಾಟು. ಆದ್ದರಿಂದ ಅವುಗಳಲ್ಲಿ ವೀರಶೈವರು ಭೇದವನ್ನೆಣಿಸಬಾರದು. ಅವರೊಡನೆ ಸಹಕರಿಸಿ ಸಮಾಜ ಹಿತದ ಕೆಲಸಗಳನ್ನು ಮಾಡಬೇಕೇ ವಿನಾ ತುಚ್ಛರೆಂದು ಬಳಿಕೆಯನ್ನು ಬಿಡಲಾಗದು. ನಮ್ಮವರು ಅನೇಕರೊಡನೆ ಬಳಿಕೆ ಬಿಟ್ಟಿದ್ದು ಧರ್ಮದ ಅವನತಿಯ ಲಕ್ಷಣವಾಗಿದೆ. ಜಾತ್ಯಾತೀತವಾದ ಈಗಿನ ಕಾಲದಲ್ಲಿಯಾದರೂ ಅವರನ್ನು ಕೂಡಿಕೊಂಡು ಹೋಗದಿದ್ದರೆ ನಮ್ಮನ್ನು ಬಿಟ್ಟು ಅವರು ತೊಲಗಬಹುದು. ಇಲ್ಲವೆ ತಮ್ಮೊಳಗೆ ಬೇರೆ ಪೀಠಗಳನ್ನು ಮಾಡಿಕೊಂಡು ಸ್ವತಂತ್ರರಾಗಬಹುದು. ಅದರಿಂದ ವೀರಶೈವ ಸಮತಾವಾದಕ್ಕೆ ಕಲಂಕವಾದಂತಾಗುವದು.

## ೭. ಗುರುವಿರಕ್ತರ ಭೇದ.

ಗುರುವಿರಕ್ತರಲ್ಲಿ ಭೇದವೇಕೆ? ನಿಜವಾದ ಗುರುಗಳಾರು? ನಿಜವಾದ ವಿರಕ್ತರಾರು! "ಏಕೋದೇವಸ್ತ್ರಯೋಭೇದಾಃ ಗುರುರ್ಲಿಂಗಂತು ಜಂಗಮಾಃ" ಎಂಬ ಆಗಮೋಕ್ತಿಯಂತೆ ಕ್ರಿಯಾಭೇದದಿಂದ ಗುರುಲಿಂಗ ಜಂಗಮವೆಂದು ಮೂರು ವಿಧವಾಗಿರುವವೇ ಹೊರತು ಮೂಲತಃ ಅವು ಒಂದೇ. ಈ ಅರಿವನ್ನಳವಡಿಸಿಕೊಂಡು ಆಚರಿಸುವವರು ನಿಜವಾದ ಗುರುವಿರಕ್ತರು. ಈ ಅರಿವಿಲ್ಲದವರು ನಿಜವಾದ ಗುರುವಿರಕ್ತರಲ್ಲ. ನಾಮಧಾರಿ ಗುರುವಿರಕ್ತರು. ಈಗಿನವರಲ್ಲನೇಕರು ನಿಜವಾದ ಗುರುವಿರಕ್ತರಲ್ಲದ್ದರಿಂದಲೇ ಪರಸ್ಪರ ನಾ ಹೆಚ್ಚು ನೀ ಹೆಚ್ಚು ಎಂದು ಹೊಡೆದಾಡುತ್ತಿದ್ದಾರೆ; ಹಿಂದಿನವರು ನಿಜವಾದ ಗುರುವಿರಕ್ತರಾದ್ದರಿಂದ ಕಲಹವಿಲ್ಲದೆ ಪರಸ್ಪರರು ಗೌರವಾದರಗಳಿಂದ ನಡೆದುಕೊಳ್ಳುತ್ತಿದ್ದರು. ಈಗಾದರೂ ಅನೇಕ ಗುರುವಿರಕ್ತರು ಹಿಂದಿನವರ ಕೀರ್ತಿಯನ್ನು ತೀಡುವದು' ನಾಮಧಾರಿ ಗುರುವಿರಕ್ತರು ಮಾತ್ರ ತಮ್ಮೊಳಗೆ ಹೊಡೆದಾಡುತ್ತ ಸಮಾಜದಲ್ಲಿ ಕಲಹಾಗ್ನಿ ಹೊತ್ತಿಸಿರುವರು. ಇದು ಭಕ್ತರ ದೋಷವು. ಗುರುಪೀಠ ವಿರಕ್ತಪೀಠಗ

ಳಿಗೆ ನಿಜವಾದ ಗುರುವಿರಕ್ತರನ್ನಾರಿಸಿದ್ದರೆ ಈ ಕಲಹಕ್ಕೆ ಆಸ್ಪದವೇ ಇರ ಲಿಲ್ಲ. ಆದ್ದರಿಂದ ಭಕ್ತರು ಇನ್ನುಮೇಲಾದರೂ ಎಚ್ಚರಾಗಿ ಯೋಗ್ಯ ವ್ಯಕ್ತಿಗಳನ್ನು ಆರಿಸಿದ್ದಾದರೆ ಕಲಹದ ಸದ್ದಡಗಿ ಗುರುವಿರಕ್ತರು ನಿಜವಾಗಿ ಒಂದೇ ನಾಣ್ಯದ ಎರಡುಮುಗ್ಗಲುಗಳಂತೆ ಒಂದೇ ಎಂಬ ಸಮತಾವಾದವು ನಿಚ್ಚಳವಾಗಿ ಹೊಳೆಯುವದು.

## ೮. ವಿದ್ಯಾವಂತ-ಅವಿದ್ಯಾವಂತರ ಭೇದ.

ನಮ್ಮ ಸಮಾಜದಲ್ಲಿ ಸುಶಿಕ್ಷಿತರೂ ಇದ್ದಾರೆ. ಇಂಗ್ಲೀಷ ಕಲಿತವರೂ ಇದ್ದಾರೆ, ಸಂಸ್ಕೃತ ಕಲಿತವರೂ ಇದ್ದಾರೆ, ಕನ್ನಡ ಕಲಿತವರೂ ಇದ್ದಾರೆ. ಏನೂ ಕಲಿಯದವರೂ ಬಹು ಜನರಿದ್ದಾರೆ. ಆದರೆ ಧಾರ್ಮಿಕ ಗ್ರಂಥಗ ಳನ್ನೂ, ವಚನಗಳನ್ನೂ ಚೆನ್ನಾಗಿ ಅಭ್ಯಾಸ ಮಾಡಿದವರು ಕಡಿಮೆ. ಇಂಥ ವರಲ್ಲಿ ಯಾರು ಹೆಚ್ಚು, ಯಾರು ಕಡಿಮೆ? ಏನೇ ಕಲಿಯಲಿ ಅಥವಾ ಬಿಡಲಿ, ಕಲಿತವರಿಗಿಂತ ನೀತವಂತರೇ ಹೆಚ್ಚೆಂದು ನಮ್ಮ ಮತ. ವಿದ್ಯೆಯು ಎಲ್ಲರಿಗೂ ಬೇಕೇಬೇಕೆಂಬದು ಎಲ್ಲರಿಗೂ ಸಮ್ಮತವು. ಯಾಕೆಂದರೆ ಅದು ಪ್ರಗತಿಯ ಸಾಧನ, ಆದರೆ ವಿದ್ಯೆಯಿಂದ ಸಂಸ್ಕೃತಿಯು ಬೆಳೆಯದೆ ಧರ್ಮ ಹೀನತೆಯೂ, ಧರ್ಮಾಂಧತೆಯೂ ರೂಢಭಾವನೆಯೂ ಬೆಳೆದರೆ ಆ ವಿದ್ಯೆ ಯಿಂದೇನು ಪ್ರಯೋಜನ? ಇಂಗ್ಲೀಷ ಕಲಿತ ಬಹುಜನರು ಧರ್ಮದಲ್ಲಿ ಏನಿದೆ? ಎಂದು ತೆಗಳುವರು. ಸಂಸ್ಕೃತ ಕಲಿತವರು ಆಳವಾದ ಅಭ್ಯಾಸ ವಿಲ್ಲದೆ ಅರ್ಥಕ್ಕೆ ಅಪಾರ್ಥ ಕಲ್ಪಿಸಿ ಸಮಾಜದಲ್ಲಿ ಕಲಹಾಗ್ನಿಯನ್ನು ಹೊತ್ತಿಸಿದ್ದಾರೆ. ಅವಿದ್ಯಾವಂತರು ಯಾವ ದಡಕ್ಕೂ ಹತ್ತದೆ ಮೂಢ ಭಾವನೆಯಿಂದ ನಾಗಿದ್ದಾರೆ. ಆದರೆ ವಿದ್ಯಾವಂತರೇ ಇರಲಿ, ಅವಿದ್ಯಾ ವಂತರೇ ಇರಲಿ, ಧರ್ಮತತ್ವಗಳನ್ನು ಕೇಳಿ ಅಥವಾ ಓದಿ ತಿಳಿದು ಅದ ರಂತೆ ವಿದ್ಯಾವಂತ ಅವಿದ್ಯಾವಂತರಲ್ಲಿ ವ್ಯವಹಾರಿಕ ದೃಷ್ಟಿಯಿಂದ ಭೇದ ವಿದ್ದರೂ ಅಧ್ಯಾತ್ಮಿಕ ದೃಷ್ಟಿಯಿಂದ ಧಾರ್ಮಿಕ ತತ್ವವನ್ನು ತಿಳಿದು ನಡೆ ಯುವವರೆಲ್ಲ ಸರಿಸಮಾನರು. ಇದೇ ಸಮತಾವಾದ.

ವೀರಶೈವರಲ್ಲಿ ಎಲ್ಲರೂ ಸಮಾನರಾದರೂ ನೀತಿ, ಧರ್ಮ, ಭಕ್ತಿ, ಜ್ಞಾನ, ವೈರಾಗ್ಯಗಳನ್ನಳವಡಿಸಿಕೊಂಡು ಆಚರಿಸುವವರು ಪೂಜ್ಯರಾಗುತ್ತಾರೆ. ಉಳಿದವರು ಪೂಜಕರಾಗುತ್ತಾರೆ. ಇಷ್ಟು ಭೇದವನ್ನು ಬಿಟ್ಟರೆ ತಾತ್ವಿಕ ದೃಷ್ಟಿಯಿಂದ ಉಳಿದ ಎಲ್ಲ ಕಡೆಯಲ್ಲಿಯೂ ಸಮತಾವಾದವು ಎದ್ದು ಕಾಣುತ್ತದೆ.

# ನಂಜನಗೂಡು ಸ್ವಾಮಿಗಳ ಹಾಡು.

(ಸಂಗ್ರಹಕಾರಃ— ಶ್ರೀ ಮ. ಮಲ್ಲಪ್ಪ ಜ್ಞಾನಮಂದಿರ, ಹಲಗೂರು.)

ಜಯ ಜಯ ಜಯ ಜಯವಾಗಲಿ ಗುರುವೇ ।
ಭವ ಭವ ಭವಹಾಳಾಗಲಿ ಗುರುವೇ ॥ಪ॥

ಸಾರುತ ಸಾರುತ ಬರುವೆನು ನಾನು ।
ಕೇರಿ ಕೇರಿಯೊಳಿರುವುವ ನಾನು ॥೧॥

ಜನನಕಾಲದ ಪರಿಗಳ ನಾನು ।
ಮರಣಕಾಲದ ಪರಿಗಳ ನಾನು ॥೨॥

ಅನುವಿಂದನಾ ಅರಿಯುತ್ತಿಹೆನು ।
ತನುಮತದಿಂದ ಕೇಳಿರಿ ನೀವು ॥೩॥

ಕೇಳಿರಿ ಕೇಳಿರಿ ಹೇಳುವೆ ನಾನು ।
ಭಾಳಾಕ್ಷನು ಕೊಟ್ಟ ಮತಿಯೊಳು ನಾನು ॥೪॥

ತಿಳಿದಷ್ಟೆಲ್ಲವನು ಸುರುತ್ತಿಹೆನು ।
ಕೇಳಿ ಮುಕ್ತಿಯ ಹೊಂದುವರಿದನು ॥೫॥

ಚಪ್ಪನ್ನೈವತ್ತಾರು ದೇಶವನ್ನೆಲ್ಲ ।
ಒಪ್ಪಡಿಂ ದಿನವೊಂದರೊಳು ನಾನು ॥೬॥

ಒಪ್ಪಿಯಾ ವಾಸಸ್ಥಾನಕೆ ಬಹೆನು ನಾನು ।
ಆಪ್ತರುಗಳ ಅಂಗೈಯಲ್ಲಿಹೆನು ನಾನು ॥೭॥

ದೇಶ ದೇಶವ ತಿರುಗುತ ನಾನು ।
ಈಶನ ಕೃಪೆಯ ಪಡೆದೆನು ನಾನು ॥೮॥

ವಶವನು ಮಾಡಿಕೊಂಡೆ ಒಬ್ಬಾತನನು ।
ಲೇಸನು ತೋರಿದ ಬಹುಬಗೆಯೊನಗೆ ॥೯॥

ಪೂರ್ವ ದೇಶಕ್ಕೆ ಹೋದೆನು ನಾನು ।
ಓರ್ವನೆ ಪಶ್ಚಿಮ ದೇಶಕ್ಕೆ ಬಂದೆನು ॥೧೦॥

ಶೀವೃದಿ ದಕ್ಷಿಣ ದೇಶದಿ ನಿಂದೇನಪ್ಪಾ ।
ಓರ್ವನೆ ಉತ್ತರ ದೇಶದಿ ನಿಂದೇನಪ್ಪಾ ॥೧೧॥

ನಾಲ್ಕು ದೇಶದ ಬಗೆಯನು ನಾನು ।
ನಾಲ್ಕು ನಾಲ್ಕು ದಿಕ್ಕಿನ ಬಗೆಯೆಲ್ಲವನು ॥೧೨॥

ನಾಲ್ಕಾರು ದಿಕ್ಕಿನ ಬಗೆಯೆಲ್ಲವನು ।
ನಾಲ್ಕು ಮೂಲೆಯ ಪರಿಯೆಲ್ಲವನು ॥೧೩॥

ಅರಿತೂ ಅರಿತೂ ಏರಿದೆ ನಾನು ।
ಅರಿತೂ ಅರಿತೂ ಎಲ್ಲವ ನಾನು ॥೧೪॥

ಏರಿದೆ ಅಂಬರ ಮಾರ್ಗಕೆ ಇನ್ನು ।
ತೋರಿತು ಎನ್ನಯ ನೇತ್ರಕೆ ತಾನು ॥೧೫॥

ವೀರಿದ ಪಟ್ಟಣ ತೋರಿತು ನೋಡಣ್ಣಾ ।
ಸೇರುವೆ ಪಟ್ಟಣಕೆ ಎಂದರೆ ನಾನು ॥೧೬॥

ದುಷ್ಟರ ಕಾವಲಿರುತಿಹುದಣ್ಣಾ ।
ದುಷ್ಟರನ್ನೆಲ್ಲ ಒಳಹೊಕ್ಕಿನ್ನು ॥೧೭॥

ಶ್ರೇಷ್ಠವಾದ ಗುರು ಕೃಪೆಯಿಂದ ।
ನಷ್ಟ ಮಾಡುವವರ ಮುಂದಕೆ ಹೋದೆ ॥೧೮॥

ಪಟ್ಟಣದ ವಿಸ್ತಾರವ ನಾನು ।
ದಿಟ್ಟತನದಿ ಪೇಳಲು ಅಸಾಧ್ಯನು ॥೧೯॥

ಸೃಷ್ಟಿಯ ಭ್ರಷ್ಟರಿಗೆ ಅಳವಡದಣ್ಣಾ ।
ನಿಷ್ಠೆಯ ಭ್ರಷ್ಟರಿಗೆ ಅಳವಡದಣ್ಣಾ ॥೨೦॥

ಸಾಧಿಸಿನೆಂಬಗೆ ಸಾಧ್ಯವು ಅಲ್ಲಾ ।
ಭೇದಿಸಿನೆಂಬಗೆ ಭೇದ್ಯವು ಅಲ್ಲಾ ॥೨೧॥

ಸಾಧಕಂಗೆ ಸಾಧ್ಯವು ಅಲ್ಲಾ ।
ಸಾಧಿಸಿರಿ ನೀವು ಬಲ್ಲವರೆಲ್ಲಾ ॥೨೨॥

ಪಟ್ಟಣದ ಅರಮನೆ ಹೇಗೈತಣ್ಣಾ ।
ನಟ್ಟನಡುವಿನಲ್ಲಿರುವುದು ಗೋಪುರ ॥೨೩॥

ಶ್ರೀವೃತ್ನರತ್ನ ಮಾಲಿಕೆಯ ಬಿಗಿತರ ।
ಅಷ್ಟದಿಕ್ಕಿಗೂ ಭಂಗಾರ ಜಲತಹರ ॥೨೪॥

ಅರಮನೆಗೆ ದ್ವಾರವು ಎಂಟೆ ।
ಹೊರಗಡೆ ಕಾಣುತಿಹುದುಂಟು ॥೨೫॥

ಅರಿತವರಿಗೆ ಹೊರಗಡೆ ನಾಲ್ಕು ।
ಭರಿತೆ ರೂಪದಿ ಒಳಗಡೆ ನಾಲ್ಕು ॥೨೬॥

ಪರಿಪರಿಯಿಂದಲಿ ನೋಗುವೆನೆಂದರೆ ।
ಹರಿಯಜರ್ಗೆ ಅಸದಳ ಅಸಾಧ್ಯವು ॥೨೭॥

ಸುರರಿಗೆ ಮೀರಿರುತಿಹುದು ।
ನರರಿಂಗೆ ಅಸಾಧ್ಯವಾಗಿಹುದು ॥೨೮॥

ಅರಿತೂ ಅರಿತೂ ಅಲ್ಲಿಗೆ ಹೋದೆನು ।
ದ್ವಾರದ ಬಳಿಗೆ ಮೊದಲಾಂ ಹೋದೆನು ॥೨೯॥

ಚದುರನೊಬ್ಬನಿರುತಿಹನಲ್ಲಿ ।
ಚದರದೆ ನಾನು ಹೋಗುತ್ತಿರಲು ॥೩೦॥

ಕರಗಳ ಹಿಡಿದು ನಿಲಿಸಲೆನ್ನ ।
ವೀರನು ತಾ ಬಿಡದೆ ನಿಲಿಸಲೆನ್ನ ॥೩೧॥

ಆದಿಚಕ್ರಗಳ ನೆಲೆಗಳೆನ್ನ ।
ಭೇದಿಸಿ ಕೇಳಿದ ಎನ್ನನು ॥೩೨॥

ಓದಿಪೇಳಿದೆ ಸರ್ವವನೆಲ್ಲಾ ।
ಆದರಿಸೆನ್ನನು ಕಳುಹಿದನಲ್ಲಾ ॥೩೩॥

ಎರಡನೆ ದ್ವಾರದ ಬಳಿಗೆ ಹೋದೆ ।
ಮೂರನೆ ದ್ವಾರದ ಬಳಿಗೆ ಹೋದೆ ॥೩೪॥

ವೀರತಾ ನಿಲಿಸಲು ಎನ್ನ ।
ತೋರಿದೆ ಹಿಂದಣ ಗುರುತುಗಳನ್ನು ॥೩೫॥

ಹಾರೈಸಿ ಎನ್ನನು ಕಳುಹಿದನಯ್ಯಾ ।
ದ್ವಾರವು ನಾಲ್ಕರ ಬಳಿಗೆ ಹೋದೆನಯ್ಯಾ ॥೩೬॥

ಕುಶಲನೊಬ್ಬನಿರುತಿಹನಲ್ಲಿ ।
ವಿಶದವಾಗಿರುತಿಹುದಲ್ಲಿ ॥೩೭॥

ಸಿಲುಕಿಲ್ಲದೆ ನೆಲೆಕಲೆಗಳನ್ನೆಲ್ಲ ।
ಒಲುಮೆಯಾಗುವಂದದಿ ಪೇಳದೆನೆಲ್ಲ ॥೩೮॥

ಚಲಿಸದೆ ಮುಂದಕ್ಕೆ ನಿಲ್ಲದೆ ನಾನು ।
ಲಲನೆಯೋರ್ವಳು ಪಿಡಿದಳು ಎನ್ನ ॥೩೯॥

ಬಲ್ಲಿದ ವರ್ಣವನೆಲ್ಲವ ತೋರಿ ।
ಮೆಲ್ಲನೆ ಅವಳ ವಶವ ಮಾಡಿಕೊಂಡೆ ॥೪೦॥

ಅಲ್ಲಿಂದೆ ಮುಂದಕೆ ನಡೆದೆನು ನಾನು ।
ಚೆಲ್ವ ರಾಜನ ಕಂಡವನಲ್ಲಿ ॥೪೧॥

ಸೊಲ್ಲಿಸಿ ಆತನು ನುಡಿಸಲು ಎನ್ನ ।
ನೆಲೆಯನು ಕೇಳಿದ ಅನುವಿಂದೆನ್ನ ॥೪೨॥

ಆರ್ತಿಯಿಂ ಪೇಳಿದೆ ಗುರುತುಗಳನ್ನೆಲ್ಲಾ ।
ಮರ್ತುಹೋಯಿತು ಹಿಂದಣದಲ್ಲಿ ॥೪೩॥

ಗೊತ್ತುಆಯಿತು ಮುಂದಣದೆಲ್ಲಾ ।
ಮತ್ತು ಅದು ಎಂದಿಗೂ ಮರೆಯುವುದಲ್ಲಾ ॥೪೪॥

ಬಲ್ಲಿದ ಲಲನೆಯು ಕೂಡ ನಾನು ।
ಚೆಲ್ಲುವ ನುಡಿಯನು ನುಡಿಯುತ್ತಿರಲು ॥೪೫॥

ಚೆಲ್ವನು ತಾನು ಕೇಳಿ ವನಕ್ಕರೆಯಿಂದ ।
ವಲ್ಲಭೆ ತಾ ಪೇಳೆನುತ್ತಿರಲು ॥೪೬॥

ಬಹಳ ದಿನದ ಬುಡುಬುಡುಕೆಯವನ್ನಾ ।
ಬಹು ನೆಲೆಗಳ ಪೇಳುವೆ ಕೇಳೌ ಇನ್ನು ॥೪೭॥

ಬಲ್ಲಿದ ಬುಡುಬುಡುಕೆ ಎನ್ನಯ ತಾತಾ ।
ಎಲ್ಲವನು ಕಲಿತೆನು ನಾನವನಲ್ಲಿ ॥೪೮॥

ಬೆಂಕಿಯ ಪುರದ ಗವಿಯೊಳಗಿದ್ದೆನು ।
ಶಂಕೆಯಿಲ್ಲದೆ ದ್ರವ್ಯವ ನಾನು ॥೪೯॥

ಅಂಕೆಯ ಮೀರಿ ಗಳಿಸಿದೆನವ್ವಾ ।
ಶಂಕೆಯಿಲ್ಲದ ಚೋರರು ಬಂದು ॥೫೦॥

ಬಿಂಕದಿಂದ ಒಯ್ದರು ತಾಯೆ ।
ಸುಂಕವಹಾಕದೆ ಹೋದರು ತಾಯೆ ॥೫೧॥

ಬೂದಿಶಿಟ್ಟಿನ ಪುರದೊಳಗಿದ್ದೆ ।
ಬೂದಿಬಡುಕನೆನಿಸಿಕೊಂಡಿದ್ದೆ ॥೫೨॥

ಗಾವೆಯು ಮನುಜರ ಬಾಧೆಯು ಬಿಡಿಸಿ ।
ಸಾಧಿಸಿದೆನು ಸಕಲದ್ರವ್ಯವ ನಾನು ॥೫೩॥

ಭೇದಿಸಿ ಬಂದ ಚೋರರು ತಾವು ।
ಹಾದಿಗೆ ಹಾದಿಯಾಗುವಂತೆ ॥೫೪॥

ಸಾಧಿಸಿಕೊಂಡು ಹೋದರು ತಾಯೆ ।
ಕಾದುಕೊಂಡಿದ್ದುದು ಬರಿದೆಯಾಯಿತು ॥೫೫॥

ಕರ್ಣಪುರದ ಗವಿಯೊಳಗೆ ನಾನು ।
ನಿರ್ಣಯಿಸಿ ಎಲ್ಲವ ಕೇಳಿ ತಿಳಿದೆನು ॥೫೬॥

ಕರ್ಮವು ಹರಿದಿತು ಆಗಲೆ ।
ಮರ್ಮವು ತಿಳಿದಿತು ಈಗಲೆ ॥೫೭॥

ಒರ್ಮೆಯಿಂ ಧನವ ಸಂಪಾದಿಸಿದೆನು ತಾಯೆ ।
ಸಮ್ಮತ ಕಳ್ಳರು ಒಳಹೊಕ್ಕೆನ್ನನು ॥೫೮॥

ಚಿನ್ಮಯ ದ್ರವ್ಯವನು ಹೊತ್ತರು ತಾಯೆ ।
ಭಿನ್ನನಾಗಿ ಕಳೆದುಕೊಂಡು ದ್ರವ್ಯವನು ॥೫೯॥

ಉನ್ಮನೀ ಸೇರಿಕೊಂಡು ಸುಮ್ಮನಾದೆ ।
ತನ್ಮಯತೆಯಿಂ ನಾನು ತೆಪ್ಪನಾದೆ ॥೬೦॥

ಮೂಗೂರಿಗೆ ಹೋಗಿ ಮೂಲ ದ್ರವ್ಯವ ಕಂಡು ।
ಸಾಗುತ ಸಾಗುತ ಸಮೀಪಿಯಾಗಿ ॥೬೧॥

ಮೂರು ಬೀದಿಗಳಲಿ ಮನೆಗಳ ಮಾಡಿ ।
ಯಾರು ಕಾಣದಂತಲಿದ್ದೆ ತಾಯಿ ॥೬೨॥

ಮೀರಿದ ಪುರುಷನು ಸೇರಿದನಲ್ಲಿಗೆ ।
ಶೂರನು ಇವನಾರೆನ್ನುತೆನ್ನನು ॥೬೩॥

ಏರಿಸಿ ಇಳಿಸಿ ಕಟ್ಟಿದೆ ನಮ್ಮ ।
ದಾರಿಯು ಹಿಡಿದು ಚೋರರ ತಪ್ಪಿಸಿ ॥೬೪॥

ಸೇರಿದೆ ಉನ್ಮನಿಯನು ತಾಯಿ ।
ಕೋರಿದೆ ಅವರಿವರನು ತಾಯಿ ॥೬೫॥

ಜಿಹ್ವಾ ಪುರದ ಪಟ್ಟಣದೊಳಗೆ ।
ವಿಹ್ವಲತೆಯಿ ಲ್ಲದೆ ತನುಮನಗಳ ॥೬೬॥

ಅವಯವಗಳೆಲ್ಲವ ಬಲಿಸಿಕೊಂಡು ।
ಕುವಲಿಯು ಗಮನದಿ ನಾನು ॥೬೭॥

ನಾಗಮಂಗಲಕೆ ನಡೆದೆನು ನಾನು ।
ಬೇಗ ಬೇಗನೆ ಜಗವನು ಸುತ್ತಿ ॥೬೮॥

ಆಗಲೆ ಕಂಡೆನು ಅತಿ ದ್ರವ್ಯವ ನಾನು ॥
ಸಾಗಿಸಿ ನಡೆತಂದೆನು ಕುಂಡಲಿ ಪುರಕೆ ॥೬೯॥

ಕುಂಡಲಿಪುರದೊಳಗಾಇರುವುದನು ।
ಕಂಡುಕಂಡ ಕಂಡವರೆಲ್ಲ ಸೇರಿದರು ॥೭೦॥

ಕೊಂಡಯ್ದರು ಎನ್ನ ದ್ರವ್ಯವನ್ನೆಲ್ಲ ।
ಕಂಡಕಂಡ ಕಡೆಗೆ ಹಾಕಿದರು ॥೭೧॥

ಹೆಂಡಿರು ಮಕ್ಕಳರು ಎನಗಿಹರಮ್ಮಾ ।
ದಂಡ ದೋಷಗಳು ಏನಿಲ್ಲವಮ್ಮಾ ॥೭೨॥

ಕುಂಡಲೀ ಸರ್ಪನ ಕಾವಲಲ್ಲೈ ತಮ್ಮಾ ।
ಮಂಡಲತ್ರಯದಿ ನೆರೆಯಿತಮ್ಮಾ ॥೭೩॥

ಬೇಡಿ ಬೇಡುವೆ ಈರಾಜನ ನಾನು ।
ಕೂಡಿ ಕೂಡಿಸು ತಡಮಾಡದೆ ನೀನು ॥೭೪॥

ಅಡಿಗೆರಗುವೆ ಅನುದಿನದೊಳು ನಾನು ।
ಬಿಡದೆ ಕೈವಿಡಿ ತಡಮಾಡದೆ ನೀನು ॥೭೫॥

ಬಂದಿಯದೊಂದು ನಲವತ್ತೈದು ವರಹವಿರೆ ।
ಸಂದಿಸಿದ ಓಲೆಯು ಜೋಡು ॥೭೬॥

ಕುಂದದೆ ತಿರುಪಿನ ಬುಗುರಿಯಾ ಜೋಡು ।
ನಿಂದೇಹವಿಲ್ಲದ ಕೀಲಿನ ಡಾಬು ॥೭೭॥

ಆರು ಚಕ್ರದ ತಾಲಿಯದೊಂದು ।
ಸೇರಿಸಿ ಕಟ್ಟುವ ಎಳೆ ಐವತ್ತು ॥೭೮॥

ಪೂರೈಸಿ ಎಳೆಯುವ ದಾರಗಳದಕೆ ।
ಮೂರೇಳುಸಾವಿರದಾರುನೂರವಮ್ಮಾ ॥೭೯॥

ಕರಿಮಣಿ ಸರವನು ತವಕದಿ ಕೂಡಿಸೆ ।
ಬರೀ ಮಾತಿನಿಂದವಸ್ಥೈತರುವೆ ನವಮ್ಮಾ ॥೮೦॥

ಗುರುತಿನ ಮೂಗುತಿ ತ್ವರಿತದಿ ಕೂಡಿಸೆ ।
ಸರ್ವೇಶನ ಸನ್ಮತಿಯಿಂ ಪ್ರಾರ್ಥಿಸೆ ॥೮೧॥

ಕಣ್ಣುಕಪ್ಪಿನ ಭರಣಿಗಳೆರಡು ।
ಸಣ್ಣದಾಗಿರುವ ಮಿಂಚುಗಳೆರಡು ॥೮೨॥

ಜ್ಯೋತಿಯ ಉದ್ದಣ ಬೊಟ್ಟೊಂದು
ಜೊತೆಯಾಗಿಹುದು ಕಿನ್ನರ ಕೆಂಪುರುಷರ ॥೮೩॥

ಬೇಡಿದ್ದೆಲ್ಲವ ನೋಡಿದರಾಜಾ ।
ಗಾಢನೆ ತರಿಸಿ ಮುಂದಿಟ್ಟನು ॥೮೪॥

ನೋಡಿದೆ ನವಕಂಗಳು ತುಂಬಿ ।
ಕೂಡಿಸಿಟ್ಟದ್ದನ್ನೆಲ್ಲವನು ಬೈತಿಟ್ಟೆ ॥೮೫॥

ಅರಿದು ಕಾಣದ ಸೂತ್ತಿದು ನೋಡೆ ।
ದಾರಿಯುದ ತಿಳಿದ ಸೀವಿದ ನೋಡೆ ॥೮೬॥

ಅರಿತವರ್ಗೆ ಇದಕೊಟ್ಟರುಬೇಡ ।
ಅರಿಯದವರ್ಗಿದು ಬೇಡಿದರು ಜಾಡೆ ॥೮೭॥

ಹೋಗಿಬರುವೆನು ರಾಜನೆ ನಾನು ।
ಆಗೀಗೆನ್ನದೆ ನಿನ್ನಲ್ಲಿರುವೆ ॥೮೮॥

ಸಾಗಿಹೋಗಿ ಪಟ್ಟಣದೊಳಗೆ ।
ಆಗಮವೆಲ್ಲವ ಸಾರುತ ಬರುವೆ ||೮೯||

ಜಯ ಜಯ ಜಯವಾಗಲಿ ಗುರುವೆ ।
ಭವ ಭವ ಭವ ಹಾಳಾಗಲಿ ಗುರುವೆ ||೯೦||

ಸಾಯುವ ಹುಟ್ಟುವ ಎಲ್ಲರು ಕೇಳಿ ।
ಬೇಯ ಬೇಡಿರಿ ಬೇಗೆಯೊಳು ನೀವು ||೯೧||

ಕಾಯುವ ಜಗದೀಶ ನಿಮ್ಮನು ತಾನು ।
ಆಯದಿ ಅನವರತ ರಕ್ಷಿಸುವ ತಾನು ||೯೨||

ಕೇಳಿರಿ ಎನ್ನಯ ಮಾತನ್ನು ।
ಬಾಳಿರಿ ಬದುಕಿರಿ ಚೆನ್ನಾಗಿನ್ನು ||೯೩||

ನಾಳೆ ನಾಳದ್ದು ಎನ್ನಲು ಬೇಡಿ ।
ಮೂಳರಾಗಿ ನೀವು ನಿಲ್ಲಲು ಬೇಡಿ ||೯೪||

ಪಟ್ಟಣದೊಳಗೆ ದುಷ್ಟ ಮೃಗವು ।
ಒಟ್ಟೊಟ್ಟಾಗಿ ಬರುತಿಹವು ||೯೫||

ಅಟ್ಟಿ ಓಡಿಸಿ ಅವುಗಳನ್ನೆಲ್ಲಾ ।
ಕಷ್ಟವ ಕಳೆದುಕೊಳ್ಳಿರಿ ನೀವೆಲ್ಲಾ ||೯೬||

ಕಾಡುವ ಕಪಿಗಳು ನಾಲ್ಕೈತಣ್ಣಾ ।
ಓಡಾಡುವ ಮೃಗಗಳು ಹತ್ತೈತಣ್ಣಾ ||೯೭||

ಗಾಢನೆ ಇರುವ ಪುಲಿಯೊಂದಣ್ಣಾ ।
ನೋಡದೆ ಸುಮ್ಮನೆ ಇರಬೇಡಣ್ಣಾ ||೯೮||

ಜಿಂಕೆಯದೊಂದು ಬೆಂಕಿಯಂತಿಹುದು ।
ಅಂಕೆಯ ಮೀರಿದ ಆನೆಗಳೆಂಟು ||೯೯||

ಜಿಂಕೆಯಂತೆಸೆವ ನಾಯಿಗಳಾರು ।
ಸೋಂಕಿ ಸರೆ ಬಿಡದ ಮೊಲಗಳು ಮೂರು ||೧೦೦||

ಕುರಿಯನು ಸಾಕಿ ಮರೆಯದೆ ನೀವು ।
ಇರುವೆಯನು ತಡೆದು ನಿಲ್ಲಿಸಿರಣ್ಣಾ ||೧೦೧||

ಜರಿ ಮಾತಿನಿಂದ ಏನಿಲ್ಲವಣ್ಣಾ ।
ಆರುಗತಿ ಮೂರು ಬಟ್ಟೆಗಳಣ್ಣಾ ॥೧೦೩॥

ಸೇರಿ ಕೇಳಿರೀ ದೊಡ್ಡ ಮಾತನ್ನು ।
ಮೀರಬೇಡಿರೀ ಎನ್ನಯ ಮಾತನ್ನು ॥೧೦೪॥

ಸಾರಿದೆ ನಾನು ನಿರ್ಣಯದಗೊತ್ತು ।
ತೋರಿದೆ ನಾನು ಭವದ ಮಿತ್ತು ॥೧೦೫॥

ವ ಂಗಳಕರ ಸಂಗನಶರಣ ।
ಅಂಗೈಸಿ ಮಾಡುವೆ ನಿಮ್ಮಯ ಸ್ಮರಣ ॥೧೦೬॥

ಅಂಗವಾಗಲೆನಗೆ ನಿಮ್ಮಯ ಕರುಣ ।
ಮುಗಿಸಿದೆ ಪದ್ಯವ ಸರ್ವಾಭರಣ ॥೧೦೭॥

ಮಡಿವಾಳ ಪುರದೊಳು ವಾಸವು ಎನಗೆ ।
ನುಡಿದೆನು ಕಿಂಕರನಾಗಿಯೇ ನಿನಗೆ ॥೧೦೭॥

ನುಡಿದೆನು ಪದ್ಯ ಬಸವನಲ್ಲಿ ।
ಹಾಡಿದೆನು ಹಾಡನು ನಿಮ್ಮಲ್ಲಿ ॥೧೦೮॥

ಜಯ ಜಯ ಜಯವಾಗಲಿ ಗುರುವೆ ।
ಭವ ಭವ ಭವ ಹಾಳಾಗಲಿ ಗುರುವೆ ॥

[ಈ ಹಾಡು ನಂಜನಗೂಡಿನ ಸ್ವಾಮಿಗಳ ಬಾಯಿಯಿಂದ ಸತತವೂ ಬರುತ್ತಿತ್ತು. ಬರೆಯಲು ಬಾರದಿದ್ದರೂ ಬರೆದದ್ದನ್ನು ಚನ್ನಾಗಿ ಕಂಠ ಪಾಠ ಮಾಡಿ ಹೃದ್ಗತ ಮಾಡಿಕೊಳ್ಳುವ ಪರಿಪಾಠವಿರುವ ಹಲಗೂರಿನ ತೆಂಗಿನಕಾಯಿ ಪುಟ್ಟ ಮಾದಪ್ಪನವರಿಗೆ ಸ್ವಾಮಿಗಳ ಸಾನ್ನಿಧ್ಯಪೊಂದಿದ್ದರೆ ಸಾಕು. ಇವರಿಗೆ ಊಟ ತಿಂಡಿಗಳ ಪರಿವೆಯೇ ಇರುವದಿಲ್ಲ. ಇವರು ಈ ಸ್ವಾಮಿಗಳ ಬಳಿ ಸೇರಿ ಇದನ್ನು ಬಾಯಿಪಾಠ ಮಾಡಿದರು. ಇದು ನಡೆದು ಎಷ್ಟೋ ವರ್ಷಗಳಾದರೂ ಒಮ್ಮೆ ಇದನ್ನು ಕೇಳಿ ಸಂಗ್ರಹಿಸಿದೆನು. ಎಷ್ಟೇ ನೆನಪಿದ್ದರೂ ಕಲಿತದ್ದುದು ಬಹಳ ದಿನಗಳಾದ ಕಾರಣ ಪ್ರಕ್ಷಿಪ್ತಕ್ಕೆ ಜಾಗವಿಲ್ಲದೆ ಇಲ್ಲ. ಈ ಹಾಡು ಅಕ್ಕಮಹಾದೇವಿಯ ಯೋಗಾಂಗ ತ್ರಿವಿಧಿ ಯನ್ನೂ, ಮುಗ್ಧ ಶರಣರ ಶಿವಾನುಭವ ತತ್ವವನ್ನೂ ನೆನಪಿಗೆ ತರುತ್ತದೆ. ವೀರಶೈವನ ಭವಬಾಧೆಯನ್ನೂ, ಅದರ ಪರಿಹಾರಕ್ಕೆ ಓಡಾಡಿ ನಿರತ

ಯತ್ನ ಮಾಡುವುದನ್ನೂ ಅಸ್ಪಷ್ಟವಾಗಿದ್ದರೂ ಸ್ಪಷ್ಟತೆಯಿಂದಲೇ ತಿಳಿಸಲ್ಪಟ್ಟಿದೆ. ಶಿವಾನುಭವದ ಆತುರತೆ, ಗುರುಕಾರುಣ್ಯದ ಕಾತುರತೆ ಇದನ್ನು ಪರಿಹರಿಸಬಲ್ಲುದು ಈ ನೂರೆಂಟು ಪದ್ಯಗಳ ಶಿವಾಷ್ಟಶತೋತ್ತರ ನಾಮವನ್ನೂ ಸಹ ನೆನಪಿಗೆ ತಂದು ಅದಕ್ಕೆ ಪೂರಕವೋ ಎನ್ನುವಂತಿದೆ—ಸಂಗ್ರಹಕಾರ. ]

# ಅನುಭವಸಾರ

## [ ಅರಿವು - ಮರಿವು ]

೦

ಸಕಲ ಬ್ರಹ್ಮಾಂಡಗಳ ಸೃಜಿಸಿದಾ ಪರಶಿವಗೆ ।
ಅಖಿಳಾಂಡ ಕೋಟಿ ಬ್ರಹ್ಮಾಂಡ ನಾಯಕಗೆ ।
ಸಕಲ ನಿಗಮಾಗಮಕೆ ನಿಲುಕದಾ ಶಂಭುವಿಗೆ ।
ಭಕುತಿಯಿಂ ನಮಿಸೊ ನೀ ಹುಚ್ಚು ಕೊಟ್ರೇಶಾ ॥೧॥

ತರಗೆಲೆಯ ಮೆದ್ದು ತಾಂ ಬಯಲುಹೊದ್ದಿದೊಡೇನು ? ।
ಅರೆಗಣ್ಣು ಮುಚ್ಚಿ ತಾಂ ಬೆರಳು ಮಿಟಿಕಿದೊಡೇನು ? ॥
ಅರಿವುದೋರುವತನಕ ಹರನೆಲ್ಲಿ ತಾನೆಲ್ಲಿ ? ।
ಅರಿದು ನಡೆಯುದೆ ಮೊದಲು ಹುಚ್ಚು ಕೊಟ್ರೇಶಾ ॥೨॥

ಆರು ಮೂರೆನಿಸಿರ್ಪ ದಾರಿಹೋಕರು ನಿನ್ನ ।
ಘೋರ ಮಾಯದಿ ತಳ್ಳಿ ಹಾರಾಡಿ ನಗುತಿಹರು ॥
ಆರು ನೀನೆಂದರಿದು ಮಾರಹರನಂ ಸ್ಮರಿಸು ।
ದಾರಿದೋರುವ ನಿನಗೆ ಹುಚ್ಚು ಕೊಟ್ರೇಶಾ ॥೩॥

ಅರಿವು ಇಲ್ಲದ ನರನ ಗುರುತು ಹರನಿಗೆ ಬೇಡ ।
ಅರಿವಿದ್ದರಾನರನಿಗ್ಗುರನು ತೋರುವ ಗುರಿಯ ॥
ಕುರುಹು ಹಿಡಿದರಸಿದರೆ ತೋರುವನು ತನ್ನಿರುವ ।
ಅರಿವೆ ಮುಕ್ತಿಯ ಕುರುಹು ಹುಚ್ಚು ಕೊಟ್ರೇಶಾ ॥೪॥

ಅರಿಯದನ ತೋರ್ಗಣ್ಣು ತೋರಿಕೆಯ ಹೊರಗಣ್ಣು ।
ಅರಿದು ನೋಡುವ ಕಣ್ಣು ತೆರೆದಿರುವ ಒಳಗಣ್ಣು ॥
ಮರವೆಂಬ ಮಾಯೆಯಲಿ ಶಿಲುಕಿ ನೋಡದ ಕಣ್ಣು ।
ಅರಿವೆ ತಾ ನಿಜಗಣ್ಣು ಹುಚ್ಚ ಕೊಟ್ರೇಶಾ ॥೫॥

ಮರೆದು ದೇವನ ಹೋಯ್ತು ಬಲಿರಾಯನಾ ರಾಜ್ಯ ।
ಮರವೆ ವೈರಿಯು ಆಯ್ತು ಕುರುಪತಿಯ ನಾಶಕ್ಕೆ ॥
ಮರವೆಂಬ ಮಾಯೆಯೊಳ್ ಶಿಲುಕಿ ರಾವಣ ಮಡಿದ ।
ಮರೆದು ಉಳಿದಿಹರುಂಟೆ ? ಹುಚ್ಚ ಕೊಟ್ರೇಶಾ ॥೬॥

ದಕ್ಷ ತಾಂ ಗಹನೆಂದು ಧಿಕ್ಕಿ ಶಿವ ರುದ್ರಂಗೆ ।
ದಕ್ಷ ಯಜ್ಞವ ಹೂಡೆ ದಕ್ಷನಾ ಶಿರಹೋಯ್ತು ॥
ರಕ್ಷಿಸುವ ದೇವನೊಳ್ ಲಕ್ಷ ತಪ್ಪಿದ ಬಳಿಕ ।
ರಕ್ಷಿಸುವರಾರಯ್ಯ ? ಹುಚ್ಚ ಕೊಟ್ರೇಶಾ ॥೭॥

ಮರಹು ಎಂಬುವದೊಂದು ಘನವಾದ ಹಿರಿ ಮಾಯೆ ।
ಅರಿದರೂ ಮರುಹಿನಲಿ ಅಜನ ತಲೆ ಕಳೆದ್ಹೋಯ್ತು ॥
ಅರಿದಿರ್ದ ಹರಿಯು ತಾಂ ಮರೆದು ಭವದೊಳು ಬಂದ ।
ಮರೆದು ಕೆಡದಿಹರುಂಟೆ ? ಹುಚ್ಚ ಕೊಟ್ರೇಶಾ ॥೮॥

ಅರಿದವನು ತಾನಿರಲು ಬರಿವಾದ ಮಾಡುವನೆ ? ।
ಅರಿದವನು ತಾನಾಗೆ ಬರಿನುಡಿಯ ನುಡಿಯುವನೇ ? ॥
ಅರಿದು ನಿಜ ಸುಖಿಯಾಗಿ ಮೌನದಿಂ ತಾನಿರುವ ।
ಅರಿದ ಮಹಿಮನು ತಾನು ಹುಚ್ಚ ಕೊಟ್ರೇಶಾ ॥೯॥

ಅರಿವು ಸ್ವರ್ಗವು ಎಂದು ಮರಹು ನರಕವು ಎಂದು ।
ಹಿರಿಅಣ್ಣನಾಡಿರುವ ಗುರುವಚನವಂ ಅರಿದು ॥
ಬೆರೆದು ಶಿವನೊಳ್ತಾನು ಮರೆದು ತನ್ನಯ ಇರುವ ।
ಇರುವುದೇ ನಿಜದರಿವು ಹುಚ್ಚ ಕೊಟ್ರೇಶಾ ॥೧೦॥

ತನುವೆಂಬ ಆಲಯದಿ ಹೃದಯಪೀಠದೊಳಿರುವ ।
ಚಿನುಮಯಾತ್ಮಕ ಶಿವನ ಮನಕೊಟ್ಟು ನಡೆನುಡಿದು ॥
ಅನುದಿನದ ಕಾರ್ಯಗಳು ಶಿವನಿಚ್ಛೆಯೆಂತೆಂಬ ।
ಮನದಿರುವು ನಿಜದರಿವು ಹುಚ್ಚ ಕೊಟ್ರೇಶಾ ॥೧೧॥

# ಅಯ್ಯಾಚಾರ

(ಲೇಖಕ—ಸತ್ಯವಾದಿ)



ಅಯ್ಯಾಚಾರವು ಬ್ರಾಹ್ಮಣರು ಮಾಡುತ್ತಿರುವ ಉಪನಯನದ ಅಂಧಾನುಕರಣವು. ಬ್ರಾಹ್ಮಣರು ಹುಟ್ಟುವಾಗ ಶೂದ್ರರಿರುತ್ತಾರೆ. ಉಪನಯನ ಸಂಸ್ಕಾರದಿಂದ ಬ್ರಾಹ್ಮಣರಾಗುತ್ತಾರೆ. ಯಾಕಂದರೆ "ಜನ್ಮನಾ ಜಾಯತೇ ಶೂದ್ರಃ ಸಂಸ್ಕಾರೇಣೈವಬ್ರಾಹ್ಮಣಃ"ಎಂಬ ಶಾಸ್ತ್ರಾಧಾರವುಂಟು. ಅದರಂತೆ ಮಾಹೇಶ್ವರರ ಮಕ್ಕಳು ಭಕ್ತರಾಗಿ ಹುಟ್ಟಿ ಅಯ್ಯಾಚಾರವಾದನಂತರ ಮಾಹೇಶ್ವರರಾಗುವದಿಲ್ಲವಷ್ಟೇ, ಅಂದಮೇಲೆ ಅಯ್ಯಾಚಾರದ ವೈಶಿಷ್ಟ್ಯವೇನು? ತಾಯಿಯು ಎಂಟು ತಿಂಗಳ ಗರ್ಭಿಣಿಯಿರುವಾಗಲೇ ವೀರಶೈವ ಧರ್ಮದ ಪ್ರಕಾರ ಹೊಟ್ಟೆಯೊಳಗಿನ ಶಿಶುವಿಗೆ ಲಿಂಗಧಾರಣವಾಗುತ್ತದಲ್ಲವೇ? ಲಿಂಗಧಾರಣವಾದ ಬಳಿಕ ಆ ಶಿಶುವು ಮಾಹೇಶ್ವರರಾಗಿರುವದಿಲ್ಲವೇ ಹೇಗೆ? ಮಾಹೇಶ್ವರನಾಗಿರುತ್ತದೆಂದರೆ ಪ್ರತ್ಯೇಕವಾಗಿ ಉಪನಯನದ ದೀಕ್ಷೆಯಿಂದ ಪುನಃ ಮಾಹೇಶ್ವರನನ್ನಾಗಿ ಮಾಡುವದರ ಅರ್ಥವೇನು? ಹುಟ್ಟುವಾಗ ಆ ಶಿಶುವು ಮಾಹೇಶ್ವರನಾಗದೆ ಭಕ್ತನಾಗಿರುತ್ತದೆಂದರೆ ಭಕ್ತರಾದವರಿಗೆಲ್ಲವೂ ಉಪನಯನ ದೀಕ್ಷೆಯಿಂದ ಮಾಹೇಶ್ವರರನ್ನು ಮಾಡಲಿಕ್ಕೆ ಬರುತ್ತದೆಂದಹಾಗಾಯಿತು. ಹಾಗಿದ್ದರೆ ಗುರುಗಳಾದವರು ಉಪನಯನ ಮಾಡಿ ಭಕ್ತರನ್ನೆಲ್ಲ ಮಾಹೇಶ್ವರರನ್ನಾಗಿ ಏಕೆ ಮಾಡುವದಿಲ್ಲ? ಇತರ ಭಕ್ತರಿಗೆ ಮಾಹೇಶ್ವರರಾಗುವದು ಬೇಡವಾಗಿರುತ್ತದೆಯೇ? ಹಾಗೇನೂ ಇಲ್ಲ. ಹಾಗಾದರೆ ಅಯ್ಯನವರ ಮಕ್ಕಳಿಗೆ ಮಾತ್ರ ಅಯ್ಯಾಚಾರ ಮಾಡುವದರ ಅರ್ಥವೇನು? ಹುಟ್ಟುವಾಗ ಆ ಶಿಶುವು ಮಾಹೇಶ್ವರರನ್ನು ಮಾಡಲಿಕ್ಕೆ ಬರುತ್ತದೆಂದಹಾಗಾಯಿತು. ಹಾಗಿದ್ದರೆ ಗುರುಗಳಾದವರು ಉಪನಯನ ಮಾಡಿ ಭಕ್ತರನ್ನೆಲ್ಲ ಮಾಹೇಶ್ವರರನ್ನಾಗಿ ಏಕೆ ಮಾಡುವದಿಲ್ಲ? ಇತರ ಭಕ್ತರಿಗೆ ಮಾಹೇಶ್ವರರಾಗುವದು ಬೇಡವಾಗಿರುತ್ತದೆಯೇ? ಹಾಗೇನೂ ಇಲ್ಲ. ಹಾಗಾದರೆ ಅಯ್ಯನವರ ಮಕ್ಕಳಿಗೆ ಮಾತ್ರ ಅಯ್ಯಾಚಾರ ಮಾಡುವದರ ಅರ್ಥವೇನು?

ಒಂದುವೇಳೆ ಮಾಹೇಶ್ವರ ಎಂಬ ಪ್ರತಿಷ್ಠಿತ ವರ್ಗವೊಂದನ್ನು ದುಡಿಯದೆ ಹೆಚ್ಚದೆ ತಿರುಪೆಯಿಂದ ಜೀವಿಸಲು ಉಪನಯನ ಮಾಡುತ್ತಿರಬಹುದೇ? ಹಾಗಿದ್ದರೆ ಮಾಹೇಶ್ವರರೆಂಬವರೆಲ್ಲ ಕೇವಲ ತಿರುಪೆಯಿಂದಲೇ ಜೀವಿಸಬಹುದಾಗಿತ್ತು. ವಸ್ತುಸ್ಥಿತಿಯು ಹಾಗಿಲ್ಲ. ಎಷ್ಟೋ ಮಾಹೇಶ್ವರರು ಒಕ್ಕಲತನ, ವ್ಯಾಪಾರ, ಕೈಗಾರಿಕೆ, ನೌಕರಿ ಮುಂತಾದ್ದನ್ನು ಮಾಡಿ ಜೀವಿಸುತ್ತಿರುವರಲ್ಲ. ಬಿಕ್ಕೆಬೇಡುವವರಿಗಷ್ಟೇ ಅಯ್ಯಾಚಾರ ಮಾಡಿ ಕಾಯಕ ಮಾಡುವ ಅಯ್ಯನವರಿಗೆ ಬಿಟ್ಟುಬಿಡಬಹುದಾಗಿತ್ತು. ಮೇಲಾಗಿ ಅಯ್ಯಾಚಾರ ಮಾಡಿ ಜೋಳಿಗೆಯಿಂದ ಜೀವಿಸುವಂತೆ ಮಾಡುವದು ಸಾಮಾಜಿಕ ದೃಷ್ಟಿಯಿಂದ ಕೀಳು ಕೆಲಸವಲ್ಲವೇ? ಅಯ್ಯನವರು ಕಾಯಕ ಮಾಡದೆ ಭಕ್ತರ ಭಿಕ್ಷಾನ್ನದಿಂದಲೇ ಜೀವಿಸಬೇಕೆಂದು ಹೇಳುವದು ಕಾಯಕ ಪ್ರಾಧಾನ್ಯವಾದ ವೀರಶೈವ ಮತಕ್ಕೆ ದೊಡ್ಡ ಕಲಂಕವು. ವಿಶಿಷ್ಟ ಬ್ರಾಹ್ಮಣ ಆಚಾರ್ಯರಾಗಲಿ ಬುದ್ಧ ಭಿಕ್ಷುಗಳಾಗಲಿ, ಜೈನ ಸಾಧುಗಳಾಗಲಿ ಪರಾನ್ನದಿಂದ ಜೀವಿಸಬಹುದು. ಅದಕ್ಕೆ ಅವರ ಧರ್ಮದ ಸಮ್ಮತಿಯಿದೆ. ಆದರೆ ವೀರಶೈವರಿಗೆ ಆ ಮಾತು ಸಮನ್ವಯಿಸುವದಿಲ್ಲ. ಯಾಕಂದರೆ ವೀರಶೈವರು ಕಾಯಕಷ್ಟದಿಂದ ಗಳಿಸಿ ಗುರುಲಿಂಗಜಂಗಮಕ್ಕೆ ನೀಡಿ ಮಿಕ್ಕ ಪ್ರಸಾದವನ್ನು ತಾವು ಸೇವಿಸಬೇಕೆಂಬ ನೇಮವಿದೆ. ಇದಕ್ಕೆ ಶಿವಶರಣರ ವಚನಗಳು ಸಾಕ್ಷಿಯಾಗಿವೆ. ಹೀಗಿರಲು ಭಿಕ್ಷೆಗಾಗಿ ಒಂದು ವಿಶಿಷ್ಟವಾದ ವರ್ಗವನ್ನು ಅಯ್ಯಾಚಾರದಿಂದ ಅಣಿಮಾಡುವದು ಹೀನತನವಲ್ಲವೇ?

ಇನ್ನು ಮಠಮಾನ್ಯಗಳ ಅಧಿಕಾರಕ್ಕೆ ಪಾತ್ರರನ್ನು ಮಾಡುವ ಸಲುವಾಗಿ ಅಯ್ಯಾಚಾರ ದೀಕ್ಷೆಯನ್ನು ಮಾಡುತ್ತಿದ್ದೇವೆಂದು ಕಲ್ಪಿಸಿದರೆ ಅದಂತೂ ತೀರ ಸ್ವಾರ್ಥಮಯವಾದ ಹಾಗೂ ಅಸಮಂಜಸ ವಿಚಾರವು. ಕೇವಲ ಅಯ್ಯಾಚಾರದ ಪ್ರಶಸ್ತಿಪತ್ರದಿಂದ ಒಬ್ಬ ವ್ಯಕ್ತಿಯು ಮಠಾಧಿಕಾರಕ್ಕೆ ಪಾತ್ರನಾಗುತ್ತಿದ್ದರೆ ಆತನ ಗುಣ, ಶೀಲ, ಸ್ವಭಾವ, ಶಿಕ್ಷಣ, ಸಮಾಜಸೇವೆ ಮುಂತಾದವುಗಳನ್ನೇನೂ ನೋಡಬಾರದೆಂಬರ್ಥವಾಗುತ್ತದೆ. ಗುಣಕ್ರಿಯಾ ಪ್ರಾಧಾನ್ಯವಾದ ವೀರಶೈವ ಮತದಲ್ಲಿ ಗುಣಕ್ರಿಯಾಹೀನರಿದ್ದರೂ ಮಾಹೇಶ್ವರರೆಂಬ ವರ್ಗದವರಿದ್ದರೆ ತೀರಿತು. ಅಂಥವರಿಗೆ ಮಠಾಧಿಕಾರ ಸಲ್ಲುತ್ತದೆಂದು ಸಾಧಿಸಿದರೆ ಈಗಿನ ಪ್ರಗತಿಪರ ಸಮಾಜವು ಒಪ್ಪಬಹುದೇ? ಒಂದು ವೇಳೆ ಕಗ್ಗರಾದ ಹಳ್ಳಿಗಾಡ ಕೆಲವರು ಒಪ್ಪಬಹುದು. ಗುಣಕ್ರಿಯಾ ಸಂಸ್ಕಾರಗಳಿಗಷ್ಟೇ ನಾವು ಮಹತ್ವ ಕೊಡಬೇಕೆಂದಾಗ ಕೇವಲ ಮಾಹೇ

ಶ್ವರರಿಗಷ್ಟೇ ಆ ಅಧಿಕಾರಗಳನ್ನು ಯಾಕೆ ಮೀಸಲಾಗಿರಿಸಬೇಕು? ಭಕ್ತರಲ್ಲಿ ಅಂಥ ಪೂಜ್ಯ ಹಾಗೂ ಯೋಗ್ಯ ವ್ಯಕ್ತಿಗಳಿದ್ದರೆ ಅವರಿಗೆ ಮಠಾಧಿಕಾರಗಳನ್ನೇಕೆ ಕೊಡಬಾರದು? ಮಾಹೇಶ್ವರರ ಮಕ್ಕಳಿಗೇ ಮಠಾಧಿಕಾರ ಕೊಡಬೇಕೆಂದೇನಾದರೂ ಶಾಸ್ತ್ರಾಧಾರಗಳಿವೆಯೋ? ಅಂಥ ಆಧಾರಗಳಿದ್ದರೆ ವೀರಶೈವ ಸಮಾಜವು ತೀರ ಸಂಕುಚಿತವೆಂಬ ಮಾತನ್ನು ಒಪ್ಪಬೇಕಾದೀತು. ಆದರೆ ರೂಢಾಚಾರವು ಕೂಡ ಈ ಮಾತನ್ನು ಒಪ್ಪಿಲ್ಲ. ಎಷ್ಟೋ ಭಕ್ತರು ಗುರು ವಿರಕ್ತ ಪೀಠಗಳಿಗೆ ಅಧಿಕಾರಿಗಳಾಗುತ್ತ ಬಂದಿದ್ದಾರೆ, ಇನ್ನೂ ಆಗುತ್ತಲಿದ್ದಾರೆ. ಲಿಂಗಧಾರಿಗಳೆಲ್ಲ ಸರಿಸಮಾನರೆಂದು ಸಮತಾವಾದವು ವೀರಶೈವ ಮತದ ವೈಶಿಷ್ಟ್ಯವಿರುವಾಗ ಅಯ್ಯಾಚಾರದಿಂದ ಮಾಹೇಶ್ವರ ಎಂಬ ವರ್ಗವನ್ನು ಭಕ್ತರಿಗಿಂತ ಅಧಿಕವಾದವರನ್ನಾಗಿ ಮಾಡುತ್ತೇವೆಂದು ಹೇಳುವದೂ ಅವರನ್ನಷ್ಟೇ ಮಠಪೀಠಾಧಿಕಾರಿಗಳನ್ನು ಮಾಡಬೇಕೆಂದು ಹೇಳುವದೂ ಲಘುಹೃದಯದ ಪ್ರತೀಕವು. ಪ್ರಾಜ್ಞರು ಇದನ್ನು ಸರ್ವಥಾ ಮನ್ನಿಸಲಾರರು.

ವೀರಶೈವರೆಲ್ಲರೂ ಸರಿಸಮಾನರೆಂದ ಬಳಿಕ ಅವರವರ ಗುಣಕರ್ಮಶಕ್ತಿಗಳಿಗನುಸರಿಸಿ ಅವರಿಗೆ ಸ್ಥಾನಮಾನಗಳು ಲಭಿಸಲೇಬೇಕು. ಅಪಾತ್ರರನ್ನು ಯೋಗ್ಯ ಸ್ಥಾನದ ಮೇಲೆ ಕೂಡ್ರಿಸುವದೂ ಸತ್ಪಾತ್ರರನ್ನು ಹಿಂದೂಡುವದೂ ಸುಸಂಸ್ಕೃತ ಸಮಾಜದ ಲಕ್ಷಣವೇ ಅಲ್ಲ. ಷಟ್‌ಸ್ಥಲಗಳು ಎಲ್ಲ ವೀರಶೈವರಿಗೂ ಸರಿಯಾಗಿಯೇ ಮುಕ್ತದ್ವಾರವಾಗಿವೆ. ಅಯ್ಯನವರಿಗಷ್ಟೇ ಅವು ಮೀಸಲಾಗಿಲ್ಲ. ಷಟ್‌ಸ್ಥಲದ ಮೇರೆಗೆ ಭಕ್ತನು ಮಹೇಶನಾಗಬಲ್ಲ. ಮಹೇಶನು ಪ್ರಸಾದಿಯಾಗಬಲ್ಲ. ಪ್ರಸಾದಿಯು ಪ್ರಾಣಲಿಂಗಿಯಾಗಬಲ್ಲ. ಪ್ರಾಣಲಿಂಗಿಯು ಶರಣನಾಗಬಲ್ಲ. ಶರಣನು ಐಕ್ಯನಾಗಬಲ್ಲ. ಈ ತರಗತಿಗಳು ಗುಣಕ್ರಿಯೆಗೆ ಸಂಬಂಧಿಸಿರುವವೇ ಹೊರತು ಜಾತಿಗಲ್ಲ. ಅಂದಮೇಲೆ ಮಾಹೇಶ್ವರ ಎಂಬುದು ಜಾತಿಯೇ ಅಲ್ಲ. ಆತ್ಮೋನ್ನತಿಯ ತರಗತಿ.

ಎಷ್ಟೋ ಭಕ್ತರು ಪ್ರಸಾದಿಗಳಾಗುವದನ್ನು ನಾವು ಕಾಣುತ್ತಿದ್ದೇವೆ. ಪ್ರಸಾದಿ ಸ್ಥಲವು ಮಾಹೇಶ ಸ್ಥಲಕ್ಕಿಂತಲೂ ಮುಂದಿನದು. ಅಂದ ಬಳಿಕ ಪ್ರಸಾದಿಕ ಭಕ್ತರು ಮಹೇಶ್ವರರಿಗಿಂತಲೂ ಅಧಿಕರಾದಂತಾಯಿತು. ಬಸವಾದಿ ಪ್ರಮಥರ ಕಾಲಕ್ಕೆ ಕುಲಹದಿನೆಂಟು ಜಾತಿಯವರು ಮಹಾ ಶರಣರಾಗಿ ಹೋದರು. ಅವರು ಭಕ್ತರೋ, ಅಯ್ಯನವರೋ? ಶರಣಸ್ಥಲವು

ಮಹೇಶ್ವರ ಸ್ಥಲಕ್ಕಿಂತಲೂ ಎಷ್ಟೋ ಹೆಚ್ಚಿನದಲ್ಲವೇ ? ಅಂದ ಮೇಲೆ ಶರಣಸ್ಥಲದ ಭಕ್ತರು ಜಾತಿಗತ ಅಯ್ಯನವರಿಗಿಂತ ಅಧಿಕರಾದಂತಾಯಿತಲ್ಲವೇ ? ಅಂದ ಬಳಿಕ ಮಧ್ಯಂತರದಲ್ಲಿ ಅಯ್ಯಾಚಾರವೆಂಬ ಗ್ರಹಾಚಾರವು ಎಲ್ಲಿಂದ ಬಂದಿತು ? ಇದಕ್ಕೆ ಉತ್ತರವಿಷ್ಟೇ. ಅಯ್ಯನವರೆಂದರೆ ಆರ್ಯರಾದ ಶೈವ ಬ್ರಾಹ್ಮಣರು. ಆರ್ಯ ಇದರ ತದ್ಭವವೇ ಅಯ್ಯ. ಇವರು ಬಸವಾದಿ ಪ್ರಮಥರ ಕಾಲಕ್ಕೆ ತಮ್ಮ ಜುಟ್ಟು ನಿಜವಾರಗಳನ್ನು ಕಿತ್ತುಹಾಕಿ ವೀರಶೈವ ಮತವನ್ನಂಗೀಕರಿಸಿದಂತೆ ಕಾಣುತ್ತದೆ. ಯಾಕಂದರೆ ಬಸವಣ್ಣನವರ ಕಾಲದಲ್ಲಿಯೇ ಪರಮತೀಯರನ್ನು ಲಿಂಗಾಯತ ಸಮಾಜದಲ್ಲಿ ತೆಗೆದುಕೊಳ್ಳುವ ರೂಢಿ ಹೆಚ್ಚು ಪ್ರಚಾರದಲ್ಲಿ ಬಂದಿತು. ಅಯ್ಯನವರು ಮೂಲತಃ ವೀರಶೈವರಲ್ಲ; ಆಗಂತುಕರು. ಇವರು ಆರ್ಯರು. ವೀರಶೈವರು ಮೂಲತಃ ದ್ರಾವಿಡರು. ಈ ಆರ್ಯರು ವೀರಶೈವಮತವನ್ನಂಗೀಕರಿಸಿದ ಬಳಿಕ ತಮ್ಮ ಪೂರ್ವ ಕುಲಧರ್ಮದ ಪ್ರಕಾರ ಉಪನಯನ ವಿಧಿಯನ್ನು ಹಾಗೇ ಬಳಿಕೆಯಲ್ಲಿ ಸಾಗಿಸಿದರು. ಇದು ವೀರಶೈವ ಗುರುಗಳಿಗೆ ಗೊತ್ತಾಗಬಾರದೆಂದು ಅವರಿಗೆ ಗೊತ್ತಾಗದಂತೆ ರಾತ್ರಿಯಲ್ಲಿ ಕಳ್ಳತನದಂತೆ ಮಾಡುತ್ತಿದ್ದಂತೆ ತೋರುತ್ತದೆ. ಅಂತೆಯೇ ಕೆಲವು ಕಡೆಗೆ ರಾತ್ರಿಯಲ್ಲಿ ಅಯ್ಯಾಚಾರ ಮಾಡುವ ರೂಢಿಯು ಈಗೂ ಪ್ರಚಲಿತವಿದೆ.

ಆದರೆ ಬರಬರುತ್ತ ಈ ಅಯ್ಯನವರು ಪ್ರಗತಿಶೀಲರಾದ್ದರಿಂದಲೂ ಮೂಲ ದ್ರಾವಿಡ ಗುರುಗಳು ಕೀಳದೆಶೆಗೆ ಬಂದದ್ದರಿಂದಲೂ ಅಯ್ಯನವರು ಅವರನ್ನು ಕ್ರಮೇಣ ಮಠಾಧಿಕಾರಗಳಿಂದ ತೆಳ್ಳಿ ಅವುಗಳನ್ನೆಲ್ಲ ತಾವು ಆಕ್ರಮಿಸಿದಂತೆ ತೋರುತ್ತದೆ. ಮುಂದೆ ಅವರು ಅಯ್ಯನವರ ಹೊರತು ಯಾರಿಗೂ ಮಠಪೀಠಾಧಿಕಾರಿಗಳಾಗಲಿಕ್ಕೆ ಬರುವದಿಲ್ಲೆಂದು ಪ್ರಚಾರ ಮಾಡಿದಂತೆ ತೋರುತ್ತದೆ. ಇದೊಂದು ದೊಡ್ಡ ಸಂಶೋಧನೆಯ ಪ್ರಶ್ನೆಯೇ ಆಗಿದೆ. ಪೂರ್ವಾಚಾರದಂತೆ ಯಾರಾದರೂ ಭಕ್ತರು ಮಠಾಧಿಕಾರಿಗಳಾದರೆ ಅವರ ಪಾದೋದಕ ಸ್ವೀಕರಿಸಲು ಅಯ್ಯನವರಾದ ಸ್ವಾಮಿಗಳು ಹಿಂದು ಮುಂದೆ ನೋಡುತ್ತಾರೆಂದು ಕೆಲವು ಕಡೆಗೆ ಕೇಳಬರುತ್ತದೆ. ಹೀಗಾಗಿ ಬಸವಾದಿಪ್ರಮಥರು ಜಾತ್ಯತೀತವಾಗಿ ಮಾಡಿಟ್ಟ ಸಮಾಜವು ಅಯ್ಯನವರೆಂಬ ಕೆಲವು ಸ್ವಾರ್ಥಿಗಳ ಅತಿಕ್ರಮಣದ ಮೂಲಕ ಜಾತಿ ಸಂಕೋಲೆಗಳಿಂದ ಪುನಃ ಬಿಗಿಯಲ್ಪಟ್ಟಂತಾಗಿದೆ. ಆದರೆ ಈಗ ನಾವು ಮಾಡಬೇಕಾದ ಸುಧಾರಣೆಯೆಂದರೆ ಯಾರು ಯಾವ ಕಾಯಕವನ್ನೇ ಮಾಡಲಿ

ಭಕ್ತರಿರಲಿ, ಮಾಹೇಶ್ವರರಿರಲಿ ಅವರೆಲ್ಲರೂ ಸರಿಸಮಾನರು. ಇವರಲ್ಲಿ ಯೋಗ್ಯರಾದವರನ್ನು ಸಮಾಜದವರು ಗುರುವಿರಕ್ತ ಪೀಠಗಳಿಗೆ ಅಧಿಕಾರಿಗಳನ್ನಾಗಿ ಮಾಡಬೇಕು. ಈ ಹೊಸ ಸಂಪ್ರದಾಯವು ನಿರ್ಮಾಣವಾಗಬೇಕಾದರೆ ಅಯ್ಯಾಚಾರವೆಂಬ ಬ್ರಾಹ್ಮಣರ ಅಂಧಾನುಕರಣವು ಸಮಾಜದಿಂದ ತೊಲಗಲೇಬೇಕು.

# ಮಹಾಂತನ ಪ್ರಭಾವ.

(ಲೇಖಕರು:— ಶ್ರೀ. ಕೆ, ಶಾಂತಯ್ಯ ವಾಲನಹಳ್ಳಿ, ಸೋಲೂರು ಪೋಸ್ಟ್, ಮಾಗಡಿ ತಾಲೂಕ)

:೦:

ದಿನಚರಿಯ ಆಚಾರ ವಿಚಾರಗಳು ಮುಗಿದಂತೆಯೇ ಬೆಳಗ್ಗೆ ಉಪಾಹಾರವನ್ನು ಮುಗಿಸಿಕೊಂಡು ಮಾಮೂಲಿನಂತೆ ನಮ್ಮ ಕಂಡ ಬಸವನ ಗುಡಿಯ ಅಂಗಳದಲ್ಲಿ ಸೇರಿತು. ಮಾತುಕತೆ ನಡೆಯುತ್ತಿದ್ದಂತೆಯೇ ಶಿವಶರಣರ ವಿಚಾರವು ಬಂದಿತು. ಈ ವೇಳೆಯಲ್ಲಿ ಶರಣರ ಪ್ರಭಾವದ ವಿಚಾರವಾಗಿ ಇರುವ ಬಸವಣ್ಣನವರ ವಚನವನ್ನು ಮಧ್ಯೆ ಒಬ್ಬರು ಉಗ್ಘಡಿಸಿದರು.

ಶರಣ ನಿದ್ರೆಗೆಯ್ದರೆ ಜಪಕಾಣಿರೋ
ಶರಣನೆದ್ದು ಕುಳಿತರೆ ಶಿವರಾತ್ರಿಕಾಣಿರೋ
ಶರಣ ನಡೆದುದೇ ಪಾವನ ಕಾಣಿರೋ
ಶರಣ ನುಡಿದುದೇ ಶಿವತತ್ವ ಕಾಣಿರೋ
ಕೂಡಲಸಂಗನ ಶರಣರ ಕಾಯವೇ ಕೈಲಾಸ ಕಾಣಿರೋ

ಈ ಬಗೆಯ ಗುಂಪಿಗೆ ಸೇರಿದವರಲ್ಲಿ ಒಬ್ಬರು ಮಹಾಂತದೇಶಿಕೇಂದ್ರರು ಎಂಬುದನ್ನು ಮಿತ್ರರೊಬ್ಬರು ಸೂಚಿಸಿದರು. ಈ ಮಹಾಶಿವಶರಣನ ಗದ್ದುಗೆಯು ನಮ್ಮೂರಿಗೆ ಸುಮಾರು ಒಂದು ಮೈಲು ದೂರದಲ್ಲಿದೆ. ಅಲ್ಲಿಗೆ ಹೋಗಲು ನಮ್ಮ ಗುಂಪು ತೀರ್ಮಾನ ಮಾಡಿ ಹೊರಟೇಬಿಟ್ಟಿತು.

ನಮ್ಮ ಗುಂಪಿನಲ್ಲಿ ಪಟೀಲ ಚಿಕ್ಕ ಗಂಗಪ್ಪ, ಶಾಂತಪ್ಪ ಮತ್ತು ಹಲಗೂರು ಮ. ಮಲ್ಲಪ್ಪ ಇತ್ಯಾದಿಯವರು ಇದ್ದರು. ದಾರಿಯಲ್ಲಿ ಮಾತುಕತೆ ಸಾಗುತ್ತಿದ್ದಂತೆಯೇ ಅತಿಥಿಯಾಗಿದ್ದ ಹಲಗೂರು ಮ. ಮಲ್ಲಪ್ಪನವರ ಪ್ರಶ್ನೆಗೆ ಉತ್ತರವಾಗಿ ಈ ರೀತಿ ಬಂದಿತು.

"ಸುತ್ತಮುತ್ತಣ ಗ್ರಾಮದಲ್ಲಿ ಭಕ್ತಿಯ ಬೆಳಕು ಮುಗ್ಗಿ ಹೋಗುತ್ತಿದ್ದ ವೇಳೆಯಲ್ಲಿ ಹಸನು ಬೆಳೆಯನ್ನು ಈ ಪ್ರಾಂತ್ಯದವರಿಗೆ ಕೊಡಲೋ ಏನೋ ಉತ್ತರ ದೇಶದಿಂದ ಮಹಾಂತ ದೇಶಿಕೇಂದ್ರ ಎಂಬ ಶಿವಶರಣರೊಬ್ಬರು ಎರಡು ಶತಮಾನಗಳ ಹಿಂದೆ ಇಲ್ಲಿಗೆ ಆಗಮಿಸಿದರು. ಭಕ್ತರೋ, ಹೇಳ ತೀರದು. ಭಕ್ತಿ ಎಂಬ ಬಾಳೆಹಣ್ಣಿನ ಸವಿಯನ್ನೇ ಅರಿಯದಂತಹ ಒರಟರು. ಭಕ್ತಿಪ್ರದರ್ಶನದಲ್ಲಿ ನಿಸ್ಸೀಮತೆಯು ಸ್ವಲ್ಪ ಸ್ವಲ್ಪವಾಗಿ ಈ ಸ್ವಾಮಿಗಳಿಂದ ಹೊರಡುವಂತಾಯಿತು. ದಿನವೂ ದಾಸೋಹ ಕಾಯಕವನ್ನು ಕೈಗೊಳ್ಳುವದು ಮತ್ತು ಜ್ಞಾನದಾಸೋಹ ಕಾರ್ಯವನ್ನು ಸಫಲಗೊಳಿಸುವುದು ಇವರ ನೇತ್ರದ್ವಯಗಳಾಗಿದ್ದವು. ಇವರ ಶಿವಯೋಗ ಪ್ರಭಾವದಿಂದ ಒರಟು ಜನ ನಯ ವಿನಯ ಶೀಲರಾಗಿಯೂ, ಅಸಭ್ಯರು ಸಭ್ಯರಾಗಿಯೂ, ಕ್ರೂರಿಗಳು ಸಾಧುಶೀಲರಾಗಿಯೂ ಜನರ ಅಂತಃಕಲಹವು ಅಡಗಿ ಹೋಗಿ ಮೈತ್ರಿಯ ಮಹಲು ನಿರ್ಮಾಣವಾಯಿತು. ಗುರುಶಿಷ್ಯರಿಬ್ಬರೂ "*Duty for duty's sake shines like a jewel on its own right*" ಎಂಬ ವರ್ಡ್ಸ್ ವರ್ತ್‌ವಾಣಿಯನ್ನು ಚನ್ನಾಗಿ ಅರ್ಥಮಾಡಿಕೊಂಡರು. ಬರಬರುತ್ತಾ ಸ್ವಾಮಿಯವರ ಅಂತಶ್ಶಕ್ತಿ, ಜಪಾನುಷ್ಠಾನ ಇವುಗಳಿಂದ ಇವರು ಕ್ರೂರ ಮೃಗಗಳನ್ನೂ ಕೂಡ ಸಾಧು ಪ್ರಾಣಿಗಳನ್ನಾಗಿ ಮಾಡಿಕೊಂಡರು. ಇದಕ್ಕೆ ನಿದರ್ಶನವಾಗಿ ಇವರು ವ್ಯಾಘ್ರವನ್ನೇ ವಾಹನವನ್ನಾಗಿ ಉಪಯೋಗಿಸುತ್ತಿದ್ದುದಾಗಿದೆ. ಬರಬರುತ್ತಾ ಸ್ವಾಮಿಯವರ ಕ್ರಿಯಾಶೀಲತೆಯು ಮಂದಿಯ ಮನೆಮಾತಾಯಿತು. ಇವರು ಬಂದ ಕಾರ್ಯವು ಮುಗಿಯಿತೋ ಏನೋ ಇವರಿಗೆ ಇಳೆಯಲ್ಲಿ ಇರದಂತಾಯಿತು ಇಚ್ಛೆ. ಸಮಾಧಿಯ ಅಂತರ್ಗೃಹವೊಂದನ್ನು ನಿರ್ಮಿಸಿ, ಅದರಲ್ಲಿ ಕಾಯ ಸಹಿತ ಪ್ರವೇಶಿಸಿದರು. ಆ ಅಂತರ್ಗೃಹವು ಮುಚ್ಚಿಹೋಯಿತು.

ಹತ್ತಾರು ವರ್ಷಗಳು ಉರುಳಿಹೋದವು. ಅಂತರ್ಗೃಹವು ಒಂದು ಮಣ್ಣುಗುಡ್ಡೆಯಾಗಿ ಪರಿಣಮಿಸಿತು. ದನಕರುಗಳನ್ನು ಕುರಿ, ಮೇಕೆಗ

ಗಳನ್ನು ಕಾಯುತ್ತಿದ್ದ ಬಾಲಕರು ಆಗಾಗ್ಗೆ ಅದರ ಮೇಲೆ ಕುಳಿತು ಆಟ ವಾಡುತ್ತಿದ್ದರು. ಈ ಜಾಗದ ಪ್ರಭಾವದಿಂದ ಇಲ್ಲಿದ್ದ ಸಮಯದಲ್ಲಿ ದಡ್ಡ ರಾದ ಹುಡುಗರು ಜಾಣರಾಗಿಯೂ. ಅವಿವೇಕಿಗಳಾಗಿದ್ದವರು ವಿವೇಕಿಗ ಳಾಗಿಯೂ ವರ್ತಿಸುತ್ತಿದ್ದರು. ಈ ವ್ಯತ್ಯಾಸವನ್ನು ಕಂಡಜನರಿಗೆ ಸರಿಯಾದ ಕಾರಣವು ಸಿಕ್ಕದೆ ಆಶ್ಚರ್ಯವಾಗುತ್ತಿತ್ತು. ಕಾರಣಿಕರ ಕಾರ್ಯ ಪೂರ್ತಿಗಾಗಿ ಆಗಾಗ್ಗೆ ಉಪದೇಶಿವಾಹಕರು ಜನಿಸಿ ಪ್ರವಾಸ ಮಾಡುವುದು ರೂಢಿಯೇ ಸರಿ. ಈ ತತ್ವವು ಇಲ್ಲಿಗೂ ಅನ್ವಯಿಸಿತೋ ಏನೋ! ಉತ್ತರದೇಶದಿಂದ ಫಲಾಹಾರದ ಸ್ವಾಮಿಗಳು ಎಂಬ ಮಹನೀಯರು ಈಗ್ಗ ಎಂಟು ದಶಕವರ್ಷಗಳ ಹಿಂದೆ ಇತ್ತ ಬಂದರು. ಗುಡ್ಡದ ಪ್ರದೇಶದಲ್ಲಿ ಆಡ್ಡಾಡುತ್ತಿದ್ದ ಬಾಲಕರ ಆಟವಾ ಟಗಳನ್ನು ನೋಡಿದ ಇವರಿಗೆ ಗುರುವಿನ ನೆಲೆ ಅನುಭವಾಯಿತೋ ಏನೋ ಆಶ್ಚರ್ಯ ಭರಿತರಾಗಿದ್ದ ಜನರನ್ನು ಹತರಕ್ಕೆ ಕರೆದರು. ಅವರಲ್ಲಿ ಕೆಲವು ಜನ ರನ್ನು ಹಾರಿ ಗುದ್ದಲಿಗಳನ್ನು ತರುವಂತೆ ನಿಯಾಮಕ ಮಾಡಿದರು. ಗುಡ್ಡೆಯ ರೂಪದ ಸ್ವಾಮಿಗಳ ಸಮಾಧಿಯ ಜಾಗವನ್ನು ಅಗೆಯಿಸಲು ಆರಂಭಿಸಿದರು. ಅಗೆ ಯಿಸುತ್ತಿದ್ದಂತೆಯೇ ಘಂಟಾನಾದದ ಕಿರುಧ್ವನಿಯೂ, ಪರಿಮಳದ ಕಿಡಿಯೂ ಈ ಮಧ್ಯೆ ಬಂದಿತು. ಕಾರ್ಯ ಸಾಗುತ್ತಿದ್ದಂತೆಯೇ ಸ್ವಾಮಿಗಳಿಗೆ ಕಿಂಡಿ ಯೊಂದು ಕಂಡಿತು. ಅದರೊಳಗೆ ಮೂಲೆ ಗುಂಪಾಗಿದ್ದ ಜ್ಯೋತಿಯೊಂದು ಕಣ್ಣಿಗೆ ಗೋಚರವಾಯಿತು. ತಕ್ಷಣವೇ ಅಲ್ಲಿ ಕೆಲಸ ಮಾಡುತ್ತಿದ್ದವರ ನ್ನೆಲ್ಲ ಅಲ್ಲಿಂದ ದೂರ ಕಳುಹಿಸಿ ತಾವೇ ಕೆಲಸಕ್ಕೆ ನಿಂತರು. ಅಲ್ಲಿ ಮೂರ್ತಿಯ ಸ್ವರೂಪವೊಂದು ಮಿಂಚಿ ಮಾಯವಾದುದು ಫಲಾಹಾರ ಸ್ವಾಮಿಗಳ ದೃಷ್ಟಿಗೆ ಗೋಚರವಾಯಿತು. ಅನಂತರ ಯೋಗ ಪರಿಣತರಾದ ಈ ಸ್ವಾಮಿಗಳು ಅಲ್ಲಿ ಲಿಂಗಪ್ರತಿಷ್ಠಾಪನೆ ಮಾಡಿ ಗದ್ದುಗೆ ನಿರ್ಮಾಣ ಮಾಡಿದರು.

ಈ ಸ್ವಾಮಿಗಳು ಈ ಗದ್ದಿಗೆಯ ಸಮೀಪದಲ್ಲಿಯೇ ನಿಂತರು. ಇವರು ನಿತ್ಯ ಲಿಂಗಪೂಜೆ, ಹಣ್ಣುಹಂಪಲು ಸೇವನೆ ಇಷ್ಟರಲ್ಲಿಯೇ ತೃಪ್ತರಾಗು ತ್ತಿದ್ದರು. ಯಾರು ಏನೇ ಹೇಳಿದರೂ ಇವರು ಹಣ್ಣುಹಂಪಲವನ್ನು ಬಿಟ್ಟು ಬೇರ ಯಾವ ಆಹಾರವನ್ನೂ ಉಪಯೋಗಿಸುತ್ತಿರಲಿಲ್ಲ. ತಾಯಿಯನ್ನು ಕಳೆದುಕೊಂಡ ಕರುವಿನಂತಿದ್ದ ಭಕ್ತವರ್ಗಕ್ಕೆ ಸ್ವಾಮಿಗಳು ಬಂದದ್ದು ಬಹಳ ಉಪಯೋಗವಾಯಿತು. ಒಬ್ಬರ ಮನವನ್ನು ನೋಯಿಸಿ ಕಾರ್ಯ ಮಾಡುವ ದೆಂದರೆ ಇವರಿಗೆ ಜನ್ಮತಃ ಒಗ್ಗದು. ಒಂದು ದಿವಸ ಒಂದು ಊರಿಗೆ

ಇವರು ಹೊರಟರು. ಇವರು ಸ್ನಾನ ಮಾಡಿ ಬರುವುದು ಸಾವಕಾಶವಾಯಿತು ಎಂದು ಅಲ್ಲಿನ ಭಕ್ತೆಯೊಬ್ಬಳು ಉರಿದು ಉಪ್ಪಾದಳು. ಶಿವನ ಮಗಳಾದ ಈ ಭಕ್ತೆಗೆ ತಾನು ತೊಂದರೆ ಕೊಡುವುದು ಸರಿಯಲ್ಲವೆಂದು ಆ ಸ್ವಾಮಿಗಳು ಆಗ ಆಲೋಚಿಸಿ ಅಲ್ಲಿಂದ ಮುಂದೆ ತಮ್ಮ ಜೀವನ ಪರ್ಯಂತ ತಮ್ಮ ಸ್ವಂತವಾಗಿಯೇ ಹಣ್ಣುಹಂಪಲಪನ್ನು ಸಿದ್ಧಪಡಿಸಿಕೊಳ್ಳುತ್ತಿದ್ದರು. ಎಡೆಯೂರು, ನಂಜನಗೂಡು ಮತ್ತು ಈ ಪ್ರಾಂತ ಇವರು ವೃಷಭವಾಹನರೂಢರಾಗಿ ಸಂಚರಿಸುತ್ತ ಜ್ಞಾನದಾಸೋಹ ಕಾರ್ಯವನ್ನು ನಡೆಯಿಸುತ್ತಿದ್ದರು. ಇವರ ಜ್ಞಾನದಾಸೋಹ ಕಾರ್ಯವು ಅನುಭವವುಂಟಪದ ಶರಣ ಶರಣೆಯರನ್ನು ಜ್ಞಾಪಕ ಮಾಡಿಕೊಡುತ್ತಿತ್ತು. ಕಗ್ಗೆರೆ ಎಂಬ ಸ್ಥಳದಲ್ಲಿ ಇವರ ತೇಜಃಪ್ರಭಾವವೂ, ತಪೋಮಹಿಮೆಯೂ ಅಲ್ಲಿಯವರನ್ನು ಮುಗ್ಧರನ್ನಾಗಿ ಮಾಡಿಬಿಟ್ಟಿತು. ಇವರ ಅಧ್ಯಾತ್ಮಿಕ ಮತ್ತು ಧಾರ್ಮಿಕ ವಿಚಾರವು ಚಾಮರಸ ಮಹಾಕವಿಯ ನುಡಿಯನ್ನು ನೆನಪಿಗೆ ತರುತ್ತಿತ್ತು.

ಶಕ್ತಿಸಂಚವನರಿದ ಸದಮಲ ।
ಭಕ್ತಿಮಾರ್ಗದ ರಾಜಬೀದಿಯ ।
ಯುಕ್ತಿಗೊಪ್ಪುವ ಸೋಹಮೆಂಬೀ ಗುಡಿಯ ತೋರಣದ ॥
ವ್ಯಕ್ತವಲ್ಲದ ತತ್ವಮುಖಿಯೆಂ ।
ಬುಕ್ತಿಯುಪ್ಪರಿಗೆಯಲ್ಲಿ ನೆರೆಸಿ ।
ಮುಕ್ತ ಮಹಿಮೆಯ ಮನೆಗಳಲಿ ಮೆರೆಯಿತ್ತು ಕೈಲಾಸ ॥

ಮಾಗಡಿ ಜಡೇ ದೇವರ ಮಠದಲ್ಲಿ ಭಕ್ತರಿಂದ ಇವರಿಗೆ ಸಂತರ್ಪಣೆ ಸಂತೃಪ್ತಿಯಾಗಿ ಸಾಗುತ್ತಿದ್ದಂತೆಯೇ ಭಕ್ತ ಭಕ್ತೆಯರಿಗೆ ಇವರ ವಿಯೋಗವಾಗುವಂತಾಯಿತು. ಆ ದಿವಸ ಉಪದೇಶ ಪುರಾಣ ಪ್ರವಚನ ಸಾಂಗೋಪಾಂಗವಾಗಿ ಸಾಗಿತು. ಅನಂತರ ಇಳಿಯ ನಾಟಕ ಬೇಸರವಾಯಿತೋ ಏನೋ ಇವರು ಲಿಂಗೈಕ್ಯರಾದರು.

ಸುಮಾರು ಐವತ್ತು ವರ್ಷಗಳ ಹಿಂದೆ ಹೊನ್ನುಡಿಕೆ ಜನ್ಮರಾಶಿ ಚನ್ನಯ್ಯನವರೆಂಬ ಶಿವಶರಣರು ಇಲ್ಲಿಗೆ ಬಂದರು. ತಮ್ಮ ಊರಿನಲ್ಲಿ ತಮ್ಮ ಭಾಗಕ್ಕೆ ಬಂದ ಆಸ್ತಿಪಾಸ್ತಿಗಳನ್ನು ಮಾರಿ ಬಂದ ದ್ರವ್ಯವನ್ನು ಇಲ್ಲಿನ ಕಾರ್ಯಕ್ಕೆ

ವಿನಿಯೋಗಿಸಿದರು. ಪ್ರತಿಯೊಬ್ಬ ಶಿವಶರಣನೂ ಸಂಪಾದಿಸಿದ ದ್ರವ್ಯವನ್ನು ಶಿವನಿಗೆ ವಿನಿಯೋಗಿಸಬೇಕೆಂಬುದನ್ನು ಇವರು ಪರಿಪೂರ್ಣ ಅನುಷ್ಠಾನಕ್ಕೆ ತಂದರು. ಇವರು ಪುನರುದ್ಧಾರ ಮಾಡಿದ ವಿಚಾರವು ಗದ್ದುಗೆಯ ಸ್ಥಳಗಳನ್ನು ನೋಡಿದಾಗ ಪೂರ್ತಿಯಾಗಿ ಗೊತ್ತಾಗುತ್ತದೆ. ತಳಹದಿ ಕಾರ್ಯಕ್ಕೆ ಕಟ್ಟಡದ ಕೆಲಸವನ್ನು ಇವರು ಮಾಡಿದರು. ಜ್ಞಾನಿಯಾಗಿ ವ್ಯವಹಾರಿಕರಾಗಿ ಅನಂತರ ಕೆಲವು ಕಾಲ ಕಳೆದ ಮೇಲೆ ಇವರು ಶಿವೈಕ್ಯರಾದರು.

ಪಂಚಾಕ್ಷರೀ ಸ್ವಾಮಿಗಳು ಉತ್ತರದೇಶದಿಂದ ಪ್ರವಾಸ ಮುಗಿಸಿಕೊಂಡು ಕಡಬಗೆರೆ ಎಂಬ ತಮ್ಮ ಜನ್ಮಸ್ಥಳಕ್ಕೆ ಹಿಂತಿರುಗಿ ಬಂದರು. 'ಶ್ರೀಗುರು ವಚನೋಪದೇಶವನಾಲಿಸಿದಾಗಳಹುದು ನರರಿಗೆ ಮುಕುತಿ' ಎಂಬ ನಿಜಗುಣ ಶಿವಯೋಗಿಗಳ ವಚನಕ್ಕಿಂತ ಒಂದು ಹೆಜ್ಜೆ ಮುಂದೆ ಹಾಯ್ದು ಗುರುವನ್ನು ನೆನೆದರು. ಗುರುಪ್ರಭೆಯ ಪರಿಣಾಮವಾಗಿ ಇಲ್ಲಿಗೆ ಬಂದು ನೆಲಿಸಿದರು. ಇಲ್ಲಿ ಅರೆ ಕೊರೆಯಾಗಿದ್ದ ಕಟ್ಟಡಗಳನ್ನು ಮುಗಿಸಿದರು. ಜನರ ದೃಷ್ಟಿ ಇತ್ತ ಜಾರುವಂತೆ ಹೊಸ ಪ್ರಯೋಗ ಒಂದನ್ನು ಮಾಡಿದರು. ಈ ಪ್ರಯೋಗವೇ ಮಹಾಂತೇಶನ ಜಾತ್ರೆ. ಜಾತ್ರೆಯ ವೇಳೆಯಲ್ಲಿ ಕಿಕ್ಕಿರಿದ ಜನರು ಆಗಾಗ್ಗೆ ಬಿಡುವಿನ ದಿನಗಳಲ್ಲಿ ಬಂದು ದೇವರಿಗೆ ಸೇವೆಯನ್ನು ಸಲ್ಲಿಸಿ ತಮ್ಮ ಅಭೀಷ್ಟವನ್ನು ನೆರವೇರಿಸಿಕೊಳ್ಳುತ್ತಿದ್ದರು. ಹೀಗೆ ಕೆಲವು ವರ್ಷಗಳು ಧುರಾಂಧುರಿಯಾಗಿ ಜಾತ್ರೆಯನ್ನು ನಡೆಯಿಸುತ್ತಾ ಕ್ಷೇತ್ರದ ಕೀರ್ತಿಯು ಬಹುದೂರ ಹಬ್ಬುವಂತೆ ಮಾಡಿದರು. ಈ ಸತ್ಕಾರ್ಯದ ಮಧ್ಯದಲ್ಲಿ ಭಕ್ತನೊಬ್ಬನ ಬಿರುನುಡಿ ಇವರಿಗೆ ತಾಗಿ, ನೊಂದ ಇವರನ್ನು ಸ್ಥಾನ ಪಲ್ಲಟ ಮಾಡಿ ತೀರ್ಥಕ್ಷೇತ್ರವಾಸಿಯನ್ನಾಗಿ ಮಾಡಿ ನಿಲ್ಲಿಸಿತು. ಈ ಬಗೆಯ ಮಹಾಂತೇಶನ ಗದ್ದುಗೆಯು ಮಾನವನು ಮಹಾತ್ಮನಾಗಲು, ಜನವು ಜನಾರ್ಧನನಾಗಲು ಮಾರ್ಗದರ್ಶಿಯಾಗಿವೆ. ಇಂತಹ ಪವಿತ್ರ ಕ್ಷೇತ್ರಕ್ಕೆ ನಾವು ಹೊರಡುವುದು ಒಂದು ಪುಣ್ಯ ಸಂಸ್ಕಾರವೇ ಸರಿಯು."

ದಾರಿಯು ಸಾಗುತ್ತಿದ್ದಂತೆಯೇ ಈ ಕ್ಷೇತ್ರದ ಹತ್ತಿರಕ್ಕೆ ಹೋದೆವು. ಮಹಾಂತ ಸ್ವಾಮಿಯ ಗದ್ದುಗೆಯು ಕಣ್ಣಿಗೆ ಕಂಡಿತು. ಅದನ್ನು ನೋಡಿ ಆನಂದ ಹೃದಯಿಗಳಾದಂತೆಯೇ ನೊಂದ ಜೀವಿಗಳಾದೆವು. ಅಲ್ಲಿಂದ ಮುಂದೆ ಸಾಗಿ ಕಲ್ಯಾಣಿಯಲ್ಲಿ ಜಳಕ ಮಾಡಿ ಮುಗಿಸಿ ದೇವಸ್ಥಾನಕ್ಕೆ ಹೋದೆವು. ದೇವರ ಪೂಜೆಯು ಮುಗಿದು ಮಂಗಳಾರತಿ ತೀರ್ಥವನ್ನು ತೆಗೆದುಕೊಂಡೆವು.

ಅನಂತರ ಅಲ್ಲಿನ ಸ್ಥಾನಿಕರಾದ ಶ್ರೀ ಪುಟ್ಟಮಲ್ಲ ದೇವರು ಸಲ್ಲಿಸಿದ ಪ್ರಸಾದ ವನ್ನು ಸೇವಿಸಿ ತೃಪ್ತಿಪಟ್ಟೆವು. ಈ ಮಠದ ಬಡಾವಣೆಗಾಗಿ, ಉದ್ಧಾರಕ್ಕಾಗಿ ಲಿಂಗೈಕ್ಯ ಸಚಿವ ಶ್ರೀಮಾನ್ ಎಚ್. ಸಿದ್ದಯ್ಯನವರು ಘನಸರ್ಕಾರದಿಂದ ಉಚಿತ ಸಹಾಯವನ್ನು ಕೃಪೆಯಿಟ್ಟು ಕೊಡಿಸಿದರು. ಧಾರ್ಮಿಕ ಹೃದಯಿಗಳಾದ ಇವರ ಸತ್ಸಂಕಲ್ಪ ಕಾರ್ಯದ ಮೊಳಕೆಯನ್ನು ಚಿಗುರಿಸಿ, ಪುಷ್ಟಿ ಮಾಡಿ ಸಲು ಮಾಜಿ ವಿಧಾನ ಸಭಾ ಸದಸ್ಯರಾದ ಸೋಲೂರು ಸಿದ್ಧಪ್ಪನವರು ಮನಸಾರೆ ಕೆಲಸ ಮಾಡಿ ಸಂಕಲ್ಪಸಾಧಕರಾದರು. 'ಹನಿಗೂಡಿದರೆ ಹಳ್ಳ, ತೆನೆಗೂಡಿದರೆ ಭತ್ತ' ಎಂಬ ತತ್ವಕ್ಕನುಸಾರವಾಗಿ ಈ ಗದ್ದುಗೆಯ ಕಟ್ಟಡದ ಬಡಾವಣೆಯು ಬೆಳೆಯಿತು; ಬೆಳೆಯುತ್ತಿದೆ. ಗದ್ದುಗೆಯ ಹಿಂದುಗಡೆ ಒಂದು ಕಟ್ಟಡದ ಪೂರ್ತಿ ಖರ್ಚನ್ನು ಬೆಂಗಳೂರಿನ ಸುಪ್ರಸಿದ್ಧ ನರ್ತಕ ರಾದ ಶ್ರೀ ಬಿ ಎನ್. ನಂಜಪ್ಪನವರು ವಹಿಸಿಕೊಂಡು ಪುಣ್ಯಪುರುಷಾರ್ಥ ಕಾರ್ಯವನ್ನು ಮಾಡಿ ಕೃತಾರ್ಥರಾಗಿದ್ದಾರೆ. ಕಳೆದ ವರ್ಷ ಈ ಕಟ್ಟಡದ ಉದ್ಘಾಟನೆಯು ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಶ್ರೀ ನಿ. ಪ್ರ. ಸ್ವ. ಶಿವಕು ಮಾರ ಸ್ವಾಮಿಗಳ ಅಮೃತ ಹಸ್ತದಿಂದ ಜರುಗಿತು. ಈ ಗದ್ದುಗೆಯ ಸಮಿ ತಿಯ ಅಧ್ಯಕ್ಷರಾದ ಕಂಚುಗಲ್ಲ ಬಂಡೆ ಮಠದ ಶ್ರೀ ನಿ. ಪ್ರ. ಸ್ವ. ಶಿವರುದ್ರ ಸ್ವಾಮಿಗಳು ಈ ಗದ್ದುಗೆಯ ಕಾರ್ಯಕಲಾಪದ ಅಭಿವೃದ್ಧಿ ಚಟುವಟಿಕೆಗಳ ಹೃದಯವಾಗಿ ಈ ಭಕ್ತ ಭಕ್ತೆಯರೆಲ್ಲರಿಗೂ ದಾರಿ ತೋರಿಸಿ ಕೊಡುತ್ತಿ ದ್ದಾರೆ. ಈ ಕ್ಷೇತ್ರದಲ್ಲಿ ಜಾತ್ರೆಯು ಪ್ರತಿವರ್ಷವೂ ಚೈತ್ರ ಶುದ್ಧ ಸಪ್ತಮಿ ಯಲ್ಲಿ ರಥೋತ್ಸವಾದಿಗಳ ಸಹಿತ ಬಹು ವಿಜೃಂಭಣೆಯಿಂದ ನಡೆಯುತ್ತದೆ. ಹರಕೆಹೊತ್ತ ಹಲವಾರು ಮಂದಿಗಳು ಈ ವೇಳೆಯಲ್ಲಿ ಇಲ್ಲಿಗೆ ಬಂದು ತಮ್ಮ ಅಭೀಷ್ಟವನ್ನು ನೆರವೇರಿಸಿಕೊಳ್ಳುತ್ತಾರೆ. ಶ್ರಾವಣಮಾಸದಿಂದ ಸುಮಾರು ನಾಲ್ಕೈದು ತಿಂಗಳು ಭಕ್ತರು ತಂಡ ತಂಡವಾಗಿ ಬಂದು ವಿಶೇಷ ಪೂಜೆ ಯನ್ನು ಸಲ್ಲಿಸುತ್ತಾರೆ. ಪ್ರತಿ ಸೋಮವಾರ ಸುಮಾರು ನೂರು ಮಂದಿ ಜನರು ಇಲ್ಲಿಗೆ ಬಂದು ಪೂಜೆ ಮುಗಿಸಿಕೊಂಡು ಹೋಗುತ್ತಾರೆ. ಇಲ್ಲಿ ದಾಸೋಹ ಕಾರ್ಯವು ನಿತ್ಯವೂ ನಡೆಯುತ್ತದೆ. ಇಂತಹ ಪುಣ್ಯಕ್ಷೇತ್ರ ವಾದ ಮಹಾಂತೇಶನ ಗದ್ದುಗೆ ದರ್ಶನ ಮಾಡಿದ ನಾವು ಮಹಾಂತನ ಪ್ರಭಾವದಿಂದ ಆನಂದ ತುಲ್ಯರಾಗಿ ಹಿಂದಿರುಗಿದೆವು. ಶರಣರ ಜೀವನವೇ ನಮಗೆ ಪರಮ ಪಾವನ.

ತೆರಹಿಲ್ಲದ ನಡೆ. ತೆರಹಿಲ್ಲದ ನುಡಿ,
ತೆರಹಿಲ್ಲದ ಸಂಭಾಷಣೆಯು ಸುಖವು
ತೆರಹಿಲ್ಲದ ನಂಬಿದ ಸ್ವಾನುಭವ ಸುಖ
ತೆರಹಿಲ್ಲದ ಮಹಿಮೆ, ತೆರಹಿಲ್ಲದ ವಿಚಾರ
ಕೂಡಲಸಂಗಮದೇವ ನಿಮ್ಮ ಶರಣಂಗೆ.

## ಸುಖದ ನೆಲೆವೀಡು.

(ಲೇಖಕ: — ಶ್ರೀ ಸಿಂಪಿ ಲಿಂಗಣ್ಣ, ಚಡಚಣ.)



[ ಶ್ರೀರಾಮತೀರ್ಥಸ್ವಾಮಿಗಳ ಉಪನ್ಯಾಸ. ]

ಇರೋಪದ ರಾಷ್ಟ್ರಗಳು ಪರರಾಷ್ಟ್ರಗಳನ್ನು ಗೆಲ್ಲುವದಕ್ಕಾಗಿ ಸೈನ್ಯ ಸಮೇತವಾಗಿ ದಾಳಿ ಮಾಡುತ್ತವೆ. ಆ ಬಗ್ಗೆ ರಾಮನು ಅವಕ್ಕೆ ಎಷ್ಟೂ ದೋಷ ಕೊಡುವದಿಲ್ಲ. ಯಾಕಂದರೆ ರಾಷ್ಟ್ರಪ್ರಗತಿಗೆ ಕೆಲವೊಂದು ಕಾಲ ದಾಳಿಯ ಅವಶ್ಯಕತೆಯೂ ಇರುತ್ತದೆ. ಪ್ರಗತಿಗೆ ಅದೊಂದು ಮೆಟ್ಟಿಲು. ಹಿಂದುಸ್ತಾನವು ಆ ಮೆಟ್ಟಿಲನ್ನು ದಾಟಿಹೋಗಿದೆ. ಭಾರತ ವರ್ಷವು ಅತಿ ಪ್ರಾಚೀನ ರಾಷ್ಟ್ರ. ಅದು ಸಂಪತ್ತಿನೊಳಗಿನ ತಥ್ಯವನ್ನು ಕಂಡಿದೆ. ಸಂಪತ್ತಿಯ 'ಮಳಲೊಟ್ಟಿ' ಯು ಅದಕ್ಕೆ ಕಾಣಿಸಿಕೊಂಡಿದೆ. ಇಂದು ಯಾವ ರಾಷ್ಟ್ರಗಳು ವೈಭವ-ಐಶ್ವರ್ಯಗಳ ಅನಿವಾರ್ಯ ಲಾಲಸೆಯಿಂದ ತಡವರಿಸುತ್ತಿರುವವೋ ಅವುಗಳಿಗೆ ಸಹ ಇದೇ ಅನುಭವವು ಬರುವದು. ಸರ್ವ ರಾಷ್ಟ್ರಗಳು ಇದೇತಕ್ಕಾಗಿ ಯುದ್ಧಸಿದ್ಧತೆಯಲ್ಲಿವೆ ? ಪರರಾಷ್ಟ್ರಗಳ ಮೇಲೆ ಏರಿಹೋಗಿ ಅವು ಗಳಿಸಬೇಕಾದುದೇನು ? ಸುಖ, ಆನಂದ ಹಾಗೂ ಸಮಾಧಾನಗಳನ್ನೇ ಅಲ್ಲವೇ ? ಕೆಲವರು ನಮಗೆ ಸುಖ ಬೇಡ, ಜ್ಞಾನ ಬೇಕಾಗಿದೆ ಎಂದು ಹೇಳಿದರೆ ಬೇರೆ ಕೆಲವರು ನಮಗೆ ಸುಖ ಬೇಡ. ಕರ್ಮ ಬೇಕೆಂದು ಹೇಳುವರು. ಮಾತೇನೋ ನಿಜವೇ. ಆದರೆ ಸಾಧಾರಣವಾಗಿ ಮನುಷ್ಯನ ಮನವನ್ನು ಹಿಂಜಿ ನೋಡಿದರೆ, ಹೇಳಿಕೇಳಿ ಇಲ್ಲವೆ, ತಿಳಿಯದೆ ಅದು ಸುಖದ ಮಾರ್ಗವನ್ನೇ ಹಿಡಿದಿದೆಯೆಂದು ಕಂಡುಬರುವದು.

ಈಗ, ಸುಖ ಇರುವುದಾದರೆ ಎಲ್ಲಿ–ನೋಡುವಾ. ಅದೇನು ಅರಮನೆ ಯಲ್ಲಿರುವದೋ, ಗುಡಿಸಲಿನಲ್ಲಿರುವವೋ ? ತರುಣಿಯ ಲಾವಣ್ಯದಲ್ಲಿರು ವದೋ ಇಲ್ಲವೆ ದುಡ್ಡು ಕೊಟ್ಟರೆ ಅದು ಸಿಗುವದೋ ? ಸುಖದ ನಿವಾಸ ಸ್ಥಾನ ಯಾವುದು? ಸುಖವೆನ್ನುವುದರ ಇತಿಹಾಸವೇ ಇದೆ. ಇಂದು ಉಗಿ ವಿದ್ಯುತ್ತುಗಳು ದಿಕ್ಕಾಲಗಳ ಸೀಮೆಯುಷ್ಟೇ ತೊಡೆದುಹಾಕಿವೆ, ಹಾಗೂ ಪ್ರವಾಸ ಸಾಧನಗಳನ್ನು ಸುಲಭಗೊಳಿಸಿವೆ. ಅನೇಕ ಜನರು ಈಗ ಬಹಳಷ್ಟು ಪ್ರವಾಸ ಮಾಡತೊಡಗಿದ್ದಾರೆ. ಪ್ರವಾಸವನ್ನು ವರ್ಣಿಸುವ ಪುಸ್ತಕಗಳೂ ಈಗ ವಿಪುಲವಾಗಿವೆ. ಹೆರವರೊಂದಿಗೆ ಸುಖವು ಸಹ ಪ್ರವಾಸ ಮಾಡತೊ ಡಗಿದೆ. ಸುಖದ ಪ್ರವಾಸವೃತ್ತಾಂತವನ್ನಿಷ್ಟು ಕೇಳಿರಿ.

ಚಿಕ್ಕಂದಿನಲ್ಲಿ ಮೊದಲು ತಾಯಿಯ ಹಾಲು ಕುಡಿಯುವಾಗ ನಮಗೆ ಅದಾವ ಸುಖವಾಗುತ್ತದೆ–ಎನ್ನುವಲ್ಲಿಂದ ಆರಂಭಿಸೋಣ. ಎಳೆ ಮಗುವಿಗೆ ಸುಖನಿಧಾನವೆಂದರೆ ತನಗೆ ಹಾಲುಕೊಡುವ ತಾಯಿಯು ಎದೆಯೇ ಸರಿ. ಸುಖದ ಪ್ರವಾಸದೊಳಗೆ ಇದು ಮೊದಲನೇ ನಿಲ್ದಾಣ. ತಾಯಿಯ ಸೆರಗಿ ನಲ್ಲಿ ಅವಿತಿರುವುದೆಂದರೆ ಮಗುವಿಗೆ ಅದೆಷ್ಟು ಆನಂದ! ಆ ಸುಖವನ್ನು ಳಿದು ಬೇರೆ ಪದಾರ್ಥಗಳೆಂದರೆ ಪುಸ್ತಕ, ಸಂಪತ್ತು, ಪಕ್ವಾನ್ನ ಮೊದ ಲಾದವುಗಳು ಅದಕ್ಕೆ ತೀರ ತುಚ್ಛವೆನಿಸುತ್ತವೆ.

ಎರಡನೇ ವರುಷ ಕಳೆಯಿತೋ ಇಲ್ಲವೋ ಅದೇ ಸುಖವು ಅಲ್ಲಿಂದ ಕಾಲ್ತೆಗೆದು ಬೇರೊಂದು ನೆಲೆವೀಡಿಗೆ ಬರುತ್ತದೆ. ಆಗ ಅದಕ್ಕೆ ಗಾಡಿ, ಎತ್ತು ಮೊದಲಾದ ಆಟಿಗೆಗಳಲ್ಲಿಯೇ ಸುಖ ತೋರಹತ್ತುವದು. ಆ ಸ್ಥಿತಿ ಯಲ್ಲಿ ಮಗುವಿಗೆ ತಾಯಿಗಿಂತ ಆಟಿಗಳೇ ಹೆಚ್ಚು ಸೇರುತ್ತವೆ. ಒಮ್ಮೊಮ್ಮೆ ಆಟಿಗೆಯ ಸುಖವಾಗಿ ಮಗು ತನ್ನ ಪ್ರೇಮಳ ತಾಯಿಯೊಡನೆ ಸಹ ಜಗ ಳಾಡುತ್ತದೆ.

ಕೆಲವು ಕಾಲ ಗತಿಸಿದ ಬಳಿಕ ಆ ಆಟಿಗಳೇ ಅವನಿಗೆ ಬೇಡವಾಗು ತ್ತವೆ. ಸುಖವು ಇನ್ನೊಂದು ಮೆಟ್ಟಲು ದಾಟಿರುತ್ತದೆ. ಆಗಲೆ ಬಾಲಕ ನಿಗೆ ಪುಸ್ತಕಗಳು ಸೇರತೊಡಗುತ್ತವೆ. ಚುರುಕು ವಿಷಯದ ಪುಸ್ತಕಗಳ ಹೊರತು ಅವನಿಗೆ ಇನ್ನೇನೂ ಕಾಣಿಸುವದಿಲ್ಲ. ಆದರೆ ಸುಖವು ಅಲ್ಲಿಯೂ ನಿಲ್ಲಲಾರದು. ಅದು ಮುಂದೆ ಸಾಗುತ್ತದೆ. ಈಗ ನಮ್ಮ ಬಾಲಕನು ಕಾಲೇಜು ಸೇರುತ್ತಾನೆ. ಅಲ್ಲಿ ಅವನಿಗೆ ಶಾಸ್ತ್ರ, ತತ್ವಜ್ಞಾನಗಳನ್ನು ಕುಂತ

ಗ್ರಂಥಗಳೇ ಸುಖಕರವೆನಿಸುತ್ತವೆ. ಆ ಪುಸ್ತಕಗಳನ್ನು ಕೆಲವೊಂದು ದಿವಸ ಓದಿದನೋ ಇಲ್ಲವೋ ಅವನನ್ನು ವಿಶ್ವವಿದ್ಯಾಲಯದೊಳಗಿನ ಪದವಿ, ಬಹುಮಾನಗಳು ಎಳೆಯ ತೊಡಗುವವು. ಆ ಮನ್ನಣೆಯಲ್ಲಿಯೇ ಸುಖವಿದೆಯೆಂದು ತಿಳಿಯುತ್ತಾನೆ. ಬಹುಮಾನದೊಂದಿಗೆ ಸರ್ವಪರೀಕ್ಷೆಗಳನ್ನು ತೇರ್ಗಡೆ ಹೊಂದಿದ ಬಳಿಕ ಒಂದಾನೊಂದು ದೊಡ್ಡ ನೌಕರಿಯನ್ನು ಹಿಡಿಯುತ್ತಾನೆ. ಆಗ ಅವನಿಗೆ ಸುಖವೆಂದರೆ ದುಡ್ಡು, ಸಂಪತ್ತು ಇವೇ ಆಗಿಬಿಡುತ್ತವೆ. ಅತನು ತುಂಬ ಹಣಗಳಿಸಿ ಶ್ರೀಮಂತನಾಗಬೇಕಿರುತ್ತದೆ. ಸಾಕಷ್ಟು ದುಡ್ಡು ಸಂಗ್ರಹವಾದ ಮೇಲೆ ಅತನ ಮನಸ್ಸು ಎಲ್ಲಿಗೆ ಹೋಗುತ್ತದೆಂಬುದನ್ನು ಹೇಳುವುದೇ ಬೇಡ. ಆಗ ಆ ತರುಣನಿಗೆ ಒಂಟಿಯಾಗಿ ಇರಬಾರದೆಂದು ಅನಿಸುತ್ತದೆ. ಸಂಸಾರದಲ್ಲಿ ಅವನಿಗೊಬ್ಬ ಸಂಗಡಿಗಳು ಬೇಕೆನಿಸುತ್ತದೆ. ಇಷ್ಟೊಂದು ಕಷ್ಟದಿಂದ ದೊರಕಿಸಿದ ಹಣವನ್ನು ಆಕೆಯ ಸಲುವಾಗಿ ಈಗಿನಂತೆ ಖರ್ಚು ಮಾಡುವುದಕ್ಕೆ ಆತನು ಸಿದ್ಧನಾಗುತ್ತಾನೆ. ತಾಯಿಯ ಹಾಲಿನ ಸುಖ ಹೋಯಿತು, ಆಟಿಗೆಯಲ್ಲಿ ಬೇಸರ ಬಂತು, ಕಥೆಯ ಪುಸ್ತಕಗಳು ಹುಡಿ ತಿನ್ನುತ್ತ ಬಿದ್ದವು. ಕೌಟುಂಬಿಕ ಸುಖದ ಸ್ವಾರಸ್ಯವನ್ನರಿತುಕೊಳ್ಳುವಸಲುವಾಗಿ ಕಾದಂಬರಿಗಳ ಓದುಮಾತ್ರ ಆಗಾಗ ಸಾಗಿರುತ್ತದೆ. ಈಗ ಸುಖದ ಸ್ಥಾನವಾಗಿರುವ ರಮಣಿಯ ಕ್ಷುಲ್ಲಕ ತೃಪ್ತಿಗಾಗಿ ಬೆವರು ಸುರಿಸಿ ಗಳಿಸಿದ ಹಣವನ್ನು ಹುಡಿಮಾಡಿ ಹಾರಿಸಿಬಿಡುತ್ತಾನೆ. ಈ ಬಗೆಯಾಗಿ ಕೆಲವು ದಿವಸ ಸಾಗುವಷ್ಟರಲ್ಲಿ ಆ ಸುಖವು ಇನ್ನೊಂದಿಷ್ಟು ದೂರದಲ್ಲಿದೆಯೆಂದು ತೋರುತ್ತದೆ. ಹಾಗೂ ಆ ಪತಿಪತ್ನಿಯರ ಜೀವವು ಪುತ್ರಪ್ರಾಪ್ತಿಯ ಸಲುವಾಗಿ ತಳಮಳಿಸುತ್ತದೆ. ತಮ್ಮ ಮನೆಗೊಪ್ಪುವ ಪುತ್ರರತ್ನವು ಪ್ರಾಪ್ತವಾಗಬೇಕೆಂದು ಆ ಜೊತೆಗಾರರು ಮಂತ್ರ.ತಂತ್ರ ವ್ರತ-ನೋಂಪಿ ಮೊದಲಾದವುಗಳಿಗೆ ತೊಡಗುತ್ತಾರೆ. ಅಷ್ಟು ಕಷ್ಟಬಟ್ಟ ಅವರಿಗೆ ಒಬ್ಬ ಮಗನು ಹುಟ್ಟಿಬಂದನೆಂದರೆ ಸುಖತ ಹೊಸ ನಿಲ್ದಾಣಬರುತ್ತದೆ ಆಗ ಅವರಿಗೆ ಸ್ವರ್ಗವು ಇಬ್ಬೆರಳೇ ಉಳಿದಂತೆ ತೋರುತ್ತದೆ. ಪುತ್ರಮುಖವನ್ನು ನೋಡುತ್ತಲೆ ಅವರ ಸುಖವು ಪರಮಾವಧಿಯನ್ನು ತಲಪುತ್ತದೆ. ಮುಂದೆ ಮಗನು ಬೆಳೆಯುತ್ತ ಹೋದಂತೆ ತಂದೆಯ ಆ ಸುಖವು ಕಡಿಮೆ ಕಡಿಮೆ ಆಗುತ್ತ ಹೋಗುತ್ತದೆ.

ತಾಯಿಯ ಹಾಲು, ಆಟಿಕೆ, ಪುಸ್ತಕ, ದುಡ್ಡು, ಹೆಂಡತಿ, ಮಗು ಮೊದಲಾದ ವಸ್ತುಗಳಲ್ಲಿ ಸುಖವು ನಿಜವಾಗಿಯೂ ಇರುವದೇ ? ಇದನ್ನು

ನೀವು ವಿಚಾರಿಸಿರಿ. ಸುಖವು ಸೂರ್ಯಪ್ರಕಾಶದಂತಿದೆ. ಸೂರ್ಯಪ್ರಕಾಶವು ಸುಖದಂತೆಯೇ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಪ್ರವಾಸ ಮಾಡುತ್ತದೆ. ಹಿಂದುಸ್ತಾನದಿಂದ ಇರೋಪ, ಅಲ್ಲಿಂದ ಅಮೇರಿಕೆ, ಬಳಿಕ ಜಪಾನ ಎನ್ನುತ್ತ ಅದು ತಿರುಗುತ್ತಿರುತ್ತದೆ. ಸೂರ್ಯನು ನಿಂತಿರುವಂತೆ ಆತನ ಕಿರಣಗಳು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಜಿಗಿಯುತ್ತಿರುವದನ್ನು ನಾವು ಕಣ್ಣಾರೆ ಕಾಣುತ್ತೇವೆ. ಸೂರ್ಯ ಪ್ರಕಾಶವು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾಗಿದರೂ ಅವುಗಳಲ್ಲಿ ಯಾವ ಸ್ಥಳವೂ ಅದರ ನೆಲೆವೀಡು ಆಗಲಾರದು. ಅಂದರೆ ಸೂರ್ಯ ಪ್ರಕಾಶದ ನೆಲೆವೀಡು ಸೂರ್ಯನೇ ಅಹುದು. ಸೂರ್ಯ ಪ್ರಕಾಶದಂತೆ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾಗುವ ಸುಖದ ನೆಲೆವೀಡು ಯಾವುದು ? ಆ ಸುಖದ ಉಗಮ ಸ್ಥಾನ ಎಲ್ಲಿ ? ಇದನ್ನು ನೋಡುವ ಸುಖದ ಸೂರ್ಯನನ್ನು ಹುಡುಕೋಣ.

ಉದಾಹರಣೆಗಾಗಿ ಕುಟುಂಬವತ್ಸಲನಾದ ಒಬ್ಬ ಗೃಹಸ್ಥನನ್ನು ತೆಗೆದುಕೊಳ್ಳೋಣ. ತನ್ನ ಕಾರ್ಯಾಲಯದಲ್ಲಿ ಕೆಲಸ ಮಾಡುತ್ತಿರುವಾಗ ಆತನಿಗೆ ಒಮ್ಮೆಲೆ ಸಮಾಚಾರ ಬಂದಿತು. ತನ್ನ ಮನೆಗೆ ಬೆಂಕಿ ಹತ್ತಿದೆ. ಆ ಕ್ಷಣದಲ್ಲಿ ಕೈಯೊಳಗಿನ ಕೆಲಸವನ್ನು ಅಲ್ಲಿಯದಲ್ಲಿಯೇ ಒಗೆದು ಅವನು ಒಮ್ಮೆಲೆ ನೇರವಾಗಿ ಮನೆಯ ಕಡೆಗೆ ಹೊರಡುತ್ತಾನೆ. ಹಾದಿಯಲ್ಲಿ ಯಾರು ಯಾರು ಭೆಟ್ಟಿಯಾದರೆಂಬುದು ಅವನಿಗೆ ಅರಿವೇ ಇರುವದಿಲ್ಲ. ಆತನ ಲಕ್ಷವೆಲ್ಲ ಮನೆಯ ಕಡೆಗೆ ತೊಡಗಿರುತ್ತದೆ. ಮನೆಗೆ ಹೋಗಿ ನೋಡಿದರೆ ಆ ಮನೆ ಧಗಧಗಿಸುತ್ತ ಜ್ವಾಲೆ ಜ್ವಾಲೆಯಾಗಿ ಸಿಡಿಯುತ್ತಿದೆ. ಮನೆಯ ಮಂಡಲಿಯೆಲ್ಲ ಬೀದಿಯಲ್ಲಿ ನಿಂತು ಅರಚುತ್ತಿದೆ, ಎಂದು ಅವನಿಗೆ ಕಂಡು ಬರುತ್ತದೆ. ಮುಂದೆ ಕ್ಷಣಾರ್ಧದಲ್ಲಿ ಆತನು ಸರ್ವರ ಮುಖಲಕ್ಷಣವನ್ನು ನೋಡತೊಡಗುತ್ತಾನೆ. ಆದರೆ ಹೊರಬೀಳುವ ಅವಸರದಲ್ಲಿ ಬಾಲಕನು ಮರೆತು ಒಳಗೇ ಉಳಿದಿರುತ್ತಾನೆ. ಆಗ ಆ ವೇಳೆಯ ಆಕ್ರೋಶವನ್ನು ವಿಚಾರಿಸುವದೆಂತು ? ಮನೆಯ ಮಂಡಲಿಯೂ ಯಜಮಾನನೂ ಕಂಡವರನ್ನೆಲ್ಲ "ನಮ್ಮ ಬಾಲಕನನ್ನು ಹೇಗಾದರೂ ಮಾಡಿ ಉಳಿಸಿರಿ. ಆತನನ್ನು ಬೆಂಕಿಯಿಂದ ಹೇಗಾದರೂ ಮಾಡಿ ಉಳಿಸಿರಿ. ಆತನನ್ನು ಬೆಂಕಿಯಿಂದ ಕಡೆಗೆ ತೆಗೆಯಿರಿ ನೀವು ಬೇಡಿದಷ್ಟು ಹಣ ಕೊಡುವೆವು. ನಮ್ಮ ಸರ್ವ ಸಂಪತ್ತನ್ನೇ ಕೊಡುವೆವು." ಎಂದು ಕೂಗಾಡಿ ಹಲಬುತ್ತ ಬೇಡಿಕೊಳ್ಳತೊಡಗುವರು. ತನ್ನ ಮಗುವಿನ ಸಲುವಾಗಿ ಅವನು ಎಲ್ಲವನ್ನೂ ತ್ಯಾಗ ಮಾಡು

ವದಕ್ಕೆ ಸಿದ್ಧನಾಗುತ್ತಾನೆ. ಅಂದರೆ ಮಗುವೇ ಸುಖದ ನಿಧಾನವೆಂದು ನಿಶ್ಚಯವಾಗುವದಿಲ್ಲವೇ ? ನಿಲ್ಲಿರಿ. ಮಗುವಿನ ಸಲುವಾಗಿ ಎಲ್ಲವನ್ನೂ ತ್ಯಾಗ ಮಾಡಲು ಅವನು ಸಿದ್ಧನಾಗುತ್ತಾನೆ. ಆದರೆ ಬೆಂಕಿಯಲ್ಲಿ ನುಗ್ಗಿ ತನ್ನ ಜೀವವನ್ನು ಕುತ್ತಿನಲ್ಲಿ ಹಾಕುವದಕ್ಕೆ ಅವರಲ್ಲಿ ಯಾರು ಸಿದ್ಧರಾಗುತ್ತಾರೆ ? ಯಾರೂ ಇಲ್ಲ. ಹಾಗಾದರೆ ಮಗುವಿಗಿಂತ ಹೆಚ್ಚು ಪ್ರೀತಿಯು ಬೇರೇನಾದರೂ ಪದಾರ್ಥವಿರಲಿಕ್ಕೆ ಬೇಕು; ಮತ್ತು ಪದಾರ್ಥವು ತನ್ನ ಸರ್ವ ಸುಖದ ಕೇಂದ್ರವಾಗಿರಲಿಕ್ಕೆ ಬೇಕು. ಆ ಪದಾರ್ಥವೆಂದರೆ, ನಮ್ಮ ಆತ್ಮವೇ ಸರಿ.

ಕೊನೆಗೆ ನಮಗೆ ತಿಳಿದುಬರುವದೇನಂದರೆ- ಸುಖದ ಪರಮಾವಧಿಯೆನಿಸಿದ ಆ ಮಗುವಿನಲ್ಲಿ ಅದಾವ ಸುಖವೂ ಇಲ್ಲ. ಆ ಮಗುವು ಸುಖದ ಸ್ಥಾನವಾಗಿರುವದಕ್ಕೆ ಕಾರಣವೇನು ? ನಮ್ಮ ಆತ್ಮದ ಪ್ರಕಾಶವು ಮಗುವಿನ ಮೇಲೆ ಬಿದ್ದು ಅದು ಪ್ರಿಯವಾಯಿತು. ಆ ಪ್ರಕಾಶವು ಆ ಮಗುವಿನಲ್ಲಿರದೆ ಅದು ಸ್ವಾತ್ಮದಿಂದ ಹೊರಬಿದ್ದಿರುತ್ತದೆ. ಅದು ಮಗುವಿನಲ್ಲಿದ್ದರೆ ಮಗುವು ಯಾವತ್ಕಾಲವೂ ಪ್ರಿಯವಾಗುತ್ತಿತ್ತು. ಸರ್ವ ಸುಖಗಳು ಆತ್ಮದಿಂದಲೇ ಉದ್ಭವಿಸುತ್ತದೆ.

ಈಗ ಸುಖದ ಉಗಮದ ಕಡೆ ನಡೆದೆವು. ಯಾವದೊಂದು ಪದಾರ್ಥದ ಮೇಲೆ ನಮ್ಮ ಪ್ರೇಮವಿರುವದು ಸ್ವಂತಕ್ಕಾಗಿ ಇರದೆ, ಆ ಪದಾರ್ಥದ ಸಲುವಾಗಿಯೇ ಅದೆಯೆಂದು ಅನೇಕರು ತಿಳಕೊಳ್ಳುತ್ತಾರೆ. ಆದರೆ ಅದು ಸುಳ್ಳು.

ಗಂಡ ಹೆಂಡಿರು ಪರಸ್ಪರ ಹಿತವನ್ನು ನೋಡದಂತಾದರೆ ಅವರು ಒಬ್ಬರನ್ನೊಬ್ಬರು ಅಗಲಿ ಬೇರೆ ಬೇರೆಯಾಗುತ್ತಾರೆ. ಸಂಪತ್ತಿಯು ಉಪಯೋಗಕ್ಕೆ ಬೀಳದಂತಾದರೆ ಅದನ್ನು ಸಹ ಒಗೆದು ಬಿಟ್ಟು ಹೋಗುತ್ತಾರೆ. ರೋಮದ ಚಕ್ರವರ್ತಿಯಾದ ನೀರೋ ಈತನ ಕಥೆ ಹೀಗೆಯೇ ಇರುತ್ತದೆ. ಒಂದು ಪ್ರಚಂಡ ಚಮತ್ಕಾರವನ್ನು ನೋಡುವ ತನ್ನ ಮನದಿಚ್ಛೆಯನ್ನು ಪೂರಯಿಸಿಕೊಳ್ಳುವದಕ್ಕಾಗಿ ಆತನು ತನ್ನ ರಾಜಧಾನಿಗೆ ಅಂದರೆ ಜಗತ್ಪ್ರಖ್ಯಾತವಾದ ರೋಮ ನಗರಿಗೆ ಬೆಂಕಿಯಿಡಿಸಿದನು. ಅಲ್ಲದೆ ತಾನು ಬಹು ಆನಂದದಿಂದ ಒಂದು ದಿನ್ನೆಯ ಮೇಲೆ ಸಾರಂಗಿಯನ್ನು ಬಾರಿಸುತ್ತ ಸೊಗಸುಪಡುತ್ತ ಕುಳಿತುಕೊಂಡನು. ತಲೆಯ ಮೇಲೆ ನೀರು ಹಾರತೊಡ

ಗಿದಾಗ ತನ್ನ ಜೀವವನ್ನು ಉಳಿಸಿಕೊಳ್ಳುವದಕ್ಕಾಗಿ ಹೊಟ್ಟೆಯ ಕಂದಿನನ್ನು ಕಾಲಕೆಳಗೆ ಹಾಕುವ ಮಂಗನ ಕಥೆಯು ಎಲ್ಲರಿಗೂ ಗೊತ್ತಿದೆ. ನಮ್ಮ ಹಿತವು ಹಾಳಾಗುವದನ್ನು ನೋಡುತ್ತಲೇ ನಾವು ಇನ್ನೆಲ್ಲ ಸಂಗತಿಗಳನ್ನೂ ತ್ಯಜಿಸುತ್ತೇವೆ.

ಸುಖದ ಸ್ಥಾನ ಇಲ್ಲವೆ ಉಗಮ ನಮ್ಮಲ್ಲಿಯೆ ಎಲ್ಲಿಯೋ ಅದೆಯೆಂದು ಸಿದ್ಧವಾಯಿತು. ಆದರೆ ನಮ್ಮಲ್ಲಿಯೇ ಎಂದರೆ ಎಲ್ಲಿ ? ಕೈಯಲ್ಲಿಯೋ, ಕಾಲಲ್ಲಿಯೋ ? ಕಣ್ಣಲ್ಲಿಯೋ-ಮೂಗಿನಲ್ಲಿಯೋ ? ಅವುಗಳಲ್ಲಿ ಮಾತ್ರ ಎಲ್ಲಿಯೂ ಇಲ್ಲ. ಯಾಕಂದರೆ ಅವುಗಳಿಗಿಂತ ಹೆಚ್ಚು ಪ್ರಿಯವಾದ ಬೇರೆ ಪದಾರ್ಥಗಳೆಷ್ಟೋ ಅವೆ. ಹಾಗಾದರೆ ಮನದಲ್ಲಿ ಇಲ್ಲವೆ ಬುದ್ಧಿಯಲ್ಲಿ ಅದೆಯೆನ್ನಬೇಕೆಂದರೆ ಅಲ್ಲಿಯೂ ಇಲ್ಲ. ಕಾರಣವನ್ನು ನಾವು ಬಲ್ಲೆವು. ಏನೆಂದರೆ— ಮರಣಕ್ಕಿಂತ ಬುದ್ಧಿಹೀನವಾದ ದುರ್ದೈವಿ ಜೀವಿತವು ಮನುಷ್ಯನಿಗೆ ಪ್ರಿಯವಾಗಿರುತ್ತದೆ. ಹುಚ್ಚನೂ ಸಹ ಬದುಕಬೇಕೆಂದೇ ಬಗೆಯುತ್ತಾನೆ. ಹಾಗಾದರೆ ಸುಖದ ಸ್ಥಾನವೆಂದರೆ ಪ್ರಾಣ. ಆದರೆ ಅಲ್ಲಿ ಸಹ ಇಲ್ಲವೆಂದು ವೇದಾಂತ ಹೇಳುತ್ತದೆ. ನಿಜವಾದ ಸುಖವು ಸ್ವಾನಂದ ಸಾಮ್ರಾಜ್ಯವು ನಮ್ಮ ಪ್ರಾಣಕ್ಕಿಂತಲೂ ಉಚ್ಚ ವಸ್ತುವಿನಲ್ಲಿದೆ. ಹಾಗಾದರೆ ಅದು ಎಲ್ಲಿದೆ ?

ಅಂತ್ಯಕಾಲದಲ್ಲಿ ಪ್ರಾಣಾಂತಿಕ ವೇದನೆಯಾಗುತ್ತಿರುವಾಗ ದೇವರೇ ಓ ದೇವರೇ ನನಗೆ ಜೀವ ಬೇಡವಾಗಿದೆ. ನನ್ನ ಪ್ರಾಣವು ಯಾವಾಗ ಹೊರಟು ಹೋಗುವದು ? ಎಂದು ಜನರು ಅನ್ನುತ್ತಿರುವದನ್ನು ನಾವು ನೋಡುತ್ತೇವೆ. ಒಬ್ಬ ಮನುಷ್ಯನು ಸತ್ತಾಗ ಪಾಶ್ಚಾತ್ಯ ಜನರು—'ಆತ ತನ್ನ ಆತ್ಮವನ್ನು ತೆಗೆದುಕೊಟ್ಟ'ನೆಂದು ಹೇಳುತ್ತಾರೆ. ನಾವು ಹೇಳುತ್ತೇವೆ 'ಆತನು ದೇಹವಿಟ್ಟನು' ಎಂದು. ಇಷ್ಟರಲ್ಲಿಯೇ ಭೇದವು ಕಂಡು ಬರುತ್ತದೆ. ದೇಹವೆಂದರೇ ನಾವು, ಆತ್ಮವು ಅದರಲ್ಲಿ ಬಂದು ನೆಲೆಸಿದ ಬೇರೊಂದು ವಸ್ತು ಎಂದು ಪಾಶ್ಚಾತ್ಯರ ತಿಳುವಳಿಕೆ. ನಮಗೆ ದೇಹವೆಂದರೆ ನಮ್ಮಿಂದ ತೀರ ಭಿನ್ನವಾದ ವಸ್ತುವೆಂದೂ, ಆತ್ಮವು ನಿತ್ಯ ಸತ್ಯವೆಂದೂ ತೋರುತ್ತದೆ. ದೇಹವು ಬಿದ್ದು ಹೋದರೆ ಆತ್ಮವು ಸತ್ತಿತೆಂದು ನಾವು ತಿಳಿಯುವದಿಲ್ಲ. ದೇಹವು ಬದಲಾಗುತ್ತದೆ. ಆದರೆ ಆತ್ಮವು ಸಾಯುವದಿಲ್ಲ.

ಪ್ರಾಣಕ್ಕಿಂತ ಶ್ರೇಷ್ಠವಾದ ಏನೋ ಒಂದು ನಮಗೆ ದೊರಕಿತು. ನಮ್ಮ ಜೀವ, ನಮ್ಮ ಪ್ರಾಣ ಎಂದು ನಾವು ಮಾತನಾಡುವಾಗ ಅನ್ನು

ತ್ತೇವೆ. ಅಂದರೆ ಪ್ರಾಣ ಇಲ್ಲವೆ ಜೀವದ ಮೇಲೆ ಸ್ವಾಮಿತ್ವ ನಡೆಸುವ ಹಾಗೂ ಪ್ರಾಣಕ್ಕಿಂತ ಪ್ರಿಯವಾದ 'ನಾನು' ಎನ್ನುವವರು ಯಾರೋ ಇದ್ದಾರೆ. ಆ ನನ್ನನ ಸಲುವಾಗಿ ನಾವು ಪ್ರಾಣವನ್ನು ಕೊಡಲೂ ಸಹ ಸಿದ್ಧರಾಗುತ್ತೇವೆ. ಅಂದರೆ ಅದೇ ಆನಂದದ ತವರು ಮನೆಯಿರಲಿಕ್ಕೇ ಬೇಕು. ಬುದ್ಧಿಗಿಂತ ಪ್ರಾಣವು ಹೆಚ್ಚು ಪ್ರಿಯವಾಗಿರುತ್ತದೆ. ಯಾಕಂದರೆ ಪ್ರಾಣವು ಬುದ್ಧಿಗಿಂತ ಆತ್ಮನಿಗೆ ಹೆಚ್ಚು ಸಮೀಪಿನಲ್ಲಿದೆ. ಕಣ್ಣಿನಂತಹ ಇಂದ್ರಿಯಗಳಿಗಿಂತ ಬುದ್ಧಿ ಹೆಚ್ಚು ಪ್ರಿಯವಾಗಿರುತ್ತದೆ. ಯಾಕಂದರೆ ಬುದ್ಧಿಯು ಇಂದ್ರಿಯಗಳ ಮಾರ್ಗದಿಂದ ಆತ್ಮನಿಗೆ ಹೆಚ್ಚು ಸಮೀಪದಲ್ಲದೆ. ಒಬ್ಬ ಮನುಷ್ಯನಿಗ ತನ್ನ ಮಗ ಇಲ್ಲವೆ ತಾನು ಬರೆದ ಪುಸ್ತಕವು ಸರ್ವಶ್ರೇಷ್ಠವಾಗಿಯೂ ಸುಂದರವಾಗಿಯೂ ತೋರುತ್ತದೆ ಯಾಕಂದರೆ ಆತನು ಆ ಪದಾರ್ಥಕ್ಕೆ ತನ್ನ ಆತ್ಮದ ಮೆರಗು ತೊಡಿಸಿ ಸುಂದರಗೊಳಿಸುತ್ತಾನೆ. ಅಂತೆಯೇ ವೇದಾಂತವು ಹೇಳುವದೇನಂದರೆ— ಸುಖದ ರಾಜಧಾನಿ ನಮ್ಮಲ್ಲಿಯೇ ಇದೆ. ವಸ್ತುಸ್ಥಿತಿಯು ಹೀಗಿದ್ದರೂ ಸುಖವನ್ನು ಹೊರಗೆ ಶೋಧಿಸುವದು ಅದೆಷ್ಟು ಹುಚ್ಚತನದ್ದು ?

ಒಂದು ಚಿಕ್ಕ ಮಗುವು ಅಂಬೆಗಾಲಿಟ್ಟು ಆಡುತ್ತಿರುವಾಗ ತನ್ನ ನೆರಳು ನೋಡಿತು. ಅದಕ್ಕೆ ಆಶ್ಚರ್ಯವೆನಿಸಿ ಆ ನೆರಳಿನ ತಲೆ ಹಿಡಿಯಬೇಕೆಂದು ಅದು ಮುಂದೆ ಮುಂದೆ ಸರಿಯತೊಡಗಿತು. ನೆರಳೂ ಮುಂದೆ ಮುಂದೆ ಸಾಗತೊಡಗಿತು. ಕೊನೆಗೆ ಆ ಮಗುವಿನ ತಾಯಿಯು ಅದಕ್ಕೆ ನಿನ್ನ ತಲೆ ಹಿಡಿದುಕೋ ಎಂದು ಹೇಳಿದಳು. ಅದು ಹಾಗೆ ಮಾಡುತ್ತಲೆ ನೆರಳಿನ ಮಸ್ತಕವು ತನ್ನಿಂದ ತಾನೇ ಸಿಕ್ಕುಬಿಟ್ಟಿತು. ಇದೇ ತತ್ವ ತಲೆಹಿಡಿದರೆ ನೆರಳು ಕೈಯ್ಯಲ್ಲಿ ಬರುವದು. ಸ್ವರ್ಗ ಹಾಗೂ ನರಕ ಇವೆರಡೂ ನಿಮ್ಮೊಳಗೇ ಅವೆ. ಅದರಂತೆ ನಿಮ್ಮ ಕುಲದೇವತೆ, ಸ್ಥಾನದೇವತೆ, ರಾಷ್ಟ್ರದೇವತೆ ನಿಮ್ಮೊಳಗೇ ಇದ್ದಾರೆ. ಸರ್ವ ಸಂಸಾರಿಗಳು ಇದನ್ನೇ ತಿಳಕೊಳ್ಳಬೇಕಾಗಿದೆ. ಇದೇ ತತ್ವ ಜಗತ್ತಿನ ತುಂಬ ಹಬ್ಬಬೇಕಾಗಿದೆ. ತಥ್ಯ ಬೇಕಿದ್ದರೆ ನೆರಳಿನ ಹಂಬಲ ಬಿಟ್ಟುಕೊಟ್ಟು ನಿನ್ನೊಳಗೇ ಮುಳುಗು; ಅಂತರ್ಮುಖನಾಗು. ಅಷ್ಟು ಸಾಧಿಸಿದರೆ ನಿಮಗೆ ಸಹಜವಾಗಿ ತಿಳಿದುಬರುವದೇನಂದರ, ಹೊರಜಗತ್ತಿನೊಳಗಿನ ಎಲ್ಲ ಪ್ರಿಯವಸ್ತುಗಳು ವಾಸ್ತವಿಕವಾಗಿ ನಿಮ್ಮ ನೆರಳೇ ಆಗಿವೆ. ಅಂದ ಮೇಲೆ ಮನೆಮುರಿದು ಮಂಟಪ ಕಟ್ಟುವದೇಕೆ ?

ಒಬ್ಬ ಅಕ್ಕನ ಸೂಜಿ ಮನೆಯಲ್ಲಿ ಕಳೆಯಿತು. ಮನೆಯಲ್ಲಿ ದೀಪ ವಿರಲಿಲ್ಲ. ಬೀದಿಯಲ್ಲಿ ದೀವಿಗೆಯಿದೆಯೆಂದು ಆಕೆಯು ಬೀದಿಯಲ್ಲಿಯೇ ತನ್ನ ಸೂಜಿಯನ್ನು ಹುಡುಕಹತ್ತಿದಳು! ಸೂಜಿಯನ್ನು ಎಲ್ಲಿಯಾದರೂ ಹುಡುಕಬೇಕಾಗಿದೆ ನಿಜ ಮನೆಯಲ್ಲಂತೂ ದೀಪವಿಲ್ಲ. ಅಂದಮೇಲೆ ನಡೆ ಬೀದಿಗೆ! ಇದೆಂಥ ದಡ್ಡತನ! ಆದರೆ ಜನರೆಲ್ಲರೂ ಹೀಗೆಯೇ ವರ್ತಿಸು ತ್ತಾರೆ. ನಿಜವಾದ ಸುಖವು ತನ್ನಲ್ಲಿಯೇ ಅದೆ. ಆದರೆ ಇಲ್ಲಿ ದೊರಕಿಸ ಲಿಕ್ಕೆ ಬರುವದಿಲ್ಲವೆಂದು ಸರ್ವರೂ ಬಾಹ್ಯ ವಸ್ತುಗಳಲ್ಲಿ ಹುಡುಕತೊಡಗು ತ್ತಾರೆ. ಇದು ನಿಜವಾಗಿಯೂ ವಿಚಿತ್ರ!

ಒಬ್ಬ ಬೂಟಾಳಿಯು ಮಕ್ಕಳನ್ನು ಠಕ್ಕಿಸಬೇಕೆಂದು "ಊರಿನ ನಗರ ಶೆಟ್ಟಿಯು ಎಲ್ಲ ಜನರಿಗೆ ಸವಿಯೂಟಹಾಕಬೇಕೆಂದು ನಿಶ್ಚಯಿಸಿದ್ದಾನೆ. ಎಂದು ಗುಳಿಗೆ ತೂರಿದನು. ಆಬಳಿಕ ನಿಜವಾಗಿಯೂ ಸವಿಯೂಟವಿದ್ದರೆ ಅದನ್ನು ನಾನು ಕಳಕೊಳ್ಳಬಾರದೆಂದು ಆ ಪ್ರಾಣಿ ತಾನೂ ಸಹ ಮಕ್ಕ ಳೊಡನೆ ಅಲ್ಲಿಗೆ ಬಂದೇಬಿಟ್ಟನು. ಜನರೆಲ್ಲ ಹೀಗೆಯೇ ವರ್ತಿಸುತ್ತಾರೆ. ತಾನೇ ತನ್ನ ಭಾವದೆಯಿಂದ ಒಂದು ವಸ್ತುವಿನಲ್ಲಿ ಸೌಂದರ್ಯ-ಸುಖಗ ಳನ್ನು ನಿರ್ಮಿಸುತ್ತಾನೆ. ಹಾಗೂ ಹಿಂದುಗಡೆ ಆ ಸುಖವು ತನಗೆ ಸಿಗಬೇ ಕೆಂದು ಹುಚ್ಚನಹಾಗೆ ಆ ಪದಾರ್ಥದ ಬನ್ನುಹತ್ತಿ ಓಡುತ್ತಾನೆ.

ಒಳಗಿನ ಸ್ವಾನಂದ ಸಾಮ್ರಾಜ್ಯವನ್ನು ಅನುಭವಿಸಿದರೆ ಸರ್ವವಾಸನೊಳು ತೃಪ್ತವಾಗುವವು. ಹಾಗೂ ಸರ್ವ ಶೋಕ ದುಃಖಗಳು ನಿರಂತರವಾಗಿ ನಾಶ ವಾಗುವವು.

ಅಹಹಾ! ಸ್ವಾನಂದ ಸಾಮ್ರಾಜ್ಯವು ನಿಮ್ಮೊಳಗೇ ಅದೆ. ವಿಷಯಗ ಳಲ್ಲಿ ಸುಖವನ್ನು ಹುಡುಕಬೇಡಿ. ಸುಖವು ನಿಮ್ಮೊಳಗೇ ಇದೆ- ಅದರ ಅನು ಭವ ತೆಗೆದುಕೊಳ್ಳಿ ಹಾಗೂ ಸಮಾಧಾನ ಪಡೆಯಿರಿ.

# ಜಗತ್ತಿನ ಮಹಾಪುರುಷರ ಸದ್ಗುಣಗಳ ಸಂಗಮವೆಲ್ಲಿ ?

[ಲೇಖಕಃ- ಭ್ರಮರ, ತಿಪಟೂರು]

ಪ್ರಕೃತಿಯಲ್ಲಿ ಹರಡಿರುವ ಅನಂತತೆಯು ಮೂಲ ಏಕತೆಯ ವಿಸ್ತಾರ ಎಂಬ ರಹಸ್ಯ ಕೇವಲ ಬಾಹ್ಯ ರೂಪವನ್ನೇ ನೋಡುವವರಿಗೆ ಅರ್ಥವಾಗುವದಿಲ್ಲ. ಎಲ್ಲಾ ನದಿಗಳೂ ಸಾಗರದಲ್ಲಿ ಐಕ್ಯಗೊಳ್ಳುವಂತೆ ಮೇಲ್ನೋಟಕ್ಕೆ ಗೋಚರಿಸುವ ಅಸಂಖ್ಯಾತ ದೇಹಗಳ ಅಂತರಾತ್ಮ ಒಂದೇ ಆಗಿರುವಂತೆ ಅನಂತತೆ ಮತ್ತು ಏಕತೆಯ ರೂಪಗಳೆರಡೂ ನಮ್ಮ ಹೃದಯದಲ್ಲೇ ಹುದುಗಿರುವ ಮಾಯ ಮತ್ತು ಸತ್ಯದ ಸ್ಥಿತಿ ಅಂತರಗಳು ಪ್ರಕೃತಿಯಲ್ಲಿನ ವಸ್ತುಗಳನ್ನು ವಿಭಜಿಸಿ ನೋಡುವ ದೃಷ್ಟಿಯಿಂದಲೆ ಮೂಲರೂಪನೂ ಏಕರೂಪನೂ ಆದ ಭಗವಂತನ ದಿವ್ಯ ದರ್ಶನ ನಮಗೆ ಅಲಭ್ಯವಾಗಿದೆ. ಸಾಮಾನ್ಯನೊಬ್ಬನಿಗೆ ಒಂದು ಆಲದ ಬೀಜ ಸಾಸಿವೆಕಾಳಿಗಿಂತ ಅಲ್ಪವಾದ ನಿಷ್ಪ್ರಯೋಜಕ ವಸ್ತುವಾಗಿ ಕಾಣುತ್ತದೆ. ಆದರೆ ಜ್ಞಾನಿಯಾದವನು ಇಷ್ಟು ಚಿಕ್ಕ ಬೀಜರೂಪದಲ್ಲಿ ಒಂದು ವಿಶಾಲ ವಟವೃಕ್ಷವನ್ನೆ ಕಾಣುತ್ತಾನೆ. ಬಾಹ್ಯ ಚಕ್ಷುಗಳಿಗೆ ಗೋಚರಿಸುವ ನೀರು ಹಲವಾರು ರೂಪಗಳಿಂದ ಹಲವಾರು ಹೆಸರುಗಳಿಂದ ಅಭಿವ್ಯಕ್ತವಾದರೂ ವಿಮರ್ಶಿಸಿ ನೋಡುವ ಜ್ಞಾನಿಗೆ ಇದು ಏಕತೆಯ ಬಹುರೂಪ ದರ್ಶನ ಎಂಬ ಅರಿವಾಗದೆ ಇರದು. ಇದರ ಸಮರ್ಥನೆಗೆ ಇನ್ನೂ ಒಂದು ನಿದರ್ಶನವನ್ನು ಕೊಡಬಹುದು. ವಿದ್ಯುತ್ತಿನ ಮೂಲ ರೂಪು ಬಿಳುಪು. ಆದರೆ ಇದು ಕೆಂಪು, ನೀಲಿ, ಹಸಿರು ಮತ್ತು ಹಳದಿ ಬಣ್ಣದ ಗಾಜಿನ ಬುರುಡೆಗಳಲ್ಲಿ ಪ್ರವಹಿಸುವಾಗ ಆಯಾ ಬಣ್ಣಗಳಂತೆಯೇ ಕಾಣುತ್ತದೆ. ವಿದ್ಯುತ್ತಿನ ವಿಜ್ಞಾನವನ್ನು ತಿಳಿದವನಿಗೆ ಈ ಎಲ್ಲ ಬಣ್ಣಗಳಿಗೂ ಬಿಳುಪೇ ಮೂಲ ಎಂಬ ರಹಸ್ಯ ಬೇಗ ತಿಳಿಯುತ್ತದೆ. ಆದರೆ ಈ ವಿಚಾರ ತಿಳಿಯದವರು ವಿದ್ಯುತ್ತು ಕೆಂಪಾಗಿರುವುದೆಂದೂ, ಹಸಿರು ಬುರುಡೆಯನ್ನು ನೋಡಿದವನು ಹಸುರೆಂದೂ ಮತ್ತೊಬ್ಬನು ನೀಲಿಯಾಗಿರುವದೆಂದೂ ಕಲಹ ಮಾಡುವರು.

ಈ ರೀತಿಯ ಸತ್ಯದ ವಿಪರ್ಯಾಸ ಮತ ಮತ್ತು ಧರ್ಮಗಳಿಗೂ ಅನ್ವಯಿಸುತ್ತದೆ. ಮತವೆಂದರೆ ಕೇವಲ ಅಭಿಪ್ರಾಯವೆಂದರ್ಥ. ದೇವರ

ಇರುವಿಕೆ ಅಥವಾ ಇಲ್ಲದಿರುವಿಕೆಗಳಲ್ಲಿ ತಮ್ಮ ತಮ್ಮ ಅಭಿಪ್ರಾಯಗಳನ್ನು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಸಮರ್ಥಿಸುತ್ತಿದ್ದರು. ಈ ಮುಖ್ಯ ಬೋಧಕರ ಅಭಿಪ್ರಾಯಗಳನ್ನು ಒಪ್ಪಿದವರು ಅವರ "ಮತಾನುಯಾಯಿ" ಗಳಾಗುತ್ತಿದ್ದರು. ಆದರೆ ಮತವೆಂಬುದು ಈ ದಿನ ಜಾತಿಯಾಗಿ ಪರಿಣಮಿಸಿ ಗೊಂದಲಕ್ಕೀಡುಮಾಡಿದೆ. ಮೇಲಾಗಿ ಜಗತ್ತಿನ ಧರ್ಮಗಳೆಷ್ಟೇ ಇರಲಿ ಅದರ ಮೂಲ ಒಂದೇ. ಯಾವ ದೇಶದ, ಯಾವ ಜಾತಿ ಅಥವಾ ಭಾಷೆಯ ಮತಸ್ಥಾಪಕನೇ ಇರಲಿ ಅವರೆಲ್ಲರ ಅಂತಿಮ ಗುರಿ ಒಂದೇ ಆಗಿರುತ್ತವೆ ಎಂಬುದನ್ನು ತಿಳಿಯದಿರುವುದೇ ಜಾತಿ ದ್ವೇಷಗಳಿಗೆ ಕಾರಣವಾಗಿದೆ. ಇಹ ಪರಗಳೆರಡರಲ್ಲಿಯೂ ಮಾನವರು ಸುಖಶಾಂತಿಗಳಿಂದ ಬಾಳಬೇಕೆಂಬ ಹೆಬ್ಬಯಕೆಯೇ ಎಲ್ಲ ಧರ್ಮ ಮತ್ತು ಧರ್ಮ ಸಂಸ್ಥಾಪಕರ ಮುಖ್ಯ ತತ್ತ್ವ. ಎಲ್ಲರೂ ನೋಡಬೇಕೆಂದು ಬಯಸಿದ ದೇವನೊಬ್ಬನೆ. ಆದರೆ ಅವನನ್ನು ಸಂದರ್ಶಿಸಲು ಎಲ್ಲರೂ ಸಾಲಾಗಿ ಒಂದೇ ಮಾರ್ಗದಲ್ಲಿ ಹೋಗಲಿಲ್ಲ. ಒಂದೇ ಹೆಸರಿನಿಂದ ಕರೆಯಲಿಲ್ಲ. ಅವರವರ ದರುಶನಕೆ ಅವರವರ ಭಾವಕ್ಕೆ ಅನುಸಾರವಾಗಿ ದೇವರ ನಿಲುವನ್ನು ಸಮರ್ಥಿಸುತ್ತಾ ತಮ್ಮದೇ ಆದ ವಿಶಿಷ್ಟ ಮಾರ್ಗದಲ್ಲಿ ಸಾಧನೆ ಮಾಡಿದರು. ಅವರವರ ದಾರಿ ಅವರಿಗೆ ಮಾತ್ರ ಗೋಚರಿಸಿತು. ಉಳಿದವರು ಬೇರೆ ದಾರಿಯನ್ನೇ ಶೋಧಿಸಬೇಕಾಯಿತು.

ಈ ರೀತಿ ಸ್ವಾರ್ಥವನ್ನು ತೊಲಗಿಸಿ ಜಗತ್ತಿನ ಕ್ಷೇಮವನ್ನು ಬಯಸಿದ ಬುದ್ಧ, ಏಸು, ಮಹಮ್ಮದಪೈಗಂಬರ, ಬಸವಣ್ಣ ಮತ್ತು ಗಾಂಧೀಜಿಯವರು ತಮ್ಮಲ್ಲಿದ್ದ ಒಂದೊಂದು ವಿಶಿಷ್ಟ ಶ್ರೇಷ್ಠ ಗುಣಗಳಿಗೆ ಪ್ರಸಿದ್ಧಿಯಾಗಿದ್ದಾರೆ. ಎಲ್ಲರೂ ಕಾಣಬೇಕೆಂದ ಗುರಿ ಒಂದಾದರೂ ಸಾಧನೆ ಮತ್ತು ತತ್ತ್ವಗಳ ದೃಷ್ಟಿಯಿಂದ ಇವರಲ್ಲಿ ಕೆಲವೊಂದು ವ್ಯತ್ಯಾಸಗಳನ್ನು ಕಾಣಬಹುದು. ಆದರೆ ಬಸವಣ್ಣನವರು ಜಗತ್ತಿನ ಈ ಮಹಾಪುರುಷರ ಸದ್ಗುಣಗಳ ಸಂಗಮವ್ಯಕ್ತಿಯಾಗಿದ್ದಾರೆ. ಬುದ್ಧನ ತ್ಯಾಗ, ಏಸುವಿನ ಕ್ಷಮಾಗುಣ ಮತ್ತು ಸಹನಶೀಲತೆ, ಮಹಮ್ಮದನ ನಿಷ್ಠೆ, ಗಾಂಧೀಜಿಯವರ ಸ್ವಾತಂತ್ರ್ಯ ಪ್ರವೃತ್ತಿ ಮತ್ತು ಅಸ್ಪೃಶ್ಯತಾ ಪ್ರೇಮ, ಮಾರ್ಕ್ಸನ ಸಮತಾವಾದ ಈ ಗುಣರತ್ನಗಳೆಲ್ಲವೂ ಬಸವಣ್ಣನವರಲ್ಲಿ ಸಂಗಮವಾಗಿ ಅವರ ವ್ಯಕ್ತಿತ್ವಕ್ಕೊಂದು ಅಪೂರ್ವ ತೇಜಸ್ಸನ್ನು ತಂದು ಕೊಟ್ಟಿವೆ. ಅದು ಹೇಗೆಂಬುದನ್ನು ವಿಮರ್ಶಿಸಿ ತಿಳಿಯುವದೇ ಈ ಲೇಖನದ ಉದ್ದೇಶ.

## ಬುದ್ಧ-ಬಸವಣ್ಣ

ಬುದ್ಧನ ವ್ಯಕ್ತಿತ್ವದ ಹಿರಿಮೆಗೆ ಅವನ ಇನ್ನೆಲ್ಲ ಗುಣಗಳಿಗಿಂತ "ಮಹಾ ತ್ಯಾಗ"ವೇ ಕಾರಣವಾಗಿದೆ. ಲೋಕದ ಅಸಂಖ್ಯಾತ ಸಾವು ನೋವುಗಳನ್ನು ಕಂಡು ಅವನ ಹೃದಯ ಕೊರಗಿತು. ಇದನ್ನು ಪರಿಹರಿಸ ಲಾರೆನೆ ಎಂಬ ಬೇಗುದಿ ನಿಸ್ಸೀಮ ಅನುಕಂಪ ಸಾಧನೆಗೆ ಪ್ರೇರೇಪಿಸಿತು. ಸಾಮಾಜಿಕ ಮತ್ತು ಆರ್ಥಿಕ ದುಸ್ಥಿತಿಯಿಂದ ಕಂಗೆಟ್ಟು ಬಡವನಾಗಿದ್ದ ವನು ಮತ್ತೊಬ್ಬ ಬಡವನ ಸಾವು ನೋವುಗಳಿಗೆ ಮರಗುವುದು ಹೆಚ್ಚಲ್ಲ, ಆಶ್ಚರ್ಯವೂ ಅಲ್ಲ. ಮಹಾರಾಜನ ಮಗನಾಗಿ ಸಕಲ ಸಂಪತ್ಸೌಭಾಗ್ಯ ಗಳ ಮಧ್ಯೆ ವಿಹರಿಸುತ್ತಾ ಹೃದಯದೊಲವಿನೊಂದಿಗೆ ಸಂಗಮವಾಗಿದ್ದ ಪ್ರಿಯ ಪತ್ನಿ ಪುತ್ರರ ವ್ಯಾಮೋಹವನ್ನು ತೊರೆದು ಅರಣ್ಯದ ಹಾದಿ ಹಿಡಿ ಯಬೇಕಾದರೆ ಅವನ ಮನಸ್ಸು ಲೋಕದ ಕಷ್ಟ ಕಾರ್ಪಣ್ಯಗಳಿಂದ ಅದೆಷ್ಟು ಬೇಗುದಿಗೊಂಡಿರಬೇಕು ! ಆ ಅಪಾರ ಕರುಣೆ ಮತ್ತು ದುಃಖದೊಂದಿಗೆ ಮೂಡಿ ಬಂದ ಮಹಾತ್ಯಾಗ, ಗುರಿಸಾಧನೆಗೆ ನೆರವಾದ ಹಿಮಾಲಯದಷ್ಟು ಅಚಲವಾದ ಮನೋನಿಗ್ರಹ ಇವುಗಳನ್ನು ನೆನೆದಾಗ ಎಂಥವರಿಗಾದರೂ ಬುದ್ಧನ ವ್ಯಕ್ತಿತ್ವದ ಬಗ್ಗೆ ಆಶ್ಚರ್ಯ ಅಭಿಮಾನಗಳು ತುಂಬಿ ಬರುತ್ತವೆ. ಗೌತಮನ ಜನನ ಕಾಲದಲ್ಲಿ ಜ್ಯೋತಿಷ್ಕನು ಹೇಳಿದಂತೆ ಬುದ್ಧನು ರಾಜ ನಾಗಿದ್ದರೂ ವಿಶ್ವವಿಖ್ಯಾತಿಯನ್ನು ಪಡೆಯುತ್ತಿದ್ದನೋ ಇಲ್ಲವೋ ನಮಗೆ ಗೊತ್ತಿಲ್ಲ. ಆದರೆ ಮಹಾತ್ಯಾಗಿಯಾಗಿ ಬುದ್ಧನಾಗಿ ಪ್ರಪಂಚದ ಎಲ್ಲ ಜನರ ಗೌರವಾದರಗಳಿಗೆ ಪಾತ್ರನಾಗಿರುವುದಂತೂ ಪೂರ್ಣ ಸತ್ಯ. ಈ ಕಾರಣದಿಂದಲೆ " ಬುದ್ಧ ಕೇವಲ ವ್ಯಕ್ತಿಯಲ್ಲ, ದಾರ್ಶನಿಕ ಶಕ್ತಿ " ಎಂಬು ದಾಗಿ ಅಧ್ಯಾತ್ಮಸಿಂಹ ಶ್ರೀ ವಿವೇಕಾನಂದರು ಅಭಿಪ್ರಾಯಪಡುತ್ತಾರೆ.

ಬಸವಣ್ಣನವರೂ ಜಗತ್ತಿನ ಮಾನವರ ಕಷ್ಟ ಕಾರ್ಪಣ್ಯಗಳನ್ನು ಕಂಡು ಅನುಭವಿಸಿ ಬಹುವಾಗಿ ಮರುಗಿದರು. ಬಡವರಲ್ಲಿ, ನಿರ್ಗತಿಕರಲ್ಲಿ ಅನುಕಂಪ ಹೃದಯರಾದರು. ಕಲ್ಲು ಮಣ್ಣು ಹಿತ್ತಾಳೆಗಳಲ್ಲಿ ದೇವರನ್ನು ಕಾಣದೆ ದಟ್ಟ ದರಿದ್ರನ ಹೃದಯದಲ್ಲಿಯೆ ಶಿವನನ್ನು ಕಂಡರು. ಜೀವ-ಶಿವ ಭೇದ ಮಾಡದೆ ಬಡವಬಲ್ಲಿದರೆಲ್ಲರನ್ನೂ ಅಶನವಸನಗಳನ್ನಿತ್ತು ಸತ್ಕರಿಸಿ ದರು. ಕುಲಹೀನರು, ಕೀಳ್ಜಾತಿಯವರು ಎಂದು ಸಮಾಜ ಕಡೆಗಾಣಿಸಿದ್ದ ನಿರ್ಗತಿಕರನ್ನು ಆದರಿಸಿ, ಗೌರವಿಸಿ, ಗುರು, ಜಂಗಮ, ಹಿರಿಯ ಮಾಹೇ

ಶ್ವರರೆಂದು ಸಮಾಜದಲ್ಲಿ ಉನ್ನತ ಸ್ಥಾನವಿತ್ತರು. ಹಿಂದುಳಿದವರ ಮೇಲ್ಮೆಗಾಗಿ ವರ್ಣಕ್ಕೂ ಕಾಯಕಕ್ಕೂ ಇದ್ದ ಬಲಾತ್ಕಾರ ಸಂಬಂಧವನ್ನು ಬಿಡಿಸಿ ಭಾರತೀಯರ ಉದ್ಯೋಗಾವಲಂಬನೆಯನ್ನು ಉದ್ಧರಿಸಿದರು. ಅವಿದ್ಯೆ ಅಜ್ಞಾನಗಳ ನಿರ್ಮೂಲಕ್ಕಾಗಿ ಮೂಲೆಗುಂಪಾಗಿದ್ದ ಕನ್ನಡ ಭಾಷೆಯಲ್ಲಿ ಸರಳವಾದರೂ ಸುಂದರವಾಗಿ ವಚನವಾಙ್ಮಯ ರಚಿಸಿದರು. ಹೀಗೆ ಹಲವಾರು ದೃಷ್ಟಿಗಳಿಂದ ಬವಣೆಗೊಳಗಾಗಿದ್ದ ಜನರಿಗೆ ಸಾಮಾಜಿಕ, ಧಾರ್ಮಿಕ ಮತ್ತು ಉದ್ಯೋಗ ದೃಷ್ಟಿಗಳಲ್ಲಿ ಸಮತೆ ಸ್ವಾತಂತ್ರ್ಯಗಳನ್ನು ತಂದುಕೊಟ್ಟರು. ಆದರೆ ಬುದ್ಧನಂತೆ ಸಂಸಾರವನ್ನು ತೊರೆಯಲಿಲ್ಲ. ಸಮಾಜದ ಮಧ್ಯದಲ್ಲಿಯೇ ಬಾಳಿ ಬದುಕುತ್ತಾ ಅದರಲ್ಲಿದ್ದ ಲೋಪದೋಷಗಳನ್ನು ತಿದ್ದಿ ಸಂಪಡಿಸಲೆತ್ನಿಸಿದರು. "ಇಲ್ಲಿ ಸಲ್ಲುವವರು ಅಲ್ಲಿಯೂ (ಸ್ವರ್ಗದಲ್ಲಿಯೂ) ಸಲ್ಲುವರು" ಇಲ್ಲಿ ಸತ್ಯ ನ್ಯಾಯ ಮಾರ್ಗಗಳಿಂದ ನಡೆಯಿರಿ. ಮುಂದಿನ ಚಿಂತೆ ನಮಗೇಕೆ ? ಎಂದರು.

ಬುದ್ಧ ನಮ್ಮನ್ನು ನಿದಾನವಾಗಿ ಅಗಲಿ ದೂರ ದೂರ ಹೋದಂತೆ ಭಾಸವಾಗುತ್ತದೆ. ಆದರೆ ಬಸವಣ್ಣನವರು ನಮ್ಮ ನೋವು ನಲಿವುಗಳೆರಡರಲ್ಲು ಸಮೀಪದಲ್ಲಿಯೇ ಇದ್ದು ಸಂತೈಸುತ್ತಾರೆ. ತಮ್ಮದೆನ್ನುವದೆಲ್ಲವನ್ನೂ ಸಂಗನ ಸ್ವರೂಪಿಗಳಾದ ಜೀವಿಗಳಿಗಿತ್ತು ಸಂತಸಗೊಳ್ಳುತ್ತಾರೆ. ಮಂತ್ರಿತ್ವದಿಂದ ಬಂದ ಹಣವೆಲ್ಲವನ್ನೂ ಜಂಗಮಸೇವೆಗೆ ಮೀಸಲಿಡುತ್ತಿದ್ದುದು ಅವರ ಉದಾರ ಹೃದಯ ಮತ್ತು ಸ್ವಾರ್ಥತ್ಯಾಗದ ಕುರುಹಾಗಿದೆ.

## ಬಸವಣ್ಣ-ಏಸು.

ಏಸುಕ್ರಿಸ್ತನ ಇನ್ನಿತರ ಗುಣಗಳಿಗಿಂತ ಅವನ ಕ್ಷಮಾಗುಣ ಮತ್ತು ಸಹನಶೀಲತೆ ಅದ್ವಿತೀಯವಾದುವು. ತಾವೆಲ್ಲ ಒಬ್ಬನೇ ದೇವರ ಮಕ್ಕಳಾದುದರಿಂದ ಪರಸ್ಪರ ಸಹೋದರರೆಂಬುದು ಅವರ ಭಾವನೆಯಾಗಿತ್ತು. ಇಲ್ಲಿನ ದುರಾಚಾರಿ ಜನರು, ತಾನು ನ್ಯಾಯವನ್ನೆ ಬೋಧಿಸಿದರೂ ಕಷ್ಟನಷ್ಟಗಳಿಗೆ ನನ್ನನ್ನು ಗುರಿಪಡಿಸುತ್ತಾರಲ್ಲ ಎಂದು ಅವರನ್ನು ಕ್ರೋಧದಿಂದ ಶಪಿಸಲಿಲ್ಲ. ಏಕೆಂದರೆ ಅವರು ಅಜ್ಞಾನಿಗಳೆಂಬುದು ಏಸುವಿಗೆ ಸಂಪೂರ್ಣವಾಗಿ ಗೊತ್ತು. ತನ್ನ ಕೊನೆಗಾಲದಲ್ಲಿ ಅಮಾನುಷವಾಗಿ ಶಿಲುಬೆಗೆ ಮೈಯೊಡ್ಡಿದಾಗ ಆ ಕಟುಕರು ಮೈ ಕೈ ಮೊಣಕಾಲುಗಳಿಗೆಲ್ಲ ಮೊಳೆಹೊಡೆದು ಹಿಂಸಿಸಿದರು. ಆದರೂ ಆ ಕ್ಷಮಾಶೀಲನ ಬಾಯಿಂದ ಒಂದು ಕೋಪದ

ನುಡಿಯೂ ಹೊರಬರಲಿಲ್ಲ. ಬದಲಿಗೆ "ತಂದೆಯೇ, ಇವರನ್ನು ಕ್ಷಮಿಸು. ಏಕೆಂದರೆ ಇವರು ತಾವು ಏನು ಮಾಡುತ್ತಿದ್ದೇವೆಂಬುದನ್ನರಿಯರು." ಎಂದು ದೇವರಲ್ಲಿ ದೊರೆಯಿಟ್ಟನು. ತನ್ನ ಹನ್ನೆರಡು ಜನ ಆಪ್ತರಲ್ಲಿ ತನ್ನ ಕೊಲೆಗೆ ಸಂಚು ಮಾಡಿದವನೊಬ್ಬನುಂಟೆಂದು ತಿಳಿದಿದ್ದರೂ ಅವನ ಬಗ್ಗೆ ಕ್ರೋಧಗೊಳ್ಳಲಿಲ್ಲ. ಶಿಕ್ಷಿಸಬಹುದಾಗಿದ್ದರೂ ಶಿಕ್ಷಿಸಲಿಲ್ಲ. ಏಕೆಂದರೆ ಏಸುವು, ಸಾವಿಗಿಂತ ಕ್ಷಮೆ ಮತ್ತು ಸಹನೆಗಳಿಗೆ ವಿಶೇಷ ಮಹತ್ವ ಕೊಟ್ಟಿದ್ದನು.

ಈ ಕ್ಷಮಾಗುಣ ಮತ್ತು ಸಹನೆ ಬಸವಣ್ಣನವರಲ್ಲಿಯೂ ಇತ್ತು. ಅಜ್ಞಾನಿಗಳು ತಮಗೆ ಅಪಕೃತ್ಯವೆಸಗಿದರೆ ಅವರಿಗೆ ಕೇಡನ್ನೆಣಿಸುವ ಬದಲು ಮನ್ನಿಸಿ ಸನ್ಮಾರ್ಗವನ್ನು ಬೋಧಿಸುತ್ತಿದ್ದರು. ಒಂದುಸಲ ಚಿಕ್ಕಯ್ಯನೆಂಬುವನು ಬಸವಣ್ಣನವರನ್ನು ವಿರೋಧಿಸಿದ್ದನು. ಅವರನ್ನು ಹೇಗಾದರೂ ಕೊಲೆ ಮಾಡಬೇಕೆಂಬುದು ಅವನ ಹಂಚಿಕೆಯಾಗಿತ್ತು. ಅದೊಂದು ದಿನ ಬಸವಣ್ಣನವರು ಶಿವಪೂಜಾ ಸಮಯದಲ್ಲಿರುವಾಗ ತಾನೂ ಕಕ್ಷಪುಟದಲ್ಲಿ ಚೂರಿಯನ್ನು ಮರೆಮಾಡಿಕೊಂಡು ಭಕ್ತನಂತೆ ಬಂದುಕುಳಿತನು. ಬಸವಣ್ಣನವರಿಗೆ ಇದು ತಿಳಿಯಿತು. ಮಂತ್ರಿಯಾಗಿದ್ದ ತಾವು ಅವನನ್ನು ಕೊಲೆಗೈಯಬಹುದಾಗಿದ್ದರೂ ಉದಾರ ಭಾವದಿಂದ ಕ್ಷಮಿಸಿ "ತಂದೆ" ಎಂದು ಕರೆದು ಗೌರವಿಸುತ್ತಾರೆ. ತನ್ನ ಅಕೃತ್ಯಕ್ಕೆ ನಾಚಿದ ಚಿಕ್ಕಯ್ಯನು ಸನ್ಮಾರ್ಗಪ್ರವರ್ತಕನಾಗುತ್ತಾನೆ. ಅವರು ಕೋಪತಾಪಗಳಿಂದ ಸಹನೆ ಮತ್ತು ಕ್ಷಮೆಯನು ಕಳೆದುಕೊಂಡಿರಲಿಲ್ಲ. ಈ ಅಂಶವನ್ನು,

ತನಗೆ ಮುನಿದವರಿಗೆ ತಾ ಮುನಿಯಲೇಕಯ್ಯ ?<br>
ತನಗಾದಡೇನು ? ಅವರಿಗಾದಡೇನು ?<br>
ತನುವಿನಕೋಪ ಹಿರಿಯತನದ ಕೇಡು,<br>
ಮನದ ಕೋಪ ತನ್ನ ಅರಿವಿನ ಕೇಡು

ಮನದೊಳಗಣ ಕಿಚ್ಚು ತನ್ನ ಮನೆಯನ್ನೆ ಸುಡುವಂತೆ ತನ್ನಲ್ಲಿ ಹುಟ್ಟಿದ ಕೋಪ ತನ್ನನೆ ಸುಟ್ಟುದಲ್ಲದೆ ಬಿಡದು' ಎಂಬ ವಚನದಿಂದ ಚೆನ್ನಾಗಿ ವ್ಯಕ್ತವಾಗುತ್ತದೆ.

## ಮುಹಮ್ಮದ-ಬಸವಣ್ಣ.

ಮುಹಮ್ಮದರ ವಿಶಿಷ್ಟ ಗುಣವೆಂದರೆ ಮಹಾನಿಷ್ಠೆ. ತಾವು ನಂಬಿದ ದೇವರು ಮತ್ತು ತತ್ವಗಳಲ್ಲಿ ಅವರಿಗಿದ್ದ ನಂಬಿಕೆ ಅಪಾರವಾದುದು. ಆ

ನಿಷ್ಠೆಯ ಅತಿಶಯತೆಯಿಂದಲೆ ಅವರು ಎಷ್ಟೋ ತೊಂದರೆಗಳನ್ನನುಭವಿಸಿದರು. ಅನೇಕ ಯುದ್ಧಗಳನ್ನು ಮಾಡಬೇಕಾಗಿ ಬಂದಿದ್ದಲ್ಲದೆ ಮಕ್ಕಾದಿಂದ ಮದೀನಾಕ್ಕೆ ಹೋಗಬೇಕಾಯಿತು. ಇಂತಹ ಒಂದು ದೃಢ ನಿಷ್ಠೆಯ ಫಲವಾಗಿಯೆ ತಮ್ಮ ಮತವನ್ನು ಸವಿಸ್ತಾರಗೊಳಿಸಿದರು. ಅಲ್ಲದೆ ಇಸ್ಲಾಂ ತತ್ವದ ಮುಖ್ಯ ಅಂಶವೆಂದರೆ ಶಾಂತಿ ಮತ್ತು ಸಹೋದರತ್ವವೇ ಆಗಿದೆ ಎಂಬುದನ್ನು ಸಾಧಿಸಿ ತೋರಿಸುವುದೆ ಅವರ ಮುಖ್ಯ ಧ್ಯೇಯವಾಗಿತ್ತು. ಅಲ್ಲದೆ ನಿಜವಾದ ಮುಸ್ಲಿಮನು ನಿಜವಾದ ಹಿಂದುವು ಹೆಸರು ಬೇರೆ ಅಷ್ಟೆ, ಎಂಬುದನ್ನು ಪ್ರತಿಪಾದಿಸಿದರು.

ಮೊಹಮ್ಮದರಿಗಿಂತ ಬಸವಣ್ಣನವರಲ್ಲಿದ್ದ ನಿಷ್ಠೆ ಸರ್ವವ್ಯಾಪಕವಾದುದು ಮತ್ತು ಸದ್ಗುಣಗಳನ್ನು ಪ್ರೇರೇಪಿಸುವಂಥದು ಆಗಿದೆ. ಒಂದ ಸದಭಿಪ್ರಾಯ ಅವರ ಮನದಲ್ಲಿ ಮೂಡಿದರೆ ಪ್ರಾಣವನ್ನು ತೆತ್ತಾದರೂ ಅದರಂತೆ ನಡೆಯುತ್ತಿದ್ದರು. ಅವರು ಸತ್ಯದಲ್ಲಿಟ್ಟಿದ್ದ ನಿಷ್ಠೆ, ಸದ್ಗುಣಗಳಲ್ಲಿಟ್ಟಿದ್ದ ನಿಷ್ಠೆಗಳಿಗೆ ಎರಡಿಲ್ಲ. ಈ ನಿಷ್ಠೆಯೂ. ತನುಮನಧನಗಳನ್ನು ತ್ಯಾಗಮಾಡಿಯಾದರೂ ಅದನ್ನು ಉಳಿಸಿಕೊಳ್ಳಬೇಕೆಂಬ ಛಲವೂ ಅವರ ಸ್ವಾಭಾವಿಕ ಗುಣವಾಗಿತ್ತು. ಶರಣನಾದವನಿಗೆ ಛಲವು ಅತಿಶಯವಾಗಿರಬೇಕೆಂಬುದೇ ಅವರ ಅಭೀಷ್ಟವಾಗಿತ್ತು. ಅಂತಹ ನಿಷ್ಠೆ ಇಲ್ಲದವರ ಪೂಜೆ ನಿಷ್ಫಲ ಎಂದು ದೃಢವಾಗಿ ನಂಬಿದ್ದರು. ಆ ಕಾರಣದಿಂದಲೆ—

"ಛಲಬೇಕು ಶರಣಂಗೆ 'ಪರಧನವನೊಲ್ಲೆನೆಂ'ಬ
ಛಲಬೇಕು ಶರಣಂಗೆ 'ಪರಸತಿಯನೊಲ್ಲೆನೆಂ'ಬ
ಛಲಬೇಕು ಶರಣಂಗೆ 'ಲಿಂಗಜಂಗಮ ಒಂದೆಂ'ಬ
ಛಲಬೇಕು ಶರಣಂಗೆ 'ಪ್ರಸಾದದಿಟವೆಂ'ಬ
ಛಲವಿಲ್ಲದವರ ಮೆಚ್ಚ ನಮ್ಮ ಕೂಡಲಸಂಗಮದೇವಾ."

ಇಂತಹ ದೃಢ "ನಿಷ್ಠೆ" ಮತ್ತು "ಛಲ"ಗಳಿದ್ದುದರಿಂದಲೆ ಅಸ್ಪೃಶ್ಯೋದ್ಧಾರ, ಭಾಷಾಭಿವೃದ್ಧಿ ಮತ್ತು ಹಿಂದೂ ಮತ ಸುಧಾರಣೆಗಳಿಗೆ ಅವಕಾಶವಾಯಿತು. ಅವರ ನಿಷ್ಠೆಯಿಂದಲೆ ತಾವು ಕೈಕೊಂಡ ಎಲ್ಲ ಕಾರ್ಯಗಳಲ್ಲಿಯೂ ಯಶಸ್ವಿಯಾಗಿ ಮಹಾ ವ್ಯಕ್ತಿಗಳೆನಿಸಿದರು.

## ಗಾಂಧೀಜಿ-ಬಸವಣ್ಣ.

ಇಬ್ಬರೂ ಸಮಾಜ ಸುಧಾರಣೆಗೆ ಹಲವಾರು ಮಾರ್ಗಗಳಲ್ಲಿ ಶ್ರಮಿಸಿದವರು. ಇಬ್ಬರೂ ಸಮಾಜದ ಮಧ್ಯೆಯೇ ಬಾಳಿಬದುಕುತ್ತಾ ಎಲ್ಲರಂತೆ ತಾವೂ ಲೋಕಾನುಭವಿಗಳಾಗಿ ದೀನದಲಿತರ ಕಷ್ಟಕಾರ್ಪಣ್ಯಗಳ ಪರಿಹಾರಕ್ಕಾಗಿ ತನುಮನಧನಗಳಿಂದ ದುಡಿದವರು.

ಗಾಂಧೀಜಿಯವರು ರಾಜಕೀಯ ಸ್ವಾತಂತ್ರ್ಯವನ್ನು ತಂದುಕೊಟ್ಟರು. ಬಸವಣ್ಣನವರು ಮೇಲ್ಜಾತಿ ಕೀಳ್ಜಾತಿಗಳೆನ್ನದೆ ಸಕಲ ಹಿಂದುಗಳಿಗೂ ಧಾರ್ಮಿಕ ಸ್ವಾತಂತ್ರ್ಯ ತಂದುಕೊಟ್ಟರು. ಕಾಯಕದಲ್ಲಿ ಮೇಲು ಕೀಳುಗಳನ್ನೆಣಿಸದೆ ಜಂಗಮರಲ್ಲಿ ಜಾತಿಯನ್ನರಸದೆ ಕುಲದ ಮೂಲೋತ್ಪಾಟನೆ ಮಾಡಿದರು. ಹಿಂದೂ ಧರ್ಮದ ಹಲವಾರು ಲೋಪದೋಷಗಳನ್ನು ತಿದ್ದಿ ವೀರಶೈವವನ್ನು ಜಗತ್ತಿನ ಮಾನವತಾ ಧರ್ಮವನ್ನಾಗಿ ರೂಪಿಸಿದರು. ಗಾಂಧೀಜಿ ಪ್ರತಿಭಾರತೀಯನ ಹೃದಯದಲ್ಲೂ ಸ್ವಾತಂತ್ರ್ಯ ಜ್ಯೋತಿಯನ್ನು ಬೆಳಗಿಸಿ ಸತ್ಯ, ಅಹಿಂಸೆ ಮತ್ತು ಶಾಂತಿ ಸಂದೇಶವನ್ನು ಜಗತ್ತಿನ ಎಲ್ಲೆಡೆಗೂ ಬೀರಿದರು. ಬಸವೇಶ್ವರರೂ "ಕಲ್ಯಾಣದ ಕ್ರಾಂತಿ"ಯ ಕಾರಣ ಪುರುಷರಾಗಿ ಜಗತ್ಕಲ್ಯಾಣದ ಕಲ್ಯಾಣದ ಗುಣಗಳಾವುವೆಂಬುದನ್ನು ವೀರಶೈವ ವಿಶ್ವಧರ್ಮದಲ್ಲಿ ಸಮಾವೇಶಗೊಳಿಸಿದರು. ಈ ರೀತ ಈ ಮಹಾತ್ಮರಿಬ್ಬರ ಜೀವನದಲ್ಲೂ ವ್ಯತ್ಯಾಸಗಳಿಗಿಂತ ಹೋಲಿಕೆಯೇ ಬಹಳವಾಗಿದೆ. ಆದರೆ ಒಂದು ವಿಚಾರದಲ್ಲಿ ಬಸವೇಶ್ವರನು ಗಾಂಧೀಜಿ ಸಾಧಿಸಲಾಗದುದನ್ನು ಸಾಧಿಸಿ ಯಶಸ್ವಿಯಾದರು. ಅದು ಅಸ್ಪೃಶ್ಯೋದ್ಧಾರ ಕಾರ್ಯ.

ಅಸ್ಪೃಶ್ಯತೆ ಮತ್ತು ಜಾತಿಮತಗಳ ಗೊಂದಲ ಭಾರತದ ಪ್ರಗತಿ ಮಾರ್ಗದಲ್ಲಿರುವ ಅಡ್ಡಗಲ್ಲು ಎಂಬ ವಿಚಾರ ಇಬ್ಬರಿಗೂ ವೇದ್ಯವಾಗಿತ್ತು. ಆದ್ದರಿಂದಲೇ ಅಸ್ಪೃಶ್ಯತೆಯ ವಟವೃಕ್ಷವನ್ನು ಬೇರುಸಹಿತ ಕಿತ್ತು ಬೂದಿ ಮಾಡಲು ಬಹುವಾಗಿ ಶ್ರಮಿಸಿದರು. ಸಮಾಜದ ಎಲ್ಲ ಕಾರ್ಯಕ್ಷೇತ್ರಗಳಲ್ಲಿಯೂ ಹರಿಜನರಿಗೆ ಸಮಾನಾಧಿಕಾರ ಸ್ವಾತಂತ್ರ್ಯವಿರಬೇಕೆಂದು ಗಾಂಧೀಜಿ ಬೋಧಿಸಿದರು. ಹಿಂದೂಗಳ ದೇವಾಲಯಗಳಿಗೆ ಹರಿಜನ ಪ್ರವೇಶ ಮಾಡಿಸಿದರು. ಆದರೆ ದುಷ್ಟರನ್ನು ಶಿಷ್ಟರನ್ನಾಗಿ ಪರಿವರ್ತಿಸಬಲ್ಲ ಸೌಜನ್ಯ ಮೂರ್ತಿಯಾದ ಅವರೂ ಸಹ ಸಮಾಜದಲ್ಲಿ ಹರಿಜನರಿಗೆ ಸಂಪೂರ್ಣ

ಗೌರವಾದರಗಳನ್ನು ತಂದು ಕೊಡಲಾಗಲಿಲ್ಲ. ಪಾಕಿಸ್ಥಾನ ಭಾರತಗಳ ವಿಭಜನೆ ಅವರು ಜಾತೀಯತೆಯನ್ನು ನಿರ್ಮೂಲಗೊಳಿಸುವ ಹೆಬ್ಬಯಕೆಯ ಸವಾಲು ಹಾಕಿತು.

ಆದರೆ ಬಸವಣ್ಣನವರ ಅಸ್ಪೃಶ್ಯೋದ್ಧಾರದ ಮಾರ್ಗ ಅಚ್ಚರಿಗೊಳಿಸುವಂಥದಾಗಿದೆ. ವೈದಿಕ ಮತಧರ್ಮದ ನಿಯಮಗಳು ಬಹು ಬಿಗಿಯಾಗಿದ್ದ ಹನ್ನೆರಡನೆಯ ಶತಮಾನದಲ್ಲಿಯೇ ಬಸವಣ್ಣನವರು ಜಾತಿಯ ಮೇಲು ಕೀಳುಗಳನ್ನು ತೊಡೆದುಹಾಕಿದರು. ತಮ್ಮ "ಮಹಮನೆ"ಗೆ ಎಲ್ಲಾ ಜಾತಿಯ ಎಲ್ಲಾ ದೇಶ ಮತ್ತು ಭಾಷೆಗಳ ಜಂಗಮರನ್ನು ಸ್ವಾಗತಿಸಿ "ಕುಲವೊಂದೆ ಶರಣಂಗೆ" ಎಂಬುದನ್ನು ಕಾರ್ಯದಲ್ಲಿ ತೋರಿಸಿದರು. ಕೀಳ್ಜಾತಿಯ ಹರಳಯ್ಯ, ಮೇಲ್ಜಾತಿಯ ಮಧುವರಸ ಇವರಲ್ಲಿ ಹೆಣ್ಣುಕೊಟ್ಟು ತರುವ ಸಂಬಂಧವನ್ನು ಬೆಳೆಸಿದ್ದು ಪ್ರಗತಿಪರ ಮತ್ತು ನಾಗರಿಕವೆಂದು ಹೇಳುವ ಈ ಶತಮಾನದ ಜನರಿಗೊಂದು ಸವಾಲಿನಂತಿದೆ. " ನನಗೆ ಪುನರ್ಜನ್ಮದಲ್ಲಿ ನಂಬಿಕೆ ಇಲ್ಲ. ಹಾಗೇನಾದರೂ ಮತ್ತೆ ಜನಿಸುವುದಾದರೆ ಅಸ್ಪೃಶ್ಯರಲ್ಲಿ ಜನಿಸಬೇಕೆಂಬ ಹೆಬ್ಬಯಕೆ ಇದೆ"ಎಂದು ಗಾಂಧೀಜಿ ಹೇಳಿದರು. ಬಸವಣ್ಣನವರಾದರೂ ತಾವು ಚೆನ್ನಯ್ಯನ ಮನೆಯ ದಾಸಿಯ ಮಗ ಮತ್ತು ಕಕ್ಕಯ್ಯನ ಮನೆಯ ದಾಸಿಯ ಮಗಳ ದೈಹಿಕ ಸಂಬಂಧದಿಂದ ಜನಿಸಿದವರೆಂದೂ, ಅಸ್ಪೃಶ್ಯರಾದ ಕಕ್ಕಯ್ಯ, ಶ್ವಪಚಯ್ಯ, ಚಿಕ್ಕಯ್ಯ, ಚನ್ನಯ್ಯ ತನ್ನನ್ನು ಎತ್ತಿ ಮುದ್ದಾಡಿ ಸಲಹಿದರೆಂದೂ ತಮ್ಮ ಅಸ್ಪೃಶ್ಯತಾ ಪ್ರೇಮವನ್ನು ಮೆರೆದಿದ್ದಾರೆ.

## ಕಾರ್ಲಮಾರ್ಕ್ಸ-ಬಸವಣ್ಣನವರು

ಇಬ್ಬರೂ ಸಂಪೂರ್ಣ ಸಮತಾವಾದಿಗಳು. ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಸ್ವಾತಂತ್ರ್ಯ ಮತ್ತು ಸಮತೆ ಸರ್ವರಿಗೂ ಅತ್ಯಗತ್ಯವೆಂದು ಇಬ್ಬರೂ ಭಾವಿಸಿದ್ದರು. ಆದ್ದರಿಂದಲೇ ಬಸವಣ್ಣನವರ ಸಮತಾವಾದಿ ಸಮಾಜ ರಚನೆಯಲ್ಲಿ ಸ್ತ್ರೀಪುರುಷರೆಂಬ ಅಂತರವಾಗಲಿ, ಕಾಯಕದಲ್ಲಿ ಮೇಲುಕೀಳೆಂಬ ಭಾವನೆಯಾಗಲಿ ಇರಲಿಲ್ಲ. ಅವರವರಿಗಿಷ್ಟವಾದ ಧರ್ಮವನ್ನವಲಂಬಿಸಬಹುದಾಗಿತ್ತು. ಆದರೆ ಸಮತಾವಾದಿ ಸಮಾಜ ರಚನೆಯ ಮಾರ್ಗ ಬೇರೆ ಬೇರೆಯಾದವು. ಮಾರ್ಕ್ಸ ಗುಂಪಿನವ

ರಲ್ಲಿ ಹಿಂಸೆಗೆ ಅವಕಾಶವಿತ್ತು ಬಸವಣ್ಣನವರು ಅಹಿಂಸೆ ಮತ್ತು ನ್ಯಾಯ ಮಾರ್ಗದಲ್ಲಿ ಇದನ್ನು ಸಾಧಿಸಲೆತ್ನಿಸಿದರು. 'ಶ್ರೀಮಂತರು ಕೂಡಹಾಕುತ್ತಿರುವ ಒಂದೊಂದು ನಾಣ್ಯವೂ ವಿನಾಶದ ಒಂದೊಂದು ಬೀಜ "ಎಂದು ಮಾರ್ಕ್ಸ್‌ತತ್ವ ಸಾರಿ ಹೇಳಿತು. ಬಸವಣ್ಣನವರು–" ಅನ್ನದೊಳಗೊಂದಗುಳ, ವಸ್ತ್ರದೊಳಗೊಂದೆಳೆಯು, ಹೊನ್ನಿನೊಳಗೊಂದೊರೆಯ ಇಂದಿಂಗೆ ನಾಳಿಂಗೆ ಬೇಕೆಂದೆನಾದೊಡೆ ನಿಮ್ಮಾಣೆ ನಿಮ್ಮ ಪುರಾತನರಾಣೆ ಕೂಡಲಸಂಗಮದೇವಾ" ಎಂದು ಧನಧಾನ್ಯಗಳ ಸಂಗ್ರಹವನ್ನು ನಿಷೇಧಿಸಿದರು.

ಈ ರೀತಿಯಲ್ಲಿ ಬುದ್ಧನ ಮಹಾತ್ಯಾಗ, ಕ್ರಿಸ್ತನ ಕ್ಷಮೆ ಮತ್ತು ಸಹನೆ, ಮೊಹಮ್ಮದನ ನಿಷ್ಠೆ, ಗಾಂಧೀಜಿಯವರ ಸ್ವಾತಂತ್ರ್ಯ ಮತ್ತು ಅಸ್ಪೃಶ್ಯತಾ ಪ್ರೇಮ, ಮಾರ್ಕ್ಸನ ಸಮತಾವಾದ ಮುಂತಾದ ವಿಶಿಷ್ಟ ಸದ್ಗುಣಗಳೂ ಬಸವಣ್ಣನವರಲ್ಲಿ ಸಂಗಮವಾಗಿದ್ದವು. ಈ ಪಂಚ ಕಲ್ಯಾಣ ಗುಣಗಳ ಪ್ರತಿಮೂರ್ತಿಯಾಗಿದ್ದ ಅವರಿಗೆ ಜಗತ್ತಿನ ಮಹಾಪುರುಷರ ಪಂಕ್ತಿಯಲ್ಲಿ ಒಂದು ಉನ್ನತ ಸ್ಥಾನವಿದೆ ಎಂಬುದು ಇದರಿಂದ ವ್ಯಕ್ತವಾಗುತ್ತದೆ.

# ಹಂಸಭಾವಿ ಶಿವಾನುಭವ ಸಮ್ಮೇಲನ

ಈಚೆಗೆ ಶಿವಾನುಭವ ಸಮ್ಮೇಲನಗಳು ಮುಖ್ಯ ಮುಖ್ಯ ಸ್ಥಳಗಳಲ್ಲಿ ಜರುಗುತ್ತಿರುವುದು ಕಂಡುಬರುತ್ತದೆ. ಇವು ಅಲ್ಲಲ್ಲಿಯ ಜನತೆಯ ಮನಸ್ಸನ್ನು ಆಕರ್ಷಿಸುತ್ತಲಿರುವವು. ಇವು ಮುಖ್ಯವಾಗಿ ಈಚೆಗೆ ಸ್ಥಾಪಿತವಾಗಿರುವ ವಿದ್ಯಾಮಂದಿರಗಳ ಚಾಲಕರು ನಡಿಸುತ್ತಿರುತ್ತಾರೆ ಮತ್ತು ಮುಖ್ಯ ಮುಖ್ಯ ಸ್ವಾಮಿಗಳವರೂ ಇವುಗಳನ್ನು ಲಕ್ಷಿಸಹತ್ತಿದ್ದಾರೆ. ಇದು ಶುಭ ಚಿನ್ಹವೇ ಇರುತ್ತದೆ.

ಹಂಸಭಾವಿಯು ಹಿರೇಕೆರೂರ ತಾಲೂಕಿನ ಒಂದು ಮುಖ್ಯಸ್ಥಳವಾಗಿದೆ. ಇಲ್ಲಿ ಈಚೆಗೆ ಧಾರವಾಡ ಶ್ರೀ ಮೃತ್ಯುಂಜಯ ಸ್ವಾಮಿಗಳವರ ಪ್ರೇರಣೆಯಿಂದ ಒಂದು ಇಂಗ್ಲೀಷ ಹಾಯಸ್ಕೂಲೂ, ವಸತಿಗೃಹವೂ, ಸ್ತ್ರೀಯರಿಗೋಸ್ಕರ ಒಂದು ವಿದ್ಯಾಮಂದಿರವೂ ಬಹಳ ದಿವಸಗಳಿಂದಲೂ ನಡೆಯುತ್ತ ಬಂದಿವೆ. ಅವುಗಳನ್ನು ಕೆಲವು ಶಿಕ್ಷಣಪ್ರೇಮಿಗಳು ನಿಃಸ್ವಾರ್ಥ ಬುದ್ಧಿಯಿಂದ ನಡೆಸುತ್ತ ಬಂದಿದ್ದಾರೆ. ಇಲ್ಲಿ ಅನೇಕ ಸುಂದರ ಕಟ್ಟಡಗಳು ಉಂಟಾಗಿರುತ್ತವೆ. ಹಂಸಭಾವಿಯು ಧಾರವಾಡ ಜಿಲ್ಲೆಯ ದಕ್ಷಿಣಕ್ಕೆ ಇರುವ ಒಂದು ಶಿಕ್ಷಣ ಕೇಂದ್ರವೆಂದು ಹೇಳಬಹುದು. ಈ ಪರಿಷತ್ತಿಗೆ ವೀರಶೈವ ಮಹಾಸಭೆಯ ಅಧ್ಯಕ್ಷರಾದ ಶ್ರೀ ಬಂಥನಾಳ ಶಿವಯೋಗಿಗಳು ಉದ್ಘಾಟಕರಾಗಿದ್ದರು. ಮತ್ತು ವಚನಶಾಸ್ತ್ರ ಸಂಶೋಧಕರಾದ ಡಾ. ರಾ|| ಬ|| ಪಿ ಜಿ. ಹಳಕಟ್ಟಿಯವರು ಅದರ ಅಧ್ಯಕ್ಷರಾಗಿದ್ದರು. ಶ್ರೀ ಜೋಳದರಾಶಿ ದೊಡ್ಡನಗೌಡರೂ, ಬಳ್ಳಾರಿಯ ಪ್ರೊ|| ನಾಗೇಶಶಾಸ್ತ್ರಗಳೂ, ಗದುಗಿನ ಶ್ರೀ ನಾಗಭೂಷಣ ಶಾಸ್ತ್ರಿತಳೂ, ಹಾವೇರಿಯ ವೇ|| ಮೂ. ಮಲ್ಲಿಕಾರ್ಜುನ ಸ್ವಾಮಿಗಳೂ, ಆಸ್ಥಾನ ವಿದ್ವಾನ ಪಂಡಿತರತ್ನ ಬಿ. ಶಿವಮೂರ್ತಿಶಾಸ್ತ್ರಿಗಳು ಮು. ಬೆಂಗಳೂರು ಇವರೂ ಸಭೆಗೆ ಆಗಮಿಸಿದ್ದರು. ಸಭೆಯಲ್ಲಿ ಅನೇಕ ಮಹತ್ವದ ಭಾಷಣಗಳಾದವು. ಅವುಗಳನ್ನು ನಾವು ಮುಂದಿನ ಶಿವಾನುಭವ ಪತ್ರಿಕೆಯ ಸಂಚಿಕೆಯಲ್ಲಿ ಕೊಡುವೆವು.

ಸಭೆಯು ಮೂರು ದಿವಸಗಳ ವರೆಗೆ ನಡೆದು ಕಡೆಯ ದಿವಸ ವಿಧಾಯಕವಾದ ಯಾವ ಕಾರ್ಯ ಮಾಡಬೇಕೆಂಬುದರ ಬಗ್ಗೆ ಅನೌಪಚಾರಿಕ

ವಾಗಿ ಚರ್ಚೆಯಾಯಿತು. ಆಗ ಅಲ್ಲಮಪ್ರಭುದೇವರ ಮತ್ತು ಶ್ರೀ ಚನ್ನಬಸವಣ್ಣನವರ ವಚನಗ್ರಂಥಗಳನ್ನು ಸಂಶೋಧಿಸಿ ಪ್ರಕಟಿಸಬೇಕೆಂದು ನಿರ್ಧಾರವಾಯಿತು. ಇದಕ್ಕೋಸ್ಕರ ಆರು ಜನರ ಸಮಿತಿಯು ನೇಮಿಸಲ್ಪಟ್ಟಿತು. ಅದರಲ್ಲಿ ಡಾ. ಪಿ. ಜಿ. ಹಳಕಟ್ಟಿ, ಪ್ರೊ. ನಾಗೇಶಶಾಸ್ತ್ರಿಗಳವರು, ಶ್ರೀ. ಮಲ್ಲಿಕಾರ್ಜುನದೇವರು, ಮು. ಹಾವೇರಿ, ವೇ. ಮೂ. ನಾಗಭೂಷಣಶಾಸ್ತ್ರಿಗಳು ಗದಗ, ಶ್ರೀ. ಕಲ್ಯಾಣಪ್ಪ ಬ್ಯಾಳಿ, ಮುಕ್ಕಾಮ ಹುನಗುಂದ. ಶ್ರೀ. ಟಿ. ಜಿ. ಉಗ್ರಾಣಕರ ಮು. ಹಂಸಭಾವಿ ಇವರು ಇರಬೇಕೆಂದು ಗೊತ್ತಾಯಿತು. ಈ ಸಮಿತಿಯವರು ಬನವಾಸಿ, ಬಳ್ಳಿಗಾವಿ ಈ ಭಾಗಗಳನ್ನು ಸಂಚರಿಸಿ ಅಲ್ಲಿ ಇರುವ ಶ್ರೀಪ್ರಭುದೇವರ ಅವಶೇಷಗಳನ್ನು ಸಂಶೋಧಿಸಬೇಕು. ಅದರಂತೆ ಬೈಲಹೊಂಗಲ, ಖಾನಾಪುರ, ಸುಪೆ, ಉಳವಿ ಈ ಸ್ಥಳಗಳಿರುವ ಭಾಗಗಳಲ್ಲಿಯೂ ಸಂಚಾರ ಮಾಡಿ ಶಿವಶರಣರ ಸ್ಥಾನಗಳನ್ನು ಗೊತ್ತುಹಚ್ಚಿ ಅವುಗಳ ಫೋಟೋ ಸಹಿತವಾಗಿ ಪ್ರಕಾಶಪಡಿಸಬೇಕೆಂದು ಗೊತ್ತಾಯಿತು. ಈ ಕಾರ್ಯದಲ್ಲಿ ಶ್ರೀ. ಮೃತ್ಯುಂಜಯ ಮಹಾಸ್ವಾಮಿಗಳು ಧಾರವಾಡ, ಇವರು ಎಲ್ಲ ರೀತಿಯಿಂದಲೂ ಸಹಾಯ ಮಾಡುವರು. ಈ ನಿರ್ಣಯವು ಔಪಚಾರಿಕವಾಗಿ ಕಡೆಯ ದಿವಸ ಗೊತ್ತಾಗಿದ್ದರೂ ವೀರಶೈವ ಸಮಾಜವು ಈ ಸಮಿತಿಗೆ ಎಲ್ಲ ರೀತಿಯಿಂದಲೂ ಸಹಾಯ ಮಾಡುವದು ಅತ್ಯವಶ್ಯಕವಾಗಿದೆಂದು ನಾವು ಹೇಳದಿರಲಾರೆವು.

ಹೀಗೆ ಆವಶ್ಯಕ ನಿರ್ಣಯಗಳಾಗಿ ಈ ಸಮ್ಮೇಲನವು ಮುಕ್ತಾಯವಾಯಿತು.

ಈ ಸಭೆಯು ಆದಬಳಿಕ ಸ್ತ್ರೀ ಸಮ್ಮೇಲನವು ಶ್ರೀಮತಿ ಸರಸ್ವತಿದೇವಿ ಗೌಡರ ಇವರ ಅಧ್ಯಕ್ಷತೆಯಲ್ಲಿ ಜರಗಿತು. ಮಹಿಳಾಗೋಷ್ಠಿಯಲ್ಲಿ ಅನೇಕ ಮಹತ್ವದ ಭಾಷಣಗಳಾದವು. ಅವುಗಳನ್ನು ನಾವು ಯಥಾವಕಾಶವಾಗಿ ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸುತ್ತ ಹೋಗುವೆವು.

**ಶ್ರೀ. ಮ. ನಿ. ಪ್ರ. ಸಂಗನಬಸವ ಶಿವಯೋಗಿಗಳು ಬಂಥನಾಳ ಇವರ ಉದ್ಘಾಟನೆಯ ಭಾಷಣದ ಸಾರವು ಅವರು ಹೇಳಿದ್ದೇನೆಂದರೆ:-**

ಶಿವಾನುಭವ ಸಿದ್ಧಾಂತದ ವಿಷಯವಾಗಿ ಕೆಲವು ಮಾತುಗಳನ್ನಾಡುವ ಮೊದಲು, ಈ ಹಂಸಭಾವಿಯ ಸಂಬಂಧವಾಗಿ ಒಂದೆರಡು ಮಾತುಗಳನ್ನಾಡುವದು ಅವಶ್ಯವೆಂದು ನಾನು ಭಾವಿಸಿದ್ದೇನೆ. ಈ ಗ್ರಾಮಕ್ಕೆ ಹಂಸಭಾವಿಯೆಂಬ

# ಹಂಸಭಾವಿ ಶಿವಾನುಭವ ಸಮ್ಮೇಲನ

ಈಚೆಗೆ ಶಿವಾನುಭವ ಸಮ್ಮೇಲನಗಳು ಮುಖ್ಯ ಮುಖ್ಯ ಸ್ಥಳಗಳಲ್ಲಿ ಜರುಗುತ್ತಿರುವುದು ಕಂಡುಬರುತ್ತದೆ. ಇವು ಅಲ್ಲಲ್ಲಿಯ ಜನತೆಯ ಮನಸ್ಸನ್ನು ಆಕರ್ಷಿಸುತ್ತಲಿರುವವು. ಇವು ಮುಖ್ಯವಾಗಿ ಈಚೆಗೆ ಸ್ಥಾಪಿತವಾಗಿರುವ ವಿದ್ಯಾಮಂದಿರಗಳ ಚಾಲಕರು ನಡಿಸುತ್ತಿರುತ್ತಾರೆ ಮತ್ತು ಮುಖ್ಯ ಮುಖ್ಯ ಸ್ವಾಮಿಗಳವರೂ ಇವುಗಳನ್ನು ಲಕ್ಷಿಸಹತ್ತಿದ್ದಾರೆ. ಇದು ಶುಭ ಚಿನ್ಹವೇ ಇರುತ್ತದೆ.

ಹಂಸಭಾವಿಯು ಹಿರೇಕೆರೂರ ತಾಲೂಕಿನ ಒಂದು ಮುಖ್ಯಸ್ಥಳವಾಗಿದೆ. ಇಲ್ಲಿ ಈಚೆಗೆ ಧಾರವಾಡ ಶ್ರೀ ಮೃತ್ಯುಂಜಯ ಸ್ವಾಮಿಗಳವರ ಪ್ರೇರಣೆಯಿಂದ ಒಂದು ಇಂಗ್ಲೀಷ ಹಾಯಸ್ಕೂಲೂ, ವಸತಿಗೃಹವೂ, ಸ್ತ್ರೀಯರಿಗೋಸ್ಕರ ಒಂದು ವಿದ್ಯಾಮಂದಿರವೂ ಬಹಳ ದಿವಸಗಳಿಂದಲೂ ನಡೆಯುತ್ತ ಬಂದಿವೆ. ಅವುಗಳನ್ನು ಕೆಲವು ಶಿಕ್ಷಣಪ್ರೇಮಿಗಳು ನಿಃಸ್ವಾರ್ಥ ಬುದ್ಧಿಯಿಂದ ನಡೆಸುತ್ತ ಬಂದಿದ್ದಾರೆ. ಇಲ್ಲಿ ಅನೇಕ ಸುಂದರ ಕಟ್ಟಡಗಳು ಉಂಟಾಗಿರುತ್ತವೆ. ಹಂಸಭಾವಿಯು ಧಾರವಾಡ ಜಿಲ್ಲೆಯ ದಕ್ಷಿಣಕ್ಕೆ ಇರುವ ಒಂದು ಶಿಕ್ಷಣ ಕೇಂದ್ರವೆಂದು ಹೇಳಬಹುದು. ಈ ಪರಿಷತ್ತಿಗೆ ವೀರಶೈವ ಮಹಾಸಭೆಯ ಅಧ್ಯಕ್ಷರಾದ ಶ್ರೀ ಬಂಥನಾಳ ಶಿವಯೋಗಿಗಳು ಉದ್ಘಾಟಕರಾಗಿದ್ದರು. ಮತ್ತು ವಚನಶಾಸ್ತ್ರ ಸಂಶೋಧಕರಾದ ಡಾ. ರಾ|| ಬ|| ಪಿ ಜಿ. ಹಳಕಟ್ಟಿಯವರು ಅದರ ಅಧ್ಯಕ್ಷರಾಗಿದ್ದರು. ಶ್ರೀ ಜೋಳದರಾಶಿ ದೊಡ್ಡನಗೌಡರೂ, ಬಳ್ಳಾರಿಯ ಪ್ರೊ|| ನಾಗೇಶಶಾಸ್ತ್ರಿಗಳೂ, ಗದುಗಿನ ಶ್ರೀ ನಾಗಭೂಷಣ ಶಾಸ್ತ್ರಿತಳೂ, ಹಾವೇರಿಯ ವೇ|| ಮೂ. ಮಲ್ಲಿಕಾರ್ಜುನ ಸ್ವಾಮಿಗಳೂ, ಆಸ್ಥಾನ ವಿದ್ವಾನ ಪಂಡಿತರತ್ನ ಬಿ. ಶಿವಮೂರ್ತಿಶಾಸ್ತ್ರಿಗಳು ಮು. ಬೆಂಗಳೂರು ಇವರೂ ಸಭೆಗೆ ಆಗಮಿಸಿದ್ದರು. ಸಭೆಯಲ್ಲಿ ಅನೇಕ ಮಹತ್ವದ ಭಾಷಣಗಳಾದವು. ಅವುಗಳನ್ನು ನಾವು ಮುಂದಿನ ಶಿವಾನುಭವ ಪತ್ರಿಕೆಯ ಸಂಚಿಕೆಯಲ್ಲಿ ಕೊಡುವೆವು.

ಸಭೆಯು ಮೂರು ದಿವಸಗಳ ವರೆಗೆ ನಡೆದು ಕಡೆಯ ದಿವಸ ವಿಧಾಯಕವಾದ ಯಾವ ಕಾರ್ಯ ಮಾಡಬೇಕೆಂಬುದರ ಬಗ್ಗೆ ಅನೌಪಚಾರಿಕ

ವಾಗಿ ಚರ್ಚೆಯಾಯಿತು. ಆಗ ಅಲ್ಲಮಪ್ರಭುದೇವರ ಮತ್ತು ಶ್ರೀ ಚನ್ನ ಬಸವಣ್ಣನವರ ವಚನಗ್ರಂಥಗಳನ್ನು ಸಂಶೋಧಿಸಿ ಪ್ರಕಟಿಸಬೇಕೆಂದು ನಿರ್ಧಾರ ವಾಯಿತು. ಇದಕ್ಕೋಸ್ಕರ ಆರು ಜನರ ಸಮಿತಿಯು ನೇಮಿಸಲ್ಪಟ್ಟಿತು. ಅದ ರಲ್ಲಿ ಡಾ. ಪಿ. ಜಿ. ಹಳಕಟ್ಟಿ, ಪ್ರೊ. ನಾಗೇಶಶಾಸ್ತ್ರಿಗಳವರು, ಶ್ರೀ. ಮಲ್ಲಿಕಾ ರ್ಜುನದೇವರು, ಮು. ಹಾವೇರಿ, ವೇ. ಮೂ. ನಾಗಭೂಷಣಶಾಸ್ತ್ರಿಗಳು ಗದಗ, ಶ್ರೀ. ಕಲ್ಯಾಣಪ್ಪ ಬ್ಯಾಳಿ, ಮುಕ್ಕಾಮ ಹುನಗುಂದ. ಶ್ರೀ. ಟಿ. ಜಿ. ಉಗ್ರಾಣ ಕರ ಮು. ಹಂಸಭಾವಿ ಇವರು ಇರಬೇಕೆಂದು ಗೊತ್ತಾಯಿತು. ಈ ಸಮಿತಿ ಯವರು ಬನವಾಸಿ, ಬಳ್ಳಿಗಾವಿ ಈ ಭಾಗಗಳನ್ನು ಸಂಚರಿಸಿ ಅಲ್ಲಿ ಇರುವ ಶ್ರೀಪ್ರಭುದೇವರ ಅವಶೇಷಗಳನ್ನು ಸಂಶೋಧಿಸಬೇಕು. ಅದರಂತೆ ಬೈಲ ಹೊಂಗಲ, ಖಾನಾಪುರ, ಸುಪೆ, ಉಳವಿ ಈ ಸ್ಥಳಗಳಿರುವ ಭಾಗಗಳಲ್ಲಿಯೂ ಸಂಚಾರ ಮಾಡಿ ಶಿವಶರಣರ ಸ್ಥಾನಗಳನ್ನು ಗೊತ್ತುಹಚ್ಚಿ ಅವುಗಳ ಫೋಟೋ ಸಹಿತವಾಗಿ ಪ್ರಕಾಶಪಡಿಸಬೇಕೆಂದು ಗೊತ್ತಾಯಿತು. ಈ ಕಾರ್ಯದಲ್ಲಿ ಶ್ರೀ. ಮೃತ್ಯುಂಜಯ ಮಹಾಸ್ವಾಮಿಗಳು ಧಾರವಾಡ, ಇವರು ಎಲ್ಲ ರೀತಿಯಿಂದಲೂ ಸಹಾಯ ಮಾಡುವರು. ಈ ನಿರ್ಣಯವು ಔಪಚಾರಿಕವಾಗಿ ಕಡೆಯ ದಿವಸ ಗೊತ್ತಾಗಿದ್ದರೂ ವೀರಶೈವ ಸಮಾಜವು ಈ ಸಮಿತಿಗೆ ಎಲ್ಲ ರೀತಿಯಿಂದಲೂ ಸಹಾಯ ಮಾಡುವದು ಅತ್ಯವಶ್ಯಕ ವಾಗಿದೆಂದು ನಾವು ಹೇಳದಿರಲಾರೆವು.

ಹೀಗೆ ಆವಶ್ಯಕ ನಿರ್ಣಯಗಳಾಗಿ ಈ ಸಮ್ಮೇಲನವು ಮುಕ್ತಾಯ ವಾಯಿತು.

ಈ ಸಭೆಯು ಆದಬಳಿಕ ಸ್ತ್ರೀ ಸಮ್ಮೇಲನವು ಶ್ರೀಮತಿ ಸರಸ್ವತಿದೇವಿ ಗೌಡರ ಇವರ ಅಧ್ಯಕ್ಷತೆಯಲ್ಲಿ ಜರಗಿತು. ಮಹಿಳಾಗೋಷ್ಠಿಯಲ್ಲಿ ಅನೇಕ ಮಹತ್ವದ ಭಾಷಣಗಳಾದವು. ಅವುಗಳನ್ನು ನಾವು ಯಥಾವಕಾಶವಾಗಿ ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸುತ್ತ ಹೋಗುವೆವು.

**ಶ್ರೀ. ಮ. ನಿ. ಪ್ರ. ಸಂಗನಬಸವ ಶಿವಯೋಗಿಗಳು ಬಂಥನಾಳ ಇವರ ಉದ್ಘಾಟನೆಯ ಭಾಷಣದ ಸಾರವು ಅವರು ಹೇಳಿದ್ದೇನೆಂದರೆ:-**

ಶಿವಾನುಭವ ಸಿದ್ಧಾಂತದ ವಿಷಯವಾಗಿ ಕೆಲವು ಮಾತುಗಳನ್ನಾಡುವ ಮೊದಲು, ಈ ಹಂಸಭಾವಿಯ ಸಂಬಂಧವಾಗಿ ಒಂದೆರಡು ಮಾತುಗಳನ್ನಾಡು ವದು ಅವಶ್ಯವೆಂದು ನಾನು ಭಾವಿಸಿದ್ದೇನೆ. ಈ ಗ್ರಾಮಕ್ಕೆ ಹಂಸಭಾವಿಯೆಂಬ

ಹೆಸರಿರುವದನ್ನು ಕೇಳಿ ನನಗೆ ಮೊದಲು ವಿಸ್ಮಯವಾಯಿತು. ಹಂಸಗಳಿರುವದು ಸರೋವರದಲ್ಲಿ ಎಂಬುದನ್ನು ನಾವು ಕಾವ್ಯ ಕವನಗಳಲ್ಲಿ ಪುರಾಣ ಕೀರ್ತನೆಗಳಲ್ಲಿ ಓದಿದ್ದುಂಟು. ಪ್ರತ್ಯಕ್ಷವಾಗಿ ನಾನು ಈ ವರೆಗೂ ನೋಡಿಲ್ಲ. ಆದರೆ ಇದು ಹಂಸಭಾವಿಯಾದಬಳಿಕ ಅಂದರೆ ಹಂಸಗಳಿರುವ ಭಾವಿಯಾದರೆ ಇದನ್ನು ನೋಡಲೇಬೇಕೆಂದು ಇಚ್ಛೆಯು ಮೊದಲುಂಟಾಯಿತು. ಇಲ್ಲಿಯ ಕಾರ್ಯದರ್ಶಿಗಳು ತಮ್ಮ ವರದಿಗಳನ್ನು ಕಳುಹಿದನಂತರ ಅದರಲ್ಲಿಯ ಸಂಗತಿಗಳನ್ನು ತಿಳಿದು, ಈ ಹಂಸಭಾವಿಯಲ್ಲಿರುವ ಹಂಸಗಳನ್ನೆಲ್ಲ ಕಾಣುವ ಕುತೂಹಲವು ಮತ್ತಿಷ್ಟು ಬೆಳೆಯಿತು.

ಹಂಸಗಳೆಂದರೆ ಹಂಸಪಕ್ಷಿಗಳೇ ಅಲ್ಲ. ಹಂಸಪಕ್ಷಿಗಳಲ್ಲಿರುವ ಗುಣಗಳಿದ್ದವರೆಲ್ಲರೂ ಹಂಸಗಳೇ. ಹಂಸಪಕ್ಷಿಯು ಮುಂದೆ ಹಾಲುನೀರು ಬೆರಸಿದ ಪಾತ್ರೆಯನ್ನಿಟ್ಟರೆ ನೀರನ್ನು ಬಿಟ್ಟು ಹಾಲನ್ನು ಕುಡಿಯುವಂತೆ ಅಸಾರವಾದುದನ್ನು ಬಿಟ್ಟು ಸಾರವನ್ನೇ ಗ್ರಹಿಸುವಂತೆ ಈ ಮೃತ್ಯುಲೋಕದಲ್ಲಿ ಮಾನವರೆಂಬ ಹಂಸಗಳ ಮುಂದೆ ಸತ್ಕರ್ಮ ದುಷ್ಕರ್ಮಗಳೆಂಬ ಹಾಲುನೀರು ಬೆರೆತ ಪಾತ್ರೆಯೊಂದಿದೆ. ಅದರಲ್ಲಿ ದುಷ್ಕರ್ಮವೆಂಬ ನೀರನ್ನು ಬಿಟ್ಟು ಸತ್ಕರ್ಮವೆಂಬ ಹಾಲನ್ನೇ ಸವಿಯುತ್ತಿರುವ ನಿಜವಾದ ಹಂಸಪಕ್ಷಿಗಳೇ ತಾವಿರುವಿರೆಂದು ನಿಸ್ಸಂದೇಹವಾಗಿ ಹೇಳಬಯಸುತ್ತೇನೆ.

ಈ ಹಂಸಭಾವಿಯ ಹಂಸಪಕ್ಷಿಗಳು ದುಷ್ಕರ್ಮವೆಂಬ ನೀರನ್ನು ಬಿಟ್ಟು ಸತ್ಕರ್ಮವೆಂಬ ಶಿಕ್ಷಣ ಪ್ರಸಾರದ ಹಾಲನ್ನು ೧೯೧೮ರಲ್ಲಿಯೇ ಸ್ವೀಕರಿಸಿ ಈ ೩೯ ವರ್ಷಗಳಲ್ಲಿ ೩೦೦ ವಿದ್ಯಾರ್ಥಿ, ವಿದ್ಯಾರ್ಥಿನಿಯರಿರುವ ಹೊಸ ಕಟ್ಟಡದಿಂದ ಕೂಡಿದ ದುರ್ಗದ ಹಾಯಸ್ಕೂಲನ್ನು ೧೫೦ ಬಡ ವಿದ್ಯಾರ್ಥಿ ವಿದ್ಯಾರ್ಥಿನಿಯರು ಉಚಿತ ಭೋಜನವನ್ನು ಮಾಡುತ್ತಿರುವ ಶ್ರೀ ಶಿವಯೋಗಿ ಮತ್ತು ಅಕ್ಕ ಮಹಾದೇವಿ ಪ್ರಸಾದ ನಿಲಯಗಳನ್ನು ಪ್ರಗತಿಪರವಾಗಿ ನಡಿಸುತ್ತ ಬಂದಿರುವ ಸಂಗತಿಯನ್ನು ತಿಳಿದರೆ ತಾವೆಲ್ಲರೂ ನಿಜವಾದ ಹಂಸಪಕ್ಷಿಗಳು; ತಾವಿರುವ ಈ ಚಿಕ್ಕ ಗ್ರಾಮವು ಸತ್ಯವಾದ ಹಂಸಭಾವಿಯು. ತಮಗೆಲ್ಲರಿಗೂ ಸೂತ್ರಧಾರರಾದ ಶ್ರೀ ಮೃತ್ಯುಂಜಯ ಸ್ವಾಮಿಗಳೇ ರಾಜಹಂಸರು. ತಮ್ಮೆಲ್ಲರ ಹೃದಯಕಮಲದಲ್ಲಿ ರಾಜಿಸುತ್ತಿರುವ ಶ್ರೀ ಅಥಣಿ ಶಿವಯೋಗಿಗಳೇ ಪರಮಹಂಸರೆಂದು ಮತ್ತೊಮ್ಮೆ ಹೇಳಲು ನನಗೆ ಅತ್ಯಂತ ಅಭಿಮಾನವೆನಿಸುತ್ತದೆ.

ಶಿವನು ತನ್ನನೆ ಆದ ತನಗಿಂತ ಭಿನ್ನವಿಲ್ಲದ ಒಂದು ತೇಜೋಮಯ ಶಕ್ತಿಯಿಂದ ಕೂಡಿರುವನು ಮತ್ತು ಆ ಶಕ್ತಿಯಿಂದ ಕೂಡಿಹನೆಂಬ ಸ್ವವಿಮರ್ಶೆಯು ಆತನಿಗುಂಟು. ಈ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವೇ ವೀರಶೈವ ಮತದ ಮೂಲ ತತ್ವವಾಗಿದೆ. ಈ ವರೆಗಿನ ಸಂಕ್ಷಿಪ್ತ ವಿವೇಚನೆಯಿಂದ ಶಿವಾನುಭವ ತತ್ವಕ್ಕೂ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತಕ್ಕೂ ಇರುವ ಸಮಾನಾರ್ಥವು ಚನ್ನಾಗಿ ತಿಳಿಯಬಹುದಾಗಿದೆ.

## ಶಿವಾನುಭವ ಸಮ್ಮೇಲನದ ಉಗಮ

ಇಂಥ ಶಕ್ತಿವಿಶಿಷ್ಟಾದ್ವೈತದಲ್ಲಿ ಅಥವಾ ಶಿವಾನುಭವದಲ್ಲಿ ಅಡಗಿದ್ದ ಭಕ್ತಿ, ಜ್ಞಾನ, ಕರ್ಮಗಳ ತ್ರಿವೇಣಿಸಂಗಮಕ್ಕೆ ಒಂದು ಶಾಶ್ವತವಾದ ನೆಲೆಯನ್ನು ಕೊಡಲು ಬಸವಾದಿ ಪ್ರಮಥರು ನಿಶ್ಚಯಿಸಿದರು. ವೀರಶೈವ ಮತದ ಉನ್ನತ ತತ್ವಗಳಿಗೆ ಸಾರ್ವತ್ರಿಕ ಸ್ವರೂಪ ಕೊಡುವದಕ್ಕೆ ಒಂದು ಶಿವಾನುಭವ ಮಂಟಪವನ್ನು ಸ್ಥಾಪಿಸಿ ಅದನ್ನು ಆಧ್ಯಾತ್ಮಿಕ ಪರಮಹಂಸಗಳ ತಿಳಿಗೊಳವನ್ನಾಗಿ ಮಾಡಬೇಕೆಂದು ಧೃಡಸಂಕಲ್ಪ ಮಾಡಿದರು.

ಈ ಶಿವಾನುಭವ ಮಂಟಪವು ಕೇವಲ ವ್ಯಕ್ತಿಯ ವೈಶಿಷ್ಟ್ಯವನ್ನು ಸಾರುವದಕ್ಕಾಗಲೀ, ವ್ಯಕ್ತಿಯ ವಿಮುಕ್ತತೆಯನ್ನು ಸಾಧಿಸುವದಕ್ಕಾಗಲೀ ಜನ್ಮತಾಳಿದುದಲ್ಲ. ಪಾಂಡಿತ್ಯದ ಕೆಚ್ಚಿನಿಂದ ಒಂದು ಗಡುಚಾದ ತತ್ವವನ್ನು ಪ್ರತಿಪಾದಿಸಿ, ಜನತೆಯನ್ನು ದಂಗುಗೊಳಿಸುವದಕ್ಕೂ ಅಲ್ಲ. ಆಗಮೋಕ್ತವಾದ ಈ ಸಿದ್ಧಾಂತದ ಪ್ರತಿಪಾದಕರಾದ ಬಸವಾದಿ ಪ್ರಮಥರು ಜನತೆಯಿಂದ ಬಹಳ ಎತ್ತರದಲ್ಲಿ ನಿಂತು, ಜನಸಾಮಾನ್ಯರನ್ನು ಕಡೆಗಣ್ಣಿನಿಂದ ಕಾಣುವ ಹಿರಿಯತನವನ್ನೂ ಮೆರೆಯಿಸಲಿಲ್ಲ. ತಮ್ಮ ಅನುಭವದ ಸಾಧನೆಗಳಿಂದ ಯಾವ ಸುಖಶಾಂತಿ ಸಮಾಧಾನಗಳನ್ನು ದೊರಕಿಸಿಕೊಂಡಿದ್ದರೋ ಅದರ ಲಾಭವು ಎಲ್ಲರಿಗೂ ದೊರೆಯಬೇಕೆಂದು ಬಯಸಿದರು. ತಮ್ಮ ಜೀವನವು ಹಸನಾದಂತೆ ಜಗತ್ತಿನ ಜೀವನವು ಹಸನಾಗಬೇಕೆಂದೂ ಲೋಕವೆಲ್ಲವು ಒಂದು ಧರ್ಮದ ಶ್ವೇತಛತ್ರದ ಕೆಳಗೆ ಸೋದರರಂತೆ, ಗೆಳೆಯರಂತೆ ಬಾಳಬೇಕೆಂಬುದೇ ಅವರ ಉದ್ದೇಶವಾಗಿತ್ತು.

ಲಿಂಗಾಂಗ ಸಾಮರಸ್ಯವೇ ವೀರಶೈವನ ಅಂತಿಮ ಗುರಿಯೆಂಬುದು ತಾವೆಲ್ಲರೂ ಅರಿತ ವಿಷಯವಾಗಿರುವದು. ಲಿಂಗಾಂಗಸಾಮರಸ್ಯವೆಂದರೆ

ಪ್ರಪಂಚ ಪರಮಾರ್ಥಗಳ ಸಾಮರಸ್ಯವಾಗಿರುವದು. ಲಿಂಗ ಅಂಗ ಹೀಗೆ ಅಧ್ಯಾತ್ಮ ಆದಿಭೌತಿಕಗಳ ಸಮನ್ವಯವೇ ಲಿಂಗಾಂಗ ಸಾಮರಸ್ಯವಾಗಿದೆ. ಮಾನವನು ದೇಹತೊಟ್ಟು ಬಂದಿರುವದು ತಪ್ಪಲ್ಲ. ದೇಹವೇ ತಾನೆಂದು ತಿಳಿದುಕೊಂಡಿರುವದು ತಪ್ಪಾಗಿರುವದು. ದೇಹಾತ್ಮ ಬುದ್ಧಿಯನ್ನು ತೆಗೆದು ಹಾಕಿ ದೇಹ ಬೇರೆ ನಾನು ಬೇರೆ ಎಂಬ ತಿಳುವಳಿಕೆಯು ಸ್ಥಿರವಾಗಿ, "ಪರೋಪಕಾರಾಯ ಇದಂ ಶರೀರಂ" ಎಂಬ ವಚನದಂತೆ ಈ ಶರೀರವನ್ನು ದಾಸೋಹಂ ಭಾವದಿಂದ ಲೋಕಸೇವೆಗೆ ಬಳಿಸಿದರೆ ಈ ತನುವೇ ಮಹಾ ತನುವಾಗುವದು. ಈ ರೀತಿ ತಿಳಿದ ಮನವೇ ಘನ ಮನವಾಗುವದು. ಒಡಲುಗೊಂಡು ಒಡಲು ಹಿಡಿಯದೆ, ಒಡಲಿಲ್ಲದ ನಿಜವನರಿಯುವದೇ ಈ ಶಿವಾನುಭವ ಸಿದ್ಧಾಂತವಾಗಿರುವದು. "ಒಲ್ಲೆನೆಂಬುದು ವೈರಾಗ್ಯ, ಒಲಿದೆ ನೆಂಬುದು ಕಾಯಗುಣ ಆವ ಪದಾರ್ಥವಾದರೇನು ತಾನಿದ್ದೆಡೆಗೆ ಬಂದುದ ಲಿಂಗಾರ್ಪಿತವ ಮಾಡಿ ಭೋಗಿಸುವದೇ ಆಚಾರ. ಕೂಡಲಸಂಗಮದೇವ ನೊಲಿಸ ಬಂದ ಪ್ರಸಾದ ಕಾಯವ ಕೆಡಿಸಲಾಗದು." ಎಂಬ ಬಸವಣ್ಣ ನವರ ಈ ವಚನವು ಶಿವಾನುಭವ ಸಿದ್ಧಾಂತಕ್ಕೆ ಸೂತ್ರರೂಪವಾಗಿದೆ.

ಹಿಂದಿನ ಅನುಭವ ಮಂಟಪವು ವಿವಿಧ ವೃತ್ತಿಯ ವಿವಿಧ ಜಾತಿ ಮತಗಳಿಗೆ ಸೇರಿದ ಎಲ್ಲ ಸ್ತ್ರೀಪುರುಷರಿಗೆ ಆಶ್ರಯವಾಗಿತ್ತು. ಅಲ್ಲಿ ವ್ಯಕ್ತಿಯ ಸಾಮಾಜಿಕ ಸ್ಥಿತಿಗೆ ಬೆಲೆ ಇರಲಿಲ್ಲ. ಅವರ ಶಿವಾನುಭವ ಮಹತ್ವವನ್ನಷ್ಟೇ ಎಣಿಕೆಗೆ ತೆಗೆದುಕೊಳ್ಳಲಾಗುತ್ತಿತ್ತು. ಈ ಉದಾರದೃಷ್ಟಿಯಿಂದ ಅಂದಿನ ಶಿವಾನುಭವ ಮಂಟಪವು ಭದ್ರವಾದ ತಳಹದಿಯನ್ನು ಹಾಕಿತು. ಈ ಕಾರಣದಿಂದಲೇ ವೀರಶೈವ ಧರ್ಮವು ಸಜೀವ ಧರ್ಮವೆಂದೆನಿಸಿಕೊಳ್ಳಲು ಅನುಕೂಲವಾಯಿತು. ರಾಜಭೋಗ ತೊರೆದುಬಂದ ಕಲಕುರಿಕೆಯ ರಾಜ ನಾದ ಸಕಲೇಶಮಾದರಸ, ಕಾಶ್ಮೀರದರಸು ಮೋಳಿಗೆಯ ಮಾರಯ್ಯ, ಸೌರಾ ಷ್ಟ್ರದ ಆಗರ್ಭ ಶ್ರೀಮಂತ ಆದಯ್ಯ, ಜೇಡರ ದಾಸಿಮಯ್ಯ, ಸಿಂಪಿಗ ಶಂಕರದಾಸಿಮಯ್ಯ, ಅಕ್ಕಸಾಲಿಗ ಬೊಮ್ಮಣ್ಣ, ಹಡಪದ ಅಪ್ಪಣ್ಣ, ಮಡಿ ವಾಳ ಮಾಚಿದೇವ, ದನಗಾಯಿ ರಾಮಣ್ಣ, ಸುಂಕದ ಬಂಕಣ್ಣ, ಡೋಹರ ಕಕ್ಕಯ್ಯ, ಮಚ್ಚಿಗಾರ ಹರಳಯ್ಯ, ಹೊಲೆಯರ ಶಿವನಾಗಮಯ್ಯ, ವೈದ್ಯ ಸಂಗಣ್ಣ. ಮೇದಾರ ಕೇತಯ್ಯ, ಸಿಪಾಯಿ ಮಾಪಣ್ಣ, ಬ್ರಾಹ್ಮಣ ಮಧುವ ರಸ, ಕಿನ್ನರಿ ಬ್ರಹ್ಮಯ್ಯ. ಮೊದಲಾದವರಲ್ಲದೆ ಅಕ್ಕಮಹಾದೇವಿ, ಸತ್ಯಕ್ಕ

ಮುಕ್ತಾಯಕ್ಕ, ರೆಮ್ಮವ್ವೆ, ರೇಚವ್ವೆ, ಸೋಮವ್ವೆ, ಸುವರ್ಣದೇವಿ, ಬೊಂತಲ ದೇವಿ, ಕಾಳವ್ವೆ, ನೀಲಲೋಚನೆ, ಗಂಗಾಂಬಿಕೆ, ಲಿಂಗಮ್ಮ, ಲಕ್ಕಮ್ಮ ಗೊಗ್ಗವ್ವೆ, ರೇಕವ್ವೆ, ಅಕ್ಕನಾಗಾಯಿ ಮೊದಲಾದ ವಿವಿಧ ಕಾಯಕದ ಸಾವಿರಾರು ಶರಣಶರಣೆಯರೆಲ್ಲರೂ ಬಸವಾದಿ ಪ್ರಮಥರ ಶಿವಾನುಭವ ಮಂಟಪದಲ್ಲಿದ್ದುದನ್ನು ಜ್ಞಾಪಿಸಿಕೊಂಡರೆ ಆಗಿನ ಶಿವಾನುಭವ ಸಮ್ಮೇಲನವು ಎಷ್ಟು ವಿಶಾಲಭಾವನೆಯಿಂದ ಕೂಡಿತ್ತೆಂಬುದರ ಅರಿವು ಪ್ರತಿಯೊಬ್ಬರಿಗೂ ಆಗದಿರದು.

## ಅಖಿಲಭಾರತ ಶಿವಾನುಭವ ಸಂಸ್ಥೆಯ ೧೩ನೇ ಸಮ್ಮೇಲನದ ಅಧ್ಯಕ್ಷರಾದ ಡಾ. ರಾ॥ಬ॥ ಪಿ. ಜಿ. ಹಳಕಟ್ಟಿ, ಬಿ. ಎ. ಎಲ್.ಎಲ್.ಬಿ. ಡಿಲಿಟ್ ಇವರ ಭಾಷಣದ ಸಾರವು.

ಈ ಶಿವಾನುಭವ ಸಂಸ್ಥೆಯ ಮೂಲಕ ಶಿವಾನುಭವ ತತ್ವಗಳ ಪ್ರಸಾರವು ಎಲ್ಲ ಕಡೆಗೂ ಭರದಿಂದ ನಡೆಯುತ್ತಾ ಇದೆ. ಸಾವಿರಾರು ಸ್ತ್ರೀಪುರುಷರು ಅವುಗಳನ್ನು ಪರಿಶೀಲನೆ ಮಾಡುತ್ತ ಇದ್ದಾರೆ. ಈ ಸಂಸ್ಥೆಯ ಮೂಲಕ ಗ್ರಂಥ ಪ್ರಕಟನೆಯ ಕಾರ್ಯಗಳೂ ನಡೆದಿರುತ್ತವೆ. ಅಲ್ಲದೆ ತಾವು "ಸಾವಧಾನ ಪತ್ರಿಕೆ" ಎಂಬ ಹೆಸರಿನ ನಿಯತಕಾಲಿಕ ಪಾಕ್ಷಿಕ ಪತ್ರಿಕೆಯನ್ನು ಸಹ ನಡೆಸುತ್ತಾ ಇದ್ದೀರಿ. ಅದರಲ್ಲಿ ವೀರಶೈವ ತತ್ವಬೋಧೆಯ ವಿಚಾರಗಳೂ ಮಾರ್ಮಿಕ ಲೇಖಗಳೂ ಯಾವಾಗಲೂ ಪ್ರಕಟವಾಗುತ್ತ ಬಂದಿವೆ. ಈ ಎಲ್ಲ ಚಟುವಟಿಕೆಗಳಿಗೆ ಧಾರವಾಡ ಪಟ್ಟಣವು ಮುಖ್ಯ ಕೇಂದ್ರವಾಗಿದ್ದು ಅಲ್ಲಿಂದಲೇ ಈ ಯಾವತ್ತು ಶಿವಾನುಭವ ಕಾರ್ಯಗಳು ಜರಗುತ್ತ ಬಂದಿವೆ. ಅಲ್ಲಿ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳು ಮುರುಘಾಮಠ ಇವರೇ ಈ ಕಾರ್ಯಗಳಿಗೆ ಪ್ರೇರಕರಾಗಿ ಕಾರ್ಯಮಾಡುತ್ತ ಇದ್ದಾರೆ. ಇಂಥ ಮಹತ್ತರವಾದ ಸಂಸ್ಥೆಯ ಅಧಿವೇಶನಕ್ಕೆ ತಾವು ನನ್ನನ್ನು ಅಧ್ಯಕ್ಷನನ್ನಾಗಿ ನಿಯೋಜಿಸಿರುವಿರಿ. ಇದಕ್ಕೋಸ್ಕರ ನಾನು ತಮಗೆ ತುಂಬಾ ಆಭಾರಿಯಾಗಿದ್ದೇನೆ.

ಇಪ್ಪೊತ್ತಿನಂತಹ ಪರಿಷತ್ತಿನಲ್ಲಿ ವಿಚಾರಮಾಡತಕ್ಕಂಥ ವಿಷಯಗಳು ಐದು ಇವೆ ಎಂದು ನಾವು ಹೇಳಬಹುದು. ಅವು ಯಾವವೆಂದರೆ (೧) ವೀರಶೈವ ಸಂಸ್ಕೃತಿಯ ನಿಜಸ್ವರೂಪು ಯಾವತರದ್ದಿದೆ, ಈ ವಿಚಾರದಲ್ಲಿ ವೀರ

ಶೈವವು ದ್ವೈತವೋ ಅದ್ವೈತವೋ ? ಅದ್ವೈತವಿದ್ದರೆ ಅದು ಯಾವ ವಿಧದ ಅದ್ವೈತವು ? ಅದರ ನಾಮಾಂಕಿತವಾವುದು ? ಇದು ಮಾಯೆಯನ್ನು ಒಪ್ಪಿಕೊಳ್ಳುತ್ತದೋ ಅಥವಾ ಇಲ್ಲವೋ ಈ ವಿಧದ ವಿಷಯುಗಳು ಇದರಲ್ಲಿ ಸಮಾವೇಶವಾಗುತ್ತವೆ. (೨) ವೀರಶೈವ ಧಾರ್ಮಿಕ ಮತ್ತು ಸಾಮಾಜಿಕ ಇತಿಹಾಸ. ಇದರಲ್ಲಿ ವೀರಶೈವ ಧರ್ಮದ ಪ್ರಾರಂಭವು ಹೇಗಾಯಿತು, ಆದರಲ್ಲಿ ಕಾಲ ಕಾಲಕ್ಕೆ ಉಂಟಾದ ರೂಪುಗಳು ಯಾವವು ? ಈ ರೂಪುಗಳು ಏತರ ಮೂಲಕ ಉಂಟಾಗುತ್ತ ಬಂದವು ? ವೀರಶೈವ ಸಮಾಜದಲ್ಲಿ ಉತ್ಪನ್ನರಾದ ಮಹಾಪುರುಷರು ಯಾರು ಮತ್ತು ಅವರ ಚರಿತ್ರೆಗಳ ವಿವರಗಳು ಈ ಎಲ್ಲ ವಿಷಯುಗಳು ಇದರಲ್ಲಿ ಸಮಾವೇಶವಾಗುತ್ತವೆ. (೩) ವೀರಶೈವ ವಾಙ್ಮಯ ಸಂಶೋಧನೆ ಇದು ಮೂರನೆಯ ವರ್ಗದಲ್ಲಿ ಬರುತ್ತದೆ. ವೀರಶೈವ ವಾಙ್ಮಯವು ಯಾವ ಯಾವ ಭಾಷೆಗಳಲ್ಲಿ ಕಂಡುಬರುತದೆ ಅದು ಆಯಾ ಭಾಷೆಗಳಲ್ಲಿ ಯಾವ ತರದ ರಚನೆಯುಳ್ಳದ್ದಾಗಿದೆ, ಆಯಾ ಭಾಷೆಗಳಲ್ಲಿ ಅದರ ವಿಸ್ತಾರವು ಎಷ್ಟಿದೆ, ಅವುಗಳ ಕಾಲವಾವುದು ಇಂಥ ವಿಷಯುಗಳು ಸಮಾವೇಶವಾಗುತ್ತವೆ. (೪) ಶ್ರೀ ಬಸವೇಶ್ವರನ ಚರಿತ್ರೆಯ ಸಂಶೋಧನೆ. ಅವನಂತೆಯೇ ಕಾಲ ಕಾಲಕ್ಕೆ ಸಮಾಜದಲ್ಲಿ ಉದ್ಭವಿಸಿರುವ ಶರಣರ ಮತ್ತು ಮಹಾನುಭಾವರ ಚರಿತ್ರೆಗಳನ್ನು ಸಹ ಇದರಲ್ಲಿ ಸಮಾವೇಶ ಮಾಡಬಹುದು. ಈ ವಿಷಯವಾದರೂ ಮಹತ್ವದ್ದಿದ್ದು ಇದರ ತಿಳಿವಳಿಕೆಯನ್ನು ಸಮಾಜದಲ್ಲಿ ಮತ್ತು ನಾಡಿನಲ್ಲಿ ಉಂಟುಮಾಡುವದು ಅವಶ್ಯವು. (೫) ವೀರಶೈವ ಸಮಾಜದ ಸಂಘಟನೆ. ಈ ವಿಷಯವಾದರೂ ಅತ್ಯಂತ ಮಹತ್ವದ್ದಿದೆ. ಸಂಘಟನೆಯ ಮೇಲೆಯೇ ಸಮಾಜದ ಮಹತ್ವ ಮತ್ತು ಅದರ ವಿಕಾಸ ಇವುಗಳು ಅವಲಂಬಿಸಿರುತ್ತವೆ. ಈ ವಿಷಯವಾಗಿ ನಾವು ನಿಶ್ಚಿತ ಧೋರಣವುಳ್ಳವರಾಗಿ ಜಾಗ್ರತೆಯಿಂದ ಕಾರ್ಯ ಮಾಡುತ್ತಿರುವದು ಅವಶ್ಯವಾದುದು. ಹೀಗೆ ನಾವು ಐದು ವಿಷಯುಗಳನ್ನು ಮುಂದೆ ಮಾಡಿಕೊಂಡು ಕಾರ್ಯಗಳನ್ನು ಜರಗಿಸುತ್ತ ಹೋಗಬೇಕು. ಈ ವಿಷಯುಗಳನ್ನು ಸಂಸ್ಥೆಯ ಸದಸ್ಯರು ಕೈಕೊಳ್ಳಬೇಕು.

ಆರಂಭದಲ್ಲಿ ವೀರಶೈವವು ಒಂದು ವಿಧದ ದ್ವೈತ ಮತವೆಂಬ ತಿಳುವಳಿಕೆಯುಂಟಾಗಿತ್ತು. ಯಾಕಂದರೆ ಅದು ಒಂದು ರೀತಿಯ ಭಕ್ತಿಪಂಥವೆಂಬ ನಂಬಿಗೆಯು ಜನರಲ್ಲಿ ಉಂಟಾಗಿತ್ತು. ಆದರೆ ಮುಂದೆ ಅದು ಅದ್ವೈತ

ಮಾರ್ಗದ್ದೆಂದು ಜನರು ತಿಳಿಯಹತ್ತಿದರು. ಆಗ ನಮ್ಮ ಪಂಡಿತರು ನ್ಯಾಯ, ವ್ಯಾಕರಣ, ಶಂಕರಭಾಷ್ಯ ಇವುಗಳ ಅಭ್ಯಾಸದಲ್ಲಿ ತೊಡಗಿದರು. ಅವರು ಇವುಗಳಲ್ಲಿ ಪೂರ್ಣಜ್ಞಾನವನ್ನು ಹೊಂದಬೇಕೆಂದು ಕಾಶೀ ಪಟ್ಟಣಕ್ಕೆ ಹೋಗಿ ಅಲ್ಲಿಯ ಪಾಠಶಾಲೆಗಳಲ್ಲಿ ಪ್ರವೇಶವನ್ನು ಹೊಂದಹತ್ತಿದರು. ಅವರಲ್ಲಿ ಬಹುಜನರು ಅವುಗಳ ಪರೀಕ್ಷೆಗಳಲ್ಲಿ ವಿಶೇಷ ಪ್ರಾವೀಣ್ಯತೆಯನ್ನು ಪಡೆಯಹತ್ತಿದರು. ಆಮೇಲೆ ಅವರು ಕರ್ನಾಟಕಕ್ಕೆ ತಿರುಗಿ ಬಂದ ಬಳಿಕ ಅವರು ಅಲ್ಲಲ್ಲಿ ಇಂಥವೇ ಆದ ಸಂಸ್ಕೃತ ಪಾಠಶಾಲೆಗಳನ್ನು ಸ್ಥಾಪಿಸತೊಡಗಿದರು. ಆದರೆ ಹೀಗೆ ಶಿಕ್ಷಣ ಹೊಂದಿದವರಿಗೆ ವೀರಶೈವ ಮತದ ಪರಿಚಯವೇ ಇರುತ್ತಿದ್ದಿಲ್ಲ. ಆದ್ದರಿಂದ ಅವರ ಪಾಠಶಾಲೆಗಳಲ್ಲಿ ವೀರಶೈವ ಮತದ ಶಿಕ್ಷಣವೇ ಇರಲಿಲ್ಲ. ಈ ಸ್ಥಿತಿಯು ಅನೇಕ ವರ್ಷಗಳ ವರೆಗೆ ಸಾಗಿತು.

ಮುಂದೆ ಶಿವಾನುಭವದ ಅಭ್ಯಾಸವು ಪ್ರಾರಂಭವಾಯಿತು. ವಚನ ಶಾಸ್ತ್ರ ಗ್ರಂಥಗಳ ಪ್ರಕಟನೆಯೇ ಇದಕ್ಕೆ ಮೂಲವಾಗಿದೆ. ಆಗ ಈ ಶಾಸ್ತ್ರದ ತತ್ವಗಳು ಕನ್ನಡ ಮತ್ತು ಸಂಸ್ಕೃತ ಗ್ರಂಥಗಳಲ್ಲಿ ಇದ್ದದ್ದು ತೋರಿಬಂದಿತು. ಆಗ ೨ ಸ್ಥಲ, ೩ ಸ್ಥಲ, ೬ ಮತ್ತು ೩೬ ಸ್ಥಲಗಳ ವಿಚಾರಗಳು ಮುಂದೆ ಬರಲಿಕ್ಕೆ ಹತ್ತಿದವು. ಹಾಗೂ ನೂರೊಂದು ಸ್ಥಲಗಳೂ ಅಷ್ಟಾವರಣಕ್ಕೆ ಸಂಬಂಧಿಸಿದ ವಿಷಯಗಳೂ ಮುಂದೆ ಅಭ್ಯಾಸಿಸಲ್ಪಡಹತ್ತಿದವು. ಇದೇ ಆಧುನಿಕ ಶಿವಾನುಭವ ಜ್ಞಾನ ಪ್ರಸಾರದ ಕಾಲವೆಂದು ಹೇಳಬಹುದು. ಆದರೆ ಈ ಅಭ್ಯಾಸವು ಇನ್ನೂ ಪೂರ್ಣ ಸ್ಥಿತಿಗೆ ಬಂದಿರುವದಿಲ್ಲ. ಅಷ್ಟಾವರಣದ ವಿಷಯಗಳಲ್ಲಿ ಗುರುಲಿಂಗ ಜಂಗಮಗಳೆಂದರೇನು, ಇಷ್ಟ ಪ್ರಾಣ ಭಾವಲಿಂಗಗಳ ಲಕ್ಷಣಗಳೇನು, ಷಟ್‌ಸ್ಥಲ ಸಿದ್ಧಾಂತವಾವುದು. ಈ ಎಲ್ಲ ತರದ ವಿಷಯಗಳ ಪರಿಶೀಲನೆಯು ಈಗ ಮುಂದೆ ಬರಹತ್ತಿದೆ. ಆದರೆ ಇವುಗಳ ಆಮೂಲಾಗ್ರ ವಿವೇಚನೆಯು ಇನ್ನೂ ಪೂರ್ಣ ಸ್ಥಿತಿಗೆ ಬಂದಿಲ್ಲ. ಈ ವಿಷಯಗಳು ಮುಂದೆ ಬರಲಾಗಿ ಪಾದೋದಕ ಪ್ರಸಾದಗಳು, ಮಂತ್ರ ಇಂಥ ವಿಷಯಗಳು ಮುಂದೆ ಬರಹತ್ತಿವೆ. ಈ ವಿಷಯಗಳ ಬಗ್ಗೆ ಶಿವಶರಣರ ಅಸಂಖ್ಯ ಉಕ್ತಿಗಳು ಇವೆ. ಅವುಗಳು ಶಿವಾನುಭವ ಗ್ರಂಥಮಾಲೆಯ ಗ್ರಂಥಗಳಲ್ಲಿ ಪ್ರಕಟವಾಗುತ್ತಲಿವೆ. ಆದರೆ ಅವುಗಳ ಆಮೂಲಾಗ್ರ ವಿಚಾರಗಳು ಸಾಕಷ್ಟು ಹೊರಬಿದ್ದಿರುವದಿಲ್ಲ.

ಅವುಗಳನ್ನು ನಿಮ್ಮ ಶಿವಾನುಭವ ಸಂಸ್ಥೆಯ ಸಭಾಸದರು ಪರಿಶೀಲನೆ ಮಾಡಿ ಅವುಗಳ ತತ್ವಗಳನ್ನು ವಿಶದಪಡಿಸುವದು ಅತ್ಯಾವಶ್ಯಕವಾಗಿದೆ. ಇವುಗಳು ಪ್ರಕಾಶಕ್ಕೆ ಬಂದ ಮೇಲೆ ವೀರಶೈವ ನಿಜಸ್ವರೂಪನ್ನು ಬಹಿರಂಗಗೊಳಿಸಿದಂತೆ ಆಗುತ್ತದೆ.

## ವಾಙ್ಮಯ ಸಂಶೋಧನೆ

ಇದೊಂದು ಅತ್ಯಂತ ಮಹತ್ವದ ವಿಷಯವಾಗಿದ್ದು ಅಖಿಲ ಭಾರತ ಶಿವಾನುಭವ ಸಮ್ಮೇಲನದ ಚಾಲಕರು ಈ ಕಾರ್ಯವನ್ನು ಕೈಕೊಳ್ಳುವದು ಬಹು ಯುಕ್ತವಾಗಿದೆಂದು ನನಗೆ ತೋರುತ್ತದೆ. ಈ ವಿಷಯದ ವ್ಯಾಪ್ತಿಯು ಬಹಳವಿದೆ. ಇದು ಕನ್ನಡ, ಆಂಧ್ರ ಮತ್ತು ಸಂಸ್ಕೃತ ಭಾಷೆಗಳಲ್ಲಿ ವಿಸ್ತಾರ ಹೊಂದಿದೆ. ಇದು ಕನ್ನಡ ಭಾಷೆಯಲ್ಲಿ ಹೆಚ್ಚಾಗಿ ಇದ್ದು ಅದು ನಾನಾ ಮುಖವಾಗಿ ಹರಿದಿರುತ್ತದೆ. ಇದರ ಸಂಶೋಧನೆಯು ಬಹು ಚಟುವಟಿಕೆ ಯಿಂದ ಸಾಗಬೇಕಾಗಿದೆ.

ಇದರಂತೆ ಸಂಸ್ಕೃತ ಗ್ರಂಥಗಳೂ ಬಹುಸಂಖ್ಯೆಯುಳ್ಳವಾಗಿವೆ. ಮುಖ್ಯ ವಾಗಿ ಆಗಮ ಗ್ರಂಥಗಳನ್ನು ನಾವು ಅವಶ್ಯವಾಗಿ ಬೆಳಕಿಗೆ ತರಬೇಕು. ಅವುಗಳಲ್ಲಿ ವೀರಶೈವ ಮತದ ಮೂಲವನ್ನು ಸಂಶೋಧಿಸಿದ್ದಾದರೆ, ಬಹು ಮಹತ್ವದ ಕಾರ್ಯವು ಕೊನೆಗೊಂಡಂತಾಗುತ್ತದೆ. ಇತ್ತ ಕಡೆಗೆ ನಾವು ಇನ್ನೂ ಸಾಕಷ್ಟು ಲಕ್ಷ್ಯಕೊಟ್ಟಿರುವದಿಲ್ಲ. ಕೆಲವು ಆಗಮ ಗ್ರಂಥಗಳು ಮಾತ್ರ ಪ್ರಕಟವಾಗಿರುತ್ತವೆ.

ಈ ಕಾರ್ಯಗಳು ಬಿಕ್ಕಟ್ಟಿನವೂ, ವಿಶೇಷ ಪರಿಶ್ರಮವುಳ್ಳವೂ ಇರು ತ್ತವೆ. ಇವು ಪೂರ್ತಿಹೊಂದಲು ಕಾಲವು ಬೇಕಾಗುತ್ತದೆ. ಆದ್ದರಿಂದ ಸದ್ಯಕ್ಕೆ ಕೆಲವು ಮಹತ್ವದ ಅವಶ್ಯಕ ಗ್ರಂಥಗಳನ್ನು ಪ್ರಕಟಿಸುವ ಕಾರ್ಯ ವನ್ನು ನಾವು ಶೀಘ್ರವಾಗಿ ಕೈಕೊಳ್ಳಬೇಕು. ಇವುಗಳಲ್ಲಿ ಅಲ್ಲಮಪ್ರಭು, ಚನ್ನಬಸವೇಶ್ವರ ಇವರಿಂದ ರಚಿತವಾದ ಗ್ರಂಥಗಳನ್ನು ಶೀಘ್ರವಾಗಿ ನಾವು ಅಚ್ಚುಹಾಕಿಸಬೇಕು.

## ಬಸವೇಶ್ವರನ ಮತ್ತು ಶಿವಶರಣರ ಚರಿತ್ರೆಗಳ ಸಂಶೋಧನೆ.

ಶಿವಶರಣರಲ್ಲಿ ಬಸವೇಶ್ವರನು ಮಹಾಪುರುಷನು. ಮತ್ತು ಮಹಾತ್ಮಿ ಕನು. ಅವನ ಹೆಸರು ವೀರಶೈವರಲ್ಲಿ ಪ್ರಣವಾಕ್ಷರಗಳಲ್ಲಿ ಸಹ ಸೇರ್ಪಡೆ

ಯಾಗಿದೆ. ಇದರಿಂದ ಪ್ರತಿದಿನ ಪೂಜಾಕಾಲದಲ್ಲಿ ಅವನ ಹೆಸರು ಸ್ಮರಣೆಗೆ ಬರುವಂತೆ ವೀರಶೈವರಲ್ಲಿ ಏರ್ಪಾಡು ಆಗಿರುತ್ತದೆ. ಆದರೆ ಕೆಲವು ಪರಮತೀಯರು ಅವನ ವಿಷಯವಾಗಿ ಕುತ್ಸಿತ ಆರೋಪಗಳನ್ನು ಆಗಿಂದಾಗ್ಗೆ ಮಾಡುತ್ತಿರುತ್ತಾರೆ. ಇಷ್ಟೇ ಅಲ್ಲ, ವೀರಶೈವರಲ್ಲಿ ಅನೇಕರು ಜಾತಿಪಂಥಗಳಿಗೆ ಅಂಟಿಕೊಂಡವರು ಇದ್ದು ಅವರು ಬಸವೇಶ್ವರನು ಜಾತಿಗಳನ್ನು ಕಿತ್ತೊಗೆದದ್ದರಿಂದ ಅವನಿಂದ ಸಮಾಜವು ಕೆಟ್ಟಿತೆಂದು ಅವರು ಅಭಿಪ್ರಾಯಪಡುವದುಂಟು. ಕೆಲ ಪರಮತೀಯರು ಬಸವೇಶ್ವರನು ಅನೀತಿಗೆ ಆಸ್ಪದವನ್ನು ಕೊಟ್ಟನೆಂತಲೂ ಅವನ ಮೇಲೆ ಆರೋಪವಿಡುತ್ತಾರೆ. ಇಂಥ ದೋಷಾರೋಪಣೆಗಳಿಗೆ ಆಸ್ಪದ ಉಳಿಯದಂತೆ ವೀರಶೈವ ಸಮಾಜದವರು ಬಸವೇಶ್ವರನ ಬಗ್ಗೆ ಒಂದು ಅಧಿಕೃತ ಚರಿತ್ರೆಯನ್ನು ಬರೆಯಿಸುವದು ಅತ್ಯಾವಶ್ಯಕವಾಗಿರುತ್ತದೆ. ಈ ಕಾರ್ಯವನ್ನು ತಮ್ಮ ಸಂಸ್ಥೆಯವರು ನಿರ್ವಹಿಸಬೇಕೆಂದು ನನ್ನ ಆಗ್ರಹದ ಸೂಚನೆ ಇದೆ. ಇಂಥ ಚರಿತ್ರೆಯ ಭಾಷಾಂತರವನ್ನು ಇಂಗ್ಲಿಷ ಭಾಷೆ, ಹಾಗೆಯೇ ಭಾರತದಲ್ಲಿಯ ಎಲ್ಲ ಭಾಷೆಗಳಲ್ಲಿಯೂ ಸಿದ್ಧಪಡಿಸಿ ಭಾರತದ ತುಂಬೆಲ್ಲ ಪ್ರಸಾರ ಮಾಡುವ ಕಾರ್ಯವನ್ನು ಕೈಕೊಳ್ಳಬೇಕೆಂದು ನನ್ನ ಸೂಚನೆಯು ಇರುತ್ತವೆ.

## ವೀರಶೈವ ಸಂಘಟನೆ.

ವೀರಶೈವ ಸಂಘಟನೆಯು ಸಮಾಜದ ಅಭಿವೃದ್ಧಿಗೆ ತಳಹದಿಯಾಗಿದೆ. ಹೇಗೆ ವಾಙ್ಮಯವು ಸಮಾಜದ ಉನ್ನತಿಗೆ ಕಾರಣವೋ ಹಾಗೆಯೇ ಸಂಘಟನೆಯೂ ಕಾರಣವಾಗಿದೆ. ಹಿಂದಿನಕಾಲದಲ್ಲಿ ವೀರಶೈವ ಸಮಾಜಕ್ಕೆ ಅವರ ಮಠಗಳೇ ತಳಹದಿಯಾಗಿದ್ದವು. ಈ ಮಠಗಳು ಸ್ವಯಂಪೂರ್ಣವಾಗಿದ್ದವು. ಅವು ಸಮಾಜದಲ್ಲಿ ಐಕ್ಯತೆಯನ್ನುಂಟುಮಾಡಿ ಜನತೆಯ ನೈತಿಕ ಮತ್ತು ವಾಙ್ಮಯಾತ್ಮಕ ಅಭಿವೃದ್ಧಿಗೆ ಕಾರಣವಾಗಿದ್ದವು. ಹಿಂದಿನಕಾಲದಲ್ಲಿ ಮಠಾಧಿಪತಿಗಳೇ ಗ್ರಂಥಕಾರರಾಗಿದ್ದರು. ಅವರು ಅನೇಕತರದ ಗ್ರಂಥಗಳನ್ನು ರಚಿಸಿದ್ದಾರೆ. ಅವು ವಿದ್ವತ್ಪೂರ್ಣವಾಗಿರುತ್ತವೆ. ಅವರ ಮೂಲಕವೇ ವೀರಶೈವ ಸಮಾಜವು ವಿಸ್ತಾರಹೊಂದಿತು. ಮಠಾಧಿಪತಿಗಳು ತಮ್ಮ ಮೇಲೆ ವಿಶ್ವಾಸವಿದ್ದವರನ್ನೆಲ್ಲ ತಮ್ಮ ಶಿಷ್ಯರನ್ನಾಗಿ ಮಾಡಿಕೊಳ್ಳುವರು. ಅವರಲ್ಲಿ ಜಾತಿಭೇದದ ಸೋಂಕು ಎಷ್ಟುಮಾತ್ರವೂ ಇರಲಿಲ್ಲ. ಎಲ್ಲರೂ ಸರಿಸಮಾನರೆಂದು ಭಾವಿಸುವರು. ಆದ್ದರಿಂದ ಅವರ ಶಿಷ್ಯಸಮುದಾಯು

ದಲ್ಲಿ ಎಲ್ಲ ಅಂಗಡದವರು ಸಮಾವೇಶವಾಗಿದ್ದರು. ಅವರು ಯಾರಲ್ಲಿಯೂ ಭೇದಭಾವವನ್ನೆಣಿಸದೆ ಎಲ್ಲರಿಗೂ ಉಪದೇಶವನ್ನು ಮಾಡುತ್ತಿದ್ದರು. ಹೀಗೆ ಉಪದೇಶ ಹೊಂದಿದವರೆಲ್ಲರೂ ಸಂಸಮಾನರೆಂದು ಅವರು ಭಾವಿಸುವರು. ಒಮ್ಮೊಮ್ಮೆ ವೀರಶೈವರಿಗೆ ಪರಧರ್ಮಿಗಳ ಕೂಡ ಹೋರಾಡುವ ಪ್ರಸಂಗ ಗಳು ಬರುತ್ತಿದ್ದವು. ಆಗ ಅವರೆಲ್ಲರೂ ಒಮ್ಮನಸ್ಸಿನಿಂದ ಯುದ್ಧ ಮಾಡಲು ಸಿದ್ಧರಾಗುತ್ತಿದ್ದರು. ಲಕ್ಷ್ಮೇಶ್ವರ, ಅಬ್ಬಲೂರು, ಪಾನಗಲ್ಲು, ಮಾರುಡಿಗೆ ಇಲ್ಲಿ ಹಿಂದಿನಕಾಲದಲ್ಲಿ ಯುದ್ಧಗಳಾಗಿವೆ. ಅವುಗಳಲ್ಲಿ ವೀರಶೈವರು ವಿಜ ಯಗಳನ್ನು ಸಂಪಾದಿಸಿದ್ದಾರೆ.

ಮಠಾಧಿಕಾರಿಗಳು ಗ್ರಾಮದಲ್ಲಿರುವ ಭಕ್ತರಿಗೆ ಶಿಕ್ಷಣಕೊಡುವ ಕಾರ್ಯ ವನ್ನೂ ನಡಿಸುತ್ತಿದ್ದರು. ಅವರು ವಾಙ್ಮಯ ಮತ್ತು ಗಣಿತ ಈ ವಿಷಯ ಗಳಿಗೆ ವಿಶೇಷ ಲಕ್ಷ್ಯಕೊಡುವರು. ಗ್ರಾಮದಲ್ಲಿಯವರು ಮಠಾಧಿಪತಿಗಳಿಗೆ ಯೋಗ್ಯ ಮಠಗಳನ್ನು ಕಟ್ಟಿಸಿಕೊಡುವರು. ಇಷ್ಟೇಅಲ್ಲ, ಅವರ ನಿರ್ವ ಹಕ್ಕೆ ಜಮೀನುಗಳನ್ನೂ ಸಹ ಹಾಕಿಕೊಡುವರು. ಇದರಿಂದ ವೀರಶೈವ ಧರ್ಮಪ್ರಸಾರ ಕಾರ್ಯಗಳು ಮಠಗಳ ಮೂಲಕ ಬಹಳ ಭರದಿಂದ ಸಾಗು ತ್ತಿದ್ದವು.

## ಜಾತಿಭೇದದ ನಿರಾಕರಣೆ

ಶಿವಶರಣರು ಭಿನ್ನಾಚಾರವುಳ್ಳವರಲ್ಲ. ಅವರದು ಸಮರಸಾಚಾರವಾ ಗಿದೆ. ಆದ್ದರಿಂದ ಷಟ್‌ಸ್ಥಲಗಳೂ, ಷಡ್ಲಿಂಗಗಳೂ, ಅಷ್ಟಾವರಣಗಳೂ ಭಿನ್ನ ಭಿನ್ನವಾಗಿ ತೋರಿದರೂ ಅವು ತಮ್ಮಲ್ಲಿಯೇ ಇರುತ್ತವೆಂದು ಅವರು ಭಾವಿಸಿರುತ್ತಾರೆ. ಅಷ್ಟಾವರಣಗಳಲ್ಲಿರುವ ಗುರುಲಿಂಗ ಜಂಗಮಗಳು ಭಕ್ತ ನಲ್ಲಿಯೇ ಇರುತ್ತವೆಂದು ಅವರು ತಿಳಿಯುತ್ತಾರೆ. ಕ್ರಿಯೆಯಲ್ಲಿ ಗುರುವು ಇದ್ದಾನೆ, ಪ್ರಾಣದಲ್ಲಿ ಲಿಂಗವಿದೆ, ಜ್ಞಾನದಲ್ಲಿ ಜಂಗಮವಿದೆ ಮತ್ತು ಭಕ್ತನು ಈ ತ್ರಿವರ್ಗಕ್ಕೂ ಆಧಾರಭೂತನಾಗಿರುವನೆಂದು ಅವರು ತಿಳಿದಿ ದ್ದಾರೆ. ಆದ್ದರಿಂದ ಗುರುಲಿಂಗ ಜಂಗಮಗಳು ಎಷ್ಟು ಪವಿತ್ರವಾದವು ಗಳೋ ಅಷ್ಟೇ ಭಕ್ತನೂ ಪವಿತ್ರನಾಗಿರುತ್ತಾನೆ. ಅಲ್ಲದೆ ಗುರುಲಿಂಗ ಜಂಗಮಗಳು ಪರಸ್ಪರಾವಲಂಬಿಗಳು. ಆದ್ದರಿಂದ ಅವು ಒಂದನ್ನು ಬಿಟ್ಟು ಒಂದು ವ್ಯವಹರಿಸಲಾರವು. ಈ ಗುರುಲಿಂಗ ಜಂಗಮಗಳಿಗೆ ಭಕ್ತನೇ

ಆಧಾರನಾಗಿದ್ದಾನೆ. ಆದ್ದರಿಂದ ಭಕ್ತ ಮೊದಲ್ಗೊಂಡು ಈ ಎಲ್ಲ ವಸ್ತುಗಳು ಪುನೀತವಾದವುಗಳು. ಇವುಗಳು ಇದ್ದಲ್ಲಿ ಜಾತಿ ವಿಶಿಷ್ಟ ಭಾವನೆಗಳನ್ನು ಎಣಿಸಕೂಡದೆಂದು ಶರಣರ ವಾಕ್ಯಗಳಿವೆ.

ಅದರಂತೆ ಭಕ್ತರು ಮಾಡುವ ಉದ್ಯೋಗಗಳ ಮೇಲೆಯೂ ಅವರಲ್ಲಿ ಹೆಚ್ಚು ಕಡಿಮೆ ಭಾವವನ್ನು ಎಣಿಸಕೂಡದು. ಯಾಕಂದರೆ ಭಕ್ತರು ತಮ್ಮ ವೃತ್ತಿಗಳನ್ನು ಮಾಡುವಲ್ಲಿ ಅವುಗಳನ್ನು ತ್ರಿಲಿಂಗಗಳಿಗೆ ಅರ್ಪಿಸಿ ಲಿಂಗಾರ್ಪಿತ ಮಾಡಿ ಆರೋಗಿಸುವದುಂಟು. ಅವರು ಭುಂಜಿಸುವದು ಪ್ರಸಾದವಾಗಿರುತ್ತದೆ.

ಶಿವಶರಣರ ಅಭಿಪ್ರಾಯದ ಪ್ರಕಾರ ಕಾಯಕವೇ ಕೈಲಾಸವಾಗಿರುತ್ತದೆ. ಈ ವಿಷಯುವನ್ನು ಕುರಿತು ಶೂನ್ಯಸಂಪಾದನೆಯಲ್ಲಿ ಆಯದಕ್ಕಿ ಮಾರಯ್ಯನ ಸಂಪಾದನೆಯನ್ನು ವಾಚಕರು ನೋಡತಕ್ಕದ್ದು. ಹೀಗೆ ಕಾಯಕದಿಂದ ಬಂದುದು ಪುನೀತವಾದುದು. ಇದರಲ್ಲಿ ಯಾವತರದ ಜಾತಿ ಭೇದವನ್ನು ಎಣಿಸಕೂಡದು.

## ಅ. ಭಾ. ಶಿವಾನುಭವ ಸಮ್ಮೇಲನದ ೧೩ನೇ ಅಧಿವೇಶನದ ಅಂಗವಾಗಿ ಹಂಸಭಾವಿಯಲ್ಲಿ ಜರುಗಿದ ಮಹಿಳಾಗೋಷ್ಠಿಯ ಅಧ್ಯಕ್ಷಿಣಿಯರಾದ ಶ್ರೀಮತಿ ಸರಸ್ವತಿದೇವಿ ಗೌಡರ ಅವರು ಮಾಡಿದ ಭಾಷಣದ ಸಾರವು.

ಕರ್ನಾಟಕದ ಇತಿಹಾಸದಲ್ಲಿ ೧೨ನೆಯ ಶತಮಾನದಲ್ಲಾದ ಕಲ್ಯಾಣದ ಕ್ರಾಂತಿಗೊಂದು ವಿಶಿಷ್ಟವಾದ ಸ್ಥಾನವಿದೆ. ಭಕ್ತಿಭಾಂಡಾರಿ ಬಸವಣ್ಣನವರು ಆ ಕ್ರಾಂತಿಯ ಕಾರಣಪುರುಷರು. ಭಾರತದಲ್ಲಿ ಇಲ್ಲಿಯವರೆಗೆ ಆಯಾ ಕಾಲಕ್ಕೆ ಆಗುತ್ತಬಂದಿದ್ದ ಧಾರ್ಮಿಕ ಕ್ರಾಂತಿಗಳು ಕೇವಲ ಧರ್ಮೋದ್ಧಾರ ಕಾರ್ಯವನ್ನೇ ತಮ್ಮ ಮುಖ್ಯ ಗುರಿಯಾಗಿಟ್ಟುಕೊಂಡಿದ್ದವು. ಆದರೆ ಬಸವಣ್ಣನವರು ಸಾಧಿಸಿದ ಈ ಮಹಕ್ರಾಂತಿ ಧರ್ಮದ ತಳಹದಿಯ ಮೇಲೆ ಸಮುನ್ನತವಾದ, ಸರ್ವಾಂಗಪರಿಪೂರ್ಣವಾದ ಹೊಸದೊಂದು ಸಮಾ

ಜವನ್ನೇ ನಿರ್ಮಾಣಮಾಡಿತು. ಧರ್ಮವು ಕೇವಲ ಮೋಕ್ಷಸಂಪಾದನೆಯ ಸಾಧನವಾಗದೆ ಬದುಕನ್ನು ಬಾಳಬಟ್ಟೆಯಲ್ಲಿ ಮುನ್ನಡೆಸುವ ದಾರಿದೀಪವಾಯಿತು. ಧರ್ಮ ಜಿಜ್ಞಾಸುವಿನ ಗುರಿ ಸ್ವರ್ಗ ಪ್ರಾಪ್ತಿಯ ಚರಮ ಸೀಮೆಯನ್ನು ಮುಟ್ಟುವಲ್ಲಿಗೆ ಮುಕ್ತಾಯವಾಗದೆ ಭೂಮಿಯನ್ನೇ ಸ್ವರ್ಗವನ್ನಾಗ ಮಾಡುವಲ್ಲಿ ತನ್ನ ಸಾರ್ಥಕತೆಯಿದೆಯೆಂದು ಭಾವಿಸಿತು. "ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ. ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ, ಆಚಾರವೇ ಸ್ವರ್ಗ, ಅನಾಚಾರವೇ ನರಕ, ಇದಕ್ಕೆ ನೀವೇ ಪ್ರಮಾಣ ಕೂಡಲಸಂಗಮದೇವಾ." ಎಂದು ಬಸವಣ್ಣನವರು ಸ್ವರ್ಗ ಮರ್ತ್ಯಗಳ ವ್ಯಾಪ್ತಿಯನ್ನು ಪ್ರಮಾಣಿಸಿ ಹೇಳಿದರು. ಅಲ್ಲದೇ "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ; ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ" ಎಂದು ಮೋಕ್ಷ ಸಂಪಾದನೆಯ ಆಶೆಯಿಂದ ಸ್ವರ್ಗಾಭಿಮುಖರಾಗಿ ಕುಳಿತ ಮುಮುಕ್ಷುಗಳನ್ನು ಎಚ್ಚರಿಸಿ ಲೌಕಿಕದತ್ತ ಅವರ ಗಮನವನ್ನು ಸೆಳೆದರು. ಸಂಸಾರವನ್ನು ತೊರೆದು ಸನ್ಯಾಸಿಯಾದವರಿಗೆ ಮೋಕ್ಷ ಸಿಗುವದೆಂದಲ್ಲ. ಆದರೆ ಪ್ರಪಂಚದಲ್ಲಿದ್ದುಕೊಂಡೇ ಪಾರಮಾರ್ಥವನ್ನು ಸಾಧಿಸಬಹುದು. ಮಾಡುವದನ್ನೆಲ್ಲ ನಿಷ್ಕಾಮ ಬುದ್ಧಿಯಿಂದ ಸಮರ್ಪಣ ಭಾವದಿಂದ ಮಾಡುತ್ತ ಸಂಸಾರದಲ್ಲಿದ್ದುಕೊಂಡೇ ಸನ್ಯಾಸವನ್ನು ಆಚರಿಸಬಹುದು. "ನಾನು ಆರಂಬ ಮಾಡುವೆನಯ್ಯಾ ಗುರುಪೂಜೆಗೆಂದು; ನಾನು ವ್ಯವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು; ನಾನು ಪರಸೇವೆಯ ಮಾಡುವೆನಯ್ಯಾ ಜಂಗಮ ದಾಸೋಹಕ್ಕೆಂದು; ನಾನಾವ ಕರ್ಮವಮಾಡಿದಡೆಯೂ ಆ ಕರ್ಮಫಲ ಭೋಗವ ನೀಕೊಡುವೆ ಎಂಬುದನರಿತಿರ್ಪೆನಾಗಿ; ನೀಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ ವ್ಯಯ ಮಾಡೆನು; ನಿಮ್ಮ ಸೊಮ್ಮು ನಿಮಗೆ ಸಲ್ಲಿಸುವೆನು. ನಿಮ್ಮಾಣೆ, ಕೂಡಲಸಂಗಮದೇವಾ" ಎಂದು ನುಡಿದು ಅದರಂತೆ ನಡೆದು ತೋರಿಸಿದ ಬಸವಣ್ಣನವರು ಸಮಾಜವೆದುರು ನಿಷ್ಕಾಮ ಕರ್ಮಯೋಗಿಯ ಸಜೀವ ಸಾಕಾರ ಉದಾಹರಣೆಯನ್ನಿಟ್ಟರು. ಆಗ ಕಾಯಕವೇ ಕೈಲಾಸವೆಂಬ ಅವರ ಅಮೃತವಾಣಿಯನ್ನು ಜನತೆ ಶಿರೋಧಾರ್ಯವೆಂದು ಒಪ್ಪಿಕೊಂಡಿತು. ಉಂಡು ಉಪವಾಸಿಗಳು, ಬಳಸಿ ಬ್ರಹ್ಮಚಾರಿಗಳು, ವ್ಯವಹರಿಸಿ ನಿರ್ಲೇಪರು ಎಂದು ಅಭ್ಯುದಯ ಹಾಗೂ ನಿಶ್ರೇಯಸಗಳೆರಡನ್ನೂ ಒಮ್ಮೆಲೇ ಸಾಧಿಸುವ ರಹಸ್ಯ ವೀರಶೈವ ಧರ್ಮದ

ವಿಶಿಷ್ಟ ಕುರುಹಾಯಿತು. ಅವನ್ನು ಒಡಮೂಡಿಸಿ ತೋರಿಸಿದವರು ಬಸವಣ್ಣನವರು. ಅದರಂತೆ ಆಚರಿಸಿ ಅವರ ಮೇಲ್ಪಂಕ್ತಿಯನ್ನನುಸರಿಸಿದವರು ಅಸಂಖ್ಯಾತ ಶಿವಶರಣೆಯರು. ಅದರಿಂದಲೇ ಕ್ರಾಂತಿಗೆ ಎಡೆಕೊಟ್ಟ ಕಲ್ಯಾಣ ಅವಿಮುಕ್ತ ಕ್ಷೇತ್ರವೆನಿಸಿತು. ಆ ಕ್ರಾಂತಿಗೆ ಪ್ರಚೋದನೆ ಕೊಟ್ಟದ್ದು ಬಸವಣ್ಣನವರ ಭಕ್ತಿ. ಅಂತೆಯೇ ಅವರು ಭಕ್ತಿಭಾಂಡಾರಿಗಳಾದರು. ಪ್ರಭುದೇವರು ತನ್ನದೊಂದು ವಚನದಲ್ಲಿ ಕಲ್ಯಾಣದ ಮಹಿಮೆಯನ್ನು ಬಲು ಸುಂದರವಾಗಿ ಬಣ್ಣಿಸಿದ್ದಾರೆ. "ಕಲ್ಯಾಣವೆಂಬ ಪ್ರಣತಿಯಲ್ಲಿ ಭಕ್ತಿರಸವೆಂಬ ತೈಲವನೆರೆದು ಆಚಾರವೆಂಬ ಬತ್ತಿಗೆ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತಿರ್ದುದಯ್ಯಾ ಶಿವನ ಪ್ರಕಾಶ; ಆ ಬೆಳಗಿನೊಳು ಒಪ್ಪುತಿರ್ದರಯ್ಯಾ, ಅಸಂಖ್ಯಾತ ಪ್ರಮಥಗಣಂಗಳು, ಶಿವಭಕ್ತರಿದ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೇ? ಗುಹೇಶ್ವರಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನಬಸವಣ್ಣನ ಕಂಡು ಬದುಕಿದೆ ಕಾಣಾ ಸಿದ್ಧರಾಮಯ್ಯಾ."

ಸಂಸಾರ ಸನ್ಯಾಸಗಳ ನಡುವೆ ಸುವರ್ಣ ಮಧ್ಯವನ್ನು ಕಲ್ಪಿಸಿದ ಅಣ್ಣ ಬಸವಣ್ಣನವರ ವೀರಶೈವ ಧರ್ಮವು ಬಹಳ ವಿಶಾಲ ದೃಷ್ಟಿಯಿಂದ ಉದಾರ ಮತದಿಂದ, ವ್ಯಾಪಕ ಮನೋಭಾವನೆಯಿಂದ ಕೂಡಿದುದಾಗಿ ತನ್ನ ಕ್ಷೇತ್ರವನ್ನು ಬಲು ಬೇಗನೇ ವಿಸ್ತರಿಸಿಕೊಂಡು ಬೆಳೆದು ಬಾಳಿತು. ಅಲ್ಲಿ ಅದರ ಕಕ್ಷೆಯಲ್ಲಿ ಜಾತಿ, ಮತ, ಪಂಥಗಳಿಗೆ ಎಡೆಯಿಲ್ಲ "ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರನೆಲ್ಲ ಒಂದೇ ಎಂಬೆ" ಎಂದು ವೀರಶೈವ ಧರ್ಮ ಭಕ್ತರದೆಲ್ಲ ಒಂದೇ ಕುಲ ಎಂದು ಸಾರಿತು. "ಕೊಲ್ಲುವವನೇ ಮಾದಿಗನು, ಹೊಲಸು ತಿಂಬುವವನೇ ಹೊಲೆಯ, ಕುಲವೇನೋ ಆವಂದಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲಸಂಗನ ಶರಣರೇ ಕುಲಜರು" ಎಂದು ಜಾತಿ-ಮತ-ಪಂಥಗಳ ವ್ಯಾಖ್ಯೆಯನ್ನು ಮಾಡಿತು. ಅದರಂತೆ ಬಡವ, ಬಲ್ಲಿದ, ಹಿರಿ-ಕಿರಿಯ, ಸ್ತ್ರೀ-ಪುರುಷರೆಂಬ ಭೇದಭಾವವೂ ಅದಕ್ಕಿಲ್ಲ." "ಮಡದಿಯ ಪ್ರಾಣಕ್ಕೆ ಮೊಲೆಮುಡಿ ಇದ್ದಿತ್ತೇ? ಒಡೆಯನ ಪ್ರಾಣಕ್ಕೆ ಇದ್ದಿತ್ತೇ ಯಜ್ಞೋಪವೀತ? ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೆ ಪ್ರಾಣದಲ್ಲಿ ಹಿಡಿಗೋಲ? ನೀ ತೊಡಕಿಕ್ಕಿದ ತೊಡಕನೀ ಲೋಕದ ಜಡರೆತ್ತ ಬಲ್ಲರೈ ರಾಮನಾಥಾ"

ಎಂದು ಶರಣರು ಈ ತರ-ತಮಗಳನ್ನು ಭೇದ-ಭಾವಗಳನ್ನು ಬಲು ನಿಷ್ಠುರವಾಗಿ ಖಂಡಿಸಿದರು. " ಒಳಗಿರುವ ಆತ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ. " ಎಂದು ತಿಳಿದ ಅವರು ಧರ್ಮಸಾಧನೆಗೆ ಪತಿ ಪತ್ನಿಯರ ಸಂಪೂರ್ಣ ಸಾಹಚರ್ಯ ಬೇಕು. " ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ದೇವಂಗೆ, ಸತಿಪತಿಗಳೊಂದಾಗದ ಭಕ್ತಿ ಅಮೃತದಲ್ಲಿ ವಿಷವ ಬೆರೆಸಿದಂತೆ ಕಾಣಾ ರಾಮನಾಥಾ " ಎಂದು ಪತ್ನಿಯ ಸಹಯೋಗದ ಮಹತ್ವವನ್ನು ಸಾರಿ ಹೇಳಿದರು. ಆವಳು ಮಾಯೆಯೆಂದು ಅಂಜಿ ಅವಳಿಂದ ಮಾರು ಮಾರು ಆಚೆಗೆ ಓಡಿಹೋಗುವ ಕಾರಣವಿಲ್ಲ. "ಹೆಣ್ಣು ಮಾಯೆಯೆಂಬರು; ಹೊನ್ನು ಮಾಯೆಯೆಂಬರು; ಮಣ್ಣು ಮಾಯೆಯೆಂಬರು; ಹೆಣ್ಣು ಮಾಯೆಯಲ್ಲ; ಹೊನ್ನು ಮಾಯೆಯಲ್ಲ; ಮಣ್ಣು ಮಾಯೆಯಲ್ಲ; ಆದರೆ ಮನದ ಮುಂದಣ ಆಸೆಯೇ ಮಾಯೆ ಕಾಣಾ ಗುಹೇಶ್ವರಾ" ಎಂದು ಮಾಯೆಯ ನಿಜಸ್ವರೂಪವನ್ನು ವಿವರಿಸಿದರು. " ಉಭಯ ದೃಷ್ಟಿಯಿಂದ ದೃಷ್ಟವ ಕಾಂಬಂತೆ ದಂಪತಿ ಏಕಭಾವವಾಗಿ ನಿಂದಲ್ಲಿ ದೇವದೇವನ ಸಾಕ್ಷಾತ್ಕಾರವಾಗುವದು " ಎಂದ ಶರಣರು ಮೋಕ್ಷಸಾಧನೆಗೆ ಕೈಹಿಡಿದಾಕೆಯ ನೆರವೂ ಬೇಕು ಎಂದು ಒತ್ತಿ ಹೇಳಿದರು. ಹಾಗೂ ಅದಕ್ಕನುಸರಿಸಿ ಸ್ತ್ರೀಯರಿಗೆ ವೀರಶೈವ ಧರ್ಮದಲ್ಲಿ ಸಮಾನ ಸಂಸ್ಕಾರ ಹಾಗೂ ಸ್ಥಾನಮಾನಗಳನ್ನು ಕಲ್ಪಿಸಿಕೊಟ್ಟರು. "ಹೆಣ್ಣು ಹೆಣ್ಣಲ್ಲ; ಹೆಣ್ಣು ರಕ್ಕಸಿಯಲ್ಲ; ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನಾ" ಎಂದು ಹೆಣ್ಣಿನ ದೇವತಾ ಸ್ವರೂಪವನ್ನು ಮನ್ನಿಸಿದರು. "ಪರವಧುವನ್ನು ಮಹಾದೇವಿ ಎಂಬೆ" ಎಂದು ಬಸವಣ್ಣನವರು ಹೆಣ್ಣಿನ ಮಾತೃಸ್ವರೂಪವನ್ನು ಗೌರವಿಸಿದರು.

ಇದೆಲ್ಲದರ ಫಲವಾಗಿ ಶೂದ್ರರ ಪಂಕ್ತಿಗೆ ಸೇರಿ ಅಜ್ಞಾನಾಂಧಕಾರದಲ್ಲಿ ಕೊಳೆಯುತ್ತಿದ್ದ ಮಹಿಳಾವರ್ಗ ಮತ್ತೆ ಬೆಳಕಿಗೆ ಬರುವಂತಾಯಿತು. ಅನುಭವ ಮಂಟಪದ ಶಿವಶರಣರ ಬಳಗದಲ್ಲಿ ಶಿವಶರಣೆಯರೂ ಕಂಗೊಳಿಸುವಂತಾಯಿತು. ನೀಲಾಂಬಿಕೆ, ಅಕ್ಕನಾಗಮ್ಮ, ರಾಣಿ ಮಹಾದೇವಿ, ಅಕ್ಕಮಹಾದೇವಿ, ಆಯುದಕ್ಕಿ ಲಕ್ಕಮ್ಮ, ಮುಕ್ತಾಯಕ್ಕ ಮೊದಲಾದ ಶಿವಶರಣೆಯರು ತಮ್ಮ ಭಕ್ತಿ, ಜ್ಞಾನ, ವೈರಾಗ್ಯ ಹಾಗೂ ಅನುಭವಗಳಿಂದ ಅಸ್ತಿಮರಾಗಿ ಬಾಳಿ ಬೆಳಗಿದರು. ಧರ್ಮ ಸೂಕ್ಷ್ಮಗಳು ತಲೆದೋರಿದಾಗ ಒಮ್ಮೊಮ್ಮೆ ಶಿವಶರಣರಿಗೆ ಮಾರ್ಗದರ್ಶನ ಮಾಡುವಂಥ ಅಸಾಧಾರಣ

ಪ್ರತಿಭೆಯನ್ನು ತೋರಿಸಿದರು. ಲಿಂಗೈಕ್ಯರಾಗಲು ಕೂಡಲಸಂಗಮಕ್ಕೆ ಬರ ಬೇಕೆಂದ ಅಣ್ಣನ ರಾಯಭಾರ ಹೊತ್ತು ಹಡಪದ ಅಪ್ಪಣ್ಣನವರು ಕರಿ ಯಲು ಬಂದಾಗ ನಿಜಭಕ್ತಿ ನೀಲಾಂಬಿಕೆಗೆ ಅಚ್ಚರಿಯಾಯಿತು. ಬಸವಣ್ಣ ನವರಂಥ ಮಹಾತ್ಮರ ಮನಸ್ಸಿನಿಂದಲೂ "ಅಲ್ಲಿ ಇಲ್ಲಿ" ಎಂಬ ಉಭಯ ಸಂದೇಹ ಅಳಿಯಲಿಲ್ಲವೇ ? ಅಲ್ಲಿರುವ ಸಂಗಮನಾಥನೇ ಇಲ್ಲಿದ್ದಾನೆ, ಹೇಳಹೋಗಿರಿ ಎಂದು ತನ್ನ ಅಂಗೈಯೊಳಗಿನ ಲಿಂಗದಲ್ಲಿಯೇ ಐಕ್ಯಳಾದಳು. ಪರಮಾತ್ಮನ ವಿಶ್ವವ್ಯಾಪಕ ಸ್ವರೂಪವನ್ನು ಸಿದ್ಧಮಾಡಿ ತೋರಿಸಿದಳು. ಒಂದು ದಿನ ಬಸವಣ್ಣನವರು ಹೂಡಿದ ಆಟವನ್ನು ತಿಳಿಯದೆ ಆಯ್ದಕ್ಕಿ ಮಾರಯ್ಯನವರು ಅವರ ಅಂಗಳದಲ್ಲಿ ಬಿದ್ದಿದ್ದ ಬಹಳಷ್ಟು ಅಕ್ಕಿಯನ್ನು ಆರಿಸಿ ತಂದರು. ಅದನ್ನು ಕಂಡು ಶರಣೆ ಲಕ್ಕಮ್ಮ "ಆಸೆಯೆಂಬದು ಅರ ಸಿಂಗಲ್ಲದೆ ಶಿವಭಕ್ತರಿಗೆ ಉಂಟೆ ಎಲೆ ಅಯ್ಯ ? ಈಸಕ್ಕಿಯ ಆಸೆ ನಿಮ ಗೇಕೆ ? ಈಶ್ವರನೊಪ್ಪ, ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗಕ್ಕೆ ಇದು ದೂರಮಾರಯ್ಯ" ಎಂದು ಮಾರಯ್ಯನವರು ಮರೆತಿದ್ದ ಶರಣರ ಅಸಂಗ್ರಹ ತತ್ವವನ್ನು ನೆನಪುಮಾಡಿಕೊಡುವಳಲ್ಲದೆ ಹೆಚ್ಚಾದ ಅಕ್ಕಿಯನ್ನೆಲ್ಲ ಮತ್ತೆ ಅಲ್ಲಿಯೇ ಒಯ್ದು ಸುರಿವಲು ಹಚ್ಚುವಳು. "ಮನಶುದ್ಧವಿಲ್ಲದವಂಗೆ ದ್ರವ್ಯದ ಬಡತನವಿಲ್ಲದೆ ಚಿತ್ತ ಶುದ್ಧದಲ್ಲಿ ಕಾಯಕವ ಮಾಡುವ ಸದ್ಭಕ್ತ ನಿಗೆ ಬಡತನವೆಂಬುದು ಇಲ್ಲವೆಂದು ಅವಳು ದೃಢವಾಗಿ ನಂಬಿದ್ದಳು. ಅದ ರಂತೆ ಮಾರಯ್ಯನವರೊಮ್ಮೆ ಮುಕ್ತಿಗೆ ಆಸೆಪಟ್ಟಾಗ ಮಾಡಿ ನೀಡಿ ಹೋಹೆ ನೆಂಬಾಗ ಕೈಲಾಸವೇನು ಕೈಕೂಲಿಯೇ ? ಕೈಲಾಸದ ಆಸೆ ಏಕೆ ? ಈ ದಾಸೋಹ ಸಾಲದೆ ಎಂದು ಅವರಿಗೆ ಕರ್ತವ್ಯಕ್ಕಿಂತ ಹೆಚ್ಚಿನದು ಏನೂ ಇಲ್ಲ, ಕಾಯಕವೇ ಕೈಲಾಸವೆಂಬುದನ್ನು ಮನಗಾಣಿಸಿಕೊಟ್ಟಳು. ಮುಕ್ತಾ ಯಕ್ಕನಾದರೂ ಸ್ವತಃ ಪ್ರಭುದೇವರೊಡನೆ ಜೀವನ್ಮುಕ್ತನ ಸ್ಥಿತಿಯ ಬಗ್ಗೆ ವಾದ ಹೂಡಿ ತನ್ನ ನಿಲವನ್ನೇ ಸಮರ್ಥಿಸಿಕೊಂಡ ಮಹಾಜ್ಞಾನಿ. ರಾಣಿ ಮಹಾದೇವಿ ತನ್ನ ಪತಿಗೆ ನಿಜೈಕ್ಯದ ತತ್ವವನ್ನು ತಿಳಿಸಿ ಹೇಳಲಾಗಿ ಸಮ ರ್ಥಳಾದ ಸತಿ ಶಿರೋಮಣಿ. ಅಲ್ಪಸ್ವಲ್ಪವಾಗಿಯಾದರೂ ಆ ಕಾಶ್ಮೀರದ ಭೂಪಾಲನಲ್ಲಿ ಉಳಿದಿದ್ದ ಅಹಂಕಾರವನ್ನು ನಾಶಮಾಡಿ "ನಿನ್ನ ಭಕ್ತಿಯ ಬೆಳೆಯೆ ಎನ್ನ ಸತ್ಯದ ಹಾದಿ. ನನ್ನ ಭಕ್ತಿಗೆ ನಿನ್ನ ಶಕ್ತಿ" ಎಂದು ಅವಳ ವಿಚಾರಸರಣಿಯನ್ನು ಒಪ್ಪಿಕೊಂಡ ಮೋಳಿಗೆಯ ಮಾರಯ್ಯನವರಿಂದ ಮುಕ್ತ ಕಂಠದಿಂದ ಹೊಗಳಿಸಿಕೊಂಡ ಮಹಾ ಸಾಧ್ವಿ ಬಸವಣ್ಣನವರ ಕರುಣೆಯ

ಶಿಶು, ವೀರ ವಿರಾಗಿಣಿ ಅಕ್ಕ ಮಹಾದೇವಿ ತನ್ನ ಪ್ರತಿಭೆ, ಪಾಂಡಿತ್ಯ, ಅಸಾಧಾರಣ ಕಾವ್ಯಶಕ್ತಿ ಹಾಗೂ ಹಿರಿದಾದ ವೈರಾಗ್ಯದಿಂದ ಅನುಭವ ಮಂಟಪದ ಶರಣರನ್ನೆಲ್ಲ ಬೆರಗುಗೊಳಿಸಿದಳು. ನಾನಾಪರಿಯಾಗಿ ಅರೆದು ಒರೆದು ನೋಡಿ ಪರಿಶುದ್ಧ ಚಿನ್ನನೆಂದು ಮನಗಂಡ ಪ್ರಭುದೇವರು– "ಅಂತ ರಂಗದ ಪ್ರಭೆ ಬಹಿರಂಗವನ್ನೆಲ್ಲ ಬೆಳಗಿ ಗುಹೇಶ್ವರ ಲಿಂಗದಲ್ಲಿ ಬೆರೆದ ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎಂಬೆನು ಕಾಣಾ ಚೆನ್ನಬಸವಣ್ಣಾ" ಎಂದು ಅವಳ ಹಿರಿಮೆಗೆ ಶರಣೆಂದರು. ಬಸವಣ್ಣ, ಚನ್ನ ಬಸವಣ್ಣ, ಸಿದ್ಧರಾಮ ಶಿವಯೋಗಿಗಳೇ ಮೊದಲಾದ ಶಿವಶರಣರು ಅವಳ ಅಸಾಧಾರಣ ವ್ಯಕ್ತಿತ್ವಕ್ಕೆ ತಲೆಬಾಗಿದರು. ಶಿವಶರಣೆಯರ ಈ ಉಜ್ವಲ ಪರಂಪರೆ ವೀರಶೈವ ಧರ್ಮದ ವಿಶಿಷ್ಟ ಸಂಪತ್ತು.

ಈ ರೀತಿಯಾಗಿ ಜಾತಿ–ಮತ–ಪಂಥ ಲಿಂಗ–ವಯೋ ಮರ್ಯಾದೆಯನ್ನು ಮೀರಿ ಮಾನವ ಕಲ್ಯಾಣವನ್ನೆ ಮುಖ್ಯ ಗುರಿಯಾಗಿಟ್ಟುಕೊಂಡ ವೀರಶೈವ ಧರ್ಮ ಬಲು ಬೇಗನೇ ವಿಸ್ತಾರ ಹೊಂದ ವಿಶ್ವಧರ್ಮವಾಗಿ ಬೆಳೆಯಿತು. ಅದರ ಈ ತೀವ್ರ ಗತಿಯ ಬೆಳವಣಿಗೆಗೆ ಮುಖ್ಯವಾಗಿ ಎರಡು ಕಾರಣಗಳು ಗೋಚರವಾಗುತ್ತವೆ. ಮೊದಲನೆಯದಾಗಿ ಅವರ ಸೂತ್ರ ಹಿಡಿದವರು ಜನತೆಯಿಂದ ದೂರವಾಗಿ ಅವರಿಗಿಂತ ಉನ್ನತವಾದ ಸ್ಥಾನದಲ್ಲಿ ನಿಂತು ಒಣ ತತ್ವೋಪದೇಶವನ್ನು ಮಾಡಲಿಲ್ಲ. 'ಎನಗಿಂತ ಕಿರಿಯರಿಲ್ಲ, ಶಿವಭಕ್ತ ರಿಗಿಂತ ಹಿರಿಯರಿಲ್ಲ' ಎಂದು ಬಸವಣ್ಣನವರು ಶಿವಭಕ್ತರಿಗೆ, ವೀರಶೈವ ಧರ್ಮದ ಅನುಯಾಯಿಗಳಿಗೆ ಹಿರಿಯ ಸ್ಥಾನ ಕೊಟ್ಟು ತಾವು ಹೇಳಬೇಕಾ ದುದನ್ನು ನುಡಿಯಲ್ಲಿ ನಡೆದು ತೋರಿಸಿದರು. ಎರಡನೆಯದಾಗಿ ಧರ್ಮ ಸಿದ್ಧಿಗೆ ಸುಲಭವಾದ ಸಾಧನ ಮಾರ್ಗಗಳನ್ನು ಹುಡುಕಿ ಕೊಟ್ಟರು. ಆತ್ಮನ ಕಲ್ಯಾಣಯಾತ್ರೆಗೆ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಹಾಗೂ ಐಕ್ಯಗಳೆಂಬ ಆರು ಹಂತಗಳನ್ನೇರ್ಪಡಿಸಿ ಯಾರಿಗೆ ಯಾವದು ಸಾಧ್ಯವೋ ಆ ಹಂತದಲ್ಲಿ ನಿಂತು ಜೀವ–ಶಿವರ, ಆತ್ಮ—ಪರಮಾತ್ಮರ ಸಾಕ್ಷಾತ್ಕಾರ ಮಾಡಿಕೊಳ್ಳಲು ಅನುವು ಮಾಡಿಕೊಟ್ಟರು. ಅದೇ ಷಟ್‌ಸ್ಥಲ ಸಿದ್ಧಾಂತವು. ಷಡ್ವಿಧ ಭಕ್ತಿಯಿಂದ ಸಾಧಕನು ಈ ಷಟ್‌ಸ್ಥಲಗಳನ್ನು ಸಾಧಿಸಲು ಪ್ರಯ ತ್ನಿಸಬೇಕು. ಭಕ್ತಸ್ಥಲದಲ್ಲಿ ಶ್ರದ್ಧಾ ಭಕ್ತಿಯನ್ನು, ಮಹೇಶ್ವರ ಸ್ಥಲದಲ್ಲಿ ನಿಷ್ಠಾಭಕ್ತಿಯನ್ನು, ಪ್ರಸಾದಿ ಸ್ಥಲದಲ್ಲಿ ಅವಧಾನ ಭಕ್ತಿಯನ್ನು, ಪ್ರಾಣಲಿಂಗಿ

ಸ್ಥಲದಲ್ಲಿ ಭಾವಭಕ್ತಿಯನ್ನು, ಶರಣಸ್ಥಲದಲ್ಲಿ ಆನಂದ ಭಕ್ತಿಯನ್ನು, ಐಕ್ಯ ಸ್ಥಲದಲ್ಲಿ ಸಮರಸ ಭಕ್ತಿಯನ್ನು ಆಚರಿಸಬೇಕು. ಆದರೆ ಅದಕ್ಕೂ ಮೊದಲು ಮಲತ್ರಯಗಳನ್ನು ಕಳೆದುಕೊಂಡು ಅವನು ತ್ರಿಕರಣ ಶುದ್ಧನಾಗಬೇಕು. ಹೀಗೆ ಶುದ್ಧನಾದ ಸಾಧಕನು ಸಾತ್ವಿಕ ರೀತಿಯಿಂದ ತನು ಮನ ಧನಗಳೆಂಬ ತ್ರಿವಿಧ ಪದಾರ್ಥಗಳನ್ನು ಅಂದರೆ ತನುವನ್ನು ಗುರುವಿಗೂ ಮನವನ್ನು ಲಿಂಗಕ್ಕೂ ಧನವನ್ನು ಜಂಗಮಕ್ಕೂ ಅರ್ಪಿಸಬೇಕು. ಹಾಗೆ ಅರ್ಪಿಸಬೇಕಾದರೆ ಅವನು ಮೇಲೆ ಹೇಳಿದಂತೆ ಷಟ್ಸ್ಥಲಗಳಲ್ಲಿ ನಿಂತು ಷಡ್ವಿಧ ಭಕ್ತಿಯನ್ನು ಆಚರಿಸಬೇಕು. ಇನ್ನು ಈ ಷಟ್ಸ್ಥಲಗಳಲ್ಲಿ ಹಿರಿದು ಕಿರಿದೆಂಬ ಭೇದವಿಲ್ಲ. ಬಸವಣ್ಣನವರು ಭಕ್ತಸ್ಥಲದಲ್ಲಿದ್ದರೆ, ಜಗದೇವ, ಮಲ್ಲಿಬೊಮ್ಮಣ್ಣ ಮೊದಲಾದವರು ಮಹೇಶ್ವರ ಸ್ಥಲದಲ್ಲಿ, ಚನ್ನಬಸವಣ್ಣನವರು ಪ್ರಸಾದಿ ಸ್ಥಲದಲ್ಲಿ, ಸಿದ್ಧರಾಮಯ್ಯನು ಪ್ರಾಣಲಿಂಗಿ ಸ್ಥಲದಲ್ಲಿ, ಅಕ್ಕ ಮಹಾದೇವಿ, ಪ್ರಭುದೇವರು ಮೊದಲಾದವರು ಶರಣ ಸ್ಥಲದಲ್ಲಿ ಹಾಗೂ ಅಜಗಣ್ಣನವರು ಐಕ್ಯಸ್ಥಲದಲ್ಲಿದ್ದುದೇ ಈ ಮಾತಿಗೆ ನಿದರ್ಶನವಾಗಿದೆ. ಈ ಷಟ್ಸ್ಥಲಸಾಧನೆಯೂ ಸಾಧಕನಿಗೆ ಕಠಿಣವಾಗಬಾರದು. ಅದಕ್ಕೆ ಅವನಿಗೆ ರಕ್ಷಾ ಕವಚವಾಗಿ ಅಷ್ಟಾವರಣಗಳನ್ನೂ ಆಚರಣೆಗೆ ಸುಲಭವಾಗಲು ಪಂಚಾಚಾರಗಳನ್ನೂ ಶರಣರು ಕಲ್ಪಿಸಿದರು. ಗುರು,ಲಿಂಗ,ಜಂಗಮ ಪಾದೋದಕ, ಪ್ರಸಾದ ವಿಭೂತಿ, ರುದ್ರಾಕ್ಷಿ ಹಾಗೂ ಮಂತ್ರಗಳೇ ಈ ಅಷ್ಟಾವರಣಗಳು ಗುರುವಿನಿಂದ ಲಿಂಗವನ್ನು ಪಡೆಯಬೇಕು. ಆ ಲಿಂಗವನ್ನು ಅಂಗದ ಮೇಲೆ ಧರಿಸಿ ನಿತ್ಯವೂ ಪೂಜಿಸಬೇಕು. ಅಂಗಗುಣ ಕಳೆದು ಲಿಂಗ ಗುಣಿಯಾಗಬೇಕು. ಜಂಗಮವನ್ನು ಆರಾಧಿಸಬೇಕು. ಪಾದೋದಕ–ಪ್ರಸಾದಗಳಿಂದ ಪವಿತ್ರರಾಗಬೇಕು. ದೇಹ-ಮನ ಶುದ್ಧಿಗಾಗಿ ವಿಭೂತಿ, ರುದ್ರಾಕ್ಷಿಗಳನ್ನು ಧರಿಸಬೇಕು. ಏಕಾಗ್ರ ಚಿತ್ತತೆಗಾಗಿ 'ಓಂ ನಮಃ ಶಿವಾಯ' ಎಂಬ ಮಂತ್ರವನ್ನು ಜಪಿಸಬೇಕು. ಈ ರೀತಿ ಪರಿಶುದ್ಧನಾದ ಸಾಧಕನು ಪಂಚಾಚಾರಗಳನ್ನು ಪಾಲಿಸಬೇಕು. ಸದಾಚಾರ, ಗಣಾಚಾರ, ಭೃತ್ಯಾಚಾರ ಶಿವಾಚಾರ ಮತ್ತು ಲಿಂಗಾಚಾರ ಇವೇ ಆ ಐದು ಆಚಾರಗಳು. ಶುದ್ಧ ನೈತಿಕ ಆಚಾರವೇ—ಸದಾಚಾರವು. ಸತ್ಯದ ಮತ್ತು ಧರ್ಮದ ಯಥಾಯೋಗ್ಯ ರಕ್ಷಣೆಯೇ ಗಣಾಚಾರವು. ಪೂಜಾದಿ ನಿತ್ಯ ಕರ್ಮಗಳನ್ನು ಮಾಡುವುದೇ ನಿತ್ಯಾಚಾರವು. ಲಿಂಗಧಾರಿಗಳನ್ನು ಪ್ರತ್ಯಕ್ಷ ಶಿವನೆಂದು ಆದರಿಸುವುದೇ ಶಿವಾಚಾರವು. ನಿಷ್ಠೆಯಿಂದ ಲಿಂಗಧಾರಣೆ ಮಾಡಿ ಅದರ ನಿತ್ಯಪೂಜೆ ಮಾಡುವದೇ ಲಿಂಗಾ

ಚಾರ. ಇವುಗಳನ್ನೆಲ್ಲ ಆ ಸಾಧಕನು ಅಳವಡಿಸಿಕೊಂಡನೆಂದರೆ ಷಟ್‌ಸ್ಥಲ ಸಾಧನೆಯು ಅವನಿಗೆ ಬಲು ಸುಗಮವಾಗುವದು.

ಆ ಅಂಧಾನುಕರಣದ ಬಂಧನದಿಂದ ಕನ್ನಡ ಕಾವ್ಯವನಿತೆಯನ್ನು ಬಿಡುಗಡೆ ಮಾಡಿ ಕನ್ನಡ ಸಾಹಿತ್ಯದ ಸ್ವಾತಂತ್ರ್ಯಯುಗಕ್ಕೆ ಶ್ರೀಕಾರವನ್ನು ಹಾಕಿದ ಶ್ರೇಯಸ್ಸು ಬಸವಣ್ಣನವರಿಗೆ ಸಲ್ಲುತ್ತದೆ. ರಗಳೆ, ಷಟ್ಪದಿ, ಸ್ವಾತಂತ್ರ್ಯ, ತ್ರಿಪದಿಯೇ ಮೊದಲಾದ ಅಚ್ಚಗನ್ನಡದ ಛಂದಸ್ಸುಗಳ ರಚನೆಗೆ ಸ್ಫೂರ್ತಿದೊರೆತದ್ದು ಈ ವಚನವಾಙ್ಮಯದಿಂದಲೇ ಎಂದು ಹೇಳಬಹುದು. ವಚನಗಳ ಭಾಷೆ ಸುಲಭವಾದರೂ ಕಾವ್ಯಮಯವಾದುದು. ಅದರಲ್ಲಿ ಬರುವ ಸಹಜ ಸುಂದರ ಉಪಮೆಗಳು, ಅಲಂಕಾರಗಳು, ನಾಣ್ಣುಡಿಗಳು ಒಳ್ಳೇ ಹೃದಯಂಗಮವಾಗಿವೆ. ವಚನಗಳೆಲ್ಲ ಹಲಗೆ-ಬಳಪ ಹಿಡಿದು ಕಲ್ಪನಾಶಕ್ತಿಗೆ ಪ್ರಚೋದನೆ ಕೊಟ್ಟು ಉದ್ದೇಶಪೂರ್ವಕವಾಗಿ ಬರೆದವುಗಳಲ್ಲ. ಶಿವಶರಣರಿಗೆ ಬಂದ ಅನುಭವಗಳೇ ಸಹಜ ಸ್ಫೂರ್ತಿಯಿಂದ ವಚನ ರೂಪದಿಂದ ಹೊರಹೊಮ್ಮಿವೆ. ಅನುಭವಿಗಳ ಅನುಭಾವ ಬೆಳೆದಂತೆ ವಚನವಾಙ್ಮಯವೂ ಬೆಳೆಯುತ್ತ ಹೋಯಿತು. ಅದಕ್ಕೆ ತಕ್ಕಂತೆ ಶಬ್ದಸಂಪತ್ತು ಕನ್ನಡದಲ್ಲಿ ಬೆಳೆಯಬೇಕಾಯಿತು. ಕೇವಲ ವಚನಶಾಸ್ತ್ರದ ಪಾರಿಭಾಷಿಕ ಶಬ್ದಗಳಿಗಾಗಿಯೇ ಒಂದು ಶಬ್ದಕೋಶವನ್ನು ರಚಿಸಬೇಕಾದೀತು. ಯೋಗ್ಯತೆಯ ದೃಷ್ಟಿಯಿಂದ ಹಿರಿದಾದ ವಚನವಾಙ್ಮಯ ವಿಪುಲವೂ ಆಗಿದೆ. ವಚನಕಾರರ ಪೂರ್ಣ ಹೆಸರುಗಳಾಗಲಿ, ಹೆಸರು ಸಿಕ್ಕವರು ಬರೆದಿರುವ ಸಂಪೂರ್ಣ ವಚನಗಳಾಗಲಿ, ಇನ್ನೂ ನಮಗೆ ದೊರೆತಿಲ್ಲ. ಈಗ ಸಿಕ್ಕಿರುವ ವಚನಕಾರರ ಸಂಖ್ಯೆ ಸುಮಾರು ೨೪೩, ಅವರಲ್ಲಿ ಶಿವಶರಣೆಯರ ಸಂಖ್ಯೆ ೨೮ ರಷ್ಟಿದೆ. ವಚನಸಾಹಿತ್ಯದಲ್ಲಿ ಶಿವಶರಣೆ ಅಕ್ಕಮಹಾದೇವಿಯ ವಚನಗಳಿಗೆ ಅಗ್ರಸ್ಥಾನ ದೊರೆತಿರುವದು ಕನ್ನಡ ಮಹಿಳೆಯರು ಅಭಿಮಾನಪಡತಕ್ಕ ವಿಷಯವಾಗಿದೆ. ಈ ವಚನಸಾಹಿತ್ಯವನ್ನು ಸೂತ್ರಾತ್ಮಕ, ವರ್ಣನಾತ್ಮಕ, ಉಪದೇಶಾತ್ಮಕ, ಪ್ರಾರ್ಥನಾತ್ಮಕ, ಸತಿ-ಪತಿ ಭಾವಾತ್ಮಕ, ನಿರುಕ್ತಾತ್ಮಕ, ಗೂಢಾತ್ಮಕ ಮತ್ತು ಆತ್ಮಗತ ಎಂದು ಅವುಗಳಲ್ಲಿಯ ವಿಷಯ ಮತ್ತು ರೀತಿಗಳ ಮೇಲಿಂದ ವಿಂಗಡಿಸಬಹುದಾಗಿದೆ. ಸಂಶೋಧಕರ, ಸಾಹಿತ್ಯಾಭ್ಯಾಸಿಗಳ ಸತತೋದ್ಯೋಗದ ಫಲವಾಗಿ ವಚನಸಾಹಿತ್ಯ ಇದೀಗ ಪುನಃ ಬೆಳಕಿಗೆ ಬಂದಿದೆ. ಬರುತ್ತ

ಲಿವೆ. "ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿ"ಯಾದ ಈ ವಚನಗ ಳಲ್ಲಿ ನಮ್ಮ ದಿನನಿತ್ಯದ ಜೀವನದಲ್ಲಿ ತಲೆದೋರಬಹುದಾದ ಅನೇಕ ಸಮ ಸ್ಯೆಗಳಿಗೆ ಪರಿಹಾರ ನೀಡಬಲ್ಲ ಶಕ್ತಿಯಿದೆ. ಆದ್ದರಿಂದ ಸಮಾಜ ಸ್ವಾಸ್ಥ್ಯದ ಹಿತದದೃಷ್ಟಿಯಿಂದ ಅವುಗಳ ಸಾಮೂಹಿಕ, ಸಾರ್ವತ್ರಿಕ ಪ್ರಸಾರವಾಗಬೇ ಕಾದದ್ದು ಅತ್ಯಗತ್ಯವೆಂದು ಬೇರೆ ಹೇಳಬೇಕಾಗಿಲ್ಲ.

ಈ ಧರ್ಮ ಜಾಗೃತಿಯ ಕಾರ್ಯದಲ್ಲಿ ಅಕ್ಕನ ಬಳಗಗಳಿಂದ ಬಹ ಳಷ್ಟು ಕಾರ್ಯವಾಗಬಹುದಾಗಿದೆ. ಶಿವಶರಣೆ ಅಕ್ಕಮಹಾದೇವಿಯ ಆದರ್ಶ ವನ್ನೇ ತಳಹದಿಯನ್ನಾಗಿಟ್ಟುಕೊಂಡು ಇಂದು ಕರ್ನಾಟಕದ ತುಂಬಾ ಅನೇಕ ಅಕ್ಕನ ಬಳಗಗಳು ಸ್ಥಾಪಿತವಾಗಿ ಮಹಿಳಾ ಕಲ್ಯಾಣದ ಮಣಿಹ ಹೊತ್ತು ಕೆಲಸ ಮಾಡುತ್ತಲಿವೆ. ಅವುಗಳನ್ನು ಯೋಗ್ಯ ರೀತಿಯಿಂದ ಸಂಘಟಿಸಿ ಒಂದು ನಿಶ್ಚಿತ ಕಾರ್ಯಪ್ರಣಾಲಿಯನ್ನು ಹಾಕಿಕೊಟ್ಟರೆ ಆ ಸಂಸ್ಥೆ ಗಳಿಂದ ಹೆಚ್ಚಿನ ಕೆಲಸವಾಗಬಹುದಾಗಿದೆ. ಈಗ ಸಂಖ್ಯೆಯಲ್ಲೇನೋ ಸಂಸ್ಥೆಗಳು ಬಹಳ ಹುಟ್ಟಿವೆ. ಆದರೆ ಹುಟ್ಟಿದ್ದೊಂದು ತನ್ನದೇ ಹಾದಿ ಯನ್ನು ಹಿಡಿದು ಮುಂದೆ ಹೊರಟದ್ದರಿಂದ ಅವುಗಳಲ್ಲಿ ಸಹಕಾರ ಮನೋ ಭಾವನೆಯಾಗಲೀ, ಪರಸ್ಪರ ಪೂರಕ ಕಾರ್ಯಪದ್ಧತಿಯಾಗಲೀ ಕಂಡುಬಾ ರದೆ ಇದ್ದರೆ ಅಚ್ಚರಿಯಿಲ್ಲ. ಆದರೆ ಮುಂದಾಗಿ ಈ ಕಾರ್ಯವನ್ನು ಮಾಡು ವರಾರು ? ಅಕ್ಕನ ಬಳಗಗಳನ್ನು ಕೇಂದ್ರೀಕರಿಸಬೇಕೆಂಬ ತತ್ವವನ್ನೇನೋ ಎಲ್ಲರೂ ಒಪ್ಪುತ್ತಾರೆ. ಆದರೆ ಅಂಥ ಬಲಶಾಲಿಯಾದ ಒಂದು ಕೇಂದ್ರ ಸಂಸ್ಥೆಯ ಹೊಣೆಯನ್ನು ಹೊತ್ತು ಪೂರೈಸುವವರಾರಾದರು ? ಯಾವ ಒಂದು ಅಕ್ಕನಬಳಗವೂ ಇನ್ನೂ ಅಷ್ಟು ಸಮರ್ಥವಾಗಿಲ್ಲವೆಂದು ಹೇಳಬಹುದು. ದುಡ್ಡಿಲ್ಲದೆ, ದುಡಿಯುವವರಿಲ್ಲದೆ, ದುಡಿಯುವವರಿಗೆ ಬೆನ್ನಾಸರೆಯಾದ ಸಮಾಜದ ಬಲವಿಲ್ಲದೆ ಹಾಗೂ ಹೀಗೂ ತಮ್ಮ ಸಂಸ್ಥೆಗಳನ್ನು ನಡೆಸಿ ಕೊಂಡು ಹೋಗುವದೇ ಸಂಚಾಲಕರಿಗೆ ಹೊರಲಾರದ ಹೊರೆಯಾಗಿಬಿಡು ತ್ತದೆ. ಆದ್ದರಿಂದ ಅಖಿಲಭಾರತ ಶಿವಾನುಭವ ಸಂಸ್ಥೆಯವರು ಈ ಅಕ್ಕನ ಬಳಗಗಳನ್ನು ತಮ್ಮ ಅಂಗಸಂಸ್ಥೆಗಳನ್ನಾಗಿ ಮಾಡಿಕೊಳ್ಳಬೇಕು. ಇಲ್ಲವೇ ಪ್ರತ್ಯೇಕ ಶಾಖೆಯನ್ನಾದರೂ ತೆರೆದು ಅದಕ್ಕೆ ಈ ಎಲ್ಲ ಅಕ್ಕನ ಬಳಗಗ ಳನ್ನು ಜೋಡಿಸಿಕೊಳ್ಳಬೇಕು. ಹಾಗೂ ಶಿವಾನುಭವ ಸಮ್ಮೇಲನದ ಜೊತೆಗೆ ಈ ಅಕ್ಕನಬಳಗಗಳ ಸಮ್ಮೇಲನವನ್ನು ಕೂಡಿಸುವ ಏರ್ಪಾಡೂ ಮಾಡಬೇಕು. ಇದರಿಂದ ಪರಸ್ಪರ ವಿಚಾರವಿನಿಮಯ ಮಾಡಲು ಅವ

ಕಾಶ ದೊರೆತು ಹೆಚ್ಚು ಸುಸಂಘಟಿತ ರೀತಿಯಿಂದ ಕಾರ್ಯ ಮಾಡಲು ಅನುವಾಗುವದು. ಅದರಂತೆ ಅಕ್ಕನಬಳಗಗಳ ಆಶ್ರಯದಲ್ಲಿ ಶಿವಾನುಭವ ವರ್ಗಗಳನ್ನು ತೆರೆದು ವೀರಶೈವ ಧರ್ಮತತ್ವಗಳ ಪಾಠಪ್ರವಚನಗಳ ಸೌಕರ್ಯವನ್ನು ಕಲ್ಪಿಸಿಕೊಡಬೇಕು. ಆಗಾಗ ಶಿವಾನುಭವ ಪ್ರಚಾರಕರನ್ನು ಕಳಿಸಿ ವೀರಶೈವ ಧರ್ಮತತ್ವಗಳ, ಅದನ್ನು ಕುರಿತಾದ ವೀರಶೈವ ಧಾರ್ಮಿಕ ಸಾಹಿತ್ಯದ ಪರಿಚಯ ಮಾಡಿಕೊಡುವಂಥ ಉಪನ್ಯಾಸ ಮಾಲೆಗಳನ್ನೇರ್ಪಡಿಸುವ ವ್ಯವಸ್ಥೆ ಮಾಡಬೇಕು. ಅಕ್ಕನ ಮೂರ್ತಿ ಸ್ಥಾಪನೆ, ಅಕ್ಕನ ಜಯಂತಿಯ ಆಚರಣೆ ಹಾಗೂ ಅಕ್ಕನ ವಚನಗಳ ಪಠನದೊಂದಿಗೆ ಅಕ್ಕನ ಬಳಗಗಳ ಕಾರ್ಯಕ್ಷೇತ್ರ ನಿಯಮಿತವಾಗದೆ ಅವುಗಳಿಂದ ವೀರಶೈವ ಸಮಾಜಕ್ಕೆ, ಮಹಿಳಾ ವರ್ಗಕ್ಕೆ ಹೆಚ್ಚಿನ ಸೇವೆ ಸಲ್ಲಬೇಕೆಂದು ಅಪೇಕ್ಷಿಸುವದಾದರೆ ಅಖಿಲಭಾರತ ಶಿವಾನುಭವ ಸಂಸ್ಥೆಯವರು ಈ ಹೊಣೆಯನ್ನು ಹೊತ್ತು ನಿರ್ವಹಿಸಬೇಕೆಂದು ನಾನು ಆಗ್ರಹಪೂರ್ವಕವಾಗಿ ಬಿನ್ನವಿಸಿಕೊಳ್ಳಬಯಸುತ್ತೇನೆ.



# ಘನವಿಚಾರಗಳು

ಬರೆದವರು:– ರು. ಷ. ಮಟ್ಟೀಕಲ್ಲಿ, ಬಿ. ಏ., ರಿಟಾಯರ್ಡ ಸಬ್ ರಜಿಸ್ಟ್ರಾರ
ಬೆಳಗಾವಿ



೧. ಮಾನವನು ಅಪವಿತ್ರ ಹೃದಯದೊಂದಿಗೆ ದೇವನ ಪವಿತ್ರ ಸಿಂಹಾಸನದ ಎದುರಿಗೆ ನಿಲ್ಲಲಾರ ಎಂದು ಜಗತ್ತಿನಲ್ಲಿ ಎಲ್ಲ ಧಾರ್ಮಿಕ ಪಂಥಗಳು ಸಾರಿ ಹೇಳುತ್ತವೆ.

೨. ಮಾನವನ ಅಸಹಾಯತೆಯನ್ನು ಸಂಪೂರ್ಣವಾಗಿ .ಅರಿತು, ದೇವನನ್ನು ನಂಬಿ ನೆನೆಯುವದೇ ಪ್ರಾರ್ಥನೆ.

೩. ಮಾನವನಿಗೆ ಯಾವದೂ ಸಾಧ್ಯವಿಲ್ಲ; ದೇವನಿಗೆ ಯಾವದೂ ಅಸಾಧ್ಯವಿಲ್ಲ.

೪. ಮಾನವನು ದೇವರ ಕೈಯ್ಯಲ್ಲಿಯ ಬೊಂಬೆ; ಒಂದು ಹುಲ್ಲು ಕಡ್ಡಿ. ಅವನು ತನ್ನ ಮನಬಂದಂತೆ ಊದಿ ಹಾರಿಸಬಲ್ಲ. ಕುಣಿಸಬಲ್ಲ. ನಾವು ಅವನ ಇಚ್ಛೆಯನ್ನು ವಿರೋಧಿಸಲಾರೆವು.

೫. ದೇವರು ತನ್ನ ಭಕ್ತರನ್ನು ಪರಿಪರಿಯಿಂದ ಪರೀಕ್ಷಿಸುವನು. ಆದರೆ ತಾಳ್ಮೆ ಮೀರುವ ವರೆಗೆ ಮಾತ್ರ ಪರೀಕ್ಷಿಸುವದಿಲ್ಲ.

೬. ದೇವರು ತಾನು ಆಶೀರ್ವದಿಸಬೇಕೆಂಬ ಮಾನವನನ್ನು ಚನ್ನಾಗಿ ವರೆಗೆ ಹಚ್ಚಿ ಪರೀಕ್ಷಿಸುವನು.

೭. ದೇವರು ಅನಾಥರ ನಾಥನು. ತನ್ನ ಮಾನವ ಶಕ್ತಿಯಿಂದ ಸಹಾಯ ಹೊಂದಲು ಹೆಮ್ಮೆಪಡುವ ಮಾನವರಿಗೆ ಅವನು ತನ್ನ ಸಹಾಯ ವನ್ನು ನೀಡಲಾರನು.

೮. ಪರಿಶುದ್ಧವಾದ ಭಕ್ತಿಯಿಂದೊಡಗೂಡಿದ, ಹೃದಯದಿಂದ ಹೊರ ಹೊಮ್ಮುವ ದೇವರ ನಾಮದಲ್ಲಿ ಅದ್ಭುತ ಶಕ್ತಿ ಇರುತ್ತದೆ.

೯. ಅರ್ಥವನ್ನರಿಯದೇ ಪಠಿಸಿದ ಮಂತ್ರವು ವ್ಯರ್ಥವಾದುದು.

## ಶಿವಾನುಭವ

೧೦. ಚಪ್ಪರವಿಲ್ಲದ ಮನೆಯಲ್ಲಿ ಮಳೆ ನುಗ್ಗುವಂತೆ, ಬಿಗಿಹಿಡಿಯದ ಮನಸ್ಸಿನಲ್ಲಿ ಕಾಮವು ನುಗ್ಗುವದು.

೧೧. ಆಶೆಯೇ ದಾಸತ್ವ; ನಿರಾಶೆಯೇ ಈಶತ್ವ.

೧೨. ನಿಸರ್ಗದೇವಿಯು ಪರಮಾತ್ಮನ ಅನಂತ ಶಕ್ತಿಯ ಆನಂದದ ಹಡಿನೆಳಲು.

## ಹಿಗ್ಗಿನ ಮೊಗ್ಗು

ಹಿಗ್ಗು ಹಿಗ್ಗು ಎಂದು ಹಿಗ್ಗಿತು ಜೀವ; ಹಿಗ್ಗು ಹಿಗ್ಗು ಎಂದು ಹಿಗ್ಗಿದನು ದೇವ. ಹಿಗ್ಗಿನ ನೆಲೆಯೇ ಶಿವಜೀವರ ಐಕ್ಯ; ಈ ಹಿಗ್ಗಿನ ನೆಲೆಯೇ ಬ್ರಹ್ಮಾನಂದ. ಈ ಆನಂದವು ಹಸುಗೂಸಿನ ಹಸಿನಗೆಯಂತೆ, ವಸಂತ ಮಾಸದ ಅತಿಬಿರಿದ ಮಲ್ಲಿಗೆ ಮೊಗ್ಗುಗಳ ಇನಿದಾದ ಕಂಪನದಂತಿದೆ. ಆದುದರಿಂದಲೇ ನಮ್ಮ ಶರಣರು—

'ಕೂಡಲಸಂಗನ ನಿಲವು ನನೆಯೊಳಗಣ ಕಂಪಿನಂತಿದೆ' ಎಂದು ಉಸುರಿದ್ದಾರೆ.

## ಪ್ರೀತಿ

ಬಳಸಿದಂತೆ ಅಳಿಯದೇ ಬೆಳೆಯುವದೆಂದರೆ ಪ್ರೀತಿಯೊಂದೇ. ಪ್ರೀತಿ ಸಾಕ್ಷಾತ್ ಅಮೃತ, ಸಾವಿಲ್ಲದುದು. ಪ್ರೀತಿಯು ಬಿತ್ತಿ ಬೆಳೆಕೊಳ್ಳುವ ಹೊಲವಾಗಬೇಕು



ಸಂಪುಟ ೩೧ ★ ಸಂಚಿಕೆ ೧

# ಶಿವಾನುಭವ

ಸಂಪಾದಕರು

ಡಾ॥ ರಾ. ಬ. ಫ. ಗು. ಹಳಕಟ್ಟಿ,
ಬಿ, ಎ. ಎಲ್. ಎಲ್. ಬಿ.
ವಿಜಾಪುರ.

[ ವಾರ್ಷಿಕ ಚಂದಾ ೫–೧೨–೦ ಅಂಚೆಯ ವೆಚ್ಚ ಜೀರೆ ]

ಜನವರಿ ೧೯೫೭

# ~~~~~~ ❋ ವಿಷಯಾನುಕ್ರಮಣಿಕೆ ❋ ~~~~~~







# ಶಿವಾನುಭವ

ಸಂಪುಟ ೩೧ | ಜನವರಿ ೧೯೫೭ | ಸಂಚಿಕೆ ೧

## ಅಷ್ಟಾವರಣಗಳಲ್ಲಿಯ ಗುರು.

[ ಲೇಖಕರು:- ಶ್ರೀಯುತ ಸಿ. ನಾ. ಮಹಾಂತಣ್ಣವರ ]

ಹುಟ್ಟಿದಂದಿನಿಂದ ಸಾಯುವ ವರೆಗೆ ಮಾನವನು ಕಲಿಯತಕ್ಕ ವಿಷಯಗಳು ಇದ್ದೇ ಇರುತ್ತವೆ. ಇಲ್ಲಿಗೆ ಕಲಿಯುವದು ತೀರಿತೆಂದು ಯಾರೂ ಅನ್ನಲಾರರು. ತಾಯಿಯ ಗರ್ಭದಿಂದ ಹುಟ್ಟಿದ ಶಿಶುವು ಹುಟ್ಟುವಾಗ ಎಂಥ ಪುಣ್ಯಾತ್ಮನಿದ್ದರೂ ನಾದ ನಿನಾದಗಳನ್ನು ವ್ಯಕ್ತಮಾಡದೆ ಇರದು. ತಾಯಿಯ ಗರ್ಭವಾಸದ ವೃತ್ತಿಗೂ ಈ ಸೃಷ್ಟಿಯ ಬಾಹ್ಯ ಸ್ವರೂಪಾದ ಪ್ರಕೃತಿಗೂ ಭಿನ್ನತ್ವವಾಗಿ ಅಂ, ಉಂ, ಮಂ ಎಂಬ ಪ್ರಣವತ್ರಯಗಳಿಂದ ಕೂಡಿದ ಧ್ವನಿಯನ್ನುಂಟುಮಾಡದೆ ಇರದು. ಆಗ ಬಾಣಂತಿಯು ಅದಕ್ಕನುಕೂಲವಾದ ಹನೆ, ನೀರು, ಉಷ್ಣತೆ, ಹಾಸಿಗೆ, ಹೊದಿಕೆಗಳನ್ನು ಸಿದ್ಧಮಾಡಿ, ಅದರ ಮೈ ಮಲಗಳನ್ನು ತೊಳೆದು, ಎಣ್ಣೆ ಬೆಣ್ಣೆಗಳಿಂದೆರೆದು ಅದರ ಜೀವನವು ಸಂತೋಷೋಲ್ಲಾಸಗಳಿಂದ ಸಾಗುವಂತೆಯೂ, ತಾಯಿಯ ಮೊಲೆವಾಲನ್ನು ಕಾಲ ಕಾಲಕ್ಕೆ ಕುಡಿಸಿದಂತೆಯೂ ಅದು ಸುಷುಪ್ತಾವಸ್ಥೆಯ ಸುಖವನ್ನು ಅನುಭವಿಸಿ, ಆನಂದ ಸಾಗರದಲ್ಲಿ ಲೋಲಾಡುವದು. ಆ ಕೂಸು ಜಾಗ್ರತಾವಸ್ಥೆಯಲ್ಲಿದ್ದಾಗ ಆನಂದದಿಂದ ಕೈಕಾಲು ಆಡಿಸುತ್ತ, ಚದರಿಸುತ್ತ ಕ್ರೀಡಿಸುವದು. ಹೊಟ್ಟೆ ಹಸಿದರೆ, ಅಥವಾ ತಗಣಿ ಚಿಕ್ಕಾಡುಗಳ ಕಾಟವಾದರೆ, ಅಳುವ ರೂಪದಿಂದ ತಾಯಿಯನ್ನು ಎಚ್ಚರಪಡಿಸುವದು. ಆ ಕೂಸಿನ ಅಳುವ ಕಾರಣವನ್ನು ಕಂಡು ಹಿಡಿವ ತಾಯಿಯು ಎತ್ತಿಕೊಂಡು ಮೊಲೆ ಉಣ್ಣಿಸಬಹುದು. ಮಲಮೂತ್ರ ಮಾಡಿದ್ದರೆ ಸ್ವಚ್ಛಗೊಳಿಸಬಹುದು, ಕ್ರಿಮಿಗಳ ಕಾಟದಿಂದ ದೂರ ಮಾಡಬಹುದು.

ತಾಯಿಯು ಕೂಸನ್ನು ಎತ್ತಿ ಎದೆಗೆ ಅವಚಿಕೊಂಡಾಗ ಆ ಕೂಸಿನ ಪಂಚ ಜ್ಞಾನೇಂದ್ರಿಯಗಳಲ್ಲಿ ಸ್ಪರ್ಶ ಜ್ಞಾನವೇ ಹೆಚ್ಚು ಜಾಗ್ರತವಿರುವದರಿಂದ ಆದಿಶಕ್ತಿಯುಳ್ಳ ಜಂಗಮಲಿಂಗವು ಕಂಗೊಳಿಸುವದು. ಆ ಜಂಗಮಲಿಂಗದೊಳಗಿನ ಇಚ್ಛಾಶಕ್ತಿಯುಳ್ಳ ಶಿವಲಿಂಗ, ಆ ಜಂಗಮಲಿಂಗದೊಳಗಿನ ಜ್ಞಾನಶಕ್ತಿಯುಳ್ಳ ಗುರುಲಿಂಗ, ಆ ಜಂಗಮಲಿಂಗದೊಳಗಿನ ಕ್ರಿಯಾಶಕ್ತಿಯುಳ್ಳ ಆಚಾರಲಿಂಗ (ಜ್ಞಾನಶಕ್ತಿಯುಳ್ಳ ಗುರುಲಿಂಗ, ನಂತರ ಆಚಾರಲಿಂಗ ಬರೆಯಬೇಕು.) ಆ ಜಂಗಮಲಿಂಗದೊಳಗಿನ ಪರಾ ( ಶಬ್ದ ) ಶಕ್ತಿಯುಳ್ಳ ಪ್ರಸಾದಲಿಂಗ, ಆ ಜಂಗಮಲಿಂಗದೊಳಗಿನ ಚಿಚ್ಛಕ್ತಿಯುಳ್ಳ ತೃಪ್ತಿರೂಪಾದ ಮಹಾಲಿಂಗಗಳು ಆ ಶಿಶುವಿನ ಪರಾಮರಿಕೆಯನ್ನು ತಾಯಿಯೆಂಬ ಗುರುವಿನಿಂದ ಮಾಡಿಸುತ್ತ ಶಿಶುಶಿಕ್ಷಣವನ್ನು ವಿಕಸಿಸುತ್ತ ವಿರಾಜಿಸಲು ತಾಯಿಯೇ ಆದಿ ಗುರುವಾಗಿರುವಳು.

ಕೂಸು ದೊಡ್ಡದಾದಹಾಗೆ ಆದರ ಧರ್ಮೇಂದ್ರಿಯಗಳೂ ಕರ್ಮೇಂದ್ರಿಯಗಳೂ ಬಲಿತು, ಕೂಡ್ರುವದು, ಏಳುವದು, ಅಡ್ಡಾಡುವದು, ಮಾತಾಡುವದು, ತನ್ನ ಇಚ್ಛೆಯನ್ನು ತಿಳಿಸುವದು, ಆಟದೊಳಗೆ ತನ್ನ ಓರಿಗೆಯ ಹುಡುಗರಿಂದ ಎಷ್ಟೋ ನೈಸರ್ಗಿಕ ಸ್ಥಿತಿಗಳನ್ನು ಕಂಡು ಹಿಡಿಯುವದು, ದೇವರು ಸ್ವಾಭಾವಿಕವಾಗಿಟ್ಟ ಜ್ಞಾನಜ್ಯೋತಿಯಿಂದ ಪ್ರಕೃತಿ ಗುಣಸ್ವಭಾವಗಳನ್ನು ತಿಳಿಯುತ್ತ ಪ್ರಕೃತಿಗೆ ಅಲ್ಲವುಗಳನ್ನು ದೂಡುತ್ತ, ಬೇಕಾದವುಗಳನ್ನು ಬೆರೆಯುತ್ತ ಶಾಲಾಪ್ರವೇಶ ಮಾಡಿ ಪ್ರಾಥಮಿಕ ಶಿಕ್ಷಣದ ಗುರುವಿನಿಂದ ಶಿಕ್ಷಣ ಪಡೆಯುತ್ತ, ಹೆಚ್ಚಿನ ತರಗತಿಯ ಶಾಲೆ ಕಾಲೇಜಗಳಲ್ಲಿ ಕಾಲಿಟ್ಟು ಕಲಿಯುತ್ತ ಉದರಂಭರಣ ಉದ್ಯೋಗವನ್ನು ಹಿಡಿದು ಗೃಹಸ್ಥಾಶ್ರಮಿಯಾಗಿ ತನ್ನ ಜೀವನವನ್ನು ಸುಗಮವಾಗಿ ಸಾಗಿಸುವದೆಂಬದು ಎಲ್ಲರೂ ಬಲ್ಲ ಸಂಗತಿ. ಇದನ್ನೆಲ್ಲ ವಿಚಾರಿಸಿದ ಸರ್ವಜ್ಞಮೂರ್ತಿಯು:—

"ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಿಂ ಕೇಳುತ ।
ಕೆಲವಂ ಮಾಳ್ಪವರಿಂದ ನೋಡಿ ಕೆಲವುಂ ಸುಜ್ಞಾನದಿಂ ನೋಡುತ
ಕೆಲವಂ ಸಜ್ಜನಸಂಗದಿಂದಲರಿಯಲ್ ಸರ್ವಜ್ಞನಪ್ಪಂತೆ ಕೇಳ್ ।
ಪಲವುಂ ಪಳ್ಳ ಸಮುದ್ರವೈ ಹರಹರಾ ಶ್ರೀಚನ್ನ ಸೋಮೇಶ್ವರಾ"

ಎಂಬ ಪದ್ಯವನ್ನು ಗದ್ದರಿಸಿದ್ದಾನೆ.

ಜೀವನು ಇಹಲೋಕದಲ್ಲಿ ಎಷ್ಟು ವಿಜ್ಞಾನಿಯಾಗಿದ್ದರೂ "ಆಳಾಗಿ ದುಡಿಯಬೇಕು, ಅರಸಾಗಿ ಉಣ್ಣಬೇಕು." ಎಂಬ ನಾಣ್ಣುಡಿಗನುಸಾರ ವಾಗಿ ಇದ್ದರೂ ನೆಪೋಲಿಯನ್ ಬೋನಾಪಾರ್ಟ, ಶಿವಾಜಿ, ಹೈದರಅಲ್ಲಿ, ಹುಕ್ಕ ಬುಕ್ಕ ಮುಂತಾದ ಕರ್ನಾಟಕ ರಾಜ್ಯ ಮನೆತನಗಳನ್ನೆಲ್ಲ ಮನದಂದರೆ ಅವರ ಇತಿಹಾಸವು ಏನು ಹೇಳುತ್ತದೆ ? ಐಶ್ವರ್ಯವು ಸ್ಥಿರವಲ್ಲ. ನಿಜ ಸುಖವು ಹೊನ್ನು ಹೆಣ್ಣು ಮಣ್ಣುಗಳಲ್ಲಿಲ್ಲ. ಐಹಿಕ ಸುಖವನ್ನು ಸ್ವಕಾಯ ಕಷ್ಟದಿಂದ ಸಂಪಾದಿಸುತ್ತ ಪಾರಮಾರ್ಥಿಕ ಸುಖಸಾಧನಗಳನ್ನು ಮಾಡುತ್ತ "ಆಚಾರಃ ಪ್ರಥಮೋಧರ್ಮ:" ಎಂಬಂತೆ, ಸ್ವಧರ್ಮ ಸಾಧನಗಳನ್ನು ಮಾಡುತ್ತ ತನ್ನ ಧರ್ಮದ ಮರ್ಮಗಳನ್ನರಿತು ಆಚರಿಸುತ್ತ ಜೀವ ಪರಮರ ಅಥವಾ ಶಿವಜೀವರ ಅಥವಾ ಲಿಂಗಾಂಗಗಳ ಭೇದಾಭೇದಗಳನ್ನು ಶಾಸ್ತ್ರಾನುಭವ ದಿಂದಲೂ, ಪುರಾಣ ಪುಣ್ಯಕಥೆಗಳಿಂದಲೂ, ಧರ್ಮಾಚಾರಿಗಳ ಸಂಗದಿಂ ದಲೂ, ಶಿವಶರಣರ ಪುರಾಣ ಕಥೆ, ಆಚಾರ, ಕ್ರಿಯೆ, ಜ್ಞಾನ, ಯೋಗ ಗಳ ಸಾಮಾನ್ಯ ಜ್ಞಾನವನ್ನು ಮಾಡಿಕೊಳ್ಳುತ್ತ ವಾಚಕ ಸೂಚಕ ವಿಹಿತ ಗುರುಗಳ ಬೋಧಾಮೃತವನ್ನು ಪಾನ ಮಾಡುತ್ತ ನಿಜಗುರುತ್ರಯಗಳನ್ನು ಆಶ್ರಯಿಸಿ, ಅವರಿಂದ ದೀಕ್ಷಾ, ಶಿಕ್ಷಾ, ಮೋಕ್ಷಾನುಭವಗಳನ್ನು ಪಡೆಯುತ ತಾನು ಅವರವರ ನೇಮ ನಿಷ್ಠೆ, ಜಪತಪಗಳನ್ನಾಚರಿಸುತ್ತ ಶಿವಭಕ್ತಿ, ಶಿವ ಪೂಜೆ, ಶಿವಯೋಗ, ಶಿವಧ್ಯಾನ, ಶಿವಜ್ಞಾನಾಚಾರಗಳನ್ನು ಸಾಗಿಸುತ್ತ ಶಿವಶರಣರ ಸಂಗದಿಂದ ಶಿವಾನುಭವಿಯಾಗುತ್ತ ನಡೆದು, ತನ್ನ ಜನ್ಮ ಸಾರ್ಥಕ್ಯವನ್ನು ಮಾಡಿಕೊಳ್ಳುವದು ಜೀವಾತ್ಮನ ಆದ್ಯ ಕರ್ತವ್ಯವಾಗಿದೆ.

ಜೀವಾತ್ಮನ ಸ್ವಾಭಾವಿಕ ಸ್ಥಿತಿಯನ್ನೂ ಪರಮಾತ್ಮನ ಪರಿಯನೂ ಜೀವ ಪರಮಾತ್ಮರ ಸಂಬಂಧವನ್ನೂ ಗುರುಮುಖದಿಂದಾಗಲಿ ಶಿವಾನುಭವ ಶಾಸ್ತ್ರಾಗಮಗಳಿಂದಾಗಲಿ ಅರಿಯುವದು ಅತಿ ಮಹತ್ವದ ಸಂಗತಿಯಾಗಿದೆ. "ಅಯ್ಯಾ ಒಂದು ಜೀವಾತ್ಮನೇ ನಾಲ್ಕುತೆರನಾಗಿಪ್ಪುದಯ್ಯ. ಅದೆಂತೆಂದೊಡೆ ಒಂದು ಜೀವಾತ್ಮನೆ ಅಂಡಜ ಪ್ರಾಣಿಯಾಗಿಪ್ಪುದಯ್ಯ, ಮತ್ತೊಂದು ಜೀವನೆ ಪಿಂಡಜ ಪ್ರಾಣಿ, ಉದ್ಭಿಜ ಪ್ರಾಣಿ, ಜರಾಯುಜ ಪ್ರಾಣಿಯಾಗಿಪ್ಪುದಯ್ಯ; ಈ ಚತುರ್ವಿಧ ಜೀವನೊಳಗೆ ೭ ಲಕ್ಷ ಮಲಜೀವನ, ೭ ಲಕ್ಷ ಜಡಜೀವನ, ೭ ಲಕ್ಷ ಕುಜೀವನ, ೭ ಲಕ್ಷ ದುರ್ಜೀವನ, ೭ ಲಕ್ಷ ಕಪಟ ಜೀವನ, ೭ ಲಕ್ಷ ಸಂಚಲ ಜೀವನ, ೭ ಲಕ್ಷ ವಂಚಕ ಜೀವನ, ೭ ಲಕ್ಷ ನಿರ್ಮಲ ಜೀವನ,

೭ ಲಕ್ಷ ಅಜಡ ಜೀವನ, ೭ ಲಕ್ಷ ಸಜ್ಜೀವನ, ೭ ಲಕ್ಷ ಪರಮ ಜೀವನ ಈ ತೆರವಾದ ೮೪ ಲಕ್ಷ ಜೀವಿಗಳೆಲ್ಲ ಶಿವನ ಪೂರ್ವ ಭಾಗ. ಪ್ರವರ್ತಿ ಮಾರ್ಗದ ಕರ್ಮೇಂದ್ರಿಯ, ಜ್ಞಾನೇಂದ್ರಿಯವೆಂಬ ದ್ವಾದಶೇಂದ್ರಿಯಗಳಲ್ಲಿ ಜೀವಿಸುತ್ತಿಪ್ಪವಯ್ಯಾ; ಆ ದ್ವಾದಶ ಜೀವನ ವರ್ತನ ಭೇದದಿಂದ ಒಂದು ಜೀವನೆ ಹನ್ನೆರಡು ತೆರನಾಗಿಪ್ಪುವಯ್ಯಾ. ಅದರ ಗುಣಭೇದವೆಂತೆಂದೊಡೆ, ಉಚ್ಚಿಷ್ಟವ ತಿಂದು ಬದುಕುವ ಜೀವನೇ ಮಲಜೀವಿಯೆನಿಸುವನು. ಚಾಡಿ ಕ್ಷುದ್ರತನದಿಂದ ಒಡಲ ಹೊರೆವ ಜೀವನೇ ಜಡಜೀವಿಯೆನಿಸುವನಯ್ಯಾ. ಕಡಿದು ಹೊಡೆದು ಬಡಿದು ಬಂಧಿಸಿ ಒಡಲ ಹೊರೆವ ಜೀವನೇ ಕಪಟ ಜೀವನ. ಗಾರುಡಿಗ ವಿದ್ಯೆಯಿಂದ ಒಡಲ ಹೊರೆವ ಜೀವನೇ ಸಂಚಲ ಜೀವನ ನೆನಿಸುವನಯ್ಯಾ, ದೇಶಕ್ಕೊಂದು ಭಾಷೆ, ದೇಶಕ್ಕೊಂದು ವೇಷವ ಧರಿಸಿ, ಒಡಲ ಹೊರೆವ ಜೀವನೇ ವಂಚಕ ಜೀವನೆನಿಸುವನಯ್ಯಾ, ಷಟ್ಕೃಷಿ ವ್ಯಾಪಾರ ದೊಳಗೆ ಆವುದಾದರೊಂದು ವ್ಯವಹಾರವ ಮಾಡಿ ಸತ್ಯದಿಂದ ಬಾಳುವನೇ ನಿರ್ಮಲಜೀವನನೆನಿಸುವನಯ್ಯಾ. ಆವ ಮತವಾದರೇನು ? ಆವ ಜಾತಿಯಾ ದರೇನು ? ಮಲ ಮಾಯಾ ಸಂಸಾರ ಬಂಧನವಂ ತ್ಯಜಿಸಿ, ಅಷ್ಟಾಂಗ ಯೋಗವಂ ಬಿಟ್ಟು ಶ್ರೀ ಗುರು ಪರಮಾರಾಧ್ಯನ ಉಪಾವಸ್ಥೆಯಂ ಮಾಡು ವನೆ ಸುಜೀವನೆನಿಸುವನು. ಮಹಾ ಚಿದ್ಘನ ಗುರುದೇವನ ಪ್ರತ್ಯಕ್ಷವ ಮಾಡಿ ಕೊಂಡು ಘನಗುರು ಭಕ್ತಿಯಲ್ಲಿ ನಿಷ್ಠೆಯುಳ್ಳಾತನೆ ಸಜ್ಜೀವನೆನಿಸುವನಯ್ಯಾ; ಶ್ರೀಮದ್ಘನಗುರುವಿನ ಮೆಚ್ಚಿಸಿ, ಇಷ್ಟ ಪ್ರಾಣ, ಭಾವಲಿಂಗವ ಪಡೆದಾತನೆ ಪರಾತ್ಪರ ಪರಮ ಜೀವನೆನಿಸುವನಯ್ಯಾ. ಇಂತೀ ಜೀವನ ಬುದ್ಧಿಯ ಗುರು ಕಟಾಕ್ಷದಿಂ ನಿವೃತ್ತಿಯ ಮಾಡಿ, ತ್ರಿವಿಧಾಂಗವೆಲ್ಲ ದೀಕ್ಷಾತ್ರಯಗಳಿಂದ ಶುದ್ಧಪ್ರಸಾದವಾಗಿ, ತ್ರಿವಿಧ ಮನವೆಲ್ಲ ಶಿಕ್ಷಾತ್ರಯಗಳಿಂದ ಸಿದ್ಧಪ್ರಸಾದವಾಗಿ, ಭಾವತ್ರಯಂಗಳೆಲ್ಲಾ ಮೋಕ್ಷತ್ರಯಂಗಳಿಂದ ಪ್ರಸಿದ್ಧ ಪ್ರಸಾದವಾಗಿ, ಸತ್ಯ ವಾಣಿ, ಸತ್ಯ ಪಾಣಿ, ಸತ್ಯವಾಣಿ ಉಳಿದವಯವಂಗಳೆಲ್ಲಾ ಸತ್ಯವನೆ ಹಾಸಿ ಹೊದ್ದು, ಸತ್ಯ ಕಾಯಕವನೆ ಮಾಡಿ, ಸತ್ಯ ಭಿಕ್ಷೆಯ ಬೇಡಿ, ಮರ್ತ್ಯದಲ್ಲಿ ಬಂದು ಬಾರದಂತೆ ಸತ್ಯ ಸದಾಚಾರದಿಂದ ನಡೆನುಡಿ ಸಂಪನ್ನರೇ ಕೇವಲ ಪರಮ ಶಿವ ಗಣಂಗಳು ನೋಡಾ ಸಂಗನ ಬಸವೇಶ್ವರಾ. "

"ತನ್ನ ತಾನರಿವುದೇ ಪರಮಾತ್ಮಯೋಗ. ತನ್ನ ತಾ ಮರೆವುದೇ ಮಾಯಾ ಸಂಬಂಧ. ಅಂತರಂಗ, ಬಹಿರಂಗ, ಪರಮಾಕಾಶ ಮಧ್ಯದಲ್ಲಿ ಪರಮಾ

ತ್ಮನು ಪರಬ್ರಹ್ಮಸ್ವರೂಪನಾಗಿ ನಿತ್ಯನಿರಂಜನ ಉಪಮಾತೀತನಾಗಿ, ನಿಷ್ಪತ್ತಿ ಕೇವಲ ನಿಃಕಲ ಸ್ವರೂಪನಾಗಿಹನು. ಭ್ರೂಮಧ್ಯದಲ್ಲಿ ಪರಮಾತ್ಮನೇ ಅಂತರಾತ್ಮನೆನಿಸಿ ಸಕಲ ನಿಃಕಳನಾಗಿಪ್ಪನು. ಹೃದಯಸ್ಥಾನದಲ್ಲಿ ಪರಮಾತ್ಮನೇ ಜೀವಾತ್ಮನಾಗಿ ಕೇವಲ ಸಕಲನಾಗಿಪ್ಪನು. ಬ್ರಹ್ಮಸ್ಥಾನದಲ್ಲಿ ನಿಷ್ಕಲ ಗುರುಮೂರ್ತಿ ಲಿಂಗವು ಭ್ರೂಮಧ್ಯದಲ್ಲಿ ನಿಷ್ಕಲ ಪರಂಜ್ಯೋತಿ ಲಿಂಗ. ಹೃದಯಸ್ಥಾನದಲ್ಲಿ ಕೇವಲ ಸಕಲಜಂಗಮಲಿಂಗ. ಇಂತೀ ಪರಮಾತ್ಮನೇ ಅಂತರಾತ್ಮ, ಪರಮಾತ್ಮನೇ ಗುರುಲಿಂಗ, ಪರಮಾತ್ಮನೇ ಶಿವಲಿಂಗ, ಪರಮಾತ್ಮನೇ ಸರ್ವಗತ, ಪರಮಾತ್ಮನೇ ಆತ್ಮಗತ. ಇದುಕಾರಣ ಪರಮಾತ್ಮನೇ ಅಂತರಂಗ ಬಹಿರಂಗ ಭರಿತಪ್ರಾಣಲಿಂಗ. ಇಂತರಿದುದೇ ಪರಮಾತ್ಮಯೋಗ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ ”

ಹೃದಯ ಕಮಲದ ಹನ್ನೆರಡು ಎಸಳುಗಳಲ್ಲಿ ಎಂಟೆಸಳು ಕೆಳಮುಖವಾಗಿರುತ್ತವೆ. ನಾಲ್ಕೆಸಳು ಮೇಲು ಮುಖವಾಗಿರುತ್ತವೆ. ಈ ನಾಲ್ಕೆಸಳ ಮಧ್ಯದಲ್ಲಿ ಪರಮಾತ್ಮ ಲಿಂಗವು ಅಚಲವಾಗಿರುವದು. ಎಂಟೆಸಳಿನಲ್ಲಿ ಮಲಸಂಬಂಧಿಯಪ್ಪ ಜೀವನು ಚರಿಸುತಿಹನು, ಇದರಲ್ಲಿಯ ಜೀವನ ಸಂಚಲವನ್ನು ಅಳಿದು ಸಮ್ಯಜ್ಞಾನ ಮುಖದಿಂದ ಆ ಪರಮಾತ್ಮ ಲಿಂಗದಲ್ಲಿ ಕೂಡಿ ಭಿನ್ನವಿಲ್ಲದೆ ಎಂದರೆ ಜೀವತ್ವ ಅಳಿದು ಪರಮಾತ್ಮಲಿಂಗವೇ ಆಗಿ, ದೇಹ ಸಂಸಾರವ ಬಿಟ್ಟು, ಭವಬಾಧೆಯ ತೊಡಕು ಹರಿದು ಹೋಗಲು ಸೂರ್ಯನ ಪ್ರಕಾಶದಲ್ಲಿ ಮರೀಚಿಕಾಜಲವು ತೋರಿ ಅಡಗುನಂತೆ ಜ್ಞಾನಾತ್ಮನಪ್ಪ ಇವನ ಸನ್ನಿಧಿಯಲ್ಲಿ ಹುಸಿದೇಹವು ತೋರಿ ಅಡಗುವದು. ಎಂಬದಾಗಿ “ಹೃತ್ಕಮಲ ಕರ್ಣಿಕಾವಾಸದೊಳಗಿರುತಿರ್ಪ । ಇಕ್ಕೆಹಿಕ್ಕೆಗಳ ತಾನೊಂದುಮಾಡಿ ॥ ಸಿಕ್ಕಿಲ್ಲ ತೊಡಕಿಲ್ಲದರಿಜನ ಪಂಜರವ । ಮಿಕ್ಕಿಮೀರಿಯೆ ನಿಂದ ಪರಮಯೋಗಿ ॥೧॥ ಮಂತ್ರಗೋಪ್ಯವು ಉಸುರುತ್ತಲಿದೆ.

ಇದರಂತೆ ಏಕೋತ್ತರಶತಸ್ಥಲವು ಜೀವಾತ್ಮಸ್ಥಲದಲ್ಲಿ “ಜೀವಪರಮರಭೇದವರಿಯಬಲ್ಲಡೆ ಪ್ರಣಮ ಧ್ಯಾನಾರೂಢವಾಗಿ ತನುಗುಣಗಳ ಸೂಸಲೀಯದೆ ಶಿವಜ್ಞಾನಿಯ ಹೃದಯದೊಳು ತಾನಿಪ್ಪನು ಶಿವನು ಸಂದಿಲ್ಲದೆ”

ಅಷ್ಟದಳ ಕಮಲದೊಳಗಿಪ್ಪನಾತುಮ ತಾನು, ಅಷ್ಟದಳ ಮಧ್ಯ ಚತುರಾಶ್ರಮದೊಳು ಇಪ್ಪಪರಮಾತುಮನ ಮುಟ್ಟಿಹೆನೆನುತ ಹಂಸ, ಅಷ್ಟದಳವಳಯದೊಳು ತೊಳಲುತಿಹನು ॥

ಒಂದು ದಳದಲಿ ಪುಣ್ಯ, ಒಂದು ದಳದಲಿ ಪಾಪ, ಒಂದುದಳದಲಿ ಗಮನ ನಿರ್ಗಮನವು. ಒಂದು ದಳದಲಿ ಅಶನವ್ಯಸನ ವಿಷಯಾ ನಿದ್ರೆ, ಒಂದು ದಳದೊಳೊಂದೊಂದು ಛಂದ ॥

ದಶವಾಯುಗಳ ತಮ್ಮ ವಶಕೆ ಹರಿಯಲೀಯನೆ, ಊರ್ಧ್ವಗವಶಕೆ ಬಪ್ಪ ಪ್ರಣವವಶನಾಗಿರುತ ವಿಷಮಲೋಚನ ಘನಗುರು ಪ್ರಿಯ ಸೋಮನಾಥ ಎಸಳಿನ ದಳದೊಳಗೆ ಬೆಳಗುತಿಹನು ॥ ಈ ಪ್ರಕಾರವಾಗಿ ಹಾಡುತ್ತಲಿದೆ.

ಶ್ರೀಪ್ರಭುದೇವರು "ಸರ್ವ ಸಂಸಾರಿಯೊಡನಾಡಿ ಕಟ್ಟುವಡೆಯಿತ್ತು. ಮನದ ತಮಂಧಬಿಡದು ಮನದ ಕಪಟಬಿಡದು. ಸಟೆಯೊಡನೆ ದಿಟವಾಡಿ ಬಯಲು ಬಡಿಯೊಡೆಯಿತ್ತು. ಕಾಯದ ಸಂಗದ ಜೀವವುಳ್ಳನ್ನಕ್ಕರ ಎಂದೂ ಭವಹಿಂಗದು ಗುಹೇಶ್ವರಾ, ಎಂಬದಾಗಿ ನಿರ್ಣಯಿಸಿದ್ದಾಗಿದೆ.

ಇನ್ನು ಶ್ರೀ ಚನ್ನಬಸವಣ್ಣದೇವರು "ಇಂದ್ರದಳ, ಅಗ್ನಿದಳ, ಯಮದಳ, ನೈರುತ್ಯದಳ, ವರುಣದಳ, ವಾಯುವ್ಯದಳ, ಕುಬೇರದಳ, ಈಶಾನ್ಯದಳದ, ಇವಕ್ಕೆ ವಿವರಾ— ಇಂದ್ರದಳವೇರಲು ಗುಣಿಯನಾಗಿಹನು, ಅಗ್ನಿದಳವೇರಲು ಹಸಿವನು, ಯಮದಳವೇರಲು ದುಂತ ಚೇಷ್ಟಿತನಾಗಿಹನು, ನೈರುತ್ಯದಳವೇರಲು ಕೋಪಿಸುತ್ತಿಹನು ವರುಣದಳವೇರಲು ನಿದ್ರೆಗೆಯ್ಯುವನು. ವಾಯುವ್ಯದಳವೇರಲು ಸಂಚಲನಾಗಿಹನು. ಕುಬೇರದಳವೇರಲು ಧರ್ಮಬುದ್ಧಿಯಾಗಿಹನು, ಈಶಾನ್ಯದಳವೇರಲು ವಿಷಯಾತುರನಾಗಿಹನು. ಮಧ್ಯಸ್ಥಾನಕ್ಕೆ ಬಂದಲ್ಲಿ ಸದ್ಭಾವಿಯಾಗಿ ಮೋಕ್ಷವ ಬಯಸುತ್ತಿಹನು. ಇಂತೀ ಅಷ್ಟ ದಳಗಳಲ್ಲಿ ತಿರುಗುವ ಹಂಸನ ನೆಲೆಯ ಕೆಡಿಸಿ, ಸದ್ಭಾವಿಯಾಗಿಹ ಕೂಡಲ ಚನ್ನ ಸಂಗಾ ನಿಮ್ಮ ಶರಣ." ಎಂಬದಾಗಿ ತಮ್ಮ ಸ್ವಾನುಭವದಿಂದ ನಿರ್ಧರಿಸಿದ್ದಾರೆ.

ನೂಲಿಗಾಗಲಿ, ಅರಿವೆಗಾಗಲಿ ವಿಧವಿಧದ ಬಣ್ಣವನ್ನು ಮಾಡಲು ಅರಿವೆ ನೂಲುಗಳನ್ನು ಸ್ವಚ್ಛಗೊಳಿಸಿ, ಬಣ್ಣವನ್ನಿದ್ದಿದರೆ ಆ ಬಣ್ಣವು ನುಣ್ಣಗೆ ಕೂಡ್ಡುವದನ್ನೂ, ಗಿಲಾಯಿ ಗೋಡೆಗಳಿಗೂ, ಕಲ್ಲು ಕಟ್ಟಿಗೆಗಳಿಗೂ ಬಣ್ಣ ಬಳಿಯಬೇಕಾದಲ್ಲಿ ಅವುಗಳನ್ನಾದರೂ ನುಣುಪುಗೊಳಿಸಿ, ಮೊದಲು ಸುಣ್ಣ ಹಚ್ಚಿ, ಮೇಲೆ ಬಣ್ಣ ಕೊಡುವದನ್ನೂ, ಕಸಗಾಡು ಗುಡ್ಡಗಾಡು ಭೂಮಿ

ಇದ್ದಲ್ಲಿ ಅವುಗಳನ್ನು ಪೊಳ್ಳು ಮಾಡಿ, ಕಸಕಡ್ಡಿ ಕಲ್ಲುಗಳನ್ನು ಹೋಗಲಾಡಿಸಿ, ಬೇಸಿಗೆಯ ಗಳಿಗಳಿಂದ ಮಣ್ಣು ಮಾಡಿ, ಹರಗಿ ಹಸನಗೈದು, ಮಳೆಯಾದಾಗ ಹದನೋಡಿ ಬಿತ್ತುವದನ್ನೂ, ಆರೇಳು ವರ್ಷದ ಬಾಲಕರನ್ನು ಪ್ರಾಥಮಿಕ ಶಾಲೆಗೆ ಕಳುಹಿ ಅವರ ನಡೆನುಡಿ ಓದು ಬರಹಗಳು ಸುಧಾರಿಸುವ ಸುಶಿಕ್ಷಣವ ಕೊಡುವದನ್ನೂ ಮನದಂದರೆ, ಐಹಿಕ ಸುಖ ಸಾಧನೆಗಳಿಗೆ ಗುರುಗಳ ಅವಶ್ಯವಿದ್ದಂತೆ ಪಾರಮಾರ್ಥಿಕ ನಿರಾಕಾರ ನಿರ್ಗುಣ ವಸ್ತು ಜ್ಞಾನಕ್ಕೆ ಗುರುವಿನ ಅವಶ್ಯಕತೆ ಎಷ್ಟಿರುವದೆಂಬದನ್ನು ಹೇಳಬೇಕಿಲ್ಲ. ಆದ್ದರಿಂದ ಮೊದಲು ದೀಕ್ಷಾ ಗುರು, ನಂತರ ಶಿಕ್ಷಾಗುರು, ಅಲ್ಲಿಂದ ಮೋಕ್ಷಾ ಗುರುಕರುಣವು ಬೇಕೇ ಬೇಕು. ಶರೀರ ಸ್ವಚ್ಛತೆಗೆ ಪ್ರತಿದಿನ ನಾವು ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಸರ್ವೇಂದ್ರಿಯಗಳಿಂದ ಕೂಡಿದ ಶರೀರವನ್ನು ಸ್ನಾನದಿಂದ ಸ್ವಚ್ಛಗೊಳಿಸಿ, ದ್ವಾದಶ ಮಲಗಳನ್ನು ನಿರ್ಮೂಲಗೈಯ್ಯುತ್ತೇವೆ. ಎಷ್ಟೋ ಜನ್ಮಗಳಿಂದ ಈ ಜೀವಾತ್ಮನಿಗೆ ಅಂಟಿದ ಮಲತ್ರಯಗಳನ್ನೂ, ತಾಪತ್ರಯಗಳನ್ನೂ, ಅರಿಷಡ್ವರ್ಗಗಳನ್ನೂ ಸಪ್ತ ವ್ಯಸನಗಳನ್ನೂ, ಅಷ್ಟ ಮದಗಳನ್ನೂ ನಾಶಗೊಳಿಸಲು ದೀಕ್ಷಾತ್ರಯಗಳ ಅವಶ್ಯವಿರುವದೆಂಬದನ್ನು ಸಾರಬೇಕಿಲ್ಲ.

ನಾನಾ ಭವಭಯ ಸಂಸಾರದ ಅಜ್ಞಾನ ಜಡವ ಪರಿಹರಿಸಿ, ಜ್ಞಾನಾನುಗ್ರಹ ಜನಿತನ ಮಾಡಿ, ಕರ್ಮಜಾತ ಜನಿತೇಂದ್ರಿಯದ ದುಷ್ಕರ್ಮಂಗಳ ಪೂರ್ವಾಶ್ರಯ ಕಳೆದು, ಶಿವಜ್ಞಾನದ ಮರ್ಮವ ತೋರಿ, ಕರಕಮಲವ ಶಿರದೊಳಿಟ್ಟು, ದುರಿತ ದುಷ್ಕೃತ ಲಿಪಿಯನೆ ತೊಡೆದು, ನರಜನ್ಮದ ಪೂರ್ವಾಶ್ರಯ ದೋಷವ ದೂರ ಮಾಡಿ, ಅಂಗದೊಳಗೆ ಲಿಂಗವ ನಿಲಿಸಿ, ಸರ್ವಾಂಗವ ಲಿಂಗಸ್ಥಲವೆನಿಸಿ, ಮಂಗಳಮಯ ಪರಮ ಜ್ಞಾನದ ನಿಜದಂಗವ ತೋರಿ, ಒಳಹೊರಗೆನ್ನದೆ ತನ್ನಲ್ಲಿರುವ ಜ್ಞಾನ ಜ್ಯೋತಿಯ ಬೆಳಗ ತಿಳಿವಂತೆ ಕಣ್ದೆರೆವೆಯ ಹುಟ್ಟಿಸಿ, ಉರಿಕರ್ಪೂರವ ಸೋಂಕಿದಂತೆ ಜೀವನೊಳು ಬೆರೆಸಿಪ್ಪ ಮಹಾ ಘನವನು ತೋರಿ, ಪರಮ ಸುಖದೋರಿಸಿ ಸಲುಹಿದ ಗುರುವೇ ದೀಕ್ಷಾಗುರುವು. ॥ಮತ್ತೇಭ॥ "ವಿಲಸತ್ಸೂಕ್ಷ್ಮಮೆನಿಪ್ಪ ಚಿತ್ಕಳೆಯನಿಂತುಂ ಭಾವದೊಳ್ತಂದು ಮ। ತ್ತೊಲವಿಂ ಮಾನಸದಲ್ಲಿ ಗೈದಿಸಿ ಬಳಿಕ್ಕೆ ದುಷ್ಟಿಯೊಳ್ತಂದದಂ ॥ ನೆಲೆಗೊಳ್ವಂದದೆ ಹಸ್ತದೋಳಿರಿಸಿಯಂತರ್ಬಾಹ್ಯವೆಂಬೀ ದ್ವಿಧಾ। ಸ್ಥಲದೊಳ್ಕಂಗೊಳಿಪಂತೆ ಕಂಗೊಳಿಸುವೈ ಶ್ರೀ ಸಿದ್ಧ

ಲಿಂಗೇಶ್ವರಾ." ಎಂಬದಾಗಿ ದೀಕ್ಷಾಗುರುವಿನ ಸತ್ಕ್ರಿಯೆಯು ದೇದೀಪ್ಯಮಾನ ವಾಗಿ ಬೆಳಗುತ್ತಲಿದೆ. ಇದೇ ಸಂಗತಿಯನ್ನೇ ಶಿವಶರಣ ಶ್ರೀ ದಾಸಿಮಾ ರ್ಯರು "ಶ್ರೀ ಗುರು ಶಿಷ್ಯನ ಮಸ್ತಕದಲ್ಲಿ ಹಸ್ತಾಬ್ಜ ಮಥನದಿಂದೊತ್ತಿ, ಭಸ್ಮವ ಮಾಡಿ ವತ್ತು ಪಂಚಾಕ್ಷರಿಯ ಮರುಜೀವಣಿಯಂ ಶ್ರೋತ್ರದೊ ಳೋದುತ್ತೆ ಧಾರೆಯನೆರೆಯೆ ಸತ್ಯವಿದು ನಿನ್ನಂತೆ ಕಾಣಾ ರಾಮನಾಥಾ." ಎಂಬದಾಗಿ ಬಿಂಬಿಸಿದ್ದಾರೆ.

ಹಸ್ತಾಬ್ಜ ಮಥನದಿಂದೊತ್ತಿ ಭಸ್ಮವ ಮಾಡಿದ ಬಾಹ್ಯದೊಳು ಪ್ರಭಾ ವಿಸಿ, ಕರಸ್ಥಲಕ್ಕೆ ಬಿಜಯಂಗೈದ ಲಿಂಗದೇವನ ಪೂಜಿಸಿ, ಅರ್ಚಿಸಿ, ಅರು ಹಿನೊಳು ಅವಿರಳವಾಗಿ ನಿಲ್ಲುವ ಬಗೆಯನ್ನು, ಶಿಕ್ಷಾಗುರುವು ನಡೆನುಡಿ ಗಳಲ್ಲಿ ಕೊರತೆ ಬಾರದಂತೆ ಭಕ್ತಸ್ಥಲದ ಹದಿನೈದು ಅಂಗಸ್ಥಲಗಳೂ, ಒಂಭತ್ತು ಲಿಂಗಸ್ಥಳಗಳೂ ಅನುಭವಕ್ಕೆ ಆಗಮಿಸುವಂತೆ ಭಕ್ತಿಯ ಮಹತ್ವ ವನ್ನೂ ನೀತಿಯ ನೆಲೆಗಟ್ಟನ್ನೂ ಕ್ರಿಯೆಯ ಕ್ರಮವನ್ನೂ ಅಷ್ಟಾವರಣಗಳ ಗುಟ್ಟನ್ನೂ ಪಂಚಾಚಾರ ಮಟ್ಟನ್ನೂ ಲಿಂಗಾಂಗಗಳ ಅನುಸಂಧಾನದ ಅನು ವನ್ನೂ, ಉಪಾಧಿ, ನಿರುಪಾಧಿ, ಸಹಜ ಮಾಟಸ್ಥಳಗಳ ಮಾಟವನ್ನೂ ಷಟ್‌ಸ್ಥಳಗಳ ಭಕ್ತಿ ಕ್ರಿಯಾಜ್ಞಾನ ಯೋಗಾದಿಗಳನ್ನೂ ಆಗಾಗ್ಗೆ ಬೋಧಿಸಿ, ಬಾಧಿಪ ಪಂಚ ಮಹಾ ಪಾತಕಗಳನ್ನೂ ಸಮಂಜಸವಾಗಿ ಸವಿಸ್ತರಿಸುತ್ತ, ತನುವಿಗೆ ಗುರುಪ್ರಸಾದ ಸೋಂಕಲು ತನುವೆಲ್ಲ ಗುರುವಾದ ಪರಿಯನ್ನೂ, ಮನಕ್ಕೆ ಲಿಂಗಪ್ರಸಾದ ಸೋಂಕಲು, ಮನವೆಲ್ಲ ಲಿಂಗಾಗುವ ರೀತಿಯನ್ನೂ ಅರುಹಿಂಗೆ ಜಂಗಮ ಪ್ರಸಾದ ಸೋಂಕಲು ಅರಿವೆಲ್ಲ ಮಹಾ ಪ್ರಸಾದ ರೂಪ ಜಂಗಮವಾಗುವ ಬಗೆಯನ್ನೂ ಬೆಸಸಿ, ಶಿಷ್ಯನ ತನು ಮನ ಭಾವಂಗ ಳಲ್ಲಿ ಇಷ್ಟ ಪ್ರಾಣ ಭಾವಲಿಂಗಗಳೂ, ಬಾಹ್ಯದೊಳು ಆ ಇಷ್ಟ ಪ್ರಾಣ ಭಾವ ಲಿಂಗಗಳೇ ಗುರುಲಿಂಗ ಜಂಗಮಗಳೂ ಉಂಟೆಂಬುದನ್ನು ತಿಳುವಿ ನೊಳು ತಂದು, ಭಕ್ತಿ, ಕ್ರಿಯಾ ಯೋಗ ಜ್ಞಾನಗಳು ಬಲಪಡುವ ಸಾಧನ ಸಾಮಗ್ರಿಗಳನ್ನು ಸಂವರ್ಧಿಸಿ, ಜ್ಞಾನ ಸುಜ್ಞಾನ, ಮಹಾ ಜ್ಞಾನಗಳ ಅಳ ವಡಿಸುವನು. ॥ಮತ್ತೇಭ॥ "ಕ್ರಿಯೆಯಿಂದರ್ಚಿಸುವಂದಮಂ ನೆರೆಮನಸ್ಸಿಂ ಧ್ಯಾನಿಸುತ್ತಿರ್ಪ ನಿ। ಶ್ಚಯಮಂ ಚಿತ್ತ ಸಮಾಧಿಯಂ ಪರತರ ಶ್ರೀ ಷಟ್ಸ್ಥಲ ಬ್ರಹ್ಮಮಂ ॥ ನಿಯತಂ ನಿರ್ಣಯಿಪಂದಮಂ ನಿಜಸುಖಾಭಿವ್ಯಕ್ತಿಯಂ ಪೇಳ ಸ। ತ್ಕ್ರಿಯದಿಂ ಪಾಲಿಸುತಿರ್ಪೆಯಾಹ ಕೃಪೆಯಿಂ ಶ್ರೀ ಸಿದ್ಧಲಿಂಗೇಶ್ವರಾ"

ಎಂಬದಾಗಿ ಸಚ್ಛಿಷ್ಯನು ತನ್ನ ಗುರುಭಕ್ತಿಯನ್ನು ವ್ಯಕ್ತಪಡಿಸಿರುವನು. ಮತ್ತು ಶ್ರೀ ಚನ್ನ ಬಸವೇಂದ್ರರು "ನಿಮ್ಮ ಸದ್ಭಕ್ತರ ಕಂಡು ಉದಾಸೀನವ ಮಾಡಿದೊಡೆ, ಒಂದನೇ ಪಾತಕ. ನಿಮ್ಮ ಭಕ್ತರ ಸಮಯೋಚಿತವನರಿಯದಿರ್ದೊಡೆ ಎರಡನೆಯ ಪಾತಕ. ನಿಮ್ಮ ಭಕ್ತರ ಸಕಲ ರತಿಗೆ ಸಲ್ಲದಿರ್ದೊಡೆ ಮೂರನೆಯ ಪಾತಕ. ನಿಮ್ಮ ಭಕ್ತರ ಒಡನೆ ಪ್ರತ್ಯುತ್ತರವ ಕೊಟ್ಟಡೆ ನಾಲ್ಕನೆಯ ಪಾತಕ. ನಿಮ್ಮ ಭಕ್ತರಿಗೆ ಮಾಡಿದೆನೆಂದು ಮನದಲ್ಲಿ ಹೊಳೆದೊಡೆ ಐದನೆಯ ಪಾತಕ. ಇಂತೀ ಪಂಚ ಮಹಾ ಪಾತಕವ ಕಳೆದಲ್ಲದೆ ನಮ್ಮ ಕೂಡಲ ಚನ್ನ ಸಂಗಯ್ಯನ ಹೊದ್ದಬಾರದು." ಎಂಬದಾಗಿ ಎಚ್ಚರಗೊಳಿಸಿದ್ದಾರೆ.

ಕೆಲವರು ಧರ್ಮಾಚಾರ ಮತಾಚಾರಗಳಿಗೆ ಗುರುವು ಏಕೆ ಬೇಕು? ವೇದ ಶಾಸ್ತ್ರಾಗಮಗಳೂ, ಪುರಾಣ ಪುಣ್ಯ ಕಥೆಗಳೂ, ಪ್ರವಚನಗಳೂ ಸಾಕಾಗುವದಿಲ್ಲವೇ ? ಎಂದು ಶಂಕಿಸಬಹುದು. ಸಾಧಾರಣ ನಮ್ಮ ವ್ಯವಹಾರದಲ್ಲಿ ತಿಜೋರಿ, ಚೋರ, ಕೀಲಿಗಳನ್ನು ಕಂಡಾಗ ಅವುಗಳನ್ನು ಮಾಡಿದವನ ತಂತ್ರ ತಿಳಿಯದೆ ಅವನ್ನು ತೆರೆಯ ಹೋದರೆ ತೆರೆಯುವದಿಲ್ಲ. ಇದರಂತೆ ಹಾವು ಚೇಳು ಕಡಿಸಿಕೊಂಡವರ ನೋವು ಸಾವುಗಳು ಅಳಿಯಲು ಆಯಾ ಹಾವಿನ ಮಂತ್ರ, ಚೇಳಿನ ಮಂತ್ರ ಸಿದ್ಧಿ ಪುರುಷರ ಕಡೆಗೆ ಹೋಗಲೇ ಬೇಕಾಗುವದು. ಇದಲ್ಲದೆ, ಬಟ್ಟೆಯಾಗಿ ಕೀವು ರಕ್ತ ಹೊರಕಡಿಗೆಯಾಗ ಹತ್ತಿದರೆ ಆಯಾ ನೋವುಗಳಾಗುವ ನರ ನಾಡಿಗಳ ಕಳೆಹಿಡಿದು, ಆ ಕಳೆಯಲ್ಲಿ ಬಟ್ಟೇ ಕಟ್ಟಿ, ಅಕದೆಲೆಯ ನೋವಿನ ನರಕ್ಕೆ ಕೀರ ಹಾಕಿ, ಅಗಿಂದಾಗ್ಗೆ ಆಯಾ ಬೇನೆಗಳು ಇಲ್ಲದಂತೆ ಮಾಡುವದನ್ನು ಪ್ರತ್ಯಕ್ಷ ನೋಡುತ್ತೇವೆ. ಒಮ್ಮೊಮ್ಮೆ ಮೊಲೆ ಕುಡಿಸುವ ತಾಯಿಯ ಮೊಲೆಗಳು ಬಿಗಿದು ಹಾಲು ಕುಡಿಸಲು ಹಾಲು ಬರುವದಿಲ್ಲ. ಮೊಲೆಗೆ ಸಂಬಂಧಿಸಿದ ನರನಾಳಗಳೆಲ್ಲ ಬಿಗಿದು, ಆ ಬಿಗಿದ ನೋವಿನಿಂದ ತಾಯಿಯು ಚಡಪಡಿಸ ಹತ್ತಲು ಕಾಲು ಮುಂದಾಗಿ ಹುಟ್ಟಿದವರು ಆ ತಾಯಿಯ ಮೊಲೆಗಳ ಮೇಲೆ ತಮ್ಮ ಎಡಗಾಲು ಇಳುಹಿದರೆ ಸಾಕು. ಆ ಮೊಲೆ ನೋವು ಹೋಗುವದನ್ನೂ ನೋಡುತ್ತೇವೆ. ಇದರಂತೆ ಕೂಸಿಗೆ ದೃಷ್ಟಿಯಾದಾಗ ಮೊಲೆ ಕುಡಿಯದೆ, ಒಂದೇ ಸವನೆ ಅಳುವದನ್ನೇ ಮಾಡುತ್ತಿರುವಾಗ ಕಾಲ್ದೂಳಿ ಮಂತ್ರದಿಂದ ದೃಷ್ಟಿ ಮುರಿಯುವದನ್ನೂ ಕಾಣುತ್ತೇವೆ. ಈ

ಎಲ್ಲ ಸಂಗತಿಗಳಿಂದ ಆಯಾ ರೋಗಗಳಿಗೆ ಆಯಾ ಚಿಕಿತ್ಸಾ ಜ್ಞಾನಿಗಳು ಬೇಕೇ ಬೇಕು. ಅಂದ ಬಳಿಕ ಭವರೋಗ ಪರಿಹಾರಕ್ಕೆ ಜ್ಞಾನ ಗುರುವು ಬೇಡವೇ ? ಸಾಕ್ಷಾತ್ ಶಿವಗಣಂಗಳು ಶಿವಪ್ರಸಾದದಿಂದ ಅವತರಿಸಿದ ಶ್ರೀ ಪ್ರಭುದೇವರಂಥವರಿಗೆ ಗುರು ಬೇಕಾಗಿರಲಿಕ್ಕಿಲ್ಲ. ಏಕೆಂದರೆ ಅವರು ಸ್ವಾಭಾವಿಕವಾಗಿ ಪರಮಾತ್ಮನ ಅವತಾರೀ ಪುರುಷರೇ ಆಗಿದ್ದಾರೆ. ಹಾಗು ಕೇವಲ ಪಶುವೃತ್ತಿಯನ್ನು ಅತಿಗಳೆಯದವರಿಗೂ ಗುರು ಬೇಡ. ಯಾಕಂದರೆ "ಬೋರ್ಗಲ್ಲ ಮೇಲೆ ಮಳೆಗರೆದರೆ ಆ ಕಲ್ಲು ನೀರ್ಗುಡಿಯಬಹುದೇ ?" ಎಂಬ ಹಾಗೆ ಇದನ್ನರಿತ ಶ್ರೀ ಪ್ರಭುದೇವರು "ಸಾವ ಜೀವಕ್ಕೆ ಗುರು ಬೇಡ. ಸಾಯುದ ಜೀವಕ್ಕೆ ಗುರು ಬೇಡ. ಗುರುವಿಲ್ಲದೆ ಕೂಡಲಿಕ್ಕೆ ಬಾರದು. ಇನ್ನಾವ ಠಾವಿಂಗೆ ಗುರು ಬೇಕು ? ಸಾವ ಜೀವ ಸಂಬಂಧದ ಠಾವ ತೋರಬಲ್ಲಾತನೇ ಗುರು ಗುಹೇಶ್ವರನು." ಈ ಪ್ರಕಾರ ಗುರುಶಿಷ್ಯರೆಂಥವರಿರಬೇಕೆಂಬದನ್ನೂ ಸೂಚಿಸಿದ್ದಾರೆ. ಇದರಂತೆ ಜ್ಞಾನ ಗುರುವು ಯಾವ ಯೋಗ್ಯತೆಯುವನಿರಬೇಕೆಂಬುದನ್ನು ॥ಮತ್ತೇಭ॥ "ಪಡೆದಾ ಪಿಂದಣ ಜನ್ಮದೋಳ್ಗಳಿಸಿದಾ ಸತ್ಕರ್ಮದಿಂ ಜಂಗಮಾಭ್ಯುದಯಾಚಾರದ ಬೋಧೆಯಿಂ ಸಕಲ ಸಂದೇಹಂಗಳಂ ನೂಂಕಿ ಸ॥ನ್ಮುದದಿಂ ತನ್ನ ನಿಜ ಸ್ವರೂಪದ ವಿಚಾರಂಗಾಣಿಸುತ್ತಿರ್ಪ ಸ। ದ್ವಿದಿತ ಜ್ಞಾನದೆ ಸುಪ್ರಶಸ್ತ ಗುರುವೇ ಶ್ರೀ ಸಿದ್ಧಲಿಂಗೇಶ್ವರಾ." ಏಕೋತ್ತರ ಶತಸ್ಥಲ ಕರ್ತರು ಕಣ್ಮನ ಭಾವದೊಳು ತಮ್ಮ ಅನುಭಾವವನ್ನು ಬೀರಿದ್ದಾರೆ.

ತ್ರಿವಿಧ ದೀಕ್ಷೆಗಳ ಅಂತರ್ಭೂತವಾದ ಉಪಮಾ ದೀಕ್ಷೆಯ ಬೋಧೆಯೊಳು ಶ್ರೀಗುರುವು ಶಿಷ್ಯನಿಗೆ:— "ಅಯ್ಯಾ, ನಿನ್ನ ಅಷ್ಟ ತನುವಿನ ಮಧ್ಯದಲ್ಲಿ ಪರಬ್ರಹ್ಮ ನಿಜವಸ್ತುವೆ ನಿನ್ನ ಪಾವನ ನಿಮಿತ್ತಾರ್ಥವಾಗಿ ಅಷ್ಟಾವರಣ ಸ್ವರೂಪಿನಿಂದ ನೆರೆದಿರ್ಪುದು ನೋಡಾ. ಅದರ ವಿಚಾರವೆಂತೆಂದೊಡೆ,— ನಿನ್ನ ಸ್ಥೂಲ ತನುವಿನ ಮಧ್ಯದಲ್ಲಿ ಅರುಹೇ ಗುರುವಾಗಿ ನೆಲೆಸಿರ್ಪುದು. ನಿನ್ನ ಕಾರಣ ತನುವಿನ ಮಧ್ಯದಲ್ಲಿ ಸ್ವಾನುಭಾವವೇ ಜಂಗಮವಾಗಿ ನೆಲೆಸಿರ್ಪುದು ನೋಡಾ. ನಿನ್ನ ನಿರ್ಮಲ ತನುವಿನ ಮಧ್ಯದಲ್ಲಿ ಕರುಣಾಮೃತ ಪಾದೋದಕವಾಗಿ ನೆಲೆಸಿರ್ಪುದು ನೋಡಾ. ನಿನ್ನ ಚಿದ್ರೂಪ ತನುವಿನ ಮಧ್ಯದಲ್ಲಿ ಚಿತ್ಪ್ರಕಾಶ ಭಸಿತವಾಗಿ ನೆಲೆಸಿರ್ಪುದಯ್ಯ; ನಿನ್ನ ಚಿನ್ಮಯ ತನುಮಧ್ಯದಲ್ಲಿ ಚಿತ್ಕಾಂತಿ ರುದ್ರಾಕ್ಷಿಯಾಗಿ ನೆಲೆಸಿರ್ಪುದಯ್ಯಾ;

ನಿನ್ನ ಚಿತ್ಪ್ರಕಾಶ ತನುವಿನ ಮಧ್ಯದಲ್ಲಿ ಚಿದಾನಂದ ಮಂತ್ರವಾಗಿ ನೆಲೆಸಿರ್ಪುದು ನೋಡಾ. ಇಂತು ನಿನ್ನ ಸರ್ವಾಂಗದಲ್ಲಿ ಅಷ್ಟಾವರಣ ಸ್ವರೂಪಿನಿಂದ ಪರಾತ್ಪರ ನಿಜವಸ್ತು ನೆಲೆಸಿಪ್ಪುದು. ನಿನ್ನ ನಿರ್ಮಾಯ ಚಿತ್ತು ಮಹಾಜ್ಞಾನ ನಿಜದೃಷ್ಟಿಯಿಂದ ನಿನ್ನ ನೀ ತಿಳಿದು ನೋಡಾ. ಎಂದು ಗಣಸಾಕ್ಷಿಯಾಗಿ ಶ್ರೀಗುರು ನಿಃಕಳಂಕ ಚನ್ನಬಸವ ರಾಜೇಂದ್ರನು ನಿರ್ಲಜ್ಜ ಶಾಂತ ದೇಶಿಕೋತ್ತಮಂಗೆ ಉಪನಾದೀಕ್ಷೆ ಇಂತುಂಟೆಂದು ನಿರೂಪವಂ ಕೊಡುತಿರ್ದನು ನೋಡಾ ಸಂಗನ ಬಸವೇಶ್ವರಾ."

ಗುರುವೇ ಸಕಲ ಲೋಕ ಜನಕನಯ್ಯ, ಸರ್ವ ಲೋಕ ಜನನಿಯಯ್ಯ, ಗುರುವೇ ಸಮಸ್ತ ಕುಟುಂಬಿಯಯ್ಯ, ಸ್ವತಂತ್ರನಯ್ಯ. ಗುರುವೇ ಸುರುಚಿರ ಭೇದ್ಯನಯ್ಯ; ಸತ್ಕ್ರಿಯಾಜ್ಞಾನಕ್ಕೆ ಮಂದಿರನಯ್ಯ; ಗುರುವೇ ಕಾಲಹರನಯ್ಯ, ಕರ್ಮ ಹರನಯ್ಯ, ದುರಿತ ಹರನಯ್ಯ, ಪಾಪ ಹರನಯ್ಯ. ಗುರುವೇ ದೀಕ್ಷಾಕಾರಣ, ಶಿಕ್ಷಾಕಾರಣ, ಮೋಕ್ಷಾಕಾರಣನಯ್ಯ. ಪರಮಾಮೃತ ಸುಧಾರಸವಯ್ಯ. ಗುರುವೇ ಭಕ್ತಿಗೆ ಬೀಜವಯ್ಯ, ಅನಾಚಾರ ಸಂಹರನಯ್ಯ, ದುಷ್ಟ ನಿಗ್ರಹನಯ್ಯ, ಶಿಷ್ಟ ಪರಿಪಾಲನಯ್ಯ, ಸ್ತುತಿನಿಂದೆ ರಹಿತನಯ್ಯ. ಗುರುವೇ ಅಪ್ರಮಾಣನಯ್ಯ, ಅಗಮ್ಯ ಅಗೋಚರನಯ್ಯ, ಕಾಮಧೇನು ಕಲ್ಪವೃಕ್ಷ ನೋಡಾ. "ಗುರುಃಪಿತಾ ಗುರುರ್ಮಾತಾ ಗುರುದೇವ್ಯೈವ ಬಾಂಧವಃ । ಗುರುದೈವಾತ್ಪರಂ ನಾಸ್ತಿ ತಸ್ಮೈ ಶ್ರೀ ಗುರವೇ ನಮಃ ॥೧॥ ನಮುಕ್ತಿರ್ನಚ ಧರ್ಮಂಚ ನಪುಣ್ಯಂಚ ನಪಾಪ ನಕರ್ಮ ಜನ್ಮನಶ್ಚರ್ಯ ಗುರುಪಾದ ನಿರೀಕ್ಷಣಾತ್ ॥೨॥" ಗುರುವಿನಿಂ ಪೆರತೊಂದು ಅಧಿಕ ವಸ್ತುವಿಲ್ಲ. ಸಂಗನ ಬಸವೇಶ್ವರಾ ॥

ಎಂಭತ್ತು ನಾಲ್ಕು ಲಕ್ಷ ಜೀವರಾಶಿಗಳೊಳು ನರಜೀವಿಗಳ ಭೇದವೂ, ಹರಮೂರ್ತಿಗಳ ಪರಿಣಾಮವೂ, ಜೀವ ಪರಮರ ಜಡಾಜಡವೂ ಅವರವರ ಇರುವಿನ ಕುರುಹೂ, ನಿಜಸುಖವ ನೀಡುವ ಗುರುತ್ರಯರ ಗೌರವವೂ, ಗುರುಶಿಷ್ಯರ ಸಂಬಂಧವೂ, ಅಷ್ಟತನುಗಳನ್ನು ಆವರಿಸಿದ ಅಷ್ಟಾವರಣಗಳ ವಿವರವೂ, ಮರೆಮಾಜದ ನಿಜಗುರುವಿನ ಮಹತ್ವವೂ ವಾಚಕರ ಅರುಹಿನೊಳು ಅಚಲವಾಗಿ ನೆಲೆಗೊಂಡು ಬಲಗೊಳ್ಳಲೆಂದು ಭಾವಿಸುವಾ.

ಕಂದ॥— ಗುರುವೇ ಮಾತಾ ಪಿತನೈ ।
ಗುರುದೇವಂ ಬಂಧು ಬಳಗ ಬ್ರಹ್ಮಾಂಡದೊಳಂ ॥
ಗುರುವೇ ಹಿತಚಿಂತಕನೈ ।
ಗುರುವೇ ಗತಿಯೈ ಇಹ ಪರ ಲೋಕಕ್ಕೆಲ್ಲಂ ॥೧॥

ಗುರುವೇ ತೀರ್ಥ ಕ್ಷೇತ್ರಂ ।
ಗುರುವೇ ಭವ ಭಯ ವಿದೂರ ವಿಶ್ವಾರಾಧ್ಯಂ ॥
ಗುರುವೇ ನತಜನ ಪಾಲಂ ।
ಗುರುವೇ ವಿದ್ಯಾ ವಿಚಾರ ಸಾರಂ ಧೀರಂ ॥೨॥

ಗುರುಪದ ಧೂಳೋದಕನೈ ।
ಗುರುಪದ ಚಿಜ್ಜಲ ಸುತೀರ್ಥ ಕರುಣಾಂಬುಧಿಯೈ ॥
ಗುರುವಿನನುಗ್ರಹ ಪಡೆದುಂ ।
ಗುರುವಿಂದಷ್ಟಾವರಣ ಸುಸಾಧ್ಯಂ ವೇದ್ಯಂ ॥೩॥

ತನುಶುದ್ಧಂ ಗುರುವಿಂದಂ ।
ಮನಶುದ್ಧಂ ಲಿಂಗ ಸಂಗ ಸದ್ವರ್ತನದಿಂ ॥
ಧನಶುದ್ಧಂ ಜಂಗಮನಿಂ ।
ಘನ ಗುರು ವಚನಾಮೃತವಿದು ಸಿದ್ಧಂ ಬದ್ಧಂ ॥೪॥

ಗುರುಕರುಣಾಮೃತ ಪಾನಂ ।
ವರಲಿಂಗಾಂಗದೆ ಸಮರಸ ಪರಮ ಸ್ಥಾನಂ ॥
ಪರತರ ಮೋಕ್ಷ ಜ್ಞಾನಂ ।
ನಿರುಪಮ ನಿರ್ಗುಣ ನಿಗೂಢ ಶಿವಸಂಧಾನಂ ॥೫॥

ವಚನ:—

ಗುರುಕರ ಜಾತನಾಗಿ ಮರವೆಯ ಕಳೆದು, ಅರುಹಿನ ಕಣ್ದೆರೆದು ಶಿವಸಾಮ್ರಾಜ್ಯವನೆ ಪೊಕ್ಕು, ತೆರವಿಲ್ಲದೆ ಅವಿರಳವಾಗಿ ವ್ಯಾಪಿಸಿದ ನಿರವಯ ಮೂರ್ತಿಯ ಕುರುಹಿನ ಇರವನೇ ನೆರೆನಂಬಿರೆಂದು, ಸುಖದ ಸುಗ್ಗಿಯೊಳು ನುಗ್ಗಿದ ಆ ಮಹಾ ಗುರುವಿಗೆ ನಮೋ ನಮೋ ಎಂಬೆನಯ್ಯ ಸಿದ್ಧೇಶ್ವರಾ ॥೧॥

ಇಷ್ಟಲಿಂಗದ ಅಷ್ಟವಿಧಾರ್ಚನೆಯ ಅಂದವನು, ಪ್ರಾಣಲಿಂಗದ ಪ್ರಸಾದ ಯೋಗಗಳ ಕಂಗೊಳಿಸುವ ಕಲೆಯನು, ಭಾವಲಿಂಗದ ಬೆಳಗು ಮಹಾ ಬೆಳಗುಗಳ ಸೊಬಗಿನ ಬಗೆಯನು ತಿಳಿಸಿ ಬೆಳಸಿ, ಭವಬೀಜವ ಹುರಿದ ಮಹಾಗುರುವಿಗೆ ನಮೋ ನಮೋ ಎಂಬೆನಯ್ಯ ಸಿದ್ಧೇಶ್ವರಾ ॥೨॥

ಮೆತ್ತಿದ ಕತ್ತಲೆಯು ಕಿತ್ತಲಾರಂಭಿಸಿತು, ಮುತ್ತಿದ ಅಸುರ ಗಣವು ಮೆತ್ತಗಾಗಿ ಎತ್ತಲೋ ಸಾಗಿತು, ತೆತ್ತೀಸ ಕೋಟಿ ಸುರರೆಲ್ಲ ಹತ್ತಿರದಲ್ಲಾಗಲು ಒತ್ತರಿಸಿ ಓಡಿಬರುವ ಅಮರಗಣ, ನಾಗ ಗಣ, ಪ್ರಮಥ ಗಣ, ಶಿವಗಣಗಳೆಲ್ಲ ಶಿವಸಭಾ ಸ್ಥಾನದೊಳು ಬತ್ತರಿಸಿ ಬಿಜಯಂಗೈದ ಆ ಕೈಲಾಸದ ಕಳೆಯ ಬೆಳಗನೇನೆಂದು ಹೇಳಲಯ್ಯ ಸಿದ್ಧೇಶ್ವರಾ ॥೩॥

ಪೂಜೆ ಪೂರೈಸಿತು, ಕಣ್ಣಿನ ತೇಜ ತಿರುಪುಗೊಂಡಿತು, ಮನದ ನೆನಹು ಘನದೊಳು ಮನೆಮಾಡಿತು, ಪ್ರಾಣದ ಪರಿವು ನಿರಿಗೆಗಟ್ಟಿತು, ಭಾವದ ಭ್ರಮೆಯಡಗಿ ಭವಹರನೊಳು ಬೆರೆದಪರಿಯನೇನಹೇಳನಿ ಸಿದ್ಧೇಶ್ವರಾ ॥೩॥

ಬಲಿಯು ಹರಿಯಿತು, ಒಲವು ಆಯಿತು, ಉಲುಹುವಡಗಿತು, ನಿಲವು ನಿಂತಿತು, ಬಲವು ಬೆಳೆಯಿತು, ಈ ಕಲೆಯ ನೆಲೆಯನು ನಮ್ಮ ಸಿದ್ಧೇಶ್ವರನೇ ಬಲ್ಲ ॥೫॥

ಮೇಲಿನ ವಿವರಣೆಯಿಂದ ಗುರುಗಳ ಆಚರಣೆಯು ಹೇಗಿರಬೇಕೆಂಬು ದನ್ನು ಸ್ಪಷ್ಟೀಕರಿಸಿದೆ. ಈ ಮಾರ್ಗವೇ ಶಿಷ್ಯನನ್ನು ಗುರುಸ್ಥಾನಕ್ಕೊಯ್ಯುವ ಶ್ರೇಷ್ಠ ಮಾರ್ಗವಾಗಿದೆ.



# ಧರ್ಮ

[ ಲೇಖಕರುಃ- ಸಮಾಜ ಸೇವಕ, ಶ್ರೀ "ಗಿರಿಜಾತನಯ" ಮು. ಹಿರೇರೂಗಿ ]



ಧರ್ಮವು ಧರೆಗಾಧಾರವಯ್ಯಾ ।
ಧರ್ಮವು ಸುಖಶಾಂತಿಗಳಿಗೆ ಸಾಧನವಯ್ಯಾ ॥

ಹೀಗೆ ಸದ್ಗುರು ಬಂಧನಾಳೇಶ್ವರನು ಹೇಳಿದಂತೆ ಸುಂದರವಾದ ಮಂದಿರವು ಸ್ಥಂಬದ ಮೇಲೆ ನಿಂತಿರುವಂತೆ ವಿಶ್ವವು ಧರ್ಮದ ಆಧಾರದ ಮೇಲೆ ನಿಂತಿದೆ. ಪುಷ್ಪವು ಪರಿಮಳವನ್ನು ತನ್ನಲ್ಲಿರಿಸಿಕೊಂಡಂತೆ ಧರ್ಮವು ದೇವರು ಇರುವ ಅರಮನೆಯಾಗಿದೆ. ಧರ್ಮ ಹಾಗು ದೇವರು ಒಂದು ನಾಣ್ಯದ ಎರಡು ಮೈಗಳಂತೆ. ವಿಶ್ವದಲ್ಲಿ ಉದಿಸಿದ ಮಹಾತ್ಮರು ಇಂಥ ಪರಮ ಪವಿತ್ರವಾದ ಧರ್ಮವನ್ನು ತೊರೆದು ಎಂದೂ ಇರುವದಿಲ್ಲ. ಅಂತೆಯೇ ಅವರ ದೇಹಗಳು ಕಣ್ಮರೆಯಾದರೂ ಅವರು ಮಾತ್ರ ಅಜರಾಮರವಾಗಿ ಎಲ್ಲರ ಕಣ್ಮನಗಳಲ್ಲಿ ಉಳಿದಿದ್ದಾರೆ.

ಧರ್ಮದ ಚಿನ್ಹೆಗಳು ಪ್ರತಿಯೊಬ್ಬರಲ್ಲಿ ತೋರಿದರೂ ಅದು ನಿಜವಾದ ಧರ್ಮವೆನಿಸಲಾರದು. ಅನಂತ ಸದ್ಗುಣಗಳ ಅಲಂಕಾರವೇ ನಿಜವಾದ ಧರ್ಮವೆನಿಸುವದು. ಇಂಥ ಮಹತ್ವವಾದ ಧರ್ಮವು ಅವರಿವರೆನ್ನದೆ, ವಿಶ್ವಕ್ಕೇನೇ ಸಂಬಂಧಿಸಿದೆ. ಇಂಥ ಸದ್ಧರ್ಮ ಪಾಲನ ಮಾಡಿದವರೇ ಮಹಾತ್ಮರೆನಿಸುವರು.

ಒಂದು ಸಾಮಾನ್ಯ ಉದಾಹರಣೆಯಿಂದ ಸ್ಪಷ್ಟಪಡಿಸುವದೇನೆಂದರೆ,- ಹಳ್ಳಿ ಪಳ್ಳಿಗಳಲ್ಲಿ ಹಡೆಯಲು ತಡೆವ ತಾಯಂದಿರ ಮೈಮೇಲೆ ಪತಿವ್ರತಸರಿಂದಾಗಲೀ, ಇಲ್ಲವೇ ನೈಷ್ಠಿಕ ಬ್ರಹ್ಮಚಾರಿಯಿಂದಾಗಲೀ ಶುದ್ಧ ಮಡಿಯಿಂದ ಶುದ್ಧೋದಕ ತರಿಸಿ, ನೀರೆರೆಯುವ ರೂಢಿಯುಂಟು. ಅದು ಕಾರಣ ಉತ್ತಮ ಮನೆತನದ ಸೂಲಗಿತ್ತಿಯರಿಂದ ಈ ಗಂಡಾಂತರವನ್ನು ತಪ್ಪಿಸಬೇಕೆಂದು ಆಚಾರ್ಯರನ್ನು, ಮಠದವರನ್ನು, ನಾನು ಮೇಲು ನೀನು ಮೇಲು ಅನ್ನುವ ನಾಡಗೌಡ, ದೇಸಾಯಿ, ದೇಶಪಾಂಡೆ, ಜೋಗಿ ಜಂಗಮರನ್ನೂ, ಬಾವಾ ಫಕೀರರನ್ನೂ ವಿಚಾರಿಸಲು, ಅವರು ಧೈರ್ಯ ಸಾಲದೆ

ಮೊಳಕಾಲಿನಲ್ಲಿ ತಲೆ ಇಟ್ಟು ನೆಲ ಬರೆಯುತ್ತಿರುವದನ್ನು ಕಂಡು, ಮತ್ತೆ ಮುಂದೆ ವಿಚಾರಿಸುತ್ತಿರಲು, ಸಮಗಾರ ಶಿವಬಸಪ್ಪನು ಸನ್ನದ್ಧನಾಗಿ ಶಿವನನ್ನು ನೆನೆದು ಸತ್ಯಸಂಕಲ್ಪದಿಂದ ಶುದ್ಧೋದಕವ ತಂದು ಶ್ರೀಮತಿ ಸೂಲಗಿತ್ತಿಯು ವರಿಗೆರೆಯಲು, ಅವಳಿಗೆ ಬಂದ ವಿಪತ್ತು ಸಮಗಾರ ಶಿವಬಸಪ್ಪನಲ್ಲಿದ್ದ ಧರ್ಮವು ತತ್ಕಾಲ ದೂರ ಮಾಡಿತು. ಅಂದ ಮೇಲೆ ಧರ್ಮದ ಮಹತ್ವ ಅಷ್ಟಿಷ್ಟೆಂದು ಹೇಳಲು ಬಾರದು. ಅಂತೆಯೇ ಭಗವಾನ ಬಸವಣ್ಣನವರು " ಶ್ವಪಚೋಪಿ ಶ್ವಪಚನಾದೊಡೇನು, ಶಿವಭಕ್ತನೇ ಕುಲಜ " ನೆಂದು ಜಾತಿಗಳಿಗೆ ಮಹತ್ವ ಕೊಡದೆ, ನೀತಿಗೆ ಮಹತ್ವ ಕೊಟ್ಟು, ಸಮಗಾರ ಹರಳಯ್ಯನ ಮಗನಿಗೂ, ಬ್ರಾಹ್ಮಣರಲ್ಲಿ ಜನಿಸಿದ ಮಧುವರಸನ ಮಗಳಿಗೂ ಲಗ್ನ ಮಾಡಿ, ಜನತೆಯಲ್ಲಿ ಐಕ್ಯತೆಯನ್ನುಂಟುಮಾಡಿದರು. ವಿಶ್ವದಲ್ಲಿರುವ ಮತಾಭಿಮಾನಿಗಳೆಲ್ಲರು ತಮ್ಮ ಅಹಂಕಾರಕ್ಕೆ ಶರಣು ಹೊಡೆದು, ಶಾಂತಿಯನ್ನು ಪಡೆಯಲು ನಮ್ಮೆಲ್ಲರಿಗೆ ಆದರ್ಶಪುರುಷರಾಗಿರುವರು.

ಈಗ ನಮ್ಮೆಲ್ಲರಿಗೆ ಸ್ವಾತಂತ್ರ್ಯತೆಯನ್ನು ಒದಗಿಸಿಕೊಟ್ಟ ಮಹಾತ್ಮಾಜೀಯವರ ಸಶಸ್ತ್ರವು ಅದಾವುದು ಎಂದು ವಿಚಾರಿಸಿದರೆ, ಅದ್ಭುತ ಶಕ್ತಿಯುಕ್ತವಾದದ್ದು ಒಂದೇ ಒಂದು ಸದ್ಧರ್ಮವಲ್ಲವೇ ? ಅಂದ ಮೇಲೆ ಮಹತ್ವವಾದ ಸದ್ಧರ್ಮ ಪರಿಪಾಲನೆ ಮಾಡಿದರೆ ನಮ್ಮ ಸ್ವರಾಜ್ಯವು ಸುರಾಜ್ಯವಾಗುವಲ್ಲಿ ಸಂದೇಹವಿಲ್ಲ. ಪುಸ್ತಕ ಪಾಂಡಿತ್ಯದಿಂದ ಸಾವಿರಾರು ಜನರೊಂದಿಗೆ ಸಾವಿರ ಮಾತುಗಳಾಡಿ ಗಂಟಲ ಕೆರಕೊಳ್ಳುವದಕ್ಕಿಂತಲೂ, ಪಾಂಡಿತ್ಯವು ಸದ್ಧರ್ಮದಿಂದ ಬೆಳೆದು ಬಂದು ಸಾವಿರ ಜನರಿಗೆ ಒಂದು ಮಾತು ಹೇಳಿದರೆ ಸಾಕು. ಅದಕ್ಕೆಯೇ ಬೆಲೆಯಾಗುವದು. "ನುಡಿದರೆ ಲಿಂಗ ಮೆಚ್ಚಿ ಹೌದು ಯನಬೇಕು. ನುಡಿದಂತೆ ನಡೆ ಇರದಿರೆ ಹಿಡಿದಿರ್ದ ಲಿಂಗವು ಘಟಸರ್ಪವೆಂದು ಜಗದ್ಗುರು ಭಗವಾನ ಬಸವಣ್ಣನವರು ಹೇಳಿದಂತೆ ನಡೆದು, ತಾವು ಸುಖ ಉಂಡ ನಡತೆಯ ನುಡಿ ಮುತ್ತಿನ ಹಾರದಂತೆ ಜನತೆಯಲ್ಲಿ ಸುಶೋಭೆಯನ್ನುಂಟುಮಾಡುವದು. ಅದು ಕಾರಣ ನನ್ನ ಪ್ರೇಮದ ವಿಶ್ವ ವಾಸಿಗಳೇ ತಾವು ಯಲ್ಲರು ಸದ್ಧರ್ಮಪರರು ಆಗಿ ಸುಖಶಾಂತಿಯಿಂದ ಬಾಳಿ ಬದುಕಿ ಮುಂದಾಗುವ ಪೀಳಿಗೆಗಳಿಗೆ ಮಾರ್ಗದರ್ಶಕರಾಗಿರೆಂದು ಲೇಖಕನ ಮಹದಾಶೆಯು.



# ಅಂತರಾತ್ಮ

[ಲೇಖಕರು:- ಶ್ರೀಯುತ ಶಿವಕುಮಾರ, ತುಂಗಳ.]



ಮಾನವನ ಆತ್ಮ:—

ದೇಹ, ಮನಗಳ ಆಧಾರಭೂತವಾದ ಅಂತಃಶಕ್ತಿಯೇ ಅಂತರಾತ್ಮ. ಅವನೇ ನಮ್ಮ ಹೊರಮನಸ್ಸಿನ ಅನುಭವಗಳಿಗೆಲ್ಲ ಅಂತಃಸಾಕ್ಷಿ. ಅವನ ಜ್ಯೋತಿಯಿಂದಲೇ ಅಸಾಧಾರಣ ಪ್ರತಿಭೆ ಅಸಾಧಾರಣ ಕಾರ್ಯ, ಅಲೌಕಿಕ ಪ್ರೇಮ. ಮಾನವನ ದೈವೀಕರಣಗಳು ವ್ಯಕ್ತವಾಗುತ್ತಿವೆ. ಈ ಜ್ಯೋತಿಯೇ ಜಗತ್ತಿನ ಸರ್ವ ಸಫಲತೆಗಳ ಇಂಗಿತ. ಅಧ್ಯಾತ್ಮಿಕನು ಸಚೇತವಾಗಿ ಈ ಜ್ಯೋತಿಯ ಉಗಮವನ್ನು ಉಪಾಸಿಸುತ್ತಾನಷ್ಟೆ !

ಸಾಮಾನ್ಯ ಜಾಗ್ರತಿಯಲ್ಲಿ ಈ ಅಂತಃಶಕ್ತಿಯ ಅರಿವು ನಮಗಿರುವದಿಲ್ಲ. ಮನೋವಿಶ್ಲೇಷಣವಾದಿಯಂತೂ ಭ್ರಾಂತಿಯಿಂದ ಇಂಥ ಅಂತಃಶಕ್ತಿಯ ಸ್ಫೂರ್ತಿಗಳನ್ನು ಸುಪ್ತ ಪಾಶವೀಕ ಸಹಜ ಪ್ರವೃತ್ತಿಗಳ ಸ್ಫೋಟಗಳೆಂದೆಣಿಸುತ್ತಾನೆ. ಆತ್ಮ ವಿಶ್ಲೇಷಣದ ಸಾಧನೆಯಿಂದ ನಾವು ಅಂತರಂಗದಲ್ಲಿ ಇರುವದನ್ನು ಕಲಿತಾಗ್ಗೆ ಆ ಒಳಗಿನ ವಿಶಾಲ ಪ್ರಶಾಂತ ಆತ್ಮದ ಅನುಭವ ನಮಗಾಗಿ, ಹೊರಗಿನ ಅದ್ಭುತ ಪ್ರಕಟಣೆಗಳೆಲ್ಲ ಅವನ ಪ್ರಭೆಯೆಂದು ನಮಗೆ ಗೋಚರವಾಗುವದು.

ಆತ್ಮಾನುಭವವೊಂದು ಪುನರ್ಜನ್ಮವೆ. ಆದರ ಸೌಭಾಗ್ಯ ಎಲ್ಲರಿಗೂ ದೊರೆಯಲಾರದು. ಅದನ್ನು ಪಡೆದ ಮಹಾನುಭಾವರು ಜಗತ್ತಿನ ಸ್ವಾಭಿಷಕ್ತ ಸಾಮ್ರಾಟರು. ಅವರೆದಿರು ವಿಶ್ವ ಸಹಸಾಭಾಗುತ್ತಿದೆ.

ನಮ್ಮೆಲ್ಲರಲ್ಲಿಯೂ ಆ ಜ್ಯೋತಿ ಇದ್ದೇ ಇರುತ್ತಿದೆ. ಅದರಿಂದಲೇ ಕಲೆ, ತತ್ವಜ್ಞಾನಗಳಲ್ಲಿಯ ಅನುಭಾವಗಳ ಗೋಚರ ನಮಗಾಗುತ್ತಿದೆ.

ಅನುಭಾವಿ ವಿಭೂತಿಗಳು ನಮ್ಮ ಇಂದ್ರಿಗಳನ್ನು ರಂಜಿಸುವದಿಲ್ಲ. ನಮ್ಮ ಅಂತರಂಗವನ್ನು ಬೆಳಗಿಸಿ, ಜೀವನದ ಓಘವನ್ನೇ ಬದಲಿಸಿಬಿಡುತ್ತಾರೆ. ನಮ್ಮ ಸ-ದೇಹವಾದವೆಲ್ಲ ಅವರ ಸಂಸರ್ಗದಿಂದ ಲೋಪವಾಗಿಬಿಡುತ್ತಿದೆ.

ಇಂಥ ಮಹಾತ್ಮರ ಪ್ರತ್ಯಕ್ಷ ಜೀವನಗಳೇ ಪರಮಾತ್ಮನ ಅಸ್ತಿತ್ವದ ಅಲೌಕ್ಯ ಪ್ರಮಾಣ. ಅವರ ಒಣ ಶುಷ್ಕ ಬುದ್ಧಿವಾದಿಗಳ ನಿಃಸತ್ವ ಹರಟೆಯಲ್ಲ; ಅದರಲ್ಲಿ ಸರ್ವ ಗ್ರಾಹ್ಯ ಸತ್ಯವಿರುತ್ತಿದೆ.

ಇಂಥ ವಿಭೂತಿಗಳ ಪದವಿ ನಮ್ಮೆಲ್ಲರ ಗುರಿ; ನಮ್ಮೆಲ್ಲರ ಜನ್ಮಸಿದ್ಧ ಹಕ್ಕು. ಅವರು ಇಹದಲ್ಲಿಯ ದಿವ್ಯ ಜೀವನದ ಅಗ್ರ ದೂತರಷ್ಟೆ. ನಾವೆಲ್ಲರು ಅವರ ಅಡಿಯಲ್ಲಿ ಅಡಿಯಿಟ್ಟು, ಒಂದಿಲ್ಲೊಂದು ದಿವಸ ಬುದ್ಧ ಬಸವಣ್ಣರಾಗುವವರೇ. ಮಾನವನ ಪೂರ್ವಜನಾದ ಆ ವನ ಮರ್ಕಟನಿಗೆ—"ಒಂದಿಲ್ಲೊಂದು ದಿವಸ ನೀನು ಮಾನವನಾಗಿ ನಿನ್ನ ಬುದ್ಧಿ ಪ್ರಯೋಗದಿಂದ ವಿಮಾನದಲ್ಲಿ ಹಾರಾಡುವಿಯೆಂದೂ, ಜೀವನವನ್ನೂ, ಪರಿಸ್ಥಿತಿಯನ್ನೂ ಬೇಕಾದಂತೆ ಮಾರ್ಪಡಿಸಿಕೊಳ್ಳುವಿಯೆಂದೂ ಹೇಳಿದ್ದರೆ ಆ ಮರ್ಕಟವು ಸರ್ವಥಃ ನಂಬುತ್ತಿರಲಿಲ್ಲ. ಹಾಗೆಯೇ ಇಂದಿನ ಅಪೂರ್ಣ ಮನುಷ್ಯನು ತಾನು ಪರಿಪೂರ್ಣ ಸಚ್ಚಿದಾನಂದನಾಗುವನೆಂಬುವದನ್ನು ಸಹಸಾ ನಂಬಲಾರನು.

ವೈಯಕ್ತಿಕ ಪರಿಪೂರ್ಣತೆ ನಾವು ಎಷ್ಟು ಸಾಧಿಸಿದರೂ ಸಾಮೂಹಿಕ ಪರಿಪೂರ್ಣತೆ ಸಾಧಿಸದ ಹೊರತು ನಮ್ಮ ಪರಿಪೂರ್ಣತೆ ಪೂರ್ಣ ಎಂದಿಗೂ ಆಗಲಾರದು.

**ಆತ್ಮ ಪರಿಪೂರ್ಣತೆಃ—**

ಅಂತರ್‌ದೃಷ್ಟಿಯೆಂದರೆ ಸತ್ಯದ ಸಂಪೂರ್ಣ ಅವಲೋಕನ. ಇಂಥ ದರ್ಶನವೆ ಅಧ್ಯಾತ್ಮಿಕ ಜೀವನದ ಸಾರ. ಸಾಮಾನ್ಯವಾಗಿ ನಾವು ಪರಿಪೂರ್ಣ ಅಖಂಡ ವ್ಯಕ್ತಿಗಳಿರದೆ ಭಿನ್ನ ಭಿನ್ನ ಮಾನವೀ ಯಂತ್ರಗಳಿರುತ್ತೇವೆ. ಅಂತೇ ನಮ್ಮ ಜೀವನದಲ್ಲಿ ಗಾಂಭೀರ್ಯ ಸಾಮರ್ಥ್ಯಗಳಿರುವದಿಲ್ಲ. ನಾವು ಅಖಂಡ ವ್ಯಕ್ತಿಗಳಾಗಬೇಕಾದರೆ ನಮ್ಮ ಸ್ವಭಾವ, ಬುದ್ಧಿ ಭಾವ, ಸಂಕಲ್ಪಗಳ ಪೂರ್ಣ ವಿಕಾಸ ಮಾಡಬೇಕು. ಅದು ಮತಾಂತರದಿಂದ. ಬುದ್ಧಿ ಬೆಳವಣಿಗೆಯಿಂದ ಸಾಧ್ಯವಿಲ್ಲ. ವಿವೇಕ, ವೈರಾಗ್ಯ, ಪಾವಿತ್ರ್ಯಗಳಿಂದ ಒಳಗಿನ ಚೈತನ್ಯದ ಮೇಲಿನ ಧೂಳಿಯನ್ನು ಝಾಡಿಸಿದಾಗ್ಗೆಯೇ ಸಾಧ್ಯ. ನಮ್ಮ ಬಾಹ್ಯ ಚೈತನ್ಯವೂ ಆಗ ಮೇಲ್ಮಟ್ಟಕ್ಕೇರುವದು. ಆದರಲ್ಲಿ ಉಚ್ಚ ತತ್ವಗಳು ತಾನೆ ಬಿಂಬಿಸುವವು. ಹೂವಿನಲ್ಲಿಯ ನಿಶ್ಚಿತ ಪದಾರ್ಥಗಳ ಕೋಷ್ಟಕಿನ ಉಜಳಣಿಯಿಂದ ಹೂವಿನ ಸೃಷ್ಟಿ ಎಂದೂ ಆಗದು. ಅಭೇದ್ಯ

ಚೈತನ್ಯದಿಂದಲೇ ಹೂವಿನ ಸೃಷ್ಟಿ ಸಾಧ್ಯ. ಹೀಗೆ ಹೊಸ ಚೈತನ್ಯದ ಸೃಜನೆಗೆ ದೈವೀಕರಿಸುವ ಧರ್ಮದ ಶಕ್ತಿಬೇಕು; ಶುಷ್ಕಶಾಸ್ತ್ರ ರೂಪವಲ್ಲ. ಸಾಂತ್ಯದಲ್ಲಿ ಅನಂತನ ಅವಲೋಕನವೇ ನಿಜವಾದ ಧರ್ಮವು.

ಮನುಷ್ಯನಲ್ಲಿ ಅನೇಕ ಆದಿ ಪಾಶವಿಕ ಶಕ್ತಿಗಳು ತಾಕಲಾಡುತ್ತವೆಂದೂ, ಅವುಗಳ ಸಮನ್ವಯವೇ ಮಾನವನ ವಿಕಾಸವೆಂದೂ ಮನೋವಿಶ್ಲೇಷಣ ಶಾಸ್ತ್ರದ ಸಿದ್ಧಾಂತ.

(೧) **ಸಂರಕ್ಷಣ:—** ಪ್ರತಿಕ್ರಿಯ ಅಂದರೆ ಕೆಳಗಿನ ಚೇತನೆಯಲ್ಲಿಯೇ ಪ್ರವೃತ್ತಿಗಳ ನೇರವಾದ ವಿರೋಧ.

(೨) **ಪ್ರತಿಷ್ಠಾಪನೆ:—** ಒಂದು ಪ್ರವೃತ್ತಿಯನ್ನು ಮತ್ತೊಂದು ಭಾವನೆಯಲ್ಲಿ ಹಿಂಗಿಸುವದು.

(೩) **ಉದಾತ್ತೀಕರಣ:—** ನಿಕೃಷ್ಟ ಪ್ರವೃತ್ತಿಗಳನ್ನು ಉಚ್ಚಪ್ರವೃತ್ತಿಗಳಲ್ಲಿ ಬದಲಿಸುವದು. ಇವು ಮೇಲಿನ ಸಮನ್ವಯ ದಾರಿಗಳಂತೆ ಈ ಮೂರು ಉಪಾಯಗಳಲ್ಲಿ ಸಾಧಿಸುವ ಸಮನ್ವಯ ಮೇಲಿನ ಸ್ಥಿರದೃಷ್ಟಿ. ಇಂಥ ಬಾಹ್ಯ ಸಮನ್ವಯದಲ್ಲಿ ಒಳಗಿನ ನಿಕೃಷ್ಟ ಪ್ರವೃತ್ತಿಗಳು ಒಳಗೆ ಕೂಡಿಬಿದ್ದು ಒಮ್ಮೆಲೆ ಸುಟಿದೆದ್ದು, ಕ್ರೈಮೀರಿ ಮನುಷ್ಯನ ಪತನ ಮಾಡುತ್ತಿವೆ. ಅವು ತೃಪ್ತಿಗಾಗಿ ಬಿರುಗಾಳಿಯಂತೆ ಹರಿಹಾಯುತ್ತಿವೆ. ಅಂತೇ ಆ ಜೀವನ ಸಂಯಮ ಸಾಧಿಸಿ ಮುಪ್ಪಿನಲ್ಲಿ ಸಾಕು ನಾಯಿ, ಬೆಕ್ಕುಗಳನ್ನು ಮುದ್ದಿಸಿ ಪ್ರೇಮ ತೃಪ್ತಿಪಡೆಯಲು ಹವಣಿಸಿ, ಅದರಲ್ಲಿಯೂ ಅಸಮಾಧಾನ ಹೊಂದಿ ಭ್ರಾಂತಿಗೀಡಾಗುವ ಸಭ್ಯ ದಾರ್ಶನಿಕ ಮಹಿಳೆಯರನ್ನು ನಾವು ಯುರೋಪದಲ್ಲಿ ಕಾಣುತ್ತೇವೆ. ಅಂತ: ಚೈತನ್ಯವನ್ನು ಅಮೂಲಾಗ್ರ ಬದಲಿಸಿ ನಿಜವಾದ ಅಖಂಡ ಮನಃಶಾಂತಿಯನ್ನು ಭಾರತಿಯ ಯೋಗ ಒಂದೇ ನೀಡಬಲ್ಲದು; ಸಮನ್ವಯಗೊಳಿಸಬಲ್ಲದು.

ನಮ್ಮ ದೇಹ, ಮನ, ಇಂದ್ರಿಯ ಜೀವನ ಎಲ್ಲವುಗಳನ್ನು ನಿಯಂತ್ರಿಸಿ ಪರಿಪೂರ್ಣಗೊಳಿಸಿ ಆತ್ಮಜ್ಯೋತಿಯನ್ನು ಬೆಳಗಿಸುವ ಸಾಧನೆಯನ್ನು ಯೋಗ ಮಾಡಹಚ್ಚುತ್ತಿದೆ. ನಮ್ಮ ವೈಯಕ್ತಿಕ ವಾಸನೆ, ದೋಷಗಳ ಮುಖಾಂತರ ನಾವು ನಮ್ಮ ಸುತ್ತಲಿನ ವಿಶ್ವದೊಡನೆ ವ್ಯವಹರಿಸುತ್ತೇವೆ. ಅಂತೇ ಸತ್ಯದ ಅನುಭವವಾಗದೆ, ವ್ಯಷ್ಟಿ ಸಮಷ್ಟಿಗಳ ನಡುವೆ ಸಮ

ನ್ವಯ ತಪ್ಪಿ ಬೇನೆ, ಅಜ್ಞಾನ, ಪಾಪಗಳಲ್ಲಿ ನಾವು ತೊಳಲಾಡುತ್ತೇವೆ. ಈ ವೈಯಕ್ತಿಕ ದೋಷ ವಾಸನೆಗಳ ಜಂಜಾಲದಿಂದ ಮುಕ್ತರಾದಾಗ್ಗೆ ನಮಗೆ ವಿಶ್ವದ ಸತ್ಯ ಗೋಚರವಾಗುವದು. ಯೋಗ ಧರ್ಮವು ನಮ್ಮ ಪ್ರಕೃತಿ ಎಲ್ಲ ಭಾಗಗಳನ್ನು ಜಯಿಸಲು ಸಹಾಯ ಮಾಡುತ್ತಿದೆ. ನಮ್ಮ ಮೇಲಿನ ಚಟುವಟಿಕೆಗಳನ್ನೆಲ್ಲ ನಿಲ್ಲಿಸಿ ಒಳಚೈತನ್ಯದಲ್ಲಿ ಮುಳುಗಿದರೆ ಅಂತರಾತ್ಮದ ವಿಕಾಸವಾಗುತ್ತಿದೆ. ಸತತ ಧ್ಯಾನದಿಂದ ಹೊರಗಿನ ಚೈತನ್ಯದ ಹಸ್ತಕ್ಷೇಪ ನಿಂತು ಒಳ ಚೈತನ್ಯವು ಜಾಗ್ರತವಾಗಿ ಅಂಗಾಂಗಗಳನ್ನೆಲ್ಲ ವ್ಯಾಪಿಸಿ ಕೊಳ್ಳುವದು.

**ಸಹಜ ಪ್ರೇರಣೆ ಹಾಗು ಅಂತಃಸ್ಫೂರ್ತಿ:—**

ಸಹಜ ಪ್ರೇರಣೆಯಿಂದ ನಡೆಯುವ ಪಶು ಜೀವನವು ಅಧ್ಯಾತ್ಮ ಜೀವನದಲ್ಲಿ ಸಹಜ ಪ್ರೇರಣೆ ಮತ್ತು ಅಂತಃಸ್ಫೂರ್ತಿ ಎರಡೂ ವಸ್ತುವಿನೊಡನೆ ನೇರವಾಗಿ ಸಂಬಂಧಪಟ್ಟಿರುತ್ತಿದೆ. ಆದರೆ ಇವೆರಡು ಒಂದೇಅಲ್ಲ; ಆದಿಮ ಸ್ಥಿತಿಯಲ್ಲಿ ಮನುಷ್ಯನಲ್ಲಿ ಸಹಜ ಪ್ರೇರಣೆಯ ಶಕ್ತಿಯು ಬಹಳ ವಿತ್ತು. ಈಗ್ಯೂ ಪಶುಗಳಲ್ಲಿ ಸಹಜ ಪ್ರೇರಣೆಯು ಬಹಳ. ಆದರೆ ಅದು ಅಪರಿಚಿತ ಪರಿಸ್ಥಿತಿಗಳಲ್ಲಿ ಕೆಲಸ ಮಾಡಲಾರದು. ಬುದ್ಧಿಯ ಉಗಮದ ನಂತರ ಸಹಜ ಪ್ರೇರಣೆಯು ಅನುಭವಿಸುವ ಐಕ್ಯವು. ವ್ಯಕ್ತಿಯು ಭಿನ್ನ ಭಿನ್ನವಾಗಿ ತನ್ನ ಜೀವನ ಪರಿಸ್ಥಿತಿಗಳನ್ನು ತಾನು ಯೋಚಿಸಿಕೊಳ್ಳತೊಡಗುತ್ತಾನೆ. ಬುದ್ಧಿ ಏಕಜೀವನಗಳ ಸಮನ್ವಯ. ಇನ್ನು ಸ್ವಯಂ ಸ್ಫೂರ್ತಿಯಿಂದಲೇ ಸಾಧ್ಯ. ಅದು ವಿಚಾರ ಹೀನ ಭ್ರಾಂತಿಯಲ್ಲ;

ಶಿಶುವು ಸಹಜ ಪ್ರೇರಣೆಯಿಂದ ವಿಶ್ವದೊಡನೆ ಐಕ್ಯ, ಶಾಂತಿಗಳನ್ನು ಅನುಭವಿಸುತ್ತಿದೆ. ಆದರೆ ಅದರ ವಿಚಾರವು ಸ್ವಾರ್ಥ ಭಿನ್ನತೆಗಳಲ್ಲಿ ತೊಳಲಾಡಹಚ್ಚುತ್ತಿದೆ. ಅಂತಃಸ್ಫೂರ್ತಿಯಿಂದ ವಿಚಾರ ಶೀಲ ಮನುಷ್ಯನು ಶಿಶುವಿನ ಐಕ್ಯ, ನಿಷ್ಪಾಪತನ, ಶಾಂತಿಗಳನ್ನು ಪುನಃ ಪಡೆಯುತ್ತಾನೆ. ಇದೇ ಆಧ್ಯಾತ್ಮದ ರಹಸ್ಯ.

ಔಷಧ ಸಂಮ್ಮೋಹಗಳಿಂದ ಪಡೆಯುವ ಐಕ್ಯವು ಕ್ಷಣಿಕ ಮಬ್ಬು; ಅದು ನಮ್ಮ ವ್ಯಕ್ತಿತ್ವವನ್ನು ಶಿಥಿಲಗೊಳಿಸುತ್ತಿದೆ. ಅಂತಃಸ್ಫೂರ್ತಿಯಿಂದ ಪಡೆದ ಐಕ್ಯವು ನಮ್ಮ ವ್ಯಕ್ತಿತ್ವ ಜೀವನಗಳನ್ನು ಆಮೂಲಾಗ್ರ ಬಲಿಸಿ ಉನ್ನತ ಹಾಗು ವಿಶಾಲ ಮಟ್ಟಕ್ಕೆ ಮುಟ್ಟಿಸುತ್ತಿದೆ.

ಅಚೇತನ ಸ್ತರಗಳಿಂದಲೇ ಕಲೆ, ತತ್ವಜ್ಞಾನಗಳ ಸ್ಫೂರ್ತಿಗಳು ಉದಯಿಸುತ್ತಿವೆಯೆಂದು ಮನೋ ವಿಶ್ಲೇಷಣ ಶಾಸ್ತ್ರದ ಮತ. ಅಂತರಾತ್ಮನು ಅಚೇತನ ಸಚೇತನ ಮನಗಳ ಉಗಮವು. ಆದ್ದರಿಂದ ಅಂತರಾತ್ಮನಿಂದಲೇ ಅಂತಃಸ್ಫೂರ್ತಿಗಳು ಉದಯಿಸುತ್ತಿವೆ. ಅಚೇತನದಲ್ಲಿ ಅಡಗಿರುವ ಸಂಸ್ಕಾರಗಳನ್ನೆಲ್ಲ ಬೆಳಕಿಗೆಳೆದು ನಿಯಂತ್ರಿಸಬೇಕು. ಅಂದರೆ ಅಂತಃಸ್ಫೂರ್ತಿಗಳು ಪ್ರಕಟವಾಗುತ್ತಿವೆ. ದೇಹ ಮನಗಳನ್ನು ಶಿಥಿಲ ಮಾಡುವದು ಯೋಗದ ಉದ್ದೇಶವಲ್ಲ. ಅದನ್ನು ಅದು ಆತ್ಮೋನ್ನತಿಗೆ ಹೊಂದಿಸುತ್ತದಷ್ಟೆ.

ಹತ್ತಿಕ್ಕಿದ ಭೀತಿ, ವಾಸನೆಗಳ ಪ್ರಕಟಣೆಯಲ್ಲಿಯೇ ಧಾರ್ಮಿಕ ತತ್ವಗಳೆಂದು ಮನೋ ವಿಶ್ಲೇಷಣ ಶಾಸ್ತ್ರವು ಹೇಳುವದು ಸರಿಯಲ್ಲ. ಅವು ತರ್ಕವಿತರ್ಕ ಳಿಂದ ಹೊರಟದವಲ್ಲವೆಂಬುವದೇನೋ ನಿಜ. ಆದರೆ ಜೀವನವು ತರ್ಕವಿತರ್ಕಕ್ಕೆ ನಿಯಮಿತವಾದುದಷ್ಟೇ ಇಲ್ಲ. ವಿಜ್ಞಾನವು ಸಹ ಕೆಲವು ಸ್ವಯಂ ಸಿದ್ಧ ಸಿದ್ಧಾಂತಗಳನ್ನು ಆಧಾರವಾಗಿಟ್ಟುಕೊಳ್ಳುತ್ತಿದೆ. ಧಾರ್ಮಿಕ ತತ್ವಗಳ ಆಧಾರವು ಅಂತಹದ್ದೇ ಇರುತ್ತಿವೆ. ಸಂತರ ಆಚಾರ ವಿಚಾರಗಳು ಹುಚ್ಚರ ಅಥವಾ ಕಾಡುಜನರ ವಿಚಾರಗಳಲ್ಲ; ಉಚ್ಚ ಕೋಟಿಯ ಮನುಷ್ಯರ ವಿಚಾರಗಳು.

ವಿಜ್ಞಾನ, ಮನೋ ವಿಜ್ಞಾನಗಳಲ್ಲಿ ನಾವು ಆಧುನಿಕರು. ಎಷ್ಟೇ ಮುಂದುವರದಿರಲಿ. ಆದರೆ ಆತ್ಮವಿಜ್ಞಾನದಲ್ಲಿ ಅಥವಾ ಅಧ್ಯಾತ್ಮ ವಿದ್ಯೆಯಲ್ಲಿ ನಾವು ನಮ್ಮ ಪೂರ್ವಜರಿಗಿಂತ ಮುಂದುವರದಿರುವದಿಲ್ಲ. ಅವರ ಪ್ರಾಚೀನ ಸಾಹಿತ್ಯದಲ್ಲಿ ಅಕ್ಷಯ ಜ್ಞಾನ ಭಂಡಾರವಿದೆ. ಅದನ್ನು ನಾವು ನಿರಹಂಕಾರದಿಂದ ಉಪಯೋಗಿಸಿದರೆ ನಾವು ಮಾನವತೆಯನ್ನು ಉಚ್ಚತಮ ಮಟ್ಟಕ್ಕೆ ಮುಟ್ಟಿಸಬಲ್ಲೆವು. ಭಕ್ತಿ, ಧ್ಯಾನ, ಜ್ಞಾನಗಳಿಂದ ನಾವು ನಮ್ಮ ಆತ್ಮವನ್ನು ವಿಶ್ವಾತ್ಮನೊಡನೆ ಸಮರಸ ಮಾಡಿ ಈ ಅಧ್ಯಾತ್ಮಜ್ಞಾನ ಸಂಪಾದಿಸಬೇಕು. ಮನುಷ್ಯ ಮನುಷ್ಯರಲ್ಲಿ ಒಡಕು ಹುಟ್ಟಿಸುವ ಮಾನವತೆಯ ವಿರೋಧೀ ಧರ್ಮ ಧರ್ಮವಲ್ಲ. ಮಾನವತೆ, ವಿಶ್ವ ಬಾಂಧವ್ಯಗಳು ಧರ್ಮದ ರಹಸ್ಯ.

ನಿಸರ್ಗದ ಬಗ್ಗೆ ಭೀತಿ, ಅಜ್ಞಾನಗಳಿಂದ ಆದಿಮ ಧರ್ಮ ಹುಟ್ಟಿದ್ದು ನಿಜ. ಮುಂದೆ ಅದು ಆತ್ಮವಿಶ್ಲೇಷಣ, ಆತ್ಮ ವಿಕಾಸಗಳಲ್ಲಿ ರೂಪಾಂತರಿಸಿತು. ಈಗ ನಮ್ಮ ವಿವೇಕಕ್ಕೆ ವಿಪರೀತವಾದದ್ದನ್ನು ನಂಬದಿರುವದನ್ನೇ

ಧರ್ಮವೆಂದು ತಿಳಿಯಬೇಕು. ಅಂಥ ವಿಶ್ವಾಸಕ್ಕಿಂತ ನಾಸ್ತಿಕವಾದವೇ ಲೇಸು. ಆದರೆ ನಾಸ್ತಿಕವಾದವಾದರೂ ಅಂಥ ಒಂದು ವಿಶ್ವಾಸವೆ! ನಾವು ಅದಕ್ಕಿಂತ ಮುಂದಿನ ಜ್ಞಾನದ ಶೋಧ ಮಾಡಬೇಕು.

**ಧಾರ್ಮಿಕ ಅನುಭವದ ಮಂಡನಃ—**

ತರ್ಕ ಜ್ಞಾನವೇ ಕೊನೆಯ ಜ್ಞಾನವೆಂದು ತಿಳಿಯಕೂಡದು. ಸಾಮಾನ್ಯತ: ನಮ್ಮ ಅಂತಃಸ್ಥಮದ ಅನುಭವದಿಂದ ನಮಗೆ ಅತ್ಯಂತ ವಿಶ್ವಸನೀಯ ಜ್ಞಾನ ದೊರಕುತ್ತಿದೆ. ದೇವರು, ಧರ್ಮಗಳು ಅಂತಹ ಜ್ಞಾನ ಅನುಭವದಿಂದಲೇ ವಿಚಾರಗಳು ಹೊರಡುವದರಿಂದ ಅನುಭವವೇ ಸತ್ಯದ ಆಧಾರ.

ಪಶುವಿನ ಸಹಜ ಪ್ರೇರಣೆ ಹಾಗು ಮಾನವನ ವಿವೇಚನಾ ಬುದ್ಧಿಗಳಲ್ಲಿ ಮಹದಂತರವಿದೆ. ಪಶುಗಳು ಹಿಂದಿನ, ಮುಂದಿನ ವಿಚಾರ ಮಾಡಲಾರವು. ಮಾನವನು ಹಿಂದಿನ ಮುಂದಿನ ವಿಚಾರ ಮಾಡಿ ತನ್ನ ಪರಿಸ್ಥಿತಿಗಳನ್ನು ಬದಲಿಸಿಕೊಳ್ಳುತ್ತಾನೆ. ಅಂತೇ ಅವನಲ್ಲಿ ಪಶುವಿನ ಬಲವಿರದಿದ್ದರೂ ಜಗತ್ತಿನ ಒಡೆಯನಾಗಿದ್ದಾನೆ. ಸಹಜ ಪ್ರೇರಣೆಯಿಂದ ವಿವೇಚನ ಬುದ್ಧಿಯ ವಿಕಾಸವು ಕ್ರಮಿಕ ವಿಕಾಸದಿಂದಾಗಿಲ್ಲ; ಗುಣಾತ್ಮಕ ಪರಿವರ್ತನೆಯಿಂದಾಗಿದೆ.

ಮನೋವಿಜ್ಞಾನವು ಪ್ರಾಯೋಗಿಕ ನಿರೀಕ್ಷಣೆ ಮಾಡಬಲ್ಲದು. ಆದರೆ ವೈಯಕ್ತಿಕ ಅನುಭವ, ಭಾವನೆ, ಉದ್ದೇಶಗಳನ್ನು ಅರಿಯಲಾರದು. ಪಶುವು ಸಹಜ ಪ್ರೇರಣೆಯಿಂದ ಸುತ್ತಲಿನ ಪ್ರಕೃತಿಗೆ ಹೊಂದಿಕೊಂಡು ತನ್ನ ಆರೋಗ್ಯ ಕಾಯ್ದುಕೊಳ್ಳಲು ಯತ್ನಿಸುತ್ತಿದೆ. ಮಾನವನು ಮಾತ್ರ ಸ್ವಪ್ರಯತ್ನದಿಂದ ಸ್ವೇಚ್ಛೆಗಳಿಂದ, ತನ್ನ ಆರೋಗ್ಯ ಕಾಯ್ದುಕೊಳ್ಳಬೇಕಾಗುತ್ತಿದೆ. ಅಂತರ ನಿರೀಕ್ಷಣೆ ಮನುಷ್ಯನ ವೈಶಿಷ್ಟ್ಯವನ್ನು ಎತ್ತಿ ತೋರಿಸುತ್ತಿದೆ. ನಿಯಮಿತ ಪುನಾವರ್ತನೆಗಳಿಂದಲೇ ವಿಚಾರಗಳು ಉದ್ಭವಿಸುತ್ತಿದ್ದರೆ ಘೋಷದನ ಲೆಕ್ಕಣಿಕೆಯನ್ನು ಬೇಕಾದವರ ಕೈಯಲ್ಲಿ ಕೊಟ್ಟರೆ, ಮನೋವಿಶ್ಲೇಷಣ ಶಾಸ್ತ್ರದ ರಚನೆಯಾಗಬಹುದಲ್ಲ? ಅದು ಸತ್ಯವಲ್ಲವೇ! ಅದರಂತೆ ಮಾನಸೀಕ ಪ್ರವೃತ್ತಿಗಳಿಂದಲೇ ದೈಹಿಕ ರಚನೆಯಾಗುತ್ತದೆಯೆಂಬುವದು ಪೂರ್ಣ ಸತ್ಯವಲ್ಲ. ದೇಹ, ಮನಸ್ಸುಗಳನ್ನು ಬೇರ್ಪಡಿಸುವದು ತಪ್ಪು. ಜೀವನವು ಅಖಂಡವಿದೆ. ವಿಚಾರದ ಅನುಕೂಲತೆಗೆಂದು ನಾವು ಅದನ್ನು ಖಂಡಿಸಿ ವಿಚಾರಿಸುತ್ತೇವೆ.

**ಆತ್ಮವು ಸಂಘಟಿತ ಘಟಕ:—**

ಮಾನವ ಜೀವನವು ವಿಶ್ವಜೀವನದ ಒಂದು ಅಭಿನ್ನ ಅಂಗ. ದೇಹದಲ್ಲಿಯ ಕಣಗಳು ಬೇರೆಯಿದ್ದರೂ, ಪ್ರತಿಕ್ಷಣ ಬದಲಿಸುತಿದ್ದರೂ ಅವೆಲ್ಲ ಒಂದೇ ಘಟನೆಯಲ್ಲಿ ಜೋಡಿಸಲ್ಪಟ್ಟಿರುತ್ತವೆ. ಮನುಷ್ಯನಲ್ಲಿಯ ಆತ್ಮವು ಸ್ಥಿರವಿರುವದರಿಂದ ದೇಹದೊಳಗಿನ ಬದಲಾವಣೆಗಳೆಲ್ಲ ಒಂದೇ ಪ್ರಕೃತಿಯವಾಗಿರುತ್ತವೆ. ಈ ಪ್ರಕೃತಿಯೇ ಒಂದು ಸಂಘಟನೆ. ಪಶುವಿನಲ್ಲಿಯೂ ನಿಮ್ನ ಚೇತನೆಯ ಸಂಘಟನೆ ಇರುತ್ತದೆ. ಮನುಷ್ಯನಲ್ಲಿ ಮೇಲಿನ ಚೇತನೆಯ ಸಂಘಟನೆಯಾಗುತ್ತಿದೆ.

**ವ್ಯಕ್ತಿತ್ವ ಹಾಗು ಗುರಿ:—**

ಪ್ರತಿಯೊಬ್ಬನಿಗೂ ಒಂದು ಜೀವನ ಗುರಿ ಇರುತ್ತಿದೆ. ಅದರ ಸೂತ್ರದಲ್ಲಿ ಅವನು ತನ್ನ ಜೀವನದ ಘಟಕಗಳನ್ನೆಲ್ಲ ಪೋಣಿಸಿ, ಒಂದು ಘಟಕ ಮಾಡಿಡುತ್ತಾನೆ. ಇದೇ ಅವನ ವ್ಯಕ್ತಿತ್ವ. ಜೀವನದ ನಾಟಕದಲ್ಲಿ ವ್ಯಕ್ತಿತ್ವವು ವ್ಯಕ್ತಿಯ ನಟನೆ, ವ್ಯಕ್ತಿಯ ಅನುಭವಗಳ ಸರಿಯಾದ ಸಂಘಟನೆಯಾಗದಿದ್ದರೆ ಅವನ ಅನೇಕ ವ್ಯಕ್ತಿತ್ವಗಳು ಕಾಣುತ್ತವೆ.



# ಕಿತ್ತೂರಿನ ಅಂತ್ಯಕಾಲದ ಕತೆ.

[ಲೇಖಕರು:- ಕಿತ್ತೂರವಾಸಿ]



ಕಿತ್ತೂರು ಗ್ರಾಮವು ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಒಂದು ಹಳ್ಳಿ. ಧಾರವಾಡದ ಉತ್ತರಕ್ಕೆ ಸುಮಾರು ೨೦-೨೨ ಮೈಲುಗಳ ಅಂತರದಲ್ಲಿರುವ ಕಿತ್ತೂರನ್ನು ಧಾರವಾಡ ಬೆಳಗಾವಿಯ ನಡುವೆ ಮೋಟಾರಿನಿಂದ ಪ್ರವಾಸಮಾಡುವ ಪ್ರತಿಯೊಬ್ಬನೂ ನೋಡುತ್ತಾನೆ. ಮೋಟಾರಿನಲ್ಲಿ ಕುಳಿತಿದ್ದಂತೆಯೇ ಎತ್ತರದ ದಿನ್ನೆಯ ಮೇಲಿರುವ ಹಾಳಾದ ಕೋಟೆಯೂ, ಚಿಕ್ಕ ಮನೆಗಳಿಂದ ಕೂಡಿದ ಊರಿನ ಸ್ವಲ್ಪ ಭಾಗವೂ ಕಣ್ಣಿಗೆ ಕಾಣುತ್ತವೆ. ಕಿತ್ತೂರಿನ ಈ ಚಿತ್ರ ಮನದ ಮೇಲೆ ಯಾವ ಅದ್ಭುತ ಪರಿಣಾಮವನ್ನೂ ಮಾಡುವದಿಲ್ಲ. ಆದರೆ ಸುಮಾರು ೧೫೦ ವರ್ಷಗಳ ಹಿಂದೆ ಇದೇ ಕಿತ್ತೂರು ಹೇಗೆ ಇತ್ತು. ಎಂತಹ ಸಾಹಸಕಾರ್ಯವನ್ನು ಮಾಡಿತು ಎಂಬುದನ್ನು ನೆನೆದರೆ ಎಂತಹನಾದರೂ ಉಸಿರೆಳೆಯದಿರಲಾರನು. ಅಂತೆಯೇ ಹೆಮ್ಮೆ ಪಡೆದಿರಲಾರನು! ಏಕೆಂದರೆ ಸುಮಾರು ೨೦೦ ವರ್ಷಗಳ ಕಾಲ "ಕಿತ್ತೂರ ದೇಸಗತಿಯು" ರಾಜಧಾನಿಯಾಗಿ ಅರಮನೆ, ಗುಡಿ, ವ್ಯಾಪಾರ-ಉದ್ದಿಮೆಗಳ ಮುಖ್ಯ ಕೇಂದ್ರವಾಗಿ ಒಳ್ಳೇ ಸಮೃದ್ಧಿಯಲ್ಲಿದ್ದುದು ಅದೇ ಕಿತ್ತೂರ! ಅಲ್ಲದೆ ಕ್ರಿ. ಶ. ೧೮೨೪ರಲ್ಲಿ ತನ್ನ ನಾಡಿನ ಸ್ವಾತಂತ್ರ್ಯವನ್ನುಳಿಸಿಕೊಳ್ಳಲು ಬ್ರಿಟಿಶರ ಕೂಡ ಹೆಣಗಿದ "ವೀರ ಕಿತ್ತೂರ ಕೇಸರಿಣಿ" ಎಂದು ಪ್ರಸಿದ್ಧಳಾದ ಅವ್ವ ಚನ್ನವ್ವನ ಊರೂ ಇದೇ ಕಿತ್ತೂರು!!

**ಶಾಸನ ಕಾಲೀನ ಕಿತ್ತೂರು:—** ಕಿತ್ತೂರು ಎಂಬ ಹೆಸರು ಕ್ರಿ. ಶ. ೧೧೮೮ ರ ಒಂದು ಶಿಲಾಶಾಸನದಲ್ಲಿ ಉಲ್ಲೇಖವಾಗಿರುತ್ತದೆ. ಈ ಶಾಸನವು ಗೋವೆಯ ಕಂದಂಬರದಿದ್ದು, ಕಿತ್ತೂರನಲ್ಲಿರುವ ಒಂದು ಹಳೆಯ ಬಸವಣ್ಣದೇವರ ಗುಡಿಯಲ್ಲಿ ಈಗಲೂ ಇರುತ್ತದೆ. ಇದರಿಂದ ಕಿತ್ತೂರು ಎಂಬ ಹೆಸರು ೧೦-೧೧ ನೇ ಶತಮಾನಗಳಲ್ಲಿಯೇ ಪ್ರಚಾರದಲ್ಲಿತ್ತೆಂದು ಗೊತ್ತಾಗುತ್ತದೆ. ಆದರೂ ಸಹ ಕಿತ್ತೂರು ಒಂದು ಮಹತ್ವದ ಸ್ಥಾನ ಪಡೆದುದು ಕಿತ್ತೂರ ಸಂಸ್ಥಾನದ ದೇಸಾಯರಲ್ಲಿ ಹಿರಿಯವನಾದ ಅಲ್ಲಪ್ಪಗೌಡನ ಕಾಲ

ಕ್ಕೆಯೇ. ಈತನು ಮೊಗಲರಿಗೂ ವಿಜಾಪುರದವರಿಗೂ ನಡೆದ ಯುದ್ಧ ಸಮಯವನ್ನು ಸಾಧಿಸಿ, ಬೀಡಿ ಸಂಪಗಾಂವ ಪ್ರಾಂತಗಳನ್ನು ಪಡೆದು, ಕಿತ್ತೂರನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಇರತೊಡಗಿದನು. ಕಿತ್ತೂರ ಕೋಟೆಯನ್ನು ಕಟ್ಟಿಸಿದವನೂ ಇವನೇ. ಆಗ ಕಿತ್ತೂರಿಗೆ 'ಗೀಜಗನ ಹಳ್ಳಿ' ಎಂಬ ಇನ್ನೊಂದು ಹೆಸರೂ ಇತ್ತು. ಈ ಅಲ್ಲಪ್ಪಗೌಡ ಸರದೇಸಾಯಿಯು ೩೧ ವರ್ಷ ರಾಜ್ಯವಾಳಿದ್ದಾನೆ.

ಕಿತ್ತೂರ ಸಂಸ್ಥಾನದ ದೇಸಾಯರು ತಮ್ಮ ಉತ್ತಮವಾದ ಆಳಿಕೆ ಯಿಂದ, ಸಾಹಸ ಕಾರ್ಯಗಳಿಂದ ಇತಿಹಾಸದಲ್ಲಿ ಚಿರಸ್ಥಾನವನ್ನು ಪಡೆ ದಿದ್ದಾರೆ. ಆದರೂ ಇವರು ಯಾವಾಗಲೂ ಸ್ವತಂತ್ರವಾಗಿ ಆಳಿಕೆಯನ್ನು ಮಾಡಲಿಲ್ಲ. ಇದೊಂದು ಕೇವಲ ದೇಸಗತಿ ಆಗಿದ್ದರಿಂದ ಆ ದೇಸಗತ್ತು ಯಾರ ಆಳಿಕೆಗೆ ಒಳಪಡುತ್ತದೆಯೋ ಅವರಿಗೆ ಅಂಕಿತರಾಗಿ ಕಪ್ಪಕಾಣಿಕೆ ಗಳನ್ನು ಒಪ್ಪಿಸುತ್ತ ಬರುವದು ಸ್ವಾಭಾವಿಕವಾಗಿತ್ತು. ಮೊದಲು ವಿಜಾಪುರ ದವರಿಗೂ ನಂತರ ಮರಾಠಾ, ಪೇಶ್ವೆ, ಮೊಗಲರಿಗೂ ಅಧೀನರಾಗಿದ್ದು ಕೊಂಡು ಬಂದರು. ನಂತರ ಹೈದರ, ಟೀಪು ಇವರ ದಬ್ಬಾಳಿಕೆಗೂ ಒಳ ಪಟ್ಟು, ಪುನಃ ಪೇಶ್ವೆಯವರಿಗೆ ಅಂಕಿತರಾದರು. ಕೊನೆಕೊನೆಗೆ ಸ್ವಲ್ಪ ಕಾಲ ಈಸ್ಟ ಇಂಡಿಯಾ ಕಂಪನಿಯ ಸಂಗಡ ಒಪ್ಪಂದ ಮಾಡಿಕೊಂಡಿದ್ದು ಕ್ರಿ. ಶ. ೧೮೨೪ರಲ್ಲಿ ಅದರ ಸಾಮ್ರಾಜ್ಯದಲ್ಲಿಯೇ ಕಿತ್ತೂರು ಸಂಸ್ಥಾನವು ಲೀನವಾಗಿ ಹೋಯಿತು.

**ಸಂಪಗಾವಿ ಸಾವುಕಾರರು:—** ಕಿತ್ತೂರ ಸಂಸ್ಥಾನದ ಮೂಲಪುರುಷ ರಾದ ಹಿರೇಮಲ್ಲಶೆಟ್ಟಿ, ಚಿಕ್ಕಮಲ್ಲಶೆಟ್ಟಿ ಎಂಬ ಇಬ್ಬರು ಅಣ್ಣತಮ್ಮಂದಿರು ಸಂಪಗಾಂವಿಯಲ್ಲಿ ಸಾಹುಕಾರಿಕೆಯನ್ನು ಮಾಡಿಕೊಂಡು ಇದ್ದರು. ಇವರು ಕಲಬುರ್ಗಿಯ ಶೀವೆಯವರೆಂದು ಹೇಳುತ್ತಾರೆ. ಹಿರೇಮಲ್ಲನು ವಿಜಾಪುರ ಅರಸರ ದಂಡಿನಲ್ಲಿ ಸೇರಿ ಬಹುವಾಗಿ ತನ್ನ ಶೌರ್ಯ ಸಾಮರ್ಥ್ಯಗಳನ್ನು ತೋರಿಸಿದ್ದರಿಂದ ಬಾದಶಹನು ಮೆಚ್ಚಿ ಈತನಿಗೆ 'ಸಮಶೇರಜಂಗಬಹಾ ದ್ದೂರ ಎಂಬ ಬಿರುದನ್ನು ಕೊಟ್ಟು ಹುಬ್ಬಳ್ಳಿ ಪ್ರಾಂತದ ಸರದೇಶಮುಖಿ ಯನ್ನೂ ಕೊಟ್ಟನು. ಈ ಸಂಗತಿ ನಡೆದುದು ಕ್ರಿ. ಶ. ೧೫೮೫ ರಲ್ಲಿ. ಆದ್ದರಿಂದ ಕ್ರಿ. ಶ. ೧೫೮೫ ರಲ್ಲಿ ಕಿತ್ತೂರ ದೇಶಗತಿಯು ಹುಟ್ಟಿತೆಂದು

ಇಂಥ ಮಹಾತ್ಮರ ಪ್ರತ್ಯಕ್ಷ ಜೀವನಗಳೇ ಪರಮಾತ್ಮನ ಅಸ್ತಿತ್ವದ ಅಲೌಕ್ಯ ಪ್ರಮಾಣ. ಅವರ ಒಣ ಶುಷ್ಕ ಬುದ್ಧಿವಾದಿಗಳ ನಿಃಸತ್ವ ಹರಟೆಯಲ್ಲ; ಅದರಲ್ಲಿ ಸರ್ವ ಗ್ರಾಹ್ಯ ಸತ್ಯವಿರುತ್ತಿದೆ.

ಇಂಥ ವಿಭೂತಿಗಳ ಪದವಿ ನಮ್ಮೆಲ್ಲರ ಗುರಿ; ನಮ್ಮೆಲ್ಲರ ಜನ್ಮಸಿದ್ಧ ಹಕ್ಕು. ಅವರು ಇಹದಲ್ಲಿಯ ದಿವ್ಯ ಜೀವನದ ಅಗ್ರ ದೂತರಷ್ಟೆ. ನಾವೆಲ್ಲರು ಅವರ ಅಡಿಯಲ್ಲಿ ಅಡಿಯಿಟ್ಟು, ಒಂದಿಲ್ಲೊಂದು ದಿವಸ ಬುದ್ಧ ಬಸವಣ್ಣರಾಗುವವರೆ. ಮಾನವನ ಪೂರ್ವಜನಾದ ಆ ವನ ಮರ್ಕಟನಿಗೆ—“ಒಂದಿಲ್ಲೊಂದು ದಿವಸ ನೀನು ಮಾನವನಾಗಿ ನಿನ್ನ ಬುದ್ಧಿ ಪ್ರಯೋಗದಿಂದ ವಿಮಾನದಲ್ಲಿ ಹಾರಾಡುವಿಯೆಂದೂ, ಜೀವನವನ್ನೂ, ಪರಿಸ್ಥಿತಿಯನ್ನೂ ಬೇಕಾದಂತೆ ಮಾರ್ಪಡಿಸಿಕೊಳ್ಳುವಿಯೆಂದೂ ಹೇಳಿದ್ದರೆ ಆ ಮರ್ಕಟವು ಸರ್ವಥಾ ನಂಬುತ್ತಿರಲಿಲ್ಲ. ಹಾಗೆಯೇ ಇಂದಿನ ಅಪೂರ್ಣ ಮನುಷ್ಯನು ತಾನು ಪರಿಪೂರ್ಣ ಸಚ್ಚಿದಾನಂದನಾಗುವನೆಂಬುವದನ್ನು ಸಹಸಾ ನಂಬಲಾರನು.

ವೈಯಕ್ತಿಕ ಪರಿಪೂರ್ಣತೆ ನಾವು ಎಷ್ಟು ಸಾಧಿಸಿದರೂ ಸಾಮೂಹಿಕ ಪರಿಪೂರ್ಣತೆ ಸಾಧಿಸದ ಹೊರತು ನಮ್ಮ ಪರಿಪೂರ್ಣತೆ ಪೂರ್ಣ ಎಂದಿಗೂ ಆಗಲಾರದು.

**ಆತ್ಮ ಪರಿಪೂರ್ಣತೆಃ—**

ಅಂತರ್‌ದೃಷ್ಟಿಯೆಂದರೆ ಸತ್ಯದ ಸಂಪೂರ್ಣ ಅವಲೋಕನ. ಇಂಥ ದರ್ಶನವೆ ಅಧ್ಯಾತ್ಮಿಕ ಜೀವನದ ಸಾರ. ಸಾಮಾನ್ಯವಾಗಿ ನಾವು ಪರಿಪೂರ್ಣ ಅಖಂಡ ವ್ಯಕ್ತಿಗಳಿರದೆ ಭಿನ್ನ ಭಿನ್ನ ಮಾನವೀ ಯಂತ್ರಗಳಿರುತ್ತೇವೆ. ಅಂತೇ ನಮ್ಮ ಜೀವನದಲ್ಲಿ ಗಾಂಭೀರ್ಯ ಸಾಮರ್ಥ್ಯಗಳಿರುವದಿಲ್ಲ. ನಾವು ಅಖಂಡ ವ್ಯಕ್ತಿಗಳಾಗಬೇಕಾದರೆ ನಮ್ಮ ಸ್ವಭಾವ, ಬುದ್ಧಿಭಾವ, ಸಂಕಲ್ಪಗಳ ಪೂರ್ಣ ವಿಕಾಸ ಮಾಡಬೇಕು. ಅದು ಮತಾಂತರದಿಂದ, ಬುದ್ಧಿ ಬೆಳವಣಿಗೆಯಿಂದ ಸಾಧ್ಯವಿಲ್ಲ. ವಿವೇಕ, ವೈರಾಗ್ಯ, ಪಾವಿತ್ರ್ಯಗಳಿಂದ ಒಳಗಿನ ಚೈತನ್ಯದ ಮೇಲಿನ ಧೂಳಿಯನ್ನು ಝಾಡಿಸಿದಾಗ್ಗೆಯೇ ಸಾಧ್ಯ. ನಮ್ಮ ಬಾಹ್ಯ ಚೈತನ್ಯವೂ ಆಗ ಮೇಲ್ಮಟ್ಟಕ್ಕೇರುವದು. ಅದರಲ್ಲಿ ಉಚ್ಚ ತತ್ವಗಳು ತಾನೆ ಬಿಂಬಿಸುವವು. ಹೂವಿನಲ್ಲಿಯ ನಿಶ್ಚಿತ ಪದಾರ್ಥಗಳ ಕೋಷ್ಟಕಿನ ಉಜಳಣಿಯಿಂದ ಹೂವಿನ ಸೃಷ್ಟಿ ಎಂದೂ ಆಗದು. ಅಭೇದ್ಯ

ಚೈತನ್ಯದಿಂದಲೇ ಹೂವಿನ ಸೃಷ್ಟಿ ಸಾಧ್ಯ. ಹೀಗೆ ಹೊಸ ಚೈತನ್ಯದ ಸೃಜನೆಗೆ ದೈವೀಕರಿಸುವ ಧರ್ಮದ ಶಕ್ತಿಬೇಕು; ಶುಷ್ಕಶಾಸ್ತ್ರ ರೂಪವಲ್ಲ. ಸಾಂತ್ಯದಲ್ಲಿ ಅನಂತನ ಅವಲೋಕನವೇ ನಿಜವಾದ ಧರ್ಮವು.

ಮನುಷ್ಯನಲ್ಲಿ ಅನೇಕ ಆದಿ ಪಾಶವಿಕ ಶಕ್ತಿಗಳು ತಾಕಲಾಡುತ್ತವೆಂದೂ, ಅವುಗಳ ಸಮನ್ವಯವೇ ಮಾನವನ ವಿಕಾಸವೆಂದೂ ಮನೋವಿಶ್ಲೇಷಣ ಶಾಸ್ತ್ರದ ಸಿದ್ಧಾಂತ.

(೧) ಸಂರಕ್ಷಣ:— ಪ್ರತಿಕ್ರಿಯ ಅಂದರೆ ಕೆಳಗಿನ ಚೇತನೆಯಲ್ಲಿಯೇ ಪ್ರವೃತ್ತಿಗಳ ನೇರವಾದ ವಿರೋಧ.

(೨) ಪ್ರತಿಷ್ಠಾಪನೆ:— ಒಂದು ಪ್ರವೃತ್ತಿಯನ್ನು ಮತ್ತೊಂದು ಭಾವನೆಯಲ್ಲಿ ಹಿಂಗಿಸುವದು.

(೩) ಉದಾತ್ತೀಕರಣ:— ನಿಕೃಷ್ಟ ಪ್ರವೃತ್ತಿಗಳನ್ನು ಉಚ್ಚಪ್ರವೃತ್ತಿಗಳಲ್ಲಿ ಬದಲಿಸುವದು. ಇವು ಮೇಲಿನ ಸಮನ್ವಯ ದಾರಿಗಳಂತೆ ಈ ಮೂರು ಉಪಾಯಗಳಲ್ಲಿ ಸಾಧಿಸುವ ಸಮನ್ವಯ ಮೇಲಿನ ಸ್ಥರದ್ದಷ್ಟೆ. ಇಂಥ ಬಾಹ್ಯ ಸಮನ್ವಯದಲ್ಲಿ ಒಳಗಿನ ನಿಕೃಷ್ಟ ಪ್ರವೃತ್ತಿಗಳು ಒಳಗೆ ಕೂಡಿಬಿದ್ದು ಒಮ್ಮೆಲೆ ಪುಟಿದೆದ್ದು, ಕೈಮೀರಿ ಮನುಷ್ಯನ ಪತನ ಮಾಡುತ್ತಿವೆ. ಅವು ತೃಪ್ತಿಗಾಗಿ ಬಿರುಗಾಳಿಯಂತೆ ಹರಿಹಾಯುತ್ತಿವೆ. ಅಂತೇ ಆ ಜೀವನ ಸಂಯಮ ಸಾಧಿಸಿ ಮುಪ್ಪಿನಲ್ಲಿ ಸಾಕು ನಾಯಿ, ಬೆಕ್ಕುಗಳನ್ನು ಮುದ್ದಿಸಿ ಪ್ರೇಮ ತೃಪ್ತಿಪಡೆಯಲು ಹವಣಿಸಿ, ಅದರಲ್ಲಿಯೂ ಅಸಮಾಧಾನ ಹೊಂದಿ ಭ್ರಾಂತಿಗೀಡಾಗುವ ಸಭ್ಯ ದಾರ್ಶನಿಕ ಮಹಿಳೆಯರನ್ನು ನಾವು ಯುರೋಪದಲ್ಲಿ ಕಾಣುತ್ತೇವೆ. ಅಂತ: ಚೈತನ್ಯವನ್ನು ಅಮೂಲಾಗ್ರ ಬದಲಿಸಿ ನಿಜವಾದ ಅಖಂಡ ಮನಃಶಾಂತಿಯನ್ನು ಭಾರತಿಯ ಯೋಗ ಒಂದೇ ನೀಡಬಲ್ಲದು; ಸಮನ್ವಯಗೊಳಿಸಬಲ್ಲದು.

ನಮ್ಮ ದೇಹ, ಮನ, ಇಂದ್ರಿಯ ಜೀವನ ಎಲ್ಲವುಗಳನ್ನು ನಿಯಂತ್ರಿಸಿ ಪರಿಪೂರ್ಣಗೊಳಿಸಿ ಆತ್ಮಜ್ಯೋತಿಯನ್ನು ಬೆಳಗಿಸುವ ಸಾಧನೆಯನ್ನು ಯೋಗ ಮಾಡಹಚ್ಚುತ್ತಿದೆ. ನಮ್ಮ ವೈಯಕ್ತಿಕ ವಾಸನೆ, ದೋಷಗಳ ಮುಖಾಂತರ ನಾವು ನಮ್ಮ ಸುತ್ತಲಿನ ವಿಶ್ವದೊಡನೆ ವ್ಯವಹರಿಸುತ್ತೇವೆ. ಅಂತೇ ಸತ್ಯದ ಅನುಭವವಾಗದೆ, ವ್ಯಷ್ಟಿ ಸಮಷ್ಟಿಗಳ ನಡುವೆ ಸಮ

ನ್ವಯ ತಪ್ಪಿ ಬೇನೆ, ಅಜ್ಞಾನ, ಪಾಪಗಳಲ್ಲಿ ನಾವು ತೊಳಲಾಡುತ್ತೇವೆ. ಈ ವೈಯಕ್ತಿಕ ದೋಷ ವಾಸನೆಗಳ ಜಂಜಾಲದಿಂದ ಮುಕ್ತರಾದಾಗ್ಗೆ ನಮಗೆ ವಿಶ್ವದ ಸತ್ಯ ಗೋಚರವಾಗುವದು. ಯೋಗ ಧರ್ಮವು ನಮ್ಮ ಪ್ರಕೃತಿ ಎಲ್ಲ ಭಾಗಗಳನ್ನು ಜಯಿಸಲು ಸಹಾಯ ಮಾಡುತ್ತಿದೆ. ನಮ್ಮ ಮೇಲಿನ ಚಟುವಟಿಕೆಗಳನ್ನೆಲ್ಲ ನಿಲ್ಲಿಸಿ ಒಳಚೈತನ್ಯದಲ್ಲಿ ಮುಳುಗಿದರೆ ಅಂತರಾತ್ಮದ ವಿಕಾಸವಾಗುತ್ತಿದೆ. ಸತತ ಧ್ಯಾನದಿಂದ ಹೊರಗಿನ ಚೈತನ್ಯದ ಹಸ್ತಕ್ಷೇಪ ನಿಂತು ಒಳ ಚೈತನ್ಯವು ಜಾಗ್ರತವಾಗಿ ಅಂಗಾಂಗಗಳನ್ನೆಲ್ಲ ವ್ಯಾಪಿಸಿ ಕೊಳ್ಳುವದು.

**ಸಹಜ ಪ್ರೇರಣೆ ಹಾಗು ಅಂತಃಸ್ಫೂರ್ತಿ:—**

ಸಹಜ ಪ್ರೇರಣೆಯಿಂದ ನಡೆಯುವ ಪಶು ಜೀವನವು ಅಧ್ಯಾತ್ಮ ಜೀವನದಲ್ಲಿ ಸಹಜ ಪ್ರೇರಣೆ ಮತ್ತು ಅಂತಃಸ್ಫೂರ್ತಿ ಎರಡೂ ವಸ್ತುವಿನೊಡನೆ ನೇರವಾಗಿ ಸಂಬಂಧಪಟ್ಟಿರುತ್ತಿದೆ. ಆದರೆ ಇವೆರಡು ಒಂದೇಅಲ್ಲ; ಆದಿಮ ಸ್ಥಿತಿಯಲ್ಲಿ ಮನುಷ್ಯನಲ್ಲಿ ಸಹಜ ಪ್ರೇರಣೆಯ ಶಕ್ತಿಯು ಬಹಳವಿತ್ತು. ಈಗ್ಯೂ ಪಶುಗಳಲ್ಲಿ ಸಹಜ ಪ್ರೇರಣೆಯು ಬಹಳ. ಆದರೆ ಅದು ಅಪರಿಚಿತ ಪರಿಸ್ಥಿತಿಗಳಲ್ಲಿ ಕೆಲಸ ಮಾಡಲಾರದು. ಬುದ್ಧಿಯ ಉಗಮದ ನಂತರ ಸಹಜ ಪ್ರೇರಣೆಯು ಅನುಭವಿಸುವ ಐಕ್ಯವು. ವ್ಯಕ್ತಿಯು ಭಿನ್ನ ಭಿನ್ನವಾಗಿ ತನ್ನ ಜೀವನ ಪರಿಸ್ಥಿತಿಗಳನ್ನು ತಾನು ಯೋಚಿಸಿಕೊಳ್ಳತೊಡಗುತ್ತಾನೆ. ಬುದ್ಧಿ ಏಕಜೀವನಗಳ ಸಮನ್ವಯ. ಇನ್ನು ಸ್ವಯಂ ಸ್ಫೂರ್ತಿಯಿಂದಲೇ ಸಾಧ್ಯ. ಅದು ವಿಚಾರ ಹೀನ ಭ್ರಾಂತಿಯಲ್ಲ;

ಶಿಶುವು ಸಹಜ ಪ್ರೇರಣೆಯಿಂದ ವಿಶ್ವದೊಡನೆ ಐಕ್ಯ, ಶಾಂತಿಗಳನ್ನು ಅನುಭವಿಸುತ್ತಿದೆ. ಆದರೆ ಆದರ ವಿಚಾರವು ಸ್ವಾರ್ಥ ಭಿನ್ನತೆಗಳಲ್ಲಿ ತೊಳಲಾಡಹಚ್ಚುತ್ತಿದೆ. ಅಂತಃಸ್ಫೂರ್ತಿಯಿಂದ ವಿಚಾರ ಶೀಲ ಮನುಷ್ಯನು ಶಿಶುವಿನ ಐಕ್ಯ, ನಿಷ್ಪಾಪತನ, ಶಾಂತಿಗಳನ್ನು ಪುನಃ ಪಡೆಯುತ್ತಾನೆ. ಇದೇ ಅಧ್ಯಾತ್ಮದ ರಹಸ್ಯ.

ಔಷಧ ಸಂಮ್ಮೋಹಗಳಿಂದ ಪಡೆಯುವ ಐಕ್ಯವು ಕ್ಷಣಿಕ ಮಬ್ಬು; ಅದು ನಮ್ಮ ವ್ಯಕ್ತಿತ್ವವನ್ನು ಶಿಥಿಲಗೊಳಿಸುತ್ತಿದೆ. ಅಂತಃಸ್ಫೂರ್ತಿಯಿಂದ ಪಡೆದ ಐಕ್ಯವು ನಮ್ಮ ವ್ಯಕ್ತಿತ್ವ ಜೀವನಗಳನ್ನು ಆಮೂಲಾಗ್ರ ಬದಲಿಸಿ ಉನ್ನತ ಹಾಗು ವಿಶಾಲ ಮಟ್ಟಕ್ಕೆ ಮುಟ್ಟಿಸುತ್ತಿದೆ.

ಅಚೇತನ ಸ್ತರಗಳಿಂದಲೇ ಕಲೆ, ತತ್ವಜ್ಞಾನಗಳ ಸ್ಫೂರ್ತಿಗಳು ಉದಯಿಸುತ್ತಿವೆಯೆಂದು ಮನೋವಿಶ್ಲೇಷಣ ಶಾಸ್ತ್ರದ ಮತ. ಅಂತರಾತ್ಮನು ಅಚೇತನ ಸಚೇತನ ಮನಗಳ ಉಗಮವು. ಆದ್ದರಿಂದ ಅಂತರಾತ್ಮನಿಂದಲೇ ಅಂತಃಸ್ಫೂರ್ತಿಗಳು ಉದಯಿಸುತ್ತಿವೆ. ಅಚೇತನದಲ್ಲಿ ಅಡಗಿರುವ ಸಂಸ್ಕಾರಗಳನ್ನೆಲ್ಲ ಬೆಳಕಿಗೆಳೆದು ನಿಯಂತ್ರಿಸಬೇಕು. ಅಂದರೆ ಅಂತಃಸ್ಫೂರ್ತಿಗಳು ಪ್ರಕಟವಾಗುತ್ತಿವೆ. ದೇಹ ಮನಗಳನ್ನು ಶಿಥಿಲ ಮಾಡುವದು ಯೋಗದ ಉದ್ದೇಶವಲ್ಲ. ಅದನ್ನು ಅದು ಆತ್ಮೋನ್ನತಿಗೆ ಹೊಂದಿಸುತ್ತದಷ್ಟೆ.

ಹತ್ತಿಕ್ಕಿದ ಭೀತಿ, ವಾಸನೆಗಳ ಪ್ರಕಟಣೆಯಲ್ಲಿಯೇ ಧಾರ್ಮಿಕ ತತ್ವಗಳೆಂದು ಮನೋವಿಶ್ಲೇಷಣ ಶಾಸ್ತ್ರವು ಹೇಳುವದು ಸರಿಯಲ್ಲ. ಅವು ತರ್ಕವಿತರ್ಕಗಳಿಂದ ಹೊರಟದವಲ್ಲವೆಂಬುವದೇನೋ ನಿಜ. ಆದರೆ ಜೀವನವು ತರ್ಕವಿತರ್ಕಕ್ಕೆ ನಿಯಮಿತವಾದುದಷ್ಟೇ ಇಲ್ಲ. ವಿಜ್ಞಾನವು ಸಹ ಕೆಲವು ಸ್ವಯಂ ಸಿದ್ಧ ಸಿದ್ಧಾಂತಗಳನ್ನು ಆಧಾರವಾಗಿಟ್ಟುಕೊಳ್ಳುತ್ತಿದೆ. ಧಾರ್ಮಿಕ ತತ್ವಗಳ ಆಧಾರವು ಅಂತಹದ್ದೇ ಇರುತ್ತಿವೆ. ಸಂತರ ಆಚಾರ ವಿಚಾರಗಳು ಹುಚ್ಚರ ಅಥವಾ ಕಾಡುಜನರ ವಿಚಾರಗಳಲ್ಲ; ಉಚ್ಚ ಕೋಟಿಯ ಮನುಷ್ಯರ ವಿಚಾರಗಳು.

ವಿಜ್ಞಾನ, ಮನೋವಿಜ್ಞಾನಗಳಲ್ಲಿ ನಾವು ಆಧುನಿಕರು. ಎಷ್ಟೇ ಮುಂದುವರದಿರಲಿ. ಆದರೆ ಆತ್ಮವಿಜ್ಞಾನದಲ್ಲಿ ಅಥವಾ ಅಧ್ಯಾತ್ಮ ವಿದ್ಯೆಯಲ್ಲಿ ನಾವು ನಮ್ಮ ಪೂರ್ವಜರಿಗಿಂತ ಮುಂದುವರದಿರುವದಿಲ್ಲ. ಅವರ ಪ್ರಾಚೀನ ಸಾಹಿತ್ಯದಲ್ಲಿ ಅಕ್ಷಯ ಜ್ಞಾನ ಭಂಡಾರವಿದೆ. ಅದನ್ನು ನಾವು ನಿರಹಂಕಾರದಿಂದ ಉಪಯೋಗಿಸಿದರೆ ನಾವು ಮಾನವತೆಯನ್ನು ಉಚ್ಚತಮ ಮಟ್ಟಕ್ಕೆ ಮುಟ್ಟಿಸಬಲ್ಲೆವು. ಭಕ್ತಿ, ಧ್ಯಾನ, ಜ್ಞಾನಗಳಿಂದ ನಾವು ನಮ್ಮ ಆತ್ಮವನ್ನು ವಿಶ್ವಾತ್ಮನೊಡನೆ ಸಮರಸ ಮಾಡಿ ಈ ಅಧ್ಯಾತ್ಮಜ್ಞಾನ ಸಂಪಾದಿಸಬೇಕು. ಮನುಷ್ಯ ಮನುಷ್ಯರಲ್ಲಿ ಒಡಕು ಹುಟ್ಟಿಸುವ ಮಾನವತೆಯ ವಿರೋಧೀ ಧರ್ಮ ಧರ್ಮವಲ್ಲ. ಮಾನವತೆ, ವಿಶ್ವ ಬಾಂಧವ್ಯಗಳು ಧರ್ಮದ ರಹಸ್ಯ.

ನಿಸರ್ಗದ ಬಗ್ಗೆ ಭೀತಿ, ಅಜ್ಞಾನಗಳಿಂದ ಆದಿಮ ಧರ್ಮ ಹುಟ್ಟಿದ್ದು ನಿಜ. ಮುಂದೆ ಅದು ಆತ್ಮವಿಶ್ಲೇಷಣ, ಆತ್ಮವಿಕಾಸಗಳಲ್ಲಿ ರೂಪಾಂತರಿಸಿತು. ಈಗ ನಮ್ಮ ವಿವೇಕಕ್ಕೆ ವಿಪರೀತವಾದದ್ದನ್ನು ನಂಬದಿರುವದನ್ನೇ

ಧರ್ಮವೆಂದು ತಿಳಿಯಬೇಕು. ಅಂಥ ವಿಶ್ವಾಸಕ್ಕಿಂತ ನಾಸ್ತಿಕವಾದವೇ ಲೇಸು. ಆದರೆ ನಾಸ್ತಿಕವಾದವಾದರೂ ಅಂಥ ಒಂದು ವಿಶ್ವಾಸವೆ! ನಾವು ಅದಕ್ಕಿಂತ ಮುಂದಿನ ಜ್ಞಾನದ ಶೋಧ ಮಾಡಬೇಕು.

**ಧಾರ್ಮಿಕ ಅನುಭವದ ಮಂಡನಃ—**

ತರ್ಕ ಜ್ಞಾನವೇ ಕೊನೆಯ ಜ್ಞಾನವೆಂದು ತಿಳಿಯಕೂಡದು. ಸಾಮನ್ಯತಃ ನಮ್ಮ ಅಂತಃಸ್ತ್ರಮದ ಅನುಭವದಿಂದ ನಮಗೆ ಅತ್ಯಂತ ವಿಶ್ವಸನೀಯ ಜ್ಞಾನ ದೊರಕುತ್ತಿದೆ. ದೇವರು, ಧರ್ಮಗಳು ಅಂತಹ ಜ್ಞಾನ ಅನುಭವದಿಂದಲೇ ವಿಚಾರಗಳು ಹೊರಡುವದರಿಂದ ಅನುಭವವೇ ಸತ್ಯದ ಆಧಾರ.

ಪಶುವಿನ ಸಹಜ ಪ್ರೇರಣೆ ಹಾಗು ಮಾನವನ ವಿವೇಚನಾ ಬುದ್ಧಿಗಳಲ್ಲಿ ಮಹದಂತರವಿದೆ. ಪಶುಗಳು ಹಿಂದಿನ, ಮುಂದಿನ ವಿಚಾರ ಮಾಡಲಾರವು. ಮಾನವನು ಹಿಂದಿನ ಮುಂದಿನ ವಿಚಾರ ಮಾಡಿ ತನ್ನ ಪರಿಸ್ಥಿತಿಗಳನ್ನು ಬದಲಿಸಿಕೊಳ್ಳುತ್ತಾನೆ. ಅಂತೇ ಅವನಲ್ಲಿ ಪಶುವಿನ ಬಲವಿರದಿದ್ದರೂ ಜಗತ್ತಿನ ಒಡೆಯನಾಗಿದ್ದಾನೆ. ಸಹಜ ಪ್ರೇರಣೆಯಿಂದ ವಿವೇಚನ ಬುದ್ಧಿಯ ವಿಕಾಸವು ಕ್ರಮಿಕ ವಿಕಾಸದಿಂದಾಗಿಲ್ಲ; ಗುಣಾತ್ಮಕ ಪರಿವರ್ತನೆಯಿಂದಾಗಿದೆ.

ಮನೋವಿಜ್ಞಾನವು ಪ್ರಾಯೋಗಿಕ ನಿರೀಕ್ಷಣೆ ಮಾಡಬಲ್ಲದು. ಆದರೆ ವೈಯಕ್ತಿಕ ಅನುಭವ, ಭಾವನೆ, ಉದ್ದೇಶಗಳನ್ನು ಅರಿಯಲಾರದು. ಪಶುವು ಸಹಜ ಪ್ರೇರಣೆಯಿಂದ ಸುತ್ತಲಿನ ಪ್ರಕೃತಿಗೆ ಹೊಂದಿಕೊಂಡು ತನ್ನ ಆರೋಗ್ಯ ಕಾಯ್ದುಕೊಳ್ಳಲು ಯತ್ನಿಸುತ್ತಿದೆ. ಮಾನವನು ಮಾತ್ರ ಸ್ವಪ್ರಯತ್ನದಿಂದ ಸ್ವೇಚ್ಛೆಗಳಿಂದ, ತನ್ನ ಆರೋಗ್ಯ ಕಾಯ್ದುಕೊಳ್ಳಬೇಕಾಗುತ್ತಿದೆ. ಅಂತರ ನಿರೀಕ್ಷಣೆ ಮನುಷ್ಯನ ವೈಶಿಷ್ಟ್ಯವನ್ನು ಎತ್ತಿ ತೋರಿಸುತ್ತಿದೆ. ನಿಯಮಿತ ಪುನರಾವರ್ತನೆಗಳಿಂದಲೇ ವಿಚಾರಗಳು ಉದ್ಭವಿಸುತ್ತಿದ್ದರೆ ಫ್ರೋಡನ ಲೆಕ್ಕಣಿಕೆಯನ್ನು ಬೇಕಾದವರ ಕೈಯಲ್ಲಿ ಕೊಟ್ಟರೆ, ಮನೋವಿಶ್ಲೇಷಣ ಶಾಸ್ತ್ರದ ರಚನೆಯಾಗಬಹುದಲ್ಲ? ಅದು ಸತ್ಯವಲ್ಲವೇ! ಆದರಂತೆ ಮಾನಸೀಕ ಪ್ರವೃತ್ತಿಗಳಿಂದಲೇ ದೈಹಿಕ ರಚನೆಯಾಗುತ್ತದೆಯೆಂಬುವದು ಪೂರ್ಣ ಸತ್ಯವಲ್ಲ. ದೇಹ, ಮನಸ್ಸುಗಳನ್ನು ಬೇರ್ಪಡಿಸುವದು ತಪ್ಪು. ಜೀವನವು ಅಖಂಡವಿದೆ. ವಿಚಾರದ ಅನುಕೂಲತೆಗೆಂದು ನಾವು ಅದನ್ನು ಖಂಡಿಸಿ ವಿಚಾರಿಸುತ್ತೇವೆ.

**ಆತ್ಮವು ಸಂಘಟಿತ ಘಟಕಃ—**

ಮಾನವ ಜೀವನವು ವಿಶ್ವಜೀವನದ ಒಂದು ಅಭಿನ್ನ ಅಂಗ. ದೇಹದಲ್ಲಿಯ ಕಣಗಳು ಬೇರೆಯಿದ್ದರೂ, ಪ್ರತಿಕ್ಷಣ ಬದಲಿಸುತಿದ್ದರೂ ಅವೆಲ್ಲ ಒಂದೇ ಘಟನೆಯಲ್ಲಿ ಜೋಡಿಸಲ್ಪಟ್ಟಿರುತ್ತಿವೆ. ಮನುಷ್ಯನಲ್ಲಿಯ ಆತ್ಮವು ಸ್ಥಿರವಿರುವದರಿಂದ ದೇಹದೊಳಗಿನ ಬದಲಾವಣೆಗಳೆಲ್ಲ ಒಂದೇ ಪ್ರಕೃತಿಯವಾಗಿರುತ್ತವೆ. ಈ ಪ್ರಕೃತಿಯೇ ಒಂದು ಸಂಘಟನೆ. ಪಶುವಿನಲ್ಲಿಯೂ ನಿಮ್ನ ಚೇತನೆಯ ಸಂಘಟನೆ ಇರುತ್ತದೆ. ಮನುಷ್ಯನಲ್ಲಿ ಮೇಲಿನ ಚೇತನೆಯ ಸಂಘಟನೆಯಾಗುತ್ತಿದೆ.

**ವ್ಯಕ್ತಿತ್ವ ಹಾಗು ಗುರಿಃ—**

ಪ್ರತಿಯೊಬ್ಬನಿಗೂ ಒಂದು ಜೀವನ ಗುರಿ ಇರುತ್ತಿದೆ. ಆದರ ಸೂತ್ರದಲ್ಲಿ ಅವನು ತನ್ನ ಜೀವನದ ಘಟಕಗಳನ್ನೆಲ್ಲ ಪೋಷಿಸಿ, ಒಂದು ಘಟಕ ಮಾಡಿಡುತ್ತಾನೆ. ಇದೇ ಅವನ ವ್ಯಕ್ತಿತ್ವ. ಜೀವನದ ನಾಟಕದಲ್ಲಿ ವ್ಯಕಿತ್ವವು ವ್ಯಕ್ತಿಯ ನಟನೆ, ವ್ಯಕ್ತಿಯ ಅನುಭವಗಳ ಸರಿಯಾದ ಸಂಘಟನೆಯಾಗದಿದ್ದರೆ ಅವನ ಅನೇಕ ವ್ಯಕ್ತಿತ್ವಗಳು ಕಾಣುತ್ತವೆ.



# ಕಿತ್ತೂರಿನ ಅಂತ್ಯಕಾಲದ ಕತೆ.

[ಲೇಖಕರು:- ಕಿತ್ತೂರವಾಸಿ]



ಕಿತ್ತೂರು ಗ್ರಾಮವು ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಒಂದು ಹಳ್ಳಿ. ಧಾರವಾಡದ ಉತ್ತರಕ್ಕೆ ಸುಮಾರು ೨೦-೨೨ ಮೈಲುಗಳ ಅಂತರದಲ್ಲಿರುವ ಕಿತ್ತೂರನ್ನು ಧಾರವಾಡ ಬೆಳಗಾವಿಯ ನಡುವೆ ಮೋಟಾರಿನಿಂದ ಪ್ರವಾಸಮಾಡುವ ಪ್ರತಿಯೊಬ್ಬನೂ ನೋಡುತ್ತಾನೆ. ಮೋಟಾರಿನಲ್ಲಿ ಕುಳಿತಿದ್ದಂತೆಯೇ ಎತ್ತರದ ದಿನ್ನೆಯ ಮೇಲಿರುವ ಹಾಳಾದ ಕೋಟೆಯೂ, ಚಿಕ್ಕ ಮನೆಗಳಿಂದ ಕೂಡಿದ ಊರಿನ ಸ್ವಲ್ಪ ಭಾಗವೂ ಕಣ್ಣಿಗೆ ಕಾಣುತ್ತವೆ. ಕಿತ್ತೂರಿನ ಈ ಚಿತ್ರ ಮನದ ಮೇಲೆ ಯಾವ ಅದ್ಭುತ ಪರಿಣಾಮವನ್ನೂ ಮಾಡುವದಿಲ್ಲ. ಆದರೆ ಸುಮಾರು ೧೫೦ ವರ್ಷಗಳ ಹಿಂದೆ ಇದೇ ಕಿತ್ತೂರು ಹೇಗೆ ಇತ್ತು, ಎಂತಹ ಸಾಹಸಕಾರ್ಯವನ್ನು ಮಾಡಿತು ಎಂಬುದನ್ನು ನೆನೆದರೆ ಎಂತಹನಾದರೂ ಉಸಿರೆಳೆಯದಿರಲಾರನು. ಅಂತೆಯೇ ಹೆಮ್ಮೆ ಪಡೆದಿರಲಾರನು! ಏಕೆಂದರೆ ಸುಮಾರು ೨೦೦ ವರ್ಷಗಳ ಕಾಲ "ಕಿತ್ತೂರ ದೇಸಗತಿಯು" ರಾಜಧಾನಿಯಾಗಿ ಅರಮನೆ, ಗುಡಿ, ವ್ಯಾಪಾರ-ಉದ್ದಿಮೆಗಳ ಮುಖ್ಯ ಕೇಂದ್ರವಾಗಿ ಒಳ್ಳೇ ಸಮೃದ್ಧಿಯಲ್ಲಿದ್ದುದು ಅದೇ ಕಿತ್ತೂರ! ಅಲ್ಲದೆ ಕ್ರಿ. ಶ. ೧೮೨೪ರಲ್ಲಿ ತನ್ನ ನಾಡಿನ ಸ್ವಾತಂತ್ರ್ಯವನ್ನುಳಿಸಿಕೊಳ್ಳಲು ಬ್ರಿಟಿಶರ ಕೂಡ ಹೆಣಗಿದ "ವೀರ ಕಿತ್ತೂರ ಕೇಸರಿಣಿ" ಎಂದು ಪ್ರಸಿದ್ಧಳಾದ ಅವ್ವ ಚನ್ನವ್ವನ ಊರೂ ಇದೇ ಕಿತ್ತೂರು!!

**ಶಾಸನ ಕಾಲೀನ ಕಿತ್ತೂರು:—** ಕಿತ್ತೂರು ಎಂಬ ಹೆಸರು ಕ್ರಿ. ಶ. ೧೧೮೮ ರ ಒಂದು ಶಿಲಾಶಾಸನದಲ್ಲಿ ಉಲ್ಲೇಖವಾಗಿರುತ್ತದೆ. ಈ ಶಾಸನವು ಗೋವೆಯ ಕದಂಬರದಿದ್ದು, ಕಿತ್ತೂರನಲ್ಲಿರುವ ಒಂದು ಹಳೆಯ ಬಸವಣ್ಣದೇವರ ಗುಡಿಯಲ್ಲಿ ಈಗಲೂ ಇರುತ್ತದೆ. ಇದರಿಂದ ಕಿತ್ತೂರು ಎಂಬ ಹೆಸರು ೧೦-೧೧ ನೇ ಶತಮಾನಗಳಲ್ಲಿಯೇ ಪ್ರಚಾರದಲ್ಲಿತ್ತೆಂದು ಗೊತ್ತಾಗುತ್ತದೆ. ಆದರೂ ಸಹ ಕಿತ್ತೂರು ಒಂದು ಮಹತ್ವದ ಸ್ಥಾನ ಪಡೆದುದು ಕಿತ್ತೂರ ಸಂಸ್ಥಾನದ ದೇಸಾಯರಲ್ಲಿ ಹಿರಿಯವನಾದ ಅಲ್ಲಪ್ಪಗೌಡನ ಕಾಲ

ಕ್ಕೆಯೇ. ಈತನು ಮೊಗಲರಿಗೂ ವಿಜಾಪುರದವರಿಗೂ ನಡೆದ ಯುದ್ಧ ಸಮಯವನ್ನು ಸಾಧಿಸಿ, ಬೀಡಿ ಸಂಪಗಾಂವ ಪ್ರಾಂತಗಳನ್ನು ಪಡೆದು, ಕಿತ್ತೂರನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಇರತೊಡಗಿದನು. ಕಿತ್ತೂರ ಕೋಟೆಯನ್ನು ಕಟ್ಟಿಸಿದವನೂ ಇವನೇ. ಆಗ ಕಿತ್ತೂರಿಗೆ 'ಗೀಜಗನ ಹಳ್ಳಿ' ಎಂಬ ಇನ್ನೊಂದು ಹೆಸರೂ ಇತ್ತು. ಈ ಅಲ್ಲಪ್ಪಗೌಡ ಸರದೇಸಾಯಿಯು ೩೧ ವರ್ಷ ರಾಜ್ಯವಾಳಿದ್ದಾನೆ.

ಕಿತ್ತೂರ ಸಂಸ್ಥಾನದ ದೇಸಾಯರು ತಮ್ಮ ಉತ್ತಮವಾದ ಆಳಿಕೆಯಿಂದ, ಸಾಹಸ ಕಾರ್ಯಗಳಿಂದ ಇತಿಹಾಸದಲ್ಲಿ ಚಿರಸ್ಥಾನವನ್ನು ಪಡೆದಿದ್ದಾರೆ. ಆದರೂ ಇವರು ಯಾವಾಗಲೂ ಸ್ವತಂತ್ರವಾಗಿ ಆಳಿಕೆಯನ್ನು ಮಾಡಲಿಲ್ಲ. ಇದೊಂದು ಕೇವಲ ದೇಸಗತಿ ಆಗಿದ್ದರಿಂದ ಆ ದೇಸಗತ್ತು ಯಾರ ಆಳಿಕೆಗೆ ಒಳಪಡುತ್ತದೆಯೋ ಅವರಿಗೆ ಅಂಕಿತರಾಗಿ ಕಪ್ಪಕಾಣಿಕೆಗಳನ್ನು ಒಪ್ಪಿಸುತ್ತ ಬರುವದು ಸ್ವಾಭಾವಿಕವಾಗಿತ್ತು. ಮೊದಲು ವಿಜಾಪುರದವರಿಗೂ ನಂತರ ಮರಾಠಾ, ಪೇಶ್ವೆ, ಮೊಗಲರಿಗೂ ಅಧೀನರಾಗಿದ್ದುಕೊಂಡು ಬಂದರು. ನಂತರ ಹೈದರ, ಟೀಪು ಇವರ ದಬ್ಬಾಳಿಕೆಗೂ ಒಳಪಟ್ಟು, ಪುನಃ ಪೇಶ್ವೆಯವರಿಗೆ ಅಂಕಿತರಾದರು. ಕೊನೆಕೊನೆಗೆ ಸ್ವಲ್ಪ ಕಾಲ ಈಸ್ಟ ಇಂಡಿಯಾ ಕಂಪನಿಯ ಸಂಗಡ ಒಪ್ಪಂದ ಮಾಡಿಕೊಂಡಿದ್ದು ಕ್ರಿ. ಶ. ೧೮೨೪ರಲ್ಲಿ ಅದರ ಸಾಮ್ರಾಜ್ಯದಲ್ಲಿಯೇ ಕಿತ್ತೂರು ಸಂಸ್ಥಾನವು ಲೀನವಾಗಿ ಹೋಯಿತು.

**ಸಂಪಗಾವಿ ಸಾವುಕಾರರು:**— ಕಿತ್ತೂರ ಸಂಸ್ಥಾನದ ಮೂಲಪುರುಷರಾದ ಹಿರೇಮಲ್ಲಶೆಟ್ಟಿ, ಚಿಕ್ಕಮಲ್ಲಶೆಟ್ಟಿ ಎಂಬ ಇಬ್ಬರು ಅಣ್ಣತಮ್ಮಂದಿರು ಸಂಪಗಾಂವಿಯಲ್ಲಿ ಸಾಹುಕಾರಿಕೆಯನ್ನು ಮಾಡಿಕೊಂಡು ಇದ್ದರು. ಇವರು ಕಲಬುರ್ಗಿಯ ಶೀಮೆಯವರೆಂದು ಹೇಳುತ್ತಾರೆ. ಹಿರೇಮಲ್ಲನು ವಿಜಾಪುರ ಅರಸರ ದಂಡಿನಲ್ಲಿ ಸೇರಿ ಬಹುವಾಗಿ ತನ್ನ ಶೌರ್ಯ ಸಾಮರ್ಥ್ಯಗಳನ್ನು ತೋರಿಸಿದ್ದರಿಂದ ಬಾದಶಹನು ಮೆಚ್ಚಿ ಈತನಿಗೆ 'ಸಮಶೇರಜಂಗಬಹಾದ್ದೂರ ಎಂಬ ಬಿರುದನ್ನು ಕೊಟ್ಟು ಹುಬ್ಬಳ್ಳಿ ಪ್ರಾಂತದ ಸರದೇಶಮುಖಿಯನ್ನೂ ಕೊಟ್ಟನು. ಈ ಸಂಗತಿ ನಡೆದುದು ಕ್ರಿ. ಶ. ೧೫೮೫ ರಲ್ಲಿ. ಆದ್ದರಿಂದ ಕ್ರಿ. ಶ. ೧೫೮೫ ರಲ್ಲಿ ಕಿತ್ತೂರ ದೇಶಗತಿಯು ಹುಟ್ಟಿತೆಂದು

ಹೇಳಬಹುದು. ಅಂದಿನಿಂದ ಹಿಡಿದು ಕ್ರಿ. ಶ. ೧೮೨೪ ರ ವರೆಗೆ ಅಂದರೆ ೨೩೯ ವರ್ಷಗಳ ಕಾಲ ಕಿತ್ತೂರ ದೇಸಗತ್ತು ಬಾಳಿತು, ಆಳಿತು.

೨೩೯ ವರ್ಷಗಳ ಈ ಅವಧಿಯಲ್ಲಿ ಕಿತ್ತೂರ ದೇಸಗತಿಯಲ್ಲಿ ೧೨ ಜನ ದೇಸಾಯರು ಆಳಿಕೆ ಮಾಡಿದ್ದಾರೆ. ಇವರಲ್ಲಿ ಮೊದಲಿನ ನಾಲ್ವರು ಸಂಪ ಗಾವಿಯಲ್ಲಿಯೇ ಇರುತ್ತಿದ್ದರು. ಆದರೆ ಮೇಲೆ ಹೇಳಿದಂತೆ ಐನೆಯವನಾದ ಅಲ್ಲಪ್ಪಗೌಡನು ಕಿತ್ತೂರನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಅಂದಿನಿಂದ ಈ ಮನೆತನಕ್ಕೆ ಕಿತ್ತೂರ ಸಂಸ್ಥಾನ ಅಥವಾ ದೇಸಗತ ಎಂಬ ಹೆಸರೇ ಪ್ರಸಿದ್ಧಿಯಾಗಿಹೋಗಿದೆ. ಆರನೇಯವನಾದ ಮುದಿಮಲ್ಲಪ್ಪನ ಕಾಲಕ್ಕೆ ಕಿತ್ತೂರ ಸಂಸ್ಥಾನವು ಮೊಗಲರ ಪರವಾಗಿ ಸವಣೂರ ನವಾಬರ ಆಳಿಕೆಗೆ ಒಳಪಟ್ಟಿತ್ತು. ಒಂಭತ್ತನೆಯವನಾದ ಮುಲಪ್ಪ ರುದ್ರಗೌಡಾ ಅಥವಾ ಹುಚ್ಚ ಫಕೀರ ರುದ್ರಸರ್ಜನು ದೇಸನೂರು ಗುಡ್ಡದ ಮೇಲಿರುವ ಕಿಲ್ಲೆಯನ್ನು ಕಟ್ಟಿಸಿದನು. ಹತ್ತನೆಯವನಾದ ವೀರಪ್ಪಗೌಡ ದೇಸಾಯಿಯು ಬಹು ಪರಾಕ್ರಮಿಯೂ, ಧೈರ್ಯಶಾಲಿಯೂ ಇದ್ದು, ಗೋಕಾವಿ, ಸವದತ್ತಿ ತಾಲೂಕುಗಳನ್ನು ಗೆದ್ದು ತನ್ನ ಸಂಸ್ಥಾನಕ್ಕೆ ಸೇರಿಸಿದ್ದನು. ಆದರ ಕಿತ್ತೂರ ಸಂಸ್ಥಾನವು ಸರ್ವರೀತಿಯಿಂದಲೂ ಘನತೆಗೇರಿದ್ದು ಹನ್ನೊಂದ ನೆಯ ದೇಸಾಯಿಯಾದ ಮಲ್ಲಸರ್ಜದೇಸಾಯಿಯ ಕಾಲಕ್ಕೆಯೇ. ಕಿತ್ತೂರ ಸರದೇಸಾಯಿಯವರಲ್ಲಿಯೇ ಒಳ್ಳೇ ಧಾರ್ಮಿಕನೂ, ವೈಭವ ಸಂಪನ್ನನಾದ ರಾಜನೀತನು. ಈತನ ಶೌರ್ಯಕ್ಕಾಗಿ ಪೇಶವೆ ಸರಕಾರದಿಂದ 'ಪ್ರತಾಪ ರಾವ' ಎಂಬ ಬಹುಮಾನದ ಬಿರುದು ಈತನಿಗೆ ಶಿಕ್ಕಿತ್ತು. ಇದರ ಸ್ಮಾರಕ ವಾಗಿ ಈತನು ನಂದಗಡದ ಬಳಿಯಲ್ಲಿ 'ಪ್ರತಾಪಗಡ' ಎಂಬ ಕಿಲ್ಲೆಯನ್ನು ಕಟ್ಟಿಸಿದನು. ಅದನ್ನು ಈಗಲೂ ನಾವು ನೋಡಬಹುದು. ಇವನು ತನ್ನ ರಾಜ್ಯದ ಆಡಳತೆಯನ್ನು ಸುಸೂತ್ರವಾಗಿ ನಡೆಯಿಸಿಕೊಂಡು ಹೋಗುವ ದಕ್ಕಾಗಿ ತನ್ನ ಸಂಸ್ಥಾನವನ್ನು ೧೪ ತರ್ಯಾತಗಳನ್ನಾಗಿ ಭಾಗ ಮಾಡಿ ದ್ದನು. ಇದರಲ್ಲಿ ಈಗಿನ ಸಂಪಗಾವಿ ಮತ್ತು ಖಾನಾಪುರ ತಾಲೂಕಿನ ಕೆಲವು ಭಾಗ ಸವದತ್ತಿ ತಾಲೂಕಿನ ಕೆಲವು ಭಾಗ ಮತ್ತು ಹಳಿಯಾಳ ತಾಲೂಕಿನ ಕೆಲವು ಭಾಗಗಳೂ ಸಮಾವೇಶವಾಗಿದ್ದವು.

**ಮಲಸರ್ಜ:—** ಮಲಸರ್ಜನ ಕಾಲದಲ್ಲಿ ಕಿತ್ತೂರ ರಾಜ್ಯದಲ್ಲಿ ವ್ಯಾಪಾರವು ಒಳ್ಳೇ ರೀತಿಯಲ್ಲಿ ನಡೆಯುತ್ತಿತ್ತು. ನಂದಗಡ, ಖಾನಾಪುರ,

ಬೈಲಹೊಂಗಲ, ಕಿತ್ತೂರು, ಸಂಪಗಾವಿ, ದೇಸನೂರು ಇವು ವ್ಯಾಪಾರದ ಪ್ರಮುಖ ಪಟ್ಟಣಗಳಾಗಿದ್ದವು. ಕೊಂಕಣಪಟ್ಟಿಯಿಂದ ಬರುವ ಸರಕುಗಳೆಲ್ಲ ನಂದಗಡಕ್ಕೆ ಬಂದೇ ಹೋಗಬೇಕಾಗಿತ್ತು. ರೇಲ್ವೆ ಬರುವವರೆಗೆ ನಂದಗಡವು ಒಂದು ದೊಡ್ಡ ವ್ಯಾಪಾರೀ ಕೇಂದ್ರವಾಗಿತ್ತು. ಬೈಲಹೊಂಗಲದಲ್ಲಿ ಧೋತರ ಜೋಡಿ ವ್ಯಾಪಾರವು ಜೋರಿನಿಂದ ನಡೆಯುತ್ತಿತ್ತು. ದೇಸನೂರ "ಕರೇಸನಗು" ಕಾರವಾರ ಜಿಲ್ಲೆಗೆ ಬಹುವಾಗಿ ಹೋಗುತ್ತಿದ್ದವು. ಕಿತ್ತೂರು ರಾಜಧಾನಿ ಪಟ್ಟಣವಾಗಿದ್ದರಿಂದ ಅಲ್ಲಿ ಎಲ್ಲ ತರದ ವ್ಯಾಪಾರ ಚನ್ನಾಗಿ ನಡೆಯುತ್ತಿತ್ತು. ಒಂದೇ ಮಾತಿನಲ್ಲಿ ಹೇಳುವದಾದರೆ ಮಲ್ಲಸರ್ಜನ ಕಾಲದ ಕಿತ್ತೂರ ರಾಜ್ಯವು ಒಕ್ಕಲುತನದಿಂದಲೂ, ವ್ಯಾಪಾರದಿಂದಲೂ, ಊರ್ಜಿತಸ್ಥಿತಿಯಲ್ಲಿದ್ದ ಒಳ್ಳೇ ಸಂಪತ್ತಿನಿಂದ ತುಂಬಿದ, ಸುವ್ಯವಸ್ಥಿತ ರಾಜ್ಯವಾಗಿತ್ತೆಂದು ಕಂಡು ಬರುತ್ತದೆ. ಮಲ್ಲಸರ್ಜನು ವೀರಶೈವಮತೀಯನಾದರೂ ಆತನು ಸರ್ವ ಮತಗಳನ್ನು ಸರಿಯಾಗಿ ಪ್ರೀತಿಸುವವನೂ ಸಾಹಿತ್ಯ ಪೋಷಕನೂ ಆಗಿದ್ದನು. ಈತನ ಸಭೆಯಲ್ಲಿ ಕೊಳಸೀ ರಂಗಾಚಾರ್ಯರಂತಹ ಬ್ರಾಹ್ಮಣ ಪಂಡಿತರೂ, ವ್ಯಂಗಿ ಚನ್ನಬಸಪ್ಪ, ಮುಳಗುಂದ ಜವಳೀ ಚನ್ನಬಸಪ್ಪ ಮೊದಲಾದ ವೀರಶೈವ ಪಂಡಿತರೂ ಇದ್ದರು. ಕಿತ್ತೂರನ್ನೂ ಮಲ್ಲಸರ್ಜನನ್ನೂ ಕುರಿತು ಅನೇಕ ಪದಗಳನ್ನು ಹಾಗೂ "ಮಲ್ಲಸರ್ಜನ ಕಾವ್ಯ" ವನ್ನೂ ರಚಿಸಿದ ರುದ್ರಕವಿಯು ಇದ್ದುದೂ ಈತನ ಕಾಲಕ್ಕೆಯೇ. ಮಲ್ಲಸರ್ಜನ ಕಾವ್ಯದ ಕರ್ತೃ ಗುರುಶಾಂತನೆಂಬ ಕವಿಯೆಂಬ ಊಹೆಯೂ ಉಂಟು. ಮಲ್ಲಸರ್ಜನ ಸ್ತುತಿಪರವಾಗಿ ಇರುವ "ಮಲ್ಲೇಂದ್ರ ಮಾನಸೋಲ್ಲಾಸ ತರಂಗಿಣಿ" ಎಂಬ ಗ್ರಂಥವನ್ನು ಬರೆದ ಅಮೃತೇಶ್ವರನೆಂಬ ಕವಿಯೂ ಈತನ ಕಾಲಕ್ಕೆಯೇ ಇದ್ದನು. ಇವರಲ್ಲದೆ ಮುನಿಪುರದ ನೀಲಕಂಠಾರ್ಯರೂ ಮೂಗುಂಡಿ ಬಸವ, ದೇವರ ಶೀಗಿಹಳ್ಳಿ ರುದ್ರಗೌಡಾ, ಬೆಟಗೇರಿ ಶಿವಲಿಂಗ ಶಾಸ್ತ್ರಿಗಳೆಂಬವರೂ ಆಸ್ಥಾನ ಕವಿಗಳಾಗಿದ್ದಂತೆ ಐತಿಹ್ಯವುಂಟು. ಮಲ್ಲಸರ್ಜನ ದೊರೆಯು ಜಂಗಮದಾಸೋಹಕ್ಕೆ ಪ್ರಸಿದ್ಧನಾಗಿದ್ದನು. ಇದಕ್ಕೆ ಆಗಿನ ಕಾಲದ ಕವಿಗಳು ಆತನನ್ನು "ಜಂಗಮ ದಾಸೋಹ ಪ್ರಿಯः" ನೆಂದು ಕೊಂಡಾಡಿದ್ದುದೇ ಸಾಕ್ಷಿಯಾಗಿದೆ. ಈ ರೀತಿ ವೈಭವ ಸಂಪನ್ನವಾಗಿ ರಾಜ್ಯವನ್ನಾಳಿದ ದೊರೆ ಮಲ್ಲಸರ್ಜನನಿಗೆ ರುದ್ರಮ್ಮ, ಚನ್ನಮ್ಮ ಎಂಬ ಇಬ್ಬರು ಹೆಂಡರೂ, ಶಿವರುದ್ರ, ವೀರಪ್ಪಸರ್ಜ, ಶಿವಲಿಂಗರುದ್ರ ಉರ್ಫ ಬಾಳಾಸಾಹೇಬ ಎಂಬ ಮೂವರು ಮಕ್ಕಳು ಇದ್ದರು. ಮಲ್ಲಸರ್ಜನು ತನ್ನ ರಾಜ್ಯ

ದಲ್ಲಿಯ ದೇಶಪಾಂಡೆ, ಪಾಟೀಲ, ಕುಲಕರ್ಣಿ, ಹಿರೇಮಠ ಜೋಶಿ, ಪೂಜಾರಿ ಮುಂತಾದವರ ವತನಗಳನ್ನು ಕಾಯ್ದಿದ್ದು, ಅವರಿಗೆ ಕಾಲ ಕಾಲಕ್ಕೆ ಇನಾಮುಗಳನ್ನು ಹಾಕಿ ಕೊಡುತ್ತಿದ್ದನೆಂಬ ಬಗ್ಗೆ ಸನದುಗಳು ಈಗಲೂ ನೋಡಲು ಸಿಗುತ್ತವೆ. ಈ ರೀತಿ ವೈಭವದಿಂದ ಆಳಿದ ಮಲ್ಲ ಸರ್ಜ ದೊರೆಯು ಕ್ರಿ. ಶ. ೧೮೧೬ ರಲ್ಲಿ ಮರಣಹೊಂದಿದನು. ಕಿತ್ತೂರ ದೊರೆಗಳ ಗದ್ದುಗೆಗಳು ಕಿತ್ತೂರಿನಲ್ಲಿರುವ ಕಲ್ಲಮಠದಲ್ಲಿ ಈಗಲೂ ನೋಡಲು ಸಿಗುತ್ತವೆ.

ಒಬ್ಬನ ಕಾಲಕ್ಕೆ ಊರ್ಜಿತ ಸ್ಥಿತಿಗೆ ಹೋದ ಮನೆತನವಾಗಲಿ ಅಥವಾ ರಾಜ್ಯವಾಗಲಿ ಮತ್ತೊಬ್ಬನ ಕಾಲಕ್ಕೆ ಇಳಿಮುಖವಾಗುವದು ನಿಸ ರ್ಗದ ನಿಯಮವೇನೋ ! ಇದೇ ನಿಯಮದಂತೆ ಮಲ್ಲಸರ್ಜನ ಕಾಲಕ್ಕೆ ಸಕಲ ರೀತಿಯಿಂದಲೂ ಸಮೃದ್ಧಿಯನ್ನೈದಿದ ಕಿತ್ತೂರ ಸಂಸ್ಥಾನವು ಆತನ ಮಗನಾದ ಶಿವಲಿಂಗರುದ್ರಸರ್ಜ ಉರ್ಫ ಬಾಪು ಸಾಹೇಬನ ಕಾಲಕ್ಕೆ ಅವನತಿಯ ಹಾದಿಯನ್ನು ಹಿಡಿಯಿತು. ಈ ಶಿವಲಿಂಗರುದ್ರಸರ್ಜನು ತನ್ನ ತಂದೆಯಂತೆ ವಿದ್ವಾಂಸನೂ ಆಗಿದ್ದನು. ಪೇಶ್ವೆ ಸರಕಾರದ ಅವನತಿ ಯನ್ನು ಕಂಡುಕೊಂಡು ಈತನು ಮುಂದಾಲೋಚನೆಯಿಂದ ಕಂಪನಿ ಸರ ಕಾರದ ಸರ್‌ಜಾನ್ ಮನ್ರೋನ ಕೂಡ ಒಪ್ಪಂದವನ್ನೂ ಮಾಡಿಕೊಂಡಿ ದ್ದನು. ಈತನು ಕೇವಲ ೮ ವರ್ಷಗಳ ಕಾಲ ರಾಜ್ಯವಾಳಿ ಕ್ರಿ. ಶ. ೧೮೨೪ ರಲ್ಲಿ ಮರಣಹೊಂದಿದನು.

**ಇಳಿಗಾಲದ ಆರಂಭ:—** ಶಿವಲಿಂಗರುದ್ರಸರ್ಜನಿಗೆ ಮಕ್ಕಳಿದ್ದಿಲ್ಲ. ಕಾರಣ ಈತನಿಗೆ ದತ್ತಕ ಮಗನೊಬ್ಬನನ್ನು ಮಾಡಿ, ಚನ್ನವ್ವರಾಣಿಯೇ ಕಿತ್ತೂರಿನ ರಾಜ್ಯದಾಡಳಿತವನ್ನು ನೋಡತೊಡಗಿದಳು. ಆದರೆ ಕೆಲವು ದ್ರೋಹಿಗಳು ದತ್ತಕ ವಿಧಾನವು ಶಿವಲಿಂಗರುದ್ರಸರ್ಜನ ಮರಣದನಂತರ ಆಗಿದೆಯೆಂದು ಆಗಿನ ಧಾರವಾಡದ ಕಲೆಕ್ಟರನಾದ ಥ್ಯಾಕರೇ ಸಾಹೇಬ ರಿಗೆ ತಿಳಿಸಿದರು. ಥ್ಯಾಕರೆಯು ದತ್ತಕ ಸಂಬಂಧಿ ತನ್ನ ಸರಕಾರಕ್ಕೆ ಬರೆದನು. ಈಸ್ಟ ಇಂಡಿಯಾ ಕಂಪನಿಯು ದತ್ತಕವನ್ನು ರದ್ದು ಮಾಡಿ ಕಿತ್ತೂರ ರಾಜ್ಯದಾಡಳಿತೆಯನ್ನು ಸಂಪಡಿಸಲು ಕಿತ್ತೂರಿಗೆ ಹೋದನು. ಈ ವಿಷಯವು ಚನ್ನವ್ವ ರಾಣಿಗೆ ಸರಿಬರಲಿಲ್ಲ. ಅವಳ ಸ್ವಾತಂತ್ರ್ಯಪ್ರಿಯ ತೆಯು ಅವಳನ್ನು ಜಾಗ್ರತಗೊಳಿಸಿತು. ತನ್ನ ನಾಡಿನ ಸ್ವಾತಂತ್ರ್ಯವನ್ನು

ಕಾಯ್ದುಕೊಳ್ಳುವ ಸಲುವಾಗಿ ಅವಳು ತನ್ನ ನಾಡಿನ ವೀರರನ್ನು ಹುರಿಗೊಳಿಸಿದಳು. ಕಿತ್ತೂರಿನ ಕೋಟೆಯ ಬಾಗಿಲು ಪರಕೀಯರು ಪ್ರವೇಶಿಸದಂತೆ ಬಂದಾಯಿತು. ತೋಫುಗಳು ಗರ್ಜಿಸಿದವು. ಥ್ಯಾಕರೆಗೂ ಚನ್ನಮ್ಮಾಸಿಗೂ ನಡೆದ ಯುದ್ಧದಲ್ಲಿ ಥ್ಯಾಕರೆಯು ಸತ್ತನು, ಇದರಿಂದ ಸಿಡಿಮಿಡಿಗೊಂಡ ಕಂಪನಿ ಸರಕಾರವು ಕಮೀಶನರ ಚಾಪ್ಲಿನನ ನೇತೃತ್ವದಲ್ಲಿ ಒಂದು ದೊಡ್ಡ ಸೈನ್ಯವನ್ನು ಕಳಿಸಿತು. ಚಾಪ್ಲಿನನ ದೊಡ್ಡ ಸೈನ್ಯದ ಎದುರು, ಕಿತ್ತೂರಿನ ಸಣ್ಣ ಸೈನ್ಯವು ತತ್ತರಿಸಿತು. ಅಲ್ಲದೆ ಕುತಂತ್ರದಿಂದ ಮದ್ದುಗುಂಡುಗಳು ನಿರುಪಯೋಗಿಯಾಗುವಂತೆ ಮಾಡಲಾಯಿತು. ಕಿತ್ತೂರ ಕೋಟೆಯ ಗೋಡೆಗಳು ಬ್ರಿಟಿಷರ ತೋಫಗಳ ಹೊಡೆತದಿಂದ ಸಡಿಲಾದವು ಕೋಟೆಯು ಕುಸ್ಸಳಿಸಿತು. ಆದರೂ ಚನ್ನವ್ವನು ಎದೆಗುಂದಲಿಲ್ಲ. ತನ್ನ ವೀರರನ್ನು ಹುರಿದುಂಬಿಸಿದಳು. ಬಿಚ್ಚುಗತ್ತಿಯಿಂದ ವೈರಿಗಳ ದಂಡನ್ನು ಪ್ರವೇಶಿಸಿ, ಎದುರಾದವರ ರುಂಡಗಳನ್ನು ಚಂಡಾಡತೊಡಗಿದಳು. ಆದರೂ ಸಹ ಕಿತ್ತೂರ ವೀರರ ಆಟ ಸಾಗಲಿಲ್ಲ. ಕಿತ್ತೂರ ಕೇಸರಣಿಯನ್ನು ಸೆರೆಹಿಡಿಯಲಾಯಿತು. ಮುಂದೆ ಅವಳನ್ನು ಬೈಲಹೊಂಗಲದ ಸೆರೆಮನೆಯಲ್ಲಿಡಲಾಯಿತು. ಅಲ್ಲಿಯೇ ಅವಳು ಮರಣಹೊಂದಿದಳು.

ರಣರಂಗದಲ್ಲಿ ಚಂಡಿಯಂತೆ ಇದ್ದರೂ ಸಹ ಚನ್ನಮ್ಮನು ಬಹು ಕರುಣಾಶಾಲಿಯಾಗಿದ್ದಳು. ತನ್ನ ಸೆರೆಯಲ್ಲಿ ಸಿಕ್ಕ ಬ್ರಿಟಿಶರ ಚಿಕ್ಕಮಕ್ಕಳನ್ನು ಅವಳು ತನ್ನ ಮಕ್ಕಳಂತೆ ನಡೆಸಿಕೊಂಡು, ಅವರನ್ನು ಮರತ ಕಳುಹಿಸಿದ್ದುದೇ ಇದಕ್ಕೊಂದು ಉದಾಹರಣೆ! ಅವಳು ಬಹು ಸುಂದರಳೂ, ಪತಿವ್ರತೆಯೂ ಇದ್ದಳು. ರಾಜ್ಯಕಾರ್ಯವನ್ನು ನಡೆಯಿಸುವದರಲ್ಲಿ ಬಹು ಕುಶಲಳೂ, ಮುಂಧೋರಣೆ ಇದ್ದವಳೂ ಆಗಿದ್ದಳು. ಇದಕ್ಕೆ ಉದಾಹರಣೆಯಂದರೆ ಚನ್ನಮ್ಮನು ಕೊಲ್ಹಾಪುರ ಮುಂತಾದವರ ಸಂಗಡ ಬ್ರಿಟಿಶರ ವಿರುದ್ಧ ಹೋರಾಡಲು ತನಗೆ ಸಹಾಯ ಮಾಡಬೇಕೆಂದು ನಡೆಯಿಸಿದ ಸಂಧಾನಗಳೇ ಎಂದು ಹೇಳಬಹುದು.

ಕಿತ್ತೂರಿನ ಪತನವಾಯಿತು. ಕಿತ್ತೂರ ರಾಜ್ಯದ ಬೊಕ್ಕಸವು ಕಂಪನಿ ಸರಕಾರಕ್ಕೆ ಸಿಕ್ಕಿತು. ಆಗ ಅವರಿಗೆ ೧೬ ಲಕ್ಷ ರೂಪಾಯಿಗಳೂ, ೪ ಲಕ್ಷ ಬೆಲೆ ಬಾಳುವ ವಸ್ತು ಒಡವೆಗಳೂ, ೧೧೦ ಒಂಟೆಗಳೂ ಎಷ್ಟೋ ಆನೆ

ಕುದುರೆಗಳೂ, ೩೬ ತೋಫುಗಳೂ ಬೇರೆ ಯುದ್ಧದ ಸಾಮಗ್ರಿಗಳೂ ದೊರೆತವು. ಇದರಿಂದ ಕಿತ್ತೂರ ಸಂಸ್ಥಾನದ ಸಂಪತ್ತಿನ ಕಲ್ಪನೆಯು ನಮಗಾಗಬಹುದಾಗಿದೆ.

**ಸಂಗೊಳ್ಳಿರಾಯ:—** ಕ್ರಿ. ಶ. ೧೮೨೪ ರ ಡಿಶಂಬರದಲ್ಲಿ ಕಿತ್ತೂರ ದೇಸಗತಿಯು ಕಂಪನಿ ಸರಕಾರದ ವಶವಾಯಿತು. ಆದರೂ ಸಹ ಕಿತ್ತೂರ ವೀರರ ರಕ್ತದಲ್ಲಿ ಹರಿಯುವ ಸ್ವಾತಂತ್ರ್ಯಪ್ರಿಯತೆಯು ಕಡಿಮೆಯಾಗಲಿಲ್ಲ. ಕಿತ್ತೂರ ಸಂಸ್ಥಾನವನ್ನು ಬ್ರಿಟಿಶರ ಅಂಕಿತದಿಂದ ಮುಕ್ತಮಾಡುವ ಪ್ರಯತ್ನಗಳು ಗುಪ್ತವಾಗಿ ನಡೆದವು. ಇದಕ್ಕೆ ಸೆರೆಮನೆಯಲ್ಲಿದ್ದ ಅವ್ವಚನ್ನವ್ವನ ಪ್ರಚೋದನೆಯೂ ಇತ್ತೆಂದು ಕೆಲವರು ಊಹಿಸುತ್ತಾರೆ. ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ಮುಂದೆ ಬಂದವನೆಂದರೆ ಸಂಗೊಳ್ಳಿ ರಾಯಣ್ಣ, ಈತನು ಮೊದಲು ಕಿತ್ತೂರಿನ ಸೈನ್ಯದಲ್ಲಿದ್ದವನೇ ? ಯುದ್ಧದನಂತರ ತನ್ನ ಹಳ್ಳಿಯಾದ ಸಂಗೊಳ್ಳಿಗೆ ಹೋಗಿ, ಊರ ಓಲೆಕಾರಿಕೆಯನ್ನು ಮಾಡುತ್ತಿದ್ದನು. ಊರ ಕುಲಕರ್ಣಿಯು ಕೊಡುತ್ತಿದ್ದ ಕಿರುಕುಳಗಳಿನ್ನು ಸ್ವಾತಂತ್ರ್ಯವೃತ್ತಿಯ ರಾಯಣ್ಣನಿಗೆ ಸಹಿಸುವದಾಗಲಿಲ್ಲ. ಕೊನೆಗೊಮ್ಮೆ ರಾಯಣ್ಣನು ಆ ಕುಲಕರ್ಣಿಯನ್ನು ಕೊಂದು, ಬ್ರಿಟಿಶರಾಳಿಕೆಯನ್ನು ಸಹಿಸೆನೆಂದೂ, ಕಿತ್ತೂರಿನ ಸಂಸ್ಥಾನವನ್ನು ಪುನಃ ಕಟ್ಟುವೆನೆಂದೂ ಶಿವಲಿಂಗರುದ್ರಸರ್ಜನ ದತ್ತಕ ಮಗನಿಗೆ ಅದನ್ನು ಕೊಡಿಸುವೆನೆಂದೂ ಸಾರಿದನು. ಅಲ್ಲಲ್ಲಿ ಹಲವು ಜನ ವೀರರು ಅವನನ್ನು ಹಿಂಬಾಲಿಸಿದರು. ರಾಯಣ್ಣನು ಬೀಡಿ ಮಾಮಲೇದಾರ ಕಚೇರಿಯನ್ನು ಸುಟ್ಟನು. ಅಲ್ಲಿಂದಂತೂ ಅವನಲ್ಲಿ ಸಾವಿರಾರು ಜನ ಬಂದು ಕೂಡಿದರು. ಅವರು ಬಾಳಗುಂದ, ಹಂಡಿ, ಬಡಗನಾಥ ಗುಡ್ಡಗಳಲ್ಲಿ ಅಡಗಿಕೊಂಡು, ಸುತ್ತಲಿನ ಪ್ರದೇಶಗಳಲ್ಲಿ ಕೊಲೆ ಸುಲಿಗೆಗಳನ್ನು ಆರಂಭಮಾಡಿದರು. ರಾಯಣ್ಣನ ಪ್ರಯತ್ನವು ಕೊಲೆಸುಲಿಗೆಗಳಲ್ಲಿಯೇ ಮುಕ್ತಾಯವಾಯಿತೇ ಹೊರತು ಕಿತ್ತೂರನ್ನು ಬ್ರಿಟಿಷರ ಶೃಂಖಲೆಗಳಿಂದ ಮುಕ್ತಮಾಡಿ, ಕಿತ್ತೂರ ದೇಶಗತ್ತನ್ನು ಪುನಃ ಸ್ಥಾಪಿಸುವದು ಸಾಧ್ಯವಾಗಲಿಲ್ಲ. ಮುಂದೆ ಸ್ವಲ್ಪ ದಿವಸಗಳಲ್ಲಿ ಆತನನ್ನು ಮೋಸದಿಂದ ಹಿಡಿದು ನಂದಗಡದಲ್ಲಿ ಗಲ್ಲಿಗೇರಿಸಿದರು. ಅಲ್ಲಿ ಆತನ ಸಮಾಧಿ ಇನ್ನೂ ಇದೆ.

ಹೀಗಾಗಿ ಒಮ್ಮೆ ಬಿದ್ದ ಕಿತ್ತೂರ ದೇಸಗತಿಯು ತನ್ನ ಹೆಸರನ್ನು ಚಿರಂತನವಾಗಿ ಸ್ಥಾಪಿಸಿ ಹೋಗಿದೆ. ೨೩೯ ವರ್ಷಗಳ ತನ್ನಾಯುಷ್ಯದಲ್ಲಿ

ಅದು ಕೇವಲ ತನಗಷ್ಟೇಅಲ್ಲ, ಇಡೀ ಕನ್ನಡನಾಡಿಗೂ ಕೀರ್ತಿಬರುವಂತೆ ಬಾಳಿಹೋಗಿದೆ; ಆಳಿಹೋಗಿದೆ. ಸಾಹುಕಾರಿಕೆಯನ್ನು ಮಾಡುತ್ತ ತಮ್ಮ ಶೌರ್ಯದಿಂದ ಒಂದು ಸಂಸ್ಥಾನವನ್ನು ಕಟ್ಟಿದ ದೇಸಾಯರ ಶೌರ್ಯವು ಸ್ಫೂರ್ತಿದಾಯಕವದೆ. ಅವರು ಅಲ್ಲಲ್ಲಿ ಕಟ್ಟಿದ ಕಿಲ್ಲೆಗಳು, ಕಿತ್ತೂರಿನಲ್ಲಿಯ ಗುಡಿ, ಮಠಗಳು ಅವರ ನೆನಪನ್ನು ಜನರ ಮನದಲ್ಲಿ ನೆಟ್ಟು ನಿಲ್ಲುವಂತೆ ಮಾಡುತ್ತವೆ. ಅವರ ಸರ್ವಮತ ಪ್ರೇಮವು, ಕವಿಗಳ ಸಾಹಿತ್ಯ ಪೋಷಣೆ ಆದರಣೀಯವಾಗಿವೆ.

ಹೀಗೆ ಕಿತ್ತೂರ ದೇಸಗತ್ತಿನ ರಾಜರಾಣಿಯರು, ಅನೇಕ ವೀರರು ನಮ್ಮ ನಾಡಿನ ಜನರ ಮನಸ್ಸಿನ ಮೇಲೆ ಒಳ್ಳೇ ಪ್ರಭಾವವನ್ನು ಬೀರಿದ್ದಾರಲ್ಲದೆ ನಾಡನುಡಿಗಳ ಸೇವೆಯ ಬಗ್ಗೆ ಸ್ಫೂರ್ತಿಯ ಸೆಲೆಯಾಗಿ ನಿಂತಿದ್ದಾರೆ. ಅಂತೆಯೇ ಕಿತ್ತೂರ ವೀರರ ಬಗ್ಗೆ, ಕಿತ್ತೂರಿನ ದೊರೆಗಳ ಬಗ್ಗೆ, ಕಿತ್ತೂರ ಕೇಸರಿಣಿ ಚನ್ನಮ್ಮನ ಬಗ್ಗೆ, ಜನರು ಭಕ್ತ್ಯಾದರಗಳನ್ನು ತಾಳುತ್ತಾರೆ. ಅವರನ್ನು ಕುರಿತು ಅನೇಕ ಪದಗಳನ್ನೂ, ಲಾವಣಿಗಳನ್ನೂ ರಚಿಸಿ ಈಗಲೂ ಹಾಡುತ್ತಾರೆ. ಇಂತಹ ಈ ಪದಗಳಲ್ಲಿಯೂ ಇಂದಿಗೂ ಜನಮನದಲ್ಲಿ ಹೆಮ್ಮೆ ಹುಮ್ಮಸುಗಳನ್ನು ಹುಟ್ಟಿಸುವುದರಲ್ಲಿಯೂ ಕಿತ್ತೂರ ದೇಸಗತಿಯು ಅಮರವಾಗಿ ನಿಂತಿದೆಯೆಂದು ಭಾವಿಸಬಹುದಾಗಿದೆಯಲ್ಲವೇ ?



## ವಚನಶಾಸ್ತ್ರ ಪಿತಾಮಹ

# ಶ್ರೀ ಹಳಕಟ್ಟಿಯವರಿಗೆ ಕನ್ನಡಿಗರು ನಿಧಿ ಅರ್ಪಿಸಿ, ಸನ್ಮಾನಿಸಬೇಕು.

[ಲೇ:– ಅನ್ನದಾನೀಶ್ವರ ವಿರಕ್ತಮಠ, ಬಿ.ಎ.ಆನರ್ಸ, ಬಿ.ಟಿ. ಮು. ಹುಬ್ಬಳ್ಳಿ]



**ವ್ಯಕ್ತಿತ್ವ:**— ಶ್ರೀ ಹಳಕಟ್ಟಿಯವರ ವ್ಯಕ್ತಿತ್ವವು ಗಂಭೀರವಾಗಿದೆ. ಆ ಗಾಂಭೀರ್ಯವು ಆತ್ಮವಿಶ್ವಾಸ, ಕರ್ತವ್ಯದಕ್ಷತೆ, ಸಂಶೋಧನ ದೃಷ್ಟಿ, ತಾತ್ವಿಕ ವಿಚಾರ, ಸಮಾಜ ಕಲ್ಯಾಣ ಭಾವ, ಮುಂತಾದ ಸದ್ಗುಣಗಳಿಂದ ಪ್ರಾಪ್ತವಾದುದಾಗಿರುವದು. ಅವರು ನಿರ್ಡಾಂಭಿಕರೂ, ಸರಳರೂ, ಪ್ರಾಮಾಣಿಕರೂ, ಸತ್ಯನಿಷ್ಠರೂ ಆಗಿರುವರು. ಶಿವಸಂಸ್ಕೃತಿಯ ಸಾತ್ವಿಕ ತೇಜಸ್ಸು ಮತ್ತು ವೈಜ್ಞಾನಿಕ ವಿಚಾರಗಳ ಪ್ರಭಾವ ಇವೆರಡರ ಸುಂದರ ಸಮನ್ವಯವನ್ನು ಅವರಲ್ಲಿ ಕಾಣಬಹುದು.

**ಕಾರ್ಯಕ್ಷೇತ್ರ:**— ಡಾ॥ ರಾ. ಬ. ಹಳಕಟ್ಟಿಯವರು ವಿಸ್ತಾರವಾದ ಕಾರ್ಯಕ್ಷೇತ್ರದಲ್ಲಿ ದುಡಿದಿರುವರು. ಕನ್ನಡ ನಾಡಿಗೆ ವಿವಿಧ ಸೇವೆಯನ್ನು ಸಲ್ಲಿಸಿರುವರು. ಕನ್ನಡನಾಡಿನ ಒಕ್ಕಲತನದ ಅಭಿವೃದ್ಧಿಗೋಸುಗ ಅವರು ಸೇವೆ ಸಲ್ಲಿಸಿರುವರು. ಸಹಕಾರ ಚಳವಳಿಗೆ ಬೆಂಬಲ ನೀಡಿ ಕನ್ನಡಿಗರಲ್ಲಿ ಸಹಕಾರ ವೃತ್ತಿ ಬೆಳೆಯಲಿಕ್ಕೆ ಸಹಾಯ ನೀಡಿರುವರು. ಶಿಕ್ಷಣ ಕ್ಷೇತ್ರದಲ್ಲಿ ಒಳ್ಳೇ ಆಸ್ಥೆಯಿಂದ ಕೆಲಸ ಮಾಡಿದ್ದಾರೆ. ವಿಧಾನಸಭೆ, ವಿಶ್ವವಿದ್ಯಾಲಯ ಮುಂತಾದ ರಂಗಗಳಲ್ಲಿಯೂ ತಮ್ಮ ನಿಷ್ಠಾವಂತ ಬುದ್ಧಿಯ ಬೆಂಬಲದಿಂದ ಕಾರ್ಯ ಮಾಡಿರುವರು. ವಿಜಾಪುರದಲ್ಲಿಯ ಎಲ್ಲ ಸಾರ್ವಜನಿಕ ಸಂಘ ಸಂಸ್ಥೆಗಳ ಕಾರ್ಯಗಳಲ್ಲಿ ಇವರಿಗೆ ಮನ್ನಣೆಯ ಸ್ಥಾನ ಯಾವಾಗಲೂ ದೊರೆಯುತ್ತಿತ್ತು. ವಿಜಾಪುರದಲ್ಲಿ ಒಮ್ಮೆ ತರುಣಸಂಘದವರೇರ್ಪಡಿಸಿದ ವ್ಯಾಖ್ಯಾನ ಮಾಲೆಯಲ್ಲಿ ಮುಖ್ಯ ಅತಿಥಿಯಾಗಿ ನಾನು ಹೋದಾಗ ಇವರು ಸಭಾಧ್ಯಕ್ಷರಾಗಿ ಸಮತೋಲ ವಿಚಾರಗಳನ್ನು ಸಾರ್ವಜನಿಕರ ಮುಂದೆ ಇಡುವ ರೀತಿಯನ್ನು ನೋಡಿ ನನಗೆ ಒಳ್ಳೇ ಪರಿಣಾಮ

ವಾಯಿತು. ನನ್ನ ಭಾಷಣಕ್ಕೆ ಅವರು ಮೆಚ್ಚಿ ಸಾತ್ವಿಕ ಉತ್ತೇಜನ ಕೊಟ್ಟರು. ಈ ಮಹನೀಯರ ಉತ್ತೇಜನವು ನನಗೆ ಪ್ರಗತಿ ಹೊಂದಲು ಸಹಾಯಕವಾಯಿತು. ತರುಣರಲ್ಲಿಯ ಬೇರೆ ಬೇರೆ ಶಕ್ತಿ, ಕಲೆಗಳನ್ನು ಬಹಿರ್ಗರಿಸಿ, ಪ್ರಕಾಶಪಡಿಸಿದವು. ನಾಡುನುಡಿಗಳ ಏಳಿಗೆಯಾಗುವದೆಂಬ ಮಾತನ್ನು ಡಾ|| ರಾ. ಬ. ಹಳಕಟ್ಟಿಯವರಿಂದ ಕನ್ನಡಿಗರು ಕಲಿತುಕೊಳ್ಳ ಬೇಕು. ನನ್ನ ಲೇಖನ ಕಲೆಯು ಕನ್ನಡಿಗರಿಗೆ ಉಪಯೋಗಬೀಳುವಂತೆ ೨-೩ ವರ್ಷ ಶಿವಾನುಭವ ಮಾಸಪತ್ರಿಕೆಯಲ್ಲಿ ಅವಕಾಶ ಕಲ್ಪಿಸಿದರು. ಇದ ರಂತೆ ಅನೇಕ ತರುಣ ಕಾರ್ಯಕರ್ತರಿಗೆ ಪ್ರೋತ್ಸಾಹ ಕೊಟ್ಟಿದ್ದಾರೆ.

**ಪತ್ರಿಕಾ ವ್ಯವಸಾಯಃ—** ಪತ್ರಿಕಾ ವ್ಯವಸಾಯದಲ್ಲಿ ಡಾ. ಹಳಕಟ್ಟಿ ಯವರು ಬಹಳ ದುಡಿದಿರುತ್ತಾರೆ. ಶಿವಾನುಭವ ಮಾಸಪತ್ರಿಕೆ, ನವ ಕರ್ನಾಟಕ ವಾರಪತ್ರಿಕೆ, ಗ್ರಂಥಪ್ರಕಟನೆಗಳ ಮುಖಾಂತರ ಕನ್ನಡ ನಾಡು ನುಡಿಗಳಿಗೆ ಉಪಕಾರ ಮಾಡಿರುವರು. ಇವರ ಲೇಖಗಳಲ್ಲಿ ಸಾತ್ವಿಕ ತೇಜಸ್ಸು ಮಿನುಗುತ್ತದೆ. ವಿಚಾರಗಳಲ್ಲಿ ಸಮತೋಲನವು ಇರುತ್ತದೆ. ಶೈಲಿಯಲ್ಲಿ ಸರ ಳತೆ, ಸತ್ವಗಳಿರುತ್ತವೆ. ಸಂಶೋಧಕ ವೃತ್ತಿಯಂತೂ ಇವರ ಬರೆಹಗಳ ವೈಶಿಷ್ಟ್ಯವು. ಸತ್ಯಾನ್ವೇಷಬುದ್ಧಿಯೂ, ಪಕ್ಷಾತೀತ ವಿಚಾರ ಮಾಡುವ ಪ್ರವೃತ್ತಿಯೂ, ನಾಡುನುಡಿಗಳ ಅಭಿವೃದ್ಧಿಗೂ, ರಾಷ್ಟ್ರೀಯ ನಿರ್ಮಾಣಕ್ಕೂ ಅತ್ಯಗತ್ಯವೆಂಬುದನ್ನು ಇವರಿಂದ ಕಲಿತುಕೊಳ್ಳಬಹುದು.

**ಸಂಸ್ಕೃತಿ ಮತ್ತು ಸಾಹಿತ್ಯ ಪ್ರಸಾರ:—** ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟತೇಜಸ್ಸು-ಓಜಸ್ಸುಗಳುಳ್ಳ, ಜನಜೀವನದಲ್ಲಿ ಶಾಂತಕ್ರಾಂತಿಯಿಂದ ಸಂಸ್ಕೃತಿಯ ಅಮೃತವನ್ನು ಇಳಿಸಲೆತ್ನಿಸಿದ ಸಾಹಿತ್ಯದ ಪ್ರಕಾರಗಳಲ್ಲಿ ಅದ್ವಿತೀಯ ಆತ್ಮಶಕ್ತಿಯುಳ್ಳ, ಜೀವನ-ಸಂಸ್ಕೃತಿಯ ಪ್ರಭಾವದಿಂದ, ವಿಶ್ವ ಧರ್ಮದ ತಿರುಳಿನಿಂದ ಜಾಗತಿಕ ಶಾಂತಿಯನ್ನು ಪ್ರಸ್ಥಾಪಿಸುವಲ್ಲಿ ಅನು ಪಮ ಶಕ್ತಿಯುಳ್ಳ ಶಿವಶರಣರ ಮತ್ತು ಶಿವಶರಣೆಯರ ವಚನಸಾಹಿತ್ಯ ವೆಂಬ ಅಮೌಲ್ಯ ದೈವೀ ಸಂಪತ್ತು, ಸಾಂಸ್ಕೃತಿಕ, ಆಧ್ಯಾತ್ಮಿಕ, ನೈತಿಕ, ಜಗತ್ಕಲ್ಯಾಣ ಪ್ರೇರಣೆಯ ಅಮರಸಂಪತ್ತು, ಕನ್ನಡಿಗರಿಗೆ ದೊರೆತಿರುವದು ಡಾ. ಹಳಕಟ್ಟಿಯವರ ಸತತ ಸ್ವಾರ್ಥತ್ಯಾಗದ ಪರಿಶ್ರಮದಿಂದಲೇ ಎಂದು ಹೇಳಿದರೆ ಅತ್ಯುಕ್ತಿಯಲ್ಲ. ಶ್ರೀ. ಹಳಕಟ್ಟಿಯವರ ಕ್ರಿಯಾತ್ಮಕ ಯೋಗ ಶಕ್ತಿಯು ಅದ್ಭುತ ಕಾರ್ಯ ಮಾಡಬಲ್ಲದೆಂಬುದಕ್ಕೆ ಅವರ ವಚನಶಾಸ್ತ್ರ ಸಾರಗಳ ಮೂರು ಭಾಗಗಳೇ ದಿವ್ಯಸಾಕ್ಷಿಯಾಗಿ ನಿಂತುಕೊಂಡಿವೆ.

ಡಾ॥ ರಾ. ಬ. ಹಳಕಟ್ಟಿಯವರು ಹಳ್ಳಿಗಳಲ್ಲಿ ತಾಡ ಓಲೆಯ ಪ್ರಾಚೀನ ವಚನಗ್ರಂಥಗಳನ್ನು ಸಂಗ್ರಹಿಸಿದರು. ಅವುಗಳನ್ನು ಕಷ್ಟಪಟ್ಟು ಪರಿಶೋಧಿಸಿದರು. ಕ್ರೋಡೀಕರಿಸಿ ಜಗತ್ತಿನ ಬೆಳಕಿಗೆ ತಂದರು. ಕನ್ನಡಿಗರ ಮುಂದೆ ಇರಿಸಿದರು. ಕನ್ನಡ ಸಾಹಿತ್ಯ ಪರಿಷತ್ತು, ಧಾರವಾಡದಲ್ಲಿಯ ವಿದ್ಯಾವರ್ಧಕ ಸಂಘ, ಅಲ್ಲಲ್ಲಿಯ ಕರ್ನಾಟಕ ಸಂಘಗಳು, ವೀರಶೈವರ ದೊಡ್ಡ ಮಹಾಸಭೆ, ಶಿವಯೋಗಮಂದಿರದಂಥ ಸಂಸ್ಥೆಗಳು, ವೀರಶೈವ ಜಗದ್ಗುರುಗಳು ಇವರೇ ಮುಂತಾದ ಸಂಘ ಸಂಸ್ಥೆಗಳು ಮಾಡಲಾರದ ಮಹತ್ಕಾರ್ಯವನ್ನು ಒಬ್ಬ ಕರ್ಮಯೋಗಿಯು ಮಾಡಿದನು. ಆದುದರಿಂದ ಹಳಕಟ್ಟಿಯವರು ಒಬ್ಬ ವ್ಯಕ್ತಿಯಲ್ಲ; ಒಂದು ದೈವೀಶಕ್ತಿಯುಳ್ಳ ಸಂಸ್ಥೆ ಅವರು. ಇವರಿಗೆ ವಚನಶಾಸ್ತ್ರ ಪಿತಾಮಹ ಎಂಬ ನಾಮವು ಸಾರ್ಥಕವಾಗಿದೆ. ಚಿಕ್ಕ ಚಿಕ್ಕ ಪುಸ್ತಕ ಪ್ರಸಾರ, ಭಜನೆ, ಪ್ರಾರ್ಥನೆ, ಪ್ರಭಾತ ಫೇರಿ, ಭಾಷಣಗಳ ಮುಖಾಂತರ ಹಳ್ಳಿಗಳ ಸೇವೆಯನ್ನು ಮಾಡಲು ಮತ್ತು ಅನುಭವ ಹೊಂದಲು ಏಳು ಜನ ಮಿತ್ರರು ನಾವು ಕಾಲುನಡಿಗೆಯ ಯಾತ್ರೆಯನ್ನು ಕೈಕೊಂಡಿದ್ದೆವು. ಆಗ ಹಳಕಟ್ಟಿಯವರು ವಚನಗಳು ನಮಗೆ ಒಳ್ಳೇ ಸಹಾಯ ಮಾಡಿದವು. ವಚನಸಂಸ್ಕೃತಿಯೇ ನಮಗೆ ಕಷ್ಟಸಹಿಷ್ಣುತೆಯ, ಶಾಂತಿಯ, ಪರೋಪಕಾರ ವೃತ್ತಿಯ, ತಾಳ್ಮೆಯ, ಸೇವೆಯ ಪಾಠವನ್ನು ಕಲಿಸಿತು. ಆಗ ವಿಜಾಪುರದಲ್ಲಿ ಹಳಕಟ್ಟಿಯವರನ್ನು ಕಂಡೆವು. ಅವರು ಒಳ್ಳೇ ಕಳಕಳಿಯಿಂದ ಊಟ ಮಾಡಿಸಿ, ಮಧುರವಾದ ಮಾತುಗಳನ್ನಾಡಿದಾಗ ಸಂಸ್ಕೃತಿಯ ಬೇಕಿನಲ್ಲಿ ಮಿಂದಂತೆ ನಮಗೆ ಭಾಸವಾಯಿತು. ಹಳಕಟ್ಟಿಯವರ ಭೆಟ್ಟಿಯಾದಾಗ ನನಗಂತೂ ಸಂಸ್ಕೃತಿ ಪ್ರಸಾರಕ ಸಂಘ ಒಂದನ್ನು ಭೆಟ್ಟಿಯಾದಂತೆ ಅನಿಸಿತು. ಹಳಕಟ್ಟಿಯವರ ಪ್ರಭಾವದಿಂದ ಪ್ರೇರಿತರಾಗಿ ಶರಣಸಂದೇಶವನ್ನು ಜೀವನದುದ್ದಕ್ಕೂ ಬೀರಿ, ವೀರಶೈವ ಸಮಾಜಕ್ಕೂ ಕನ್ನಡ ನಾಡುನುಡಿಗೂ ಎಂದೂ ಮರೆಯಲಾಗದ ಸೇವೆ ಸಲ್ಲಿಸಿ ಲಿಂಗೈಕ್ಯರಾದ ಶ್ರೀ ಹರ್ಡೇಕರ ಮಂಜಪ್ಪನವರು ಕೂಡ ಮೂರು ದಿನ ವಚನಸಾಹಿತ್ಯ ಮತ್ತು ಸಂಸ್ಕೃತಿ ಪ್ರಸಾರಕ್ಕೆ ಸಂಚರಿಸಿದ್ದೆನು. ಆಗ ಶ್ರೀ ಮಂಜಪ್ಪನವರು ಅಮರ ವಚನಗಳ ಅರ್ಥವನ್ನೂ ಭಾವವನ್ನೂ ಬಗೆದುಂಬುವಂತೆ ವಿವರಿಸುವ ರೀತಿಯನ್ನು ಕಂಡು ಮನಸ್ಸಿನ ಮೇಲೆ ಅಚ್ಚಳಿಯದ ಪರಿಣಾಮವಾಯಿತು. ಆಗ ಹಳಕಟ್ಟಿಯವರನ್ನು ನೆನೆಸಿದೆನು. ವೇದಾಂತ ಸಿದ್ಧಾಂತಗಳ ಸಮನ್ವಯ ಮೂರ್ತಿಗಳಾಗಿದ್ದ ನನ್ನ ಪೂಜ್ಯ

ತಂದೆಯವರಾದ ಶ್ರೀ ಈಶ್ವರಯ್ಯನವರು ನಮ್ಮ ಮಠದಲ್ಲಿ ಪ್ರತಿವರುಷ ಪುರಾಣ, ಕೀರ್ತನ, ಪ್ರವಚನಗಳನ್ನು ಏರ್ಪಡಿಸುತ್ತಿದ್ದರು. ಅವರು ಒಮ್ಮೆ ವಚನಗಳನ್ನು ಇಂಪಾಗಿ ಹಾಡುವ ಸಂಗೀತಗಾರನನ್ನು ಕರೆಸಿದ್ದರು. ಆ ಭಗವದ್ಗೀತೆಗಳನ್ನು ಕೇಳಿದಾಗ ಆನಂದ ಉಕ್ಕೇರಿ ಕಣ್ಣೀರಾಗಿ ಹರಿದ ನೆನೆನೆನಪು ಇನ್ನೂ ಕುಣಿಯುತ್ತಿದೆ. ಆಗ ತಂದೆಯವರು ಹಳಕಟ್ಟಿಯವ ರಿಲ್ಲದಿದ್ದರೆ ಈ ಸಂಸ್ಕೃತಿಯೇ ಅಳಿ ಹೋಗುತ್ತಿತ್ತು ಎಂದು ಉದ್ಗಾರ ತೆಗೆದರು. ಈ ಪ್ರಕಾರ ಅನೇಕ ಸಂಘ ಸಂಸ್ಥೆಗಳು ವಚನ ಸ್ಪರ್ಧೆ, ವಚನ ಗಾಯನಗಳನ್ನೇರ್ಪಡಿಸಿದವು. ವಚನಶಾಸ್ತ್ರ ರಹಸ್ಯದಂಥ ಉದ್ಗ್ರಂಥವೂ, ಅನೇಕ ಚಿಕ್ಕ ಚಿಕ್ಕ ಗ್ರಂಥಗಳೂ, ನಾಟಕಗಳೂ, ಉತ್ತಂಗಿಯವರ ಪುಸ್ತಕವೂ ಇವೆಲ್ಲ ಹೊರಡಲು ಹಳಕಟ್ಟಿಯವರ ವಚನಗಳೇ ಪ್ರೇರಣೆ ನೀಡಿವೆ. ಇಂಥ ಘನತೆವೆತ್ತ ಸ್ವಾರ್ಥ ತ್ಯಾಗಿ ವಚನಶಾಸ್ತ್ರ ಪಿತಾಮಹರಿಗೆ ಕನ್ನಡಿಗರು ಕೊಡುವ ಕಾಣಿಕೆ ಏನು ? ಅವರ ಋಣ ತೀರಿಸುವದು ಹೇಗೆ ?

**ಕನ್ನಡಿಗರು ನಿಧಿ ಅರ್ಪಿಸಿ ಸನ್ಮಾನಿಸಬೇಕು:—** ಶ್ರೀ ಹಳಕಟ್ಟಿಯ ವರ ಗ್ರಂಥ ಪ್ರಕಟನೆಗೆ ಮೊದಲು ನಿಧಿ ಅರ್ಪಿಸಿದ ಶ್ರೇಯಸ್ಸು ಲಿಂಗೈಕ್ಯ ಮಂಜಪ್ಪ ಹರ್ಡೇಕರ ಅವರಿಗೆ ಸೇರುತ್ತದೆ. ಅದು ತೀರಿ ಹೋಯಿತು. ಅದರಿಂದ ಹಳಕಟ್ಟಿಯವರಿಗೆ ವಿಶೇಷ ಉಳಿತಾಯವೇನೂ ಆಗಲಿಲ್ಲ. ಬೆಳಗಾವಿ ಜಿಲ್ಲೆಯು ತನ್ನ ಅಲ್ಪ ಕಾಣಿಕೆಯನ್ನು ಅರ್ಪಿಸಿದೆ. ಬಡ ಕರ್ನಾಟಕ ವಿಶ್ವ ವಿದ್ಯಾಲಯವು ಡಿ. ಲಿಟ್ ಪದವಿ ಅರ್ಪಿಸಿತು. ಇನ್ನು ಇಡೀ ಕನ್ನಡನಾಡಿನ ಸಾಹಿತ್ಯಪರಿಷತ್ತು ಬರೀ ಸನ್ಮಾನಿಸಿತು. ಆದರೆ ನಿಧಿ ಅರ್ಪಿಸಬೇಕು, ಧಾರವಾಡದ ವಿದ್ಯಾವರ್ಧಕ ಸಂಘವು ನಿಧಿ ಅರ್ಪಿಸಬೇಕು. ಅಲ್ಲಲ್ಲಿಯ ಕರ್ನಾಟಕ ಸಂಘಗಳು ನಿಧಿ ಅರ್ಪಿಸಬೇಕು. ಕರ್ನಾಟಕ ಇತಿಹಾಸ ಸಂಶೋಧಕ ಸಂಸ್ಥೆಯು ನಿಧಿ ಅರ್ಪಿಸಬೇಕು. ಶಿವಯೋಗ ಮಂದಿರವು ನಿಧಿ ಅರ್ಪಿಸಬೇಕು. ವೀರಶೈವ ಜಗದ್ಗುರುಗಳು ನಿಧಿ ಅರ್ಪಿಸಬೇಕು. ಧಾರವಾಡದ ನವಕಲ್ಯಾಣ ಮಠದ ಕುಮಾರ ಸ್ವಾಮಿಗಳೂ, ಹುಬ್ಬಳ್ಳಿಯ ಸಾದರಹಳ್ಳಿಯವರ ಬಸವ ಮಂಟಪವೂ ನಿಧಿ ಅರ್ಪಿಸಬೇಕು. ಅಖಿಲ ಭಾರತ ಶಿವಾನುಭವ ಸಂಘ ಧಾರವಾಡ ಮುರುಘಾ ಮಠಾಧ್ಯಕ್ಷರಾದ ಶ್ರೀ ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿ

ಗಳು ನಿಧಿ ಅರ್ಪಿಸಬೇಕು. ಮಂಟಪ ಪೂಜೆಯು ಮತ್ತು ವೀರಶೈವ ಮಹಾ ಸಭೆಯ ಅಧ್ಯಕ್ಷರಾದ ಶ್ರೀ ಮ. ನಿ. ಪ್ರ. ಬಂಥನಾಳ ಸ್ವಾಮಿಗಳು ನಿಧಿ ಅರ್ಪಿಸಬೇಕು. ಕರ್ನಾಟಕ ವಿಶ್ವ ವಿದ್ಯಾಲಯವು ತನ್ನ ನಿಧಿ ಅರ್ಪಿಸಬೇಕು. ಹೀಗೆ ಇನ್ನೂ ಅನೇಕ ಮಹಿಳೆಯರ ಸಂಘ ಸಂಸ್ಥೆಗಳೂ ಅಕ್ಕನ ಬಳಗಗಳೂ ನಿಧಿ ಅರ್ಪಿಸಿ, ಸಾರ್ವಜನಿಕವಾಗಿ ವಚನಪಿತಾಮಹನನ್ನು ಸನ್ಮಾನಿಸಬೇಕು. ಕನ್ನಡ ನಾಡಿನ ಮುಂದಾಳುಗಳು ಇತ್ತ ಲಕ್ಷ ಹೊರಳಿಸಬೇಕು.

ಮಹಾತ್ಮಾ ಗಾಂಧಿಯವರ ಮಾತಿನಲ್ಲಿ ಹೇಳಬೇಕೆಂದರೆ, ವಚನ ಪಿತಾಮಹನಲ್ಲಿ ದೈವೀ ಸಂಪತ್ತಿದ್ದರೂ ಭೌತಿಕ ಸಂಪತ್ತಿಲ್ಲದ ದರಿದ್ರನಾರಾಯಣನು. ಜೀವಂತ ಬಸವಣ್ಣನನ್ನು ಸಲಹದೆ ಗುಡಿಯಲ್ಲಿಯ ಕಲ್ಲ ಬಸವಣ್ಣನನ್ನು ಪೂಜಿಸುವ ರೂಢಿಯ ವಿಚಾರಹೀನ ಪ್ರವೃತ್ತಿಯನ್ನು ಕನ್ನಡಿಗರು ಹಿಂಬಾಲಿಸಬಾರದು. ಜೀವಂತ ವಚನಗಳಂತಿದ್ದ ಹಳಕಟ್ಟಿಯವರನ್ನು ಸಲಹಿರಿ; ಸಾಕಿರಿ. ವೃದ್ಧಾಪ್ಯದಲ್ಲಿ ಸುಖವಾಗುವಂತೆ ಯತ್ನಿಸಿರಿ.

ಶ್ರೀಯುತ ಹಳಕಟ್ಟಿಯವರ ಪಶ್ಚಾತ್ ಶಿವಾನುಭವದ ಗತಿಯೇನು ? ಎಂಬ ವಿಚಾರವನ್ನು ಹಿಂದಿನಿಂದ ಮಾಡೋಣ. ಬೆಳಗಾಂವಿಯ ಬಿ. ಟಿ. ಕಾಲೇಜದ ವ್ಹಾಯಿಸ್ ಪ್ರಿನ್ಸಿಪಾಲರಾದ ಡಾಕ್ಟರ ಜವಳಿಯವರು ವಚನ ಮಂಟಪವನ್ನು ಸ್ಥಾಪಿಸಿ, ಹದಿನಾರು ಸಾವಿರ ( ೧೬೦೦೦ ) ರೂಪಾಯಿಗಳನ್ನು ವ್ಯರ್ಥವಾಗಿ ಹಾಳು ಮಾಡಿದರು. ಅವುಗಳನ್ನು ಹಳಕಟ್ಟಿಯವರ ಕಾರ್ಯಕ್ಕೆ ಕೊಟ್ಟಿದ್ದರೆ ಎಷ್ಟು ಒಳಿತಾಗುತ್ತಿತ್ತು ! ಜವಳಿಯವರಂತೆ ಯಾರೂ ಮಾಡದಿರಲಿ. ಏಕ ಮುಖದ ಪ್ರಯತ್ನಗಳು ನಡೆದರೆ ಜಗತ್ತಿನ ಪ್ರಗತಿಯಾಗಬಲ್ಲದು. ಹುಬ್ಬಳ್ಳಿಯ ಮೂರು ಸಾವಿರ ಮಠದ ಜಗದ್ಗುರುಗಳು ಧರ್ಮ ಗ್ರಂಥ ಪ್ರಕಟನೆಗೆ ೧ ಲಕ್ಷ ೭೫ ಸಾವಿರ ರೂಪಾಯಿಗಳನ್ನು ಕೊಟ್ಟು ಟ್ರಸ್ಟ ಮಾಡಿರುವರೆಂದು ಕೇಳಿದ್ದೇವೆ. ಆ ಟ್ರಸ್ಟಿನಲ್ಲಿ ಡಾಕ್ಟರ, ರಾವಬಹಾದ್ದೂರ ಶ್ರೀ ಹಳಕಟ್ಟಿಯವರಿಗೆ ಒಂದು ಸ್ಥಾನ ಸಿಗಬೇಕೆಂಬುದೇ ನಮ್ಮ ಹಾರೈಕೆ.

ಪ್ರತಿಯೊಂದು ಮನೆಯೂ ಶಿವಾನುಭವ ಸಂಘವಾಗಲಿ. ಹಳ್ಳಿ ಹಳ್ಳಿಗೂ ಶಿವಾನುಭವ ಸಂಘ, ವಾಚನಾಲಯಗಳು ಸ್ಥಾಪಿಸಲ್ಪಡಲಿ.

ಶಿವಾನುಭವ ಸಂಘಗಳ ಸಂಘಟನೆಯಾಗಲಿ. ಅ. ಭಾ. ಶಿವಾನುಭವ ಸಂಘವು ಈ ಕಾರ್ಯವನ್ನು ಮಾಡಲಿ. ಹಳ್ಳಿ ಹಳ್ಳಿಗಳಲ್ಲಿಯ ಗ್ರಂಥ ಸಂಗ್ರಹ ಪರಿಶೋಧನೆಗಳು ನಡೆಯಲಿ. ಇಡೀ ಕರ್ನಾಟಕದ ತುಂಬ ವಚನಸಂಸ್ಕೃತಿಯ ವಿಶ್ವಧರ್ಮದ ತೇಜಸ್ಸು ಹರಡಿ, ನಮ್ಮ ಭಾರತಕ್ಕೂ ಜಗತ್ತಿಗೂ ಶಾಂತಿ ಸಿಗಲಿ.



# ಇಷ್ಟಲಿಂಗ ಪೂಜೆ.

(ಬರೆದವರು:— ಶ್ರೀ ಶಿವಾನಂದಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ, (ಇಂಡಿ)



ಮೊದಲು ಇಷ್ಟಲಿಂಗವೆಂದರೇನೆಂದು ವಿಚಾರಿಸೋಣ. ಇಷ್ಟ-ಒಳ್ಳೆಯ, ಕಲ್ಯಾಣ, ಇಚ್ಛೆ, ಪ್ರೀತಿ, ಪತಿ, ಪ್ರಿಯ ಗೆಳೆಯ ಎಂದು ಅನೇಕ ಅರ್ಥಗಳುಂಟು. ಲಿಂಗ ಎಂದರೆ ಪರಮಾತ್ಮ, ದೇವ, ಪರಶಿವ ಎಂದು ಅರ್ಥಗಳುಂಟು. ಇಷ್ಟಲಿಂಗವೆಂದರೆ ಪ್ರಿಯನಾದ ಪರಶಿವ, ಪತಿಯಾದ ಪರಶಿವ, ಒಳ್ಳೇ ಪರಶಿವ ಕಲ್ಯಾಣಕರ ಪರಶಿವ, ಎಂದು ಅರ್ಥವಾಗುವದು. ಅಂದರೆ ಕಲ್ಯಾಣಕರನಾದ ಪರಶಿವನ ಚಿನ್ಹವಾದ ಇಷ್ಟಲಿಂಗವನ್ನು ಪೂಜಿಸಿ ತನ್ನ ಯಾವತ್ತು ಅನಿಷ್ಟಗಳನ್ನು ತೊಡೆದುಹಾಕಿ ಪರಶಿವನಾಗುವದು ಎಂದು ಅರ್ಥ ಹೊಳೆಯುವದು. ಅನಿಷ್ಟದೊಡನೆ ಹೋರಾಡುವದಕ್ಕಾಗಿ ಫಲಿಸಿದ ಇಷ್ಟಲಿಂಗವಿದಾಗಿದೆ. ತನ್ನ ಶರೀರದಲ್ಲಿ ಅಷ್ಟಮದಗಳು ಷಡ್ರಿಪುಗಳು, ಸಪ್ತವ್ಯಸನಗಳು, ಷಡೂರ್ಮಿಗಳು, ಷಡ್ಭ್ರಮೆಗಳು, ಪಂಚಕ್ಲೇಶಂಗಳು, ಮೊದಲಾದ ಅನಿಷ್ಟದೊಡನೆ ಹೋರಾಡಲು ಇಷ್ಟಲಿಂಗವನ್ನು ಧರಿಸುತ್ತಿರುವರು. ಇಷ್ಟಲಿಂಗದ ಮುಖಾಂತರ ತನ್ನ ಈ ಅನಿಷ್ಟದೊಡನೆ ಹೋರಾಡುವದಲ್ಲದೆ ಮನೆಯ ಅನಿಷ್ಟ, ಊರ ಅನಿಷ್ಟ, ದೇಶದ ಅನಿಷ್ಟ, ಜಗತ್ತಿನ ಅನಿಷ್ಟಗಳ ಕೂಡ ಸಹ ಹೋರಾಡುವ ಉದ್ದೇಶದಿಂದಲೇ ಈ ಇಷ್ಟಲಿಂಗವನ್ನು ಧಾರಣ ಮಾಡುವನು. ವಿಶ್ವದ ಎಲ್ಲ ಅನಿಷ್ಟಗಳ ಕೂಡ ಹೋರಾಡುವ ಸಲುವಾಗಿಯೇ ವಿಶ್ವದ ಆಕಾರದಂತಿರುವ ಪರಶಿವನ ಚಿನ್ಹವಾದ ಇಷ್ಟಲಿಂಗವನ್ನು ಪ್ರತಿಯೊಬ್ಬರು ಧಾರಣ ಮಾಡಲೇಬೇಕು. ಈ ಇಷ್ಟಲಿಂಗವು ಶಿವ+ಶಕ್ತಿಯರನ್ನು ಕೂಡಿಸುವದು. ಅದರಿಂದ ನಿಜಾನಂದವನ್ನು ಹೊಂದು ಎಂದು ಬೋಧಿಸುವದು. ಈ ಜಗದಲ್ಲಿ ಶಿವ+ಶಕ್ತಿಯರು ಸಕಲರಲ್ಲಿ ಅಗಲಿದ್ದರಿಂದ ಅನೇಕ ಬಗೆಯ ಅನಿಷ್ಟಗಳು ಈಗ ತಲೆದೋರಿರುವವು. ಜನರು ಕಾಮುಕರಾಗಿದ್ದಾರೆ. ಮದಮತ್ಸರದವರಾಗಿದ್ದಾರೆ. ಅಹಂಕಾರ ಮಮಕಾರದವರಾಗಿದ್ದಾರೆ. ಆಶೆಪಾಶೆಗಳಿಗೆ ಶಿಕ್ಕಿದ್ದಾರೆ. ಮಾಯೆ ಮೋಹಕ್ಕೊಳಗಾಗಿದ್ದಾರೆ. ಜನ ಇದ್ದಂತೆ ದೇಶ, ದೇಶಗಳಿದ್ದಂತೆ ಜಗ, ಜಗವಿದ್ದಂತೆ ಬ್ರಹ್ಮಾಂಡಗಳು ಇರುವವು. ಹೀಗಾಗಿ ಎಲ್ಲ ಕಡೆಗೂ ಅತಿಯಾದ ಅನಿಷ್ಟ

ಗಳೂ ಒದಗುತ್ತಿರುವವು. ಈ ಅನಿಷ್ಟಗಳು ಹೋಗಬೇಕಾದರೆ ಶಿವ-ಶಕ್ತಿಯು ರನ್ನು ಕೂಡಿಸಬೇಕು. ಅಂದರೆ ಅನಿಷ್ಟಗಳು ಹೋಗುತ್ತವೆ. ಅದರ ದ್ಯೋತಕವಾಗಿ ಈ ಇಷ್ಟಲಿಂಗವನ್ನು ಧರಿಸಬೇಕು.

ನಮ್ಮ ಸಹಸ್ರಾರದಲ್ಲಿ ಶಿವನ ವಾಸಸ್ಥಾನವು. ಅಲ್ಲಿಂದ ಶಕ್ತಿಯು ಆಣವ, ಮಾಯಾ, ಕಾರ್ಮಿಕ ಮಲಗಳ ಮೂಲಕ ಆರು ಚಕ್ರಗಳನ್ನು ಇಳಿದು ಮೂಲಾಧಾರದಲ್ಲಿ ತ್ರಿಕೋಣಾಕಾರದಲ್ಲಿ ಕೆಳಮುಖ ಮಾಡಿ ಕುಂಡಲಿನಿ ಸರ್ಪಾಕಾರದಲ್ಲಿ ಬಿದ್ದಿರುವಳು. ಅದಕ್ಕಾಗಿ ಕುಂಡಲಿನಿಶಕ್ತಿ ಅನೇಕ ಬಗೆಯ ವಿಷಯಗಳನ್ನು ಕಾರುತ್ತ ಅನೇಕ ದುಃಖಗಳನ್ನು ಅನು ಭವಿಸುವಂತೆ ನಮಗೆ ಮಾಡಿರುವಳು. ಈ ಅಗಲುವಿಕೆಯನ್ನು ಇಲ್ಲ ಮಾಡಲು ಪುನಃ ಇಷ್ಟಲಿಂಗದ ಮುಖಾಂತರ ಈ ಶಕ್ತಿಯನ್ನು ಆರು ಚಕ್ರಗಳನ್ನೇ ರಿಹೋಗುವಂತೆ ಮಾಡಿ ಸಹಸ್ರಾರದಲ್ಲಿಯ ಪರಶಿವನ ಕೂಡಿಸಬೇಕಾಗಿ ರುವದು. ಅದಕ್ಕೆ ಇಷ್ಟಲಿಂಗವನ್ನು ಪ್ರತಿಯೊಬ್ಬರು ಧಾರಣ ಮಾಡ ಬೇಕು. ಯಾಕಂದರೆ ಇಷ್ಟಲಿಂಗವು ಶಿವ+ಶಕ್ತಿಯರ ಮಿಲಿನವನ್ನೇ ಸೂಚಿ ಸುವದು. ಈ ಮಿಲನದಿಂದ ಮಹಾನಿಜಾನಂದವೇ ಆಗುವದೆಂದು ತಿಳಿಸುವದು. ಇದಕ್ಕೆ ವೀರಶೈವರು ಶಿವಯೋಗವೆನ್ನುವರು.

ಜಗದಲ್ಲಿ ಪ್ರಕೃತಿ ಪುರುಷರ ಅಂದರೆ ಕ್ಷೇತ್ರ ಹಾಗೂ ಕ್ಷೇತ್ರಜ್ಞರ ಸಂಯೋಗದಿಂದ ಕಾರ್ಯಗಳು ನಡೆದಿರುವವು. ಇವು ಅಗಲಿದರೆ ಅಂದರೆ ಪ್ರಕೃತಿಯನ್ನು ಪುರುಷನು ಬಿಟ್ಟು ಹೋದರೆ ಅಥವಾ ಕ್ಷೇತ್ರವನ್ನು ಕ್ಷೇತ್ರ ಜ್ಞನು ತೊರೆದು ಹೋದರೆ ಈ ಶರೀರವನ್ನು ಜೀವಾತ್ಮನು ಬಿಟ್ಟು ನಡೆದರೆ ಏನಾಗುತ್ತದೆ ವಿಚಾರಿಸಿರಿ. ಹೆಣವಾಗುತ್ತದೆ; ಮರಣವಾಗುತ್ತದೆ. ಇದರಿಂದ ಅವನ ಅಸ್ತಿತ್ವವಿಲ್ಲ; ಕಾರ್ಯಗಳಿಲ್ಲ. ಅದಕ್ಕೆ ಪ್ರಕೃತಿಪುರುಷರನ್ನು ಕೂಡಿಸಿ ಇಷ್ಟವಾದ ಯೋಗ್ಯ ಕಾರ್ಯ ಪ್ರವೃತ್ತರಾಗಿ ಆನಂದವನ್ನು ಪಡೆಯಬೇ ಕೆಂಬುದರ ದ್ಯೋತಕವಾಗಿ ಈ ಇಷ್ಟಲಿಂಗವನ್ನು ಧರಿಸಬೇಕೆಂದು ಇದರ ಉದ್ದೇಶವಾಗಿರುವದು. ಅಂದರೆ ಮಾನವನು ಚಿರಂಜೀವಿಯಾಗಿ ಆಚಂದ್ರಾ ರ್ಕವಾಗಿ ಬಾಳಬೇಕೆಂದು ಇದು ಸೂಚಿಸುವದು. ಹೀಗಾಗಬೇಕಾದರೆ ಅವನು ಬಹುವಾಗಿ ದೇಶದ ಸೇವೆ ಮಾಡಿ ದೇಶದ ಅನಿಷ್ಟಗಳನ್ನು ತೊಡೆದು ಹಾಕಬೇಕಾಗುವದು. ಅಂದರೆ ದೇಹ ಬಿಟ್ಟಮೇಲೂ ಕೂಡ ಚಿರಂಜೀವಿ

ಯಾಗಿ, ಕೀರ್ತಿಶಾಲಿಯಾಗಿ ಆಚಂದ್ರಾರ್ಕವಾಗಿ ಸೂಕ್ಷ್ಮಶರೀರಧಾರಿಯಾಗಿ ಬಾಳುವನು. ಇದೆಲ್ಲದರ ದ್ಯೋತಕವಾಗಿಯೇ ಶಿವ-ಶಕ್ತಿಯರ ಮಿಲನದ ಗುರುತಾದ ಇಷ್ಟಲಿಂಗವನ್ನು ಧಾರಣ ಮಾಡಬೇಕು.

ಕುರುಡ ಮತ್ತು ಕುಂಟ ಕೂಡಿಕೊಂಡರೆ ಹೊಳೆ ದಾಟಿ ಸುಖಿಸಬಹುದು. ಆದರೆ ಅವರು ಜಗಳಾಡಿ ಅಗಲಿದರೆ ಯಾರಿಗೂ ಸುಖವಿಲ್ಲ; ಕಾರ್ಯವಿಲ್ಲ; ಆನಂದವಿಲ್ಲ. ಈ ಇಬ್ಬರು ನಿರುಪಯೋಗಿಯಾಗಿಬಿಡುವರು. ಅವರು ಬದುಕಲಾರರು. ಅದರಂತೆ ಶಿವ (ಜ್ಞಾನ) ಶಕ್ತಿ (ಭಕ್ತಿ) ಕೂಡಿದರೆ ಸಾರ್ಥಕವಾಗುವದು. ಶಿವನು ಶಕ್ತಿಯನ್ನು ಅಗಲಿದರೆ, ಶಕ್ತಿಯು ಶಿವನನ್ನು ಅಗಲಿದರೆ ಅಂದರೆ ಜ್ಞಾನವು ಭಕ್ತಿಯಿಂದ ಕೂಡಿರದಿದ್ದರೆ ಶುಷ್ಕ ಜ್ಞಾನ ಅಥವಾ ಬಾಯಿ ಬ್ರಹ್ಮಜ್ಞಾನ, ವಾಚಾಳಿಯ ಜ್ಞಾನವಾಗಿ ಪರಿಣಮಿಸುವದು. ಇವನೇ ದುರುಳ ವೇದಾಂತಿ ಎನಿಸುವನು. ಇವನಲ್ಲಿ ನುಡಿಗೆ ತಕ್ಕ ನಡೆ ಇರುವದಿಲ್ಲ. ಜಗತ್ತಿಗೆ ಪೂಜ್ಯನಾಗುವದಿಲ್ಲ. ಅದರಂತೆ ಶಕ್ತಿಯು ಶಿವನನ್ನು ಅಗಲಿದರೆ, ಒಡಗೂಡಿ ಇರದಿದ್ದರೆ ಅಂದರೆ ಭಕ್ತಿಯು ಜ್ಞಾನದಿಂದ ಕೂಡಿರದಿದ್ದರೆ ಆ ಭಕ್ತಿಯು ಮೂಢ ಭಕ್ತಿಯಾಗುವದು. ವಿಚಾರವಿಲ್ಲದ ಭಕ್ತಿ ವಿನಾಶಕ್ಕೆ ಕಾರಣವಾಗುವದು ಎಂಬಂತೆ ಆಗಿ, ಆ ಭಕ್ತಿ ಮೂಢತನದ್ದೂ, ನಮ್ಮ ನಾಶಕ್ಕೆ ನಾವೇ ಕಾರಣವಾಗುವಂಥಾದ್ದೂ ಆಗುವದು. ಹೀಗಾದರೆ ನಿಷ್ಕಾಮಕರ್ಮಗಳು ಸಾಧಿಸುವದಿಲ್ಲ. ಅದರಿಂದ ದು:ಖವು ತಪ್ಪುವದಿಲ್ಲ. ಅದಕ್ಕಾಗಿ ಭಕ್ತಿ ಮತ್ತು ಜ್ಞಾನಗಳು ಕೂಡಿದರೆ ಯೋಗ್ಯ ಕ್ರಿಯೆಗಳಾಗುತ್ತವೆ. ಇದರಿಂದ ದೇಶದ ಅನಿಷ್ಟಗಳನ್ನು ತೊಡೆದುಹಾಕಲಿಕ್ಕೆ ಬರುತ್ತದೆ. ಅದಕ್ಕಾಗಿಯೇ ನಾವು ಭಕ್ತಿ ಜ್ಞಾನಗಳ ಸಂಗಮವನ್ನು ಸೂಚಿಸಿ ಯೋಗ್ಯ ಕ್ರಿಯಾಪ್ರವೃತ್ತ ಮಾಡುವ ಈ ಇಷ್ಟಲಿಂಗವನ್ನು ಧರಿಸಿ ಅನಿಷ್ಟದೊಡನೆ ಹೋರಾಡಬೇಕಾಗಿರುವದು.

ಹಕ್ಕಿಗೆ ಎರಡು ರೆಕ್ಕೆಗಳು, ಹಿಂದೆ ಒಂದು ಬಾಲವೂ ಇರುವದರಿಂದ ಬೇಕಾದಂತೆ ಹಾರಾಡಿ ಬೇಕಾದ ದಿಕ್ಕಿಗೆ ಹೋಗಲು ಬಾಲದಿಂದ ತಿರುಗಿಸಿ ಹಾರುವವು. ಇವುಗಳಲ್ಲಿ ಒಂದು ಇರದಿದ್ದರೆ ಅದಕ್ಕೆ ತೊಂದರೆಯಾಗುವದು. ಅದರಂತೆ ಶಿವ ಮತ್ತು ಶಕ್ತಿಯರು ಕೂಡಿದರೆ ತಾನೇ ಆನಂದ ಸುಖಶಾಂತಿ ಬರುವದು. ಅದರ ದ್ಯೋತಕವಾಗಿ ಇಷ್ಟಲಿಂಗವನ್ನು ಧರಿಸಿದರೆ ಹಕ್ಕಿಯಂತೆ ಯೋಗ್ಯ ದಿಕ್ಕಿಗೆ ಹಾರಿ ಹೋಗಿ ಸುಖ ಆನಂದಗಳನ್ನು

ಹೊಂದಲಿಕ್ಕೆ ಬರುವದೆಂದು ತಿಳಿದುಕೊಳ್ಳಲೆಂದು ಈ ಲಿಂಗವನ್ನು ಧರಿಸ ಬೇಕಾಗಿದೆ. ಈ ಇಷ್ಟಲಿಂಗವು ಹಕ್ಕಿಗೆ ಮೂರು ರೆಕ್ಕೆಗಳಿದ್ದಂತೆ ಮೂರು ಭಾಗಗಳಿಂದ ಇದು ಕೂಡಿ ಪೂರ್ಣವಾಗಿದೆ. ಇದರ ದ್ಯೋತಕವಾಗಿ ನಾವು ಲಿಂಗವನ್ನು ಧರಿಸಿ ಪೂರ್ಣ ಮಾನವರಾಗಬೇಕು.

ಸತ್-ಚಿತ್-ಆನಂದಗಳು ಜಗತ್ತಿನ ಮೂಲ ತತ್ವಗಳಿರುವವು. ಇದನ್ನು ಸೂಚಿಸಲೋಸುಗ ಲಿಂಗದಲ್ಲಿಯೂ ಮೂರು ಮುಖ್ಯ ಭಾಗಗಳನ್ನು ಮಾಡಿದ್ದಾರೆ. ಪೆಂಡಿಕೆ, ಪೀಠ, ಜಲಹರಿ, ಪೆಂಡಿಕೆ = ಸತ್, ಪೀಠ = ಚಿತ್, ಜಲಹರಿ = ಆನಂದ ಇದು ಸಾಮಾನ್ಯ ವಿವರಣೆ. ಇದಕ್ಕೂ ವಿಶಾಲ ವಿವರಣೆ ಈ ಹಿಂದಿನ ಲೇಖಗಳಲ್ಲಿ ಬಂದಿದೆ, ನೋಡಿಕೊಳ್ಳಿರಿ. ಸಚ್ಚಿದಾನಂದ ಪದವಿಯನ್ನು ಧರಿಸುವದರ ದ್ಯೋತಕವಾಗಿಯೇ ನಾವು ಇಷ್ಟಲಿಂಗವನ್ನು ಧರಿಸಬೇಕು.

ಜಗವು ಯಾರಿಂದ ಹೇಗೆ ಹೇಗೆ ಹೊರಗೆ ಬಂದಿರುವದು, ಪುನಃ ಹೇಗೆ ಹೇಗೆ ಹೋಗಿ ಪರಶಿವನಾಗುವದು, ಎಂಬದನ್ನು ಈ ಇಷ್ಟಲಿಂಗವು ಸೂಚಿಸುವದು. ಮೊದಲು ನಿಃಶ್ಶೂನ್ಯ ( ಪೆಂಡಿಕೆ ) ದಿಂದ ಸತ್-ಚಿತ್-ಆನಂದವೆಂಬ ಪರಾಪ್ರಕೃತಿ ಅಂದರೆ ಚಿತ್‌ಪ್ರಕೃತಿ ಹೊರಗೆ ಬಂದಿದೆ. ಇದೇ ಗೋಳಕವೆನಿಸುವದು. ಸತ್-ಚಿತ್-ಆನಂದ (ಗೋಳಕ) ದಿಂದ ಸತ್ವ ರಜ. ತಮ (ಪೀಠ) ವು ಅಂದರೆ ಅಪರಾ ಪ್ರಕೃತಿ ಮಾಯಿಕ ಪ್ರಕೃತಿ ಹೊರಗೆ ಬಂದಿತು. ಇದನ್ನೇ ಈ ಇಷ್ಟಲಿಂಗವು ಬೋಧಿಸುವದು. ಇವುಗಳನ್ನು ಕೆಳಗಿನಿಂದ ಒಂದರೊಳಗೊಂದು ಲೀನಗೊಳಿಸುತ್ತ ಹೋಗಿ ನಿಃಶೂನ್ಯದೊಳಗೆ ಹೇಗೆ ಹೊಂದಿಕೊಳ್ಳಬೇಕೆಂಬುದನ್ನು ಸಹ ಈ ಇಷ್ಟಲಿಂಗವು ಸೂಚಿಸುವದು. ಇದರ ದ್ಯೋತಕವಾಗಿ ಈ ಇಷ್ಟಲಿಂಗವನ್ನು ನಾವು ಧರಿಸಲೇಬೇಕು.

ವ್ಯವಹಾರದಲ್ಲಿ ಸತಿಪತಿಗಳು ಇರುವದು. ಅವರು ಜಗಳಾಡಿ ಅಗಲಿದರೆ ಇಬ್ಬರಿಗೂ ದುಃಖವಾಗುವದು. ಸಂಸಾರ ಕೆಡುವದು. ಮಕ್ಕಳು ಮರಿಗಳಾಗುವದಿಲ್ಲ. ಯಾವ ಕಾರ್ಯಗಳು ಆಗುವದಿಲ್ಲ. ಆದರೆ ಅವರು ಪ್ರೇಮದಿಂದ ಕೂಡಿದ್ದರೆ ಸುಖವಾಗುವದು. ಸಂಸಾರವು ಸ್ವರ್ಗಮಯವಾಗುವದು. ಮಕ್ಕಳ ಮರಿಗಳಾಗಿ ಸಂಸಾರ ಕುಡಿಯು ಕೊನರುವದು. ಈ ಇಷ್ಟಲಿಂಗವು ಪತಿಯ ಗುರ್ತಾದ ಪೆಂಡಿಕೆ ಸತಿಯ ಗುರ್ತಾದ ಪೀಠ ಸಂಸಾರ ಸುಖದ ಗುರ್ತಾದ ಓಲಹರಿಗಳನ್ನು ಸೂಚಿಸುವದು. ಇಷ್ಟಲಿಂಗದ

ಈ ಮೂರು ಭಾಗಗಳು ಅಗಲಿದರೆ ಅದು ಪೂಜೆಗೆ ಯೋಗ್ಯವಲ್ಲ. ಅಲ್ಲದೆ ಮೇಲೆ ವಿವರಿಸಿದ ಯಾವ ತತ್ವಕ್ಕೂ ಇದು ಒಗ್ಗುವದಿಲ್ಲ. ಅದಕ್ಕಾಗಿ ಸಂಸಾರದಲ್ಲಿ ಸತಿಪತಿಗಳ ಪ್ರೇಮದಿಂದ ಕೂಡಿ ಇರಬೇಕೆಂಬುದನ್ನು ಸೂಚಿಸುವದರ ದ್ಯೋತಕವಾಗಿ ಈ ಲಿಂಗವನ್ನು ಧರಿಸಬೇಕು.

ಪರಾತ್ಪರ ಪರಶಿವನಿಂದ ಹಿಡಿದು ಜೀವಾಗಮುವಿನ ವರೆಗೆ ಅಂದರೆ ಸಕಲ ಜೀವಿಗಳು ಜೋಡಿಯಾಗಿರುವವೆಂದು ಕಂಡುಬರುವದು. ಅದೇಕೆ ಅಚರ ವಸ್ತುಗಳು ಕೂಡ ಜೋಡಿಯಾಗಿರುವದು ಕಂಡುಬರುವದು. ಜೋಡಿಯಾಗಿರುವದೆಂದು ಜಗದ ಹಿರೇ ಹಾಗೂ ಮುಖ್ಯ ಶ್ರೇಷ್ಠ ತತ್ವವಿರುವದೆಂದು ಕಂಡು ಬರುವದು. ಅದರಂತೆ ಈ ಇಷ್ಟಲಿಂಗವೂ ಕೂಡ ಜೋಡಿಯಾಗಿದ್ದದರ ಪ್ರಜ್ಞೆಯನ್ನು ಸದಾ ಕೊಡಲಿ ದು ಅದನ್ನು ಹೀಗೆ ರಚಿಸಿದ್ದಾರೆಂದು ತೋರುವದು. ಅದರ ದ್ಯೋತಕಾಗಿ ನಾವು ಇಷ್ಟಲಿಂಗವನ್ನು ಧರಿಸಬೇಕು.

ಜಗತ್ತಿನ ಯಾವತ್ತೂ ಸ್ತ್ರೀಯರನ್ನು ತಾಯಿಯಂತೆ, ಯಾವತ್ತೂ ಪುರುಷರನ್ನು ತಂದೆಯಂತೆ ಕಾಣಬೇಕೆನ್ನುವದರ ಗುರ್ತಿಗಾಗಿ ಈ ಇಷ್ಟ ಲಿಂಗವನ್ನು ಧರಿಸಿ ಪೂಜಿಸುವದುಂಟು. ಇದರಿಂದ ಏನಯ ಪೂಜ್ಯ ಭಾವಗಳು ಇಷ್ಟಲಿಂಗಧಾರಿಯಲ್ಲಿ ಬರುವ ಉದ್ದೇಶವಿರುವದು. ಹೀಗಾದರೆ ಜಗತ್ತಿನಲ್ಲಿ ಯಾರು ಯಾರ ಮೇಲೆ ಕಾಮುವನ್ನು ಬಯಸಬೇಕು ? ಯಾರು ಯಾರನ್ನು ಮೋಸ ಕೊಲಿಗೈಯ್ಯಬೇಕು ? ಎಲ್ಲ ಕಡೆಗೂ ಸಮತೆ ನೆಲೆಸುವದು. ಇದರ ದ್ಯೋತಕವಾಗಿ ಈ ಇಷ್ಟಲಿಂಗವನ್ನು ಧರಿಸಬೇಕು. ಇದರಿಂದ ಸ್ತ್ರೀಯರನ್ನು ಆದಿಶಕ್ತಿ ಪಾರ್ವತಿಯಂತೆ, ಪುರುಷರನ್ನು ಪರಶಿವನಂತೆ ಪೂಜ್ಯ ಭಾವದಿಂದ ಕಾಣುವದಕ್ಕೆ ಸಹಜ ಬರುವದು. ಈ ಉದ್ದೇಶದಿಂದ ಲಿಂಗವನ್ನು ಧರಿಸುವದು ಅವಶ್ಯವದೆ.

ವೀರ ಹಾಗು ಶೈವ ಕೂಡಿ ವೀರಶೈವವಾಗಿದ್ದರ ದ್ಯೋತಕವು ಈ ಇಷ್ಟಲಿಂಗವಾಗಿದೆ. ವೀರ = ಶಕ್ತಿ; ಶೈವ = ಶಿವ ಇದರ ದ್ಯೋತಕವಾಗಿ ಈ ಇಷ್ಟಲಿಂಗವನ್ನು ಧರಿಸಬೇಕು.

ಸೃಷ್ಟಿ ಮತ್ತು ದೃಷ್ಟಿಗಳೆರಡೂ ವೀರಶೈವರಿಗೆ ಮಹತ್ವವಾದವುಗಳೇ ಸರಿ. ಸೃಷ್ಟಿ ಉಳಿದವರಂತೆ ಇವರಿಗೆ ಕಡಿಮೆ ಕ್ಷಣಭಂಗುರ ಭ್ರಮೆ. ಮಾಯೆಯಲ್ಲಿ ಇದರಲ್ಲಿ ಅನಂತ ದಿವ್ಯ ಶಕ್ತಿ ತತ್ವಗಳು ಅಡಕವಾಗಿವೆ. ಅವುಗಳನ್ನು ವೀರಶೈವನು ಹೊರಗೆ ಶೋಧಿಸಿ ತೆಗೆಯಬೇಕಾಗಿದೆ. ದೃಷ್ಟಿಯೂ

ಕೂಡ ಇವರಿಗೆ ಅದೇ ಸ್ಪೇ ಸತ್ಯವಾಗಿದೆ. ಸೃಷ್ಟಿ = ಶಕ್ತಿ, ದೃಷ್ಟಿ = ಜ್ಞಾನ. ಶಕ್ತಿ ಜ್ಞಾನಗಳ ಅವಶ್ಯಕತೆ ನಮಗೆ ಬಹಳೇ ಇರುವದು. ಸೃಷ್ಟಿ ದೃಷ್ಟಿಗಳ ಮಹತ್ವ ತಿಳಿದುಕೊಳ್ಳಲೆಂಬುದರ ದ್ಯೋತಕವಾಗಿ ಈ ಇಷ್ಟಲಿಂಗವನ್ನು ಧರಿಸಬೇಕು. ಸೃಷ್ಟಿ ದೃಷ್ಟಿಗಳನ್ನು ಕೂಡಿಸುವದರಿಂದ ಭೂಲೋಕದಲ್ಲಿ ಸ್ವರ್ಗ ಲೋಕವನ್ನು ಸ್ಥಾಪಿಸಲಿಕ್ಕೆ ಬರುವದು.

ವೀರಶೈವರು ಲಿಂಗ ಅಂಗ ಸಮರಸವನ್ನು ಸಾಧಿಸಬೇಕೆನ್ನುವರು. ಈ ಇಷ್ಟಲಿಂಗವು ಸಹ ಲಿಂಗ (ಶಿವ) ಅಂಗ (ಶಕ್ತಿ) ಗಳನ್ನು ಕೂಡಿಸಿದ್ದೇ ಆಗಿರುವದು. ಲಿಂಗ ಅಂಗಗಳು ಕೂಡಿದ್ದಾದರೆ ನಿಜಾನಂದವಾಗುವದು. ಆದಕ್ಕೆ ವೀರಶೈವರು ಸದಾ ಲಿಂಗಾಂಗ ಸಮರಸವನ್ನು ಬಯಸುವದರ ದ್ಯೋತಕವಾಗಿ ಈ ಇಷ್ಟಲಿಂಗವನ್ನು ಧರಿಸುವರು.

ಶಿವ ಜೀವರ ಐಕ್ಯವನ್ನು ಸಾಧಿಸುವದರ ದ್ಯೋತಕವೆಂದರೆ ಇದೇ ಇಷ್ಟಲಿಂಗ ಧರಿಸುವದೇ ಆಗಿರುವದು. ಅದರಿಂದ ಸಮರಸಾನಂದವಾಗುವದು.

ಅಂತರಂಗ ಬಹಿರಂಗಗಳು ಒಂದೇಯಾಗಿ ಕೂಡಿ ಮೇಳದಿಂದ ಸಾಗಬೇಕೆಂದು ಈ ಇಷ್ಟಲಿಂಗವು ಬೋಧಿಸುವದು. ಅನೇಕರು ಅಂತರಂಗ ಬಹಿರಂಗಗಳಲ್ಲಿ ಮೇಳ ಉಳ್ಳವರಿರುವದಿಲ್ಲ. ಹೊರಗೆ ಡಂಭಾಚಾರವನ್ನೇ ತೋರಿಸುವರು. ಅಂತರಂಗದಲ್ಲಿ ಹುರುಳಿಲ್ಲದವರಿರುವರು. ಹೀಗಾದರೆ ಶಿವಯೋಗವಾಗುವದಿಲ್ಲ. ಆನಂದ ಸಿಗುವದಿಲ್ಲೆಂದು ಸ್ಪಷ್ಟ ತಿಳಿಸುವದರ ದ್ಯೋತಕವಾಗಿ ಈ ಇಷ್ಟಲಿಂಗವನ್ನು ಧರಿಸಬೇಕು.

ತಾನು ಮೊದಲು ಒಳ್ಳೇಯವನಾಗಬೇಕು. ಆಮೇಲೆ ಎರಡನೇಯವರಿಗೆ ಒಳ್ಳೇದನ್ನು ಮಾಡುವದು ಶಿವಾನುಭವವೆನಿಸುವದು. ಈ ಇಷ್ಟಲಿಂಗವು ಈ ಎರಡನ್ನೂ ಸೂಚಿಸುವದು. ಅಂದರೆ ಜಗಕ್ಕೆ ಸುಖ ಶಾಂತಿ ಆನಂದಗಳು ಲಭಿಸುವವು. ಅವು ತನಗೂ ಸಿಗುವವು. ಇದರ ದ್ಯೋತಕವಾಗಿ ಈ ಇಷ್ಟಲಿಂಗವನ್ನು ಧರಿಸಬೇಕು.

ವಾಯುತತ್ವದಿಂದ ಮನ ಹುಟ್ಟಿತು. ಮನಸ್ಸಿನ ಚಂಚಲತನಕ್ಕೆ ಕಣ್ಣು ನೆರವಾಗುವದು. ಕಣ್ಣು ಅಲೆ ಕರೆದಿರುವದು. ಕಣ್ಣಾಲೆಯು ಹೊಳಚದೆ ನಿಶ್ಚಲವಾಗಿ ನಿಲ್ಲಲು ನಿತ್ಯ ಕರೆಯ ವಡವೆಗಳನ್ನು ಕೆಲಹೊತ್ತು

ದೃಷ್ಟಿ ಹಳಚದೆ ನೋಡಿದರೆ ಅದು ಸ್ಥಿರವಾಗಿ ನಿಲ್ಲುವದು. ಈ ಕಾರಣ ಕ್ಕಾಗಿ ಲಿಂಗವನ್ನು ರಚಿಸಿ, ಮೇಲೆ ಕರೇ ಕಂತೆಯನ್ನು ಕೂಡ್ರಿಸಿದ್ದಾರೆ. ನಿತ್ಯ ಮನಸ್ಸಿನ ಶುದ್ಧಿಗೆ ಅದನ್ನು ಗುರುಮಂತ್ರ ಧ್ಯಾನಿಸುತ್ತ ದೃಷ್ಟಿ ಹಳ ಚದೆ ನೋಡುತ್ತ ಕೂಡ್ರುವ ಉದ್ದೇಶಕ್ಕೆ ಈ ಇಷ್ಟಲಿಂಗವನ್ನು ಧರಿಸಬೇಕು. ಕರೇ ಬಣ್ಣಗಳನ್ನು ಬಹಳ ಹೊತ್ತು ನೋಡುತ್ತ ಕೂಡ್ರುವದರಿಂದ ಕಣ್ಣು ಗಳು ದಣಿಯುವದಿಲ್ಲ; ಕೆಡುವದಿಲ್ಲ. ಹಾಗೇ ನೋಡುತ್ತ, ಧ್ಯಾನಿಸುತ್ತ ಕೂತಂತೆ ಪ್ರಕಾಶ ಬೀಳಹತ್ತುವದು. ಮನಸ್ಸು ಸ್ವಾಭಾವಿಕ ನಿಲ್ಲುವದು. ಶಾಂತಿ ಆನಂದಗಳು ಲಭಿಸುವವು. ಈ ಕ್ರಿಯೆಯಿಂದ ಅಷ್ಟಾಂಗಯೋಗ ಅಥವಾ ರಾಜಯೋಗದಿಂದ ಯಾವ ಫಲ ಪ್ರಾಪ್ತವಾಗುವದೋ ಅದ ಕ್ಕಿಂತಲೂ ಸುಲಭ ಸರಳವಾದ ರೀತಿಯಲ್ಲಿ ಶಿವಯೋಗಿಗೆ ಅದಕ್ಕೂ ಹೆಚ್ಚಿಗೆ ಫಲ ಪ್ರಾಪ್ತವಾಗುವದು. ಈ ಉದ್ದೇಶಕ್ಕೆ ಇಷ್ಟಲಿಂಗವನ್ನು ಧರಿಸ ಬೇಕು.

ಕೆಳಗಿನಿಂದ ಭಕ್ತನ ಹೃದಯದಿಂದ ಪರಭಕ್ತಿಯ ದಿವ್ಯ ಕೂಗು ಏಳ ಬೇಕು. ಮೇಲಿನಿಂದ ಪರಶಿವನ ಕೃಪೆ ತಾನೇ ಬಂದು ಭಕ್ತನನ್ನು ಮುತ್ತಿ ಡುವದು. ಆಗ ಪರಮಾನಂದ ಪ್ರಾಪ್ತಿಯಾಗುವದು. ಇದನ್ನೇ ಈ ಇಷ್ಟ ಲಿಂಗವು ಸೂಚಿಸುವದು. ಅದರ ದ್ಯೋತಕವಾಗಿ ನಾವು ಇಷ್ಟಲಿಂಗವನ್ನು ಧರಿಸಬೇಕು.

ಮನುಷ್ಯನು ಪದ್ಮಾಸನ ಹಾಕಿಕೊಂಡು ಕೂತಾಗ ಅವನ ಆಕಾರವು ಈ ಇಷ್ಟಲಿಂಗದಂತೆ ಕಾಣುವದು. ತಲೆಯೇ ಪೆಂಡಿಕೆ, ಕೆಳಗಿನ ಭಾಗವೇ ಗೋಳಕ ಹಾಗೂ ಪೀಠಗಳಂತೆ ತೋರುವವು. ತನ್ನ ಸ್ವರೂಪವನ್ನೇ ತೋರಿ ಸುವದು. ಅದಕ್ಕೆ ಈ ಇಷ್ಟಲಿಂಗವನ್ನು ಧರಿಸಿ, ಧ್ಯಾನಿಸಿ, ಪೂಜಿಸಬೇ ಕೆಂದು ಸೂಚಿಸುವದು. ತನ್ನ ಸ್ವರೂಪವನ್ನು ಅರಿಯಲು ಈ ಇಷ್ಟಲಿಂಗ ವನ್ನು ಧರಿಸುವದು ಎಲ್ಲರ ಕರ್ತವ್ಯವಾಗಿದೆ.

ಈ ಇಷ್ಟಲಿಂಗವು ತತ್ವಮಸಿಯನ್ನು ಬೋಧಿಸುವದು ತತ್-ತ್ವಂ-ಅಸಿ ಈ ಪದಗಳು ಅನುಕ್ರಮವಾಗಿ ಶಿವ-ಶಕ್ತಿ-ಮಿಲನ, (ಸತ್-ಚಿತ್-ಆನಂದ) ಗಳನ್ನು ಬೋಧಿಸುವವು. ಅದು-ನೀನು-ಇದ್ದಿ ಇದೇ ಲಿಂಗಾಂಗಸಾಮರಸ ವಾಗುವದು.

"ಲಿಂಗಮಧ್ಯೇ ಜಗತ್ ಸರ್ವಮಿದಂ" ಎಂಬ ವಾಕ್ಯದಂತೆ ಲಿಂಗದಲ್ಲಿ ಈ ಸಕಲ ಲೋಕವಿರುವದು. ಇಂಥ ಮಹಾಲಿಂಗದ ಗುರುತಾದ ಇಷ್ಟಲಿಂಗ

ವನ್ನು ಸಕಲರೂ ಪೂಜಿಸುವದು ಧರಿಸುವದು ಹಿತಕರವಾಗಿದೆ. ಈ ಇಷ್ಟ ಲಿಂಗದಲ್ಲಿ ಸಕಲಜಗತ್ತಿನ ಸಾರರೂಪವು ಇರುವದು. ಅದರ ದ್ಯೋತಕವಾಗಿ ಈ ಇಷ್ಟಲಿಂಗವನ್ನು ಧರಿಸಬೇಕು.

ಓಂಕಾರದಲ್ಲಿ ಅ-ಉ-ಮುಗಳುಂಟು. ಇವುಗಳನ್ನು ಒಂದರ ಕೆಳ ಗೊಂದು ಇಟ್ಟರ ಈ ಇಷ್ಟಲಿಂಗದ ಆಕಾರವನ್ನೇ ಸೂಚಿಸುವದು. ಅ-ಉ-ಮ ಓಂಕಾರ ಮಹಾಮಂತ್ರವನ್ನು ಜಪಿಸಬೇಕೆಂಬ ಸೂಚನೆಯನ್ನು ಹೊಂದು ವದರ ಸಲುವಾಗಿ ನಾವು ಈ ಇಷ್ಟಲಿಂಗವನ್ನು ಧರಿಸಬೇಕು. ಲಿಂಗವು ಓಂಕಾರದ ದ್ಯೋತಕವಾಗಿರುವದು.

ಮಹಾಕಾರಣದಿಂದ ಪರಶಿವ ಪಿಂಡಿಕೆ) ಯಿಂದ ಶಕ್ತಿ ಸ್ಥೂಲ ವಿಶ್ವವಾಗಿ (ಗೋಳಕ, ಪೀಠ) ಗಳು ಹೇಗೆ ಆದವೆಂಬುದನ್ನು ಈ ಇಷ್ಟಲಿಂಗವು ಬೋಧಿ ಸುವದು. ಅಲ್ಲದೆ ಅವೆರಡೂ ಕೂಡಿದ್ದರೆ ನಡೆಯುವದು ಇಲ್ಲದಿದ್ದರೆ ಇಲ್ಲೆಂದು ಸಹ ಇದು ಸೂಚಿಸುವದು. ಇವುಗಳ ದ್ಯೋತಕವಾಗಿ ಈ ಇಷ್ಟಲಿಂಗವನ್ನು ಧರಿಸಬೇಕಾಗುವದು.

ಸಾರಾಂಶ ಈ ಇಷ್ಟಲಿಂಗವು ಒಂದು ಜಾತಿಯದಲ್ಲ, ಒಂದು ಪಕ್ಷ ದ್ದೂ ಅಲ್ಲ, ಒಂದು ಮತದ್ದೂ ಅಲ್ಲ. ಇದು ಈ ವಿಶ್ವದ ಪ್ರತಿಯೊಬ್ಬ ಚರಾ ಚರ ಪ್ರಾಣಿಯು ಧರಿಸತಕ್ಕ ದಿವ್ಯ ಚಿನ್ಹವಾಗಿದೆ. ಜಗದ ಇಡಿ ಮಾನವ ಕುಲವು ಇದನ್ನು ಧರಿಸಿ ಮೇಲೆ ಹೇಳಿದ ತತ್ವಗಳನ್ನು ಸರಾಗವಾಗಿ ಕಂಡು ಸಾಧನ ಮಾಡಿ ನಿಜಸುಖಆನಂದ ಶಾಂತಿಗಳನ್ನು ಹೊಂದಿ ತಮ್ಮ ಇಷ್ಟ ವನ್ನು ಹೊಂದಿ ಜಗದ ಅನಿಷ್ಟವನ್ನು ಹೊಡೆದುಹಾಕಲೆಂದು ಹಾರೈಸುವೆನು.

ಈ ಮೇಲಿನ ವಿವರಣೆಯಿಂದ ಜಗತ್ತೇ ಶಕ್ತಿವಿಶಿಷ್ಟಾದ್ವೈತವೆಂದು ಹೇಳಲಿಕ್ಕೆ ಏನೂ ಅಡ್ಡಿ ಇಲ್ಲ.



# ಪ್ರಾರ್ಥನೆಯ ಆಳ ದರ್ಶನ

[ಲೇಖಕರು:- ಶ್ರೀಯುತ ಪಿ. ಜಿ. ಅಂಗಡಿ (ಸಂಗೊಳ್ಳಿ) ಜ್ಯು. ಬಿ. ಎ.]



" Praise to the God above,
who with unwearied love,
Some joy is ever giving,
which makes our life worth-living."

— R. P. D.

ಪಾಪ, ಕೇವಲ ನಮ್ಮ ಮನೋ ದೌರ್ಬಲ್ಯ ಎಂಬ ಜ್ಞಾನವೇ ಆ ಪಾಪವನ್ನು ಕ್ರಮೇಣ ನಾಶಮಾಡುವುದು. ಒಮ್ಮೆ ನಮಗೆ ಇದು ವಿಷ ಎಂದು ಅರಿವಾದರೆ ಸ್ವಾಭಾವಿಕವಾಗಿ ನಾವೇ ಅದನ್ನು ತ್ಯಜಿಸುತ್ತೇವೆ. ನಾವು ನಮ್ಮ ದೌರ್ಬಲ್ಯವನ್ನು ಅರಿತಮೇಲೆ ಅದನ್ನು ದೌರ್ಬಲ್ಯವಾಗುವದಿಲ್ಲ. ನಾವು ನಮ್ಮ ದುಃಖದ ಮೂಲವನ್ನೆಲ್ಲ ಅರಿತರೆ, ಯಾವುದು ಈಗ ನಮ್ಮಲ್ಲಿ ದೋಷವಾಗಿದೆಯೋ ಅದು ಕ್ರಮೇಣ ಮಾಯವಾಗುವದು. ಎಲ್ಲಿಯ ವರೆಗೆ ನಾವು ಸತ್ಯಸಂಧರಾಗಿರುವೆವೋ ಅಲ್ಲಿಯ ವರೆಗೆ ಕ್ರಮೇಣ ಲೋಪ ದೋಷಗಳಿಂದ ಪಾರಾಗುವೆವು. ಸ್ಥಿರವಾಗಿ ಪ್ರಾರ್ಥಿಸಬೇಕು. ಸಾಧನಾ ಸಮಯದಲ್ಲಿ ನಾವು ಹಗಲು ರಾತ್ರಿ ಜಾಗ್ರತರಾಗಿರಬೇಕು. ಕೆಲವು ವೇಳೆ ನಮ್ಮ ಮನಸ್ಸಿನ ನೈಜ ಸ್ಥಿತಿ ಗೊತ್ತಾಗುವುದು. ಆಗ ನಮ್ಮಲ್ಲಿರುವ ದೌರ್ಬಲ್ಯ ದೌರ್ಬಲ್ಯದಂತೆ ತೋರುವುದು. ಅಂತಹ ಸಮಯದಲ್ಲಿ ಭಗವಂತನಲ್ಲಿ ಮೊರೆಯಿಡಬೇಕು. ಅವನು ನಮ್ಮ ಪ್ರಾರ್ಥನೆಯನ್ನು ಕೇಳಿ ಅನುಗ್ರಹಿಸುವನು.

ತತ್ವ ಬೇರೆ, ಜೀವನ ಬೇರೆ. ನಾವು ಎಷ್ಟೇ ತಿಳಿದುಕೊಂಡಿದ್ದರೂ ಇದಲ್ಲ ಮುಖ್ಯ. ಪುರುಷಸಿಂಹರಾಗುವುದೇ ಗುರಿ. ಆತ್ಮಸಾಕ್ಷಾತ್ಕಾರವೇ ಸರ್ವಸ್ವ. ನಮ್ಮಲ್ಲಿ ಮೃಗೀಭಾವನೆಗಳು ಈಗ ಬಲವಾಗಿವೆ. ಆದರೆ ಅದನ್ನು ಪ್ರಾರ್ಥನೆಯಿಂದ ಅಡಗಿಸಬಹುದು. ಪ್ರಾರ್ಥನೆ ಮುಖ್ಯ. ಪ್ರಾರ್ಥನಾ ಬಲದಿಂದ ಮಾತ್ರ ಒಬ್ಬ ಕಾಮನನ್ನು ಗೆಲ್ಲಬಹುದು. ಭಗವಂತನ ನಾಮ

ಕ್ಕಿಂತ ಮಿಗಿಲಾದುದು ಯಾವುದೂ ಇಲ್ಲ. ಅನವರತ 'ಜಾಗ್ರತಿ' ಮತ್ತು ಅನವರತ 'ಪ್ರಾರ್ಥನೆ' ನಮ್ಮ ಜೀವನದ ಮುಖ್ಯ ಪಲ್ಲವಿಯಾಗಿರಬೇಕು. ನಮಗೆ ಸಹಾಯ ಮಾಡುವ ಆ ದೇವದೂತರು ಬಂದು ನಮ್ಮನ್ನು ಮುಕ್ತರನ್ನಾಗಿ ಮಾಡುವರು. ನಿಜ ಸಾಗಬೇಕಾದ ದಾರಿಯೇನೋ ಬಹುದೂರವಿರುವುದು. ಆದರೆ ಗುರಿ ಸೇರುವುದು ನಿಶ್ಚಯ. ಪ್ರಾರ್ಥನೆಯು ನಮ್ಮ ಹೃದಯಾಂತರಾಳವನ್ನು ಪ್ರವೇಶಿಸಿ ನಮ್ಮ ಪ್ರಲೋಭನೆಯ ಬೇರನ್ನೆಲ್ಲಾ ನಾಶ ಮಾಡುವುದು. ಪ್ರಾರ್ಥಿಸು, ಪ್ರಾರ್ಥಿಸು, ಎಡಬಿಡದೆ ಪ್ರಾರ್ಥಿಸು, ಅನವರತ ಪ್ರಾರ್ಥಿಸು. ಪಾಪದ ಸಮಯದಲ್ಲಿ ನಿರಾಶರಾಗಬೇಡಿ; ಜಾರಿ ಬಿದ್ದಾಗ ನಿರಾಶರಾಗಬೇಡಿರಿ. ದೇವರು ಯಾವಾಗಲೂ ಸಮೀಪದಲ್ಲಿರುವನು. ಅವನಿಗೆ ನಮ್ಮ ದೌರ್ಬಲ್ಯ ಗೊತ್ತಿದೆ. ನಮ್ಮ ಸತ್ಯ ಸಂಧತೆ ಗೊತ್ತಿದೆ. ಆದರೆ ಅವನನ್ನು ಪ್ರಾರ್ಥಿಸುವುದನ್ನು ಮಾತ್ರ ಬಿಡಬೇಡಿರಿ. ಪಾಪದ ಗುಂಡಿಯಲ್ಲಿ ಬಿದ್ದಿರುವಾಗಲೂ, ಉತ್ಕಂಠಿತ ಹೃದಯದಿಂದ ಪ್ರಾರ್ಥಿಸಬೇಕು. ಪ್ರಾರ್ಥನೆಯ ಆಳದಿಂದ ಭಗವದ್ಭಕ್ತಿ, ಆಧ್ಯಾತ್ಮಿಕ ಅನುಭವ, ಸತ್ಯ ಸಾಕ್ಷಾತ್ಕಾರ ಎಲ್ಲವೂ ಬರುವವು. ದೇವರು "ಸರ್ವಶಕ್ತ"ನೆಂದು ನಂಬಬೇಕು. ಕುರಿಗಳು ಅತ್ತಿತ್ತ ಚದರಿ ಹೋದಾಗ ಅದನ್ನೆಲ್ಲಾ ಒಂದು ಕಡೆ ತರುವ ಒಳ್ಳೆಯ ಕುರುಬನಂತೆ ದೇವರು. ದೇವರು ನ್ಯಾಯಮೂರ್ತಿಗಿಂತ ಹೆಚ್ಚಾಗಿ ಪ್ರೇಮ ಸ್ವರೂಪ ಎಂಬುದನ್ನು ಅರಿಯಬೇಕು. ನಾವು ಕೇಳಿದರೆ ಸಾಕು; ನಮಗೆ ಅದನ್ನು ಕೊಡುವನು. ನಾವು ಅದರ ಬಾಗಿಲನ್ನು ತಟ್ಟಿದರೆ ಸಾಕು; ಅದು ತೆರೆಯುವದು. ಸ್ವಲ್ಪವಾದರೂ ನಾವು ಸಾಧನೆ ಮಾಡಬೇಕು. ಅದೂ ಕೂಡ ನಮ್ಮನ್ನು "ಧರ್ಮಾತ್ಮ"ರನ್ನಾಗಿ ಮಾಡುವದು.

ನಾವು ಮಾಡುವ ಪ್ರತಿಯೊಂದು ಪ್ರಾರ್ಥನೆಯೂ ಭಗವಂತನೆಡೆಗೆ ನಮ್ಮ ಹೃದಯದಿಂದ ಏಳುವ ಪ್ರತಿಯೊಂದು ಭಾವನೆಯೂ, ನಮ್ಮ ಶಕ್ತಿಯನ್ನು ವೃದ್ಧಿ ಮಾಡುವುದು. ಪ್ರಾರ್ಥನೆ ನಮ್ಮನ್ನು ಪೂರ್ಣಾತ್ಮರನ್ನಾಗಿ (Perfect Soul) ಮಾಡುವುದು. ಪ್ರಾರ್ಥನೆಯನ್ನು ಆಶ್ರಯಿಸಬೇಕು. ಇದೊಂದು ನಮಗೆ ಗತಿ. ನಮ್ಮ ಹೃದಯದಲ್ಲಿ ಎಂತಹ ಗಾಢಾಂಧಕಾರವಿರಲಿ, ಪ್ರಾರ್ಥನೆ ಅಲ್ಲಿಗೆ ಬೆಳಕನ್ನು (Lead Kindly light) ತರುವುದು. 'ಕರುಣಾಳು ಬಾ ಬೆಳಕೆ, ಮುಸುಕಿನಲಿ, ಮಬ್ಬಿನಲಿ' ದಾರಿಯನು ತೋರಿಸಲು— ಶ್ರೀ. ಬಿ. ಎಂ. ಶ್ರೀಕಂಠಯ್ಯನವರು 'ಪ್ರಾರ್ಥನೆ' ಕವಿತೆಯಲ್ಲಿ ಜ್ಞಾನ ಜ್ಯೋತಿಯ ಮಾರ್ಗದರ್ಶನ ನೀಡಿದ್ದಾರೆ. ಪ್ರಾರ್ಥನೆಯೇ

ಧ್ಯಾನ. ಪ್ರಾರ್ಥನೆಯೆ ದರ್ಶನ. ಪ್ರಾರ್ಥನೆಯೆ ಭಗವಂತನೊಡನೆ ಸಲ್ಲಾಪ. ಪ್ರಾರ್ಥನೆ ನಮ್ಮನ್ನು ಸರ್ವಶಕ್ತನೆಡೆಗೆ ಪರಮಪ್ರೇಮದೆಡೆಗೆ ಒಯ್ಯುವುದು. ಪ್ರಾರ್ಥನೆ ನಮ್ಮ 'ಅಂತರಾತ್ಮನ' ಸಮೀಪಕ್ಕೆ ಹಾರಿಹೋಗಲು ರೆಕ್ಕೆಗಳನ್ನು ಕೊಡುವುದು. ನಾವು ಕೆಸರಿನಲ್ಲಿ ಹೂತು ಹೋಗಿದ್ದರೂ ಮೇಲೆಬ್ಬಿಸುವದು. ಪರ್ವತೋಪಮಯ ಮನೋದೌರ್ಬಲ್ಯಗಳು ನಮ್ಮ ಮೇಲೆ ಬಿದ್ದು ನಮ್ಮ ಆಧ್ಯಾತ್ಮಿಕ ಸ್ವಭಾವವನ್ನೆಲ್ಲ ಮುಚ್ಚಿಕೊಂಡು ಹೋಗಿದ್ದರೂ ಪ್ರಾರ್ಥನೆ ನಮ್ಮನ್ನು ಮೇಲೆ ಏಳಿಸುವುದು. ನಾವು ಹೂತುಹೋಗಿರುವ ಗುಹೆಯಿಂದ ಮಾಡಿದ ಪ್ರಾರ್ಥನೆಯನ್ನು ದೇವರು ಕೇಳುವನು. ಅವನ ಪ್ರೇಮ, ಅವನ ಶಕ್ತಿ, ನಮಗೆ ಅರಿವಾಗುವುದು. ಭಗವಂತ ಭರವಸೆ ಕೊಟ್ಟಂತೆ ನಮ್ಮನ್ನು ಉದ್ಧಾರ ಮಾಡುವನು. ನಮ್ಮ ಸಂರಕ್ಷಕನಾದ ಭಗವಂತನನ್ನು ಕೊಂಡಾಡಲು ಹಾಡಬೇಕು. ಭಗವಂತ ಅಹೇತುಕ "ದಯಾಸಿಂಧು" ಎಂಬುದನ್ನು ನಿಮ್ಮ ಹೃದಯವೆ ಸಾರಿ ಹೇಳುವುದು. ನಿಮ್ಮನ್ನು ಕಂಡವರೆಲ್ಲ, "ನೋಡಿ; ಇವರೆಲ್ಲ ಮಹಾತ್ಮರಾಗಿರುವರು." ಎನ್ನುವರು. ನಿಜವಾಗಿ ಅವನ ದಯೆಯೆ ಅವನ ನ್ಯಾಯ. ಅವನ ದಯೆ ಎಂದೆಂದಿಗೂ ಸ್ಥಿರವಾಗಿರುವುದು. ಎಂದಿಗೂ ಪ್ರಾರ್ಥಿಸುವದನ್ನು ಬಿಡಬೇಡ. ಪ್ರಲೋಭನೆಯ ಶತ್ರುಸೇನೆ ಎಷ್ಟು ಅವ್ಯಾಹತವಾಗಿ ನಮ್ಮನ್ನು ಮುತ್ತುತ್ತಿದ್ದರೂ ಚಿಂತೆಯಿಲ್ಲ. ಪ್ರಾರ್ಥನೆಯಿಂದ ನಮ್ಮ ಸುತ್ತಲೂ ಒಂದು ಕೋಟೆಯನ್ನು ಕಟ್ಟಬೇಕು. ಅದನ್ನು ಯಾರೂ ಭೇದಿಸಲಾರರು. ನರಕ ಸಮೂಹವೇ ಅದರ ಮೇಲೆ ಬಿದ್ದರೂ ಅದನ್ನು ಏನೂ ಮಾಡಲಾರದು. ಪ್ರಾರ್ಥನಾ ಬಲದಿಂದ ಬಂದ ಪ್ರೇಮ ಮತ್ತು ಸಾಕ್ಷಾತ್ಕಾರ ತಂತುವಿನಿಂದ ದೇವರು ನಮ್ಮನ್ನು ಕಟ್ಟಿಕೊಂಡಿರುವನು.

ಇದುವೇ ಪ್ರಾರ್ಥನೆಯ ಆಳದಿಂದ ಭಗವದ್ಭಕ್ತಿ, ಆಧ್ಯಾತ್ಮಿಕ ಅನುಭವ, ಸತ್ಯಸಾಕ್ಷಾತ್ಕಾರ ಎಲ್ಲವೂ, ಮಾನವನಿಗೆ ಮಾರ್ಗದರ್ಶನಿಯಾಗಿದೆ.



# ಕರೆಯುವೊರೆ

ಹೇ ಜಗದೀಶಾ! ಶಿವ-ಬಸವೇಶಾ!
ಕೈ ಹಿಡಿದೆಮ್ಮನು ನಡೆಸು;
ಕತ್ತಲೆಗವಿದಿಹ ಬಾಳುವೆಯುಲ್ಲಿ
ಬೆಳಕಾಗಿ ಬಂದು ನೆಲಿಸು! (೧)

ಲೋಕದ ಸೇವೆಯ ಗೈಯುವಂತೆ ಓ!
ನಿತ್ಯನಿರಂತರ ಹರಸು;
ಸತ್ಯ ಸಾಗರದಿ ಶಾಂತಿಯಾಳದಲಿ
ನಿತ್ಯ ನಿರಂತರ ಇಳಿಸು! (೨)

ಈ ಬಾಳಿನಲ್ಲಿ ನೂರಾಶೆ ಕುಣಿದು
ಹಾಳಾಗುತಿಹುದು ಬದುಕು;
ಮರೆ ಮೋಸ ಕಪಟ ನಾಟಕದ ನೃತ್ಯ
ಸಾಕಿನ್ನು ಸಾಕು! ಸಾಕು!! (೩)

ದಯೆಯಿಲ್ಲ ಧರ್ಮ, ಏನೆಂಥ ಜಗವು
ನೋಡೊಮ್ಮೆ ಉದಿಸಿಬಂದು;
ಜಗತುಂಬ ಜಾತಿ ಮತ ಪಂಥ ಜಗಳ
ಓ! ನೋಡು ವಿಶ್ವಬಂಧು! (೪)

ಜಗವೆಲ್ಲ ಸ್ವಾರ್ಥ ಕೆಳಸಿಹುದು ಇಂದು
ಏನೆಂಥ ಕಾಲಬಂತು;
ಜನ ಮನಕೆ ಕವಿದ ಕತ್ತಲೆಯ ಕಳೆದು
ಉದ್ಧರಿಸು! ಮೊರೆವೆನಿಂತು! (೫)

ಕಲ್ಯಾಣ ರಾಜ್ಯ ಮತ್ತೊಮ್ಮೆ ರಚಿಸಿ
ಬ್ರಹ್ಮಾಂಡವೆಲ್ಲ ಬೆಳಗು;
ಓ! ದಿವ್ಯ-ನವ್ಯ ತೊಟ್ಟಿಲಿವ ಕಟ್ಟಿ
ಒಂದೆಂಬಿ ಧರ್ಮ ತೂಗು! (೬)

—ಬಿ. ಬಿ. ಹಿಂಗಮಿರೆ,
ರಾಜಾಪೂರ (ಕೃಷ್ಣಾತೀರ)

# ಜನರಲ್ ಕಾರ್ಯಪ್ಪನವರಲ್ಲಿ ಕಂಡುದುದು ಏನು ?

[ಬರೆದವರು:- ಶ್ರೀಯುತ ಬಾಣದ ಗುರೂಜಿಯವರು.]



ಭಾರತದ ಸ್ವಾತಂತ್ರ್ಯನಂತರ ಪ್ರಪ್ರಥಮ ಸೇನಾನಾಯಕರಾದ ಜನರಲ್ ಕಾರ್ಯಪ್ಪನವರು ದಿನಾಂಕ ೨೦—೧೧—೫೬ ರಂದು ಬೆಳಗಿನ ೯ ಗಂಟೆಗೆ ಬನದೊಳಗಿನ ಶಾಕಂಭರಿ ದೇವಿಯ ದರ್ಶನಕ್ಕಾಗಿ ಬಂದಾಗ ಚೊಳಚಗುಡ್ಡದ ನಾಗರಿಕರು ಶಿಕ್ಷಕ ಶಿಕ್ಷಕಿಯರು, ಬಾಲ ಬಾಲಕೆಯರು ಕಂಡು ಕೊಂಡುದುದು ಏನು ?

ದೇವಸ್ಥಾನಕ್ಕೆ ಅವರು ಸರಿಯಾಗಿ ೯ ಗಂಟೆಗೆ ಬಂದು ಕಾರಿನಿಂದ ಇಳಿಯುತ್ತ ನಾಗರಿಕರ ಸ್ವಾಗತವನ್ನು ಸ್ವೀಕರಿಸುತ್ತ ದೇವಿಯ ಮಹಾ ದ್ವಾರದಲ್ಲಿ ತಮ್ಮ ಮಹಾ ಕಾಯದೊಂದಿಗೆ ಒಳನುಗ್ಗಿದರು. ಕಾಲೊಳಗಿನ ಬೂಟು ಬಿಚ್ಚಿದರು. ಬಗಲಲ್ಲಿ ತೊಗಲಿನ ಪಟ್ಟಿಗೆ ಜೋತು ಬಿದ್ದ ಕ್ಯಾಮರಾವನ್ನು ಹೆಗಲಿನಿಂದ ಕೆಳಗಿಳಿಸಿ ಗರುಡಗಂಬದ ಬಲಬದಿಗೆ ನಿಂತಿದ್ದ ಪೋಲಿಸನ ಹೆಗಲಿಗೇರಿಸಿದರು. ಅವರು ಮರೆತಿದ್ದೇನೋ ವಿಚಾರಿಸಿಕೊಂಡಂತೆ ತಟ್ಟನೆ ತಿರುಗಿ ದೇವಿಯ ಗುಡಿಗೆ ಪ್ರದಕ್ಷಣೆ ಹಾಕಿದರು.

ಇಲ್ಲಿ ಮಹಾವ್ಯಕ್ತಿಯ ಮಹಾಗುಣವನ್ನು ನಾವು ಅರಿತುಕೊಳ್ಳಬಹುದಾಗಿದೆ. ಸೈನ್ಯದಲ್ಲಿ ಕೆಲಸ ಮಾಡಿದವರಿಗೆ ಜನತೆಯ ಮನಸ್ಸು ನೋಯಿಸಲು ನಿರ್ಬಂಧವಿಲ್ಲವೇನೋ ಎಂದು ನನ್ನ ನಂಬುಗೆ ಇದೆ. ವಸ್ತುಸ್ಥಿತಿಯೂ ಹೀಗಿದೆ. ಆದರೂ ಕೂಡ ಕಾರ್ಯಪ್ಪನವರು ಸನಾತನಿಗಳಿಗೆ ಭಾವುಕರಿಗೆ ತಕ್ಕಂತೆ ನಡೆದುಕೊಂಡುದುದು ಅವರ ಸರಳತೆಯ ದ್ಯೋತಕವಾಗಿದೆ. ಕನ್ನಡ ತಾಯಿಯ ಮಕ್ಕಳು ದೇವರಲ್ಲಿಯೇ ನಂಬುಗೆಯುಳ್ಳವರೆಂದು ಮೇಲುಗೈ ಮಾಡಿ ಹೇಳುವಂತಿದೆ ಅವರ ವರ್ತನೆ.

ಗುಡಿಯ ಮುಂಭಾಗದಲ್ಲಿ ಸುಮಾರು ೧೨ ಮೇಲಂತರದ ಮೇಲೆ ನಮ್ಮಲ್ಲಿಯ ಕೆಲವೇ ಜನರಿಂದ ಧ್ವನಿಗೈಯ್ಯುವ ಭವ್ಯವಾದ ಗಂಟೆಯನ್ನು ಇವರು ಆಯಾಸವಿಲ್ಲದೆ ಬಲಹಸ್ತ ಮೇಲೆ ಮಾಡಿ ಬಾರಿಸಿದರು. ಜ. ಕಾರ್ಯಪ್ಪನವರು ದೇವಿಯ ದರುಶನ ತೆಗೆದುಕೊಂಡು ನಮಸ್ಕರಿಸಿ,

ಪಟಾಂಗಣದಲ್ಲಿ ಏರ್ಪಡಿಸಿದ ಸಭೆಗೆ ಬಂದರು. ನಂತರ ದೇವಿಯ ಗುಡಿಯ ಭವ್ಯತೆಯು ಮನುಷ್ಯನಿಂದಲೇ ನಿರ್ಮಿತವಾದ ಈ ಗುಡಿಯು ಎಷ್ಟೊಂದು ಮನಕ್ಕೆ ಅಹ್ಲಾದವನ್ನೂ ಅಚ್ಚರಿಯನ್ನೂ ತಂದು ಕೊಡುತ್ತಿದೆ ಎಂದರು. ಅಲ್ಲದೆ ಸುತ್ತಲಿನ ಹಳ್ಳ, ಹೊಂಡ, ಬಾಳೆ, ತೆಂಗು, ಕಂಗುಗಳ ವರ್ಣಿಸುತ್ತ ಹರ್ಷೋದ್ಗಾರ ತೆಗೆದರು. ಸಭೆಯ ಮುಕ್ತಾಯದಲ್ಲಿ ಅವರು ಚಹ ಬಿಟ್ಟು ಎಳನೀರನ್ನು ಸ್ವೀಕರಿಸಿದರು. ಅರ್ಪಿಸಿದ ಹಾರ ತುರಾಯಿಯನ್ನು ಚಿಕ್ಕ ಬಾಲಕಿಯೊಬ್ಬಳ ಕೊರಳಲ್ಲಿ ಹಾಕಿದರು. ಸೇನಾನಾಯಕರಾದ ಕಾರ್ಯಪ್ಪನವರಲ್ಲಿ ಕವಿಹೃದಯವಿದೆಯೆಂದು ಕಂಡುಕೊಳ್ಳಬಹುದಾಗಿತ್ತು, ಅಂದು ಅವರ ನುಡಿಗಳಿಂದ.

ಸಭೆ ಮುಗಿಸಿ ಬಿಚ್ಚಿಟ್ಟ ಬೂಟು ಹಾಕಿಕೊಳ್ಳಲು ಬಂದಾಗ ದೊಡ್ಡವರಿಗೆ ತಕ್ಕ ಮರ್ಯಾದೆ ಕೊಡಬೇಕೆಂದು ಜನತೆ ಆತುರತೆಯಿಂದ ಕುರ್ಚಿಯನ್ನು ತಂದು ಹಿಂದಿಟ್ಟರು. ಕುಳಿತುಕೊಳ್ಳಲು ಹೇಳಿದರೆ ತಿಳಿಹಾಸ್ಯದಿಂದ ಇರಲಿ! ಇರಲಿ!! ಎಂದು ಹೇಳಿ ಓರೆಯಲ್ಲಿದ್ದ ಕಟ್ಟೆಯ ಮೇಲೆ ಕುಳಿತು ಬೂಟು ಕಾಲಿಗೆ ತೊಡಿಸಿದರು. ಅವರ ವಿನಯದ ರೀತಿ ಅನೀತಿಗಳಿಗೆ ಜನತೆ ಭಯಭೀತರಾಗಿದ್ದರೂ "ಭೀತಿಪಡಬೇಡಿ. ನಾನೇನು ಅಂಥ ಮಹಾ ಅಲ್ಲ! ಈ ಮಹಾ ದೇಶದಲ್ಲಿ ನಾನೊಬ್ಬ ನಿಮ್ಮಂತೆ" ಎಂದು ಹೇಳುವಂತಿತ್ತು ಅವರ ಆ ತಿಳಿನಗೆ!!

ಚಿಕ್ಕ ಬಾಲಿಕೆಯರು ಸುಸ್ವರದಿಂದ ಹಾಡಿದ ಸ್ವಾಗತಪದ್ಯಕ್ಕೆ ಮೆಚ್ಚಿ ಬಾಲಕರು ತೋರಿಸಿದ ಚಟುವಟಿಕೆ ಉತ್ಸಾಹಗಳಿಗೆ ಮೆಚ್ಚಿ ತಮ್ಮ ಪ್ರೀತಿಯನ್ನು ವ್ಯಕ್ತಪಡಿಸುವದಕ್ಕಾಗಿ ಬಾಲ ಬಾಲಿಕೆಯರಿಗೆ " ಚಂದಮಾಮಾ " ಪತ್ರಿಕೆಗಳನ್ನು ಕಳಿಸಿಕೊಡುವೆನೆಂದು ಬೆನ್ನ ಮೇಲೆ ಹಸ್ತವನ್ನಿಟ್ಟು ಮೃದುವಾಗಿ ಸವರುತ್ತ ನುಡಿದರು.

ಎಲ್ಲವನ್ನು ಮುಗಿಸಿ ಹೊರಡಲು ಕಾರು ಏರಿದರು. ಆ ಕಾರು ಉಳಿದವರಗೊಡವೆ ನನಗೇಕೆ ಎಂದು ಮುಂದೋಡುವಷ್ಟರಲ್ಲಿ ಚಿಕ್ಕ ಮಕ್ಕಳು ತಮ್ಮದೇ ಆದ ಹುರುಪಿನಲ್ಲಿ ಜಯಜಯಕಾರ ಮಾಡಿದರು. ಮಕ್ಕಳ ಧ್ವನಿಯಲ್ಲಿ ಹಿಂದು ಮುಂದಾಗಿ ಕಾರ್ಯಪ್ಪನವರಿಗೆ ಬೇಸಿಷ್ಟು ಎನಿಸಿತೇನೊ! ತಟ್ಟನೆ ಕಾರು ನಿಲ್ಲಿಸಿ ಕೆಳಗಿಳಿದರು. "ನಾನು ಮೊದಲು ಹೇಳುವೆ; ಹಿಂದೆ ನೀವು ಅನ್ನಿರಿ." ಎಂದು ಮುದ್ದುಮಕ್ಕಳಿಗೆ ಸೂಚಿಸಿದರು. ಒಳ್ಳೇ ಉತ್ಸಾಹ

ದಿಂದ ಕೈ ಮೇಲಕ್ಕೆತ್ತಿ ದೊಡ್ಡ ಧ್ವನಿಯಿಂದ "ಜೈ ಕರ್ನಾಟಕ" "ಜೈಹಿಂದ" ಎಂದು ಜಿಗಿಜಿಗಿದು ಹೇಳಿದಾಗ ಮಕ್ಕಳು ಹುಮ್ಮಸ್ಸಿನಿಂದ! ಏಕಕಂಠವಾಗಿ ಇಮ್ಮಡಿ ಧ್ವನಿಯಿಂದ "ಜೈ. ಜೈ" ಎಂದರು. ಕಾರ್ಯಪ್ಪನವರಿಗೆ ಸಂತೋಷ ವಾಯಿತೇನೋ, ಜೈಹಿಂದ ಎನ್ನುತ್ತ ಕಾರು ಏರಿದರು. ಕಾರು ತನ್ನ ಕಾರ್ಯ ವನ್ನು ಪ್ರಾರಂಭಿಸಿತು. ಶಿಸ್ತಿನ ಬಗ್ಗೆ ಇಂತಹ ಚಿಕ್ಕ ಘಟನೆಗಳಲ್ಲಿಯೂ ಕೂಡ ದಕ್ಷತೆ ವಹಿಸುತ್ತಿದ್ದಾರೆ ಕಾರ್ಯಪ್ಪನವರು.



# ಉದಾರ ದೇಣಿಗೆಯನ್ನು ಕೊಟ್ಟವರ ಯಾದಿಯು..

ಡಾಕ್ಟರ ರಾ॥ ಬ॥ ಫ. ಗು. ಹಳಕಟ್ಟಿಯವರಿಗೆ ಕೆಳಗೆ ಕಾಣಿಸಿದ ಮಹನೀಯರು ನಿಧಿಯನ್ನು ಶ್ರೀ ಮ. ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು ಡಾಕ್ಟರ ರಾ॥ ಬ॥ ಫ. ಗು. ಹಳಕಟ್ಟಿ ನಿಧಿಯ ಕಮೀಟಿಯ ಅಧ್ಯಕ್ಷರು ಮುಧೋಳ ಇವರ ಕೈಯಲ್ಲಿ ಸಲ್ಲಿಸಿದ್ದಾರೆ.

## ಹಾವೇರಿ (ಜಿಲ್ಲಾ ಧಾರವಾಡ) ಗ್ರಾಮದಿಂದ ಸಲ್ಲಿಸಿದವರ ಹೆಸರುಗಳು.

ಶಿವಲಿಂಗಸ್ವಾಮಿಗಳು ಹುಕ್ಕೇರಿಮಠ ೫ ರೂ. ಶ್ರೀ. ಜಿ. ಎಸ್. ಹುಕ್ಕೇರಿ ೫ ರೂ., ಶ್ರೀ. ಮೋತಿಲಾಲ ೫ ರೂ., ಶ್ರೀ. ಕುರುಬಗೊಂಡ ಶೆಟ್ಟರು ೫ ರೂ., ಶ್ರೀ ಶಿ ಆರ್. ದೇಸಾಯಿ ೧೦ ರೂ., ಶ್ರೀ ಮಡಿವಾಳಪ್ಪ ಹತ್ತಿ ೧೦ ರೂ., ಶ್ರೀ. ಶಿದ್ರಾಮಪ್ಪ ಫಕೀರಪ್ಪ ೧೦ ರೂ., ಶ್ರೀ. ಚನ್ನಪ್ಪ ಚೌಶೆಟ್ಟಿ ೨ ರೂ., ಶ್ರೀ. ಚನವೀರಪ್ಪ ದೇವಶೆಟ್ಟಿ ೧ ರೂ., ಶ್ರೀ. ರುದ್ರಗೌಡ ಪಾಟೀಲ ೨ ರೂ., ಶ್ರೀ. ಶಿವಶಂಕರೆಪ್ಪ ಹೊಂಬಳ ೧ ರೂ. ೪ ಆಣೆ, ಶ್ರೀ. ದ್ಯಾಮಪ್ಪ ದಾನಶೆಟ್ಟರು ೧ ರೂ., ಶ್ರೀ. ಬಿ. ಎಚ್. ಬೆನ್ನೂರ ೧ ರೂ., ಶ್ರೀ. ಗುರುಸಿದ್ದಪ್ಪ ಸಾತೇನಹಳ್ಳಿ ೧ ರೂ., ಶ್ರೀ. ಶರಣಪ್ಪ ಹುಳ್ಳಿಕೊಪ್ಪಿ ೧ ರೂ., ಶ್ರೀ. ಚನ್ನಪ್ಪ ಕೋಟಿ ೧ ರೂ.; ಶ್ರೀ ಚನಬಸಪ್ಪ ಗೋಕಾವಿ ೧ ರೂ., ಶ್ರೀ ಪಡದಯ್ಯನವರು ೮ ಆಣೆ, ಶ್ರೀ ಯಲ್ಲಪ್ಪ ರಾಜನವರ ೧ ರೂ., ಶ್ರೀ ರುದ್ರಪ್ಪ ಲಿಂಬಿ ೧ ರೂ., ಶ್ರೀ ಬಸೆಟ್ಟೆಪ್ಪ ಗುಂಜೆಟ್ಟಿ ೧ ರೂ., ಶ್ರೀ ಎಸ್. ಜಿ. ಎರಗಂಬಳಿಮಠ ೧ ರೂ., ಶ್ರೀ ರುದ್ರಪ್ಪ ರಾಯರ ೧ ರೂ., ಶ್ರೀ ಕುಮಾರೇಶ್ವರ ಕಂಪನಿ ೨ ರೂ., ಶ್ರೀ. ಡಿ. ಪುಟ್ಟಪ್ಪ ೧ ರೂ., ಶ್ರೀ ಚಂದ್ರಶೇಖರಯ್ಯನವರು ೧ ರೂ., ಶ್ರೀ ರುದ್ರವ್ವಾ ಕುಲಕರ್ಣಿ ೧ ರೂ., ಶ್ರೀ ಮಹಾದೇವಯ್ಯನವರು ೨ ರೂ.. ಶ್ರೀ ಬಿ. ಎಸ್ ಪಾಟೀಲ ೨ ರೂ., ಶ್ರೀ ರಾಚಪ್ಪ ಕೋರಿ ೧ ರೂ. ಶ್ರೀ ಶಿವಕುಮಾರಯ್ಯನ ಕಂಪನಿ ೧ ರೂ. ಶ್ರೀ ರುದ್ರಪ್ಪ ಸಂಗಪ್ಪ ಜಾಬಿನ ೧ ರೂ. ಶ್ರೀ ವೀರವ್ವ ಮಲ್ಲಪ್ಪ ಬೆಂಕದ ೧ ರೂ. ಶ್ರೀ ವಿರೂಪಾಕ್ಷಪ್ಪ ಕಡ್ಲಿ ೨ ರೂ. ಶ್ರೀ ನೀಲನಗೌಡ ಪಾಟೀಲ ೧ ರೂ. ಶ್ರೀ ಚನಬಸಪ್ಪ ಮಂಡಕ್ಕಿ ೨ ರೂ. ಶ್ರೀ ಪಿ. ಕೆ. ಕುಲಕರ್ಣಿ ೨ ರೂ. ಶ್ರೀ ಸಿದ್ದಪ್ಪ ಚನಬಸಪ್ಪ ೨ ರೂ. ಶ್ರೀ ಉಜ್ಜನಿಗೌಡ ಪಾಟೀಲ ೧ ರೂ. ಶ್ರೀ ಚಂಬಣ್ಣಾ ಎಳವತ್ತಿ ೧ ರೂ.

ಶ್ರೀ ಎಮ್. ಕೆ. ಕಡೆಗಣ್ಣವರ ೧ ರೂ. ಶ್ರೀ ಎಚ್. ಮಹಾದೇವಪ್ಪಾ ೧ ರೂ. ಶ್ರೀ ಮಾಗಾವಿ ಸ್ಟೋರ ೨ ರೂ. ಶ್ರೀ ನಾಗಣ್ಣವರು ಮಾಸ್ತರ ೩ ರೂ. ಶ್ರೀ ನೀರಲಗಿ ವಕೀಲರು ೨ ರೂ. ಶ್ರೀ ಬಸಪ್ಪ ಕಬ್ಬೂರ ೨ ರೂ. ಶ್ರೀ ವೀರಸಂಗಪ್ಪ ೧ ರೂ. ಶ್ರೀ ದಾನಪ್ಪ ಗಡಾದ ೧ ರೂ. ಶ್ರೀ. ಗುಪ್ತದಾನ ೧ ರೂ. ಶ್ರೀ ಎಲ್ಲವ್ವ ಸುಣಗಾರ ಆಲೂರ ೧ ರೂ. ಶ್ರೀ ಬಿ. ಜೆ. ಬಣಗಾರ ವಕೀಲ ೨ ರೂಪಾಯಿ

ಮುಧೋಳ
೧೮—೧೨—೫೬

ತ್ಯಾಗವೀರ ಶಿ. ಚಿತ್ತರಗಿ
ಗೌರವ ಕಾರ್ಯದರ್ಶಿ,
ಡಾ|| ರಾ. ಬ. ಫ. ಗು. ಹಳಕಟ್ಟಿಯವರ
ನಿಧಿಸಂಗ್ರಹ ಕಮೀಟಿ, ಮುಧೋಳ.

# ಡಾ|| ಪಿ. ಜಿ. ಹಳಕಟ್ಟಿಯವರಿಗೆ ಮಾನಪತ್ರ.

ವಿಜಾಪುರ ವಕೀಲ ಸಂಘದವರು ತಾ. ೩-೧-೧೯೫೭ ನೇ ದಿನ ಜಡ್ಜಕೋರ್ಟಿನ ವಿಶಾಲವಾದ ಮಂದಿರದಲ್ಲಿ ಡಾಕ್ಟರ ಪಿ. ಜಿ. ಹಳಕಟ್ಟಿಯವರಿಗೆ ಮಾನಪತ್ರವನ್ನು ಸಮರ್ಪಿಸುವ ಸಮಾರಂಭವನ್ನು ನೆರವೇರಿಸಿದರು. ಅದರ ಅಧ್ಯಕ್ಷಸ್ಥಾನವನ್ನು ಜಿಲ್ಹಾ ಜಡ್ಜರಾದ ಶ್ರೀ. ಟಿ. ಕೆ. ತುಕೋಳ ಎಮ್. ಎ. ಇವರು ಮಂಡಿಸಿದ್ದರು. ಸಭೆಗೆ ಅ. ಸಿ. ಜಡ್ಜರೂ ೧ ನೇ ವರ್ಗ ಸಿವ್ಹಿಲ್ ಜಡ್ಜರೂ, ಜಾಯಿಂಟ ಸಿವ್ಹಿಲ್ ಜಡ್ಜರೂ ಕ್ರಿಮಿನಲ್ ಕೋರ್ಟುಗಳ ನ್ಯಾಯಾಧೀಶರೂ, ಕೋರ್ಟಿನ ವಕೀಲರೂ ಉಪಸ್ಥಿತರಾಗಿದ್ದರು. ಮೊದಲು ಬಾರ ಅಸೋಸಿಏಶನ್ನದ ಅಧ್ಯಕ್ಷರಾದ ಶ್ರೀ. ಎಸ್. ಟಿ. ಪಾಟೀಲರು ಮಾನಪತ್ರವನ್ನು ಓದಿ ಅದನ್ನು ಡಾ|| ಹಳಕಟ್ಟಿಯವರಿಗೆ ಸಮರ್ಪಿಸಿದರು. ಅದರೊಳಗಿನ ವಿಷಯಗಳನ್ನು ಸಮರ್ಥಿಸಿ ವಕೀಲರ ಪರವಾಗಿ ಶ್ರೀಯುತ ರಾಮಚಂದ್ರರಾವ ಚಕ್ರಭಾವಿ ಇವರು ಭಾಷಣ ಮಾಡಿದರು. ಅವರು ತಮ್ಮ ಭಾಷಣದಲ್ಲಿ ಡಾಕ್ಟರ ಹಳಕಟ್ಟಿಯವರು ಈ ವರೆಗೆ ಮಾಡುತ್ತಬಂದ ವಾಙ್ಮಯಕಾರ್ಯಗಳನ್ನು ಪ್ರಶಂಸಿಸಿ ಭಾಷಣ ಮಾಡುತ್ತ ಯಾರಿಗಾದರೂ ವಾಙ್ಮಯದ ವಿಷಯವಾಗಿ ಹೆಚ್ಚಿನ ವಿವರಗಳು ಬೇಕಾಗಿದ್ದರೆ ಅಂಥವರಿಗೆ ಅವರು ಸಹಾಯ ಮಾಡುತ್ತ ಬಂದಿದ್ದಾರೆ. ಈ ಬಗ್ಗೆ ಅವರು ಕೆಲವು ಉದಾಹರಣೆಗಳನ್ನೂ ಉದಹರಿಸಿದರು.

ಆಮೇಲೆ ರಾವಸಾಹೇಬ ವ್ಹಿ. ವ್ಹಿ. ಮುಧೋಳಕರ ಇವರು ಇಂಗ್ಲೀಷದಲ್ಲಿ ತಮ್ಮ ಭಾಷಣವನ್ನು ಮಾಡಿದರು. ಅದು ಕೆಳಗೆ ಕೊಡಲ್ಪಟ್ಟಿದೆ.

Sirs of the Bench and brothers of the Bar, we have assembled to day here in this Historical Hall to do honour to Dr. Rao B P. G. Halkatti, B. A., LL, B. (D.Lit).

Bijapur is the flower-garden of Fakirs.

Sweet smelling roses and Jassmines still grow there. our Dr. is the rose that grew silently in the shades of our bar of which he is the ornament.

I greet Dr. Halkatti whose head wears to day the laurels of broad and deep honours of Doctorate in literature at the hands of the University of the Karnatak.

Ha has placcd before the Kannada world the soft pearls of water of Vachana Philosophy of the Basava's times and others.

The plate of juicy fruits of trans-thought glimpses of Virashaiv Shat-sthala is being tasted with undying pleasure, even by the citadels of learnning-, I mean, Universitis.

I pray God to bless Dr. Halkatti with such health and strength as would enable him to mobilise amongst the Kannadigas the hither to unknown ideas of the Socialistic pettern of society, the foundation of which is already laid by the Sharanas in their Vachana literature ad the early advent of which was fore-told in years and years ago by the folk-scngs of old.

ಮೇಲಿನ ಇಂಗ್ಲೀಷದ ಭಾಷಾಂತರವು ಶ್ರೀ ಮುಧೋಳಕರ ಇವರು ಕೆಳಗಿನಂತೆ ಮಾಡಿದ್ದಾರೆ.

ನಾವು ಈ ಐತಿಹಾಸಿಕ ಪ್ರಾಂಗಣದಲ್ಲಿ ಈ ದಿನ ಡಾಕ್ಟರ ರಾ. ಬ. ಹಳಕಟ್ಟಿ ಇವರನ್ನು ಅಭಿನಂದಿಸುವದಕ್ಕೋಸುಗ ಕೂಡಿದ್ದೇವೆ.

ವಿಜಾಪುರ ಇದು ವಿರಕ್ತಪುರುಷರ ಹೂದೋಟ. ಪರಿಮಳ ಗುಲಾಬಿ, ಮತ್ತು ಮಲ್ಲಿಗೆ ಹೂಗಳು ಇನ್ನು ಅಲ್ಲಿ ವಿಪುಲ ಬೆಳೆಯುತ್ತಾ ಇವೆ.

ಡಾಕ್ಟರ ಹಳಕಟ್ಟಿಯವರು ನಮ್ಮ ನ್ಯಾಯಪಂಡಿತ ಸಂಘದ ನೆರಳಿನಲ್ಲಿ ಶಾಂತವಾಗಿ ಬೆಳೆದು ಒಂದು ಸುಂದರವಾದ ಗುಲಾಬ ಪುಷ್ಪವು. ಈ ಮಂಡಲಕ್ಕೆ ಇವರು ಅಲಂಕಾರವು.

ಕರ್ನಾಟಕದ ವಿಶ್ವವಿದ್ಯಾಲಯದಿಂದ ಕನ್ನಡ ವಾಙ್ಮಯ ಪಾಂಡಿತ್ಯದ ವಿಶಾಲ ಗಂಭೀರವಾದ ಡಾಕ್ಟರೇಟವೆಂಬ ದುರ್ಮಿಳವಾದ ಮಹಾಪದವಿಯಿಂದ ಸುಶೋಭಿತರಾದ ಡಾ॥ ಹಳಕಟ್ಟಿ ಇವರಿಗೆ ಈ ದಿನ ಇಲ್ಲಿ ನನ್ನ ಸಂಭಾವನೆಯನ್ನು ನೀಡುತ್ತಿದ್ದೇವೆ.

ಬಸವನ ಮತ್ತು ಇತರರ ಕಾಲದ ವಚನ ತತ್ವಜ್ಞಾನದ ಶಾಂತ ಪ್ರಭೆಯುಳ್ಳ ಬೆಲೆಯಿಲ್ಲದ ಮುತ್ತುಗಳನ್ನು ಕನ್ನಡ ಜಗತ್ತಿನ ಮುಂದೆ ಅವರು ಹರಿವಿಬಿಟ್ಟಿದ್ದಾರೆ.

ಬುದ್ಧಿಗೆ ಅತೀತವಾಗಿ ದೊರಕುವ ವೀರಶೈವ ಷಟ್‌ಸ್ಥಲದ ದರ್ಶನಗಳ ರಸವುಳ್ಳ ಹಣ್ಣುಗಳ ಎಡೆಯು ಅಮರ ಸ್ವಾದವು ಜ್ಞಾನದ ಕಿಲ್ಲೆಗಳು ಅಥವಾ ಕೇಂದ್ರಗಳು ಎನಿಸುವ ವಿಶ್ವವಿದ್ಯಾಲಯಗಳು ಈಹೊತ್ತು ಸವಿಯುತ್ತ ಇವೆ.

ಜನಜನಂಗಳಲ್ಲಿ ವರ್ಷಾನುವರ್ಷ ಬಹುಕಾಲದಿಂದ ಹಾಡುತ್ತ ಬಂದಿರುವ ಜನಪದದಲ್ಲಿ ಯಾವುದರ ಆಗಮನವನ್ನು ಸೂಚಿಸುತ್ತ ಬಂದಿರುವರೋ ಮತ್ತು ಯಾವುದರ ತಳಹದಿಯು ಶರಣರ ವಚನ ವಾಙ್ಮಯದಲ್ಲಿ ಆಗಿಯೆ ಹಾಕಲ್ಪಟ್ಟಿದೆಯೋ ಆ ಸಮಾಜ ವಾದದ ಸಮಾಜದ ಆದರ್ಶದ ಈ ವರೆಗೆ ಅಜ್ಞಾತವಿರುವ ನವ ವಿಚಾರಗಳನ್ನು ಕನ್ನಡಿಗರಲ್ಲಿ ರೂಢ ಮಾಡಲು ಬೇಕಾಗುವ ಆರೋಗ್ಯವನ್ನು ಮತ್ತು ಶಕ್ತಿಯನ್ನು ಪ್ರಭುವು ಶ್ರೀ ಡಾ॥ ಹಳಕಟ್ಟಿಯವರಿಗೆ ದಯಪಾಲಿಸಲೆಂದು ಆತನಿಗೆ ನನ್ನ ಪ್ರಾರ್ಥನೆ ಇದೆ.

ಹೀಗೆ ಭಾಷಣಗಳಾದ ತರುವಾಯ ಡಾಕ್ಟರ ಹಳಕಟ್ಟಿಯವರು ತಾವು ಈ ವರೆಗೆ ಮಾಡುತ್ತಬಂದ ಸಂಶೋಧನೆಯ ಕಾರ್ಯಗಳನ್ನು ವಿವರಿಸಿದರು. ಅವು ಶ್ರೋತೃಗಳಿಗೆ ಬಹು ಮಹತ್ವದವಾಗಿರುವವೆಂದು ತಿಳಿದುಬಂದಿತು. ಕರ್ನಾಟಕದಲ್ಲಿ ಇನ್ನುಮುಂದೆ ಸಂಶೋಧನೆ ಮಾಡತಕ್ಕ ಕಾರ್ಯಗಳು ಅನಂತವಾಗಿರುತ್ತವೆಂದು ಅವರು ಹೇಳಿ ಅವುಗಳ ಸಂಶೋಧನೆಯೇ ಕರ್ನಾಟಕದ ಭಾವೀಕಲ್ಯಾಣಕ್ಕೆ ಕಾರಣವಾಗುವದೆಂದು ತಿಳಿಯಪಡಿಸಿದರು. ಈ ಭಾಷಣಗಳಾದ ಮೇಲೆ ಸಭೆಯು ಮುಕ್ತಾಯ ಹೊಂದಿತು.

———

ಸಂಪುಟ ೩೧ ಸಂಚಿಕೆ ೨

# ಶಿವಾನುಭವ

---

ಸಂಪಾದಕರು
ಡಾ॥ ರಾ.ಬ. ಫ. ಗು. ಹಳಕಟ್ಟಿ,
ಬಿ, ಎ. ಎಲ್. ಎಲ್. ಬಿ.
ವಿಜಾಪುರ.

[ ವಾರ್ಷಿಕ ಚಂದಾ ೫-೧೨-೦ ಅಂಚೆಯ ವೆಚ್ಚ ಸೇರಿ ]

ಫೆಬ್ರುವರಿ ೧೯೫೭

# ವಿಷಯಾನುಕ್ರಮಣಿಕೆ

ಶಿವಾನುಭವ

ಸಂಪುಟ ೩೧ | ಫೆಬ್ರವರಿ ೧೯೫೭ | ಸಂಚಿಕೆ ೨

# ವೀರಶೈವಮತವೂ ಪುರಾತನರ ಪೂಜೆಯೂ.

(ಲೇ :— ಬಿ. ಪುಟ್ಟಮಲ್ಲಪ್ಪ ಮಾಸ್ಟರ್ ದೊಡ್ಡಿಂದುವಾಡಿ ತಾ|| ಕೊಳ್ಳೆಗಾಲ,
ಜಿ|| ಮೈಸೂರು.)

ವೃ|| ಧರೆಬೆರಲೆತ್ತಿ ಬಣ್ಣಿಸುತಿರಲ್ ಪೊಗಳ್ವೆಂ ಘನಭಕ್ತಿಯಿಂ ಕೃಪಾ ।
ಕರ ಶಿವಲಿಂಗಮಂ ಬಿಡದೆ ಪೂಜಿಸಿಸಂದ ಮಹಾನುಭಾವರಂ ।
ದುರಿತ ಸಮೂಹಮಂ ನೆರೆಯೆ ಸೋಮಾರನರ್ಥಿ ೯ಕೊಳ್ಪನೀವರಂ ।
ಶರಣೆನೆಕಾವರಂ ಸುಕೃತ ಜೀವರನೊಲ್ದರವತ್ತು ಮೂವರಂ ||

—ಸುರಂಗ ಕವಿ.

ವೀರಶೈವರು ಏಳುನೂರೆಪ್ಪತ್ತು ಅಮರಗಣಂಗಳ ಪೂಜೆ ಅರವತ್ತು ಮೂರು ಪುರಾತನರ ಪೂಜೆ ಮತ್ತು ಏಕಾದಶ ರುದ್ರರ ಪೂಜೆಯುಂದು ಮಠಾಧಿಪತಿಗಳಲ್ಲಿ ಕೆಲವರು ಮಾತ್ರ ಭಕ್ತರನ್ನೊಡಗೊಂಡು ಈ ಕಾರ್ಯಗಳನ್ನೆಸಗುವರು. ೭೭೦ ಅಮರಗಣಂಗಳ ಪೂಜೆಯನ್ನು ವಿಜಾಪುರ ಜಿಲ್ಲೆ ಬಂಥನಾಳ ಶಿವಯೋಗಿಗಳೂ, ೬೩ ಮಂದಿ ಪುರಾತನರ ಪೂಜೆ ಏಕಾದಶಿ ರುದ್ರರ ಪೂಜೆ, ಧಾರವಾಡದ ಶ್ರೀ ಮ. ನಿ. ಪ್ರಣಮಸ್ವರೂಪಿಗಳಾದ ಮೃತ್ಯುಂಜಯ ಸ್ವಾಮಿಯವರೂ ಶ್ರೀ. ಮ. ನಿ. ಪ್ರಣವಸ್ವರೂಪಿಗಳಾದ ದೇವನೂರು ಗದ್ದಿಗೆ ಪೀಠಾಧ್ಯಕ್ಷರಾದ ತೋಂಟದಾರ್ಯ ಸ್ವಾಮಿಯವರೂ, ಇನ್ನೂ ಅನೇಕ ಮಹನೀಯರು ನೆರವೇರಿಸಿರುವುದು ಅನೇಕರಿಗೆ ವೇಧ್ಯವಾಗಿರುತ್ತೆ.

ಆವುದಾನೊಂದು ಸಿದ್ಧಿಗೆ ಪ್ರಮಾಣವೂ, ಲಕ್ಷಣವೂ ಅವಶ್ಯಕ. ಶಿವಜ್ಞಾನಿಗಳಲ್ಲಿ ಶಿವಾನುಭವವೇ ಹೆಚ್ಚಿನ ಪ್ರಮಾಣವೆಂದು ನಂಬಿರುವರು. ಶಿವನನ್ನು ಲಿಂಗರೂಪದಲ್ಲಿ ಪೂಜಿಸುವುದು ಶೈವ ವೀರಶೈವರಲ್ಲಿ ಸಾರ್ವತ್ರಿಕ ವಾದ ರೂಢಿಯಿರುತ್ತೆ. ಸಮುಸ್ತವಸ್ತುಗಳನ್ನು ಪ್ರಕಾಶಪಡಿಸುವ ಚಂದ್ರಿಕೆಯೂ ಚಂದ್ರನಲ್ಲಿ ಸ್ಥಿರವಾಗಿ ನಿಲ್ಲುವಂತೆ ವಿಶ್ವವಸ್ತುವನ್ನು ಪ್ರಕಾಶಪಡಿಸುವ ವಿಮರ್ಶಶಕ್ತಿಯು ಪ್ರಕಾಶವು ಸ್ವರೂಪವಾದ ಪರಬ್ರಹ್ಮನಲ್ಲಿ ಸ್ಥಿರವಾಗುವುದು. ಚಂದ್ರನಲ್ಲಿ ಚಂದ್ರಿಕೆಯೂ, ಸೂರ್ಯನಲ್ಲಿ ಪ್ರಭೆಯೂ, ಅಗ್ನಿಯಲ್ಲಿ ದಾಹವೂ, ಸಮುದ್ರದಲ್ಲಿ ಸೌಭಾಗ್ಯವೂ, ಕುಸುಮದಲ್ಲಿ ಗಂಧವೂ, ಸಕ್ಕರೆಯಲ್ಲಿ ಸವಿಯೂ ಅವಿನಾಭಾವ ಸಂಬಂಧವಿರುವಂತೆ ಶಿವನಲ್ಲಿ ಶಕ್ತಿಯು ಅವಿನಾಭಾವ ಸಂಬಂಧ ದಿಂದಿರುವದೆನ್ನುವುದೇ ವೀರಶೈವ ಮತ್ತು ಪುರಾತನರ ನೂತನ ಪುರಾತ ನರ ಸಿದ್ಧಾಂತ. ತಮಿಳುನಾಡಿನಲ್ಲಿ ಮಹಿಮರಾದ ಪುರಾತನರ ಬಗ್ಗೆ ಅನೇಕ ದೇಗುಲಗಳಲ್ಲಿ ಪುರಾತನರ ಪ್ರತಿಮೆಗಳನ್ನು ಇಟ್ಟು ಶೈವರು ಪೂಜಿಸುತ್ತಿ ರುವಂತೆ ವೀರಶೈವರಲ್ಲಿ ಪ್ರತಿಯೋರ್ವರ ಹೆಸರಿನಿಂದ ಶ್ರೀ ವಿರಕ್ತಸ್ವಾಮಿ ಯವರುಗಳ ಶ್ರೀ ಪಟ್ಟದ ಶ್ರೀಗಳವರನ್ನು ಕೂಡ್ರಿಸಿ ಪೂಜಿಸುತ್ತಿರುತ್ತಾರೆ. ಪುರಾತನರ ಭಕ್ತಿಮಾರ್ಗವು ಕಠಿಣತರವಾದದ್ದು. ಕೊಂಕದ ಲಿಂಗಕ್ಕೊ ತನ್ನ ಕೊರಲಿಗೂ ಅಲಗಂ ಇಟ್ಟು ಸೆಳೆದು ಶಿವನಂ ಮೆಚ್ಚಿಸಿ ಕೈಲಾಸಕ್ಕೆ ತೆರಳಿದ ಕೊಂಗಿಲಿಕಲಿಯಾರು, ಮೊಳಕೈಯಲ್ಲಿ ಗಂಧವಂ ತೆಗೆದು ಶಿವನಂ ಮೆಚ್ಚಿಸಿದ ವಲಘಂಡಮೂರ್ತಿಯರು ಜಡೆಯನ್ನು ಹತ್ತಿಸಿ ಶಿವನಿಗೆ ಬೆಳ ಗನ್ನಿತ್ತ ಕಣಿಂಬಲಿನಂಬಿಯರು, ಶಸ್ತ್ರದಿಂದ ಹೃದಯವ ಬಗೆದು ಲಿಂಗವನ್ನು ತೋರಿದ ವಾಹಿಲ್ಯರು, ಕಣ್ಣನ್ನು ಕಿತ್ತು ಶಿವನ ಕಣ್ಣಿಗೆ ಹತ್ತಿಸಿದ ಬೇಡರ ಕಣ್ಣಪ್ಪನು, ಕಲ್ಲುಗಳಿಗೆ ಬದಲಾಗಿ ತನ್ನ ಶಿರವನ್ನರಿದಿಟ್ಟ ಸಾಂಖ್ಯನಾರರ್ರ ಮೊದಲಾದ ಪುರಾತನರು ಪವಾಡ ಮಹಿಮೆಯುಳ್ಳವರು. ಭಾರತೀಯ ತತ್ವಜ್ಞಾನದ ಬುನಾದಿಯೆನಿಸಿದ ಋಗ್ವೇದದಲ್ಲಿ "ತ್ರಿಷಷ್ಟಿಃ ತ್ವಾ ಮಾರುತಃ" ಎಂಬ ವಾಕ್ಯದಲ್ಲಿ ಅಕಳ ಹಿಂಡಿನಂತೆ ತ್ರಿಷಷ್ಟಿ (೬೩) ಗಣಂಗಳು ವೀರ ಶೈವರಿಗೆ ಪೂಜ್ಯರಾಗಿದ್ದಾರೆ. ನೂತನ ಪುರಾತನರಾದ ನಿಜಗುಣ ಕವಿ, ಷಡಕ್ಷರ ಕವಿ, ಗುಬ್ಬಿಮಲ್ಲಣಾರ್ಯರು, ಭೀಮಕವಿ, ಪಾಲ್ಕುರಿಕೆ ಸೋಮ ನಾರಾಧ್ಯರು ಇವರುಗಳು ಪುರಾತನರ ಬಗ್ಗೆ ಸ್ತೋತ್ರ ಮಾಡಿರುವರಲ್ಲದೆ, ಶಿವತತ್ವ ಚಿಂತಾಮಣಿ, ಸೋಮನಾಥ ಪುರಾಣ, ಹರೀಶ್ವರರು ಬರೆದ

ರಘಟಾಪ್ರಬಂಧ, ಉಪಮನ್ಯುವಿನ ಭಕ್ತಿವಿಲಾಸ, ವೀರಭದ್ರಕವಿಯು ಬರೆಯಲ್ಪಟ್ಟ ಅರವತ್ತುಮೂವರ ಪುರಾಣ, ಅಣ್ಣಾಜಿ ಕವಿಯ ಸೌಂದರವಿಲಾಸ ಶ್ರೀ ಎಸ್. ಸಿ. ಯವರು ಬರೆಯಲ್ಪಟ್ಟ ಪುರಾತನರ ಭಕ್ತಿವಿಲಾಸ, ಶ್ರೀಮಾನ್ ಮರ್ಜಿಯವರು ಬರೆಯಲ್ಪಟ್ಟ ಅರವತ್ತುಮೂವರು ಪುರಾತನರು ಈ ಗ್ರಂಥಗಳಲ್ಲಿ ಪುರಾತನರ ಚರಿತ್ರೆ ವಿಶದವಾಗಿರುತ್ತೆ.

ಅರವತ್ತುಮೂರು ಪುರಾತನರೆಂದರೆ ವೀರಶೈವರಂತೆ ಧರ್ಮದ ಭಕ್ತಿಪಂಥವನ್ನು ಸಳೆಸಿದ ಮಹಾತ್ಮರುಗಳು. ಇವರೆಲ್ಲ ತಮಿಳುನಾಡಿನಲ್ಲಿ ಬೆಳೆದು ಉಚ್ಚನೀಚ ಎಂಬ ಭಾವಗಳನ್ನು ಸ್ತ್ರೀಪುರುಷರೆಂಬ ಸಮಾಜದ ಸಂಕೋಲೆಗಳನ್ನು ಪ್ರತಿಭಟಿಸಿ ಮಹತ್ತ್ವವನ್ನು ತೋರಿದ ಮಹಾಪುರುಷರು. ಇವರಲ್ಲಿ ೩೨ ಮಂದಿ ಶಿವಲಿಂಗಾರಾಧನೆಯಲ್ಲಿ ಮುಕ್ತಿಹೊಂದಿದವರು. ೧೨ ಮಂದಿ ಜ್ಞಾನಿಗಳಾದ ಗುರುಗಳ ಅನುಗ್ರಹದಿಂದ ಮುಕ್ತಿಯನ್ನು ಪಡೆದವರು. ೧೯ ಮಂದಿ ಶಿವಭಕ್ತರ ಅನುಗ್ರಹದಿಂದ ಮುಕ್ತಿಯನ್ನು ಪಡೆದವರು. ಈ ಮಹನೀಯರು ಪ್ರಭಾವವು ತಮಿಳುನಾಡಿನಲ್ಲಿ ಮತ್ತು ಕನ್ನಡನಾಡಿನ ವೀರಶೈವ ಸಮಾಜದಲ್ಲಿ ವಿಪುಲವಾದ ಪರಿಣಾಮವನ್ನುಂಟುಮಾಡಿರುತ್ತೆ. ಬಸವೇಶ್ವರರೂ ಅವರ ಅನುಯಾಯಿಗಳಾದ ಶಿವಶರಣರೂ ಇವರನ್ನು ಆದರ್ಶಮೂರ್ತಿಗಳಾಗಿ ಮಾಡಿಕೊಂಡಿದ್ದುದಲ್ಲದೆ ಬಸವೇಶ್ವರರಿಗೂ ಮೊದಲಿಗರಾದ ನಿಜಗುಣ ಶಿವಯೋಗೀಶ್ವರರು ೬೩ ಪುರಾತನರ ತ್ರಿವಿಧಿಯನ್ನು ಬರೆದು ಸಮಾಜದ ಮುಂದಿಟ್ಟಿರುತ್ತಾರೆ.

> ಉತ್ತಮ ಗಣೇಶ್ವರರ ಮೊತ್ತದೊಳುನಿಜಕೀರ್ತಿ
> ವೆತ್ತ ಮಹಿಮೆಗಳನೊಳಗೊಂಡ ಶರಣರರು
> ವತ್ತು ಮೂವರನು ಪೊಗಳುವೇಂ ॥
> ಶರಣರರವತ್ತು ಮೂವರ ಮಹಿಮೆಗಳನಿಂತು ।
> ಬರೆದೋದಿ ಕೇಳ್ವರ್ಗೆನಿಜ ಸುಖಂ ।
> ದೊರೆವುದಿಹಪರದೊಳೆದುಸಿದ್ಧ

ಇದೂ ಅಲ್ಲದೆ ಷಡಕ್ಷರಿ ಕವಿಗಳು ಶಿವನಂ ಮೆಚ್ಚಿಸಿದ ಪುರಾತನರ ವಿಚಾರದಲ್ಲಿ.

ವೃ|| ಶಿವನೊಡನುಂಡು ಶಂಕರನಂಗನೆಯುಂ ಗಣ ಕಟ್ಟಿ ಶಂಭುವಿಂ |
ಗವವಯವಿತ್ತು ಶರ್ವನೊಡಕ್ಕನುನಾಡಿ ಭವಂಗಮುರ್ಚಿ ಚ |
ಕ್ಷುವನ ಭವಂಗೆ ಪಾಲೆರೆದು ಭರ್ಗನೊಳರ್ಪಿಸಿ ಸರ್ವಮುಂ ಶಿವಾ |
ಧವನೊಲವೆತ್ತರಿಂದೆಮಗೆ ವಂದ್ಯರನಿಂದ್ಯರರ ವಧ್ಯರೂರ್ಜಿತರ್ ||

ಹೀಗೆ ರಾಜಶೇಖರದಲ್ಲಿ ಪುರಾತನರು ಮಾಡಿದ ವಿಚಾರವನ್ನು ವರ್ಣಿಸಿರುತ್ತಾರೆ. ಈ ಪುರಾತನರ ಬಾಳು ಸತ್ಯ. ದಯೆ, ಪರೋಪಕಾರ ಭಕ್ತಿ, ಜ್ಞಾನ, ವೈರಾಗ್ಯಗಳಿಂದ ಕೂಡಿ ಜಗತ್ತಿನಲ್ಲಿ ಪ್ರಕಾಶವೆತ್ತಿರುವುದ.. ಪುರಾತನರಂತೆಯೇ. ನೂತನ ಪುರಾತನರು ಪವಾಡ ಪುರುಷರಾಗಿ ಮೆರೆದಿರುತ್ತಾರೆ. ಪುರಾತನರನ್ನು ಬಸವಾದಿ ಪ್ರಮಥರು ಆದ್ಯರು, ಆಚಾರ್ಯರೆಂದು ತಮ್ಮ ಗ್ರಂಥಗಳಲ್ಲಿ ತೋರಿಸಿರುತ್ತಾರೆ.

ಆದ್ಯರ ವಚನ ಪರುಷ ಕಂಡಯ್ಯ
ಸದಾ ಶಿವನೆಂಬ ಲಿಂಗವನಂಬುವದು.
ನಂಬಲೊಡನೆನೀ ವಿಜಯುಕಂಡಯ್ಯ
ಅಧರಕ್ಕೆ ಕಹಿ ಉದರಕ್ಕೆ ಸಿಹಿ
ಕೂಡಲಸಂಗನ ಶರಣರ ವಚನ ಬೇವಸವಿದಂತೆ
ಆಧ್ಯರ ವಚನ ಪರುಷವೆಂಬೆನು
ಆ ಪರುಷವೆನಗೆಂತು ದೊರೆಕೊಂಬುದಯ್ಯ
ತನುಮನಧನವ ವಿವರಿಸಿ ನುಡಿದೆ ಸೈರಿಸಲಾರೆ
ಹೊಲೆಯುರ ಮದ್ದ ಳೆಯಂತೆ ನುಡಿವ ಡಾಂಭಿಕನಾನಯ್ಯ

—ಕೂಡಲಸಂಗಮದೇವ.

ಪರುಷವು ಸೋಂಕಿದ ಮಾತ್ರದಲ್ಲಿ ಕಬ್ಬಿಣವು ಸುವರ್ಣವಪ್ಪಂತೆ ಶರಣರ ಧ್ಯಾನ. ಅವರ ನುಡಿ ಕೇಳಿದ ಆ ನುಡಿಯಂತೆ ನಡೆಯುಲ್ಲಿರುವ ಸದ್ಭಕ್ತನು. ಶರಣರಂತೆ ಭಕ್ತಿಪಥದಲ್ಲಿ ವರ್ತಿಸಲನುವಾಗುವನು. ನುಡಿನಡೆ ಒಂದಿಲ್ಲದೆ ನುಡಿ ಪುರಾತ ನಡೆ ಕಿರಾತ ಮಾರ್ಗದಲ್ಲಿರುವವನು ಸತ್ಪಥಕ್ಕೆ ಸಲ್ಲದಾತನು ಪುರಾತನರು ಮತ್ತು ಹನ್ನೆರಡನೆ ಶತಮಾನದಲ್ಲಿದ್ದ ಶರಣರು ಶಿವನಂ ಮೆಚ್ಚಿಸಲು ಮಾರ್ಗದರ್ಶಿಗಳಾಗಿರ್ದರು ಪುರಾತನರು ಮತ್ತು ನೂತನ ಪುರಾತನರು ಜಾತ್ಯಂಧತೆಯನ್ನು ನೀಗಾಡಿ "ಅಂಗದಮೇಲೆ ಲಿಂಗವಿದ್ದವನ ಸಂಗಮೇಶನೆಂಬೆ" ಎಂಬ ವಿಚಾರವನ್ನು ಅನುಭವಮಂಟಪದಲ್ಲಿ ಪ್ರಭುದೇವರೊಡ್ಡೋಲಗದಲ್ಲಿ,

ಕುಲದಲ್ಲಿ ಶೂದ್ರನಾದರೇನು ಮನದಲ್ಲಿ
ಮಹಾದೇವನನೆಲಗೊಂಡವನೇ ವೀರಶೈವ ನೋಡಾ

ಎಂಬದಾಗಿ ಸಿದ್ಧರಾಮೇಶನು ವ್ರತ, ನಿಯಮ, ಶೀಲಗಳಿಂದ ಭಕ್ತಿ ದೃಢವೂ, ಮಲವಿರಹಿತವೂ ಆಗುತ್ತದೆಂದೂ ಸಂಶಯ ಕಾತುರಗಳು ತೊಲಗಿ ಮನಸ್ಸು ಒಂದು ಸ್ಥಿರರೂಪದಲ್ಲಿ ನಿಲ್ಲುತ್ತದೆಂದು ಹೇಳಿರುವರು. ಅದೇ ಸ್ಥಾನದಲ್ಲಿ ಮಹದೇವಿಯಕ್ಕನು,

"ಸದಾಚಾರ ಸದ್ಧರ್ಮ ಸದ್ಭಕ್ತಿ ನೆಲಸಿದ ಠಾವೇ ಕುಲಜನ ಠಾವು. ಅಸಿ, ಹುಸಿ, ಕೋಪ, ಮೋಸವಿರುವ ಠಾವೇ ಹೊಲೆಯನ ನೆಲೆ ಸದಾಚಾರ ಸದ್ಗುಣಸಂಪನ್ನನೇ ಕುಲಜ ಅನಾಚಾರಿ ದುರ್ಗುಣಿಯೇ ಕುಲಹೀನ ........ಚನ್ನಮಲ್ಲಿಕಾರ್ಜುನಾ ಎಂದು ಹೇಳಿರುವರು.

ನೂತನ ಪುರಾತನರು ಪುರಾತನರಂತೆ ಪವಾಡವನ್ನು ತೋರಿಸಿರುವರು. ಹಾವಿನಾಳ ಕಲ್ಲಯ್ಯನು ನಾಯಿಯಿಂದ ವೇದಗಳನ್ನು ಉದ್ಘೋಷಿಸಿರುವರು. ಬಿಜ್ಜಳನು ರಾಜ್ಯವಾಳುತ್ತಿದ್ದಾಗ ಆಭರಣವನ್ನು ಮಾಡಿಸಲಿಕ್ಕೆ ಬಂಗಾರವನ್ನು ತನ್ನ ಸೇವಕನವಶದಲ್ಲಿ ಕೊಟ್ಟು ಕಲ್ಲಯ್ಯನ ತಂದೆಯಾದ ಶಿವಯ್ಯನ ಕಡೆಗೆ ಕಳುಹಿಸಲು ಆತನು (ಕಲ್ಲಯ್ಯನು) ಶಿವಪೂಜೆಯಲ್ಲಿ ಮಗ್ನನಾಗಿರುವಾಗ ತಂದೆಯು ಶಿಕ್ಷಿಸಲು ಕಲ್ಲಿನಾಥನ ಗುಡಿಗೆ ಹೋಗಿ ಕಠಾರಿಯಿಂದ ತನ್ನ ಹೊಟ್ಟೆಯನ್ನು ಬಗೆದುಕೊಳ್ಳಲು ಕಲ್ಲಿನಾಥನು ಪ್ರತ್ಯಕ್ಷನಾಗಿ ಆವನ ಜೀವವನ್ನುಳಿಸಿರುವನು. ಪುರಾತನರ ಬಗ್ಗೆ ತಮ್ಮ ವಚನದಲ್ಲಿ.

ಶಿವವಚನವ ಗುರುವಚನವ ಪುರಾತನರವ ಚನವ ಕೇಳಿ ಬದುಕಿರಯ್ಯಾ! ಕೇಳಿದರೆ ಕೃತಾರ್ಥರಪ್ಪಿರಿ. ತನುಕರಗಿ, ಭಾವಬೆಚ್ಚು ಶರಣರಲ್ಲಿ ಅನುಭಾವವ ಕೇಳಿದರೆ ಅದೇ ಮುಕ್ತಿ ನೋಡಿರೋ? ಇಂತಲ್ಲದೆ ಮನ ವ್ಯಾಕುಳವಾದ ಗೀತಗಳಂ ಮನಮುಟ್ಟಿ ಕೇಳಿದೊಡೆ ಉಪದೇಶವೆಂತು ಸಲುವದಯ್ಯಾ? ಮಹಾಲಿಂಗ ಕಲ್ಲೇಶ್ವರಾ ಗುರುವಚನ ಪರಾಙ್ಮುಖಿಗೆ ಎಂದೆಂದು ಭವಹಿಂಗದು ನೋಡಾ!

ಎಂಬದಾಗಿ ಉಲ್ಲೇಖಿಸಿರುವರಲ್ಲದೆ ಅಲಿಂಗಿಗಳು ಲಿಂಗಾಂಗಿಯಾದರೆ ಅವರಲ್ಲಿ ಜಾತಿಸೂತಕವನ್ನರಸಬಾರದು ಎಂಬ ವಿಚಾರದಲ್ಲಿ,

ಪೂರ್ವಜಾತವ ಕಳೆದು ಪುನರ್ಜಾತನಾದ ಬಳಿಕ ಏನೆಂದೆನಲುಂಟು! ಭಕ್ತಕಾಯ ಮಮಕಾಯವಾದ ಬಳಿಕ ಏನೆಂದೆನಲುಂಟು? ನಮುಕ್ತಶ್ಚನ ಥವ ಶ್ಚ ನ ಪುಣ್ಯಂಚ ನ ಪಾಪನರವರ್ಾಪಿ ನ ಜನ್ಮಚ ಗುರುಭಾವ ನಿರೀಕ್ಷಣಾತ್" ಎಂದುದಾಗಿ ಇದುಕಾರಣ ಹಮ್ಮುಬಿಮ್ಮು ಸೊಮ್ಮಳಿದ ಮಹಾಲಿಂಗ ಕಲ್ಲೇಶ್ವರ ತಾನಾದ ಬಳಿಕ ಏನೆನಲುಂಟು

ಎಂಬದಾಗಿ ತಮ್ಮ ವಚನದಲ್ಲಿ ನಿರೂಪಿಸಿರುತ್ತಾರೆ. ಮನಸ್ಸನ್ನು ಮೊದಲು ಶುಚಿಗೊಳಿಸಿ ಹದಗೊಳಿಸಿ ಪರಮಾರ್ಥದ ಕಡೆಗೆ ಅದರ ಒಲವು ಓಟ ಹೋಗುವಂತೆ ಪುರಾತನರ ಭಕ್ತಿಮಾರ್ಗ ಶಿವಭಕ್ತಿಯ ನಿಷ್ಠೆ ಹೀಗಿರುವದೆಂಬುದನ್ನು ಊಹಿಸಬಹುದು. ಪುರಾತನರ ಧರ್ಮವು ತಮಿಳುನಾಡಿನಲ್ಲಿ ಕ್ರಿಸ್ತಶಕ ೧ನೇ ಶತಮಾನದಲ್ಲಿ ಪ್ರಖ್ಯಾತಿಯಾಗಿತ್ತು. ಪಲ್ಲವರ ಕಾಲದಲ್ಲಿ "ಶೈವ ಸಮಯಾಚಾರರು"ಎಂಬ ತಿರುಜ್ಞಾನ ಸಂಬಂಧ, ವಾಗೀಶ, ಸುಂದರ ಮೂರ್ತಿ, ಮಾಣಿಕ್ಯ ವಾಚಕರು ಇದ್ದರು. ಹನ್ನೆರಡನೇ ಶತಮಾನದಲ್ಲಿ ಸೇಕಿಳಾರ್ ಎಂಬ ಚೋಳ ಮಂತ್ರಿವರ್ಯರು ಬರೆದ "ಪೆರಿಯ ಪುರಾಣ" ದಲ್ಲಿ ಪುರಾತನರ ಉಲ್ಲೇಖವಿದೆ. ಇವರಲ್ಲಿ ಕೆಲವರು ಗೃಹಸ್ಥಾಶ್ರಮಿ ಗಳಾಗಿದ್ದು ತಮ್ಮ ವೀರ ಕಾಯಕದಿಂದ ಶಿವನನ್ನೊಲಿಸಿರುವರು.

ಸಂಸಾರ ಸಂಗವು ಭಕ್ತಿಕಾರ್ಯಕ್ಕೆ ಒಂದಂಕುರ. ಇದೇ ವಿಚಾರದಲ್ಲಿ ಬಸವೇಶ್ವರರು:—

ಕೃಷಿಕೃತ್ಯ ಕಾಯಕದಿಂದಾದೊಡೇನು ತನುಮನ ಬಳಲಿಸಿ ತಂದು ದಾಸೋಹವ ಮಾಡುವ ಸದ್ಭಕ್ತನ ತೋರಯ್ಯಾ ಯನಗೆ. ಅದೆಂತೆನೆ ಆತನ ತನು ಶುದ್ಧ, ಆತನ ಮನ ಶುದ್ಧ, ಆತನ ನಡೆ ಶುದ್ಧ, ನುಡಿಯೆಲ್ಲಾ ಪಾವನ, ಆತನಿಗೆ ಉಪದೇಶ ಮಾಡುವವನೇ ಪರಮ ಸದ್ಗುರು. ಅಂತಪ್ಪ ಸದ್ಭಕ್ತನ ಮನೆಯ ಕೈಲಾಸವೆಂದು ಹೊಕ್ಕು ಲಿಂಗಾರ್ಚನೆ ಮಾಡುವ ಜಂಗಮವೇ ಜಗತ್ಪಾವನ. ಇಂತಪ್ಪ ನಾನು ನೆರೆನಂಬಿ ನಮೋ ನಮೋ ಎಂಬೆನಯ್ಯಾ ಕೂಡಲಸಂಗಮದೇವಾ.

ಎಂಬದಾಗಿ ಅಣ್ಣನ ವಾಣಿಯಿರುವುದು. ಗೃಹಸ್ಥಾಶ್ರಮ ಧರ್ಮವು ಭಕ್ತಿಕಾಯಕಕ್ಕೆ ಮೊದಲನೆಯ ಮೆಟ್ಟಲು. ಇದಕ್ಕೋಸ್ಕರ ದೇವರ

ದಾಶಿವಾರ್ಯರುಃ—

ಸತಿಪತಿಗಳೊಂದಾದ ಭಕ್ತಿ ಹಿತವಹುದು ಶಿವಂಗೆ.
ಸತಿಪತಿಗಳೊಂದಾಗದ ಭಕ್ತಿ ಅಮೃತದಲ್ಲಿ ವಿಷ
ಬೆರಸಿದಂತೆ ಕಾಣಾ ರಾಮನಾಥಾ.

ಎಂದು ತಮ್ಮ ಹಿತೋಕ್ತಿಯನ್ನು ನುಡಿದಿರುವರು. ದುಡಿಯುವ ಕಾಯಕ ಭಕ್ತನದು. ತಂದದ್ದನ್ನು ಪಾಕಗೊಳಿಸಿ ನೀಡುವಮಾಡುವ ಕಾಯಕ ಸತಿಗೆ ಸೇರಿದ್ದು. ಭಕ್ತನು ಶಿವನನ್ನೊಲಿಸಿಕೊಳ್ಳಬೇಕಾದರೆ ಅವನು ಹೆಚ್ಚಾಗಿ ಶಿವನಲ್ಲಿ ದೃಷ್ಟಿಪಥವಿಟ್ಟಿರಬೇಕು. ಸತ್ಯ ಸದಾಚಾರ ವೃತ್ತಿಯಲ್ಲಿರಬೇಕು.

ಎತ್ತೆತ್ತ ನೋಡಿದತ್ತತ್ತ ನಿಮ್ಮನೆ ಕಾಂಬೆ
ಎದ್ದು ನೋಡಿ ನಿಮ್ಮನ್ನೆ ಕಾಂಬೆ.
ನಿದ್ರೆಗೈದು ನಿಮ್ಮನೆ ಕಾಂಬೆ.
ಅಹೋರಾತ್ರಿಯಲ್ಲಿ ನಿಮ್ಮ ಧ್ಯಾನದಲ್ಲಿರಿಸು ಕಲ್ಲೇಶ್ವರಾ.

ಎಂಬದಾಗಿ ಶರಣಕಲ್ಲಯ್ಯನವರ ಅಮೃತವಾಣಿ ಬೇಡರ ಕಣ್ಣಪ್ಪನನ್ನು ತೆಗೆದುಕೊಂಡರೆ ಪ್ರತಿಯೊರ್ವರಿಗೂ ಮನ ಕರಗಬೇಕು. ಶಿವನಲ್ಲಿ ಆತನಿಗಿದ್ದ ಭಕ್ತಿ ಮಲ್ಲಿಕಾರ್ಜುನನಲ್ಲಿದ್ದ ಭಕ್ತಿಗೆ ಹೋಲಿಸಬಹುದು.

ನಚ್ಚುಗೆ ಮನ ನಿಮ್ಮಲ್ಲಿ ಮಚ್ಚುಗೆ ಮನ ನಿಮ್ಮಲ್ಲಿ
ಸಲಗುಗೆ ಮನ ನಿಮ್ಮಲ್ಲಿ ಸೋಲುಗೆ ಮನ ನಿಮ್ಮಲ್ಲಿ
ಅಳಲುಗೆ ಮನ ನಿಮ್ಮಲ್ಲಿ ಬಳಲುಗೆ ಮನ ನಿಮ್ಮಲ್ಲಿ
ಕರಗುಗೆ ಮನ ನಿಮ್ಮಲ್ಲಿ ಕೊರಗುಗೆ ಮನ ನಿಮ್ಮಲ್ಲಿ
ಎನ್ನ ಪಂಚೇಂದ್ರಿಯಂಗಳು ಕಬ್ಬುನವುಂಡ ನೀರಿನಂತೆ
ನಿಮ್ಮಲ್ಲಿ ಬೆರಸುಗೆ ಚನ್ನಮಲ್ಲಿಕಾರ್ಜುನಯ್ಯ.

ಎಂದು ಹೇಳಿರುವಂತೆ ಕಣ್ಣಪ್ಪನಿಗೆ ಅಳವಿಲ್ಲದ ಭಕ್ತಿ ಪೂಜಿಸುವ ಪ್ರೇಮ ಕಟ್ಟಕಡೆಗೆ ತನ್ನ ಕಣ್ಣನ್ನೇ ಶಿವನ ಕಣ್ಣಿಗೆ ಅರ್ಪಿಸುವುದನ್ನು ನೋಡಿದರೆ ಆತನಿಗೆ ಶಿವನಲ್ಲಿದ್ದ ಪ್ರೇಮ ಭಕ್ತಿ ಎಂತಹುದೆಂಬುದನ್ನು ಸ್ಪಷ್ಟಪಡಿಸುವುದು.

ಸಾಂಖ್ಯನಾಯಿನಾರ ಶಿವನಂ ಕಲ್ಲಿನಿಂದ ಹೊಡೆದು ಮೆಚ್ಚಿಸಿರುವುದು. ತಿರುನಾಳ್ಪೋವರ್ (ನಂದನಾರ್) ತಿರುನೀಲಕಂಠರ್, ಯಾಳಪಾಣಿ ಇವರ ಪವಾಡಗಳು ಪೆರಿಯ ಪುರಾಣದಲ್ಲಿ ಹೇಳಿರುತ್ತೆ. ಭಕ್ತನನ್ನು ಶಿವನು ಪರೀಕ್ಷೆ

ಗೈಯ್ಯಲೋಸುಗ ಹಲವು ವಿಧ ಕಷ್ಟಗಳನ್ನು ತಂದೊಡ್ಡುತ್ತಾನೆ. ಯಾವುದಕ್ಕೂ ಹೆದರದೆ ಇದ್ದೊಡೆ ಆಗ ತನ್ನಂತೆ ಕಾಣುವ ಎಂಬದಾಗಿ ಬಸವಣ್ಣನವರ ಅಮೃತವಾಣಿ ಹೇಳುತ್ತೆ.

ಶಿವ ತನ್ನ ಭಕ್ತನಾಗಿ ಹಿಡಿದಿಹೆನೆಂದು ಹೋದೊಡೆ ನುಗ್ಗು ಮಾಡುವ
ನುಸಿಯು ಮಾಡುವ; ಮಣ್ಣು ಮಾಡುವ; ಮುಸಿಯು ಮಾಡುವ.
ಮತ್ತೊಂದು ನೆನೆಯದೆ ನೆರೆನಂಬಿದೆಯಾದಡೆ ಕೂಡಲಸಂಗಮ
ದೇವಯ್ಯ ಕಡೆಗೆ ತನ್ನಂತೆ ಮಾಡುವ.

ಭಕ್ತನು ಶಿವನಂ ನಂಬಿದರೆ ನಾನು ಬೇರೆ ಶಿವನು ಬೇರೆ ಎಂಬದಾಗಿ ತಿಳಿಯುವದಿಲ್ಲ. ಇದಕ್ಕೆ ಸಿದ್ಧಲಿಂಗೇಶ್ವರರು:—

ಭಕ್ತನ ಕಾಯವೆ ಶಿವನ ಕಾಯ, ಶಿವನ ಕಾಯವೆ ಭಕ್ತನ ಕಾಯ.
ಶಿವ ಶಿವಭಕ್ತ ಬೇರೆ ಶಿವ ಬೇರೆಯೇ ಒಂದೇ ಕಾಣಿರಣ್ಣಾ. ಭಕ್ತ
ದೇಹಿಕ ಶಿವ ದೇಹಿ ಭಕ್ತನೆಂಬ ಶ್ರುತಿ ಪೊಗಳುವ ಕಾರಣ ಭಕ್ತರಿಗೂ
ದೇವರಿಗೂ ಕಾಯವೊಂದೆ ಪ್ರಾಣವೊಂದೆ. ಎರಡೆಂಬ ಶರಿಭಾವಿಗಳ
ಹುಸಿನುಡಿಯಲಾಗದು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ.

ಎಂಬದಾಗಿ ನುಡಿದಿರುವರು. ಭಕ್ತನು ಯಾವಾಗಲೂ ಶಿವನಲ್ಲಿ ಸಪ್ರೇಮ ಭಕ್ತಿಯಿಂದೊಡಗೂಡಿದ್ದರೆ ಉಡುವ–ಉಂಬುವ, ಕೊಡುವ–ಕೊಂಬುವ ಎಲ್ಲ ವ್ಯವಹಾರದಲ್ಲಿಯೂ ಶಿವನು ಭಕ್ತನೊಡನೆ ಬೆರೆಸಿರುತ್ತಾನೆ. "ನಂಬಿ ಕರೆದರೆ ಓಯೆನ್ನನೇ ಶಿವನು" ಎಂಬಂತೆ ಭಕ್ತನು ಪ್ರೇಮವುಳ್ಳವನಾದಲ್ಲಿ ಪ್ರತ್ಯಕ್ಷ ಒಲಿಯುತ್ತಾನೆ. ಪುರಾತನರಲ್ಲೊಬ್ಬರಾದ ಸೌಂದರನಂಬಣ್ಣನಂ ಕುರಿತು ಸೌಂದರ ಪುರಾಣದಲ್ಲಿ:—

ಬಲವಂದ ಮತ್ತಗಜ ವಂದಿಸಿದುದಾವಂಗೆ ।
ನೆಲೆಮೊಲೆಯೊಳಿರ್ದು ಶಂಕರನುಸಿರ್ದ ನಾವನೊಳು ।
ಬಲುಹಿಂದೆ ಮೊಸಳೆ ನುಂಗಿದ ಶಿಶುವ ಧಾವನನ ದೆಸೆಯಿಂದೆ
ಮಗುಳ್ದುದಿಳೆಗೆ ।
ಸುಲಭನಾವವನಾನೆತಗಾಸನಿಂದಿಪ್ಪ ।
ಫಲಚೀರಮುಂಗಾದುದಾವನ ಭಜಿಸಿ ನಿ ।
ರ್ಮಳಶೈವನ ಭವಪುರಿಯುಂ ಸಾರ್ದನ ಸೌಂದರೇಂದ್ರನಂ
ಪೊಗಳ್ವೆನೊಲಿದು.

ಎಂದು ಸೌಂದರ್ಯನಂಬಣ್ಣನ ಸಂವಾದ ಮಹಿಮೆಯಂ ಪೊಗಳಿರುವರು. ಪ್ರತಿಯೋರ್ವ ಶರಣರೂ ಕಾಯಕಕ್ಕೆ ಮಹತ್ವ ಕೊಟ್ಟಿರುವರು. ಕಾಯಕ ಮಾಡುವ ಪ್ರತಿಯೋರ್ವ ಶರಣರಿಗೂ ನಡೆನುಡಿ ಒಂದಾಗಿರಬೇಕು. ಇದೇ ಅವರ ದೃಢಸಂಕಲ್ಪ. ಕಾಯಕವನ್ನು ಮಾಡಿ ಗುರುಲಿಂಗ ಜಂಗಮಕ್ಕೆ ನೀಡು ಮಾಡುವ ಪಥವು ಪುರಾತನರ ಮಾರ್ಗ. ಪುರಾತನರು ಜಂಗಮವು ಮನೆಗೆ ಬರುವ ವರೆಗೆ ಪ್ರತಿಯೋರ್ವರೂ ಆಹಾರ ತೆಗೆದುಕೊಳ್ಳದಿರುವ ವ್ರತವಂ ಕೈಗೊಂಡಿರ್ದರು. ಅಕಸ್ಮಾತ್ ಮನೆಯ ಮಕ್ಕಳಿಗೂ ಆಹಾರ ಕೊಡುತ್ತಿರಲಿಲ್ಲ. ಜಂಗಮಕ್ಕೆ ನೀಡುವ ಮೊದಲು ತಂದೆ ತಾಯಿಗಳಂ ಕಾಣದೆ ಮಕ್ಕಳು ಆಹಾರವಂ ತಿಂದರೆ ಶುನಕ ಮುಟ್ಟಿತೆಂದು ಮಗುವಂ ಬಡಿದು ಕೊಂದುಹಾಕುತ್ತಿದ್ದರು. ಇದಕ್ಕೆ ನಿಂಬೆಕ್ಕನ ಕಥೆಯೇ ದೃಷ್ಟಾಂತವಾಗಿರುತ್ತೆ. ಈ ಪುರಾತನರು ತನು ಮನ ಚಿತ್ತ ಅಹಂಕಾರಗಳನ್ನು ಶುದ್ಧಗೊಳಿಸಿ ಸುಗುಣವಡಗಿ, ಸಕಲ ಉಡುಗಿ ನಿರ್ಗುಣ ನಿಷ್ಕಲಗಳಿಗ ಬಂದು ನಿಂತಿರುವ ಪರಮ ರಾಜಯೋಗಿಯಾದ ಪುರಾತನರು ಸಿದ್ದೇಶ್ವರರು ಹೇಳಿರುವಂತೆ:—

> ಹರಿವ ಮನವ ವಾಯುವನೊಂದು ಹುರಿಯ ಮಾಡಿ ಮನದ ಸ್ಥಿರಗೊಳಿಸಿ ಸಗುಣ ಧ್ಯಾನದಲ್ಲಿ ಮನಸ ಸವಿದು ನಿರ್ಗುಣದಲ್ಲಿ ನಿಂದು ಆ ನಿರ್ಗುಣ ಧ್ಯಾನ ಬಲಿದು ಸಗುಣನಿರ್ಗುಣದಲ್ಲಿ ಅಡಗಿ ಆ ನಿರ್ಗುಣವಾದ ನಿಜದಲ್ಲಿ ಮನೋಲಯವಾದುದೇ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರರ ಪರಮರಾಜಯೋಗ.

ಎಂಬಂತೆ ಪ್ರತಿಯೋರ್ವ ಪುರಾತನರು ಶಿವಸ್ಮರಣ, ಶಿವಕೀರ್ತನ ಶಿವಕಥಾಶ್ರವಣ, ಶಿವಕೀರ್ತನ ಶಿವಾರ್ಚನ, ಶಿವವಂದ್ಯನ, ಶಿವಸಖ್ಯ, ಶಿವಕೈಂಕರ್ಯ, ಆತ್ಮಾರ್ಪಣ ಎಂಬ ಸರ್ವಭಕ್ತಿಯಿಂದ ಕಾಲವನ್ನು ಕಳೆಯುವರು. ಈ ಶರಣರು ದಾಸೋಹಾಚರಣೆಯಲ್ಲಿ ನಿಶ್ಚಲ ಪ್ರೇಮ ಭಕ್ತಿಯು ಸ್ನಿಟ್ಟು ಜೀವ ಜಗತ್ತುಗಳ ಸಂಬಂಧವನ್ನಳಿದು ನಿರ್ಮಲಾಂತಃಕರಣರಾಗಿ ಮಾಯಾ ಮೋಹಗಳಿಗೊಳಗಾಗದೆ ಕಾಮಿನಿಕಾಂಚನಗಳಿಗಾಶಿಸದೆ ವೈರಾಗ್ಯಯುತರಾಗಿ ನಿರಾಸಕ್ತಿಯಿಂದ ವರ್ತಿಸುತ್ತ.

ಪ್ರಕಾಶತೇ ಯಥಾನಾಗ್ನಿರರಣ್ಯಾಂ ಮಥನಂ ವಿನಾ
ಕ್ರಿಯಾಂ ವಿನಾ ತಥಾ ತಸ್ಯೋನ ಪ್ರಕಾಶೋಭವೇಚ್ಛಿವಃ

ಎಂಬಂತೆ ಬನ್ನಿಮರದಲ್ಲಿ ಅಗ್ನಿಯಿದ್ದರೂ ಘರ್ಷಣವಿಲ್ಲದೆ ಪ್ರಕಾಶಿಸುವದಿಲ್ಲ, ಹೇಗೊ ಹಾಗೆಯೇ ಇಷ್ಟಲಿಂಗ ಮಧ್ಯಸ್ಥನಾದ ಶಿವನು ಪೂಜಾಕ್ರಿಯೆಯಿಲ್ಲದೆ ಪ್ರಕಾಶಿಸುವದಿಲ್ಲವೆಂದು ತಿಳಿದು ನಿಶ್ಚಲತೆಯಿಂದ ತಮ್ಮ ತಮ್ಮ ಕಾರ್ಯಗಳನ್ನು ಕೈಗೊಳ್ಳುತ್ತಿದ್ದರು.

ಈ ಶರಣರು ಶಿವನಲ್ಲಿ ಪ್ರೇಮಭಕ್ತಿ ಇಟ್ಟಿದ್ದರಿಂದ ಶಿವನಾಣೆ ಇಡಲು ಹೆಂಡತಿಯನ್ನು ಬಹುಕಾಲ ತೊರೆದು ಶಿವನಿಂದಲೇ ಪ್ರಾಯ ಸಮರ್ಥರಾದ ತಿರುನೀಲಕಂಠರು. ಶಿವನಂ ನಿಂದಿಸಿದ ತಂದೆಯ ಶಿರವಂ ಕತ್ತರಿಸಿದ ತಂಡೇಶರು, ಮಗನಂ ಕತ್ತರಿಸಿ ಸವಿಯೂಟವಿಟ್ಟ ಚಿರುತೊಂಡರು, ಶಿವನಿಗೋಸ್ಕರ ಪೂಜೆಗಿಟ್ಟಿದ್ದ ಹೂವನ್ನು ಮೂಸಿ ನೋಡಿದ ಸತಿಯ ಮೂಗನ್ನು ಕತ್ತರಿಸಿದ ಚಿರುತೊಣೆಯಾಂಡರು, ಜಂಗಮನ ಕಾಲ ತೊಳೆಯದ ಹೆಂಡತಿಯ ಕೈಕತ್ತರಿಸಿದ ಕಲಿಕಂಬರು, ಶಿವನಿಗೋಸ್ಕರ ಸುತೆಯ ಮುಡಿಯ ಕತ್ತರಿಸಿಕೊಟ್ಟ ಮಾನಕಂಜರರು, ತನ್ನ ಮುಡಿಯನ್ನು ಶಿವನಿಗಿತ್ತ ಪಗಲ್ತ್ಯೋಳರು, ವಿಭೂತಿಯಂ ಧರಿಸಿದ್ದ ಭಟನು ಸತ್ತುಬಿದ್ದಿರಲು ತನ್ನ ಶಿರವರಿದ ಏಣಾದಿನಾಥರು, ಜಂಗಮ ರೂಪಿನಿಂದ ಬಂದು ಖಡ್ಗದಿಂ ಕಡಿಯುತ್ತಿದ್ದರೂ ಮಾತನಾಡದಿದ್ದ ಸೇದಿರಾಜರು, ಹರನಿತ್ತ ಕೌಪೀನಕ್ಕೆ ಸಕಲ ಭಂಡಾರಗಳು ತೂಕವಿಲ್ಲದಿರಲು ಶರೀರವನ್ನೇ ತೂಗಿದಂಥ ಅಮರನೀತಿಗಳು, ಮೊಳಕೈಯ ಗಂಧವನ್ನು ತೆಗೆದು ಶಿವನಿಗರ್ಪಿಸಿದ ಅಳಗಂಡ ಮೂರ್ತಿಗಳು, ಮಳೆಯಿಂದ ತೊಯ್ದು ಬಂದ ಶಂಕರನಿಗೆ ಅರ್ಧ ರಾತ್ರಿಯಲ್ಲಿ ಗದ್ದೆಯಿಂ ಬತ್ತವನ್ನಾಯ್ದು ತಂದು ಉಣಬಡಿಸಿದ ಇಳೆಯಾಂಡ ಗುಡಿಮಾರರು ಇಂತೀ ಪುರಾತನರು ಶಿವನಿಗೋಸ್ಕರ ವೀರ ಗಾಯಕವನೆರವೇರಿಸಿ ಶಿವನಂ ಮೆಚ್ಚಿಸಿರುವರು. ಹೀಗೆ ಪ್ರತಿಯೋರ್ವರು ಜಂಗಮವೇ ಸಾಕ್ಷಾತ್ ಶಿವನೆಂದೂ ಜಂಗಮವಂ ಬಿಟ್ಟು ಪ್ರಸಾದವಂ ಸೇವಿಸಬಾರದೆಂಬ ನಿಯಮವಂ ಕೈಗೊಂಡಿದ್ದರು. ಜಂಗಮರಂ ಕಂಡತಕ್ಷಣ ಆನಂದ ಜಲ ಉಕ್ಕೇರಿ ಆನಂದಾಂಬುಧಿಯಲ್ಲಿ ಮುಳುಗಾಡುತ್ತಿದ್ದರು.

ಜಂಗಮವ ಕೂಡಿಕೊಂಡು ಲಿಂಗಾರ್ಚನೆಯ ಮಾಡುವುದೇ ಲೇಸಯ್ಯ ಭಕ್ತಂಗೆ. ಆ ಭಕ್ತನ ಕೂಡಿಕೊಂಡು ಲಿಂಗಾರ್ಚನೆಯ ಮಾಡುವುದೇ ಲೇಸಯ್ಯ ಜಂಗಮಕ್ಕೆ. ಆ ಜಂಗಮದ ಕರ್ತವ್ಯವೇ ಭಕ್ತಂಗೆ ದಾಸೋಹ. ಆ ಭಕ್ತನ ಕಿಂಕಲವೇ ಜಂಗಮಕ್ಕೆ ದಾಸೋಹ. ಆ ಭಕ್ತನೊಳಗೆ ಜಂಗಮ

ವಡಗಿ, ಆ ಜಂಗಮದೊಳಗೆ ಭಕ್ತನಡಗಿದುದನೇನೆಂದು ಹವಣಿಸುವೆನಯ್ಯ. ಎರಡೊಂದಾದ ಘನವ ಇದನೇನೆಂದುಪಮಿಸುವೆನಯ್ಯ. ತೆರಹಿಲ್ಲದ ಘನವ ಈ ಎರಡಕ್ಕೆಯು ಭವವಿಲ್ಲವೆಂದು ನಿಮ್ಮ ಶೃತಿಗಳು ಹೇಳಿದವಾಗಿ ನಿಮ್ಮ ಕರುಣವೆನಗಾಯಿತ್ತು ಕೂಡಲಸಂಗಮದೇವಾ.

ಎಂದು ಅಣ್ಣನು ಹೇಳಿರುವಂತೆ ಪ್ರಿಯೋರ್ವರೂ ಜಂಗಮದೇವ ರಲ್ಲಿ ಅಷ್ಟು ವಿಶ್ವಾಸವನ್ನಿಟ್ಟಿದ್ದರು. ಇಪ್ಪತ್ತೊಂದು ದಿವಸ ಮಳೆ ಬಿಡ ದಿರ್ದರಿಂದಭ್ರ ಭಕ್ತನು ಆಹಾರಾದಿಗಳನ್ನು ಬಿಟ್ಟು ಜಂಗಮರನ್ನು ಕಾಯ್ದು ಕೊಂಡಿರ್ದನು. ಅಂತ್ಯದಲ್ಲಿ ಶಿವನೇ ಜಂಗಮವಾಗಿ ಒಂದು ಜಗಲಿ ಕಟ್ಟೆಯ ಮೇಲೆ ಜಂಗಮ ರೂಪಿನಿಂದ ಬ ದು ಕುಳಿತುಕೊಳ್ಳಬೇಕಾಯಿತು. ಹೀಗೆ ಕುಳಿತಿರ್ದ ಭೈರವಾಕೃತಿಯ ಜಂಗಮನಂ ಕಂಡ ದಭ್ರಭಕ್ತನ ಮನಉಕ್ಕಿ ಸಂತೋಷದ ಕಡಲಲ್ಲಿ ಮುಳುಗಾಡಿ ಮನದಿಚ್ಛೆಯಂ ಸಲ್ಲಿಸುವೆ ನೆಂದು ಸತಿಪತಿ ಸುತರೊಂದಾಗಿ ಕೂಡಿಪ ಜಾಣ್ಮೆಗೆ ಶಿವನು ಮೆಚ್ಚಿ ಶಿಶು ಪಾಕವಂ ಮಾಡಿಸಿ ಕೈಲಾಸಕ್ಕೆ ಕರೆದೊಯ್ದ ಶಿವನು ಭಕ್ತಪರೀಕ್ಷೆಗೆ ನಾನಾ ವಿಧ ಕಷ್ಟ ಸಂಕಷ್ಟಗೊಳಿಸುವನು. ಈ ಪುರಾತನರಿಗೆ ಮನ ಮಹಾ ಘನ ವಾಗಿ ಭಾವ ನಿರ್ಭಾವವಾಗಿ, ಖಂಡಿತವಖಂಡವಾಗಿ, ಬೆರಗು ನಿಬ್ಬೆರಗಾಗಿ, ನೆನಹು ನಿಷ್ಪತ್ತಿಯಾಗಿ, ಅರುಹು ಕರಗಿ ನಿರ್ವಯಲಾಗಿ ಬೆಳಗುವ ಮಹಾ ತ್ಮರುಗಳು. ಈ ಶಿವಶರಣರ ವಿಚಾರವಾಗಿ ವಚನಶಾಸ್ತ್ರಜ್ಞರು:—

ಶಿವಶಿವಾ ಏನೆಂಬೆನಯ್ಯಾ ಶಿವಶರಣರ ಘನವನು, ಶಿವಶರಣರ ಮಹಿಮೆಯನು, ಶಿವಶರಣರ ಚರಿತ್ರವನು ಶಿವನೇ ಬಲ್ಲನಲ್ಲದೆ ಉಳಿದವ ರದನೆಂತು ತಿಳಿವರಯ್ಯ. ಹೊರಗಣ ಕ್ರಿಯೆಯು ಹಲವು ಪ್ರಕಾರ ವಾದೊಡು ಒಳಗೆ ನೀರ ನೀರ ಕೂಡಿದಂತೆ ಕ್ಷೀರ ಕ್ಷೀರವ ಬೆರೆದಂತೆ ಮಾರುತಾಂಬರ ಸಂಯೋಗವಾದಂತೆ ಶಿಖಿ ಕರ್ಪೂರ ನಿಷ್ಪತ್ತಿಯಂತೆ ಸಚ್ಚಿದಾನಂದ ಪರಬ್ರಹ್ಮವ ಕೂಡಿ ಬಿಚ್ಚಿ ಬೇರಾಗದಿರ್ಪ ಶರಣರಿ.

ಎಂಬ ವ ಜಗತ್ರಯುಕ್ತ ಪುರಾತನರು ಜ್ಞಾನರೂಪರು, ಜೀವನ್ಮುಕ್ತರು. ಅವರು ಮಹಾಘನವ ನುಂಗಿದ ಮಹಾತ್ಮರು ನೋಡಾ ಎಂದು ಅಖಂಡೇ ಶ್ವರರು ನುಡಿದಿರುವರು. ಪುರಾತನರು ಆತ್ಮಸಾಕ್ಷಾತ್ಕಾರ ಪಡೆಯಲು ಕಾಯಕಕ್ಕೆ ಮಹತ್ವ ಕೊಟ್ಟಿರುತ್ತಾರೆ. ಅವರು ಆಲಸ್ಯಕ್ಕೆ ಅವಕಾಶ ಕೊಟ್ಟಿಲ್ಲ. ಗುರುಭಕ್ತಿ ಸಂಪತ್ತು ಆ ಪ್ರಮಥರ ಗುರಿಯಾಗಿತ್ತು. ಅವರು

ಹೃದಯ ನಿರ್ಮಲತೆಯಿಂದ ಇಕ್ಕುವ ಅಂಬಲಿ ಅಮೃತ ಸಮಾನವೆಂದೂ, ಕಲ್ಮಿಷದಿಂದ ಇಕ್ಕುವ ಅಮೃತ ವಿಷಸಮಾನವೆಂದೂ, ಪ್ರೀತಿಯಿಂದ ಮಾಡುವ ನಮಸ್ಕಾರ ಪ್ರೀತಿಯ ಸಾಕ್ಷಾತ್ಕಾರವೆಂದೂ, ಪ್ರೀತಿಯಿಲ್ಲದೆ ಮಾಡುವ ನಮಸ್ಕಾರ ಹೃದಯದ ತಿರಸ್ಕಾರವೆಂದೂ ಅವರ ಭಾವ. ಶ್ರೀಗುರು ಜಂಗಮಕ್ಕೆ ಮಾಡುವ ಸೇವೆ ಪ್ರತಿಯೊರ್ವರ ಹೃದಯವನ್ನು ಶುದ್ಧವಾಗಿ ಆನಂದವನ್ನುಂಟುಮಾಡುತ್ತಿತ್ತು. ಇಂಥ ಭಕ್ತಿಯುತರಾದ್ದರಿಂದಲೇ ಅನೇಕ ಮಠಾಧಿಪತಿಗಳು ಪುರಾತನರ ಪೂಜೆಯನ್ನು ಮಾಡುತ್ತಿರುವರು.

——o——

## ಅನುಭವಸಾರ.

(ಬರೆದವರುः— ಎಚ್. ವ್ಹಿ. ಅಯ್ಯನಗೌಡ್ರ ರಿಟಾಯರ್ಡ ಹೆಡ್‌ಮಾಸ್ತರ
ಮುನಿಸಿಪಲ್ ಹೈಸ್ಕೂಲ್ ಮು. ಗದಗ)



ಆವಶಕ್ತಿಗೆ ದೇವದಾನವರು ವಂದಿಪರೊ ।
ಆವಶಕ್ತಿಯುದದಕೆ ಪರಬ್ರೊಮ್ಹವೆನ್ನುವರೊ ॥
ಆವಶಕ್ತಿಯುದದಕೆ ಆದಿ ಅಂತ್ಯಗಳಿಲವೊ !
ಆವಾದಿಶಕ್ತಿಗೆ ನಮಿಸೊ ಹುಚ್ಚು ಕೊಟ್ರೇಶಾ ॥೧॥

ಪರಮ ಮಂಗಳ ಸಚ್ಚಿದಾನಂದ ಮೃಡಹರಗೆ ॥
ಪರಸತಿಯನೊಡಗೊಂಡ ಅರ್ಧ ನಾರೀಶ್ವರಗೆ ॥
ಪರಿಹರಿಸೊ ಭವ ಬಂಧಗಳನೆನುತ ಕರಮುಗಿದು ।
ಶಿರಬಾಗಿ ನಮಿಸೊ ನೀ ಹುಚ್ಚು ಕೊಟ್ರೇಶಾ ॥೨॥

ಶಿವಾನುಭವ ಮಿಕ್ಕಿ ಬೇರೊಂದು ಪಥವುಂಟೆ ।
ಭವಾಬ್ಧಿಯೊಳ್ ಶಿಲುಕಿ ನೆರಳುತಿಹ ಮಾನವಗೆ ।
ಜಿವಾತ್ಮ ಪರಮಾತ್ಮವೆರಡೊಂಮು ಗೂಡಲಿಕೆ ।
ಶಿವಾನುಭವ ಮೂಲ ಹುಚ್ಚು ಕೊಟ್ರೇಶಾ ॥೩॥

ಶಿವದೈವದಿಂ ಮಿಕ್ಕಿ ಕುಲದೈವ ಮತ್ತುಂಟೆ ।
ಶಿವಯೋಗದಿಂ ಮಿಕ್ಕಿ ಬೇರೆಯೋಗಗಳುಂಟೆ ॥
ಭವರೋಗ ಹರಿಯುದಕೆ ಗುರುವಾದ ಔಷಧವು ।
ಶಿವಯೋಗ ಸಾಧನವು ಹುಚ್ಚು ಕೊಟ್ರೇಶಾ ॥೪॥

ಅಂತು ಇಂತೋ ಎಂತು ಸಂತೆಯಾ ಸಂಸಾರ ।
ಬಂತು ಹೋಯಿತು ಎಂಬ ಭ್ರಾಂತಿಯೇ ಹಗಲಿರುಳು ॥
ಶಾಂತಿಯೆಂಬದು ಮನಕೆ ಇನಿತಿಲ್ಲವೆನಿತಿಲ್ಲ ।
ಕಂತುಹರ ದಯದೋರು ಹುಚ್ಚು ಕೊಟ್ರೇಶಾ ॥೫॥

ಹಸಿವು ತೃಷಿಗಳಿಗಾಗಿ ವಿಷಯ ವಾಸನೆಗಾಗಿ ।
ಪಶುವಿನಂದದಿ ಜಗವು ಬಸವಳಿದು ಬಾಯ್ಬಿಡುತ ॥
ಅಸಮನಯನನ ಮರೆದು ದೆಶೆಗೇಡಿಯಾಗಹುದು ।
ಪಶುಕೋಟಿ ಮಾನವರು ಹುಚ್ಚು ಕೊಟ್ರೇಶಾ ॥೬॥

ಕತ್ತಿನೋಳ್ ನೊಗಹೊತ್ತ ಎತ್ತಿನಂದದಿ ಜಗವು ।
ಸುತ್ತು ತಿರುಗುತ್ತಿಹುದು ಭವವೆಂಬ ಗಾಣವನು ॥
ಕತ್ತೆತ್ತಿ ನೋಡದಲೆ ಮುಕ್ಕಣ್ಣ ನಿನ್ನಡೆಗೆ ।
ಕತ್ತೆ ಮಾನವರಂತೆ ಹುಚ್ಚು ಕೊಟ್ರೇಶಾ ॥೭॥

ಬೇವು ಬೆಲ್ಲದೊಳಿಟ್ಟು ಮೆದ್ದೊಡಂ ಸೀ ಅಹುದೆ ।
ಹಾವಿಗ್ಹಾಲನು ಉಣಿಸೆ ವಿಷವು ತಾಂ ಹೋಗ್ವದೆ ॥
ದೇವ ಭಾವವದಿನಿತು ಇಲ್ಲದಿಹ ಮಾನವನು ।
ಆವನಾದರೆ ಏನು ಹುಚ್ಚು ಕೊಟ್ರೇಶಾ ॥೮॥

ಎಂತೆಂತು ಮನಸಿಹುದು ಅಂತಿರುವನಾದೇವ ।
ಸಂತರಿಗೆ ಸರಳನಾ ಶಾಂತಿಮಯ ಜಗದೇವ ॥
ಬೆಂತರಿಗೆ ವಿರಳನಾ ಕಂತುಹರ ಪುರವೈರಿ ।
ಅಂತಿಗಂತೇ ದೇವ ಹುಚ್ಚು ಕೊಟ್ರೇಶಾ ॥೯॥

ಇರುತಿರುವನೆಲ್ಲೆಲ್ಲಿ ಹೃದಯದೋಳ್ ಪರಮಾತ್ಮ ॥
ಅರಿದು ನೋಡರು ಜನರು ತಮ್ಮಾತ್ಮದೋಳ್ ತಾವು ।
ಅರವಿ ಕೊರಗುತಲಿಹರು ಪರಿಪರಿಯ ರೀತಿಯಲಿ ।
ಮರುಳು ಮಾನವರವರು ಹುಚ್ಚು ಕೊಟ್ರೇಶಾ ॥೧೦॥

# ಶಿವಾನುಭವ !!

(ಅನುಭವಿಸಿದವರು:— ಶ್ರೀ. ರಾ. ರು. ಕುಪ್ಪಸದ, ಹೆಡ್‌ಮಾಸ್ತರ
ಗವ್ಹರ್ನಮೆಂಟ್, ಅಗ್ರಿ, ಹೈಸ್ಕೂಲ-ವಿಜಾಪುರ)



ಇದು ಐದಾರು ತಿಂಗಳ ಹಿಂದಿನ ಮಾತು. ಆದಾಗ್ಯೂ ಅದು ನಿನ್ನೆಯೋ, ಮೊನ್ನೆಯೋ ಜರುಗಿದಂತೆ ಭಾಸವಾಗುತ್ತದೆ. ಅಂತೆಯೇ ಅದರ ನಿಚ್ಚಳ ನೆನಪಾಗಿ ಇದನ್ನೀಗ ಸ್ವಚ್ಛವಾಗಿ ಬರೆಯುತ್ತಿರುವುದು.

ಅಂದು ಮಂಗಲವಾರ. ಮರುದಿನ ಬೆಳಗ್ಗೆ ಊರಿಗೆ ಹೋಗಬೇಕೆಂದು ಅಂದು ಸಂಜೆಯ ೭ ಗಂಟೆಗೆ ಗೊತ್ತಾಯಿತು. ಆಗಲಿ ಎಂದು ಬೇಗನೆ 'ಸಲೂನ'ಕ್ಕೆ ಹೋಗಿ ಬಂದರಾಯಿತು ಎಂದು ಹೊರಹೊರಟೆನು. ನಮ್ಮ ಗೊತ್ತಿನ ಸಲೂನಕ್ಕೆ ನೇಮದಂತೆ ಹೋದೆ. ಆದರೆ ಅಂದು ನಮ್ಮ ಸಲೂನಕ್ಕೆ ಬಿಡುವಿನ ದಿನ ಅವಸರದಲ್ಲಿ ಇದನ್ನು ಮರೆತೇ ಅಲ್ಲಿಯವರೆಗೆ ಹೋದೆ. ಇನ್ನೇನು ಮಾಡಬೇಕು, ಇನ್ನೇನು ಗತಿ ಎಂಬ ಯೋಚನೆಯಲ್ಲಿಯೇ ಬಾಜಾರ ದಾಂಗುಂಟ ಸಾಗಿದೆ.

ನಾಳಿಗೆ ಊರಿಗೆ ಹೋಗಲೇಬೇಕಾಗಿ ಬಂದದ್ದೊಂದು ಕಷ್ಟ. ಕಾರಣ ಈಗ ನಾನು 'ಕಷ್ಟ' ಮಾಡಿಸಿಕೊಳ್ಳಬೇಕಾಗಿ ಹೊರಬಿದ್ದದ್ದೊಂದು ಕಷ್ಟ. ಶಿವ, ಶಿವಾ ಎಂದು ಶಿವನನ್ನು ನೆನೆಯುತ್ತಲೇ ಮುನ್ನಡೆದೆನು. ಮುಂದೆ ಮತ್ತೊಂದು ಸಲೂನ ನೋಡಿದೆ. ಅದೂ ಅಂದು ಬಂದು ಇತ್ತು. ಯೋಚನೆಯಲ್ಲಿಯೇ ಸಾಗಿದ್ದೆ. 'ಶಿವಾಯನಮಃ, ಶಿವಾಯನಮಃ' ಎನ್ನುವದು ಕೇಳಿಬಂತು. ಏನಿದು? ನಾನನ್ನುವದೇ ನನ್ನ ಕಿವಿಯಲ್ಲಿ ಕೇಳಿಸುತ್ತದೆಯೇ? ನನ್ನ ಶಿವಾ, ಶಿವಾ ಎನ್ನುವ ಯೋಚನೆಯೇ ನನ್ನ ಕಿವಿಯಲ್ಲಿ ಗುಣಗುಟ್ಟುತ್ತದೆಯೇ? ಇಲ್ಲ, ಇಲ್ಲ. ಈ ಶಿವನಾಮ ನನ್ನದಲ್ಲ. ಬಲಗಡೆಗ ಬೇರೆ ಕಡೆಯಿಂದ ಬರುತ್ತಿತ್ತು. ಏನು? ಇಲ್ಲಿ ಯಾರಾದರೂ ಭಜನೆ ಮಾಡುತ್ತಿರುವರೇ? ಇಲ್ಲಿ ಬಜಾರದಲ್ಲಿ ಅಂಗಡಿಯೊಳಗೆ ಭಜನೆ ಮಾಡುತ್ತಿರುವವರಾರು? ಅಥವಾ ಇಲ್ಲಿ ಬಾಜಾರದ ಅಂಗಡಿಗಳ ಸಾಲಿನಲ್ಲಿ ಯಾವದಾದರೂ ಶಿವನ ಗುಡಿಯು ಇರಬಹುದೇ? ಎಂದು ಸಂಶಯ

ಪಡುತ್ತ "ಶಿವನಾಮ" ಬರುತ್ತಿರುವ ಧ್ವನಿಯತ್ತ ಸಾಗಿದೆನು. ಆ ಧ್ವನಿ ಬರುತ್ತಿರುವದು ಗುಡಿಯಿಂದಲ್ಲ. ಅಥವಾ ಅಂಗಡಿಯಿಂದಲ್ಲ ಆದರೆ ಆ 'ಶಿವನಾಮ'ವು ಹೊರಡುತ್ತಿರುವ ಸ್ಥಾನವು ಅದೊಂದು 'ಸಲೂನ'ವು; ನನಗೆ ಬೇಕಾದ ಸ್ಥಾನವು; ನಾನು ಹುಡುಕುತ್ತಿರುವ ಸ್ಥಾನವು.

ಏನಿದು ? ಸಲೂನದಲ್ಲಿ 'ಶಿವನಾಮ' ಹೊರಡುತ್ತಿದೆಯಲ್ಲ ! ಅಚ್ಚರಿಯಿಂದಲೂ ಮತ್ತು ಭಕ್ತಿಯಿಂದಲೂ ಒಮ್ಮೆಲೇ ಒಳಹೊಕ್ಕೆ. ಎತ್ತರವಾದ ಆಳು. ತೇಜಃಪುಂಜವಾದ ಮೋರೆ. ಮುಗುಳ್ನಗೆಯಿಂದ ನನ್ನತ್ತ ನೋಡಿದನು. ಅವನ ಬೆಳ್ಳಗಿನ ಹಲ್ಲುಗಳ ಬೆಳಕು ಹೊಳೆಯಿತು. ಶುಭ್ರ ಬಟ್ಟೆಯನ್ನುಟ್ಟಿದ್ದಾನೆ. ಬೆಳ್ಳಗಿನ ಅಂಗಿಯನ್ನು ತೊಟ್ಟಿದ್ದಾನೆ. ಕೈಯಲ್ಲಿ ಕತ್ತರಿಯನ್ನು ಹಿಡಿದು 'ಶಿವಾಯನಮಃ', 'ಬಸವ' ಅನ್ನುತ್ತ ತನ್ನ ಕಾಯಕದಲ್ಲಿ ತೊಡಗಿದ್ದಾನೆ. ಕಾಯಕದಲ್ಲಿ ಸ್ವರ್ಗ ತಂದಿದ್ದಾನೆ. "ಎಪ್ಪಾ ಬರ್ರಿ, ಶರಣು." ಎಂದು ನನಗೆ ಸ್ವಾಗತವನ್ನಿತ್ತನು.

ನನ್ನ ಆನಂದವು ಉಕ್ಕೇರಿತು, ಮೇಲೆ, ಕೆಳಗೆ, ಸುತ್ತಲೂ ಮಿಕಿಮಿಕಿ ನೋಡಹತ್ತಿದೆ. ಇತ್ತ ಶಿವ-ಪಾರ್ವತಿಯರ ಫೋಟೋ ಇದ್ದರೆ, ಅತ್ತ ಬಸವಣ್ಣನ ಫೋಟೋ ಹಾಕಿದೆ. ಅಲ್ಲಿ ಅಕ್ಕಮಹಾದೇವಿಯು ಲಿಂಗ ಪೂಜೆಯನ್ನು ಮಾಡುತ್ತಿರುವ ಫೋಟೋ, ಇಲ್ಲಿ ಸಿದ್ಧಾರೂಢಸ್ವಾಮಿಗಳ ಫೋಟೋ, ಮಗ್ಗಲಿನಲ್ಲಿ ಅಶ್ವಾರೂಢನಾಗಿರುವ ಬಸವೇಶ್ವರನ ಫೋಟೋ, ಇಲ್ಲಿಯೇ ಹನುಮಂತದೇವರ ಫೋಟೋ. ಸಲೂನದ ತುಂಬೆಲ್ಲ ಬೆಳಕೇ ಬೆಳಕು. ವಿದ್ಯುತ್ ದೀಪಗಳು ಚಕಚಕಿಸುತ್ತಿವೆ. ಆರು ಕನ್ನಡಿಗಳ ಮುಂದೆ ಆರು ಕುರ್ಚಿಗಳ ಮೇಲೆ ಆರು ಜನರು ತಮ್ಮ ತಮ್ಮ ತಲೆಗಳನ್ನು ಆರು ಜನರ ಕೈಯಲ್ಲಿ ಕೊಟ್ಟು, ತಲೆಯಲ್ಲಿಯ ಮಲಿನವನ್ನು ತೊಳೆಯಿಸಿಕೊಳ್ಳುತ್ತಿದ್ದಾರೆ. ನೆಲದ ಕಡೆಗೆ ನನ್ನ ದೃಷ್ಟಿಹೊರಳಿಸಿದೆ. ಇಷ್ಟು ಜನರ ಮಲಿನವು ನೆಲದಮೇಲೆ ಬೀಳುತ್ತಿದ್ದರೂ ನೆಲವು ಎಷ್ಟು ನಿರ್ಮಲವಾಗಿದೆಯಲ್ಲ ಎಂದೆ ! ಒಂದು ಕೂದಲು ಬಿದ್ದೊಡನೆ ಅದು ಅಲ್ಲಿಂದ ಒಮ್ಮೆಲೇ ದೂರಹೋಗುತ್ತದೆ. ಈ ಆರು ಪೀಠಗಳಿಗೂ ೧, ೨, ೩ ... .... ಎಂದು ೬ ನಂಬರ‍ಗಳನ್ನು ಹಾಕಲಾಗಿದೆ. ಈ ಆರು ಕುರ್ಚಿಗಳ ಮೇಲೆ ಕುಳಿತ ಜನರು ತನ್ನ ತಲೆಯ ಕೂದಲನ್ನು ತೆಗೆಯಿಸಿಕೊಳ್ಳುವ ದೃಶ್ಯವನ್ನು ನೋಡಿದರೆ, ಈ ಸಲೂನಿನಲ್ಲಿ ಕಾಮ, ಕ್ರೋಧಾದಿ ಷಡ್ವರ್ಗ

ಗಳನ್ನು ಒಂದೊಂದು ಪೀಠದಲ್ಲಿ ಕತ್ತರಿಸಿ ಒಗೆಯಲಾಗುವದೇ ? ಎಂದೆ ನಿಸಿತು. ಇಲ್ಲವೆ ಈ ಆರೂ ಕುರ್ಚಿಗಳು ಅಥವಾ ಪೀಠಗಳಲ್ಲಿ ಒಂದೊಂದು ಸ್ಥಲವು ಭಕ್ತಿ, ಮಹೇಶಾದಿ ಷಟ್‌ಸ್ಥಲಗಳೇನೋ ಎನಿಸಹತ್ತಿತು. ಆರೂ ಜನ ಕೆಲಸಿಗರು ಕಾಯಕವೇ ಕೈಲಾಸವೆನ್ನುವದನ್ನು ಬೀರುತ್ತಿದ್ದಾರೆ.

ಹಡಪದ ಹಂಪಣ್ಣನೇ ಕಣ್ಮುಂದೆ ನಿಂತಂತಾಯಿತು. "ಶಿವಾಯನಮಃ" ಪಠಿಸುವವನೇ ಸಲೂನದ ಮಾಲಕನು. ಇವನಾರು ? ಆರು ಕಾಯಕದವರಲ್ಲಿ ಹಿರಿಯನು. ಈ ಆರು ಜನ ಕೆಲಸಿಗರಲ್ಲಿ ಇವನೊಬ್ಬ ಮಾಲಕನೂ ಸೇವಕರ ಜೊತೆಯಲ್ಲಿಯೇ ಹೆಗಲಿಗೆ ಹೆಗಲು ಹಚ್ಚಿ ದುಡಿಯುತ್ತಿದ್ದಾನೆ. ಮನಸ್ಸಿನಲ್ಲಿಯೇ 'ಶಹಾಬಾಸ್' ಎಂದು ಈ ಮಾಲಕನಿಗೆ ನನ್ನ ಧನ್ಯವಾದಗಳನ್ನಿತ್ತೆ. ಯಾಕೆಂದರೆ ಅವನು ಹಿರಿಯನಾದರೂ ಕಿರಿಯನಂತೆ ನಡೆದ, ನುಡಿದು "ಎನಗಿಂತ ಕಿರಿಯರಿಲ್ಲ. ಶಿವಶರಣರಗಿಂತ ಹಿರಿಯರಿಲ್ಲ" ಎಂಬುದನ್ನು ತೋರಿಸುತ್ತಲೇ ಇದ್ದನು. "ಎಪ್ಪಾ, ಏಳರಿ. ತಮ್ಮ ಸೇವೆಗಾಗಿ ಸಿದ್ಧನಿರುವೆ." ಎಂದು ನನಗಂದನು. ಅವನ ಭಕ್ತಿಯ ನುಡಿಗಳನ್ನು ಕೇಳಿ ಆನಂದಪುಲಕಿತನಾದೆನು. ನಾನು ಧನ್ಯನೆಂದು ನನ್ನ ಮನಸ್ಸು ನುಡಿಯಹತ್ತಿತು. ಕಾಯಕವು ನನ್ನನ್ನು ಕೈಲಾಸದಲ್ಲಿ ಕುಳ್ಳಿರಿಸಿದಂತೆ ಅನಿಸಿತು.

ಎದ್ದೇಬಿಟ್ಟೆ. ಒಡೆಯನ ಅಪ್ಪಣೆಯಂತೆ ಅವನು ತೋರಿಸಿದ ಕುರ್ಚಿಯ (ಪೀಠದ) ಮೇಲೆ ಕುಳಿತೇ ಬಿಟ್ಟೆ. ಈ ಪೀಠದ ನಂ. ೧ ಮಾಲಕನು ನನ್ನ ಸೇವಕನಾಗಿ ತನ್ನ ಕೆಲಸ ಪ್ರಾರಂಭಿಸಿದನು. ನನ್ನ ಶಿರವನ್ನೇ ಆ ಮಹಾಶರಣನ ಕೈಯಲ್ಲಿ ಕೊಟ್ಟೆ. ನನ್ನ ತಲೆಯಲ್ಲಿ ನಡೆದುವೇನು ? ನನ್ನ ತಲೆಯ ಮೇಲೆ ನಡೆದುದೇನು ? ಒಳಗೇನು ನಡೆದಿದೆ ? ಹೊರಗೇನು ನಡೆದಿದೆ ? ನನಗೆ ತಿಳಿಯಲಿಲ್ಲ. ನನಗೆ ಆ ಅರಿವೇ ಇರಲಿಲ್ಲ. ನನ್ನನ್ನು ನಾ ಮರೆತೆ. ನನ್ನ ಗುಂಗಿನಲ್ಲಿಯೇ ನಾನಿದ್ದೆ. ಸಲೂನದ ಮಾಲಕನು ನನ್ನ ತಲೆಯ ಕೂದಲನ್ನು ಓರಣಗೊಳಿಸಹತ್ತಿದನು. ತಲೆಯನ್ನು ಸ್ವಚ್ಛ ಮಾಡಲಿಕ್ಕೆ ಅನುವಾದನು. ನಡು ನಡುವೆ 'ಬಸವಾಯ ನಮಃ, ಶಿವಾಯನಮಃ' ನಡದೇ ಇತ್ತು. "ಎಪ್ಪಾ ನೋಡಿರಿ ಇರಲಾ ?" ಎಂದು ಆಗಾಗ್ಗೆ ನನ್ನನ್ನು ಕೇಳುತ್ತಿದ್ದನು. "ಎಲ್ಲವೂ ಸರಿ ಇದೆ. ನಿಮಗೆ ಸರಿ ಅನಿಸಿದಂತೆ ಮಾಡಿರಿ" ಎಂದು ಮಾತ್ರ ನಾನು ಒಮ್ಮೆ ಉಚ್ಚರಿಸಿ ಉತ್ತರ ಕೊಟ್ಟೆನು.

ಯಿತು, ನನ್ನ ತಲೆಯೂ ಸ್ವಚ್ಛವಾಯಿತು. ತಲೆಗೂದಲು ಓರಣಗೊಂಡು ಬಾಗಿದವು. ಆದರೆ ಮೈಗೂದಲು ಎದ್ದು ರೋಮಾಂಚನವಾಯಿತು. ತಲೆಯ ಸ್ವಚ್ಛತೆಗಾಗಿ ರೊಕ್ಕ ಕೊಡಬೇಕಲ್ಲವೇ? ದರದ ಪಟ್ಟಿಯ ಕಡೆಗೆ ಕಣ್ಣು ಹೊರಳಿಸಿ ನೋಡಿದೆನು. "ದೊಡ್ಡವರಿಗೆ ತಲೆ, ದಾಡಿ ೮ ಆಣೆ" ಎಂದು ಬರೆದಿತ್ತು. ನನ್ನ ಅರಿವೆಯನ್ನು ಸರಿಪಡಿಸಿಕೊಂಡೆ. ಅರಿವಾಯಿತು. ಆ ಶರಣನ ಕೈಯಲ್ಲಿ ಒಂದು ರೂಪಾಯಿಯ ನೋಟನ್ನಿಟ್ಟೆ. ಬಿಡಿಬಿಡಿಯಾಗಿ ೧೬ ಆಣೆಗಳನ್ನು ನನ್ನ ಕೈಯಲ್ಲಿಟ್ಟನು, ನಾನು ತಿರುಗಿ ಅವನ ಕೈಯಲ್ಲಿ ೧೦ ಆಣೆ ರೊಕ್ಕವನಿಟ್ಟೆ. ಅವನು ಗಾಬರಿಯಾಗಿ, ಕೈಮುಗಿದು; "ಯಾಕೆಪಾ, ಹತ್ತಾಣೆ? ಎರಡಾಣೆ ಹೆಚ್ಚಿಗವೆ ಅಪಾ!" ಎನ್ನುತ್ತ ಎರಡಾಣೆಯನ್ನು ಮುಂದೆ ಮಾಡಿ ನನ್ನ ಕಡೆಗೆ ಸರಿಸಿದನು. ನಾನಿಷ್ಟೆ ಅಂದೆ. "ನಿಮ್ಮ ಕಾಯಕ ಮಾಡಿದ್ದಕ್ಕೆ ೮ ಆಣೆ; ನನಗೆ ಶಿವನಾಮ ಕೇಳಿಸಿದ್ದಕ್ಕಾಗಿ ೨ ಆಣೆ; ತಕ್ಕೊಳ್ಳಿರಿ ಶರಣರೇ."

"ಶರಣು, ಬಸವಾ, ಶಿವಾಯನಮ:" ಎನ್ನುತ್ತ ಮಾಲಕನು ನನಗೆ ಶರಣಾಗೈದನು.

ನಾನು ಹರುಷಿತನಾಗಿ ನಮಸ್ಕರಿಸಿ, 'ಜಯ ಹಿಂದ' ಎಂದು ಹೊರಗೆ ಬಂದೆ. ಸಲೂನಿನ ಕಡೆಗೆ ಹೊರಳಿ ನೋಡಿದೆ. ಸಲೂನಿನ ಹೆಸರೂ "ಜಯ ಹಿಂದ" ಇರುವ ಹಲಿಗೆಯು ತೂಗಾಡುತ್ತಿತ್ತು.

———

# ಎನ್ನ ಹೃದಯ ಗಂಹರದಲ್ಲಿ....... ?

[ಲೇಖಕರುಃ- ಶ್ರೀಯುತ ಪರ್ವತಪ್ಪಾ ಅಂಗಡಿ, ಡಿ. ಎಲ್. ಬಿ, ಬೆಳಗಾವಿ.]

ಭಗವಂತನ ಧ್ಯಾನದಲ್ಲಿ ನಿರತನಾಗಿ ಪರಿಶುದ್ಧವಾದ ಮನಸ್ಸಿಗಿಂತ ಪವಿತ್ರ ತೀರ್ಥಸ್ಥಳ ಬೇರೊಂದಿಲ್ಲ. ಭಗವಂತ ಧ್ಯಾನದಲ್ಲಿ ತಲ್ಲೀನನಾದಾಗ ಯಾವ ಪ್ರಶಾಂತಿ ಮಂದಿರವನ್ನು ಮನಸ್ಸು ಪ್ರವೇಶಿಸುವುದೋ ಅದಕ್ಕಿಂತ ಮಿಗಿಲಾದ ಕ್ಷೇತ್ರವಿನ್ನಿಲ್ಲ. ಧ್ಯಾನಾಗ್ನಿ ಕುಂಡದಿಂದ ಭಗವಂತನ ಪಾದ ಪದ್ಮದೆಡೆಗೆ ಹೋಗುತ್ತಿರುವ ಪವಿತ್ರ ಭಾವನೆಯ ಚಂದನ ಧೂಮಕ್ಕಿಂತ ಮಿಗಿಲಾದ ಧೂಪ ದೀಪಗಳಿನ್ನಿಲ್ಲ.

ಶ್ರೀ ಗುರುದೇವನ ವಾಣಿ ಎನ್ನ ಹೃದಯ ಗಹ್ವರದಲ್ಲಿ ಇಂತುಲಿಯಿತು. "ಪ್ರಪಂಚದಿಂದ ಹಿಂತಿರುಗು, ಇದೆಲ್ಲಾ ಭ್ರಾಂತಿಮಯ. ನಿನ್ನ ದೇಹವನ್ನೊಳಗೊಂಡ ಈ ಪ್ರಪಂಚವೆಲ್ಲಾ ಸ್ವಪ್ನಜಾಲ. ನೀನು ಇನ್ನೂ ಕನಸು ಕಾಣಲಿಚ್ಛಿಸುವೆಯೇನು ? ಸ್ವಪ್ನ ಸ್ಥಿತಿಯಲ್ಲಿ ಎಂದೆಂದಿಗೂ ಬದ್ಧನಾಗಬೇಕೆಂದಿರುವೆಯಾ ? ಏಳು, ಜಾಗ್ರತನಾಗು, ಗುರಿಸೇರುವ ವರೆಗೂ ನಿಲ್ಲಬೇಡ."

" ಜನನ ಮರಣಗಳನ್ನು ನಾನು ಗಣನೆಗೇ ತರುವದಿಲ್ಲ. ನಾನು ಎಲ್ಲಾ ಪರಿಮಿತಿಗಳನ್ನೂ ಕಿತ್ತೊಗೆಯುವೆನು. ನಾನು ಎಲ್ಲಾ ಬಂಧನಕ್ಕೆ ಅತೀತವಾಗಿ ಹೋಗುವೆನು. ನಾನು ಗುರುವಿನಲ್ಲಿ ಪವಿತ್ರತೆಯನ್ನು ಕಾಣುವೆನು. ನನ್ನಲ್ಲಿರುವ ಆ ಪರಂಜ್ಯೋತಿಯೇ ಗುರುದೇವ ! ನಿನ್ನಲ್ಲಿಯೂ ಇರುವುದು. ನೀನು ಸೂರ್ಯನಂತೆ, ನಾನು ಅದರ ಕಿರಣ. ಹಾಗೆಯೇ ನಾನು ಸೂರ್ಯ, ನೀನು ಅದರ ಕಿರಣ. " ಪವಿತ್ರತೆಯ ಕಡಲಿಗೆ ಧುಮುಕು. ಒಂದು ಸಲ ಉನ್ಮತ್ತನಂತೆ ಹಾರಿ ಭಗವತ್ಸಾಗರದಲ್ಲಿ ಮುಳುಗು. ದೇವರೇ ಗುರಿ. ಈ ಪ್ರಪಂಚದಲ್ಲಿ ಅವನಲ್ಲದೆ ಇನ್ನು ಬೇರೆ ಯಾವುದೂ ಇಲ್ಲ. ನೀನೆ ಕಂಗೊಳಿಸುತ್ತಿರುವ ಪರಮಾತ್ಮನ ಕಿರಣ " ಎಂದು ಹೃದಯವೀಣೆ ಮಿಡಿಯುವದು.

ನನ್ನ ಹೃದಯದಲ್ಲಿ ಒಂದು ಮಹಾ ಶಾಂತಿ ಮೂಡಿತು. ಈ ಸ್ಥಿತಿಯಲ್ಲಿ ನನ್ನ ಗುರುದೇವನ ವಾಣಿ ಸ್ಪಷ್ಟವಾಗಿ ಕೇಳಿಸಿತು. " ಕಾಲದಲ್ಲಿ ಮತ್ತು ಕಾಲಕ್ಕೆ ಅತೀತನಾಗಿರುವ ಅನಂತಾತ್ಮ ನಾನು " ಎಂದಿತು. ಅಷ್ಟರಲ್ಲಿ ಎನ್ನ ಆತ್ಮ ಹೀಗೆ ಪ್ರಾರ್ಥಿಸಿತು;— " ನೀನು ಸರ್ವಾಂತರ್ಯಾಮಿ. ನಿನ್ನ ಮಾಯೆ ವೈವಿಧ್ಯತೆಗೆ ಕಾರಣವಾದರೂ, ನಿನ್ನ ಸ್ವಭಾವ ಏಕವಾಗಿರುವುದು. ನೀನೇ ಆ ಏಕದ ಮಹಾ ಮಹಿಮೆ. ಹೇ ಗುರು, ನಿನ್ನಾತ್ಮದಲ್ಲಿ ನನ್ನನ್ನು ಲಯಿಸುವಂತೆ ಮಾಡು. ಪರಬ್ರಹ್ಮನು ನೀನೆ, ವಿಷ್ಣುವು ನೀನೆ, ಪರಮೇಶ್ವರನು ನೀನೇ. ನೀನೆ ಬ್ರಹ್ಮ, ಪರಬ್ರಹ್ಮ ಹರ ಹರ ಓಂ ಮಹದೇವ. "

ಗುರುವಾಣಿ ಇಂತೆಂದಿತು;— " ಬಾಹ್ಯ ಜಗತ್ತಿನ ವೈಭವದ ಹಿಂದೆ ಮೃತ್ಯು ಇದೆ, ಮರವು ಇದೆ. ಮೃತ್ಯು ದೇಹವನ್ನು ಹಿಡಿದೊಡನೆಯೇ ಅದೊಂದು ಹೆಣವಾಗುವುದು. ಆದರೆ ಆತ್ಮ ನಿತ್ಯ ಮುಕ್ತ. ಇದು ದೇಹವಲ್ಲ; ಇದು ಸಾಕ್ಷಿ. ದೇಹ ನಾಶವಾದರೂ ಇದು ನಾಶವಾಗುವುದಿಲ್ಲ. "

ಪ್ರಾಪಂಚಿಕರು ಬಯಸುವುದೇ ಕಾಮಕಾಂಚನ. ಇದಕ್ಕೆ ಸಂಬಂಧಪಟ್ಟ ವಿಷಯಗಳೆಲ್ಲ ವಿಷದಂತೆ ಪರಿತ್ಯಜಿಸಬೇಕಾಗಿದೆ. ಎಲ್ಲಾ ಮಲಿನತೆಯನ್ನೂ ಹೊಡೆದಟ್ಟಬೇಕಾಗಿದೆ. ಜೀವನವನ್ನು ಯಥಾರ್ಥ ಸ್ಥಿತಿಯಲ್ಲಿ ನೋಡಿದರೆ ಆಗ ಅದೆಲ್ಲಾ ಮಾಯೆ ಎಂದು ಗೊತ್ತಾಗುವದು. ಇದು ಒಳ್ಳೆಯದೂ ಅಲ್ಲ, ಕೆಟ್ಟದ್ದೂ ಅಲ್ಲ. ಇದು ತ್ಯಾಜ್ಯಕ್ಕೆ ಮಾತ್ರ ಯೋಗ್ಯ. ಇವೆಲ್ಲ ದೇಹ ಮತ್ತು ದೇಹಭಾವನೆಗೆ ಸಂಬಂಧಪಟ್ಟವು. ನಮ್ಮ ಆಸೆಗೆ ತಕ್ಕಂತೆ ಪ್ರಪಂಚದಲ್ಲಿ ನಮಗೆ ದುಃಖ ಬರುವುದು. ಆದ ಕಾರಣ ಯಾವುದಕ್ಕೂ ಭ್ರಾಂತಿಯಿಂದ ಆಸಕ್ತರಾಗಬಾರದು. ಯಾವ ಆಸ್ತಿಯು ನಮ್ಮ ನೈಜ ಸ್ವಭಾವವನ್ನು ತೃಪ್ತಿಪಡಿಸಬಲ್ಲದು ? ಬಾಹ್ಯ ವಸ್ತುವಿಗೆ ನಾವು ಬದ್ಧರಾಗಿರಬೇಕೇ ? ಪ್ರಪಂಚಕ್ಕೆ ಬತ್ತಲೆ ಬಂದೆ; ಪರಲೋಕದಿಂದ ಕರೆ ಬಂದಾಗ ಬತ್ತಲೆಯೇ ಮರಳಿ ಹೋಗುವೆ. ಕೇವಲ ಪಂಚೇಂದ್ರಿಯಗಳ ತೃಪ್ತಿಗೆ ಬಾಳಿದ ಹಿಂದಿನ ಜೀವನದಿಂದ ವಿಮುಖರಾಗಬೇಕು. ನಮ್ಮ ದೇಹಗಳಲ್ಲಿ ಆತ್ಮ ದೇವಾಲಯಗಳನ್ನಾಗಿ ಮಾರ್ಪಡಿಸಬೇಕಾಗಿದೆ. ದಿನ ಕಳೆದಂತೆ ಅಲ್ಲಿ ಆತ್ಮ ಹೆಚ್ಚು ಹೆಚ್ಚು ಆವಿರ್ಭೂತವಾಗುತ್ತ ಬರಲಿ. ಆಗ ಅಜ್ಞಾ

ನಾಂಧಕಾರ ಕ್ರಮೇಣ ಕಡಿಮೆಯಾಗುವುದು. ಆತ್ಮದರ್ಶನವಾದರೆ ಅವೇ ದೇವರೆಂದು ಗೊತ್ತಾಗುವುದು.

ಎನ್ನ ಹೃದಯ ಗಹ್ವರದಲ್ಲಿ;— "ಅಹಂಕಾರವೇ ಎಲ್ಲಕ್ಕೂ ಮೂಲ. ಅದನ್ನು ನಿರ್ಮೂಲ ಮಾಡು. ಕಾಮ ನಿನ್ನನ್ನು ವಶಮಾಡಿಕೊಳ್ಳದಂತೆ ಜಾಗ್ರತೆಯಿಂದ ನೋಡು. ನಿನ್ನ ದೇಹವನ್ನು ಚಿತೆಗೇರಿಸುವವರೆಗೂ ಅದ ರಿಂದ ಪಾರಾದೆ ಎಂದು ನೀನು ಹೇಳುವಂತಿಲ್ಲ. ನೀನು ಈ ಜನ್ಮದಲ್ಲಿ ಮುಕ್ತನಾಗಬೇಕೆಂದು ಇಚ್ಛಿಸಿದರೆ ನಿನ್ನ ಹೃದಯವನ್ನು ಒಂದು ಸ್ಮಶಾನ ವನ್ನಾಗಿ ಮಾಡಿ, ನಿನ್ನ ಆಸೆಗಳನ್ನೆಲ್ಲ ಅಲ್ಲಿ ಭಸ್ಮ ಮಾಡು." ಇಂತು ಉಲಿಯಿತು.

"ವಿಶ್ವವನ್ನೆಲ್ಲಾ ಒಂದೇ ಸಮನಾಗಿ ಪ್ರೀತಿಯಿಂದ ನೋಡು. ಒಬ್ಬ ಸಹೋದರನನ್ನು ಪ್ರೇಮದಿಂದ ನನ್ನ ಪ್ರಿಯ ಸಹೋದರ ಎಂಬ ಮೃದು ಮಧುರ ಮಾತಿನಿಂದ ಕರೆದಾಗ ಯಾವ ಚೈತನ್ಯ ಅಲ್ಲಿರುವುದೋ ಅವೇ ಪ್ರತಿಯೊಂದು ಜೀವಿಯ ಅಂತರಾಳದಲ್ಲಿಯೂ ಇದೆ ಎಂದು ಅರಿ. ವಿಶ್ವಾತ್ಮ ನಾಗು. ನಿನ್ನ ಶತ್ರುವನ್ನೂ ಪ್ರೀತಿಸು. ಅಂತರಾಳದಲ್ಲಿ ಎಲ್ಲಾ ಬ್ರಹ್ಮ ಮಯ. ಪ್ರತಿಯೊಂದು ವಸ್ತುವಿನಲ್ಲಿಯೂ, ಪ್ರತಿಯೊಂದು ವ್ಯಕ್ತಿಯಲ್ಲಿಯೂ ಪವಿತ್ರಾತ್ಮನನ್ನು ನೋಡಲು ಯತ್ನಿಸು. ಆತ್ಮ ನೋಡು, ದೇಹವನ್ನು ನೋಡಬೇಡ. ಪ್ರತಿಯೊಂದು ವ್ಯಕ್ತಿಯನ್ನೂ ಪ್ರತಿಯೊಂದು ಆಕಾರವನ್ನೂ ಅಧ್ಯಾತ್ಮಿಕ ದೃಷ್ಟಿಯಿಂದ ನೋಡು. ಈ ಸಂಸಾರದ ಗಾಡಾಂಧಕಾರದ ಲ್ಲಿಯೂ ಮೊದಮೊದಲು ಮೊಬ್ಬಾಗಿದ್ದರೂ ಕೊನೆಗೆ ಸ್ಪಷ್ಟವಾಗಿ ನಿತ್ಯ ಚೈತನ್ಯದ ದರ್ಶನವಾಗುವುದು." ಎಂದು ದೇವರ ವಾಣಿ ಎನ್ನ ಹೃದ ಯಂಗಳದಲ್ಲಿ ಕೇಳಿಸಿತು.

ಕೊನೆಗೆ ಎನ್ನ ಹೃದಯವೀಣೆ ದೇವರನ್ನು ಕುರಿತು ಪ್ರಾರ್ಥಿಸತೊಡ ಗಿತು. "ನಾನು ನಿನ್ನನ್ನು ಪೂಜಿಸುವೆ. ಗುರುಭಕ್ತಿ ಎಂಬ ಯಜ್ಞ ಕುಂಡಕ್ಕೆ ನನ್ನ ಕೈಕಾಲುಗಳು, ನಾಲಿಗೆ, ಕಣ್ಣು, ಕಿವಿ, ನನ್ನ ಇಡೀ ದೇಹ, ಮನಸ್ಸು, ಇಚ್ಛೆ, ಭಾವನೆ, ಇಡೀ ವ್ಯಕ್ತಿತ್ವ ಅರ್ಪಿತವಾಗಿ, ಪರಿ ಶುದ್ಧವಾಗಲಿ. ಜನ್ಮಜನ್ಮಗಳಲ್ಲಿ ನಾನು ಏನಾಗಿದ್ದೆನೊ, ಏನಾಗಿರುವೆನೊ, ಏನಾಗುವೆನೊ, ಪಾಪ ಪುಣ್ಯಗಳನ್ನೆಲ್ಲಾ ನಿನಗರ್ಪಿಸುವೆನು. ನೀನೇ ನನ್ನ ಆರಾಧ್ಯ ಮೂರ್ತಿ ಮುಕ್ತಿ, ನೀನೇ ನನ್ನ ಪರಮಾತ್ಮ. ನನಗೆ ಇನ್ನೇನೂ

ಬೇಡ. ನಿನ್ನ ಹೃದಯವಕ್ಷಸ್ಥಳವಲ್ಲದೆ ಮತ್ತಾವ ಆಲಯವೂ ಬೇಡ ! ಎನ್ನ ಬಾಳು ಇಂದು ಮತ್ತು ಎಂದೆಂದಿಗೂ ಪರಿಶುದ್ಧವಾಗಿ ಬೆಳಗಲಿ ! ನಿನ್ನ ವ್ಯಕ್ತಿತ್ವವೇ ಎನ್ನದಾಗಲಿ !! ಶಿವೋಹಂ, ಶಿವೋಹಂ " ಎಂದಿತು.

" ಓಂ ! ಎಂದೆಂದಿಗೂ ನೀನು ಎನ್ನಾತ್ಮ ! ಅನಂತ ಶಕ್ತಿ ನಿನ್ನದು ! ಜಾಗ್ರತನಾಗಿ, ಗುರಿ ಸೇರುವ ವರೆಗೆ ನಿಲ್ಲದಿರು. ಓಂ ! ಓಂ !! ಓಂ !!!" ಎಂದು ಎನ್ನ ಹೃದಯಗಹ್ವರದಲ್ಲಿ ಗುರುದೇವನು ಗೋಚರಿಸಿದ.

————

# ಲಿಂಗದ ವ್ಯಾಪ್ತಿ, ಮಹಿಮೆ, ಹಿರಿಮೆಗಳು.

(ಬರೆದವರು:— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ಶೆಗ್ಗಿಹಳ್ಳಿ (ಇಂಡಿ)



ಹಿಂದೆ ಲಿಂಗಪೂಜೆಯು ಮೂರ್ತಿ ಪೂಜೆಯಲ್ಲಿಂದು ನಾವು ವಿವೇಚಿಸಿದ್ದೇವೆ. ಇನ್ನು ಲಿಂಗದ ಬಗ್ಗೆ ಹೆಚ್ಚಿನ ಕೆಲವು ವಿಷಯಗಳನ್ನು ವಿವೇಚಿಸವೆವು. ಲಿಂಗ ಶಬ್ದವು ಬಹು ವ್ಯಾಪಕವಾಗಿದೆ. "ಲಿಂಗಮಧ್ಯೆ ಜಗತ್ ಸರ್ವಂ" ಎಂದು ಹೇಳಿದ್ದನ್ನು ವಿಚಾರಿಸಿದರೆ ತೋರುವದೆಲ್ಲವೂ ಲಿಂಗ ರೂಪವಾಗಿರುವದು. ಸ್ಥೂಲ, ಸೂಕ್ಷ್ಮ, ಕಾರಣ, ಮಹಾಕಾರಣಗಳೆಲ್ಲವೂ ಲಿಂಗಗಳಾಗಿವೆ. ಲಿಂಗವೆಲ್ಲಿ ಇರುವದೋ ಅಲ್ಲೆಲ್ಲ ಶಿವ ಶಕ್ತಿಯರ ಮಿಲನವನ್ನೇ ಸೂಚಿಸುವದು. ಸತ್, ಚಿತ್, ಆನಂದಮಯ, ಮಹಾಕಾರಣ ಸ್ವಾನಂದ ಸಾಮ್ರಾಜ್ಯದಲ್ಲಿ ಅದು ನಿಗೂಢ, ಆನಂದ, ನಿರಾಕಾರ, ಮಹೇಶ್ವರ ಅಥವಾ ಪರಮಾತ್ಮನೆನಿಸುವನೋ ಆತನ ಶಕ್ತಿಯಾದವಳಿಗೆ ಮಹೇಶ್ವರಿ ಅಥವಾ ಪರಮೇಶ್ವರಿ ಎನ್ನುವರು. ಇದೇ ಮಹಾ ಕಾರಣ ಲಿಂಗವೆನಿಸುವದು. ವಿಜ್ಞಾನಮಯ ಜಗದಲ್ಲಿ ಅವನೇ ಸಕಲೈಶ್ವರ್ಯ ಸಂಪನ್ನನಾದ ಈಶ್ವರನೆನಿಸುತ್ತಾನೆ. ಆತನ ದಿವ್ಯ ಶಕ್ತಿಯೇ ಈಶ್ವರಿ ಎನಿಸುವಳು. ಆ ಸತ್ ಚಿತ್ ಆನಂದಗಳು ಇಲ್ಲಿ ಅನುಕ್ರಮವಾಗಿ ಪ್ರಕಾಶ, ಶಕ್ತಿ, ಜಡತ್ವಗಳಾಗಿ ಮಾರ್ಪಾಟು

ವವು. ಇದೇ ಕಾರಣಲಿಂಗ (ಭಾವಲಿಂಗ) ವೆನಿಸುವದು. ಮನ ಬುದ್ಧಿಯ ಜಗವಾದ ಸೂಕ್ಷ್ಮ ಜಗದಲ್ಲಿ ಅವನು ಅಂತರಾತ್ಮನೆನಿಸುವನು. ಅವನ ಶಕ್ತಿಯು ಆಗ ಪ್ರಾಣ ಎನಿಸುವಳು. ಆಗ ಪ್ರಕಾಶ, ಶಕ್ತಿ, ಜಡತ್ವಗಳು ಸತ್ವ ರಜ, ತಮಗಳಾಗಿ ಮೂರ್ಪಾಟವಾಗುವವು. ಇದೇ ಸೂಕ್ಷ್ಮಲಿಂಗ (ಪ್ರಾಣಲಿಂಗ) ವೆನಿಸುವದು. ಅನ್ನಮಯ (ಭೌತಿಕ) ಜಗವಾದ ಸ್ಥೂಲ ಜಗದಲ್ಲಿ ಅವನು (ಜೀವಾತ್ಮ) ಪುರುಷನೆನಿಸಿ, ಅವನ ಶಕ್ತಿಯು ಪ್ರಕೃತಿ ಎನಿಸುವಳು. ಸತ್ವ ರಜ ತಮಗಳೇ ಇಲ್ಲಿ ಅ ಉ ಮ ಗಳಾಗಿ ಮೂರಾಗಿ ಡಾಗುವವು. ಅಂದರೆ ಬ್ರಹ್ಮ, ವಿಷ್ಣು, ರುದ್ರರು ಆಗುವರು. ಇದೇ ಸ್ಥೂಲ ಲಿಂಗ ಇಷ್ಟಲಿಂಗ. (೧) ಸತ್ವ (೨) ರಜ (೩) ತಮ ಇವು ಅಪರಾ ಪ್ರಕೃತಿ (ಮಾಯಾ) (೪) ಸತ್ (೫) ಚಿತ್ (೬) ಆನಂದ ಇವು ಪರಾ ಪ್ರಕೃತಿ ಅಂದರೆ ಚಿಚ್ಛಕ್ತಿ (ಪಾರ್ವತಿ) (೭) ಪರಶಿವ ಹೀಗೆ ಇದ್ದು ಈ ಮೇಲಿನ ವಿವರಣೆಯು ದ್ಯೋತಕವಾಗಿಯೇ ಈ ಇಷ್ಟಲಿಂಗದ ಕಲ್ಪನೆ ಇರುವದು. ಪರಶಿವನಿಂದ ಚಿಚ್ಛಕ್ತಿ ಪರಾಪ್ರಕೃತಿ. ಇದರಿಂದ ಮಾಯಾ ಶಕ್ತಿ ಅಪರಾ ಪ್ರಕೃತಿ ಹೀಗೆ ಉಂಟಾದದ್ದರ ದ್ಯೋತಕವು ಈ ಲಿಂಗವಾಗಿದೆ. ಈ ಲಿಂಗದ ಪೂಜೆ ಏನೆಂದು ವಿಚಾರಿಸಿರಿ. ಈ ಇಷ್ಟ ಲಿಂಗದ ಪೂಜೆ ಎಂದರೆ ಮಹಾಕಾರಣ ಕಾರಣ ಸೂಕ್ಷ್ಮ ಸ್ಥೂಲ ಈ ಜಗತ್ತುಗಳ ಪೂಜೆಯೆಂದು ಅರ್ಥವಾಗುವದು. ಈ ಲಿಂಗವು ಎಂಥ ವ್ಯಾಪಕ ಎಂಥ ಉದಾತ್ತ ತತ್ವಗಳ ಮೇಲೆ ನಮ್ಮ ವೀರಶೈವ ಪುರಾತನರು ರಚಿಸಿದ್ದಾರೆ ವಿಚಾರಿಸಿರಿ. ಉಳಿದ ಯಾವ ಪೂಜೆಗಳು ಇಂಥ ಸೃಷ್ಟಿ ವಿಶಾಲ ಉದಾತ್ತ ತತ್ವಗಳಿಂದ ಕೂಡಿದೆ ಹೇಳಿ ನೋಡುವಾ ? ಈ ಲಿಂಗವನ್ನು ಪೂಜಿಸುವದರಿಂದ ಮಾನವನು ಸ್ಥೂಲದಿಂದ ಸೂಕ್ಷ್ಮಕ್ಕೆ, ಸೂಕ್ಷ್ಮದಿಂದ ಕಾರಣಕ್ಕೆ, ಕಾರಣದಿಂದ ಮಹಾ ಕಾರಣಕ್ಕೆ ಹೀಗೆ ಏರುತ್ತ ವಿಶಾಲವಾಗುತ್ತ ಪೂರ್ಣ ಪರಿಪೂರ್ಣವಾಗುತ್ತ ಪೂರ್ಣ ಮಾನವನಾಗಿ ದೇವಮಾನವನಾಗಲಿಕ್ಕೆ ಇದು ಎಂಥ ಸುಲಭೋಪಾಯವೆಂಬುದನ್ನು ವಿಚಾರಿಸಿ ನೋಡಿರಿ.

ಲಿಂಗದ ವ್ಯಾಪಕದ ಬಗ್ಗೆ ಶರಣರು ಕೆಳಗಿನಂತೆ ಹೇಳಿರುವರು: –

ಲಿಂಗವೆಂಬುದು ಸರ್ವ ಕಾರಣ ನಿರ್ಮಲ
ಲಿಂಗವೆಂಬುದು ಸಚ್ಚಿದಾನಂದ ನಿತ್ಯ ಪರಿಪೂರ್ಣ,

ಲಿಂಗವೆಂಬುದು ಸರ್ವ ಲೋಕೋತ್ಪತ್ತಿಗೆ ಕಾರಣ,
ಲಿಂಗವೆಂಬುದು ಸರ್ವ ತತ್ವ ಪೂರ್ಣ,
ಲಿಂಗವೆಂಬುದು ಪರಶಕ್ತಿಯುತ ಪರಶಿವನ ನಿಜದೇಹ,
ಲಿಂಗವೆಂಬುದು ಪರಶಿವನ ಘನ ತೇಜ,
ಲಿಂಗವೆಂಬುದು ಪರಶಿವನ ನಿರತಿಶಯಾನಂದ ಸುಖವು,
ಲಿಂಗವೆಂಬುದು ಪರಶಿವನ ಪರಮ ಜ್ಞಾನ.

ಇದರಿಂದ ಲಿಂಗವೆಂದರೆ ಅಖಂಡ ಪರಶಿವನೆಂದು ಅರ್ಥವಾಗುವದು.

ವೇದಾಂತಿಗಳ ತತ್ವಮಸಿ (ಅದು ನೀನಾಗಿದ್ದೀ) ಎಂಬ ವಾಕ್ಯಕ್ಕೆ ಶರಣರು ಹೇಗೆ ಅರ್ಥ ಮಾಡಿದ್ದಾರೆ ನೋಡಿರಿ. " 'ತತ್' ಪದ ಲಿಂಗವೆಂದರುಹಿ, 'ತ್ವಂ' ಪದ ಅಂಗವೆಂದರುಹಿ, 'ಅಸಿ' ಪದ ಪ್ರಾಣವೆಂದರುಹಿ, ಶ್ರೀಗುರು ಇಷ್ಟಲಿಂಗವ ಕೊಟ್ಟು ದೃಷ್ಟಲಿಂಗವ ತೋರಿದ ಬಳಿಕ "ತತ್ವಮಸಿ" ಪದ ನಿಮ್ಮ ಶರಣರು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ"

ಈ ಇಷ್ಟಲಿಂಗಕ್ಕೂ ಆ ತತ್ವಮಸಿ ಪದಕ್ಕೂ ಎಂಥ ನಿಕಟ ಸಂಬಂಧವನ್ನು ನಮ್ಮ ಶರಣರು ಮಾಡಿದ್ದಾರೆ ವಿಚಾರಿಸಿರಿ.

ಈ ವಿಶ್ವವು ಪರಶಿವನ ಆಕಾರವನ್ನೇ ಸೂಚಿಸುವದು. ಅದಕ್ಕೆ ತಕ್ಕಂತೆ ಇಷ್ಟಲಿಂಗದ ಆಕಾರವನ್ನು ರಚಿಸಲಾಗಿದೆ. ವಿಶ್ವವು ತತ್ತಿಯ ಆಕಾರದಂತೆ ಇರುವದು. ಲಿಂಗವು ಅದಕ್ಕೆ ತಕ್ಕಂತೆ ಇರುವದು.

"ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ. ಬ್ರಹ್ಮಾಂಡದಿಂದತತ್ತ ನಿಮ್ಮ ಶ್ರೀಮುಕುಟ. ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ ಕೂಡಲಸಂಗಮದೇವ ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ."

ಶ್ರೀ ಬಸವಣ್ಣನವರು ಮಹಾಕಾರಣ ಲಿಂಗದ ಇರವನ್ನು ಹೇಳಿ ಅದೇ ಚಿಕ್ಕದಾಗಿ ಇಷ್ಟಲಿಂಗವಾಗಿ ಕೈಯೊಳಗೆ ಬಂದಿರುವದೆಂದು ಬಹು ಸುಂದರವಾಗಿ ಚಿತ್ರಿಸಿದ್ದಾರೆ. ಇದೇ ಅಭಿಪ್ರಾಯವನ್ನು ಅಕ್ಕನು ಚಿತ್ರಿಸಿದ್ದನ್ನು ನೋಡಿರಿ:—

"ಅಯ್ಯ ಪಾತಾಳವಿತ್ತತ್ತ ಶ್ರೀಪಾದವತ್ತತ್ತ ಬ್ರಹ್ಮಾಂಡವಿತ್ತತ್ತ ಮಣಿಮುಕುಟ ವತ್ತತ್ತ, ಅಯ್ಯ ದಶದಿಕ್ಕು ಇತ್ತಿತ್ತ, ದಶಭುಜಗಳತ್ತತ್ತ, ಚನ್ನಮಲ್ಲಿಕಾರ್ಜುನನ ನೀನೆನ್ನ ಕರಸ್ಥಲಕೆ ಬಂದು ಚುಳುಕಾದಿರಯ್ಯ"

ಇಂಥ ಪೂರ್ಣ ಪರಿಪೂರ್ಣ ಅಖಂಡ ವ್ಯಾಪಕ ಮಹಾಕಾರಣ ಲಿಂಗವೇ ಚಿಕ್ಕದಾಗಿ ಇಷ್ಟಲಿಂಗವೆನಿಸಿ ಕರಸ್ಥಲಕ್ಕೆ ಬಂದಿತೆಂದು ಭಾವ ವಿರುವದು. ಬೀಜದಲ್ಲಿ ಮಹಾಮರದ ಅಂಕುರವು ಇದ್ದಂತೆ ಈ ಇಷ್ಟ ಲಿಂಗವಿರುವದೆಂದು ಹೇಳಿರುವರು.

"ಅಣುವಿಂಗೆ ಅಣುವು, ಮಹತ್ತಿಗೆ ಮಹತ್ತು ಎನಿಸುವ ಲಿಂಗ ದೇವನ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ. ಉಪಮಾತೀತ ವಾಙ್ಮನಕ್ಕ ಗೋಚರನೆನಿಸುವ ದೇವನ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ. ಶ್ರುತಿ ತತಿ ಶಿರದ ಮೇಲೆ ದಶಾಂಗುಲನೆನಿಸುವ ದೇವನ ಕಂಡೆನಯ್ಯ. ನಾನೆನ್ನ ಕರಸ್ಥಲದಲ್ಲಿ ಭಾವ ಭರಿತ ಜ್ಞಾನಗವ್ಯನೆನಿಸುವ ದೇವನ ಕಂಡೆನಯ್ಯ. ಕರಸ್ಥಲದಲ್ಲಿ ಅಖಂಡೇಶ್ವರನೆಂಬ ಅನಾದಿ ಪರಶಿವನ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ."

ಈ ಮಹಾಕಾರಣ ಲಿಂಗದ ಸ್ಥಿತಿಯನ್ನು ಹೀಗೆ ಚನ್ನಾಗಿ ವಿವರಿಸ ಲಾಗಿದೆ. ಇಷ್ಟಲಿಂಗವೇ ಪರಶಿವನ ಕುರುಹು ಎಂದು ವಚನಕಾರರು ಹೇಳಿ ದ್ದಾರೆ. 'ಲಿಂಗ' ಶಬ್ದವನ್ನು ಎಷ್ಟು ವ್ಯಾಪಕ ಪರಿಪೂರ್ಣ ವಿಶಾಲ ಉದಾತ್ತ ತತ್ವಗಳ ಮೇಲೆ ರಚಿಸಿದ್ದಾರೆಂದು ಇದರ ಮೇಲಿಂದ ತಿಳಿಯುವದು.

ಅಖಂಡ ಲಿಂಗದ ವರ್ಣನೆಯನ್ನು ಶ್ರೀ ಷಣ್ಮುಖ ಸ್ವಾಮಿಗಳು ಕೆಳಗಿನಂತೆ ಮಾಡಿದ್ದಾರೆ:—

"ಎನ್ನ ಕರಸ್ಥಲದ ಮಧ್ಯದಲ್ಲಿ ಪರಮನಿರಂಜನ ಕುರುಹು ತೋರಿದ, ಆ ಕುರುಹಿನ ಮಧ್ಯದಲ್ಲಿ ಅರುಹಿನ ಕಳೆಯು ತೋರಿದ. ಆ ಕಳೆಯು ಮಧ್ಯದಲ್ಲಿ ಮಹಾಜ್ಞಾನದ ಬೆಳಗ ತೋರಿದ. ಆ ಬೆಳ ಗಿನ ನಿಲವಿನೊಳಗೆ ಎನ್ನ ತೋರಿದ, ಎನ್ನೊಳಗೆ ತನ್ನ ತೋರಿದ, ತನ್ನೊಳಗೆ ಎನ್ನನಿಂಬಿಟ್ಟುಕೊಂಡ ಮಹಾಗುರುವಿಗೆ ನಮೋ ನಮೋ ಎನುತಿರ್ದೆನಯ್ಯ ಅಖಂಡೇಶ್ವರಾ.

ಈ ವಚನದಲ್ಲಿ ಸಹಜವಾಗಿ ಷಟ್‌ಸ್ಥಲದ ವರ್ಣನೆಯೂ ಅಖಂಡ ಲಿಂಗದ ವರ್ಣನೆಯೂ ಕೂಡ ಬಂದಿದೆ. ಅದೆಲ್ಲ ಇಷ್ಟಲಿಂಗವಾಗಿ ಕರಸ್ಥಲ

ದಲ್ಲಿ ಮೊದಲು ಗುರುವಿನಿಂದ ಬಂದುದನ್ನು ಹೇಳಿದ್ದಾನೆ. ನಿರ್ಗುಣ ನಿರಂಜನನ ಗುರುತಾಗಿರುವದೇ ಈ ಇಷ್ಟಲಿಂಗವೆಂದು ಸ್ಪಷ್ಟ ಅಭಿಪ್ರಾಯವಿರುವದು. ಈ ಇಷ್ಟಲಿಂಗದಿಂದಲೇ ಜ್ಞಾನವು ಹುಟ್ಟುವದೆಂದು ಹೇಳಲಾಗಿದೆ. ಇದರಲ್ಲಿ ಭಕ್ತನ ಆಚಾರಲಿಂಗ, ಮಹೇಶನ ಗುರುಲಿಂಗ, ಪ್ರಸಾದಿಯ ಶಿವಲಿಂಗ, ಪ್ರಾಣಲಿಂಗಿಯ ಜಂಗಮಲಿಂಗ, ಶರಣನ ಪ್ರಸಾದಲಿಂಗ, ಐಕ್ಯನ ಮಹಾಲಿಂಗ ಹೀಗೆ ಇದರಲ್ಲಿ ಆರುಸ್ಥಲಗಳಿಗೆ ಸಂಬಂಧಿಸಿದ ಆರುಲಿಂಗಗಳ ವರ್ಣನೆ ಬಂದಿದೆ. ಇದರ ಮೇಲಿಂದ ಲಿಂಗವು ಎಷ್ಟು ವ್ಯಾಪಕ, ವಿಶಾಲ, ಉದಾರ ಪೂರ್ಣ ಪರಿಪೂರ್ಣ ವಿರುವದೆಂದು ತೋರುವದು.

ವೀರಶೈವ ದರ್ಶನದಲ್ಲಿ, ವೀರಶೈವ ತತ್ವದಲ್ಲಿ, ವೀರಶೈವ ಸಂಸ್ಕೃತಿಯಲ್ಲಿ ವೀರಶೈವ ಶಿವಯೋಗದಲ್ಲಿ ವೀರಶೈವರ ಪ್ರತಿಯೊಂದರಲ್ಲಿ ಲಿಂಗವು ಹಾಸುಹೊಕ್ಕಾಗಿ ಇರುವದು. ಲಿಂಗವು ಪ್ರತಿ ಹೆಜ್ಜೆಹೆಜ್ಜೆಗೆ ವೀರಶೈವನ ಪ್ರಜ್ಞೆಗೆ ಬರುವದು. ವೀರಶೈವನಿಗೆ ಲಿಂಗವೇ ಉಸಿರಾಗಿರುವದು. ಪ್ರತಿ ಇಂದ್ರಿಯದಲ್ಲಿ ಪ್ರತಿ ರೋಮ ರೋಮದಲ್ಲಿ ಲಿಂಗವಿರುವದು ಆದಕಾರಣ ಗಿಯೇ ಮಾತೆಂಬುದು ಜ್ಯೋತಿರ್ಲಿಂಗ, ಶರಣಸತಿ ಲಿಂಗಪತಿ, ಲಿಂಗ ಸಂಧಾನ ಲಿಂಗಾಂಗಸಾಮರಸ್ಯ, ಸುಜ್ಞಾನಲಿಂಗ ಅವ್ಯಕ್ತಲಿಂಗ, ಕ್ರಿಯಾ ಲಿಂಗ, ಆಚಾರಲಿಂಗ, ಭಾವಲಿಂಗ, ಪ್ರಾಣಲಿಂಗ, ಅಂಗವೇ ಲಿಂಗ ಲಿಂಗವೇ ಪ್ರಾಣ, ಸರ್ವಾಂಗಲಿಂಗ, ಭಕ್ತನ ಮುಖದರ್ಪಣದಲ್ಲಿ ಲಿಂಗ ಕಾಣುವದು, ಶರಣರು ಮನಡೆದು ಮಾತನಾಡಿದರೆ ಲಿಂಗವೇ ಕಾಣುವದು. ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು, ಲಿಂಗ ಮುಟ್ಟಿದ ಕೈಯಿಡಲು ದೃಷ್ಟಿಲಿಂಗ ಸೃಷ್ಟಿಲಿಂಗ ಕೂಡಬೇಕು. ಹೀಗೆ ಪ್ರತಿಯೊಂದು ಕ್ರಿಯೆಯಲ್ಲಿ ಪ್ರತಿಯೊಂದು ಪದಾರ್ಥದಲ್ಲಿ, ಪ್ರತಿಯೊಂದು ಇಂದ್ರಿಯದಲ್ಲಿ ಪ್ರತಿಯೊಂದು ಭಾವಮನಗಳಲ್ಲಿ ಸಕಲದರಲ್ಲಿ ಪಂಚಭೂತಗಳಲ್ಲಿ ಪಂಚ ವಿಷಯಗಳಲ್ಲಿ ಪ್ರತಿಯೊಂದರಲ್ಲಿ ಲಿಂಗವನ್ನು ಕಾಣಬೇಕು. ಲಿಂಗವನ್ನು ಹೊಂದಬೇಕು. ಲಿಂಗ ಮುಖ್ಯವಾಗಿ ಮಾಡಬೇಕು. ಹೀಗೆ ಲಿಂಗವು ಎಲ್ಲದರಲ್ಲಿ ಪೂರ್ಣ ವ್ಯಾಪಿಸಿ ನಿಂತಿರುವದು. ವೀರಶೈವರಲ್ಲಿ ಲಿಂಗ ಶಬ್ದವನ್ನು ತೆಗೆದುಹಾಕಿದರೆ ಪ್ರೇತದಂತೆ ವೀರಶೈವವು ನಿರ್ಜೀವ ನಿಸ್ತೇಜ ನಿರ್ವೀರ್ಯ ನಿರ್ಗಂಧ ನಿರುಪಯೋಗಿ ನಿರಾಧಾರವಾಗಿ ಬಿಡುವದು. ಈ ಲಿಂಗದ ಬಗೆಗೆ ಎಷ್ಟು ಬರೆದರೂ ಕಡಿಮೆಯೇ ಸರಿ.

"ಲಿಂಗಂ ಶೈವಮಿದಂ ಸಾಕ್ಷಾತ್ ಶಿವಶಕ್ತ್ಯುಭಯಾತ್ಮಕಂ " ಲಿಂಗವು ಪರವಸ್ತುವಿನ ಸದ್ರೂಪ ಚಿದ್ರೂಪಗಳನ್ನು ಒಂದುಗೂಡಿಸುವ ತತ್ವವಾಗಿದೆ. ಶಿವನು ಸದ್ರೂಪನು ಶಕ್ತಿಯು ಚಿದ್ರೂಪಳು ಇದ್ದಾರೆ. ಪರಶಿವನಿಗೆ ಲಿಂಗ ವೆಂದು ಸಂಬೋಧಿಸುವರು. ಅದಕ್ಕಾಗಿ—

"ಶಿವ ಏದಸ್ವಯಂ ಲಿಂಗಂ ಇತಿಲಿಂಗಸ್ಯ ವೈಭವಂ" ಲೀಯತೆ ಗಮ್ಯತೆ ಯತ್ರ ಯೇನ ಸರ್ವಂ ಚರಾಚರಂ । ತದೇತಂ ಲಿಂಗಮಿ ತ್ಯುಕ್ತಂ ಲಿಂಗತತ್ತ್ವ ಪರಾಯಣೈಃ "

ಶಿವನು ತಾನೇ ಸ್ವತಃ ಲಿಂಗರೂಪನಾಗಿರುವನುಹಾಗೂ ಉತ್ಪತ್ತಿಸ್ಥಿತಿ ಲಯಗಳಿಗೆ ಯಾವದು ಕಾರಣವಾಗಿದೆಯೋ, ಯಾವದು ತನ್ನಲ್ಲಿ ಸಕ ಲಕ್ಕೂ ಆಧಾರವಾಗಿರುವದೊ, ಅದೇ+ಲಿಂಗ ಯಾವದು ಶಿವ+ಶಕ್ತಿಯರಲ್ಲಿ ಅವಿರಳವಾದ ಅವಿನಾಭಾವ ಸಂಬಂಧವನ್ನು ಹೇಳುವದೋ ಅದೇ ಲಿಂಗವು ಲಿಂಗವೇ ಆತ್ಮವೆಂದು ಅಂಜಿಕೆಯಿಲ್ಲದೆ ಹೇಳಬಹುದು. ಲಿಂಗವು "ಅಣೋ ರಣೀಯಾನ್ ಮಹತೋ ಮಹಿಮಾನ್" ಎಂದು ಶಾಸ್ತ್ರವು ಹೇಳುತ್ತದೆ. ಸಕಲತರದ ಶಾಸ್ತ್ರಜ್ಞರೂ ವಿಜ್ಞಾನಿಗಳೂ ಈ ಲಿಂಗವನ್ನು ಕಂಡುಹಿಡಿಯ ಲಿಕ್ಕೆ ಬಹುಮುಖವಾಗಿ ಯತ್ನಿಸುತ್ತಿರುವರು.

'ಪರಮಾಣುವಿನಿಂದ ವಿಶ್ವದ ವರೆಗೆ, ಮಾನವನಿಂದ ದೇವನ ವರೆಗೆ, ತೋರುವ ವಸ್ತುವಿನ ಮೂಲ ರೂಪವು ಗೋಲವಾಗಿರುತ್ತದೆ. ಎಲ್ಲ ಜನಾಂಗ ದವರಿಗೂ ಗೋಲವು ಅನಾದ್ಯನಂತದ ಕುರುಹಾಗಿರುತ್ತದೆಂದು" ಶ್ರೀಮತಿ ಬ್ಲಾವ್ಯಾಸ್ಕಿಯು ಹೇಳುವಳು. ಆದಕ್ಕೆ ಇದನ್ನೆಲ್ಲ ತಿಳಿದು ಶೈವರು ವೀರ ಶೈವರು ಈ ಗೋಲದ ಗುರುತಾದ ಲಿಂಗವನ್ನು ಕಂಡುಹಿಡಿದು ಪೂಜಿಸಹ ತ್ತಿದರು. ಶೈವರು ಸ್ಥಾವರಲಿಂಗಗಳನ್ನು ವೀರಶೈವರು ಇಷ್ಟಲಿಂಗವನ್ನು ಪೂಜಿ ಸಲೋಸುಗ ಅವುಗಳನ್ನು ಆರಿಸಿಕೊಂಡು ತಮ್ಮ ಉದಾತ್ತ ವಿಚಾರದ ಅನುಭವವನ್ನು ಜಗತ್ತಿಗೆ ಪ್ರದರ್ಶಿಸಿದರು. ವಿಶ್ವವು ತತ್ತಿ ಎಂದು ಅನೇ ಕರು ಹೇಳಿದ್ದಾರೆ. 'ಮನು ಋಷಿಯು—' ಸ್ವಯಂಭುವು ಮೊದಲು ನೀರನ್ನು ನಿರ್ಮಿಸಿ ಅದರಲ್ಲಿ ಬೀಜವನ್ನಿಟ್ಟನು. ಆ ಬೀಜದಿಂದ ಬಂಗಾರ ದಂಥ ತತ್ತಿಯಾಯಿತು. ಆ ತತ್ತಿಯಿಂದ ಸಕಲ ಜೀವರಾಶಿಯಾಯಿತೆಂದು ಅನ್ನುವನು.'

ಈ ವಿಶ್ವದ ಮಾಯೆಯು ಬೀಜದಿಂದ ಇಹಲೋಕವೆಂಬ ತತ್ತಿ ತಲೆ ದೋರಿತು. (ಸ್ಕ್ಯಾಂಡಿನೇವಿಯಾದ ಜಿನ್ನುಂಗಗಪ್)

ದೇವನು ಇಹಲೋಕವೆಂಬ ತತ್ತಿಯಿಂದ ಹೊರಹೊರಟಿದ್ದನೆಂದು ಗ್ರೀಕರು ಹೇಳುವರು.

ವಿಶ್ವವು ಗೋಲವಾಗಿದೆಯೆಂದು ಪ್ಲೇಟೋ ಹೇಳುವನು. ತತ್ತಿಯು ಜಗತ್ತಿನ ಕುರುಹು ಎಂದು ಪೊರ್‌ಫಿರಿ ಹೇಳುತ್ತಾನೆ. ಈರೊಸ್ ಫೇನ್ಸನು ಒಂದು ದಿವ್ಯ ತತ್ತಿಯಿಂದ ಉಗಮಗೊಂಡನೆಂದು ಹೇಳುವನು. (ಆರ್‌ಫಿಯುಸನ್)

ಸೆಬ್ ಎಂಬಾತನು ವಿಶ್ವವೆಂಬ ತತ್ತಿಯನ್ನಿಟ್ಟನೆನ್ನುವರು. ಬ್ರಹ್ಮಾಂಡ ಅಂದರೆ ಬ್ರಹ್ಮನಿಟ್ಟ ತತ್ತಿ ಎಂದು ವೇದಗಳುಂಟು.

ನಿರ್ಗುಣ ತತ್ವದಲ್ಲಿ ಇಹಲೋಕವೆಂಬ ತತ್ತಿಯು ರಾನಿಂದ ಇರಿಸಲ್ಪಟ್ಟಿತು. (ಇಜಿಪ್ತ ಗ್ರಂಥ)

ಈ ಪ್ರಕಾರ ಅನೇಕರು ಈ ವಿಶ್ವವನ್ನು ತತ್ತಿಗೆ ಹೋಲಿಸಿದ್ದಾರೆ. ಈ ಎಲ್ಲದರ ಸಾರರೂಪವಾದ ವಿಶ್ವದ ಆಕಾರವಾದ ತತ್ತಿಯಂತೆ ಲಿಂಗವನ್ನು ನಮ್ಮವರು ರಚಿಸಿ ಪೂಜಿಸುವದೆಂದರೆ ಅವರ ವಿಚಾರವನ್ನು ಅಳೆದು ನೋಡಿರಿ. ಎಂಥ ಅನುಭವಿಗಳು! ಎಂಥ ತತ್ವವೇತ್ತರು! ಇದನ್ನು ವಿಚಾರಿಸಿದರೆ ಸಕಲ ಜಗವೇ ಅಚ್ಚರಿ ಬರುವ ಸಂಗತಿಯಾಗಿರುವದು ಈ ಲಿಂಗ ತತ್ವವು! ಅದಕ್ಕಂತಲೇ ನಮ್ಮವರು "ಲಿಂಗ ಮಧ್ಯೆ ಜಗತ್ ಸರ್ವಂ" ಎಂದು ಹಾಡಿದ್ದು ಬಹು ಸಮಂಜಸವಾಗಿರುವದು.

> "ಬಯಲ ಮೂರ್ತಿಯ ಮಾಡಿ ಎನ್ನ ಕರಸ್ಥಲಕೆ ಕೊಟ್ಟನಯ್ಯ ಶ್ರೀ ಗುರುವು. ಬಯಲ ಮೂರ್ತಿಯ ಅಮೂರ್ತಿಯ ಮಾಡಿ ಎನ್ನ ಪ್ರಾಣದೊಳಗ ಇರಿಸಿದನಯ್ಯ ಶ್ರೀಗುರುವು. ಬಯಲ ಬಯಲನೇ ಬೆರಸಿ ಬಯಲೆಂದೆನಿಸಿ ಎನ್ನ ಭಾವಸ್ಥಲದಲ್ಲಿ ಇರಿಸಿದನಯ್ಯ ಶ್ರೀ ಗುರುವು. ಇದು ಕಾರಣ ಎನ್ನ ಕರಸ್ಥಲ ಮನಸ್ಥಲ ಭಾವಸ್ಥಲದಲ್ಲಿ ಧರಿಸಿ ನಾನು ಅಂಗ ಲಿಂಗ ಸಂಬಂಧಿಯಾದೆನಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ."

ಈ ಮಹಾಬಯಲು ಇಷ್ಟಲಿಂಗದ ರೂಪದಿಂದ ಶ್ರೀಗುರು ತನ್ನ ಕರಸ್ಥಲಕ್ಕೆ ಕೊಟ್ಟನೆಂದು ಲಿಂಗದ ವ್ಯಾಪ್ತಿ ವಿಸ್ತಾರ ಇವುಗಳ ಮಹಿಮೆಯನ್ನು ಇದರಲ್ಲಿ ಹೇಳಿದ್ದಾರೆ. ಬಯಲೇ ಹೀಗೆ ರೂಪುಗೊಂಡು ಸಕಲ ಲಿಂಗವಾಗಿದೆ ಎಂದು ಅಭಿಪ್ರಾಯ ಈ ಬಯಲು ನಿರಾಕಾರವಾಗಿ ಪ್ರಾಣ

ಲಿಂಗವು, ಬಯಲು ನಿರ್ಬಯಲಾಗಿ ಭಾವಲಿಂಗವು ಆದ ಬಗೆಯನ್ನು ಹೇಳಿ ಪರಾತ್ಪರ ಪರಶಿವನು ಮೊಟ್ಟಮೊದಲು ಬಯಲೇ ಬಯಲು ನಿರ್ಬಯಲಾಗಿ ವಾಙ್ಮನಕ್ಕೆ ಅಗೋಚರನಾಗಿದ್ದನೆಂದು ಪರಮಾತ್ಮಲಿಂಗದ ವರ್ಣನೆ ಇದಾಗಿದೆ.

ಲಿಂಗ ಶಬ್ದವು ಎಲ್ಲ ಬ್ರಹ್ಮಾಂಡಗಳನ್ನೂ ಎಲ್ಲ ಬಯಲ ನಿರ್ಬಯಲನ್ನೂ ಎಲ್ಲ ಲೋಕಗಳನ್ನೂ ಒಳಗೂ ಹೊರಗೂ ಮೇಗೂ ಕೆಳಗೂ, ಅಲ್ಲಿ ಇಲ್ಲ, ಸುತ್ತವೆಲ್ಲ, ಎತ್ತ ನೋಡಿದತ್ತೆಲ್ಲ ಎಲ್ಲಿ ಬೇಕಾದಲ್ಲಿ ವ್ಯಾಪಿಸಿ ನಿಂತಿರುವದು. ಅದಕ್ಕಂತೆ ಪುರಾಣಗಳಲ್ಲಿ ವಿಷ್ಣುವು ಲಿಂಗದ ಮುಕುಟವನ್ನೂ ಬ್ರಹ್ಮನು ಲಿಂಗದ ತಳವನ್ನೂ ಹುಡಿಕಿ ಹುಡಿಕಿ ಶೋಧಿಸಿದರೂ ಕಾಣಲಾರದೆ ತಿರುಗಿಬಂದು ತಮ್ಮ ಸೋಲನ್ನು ಒಪ್ಪಿಕೊಂಡರು. ಈ ಮಹಾಕಾರಣಲಿಂಗವು ಇದರ ಮೇಲಿಂದ ಎಂಥದಿರುವದೆಂದು ಮಾನವನಿಗೆ ತರ್ಕ ಮಾಡುವದು ಕೂಡ ಅಸಾಧ್ಯವೆಂದು ತಿಳಿಯುತ್ತದೆ. ಲಿಂಗದ ನೆಲೆಕಲೆಗಳನ್ನು ಅರಿಯುವದು ಬಹುಕಷ್ಟ ಅದಕ್ಕಾಗಿ ಸ್ಫುರಣಾತ್ಮಕ ಜ್ಞಾನದ ಗಟ್ಟಿಯೇ ಲಿಂಗ ಎಂದು ಹೇಳುವರು. ಅದಕ್ಕಾಗಿ ಚನ್ನಬಸವಣ್ಣನವರು—

> "ಆದಿಲಿಂಗ ಅನಾದಿ ಶರಣನೆಂಬುದು ತಪ್ಪದು, ಆದಿಗುರು ಅನಾದಿ ಶರಣನೆಂಬುದು ತಪ್ಪದು. ಗುರುವಿಂಗೆ ಶಿಷ್ಯಂಗೆ ಏನುದೂರ ಹೇಳಾ ದೇವಾ ! ಮುಳ್ಳುಗುತ್ತುವರೆ ತೆರೆಹಿಲ್ಲದ ಪರಿಪೂರ್ಣದ ಘನವ ಒಬ್ಬರಲ್ಲಿ ಒಂದು ಭಾವವುಂಟೇ ? ಎನ್ನೊಳಗೆ ತೊಳಗಿ ಬೆಳಗುವ ಜ್ಞಾನ ನಿಮ್ಮ ಹೃದಯ ಕಮಲದೊಳಗಣ ಅವ್ಯಕ್ತಲಿಂಗ, ನಿನ್ನೊಳಗೆ ತೊಳಗಿ ಬೆಳಗುವ ಜ್ಯೋತಿರ್ಲಿಂಗ, ಎನ್ನ ಸುಜ್ಞಾನಲಿಂಗ ಕಾಣಾ ಬಸವಣ್ಣಾ"

ಎಂದು ಸ್ಫುರಣಗೊಂಡ ಜ್ಞಾನವೇ ಲಿಂಗ, ಜ್ಯೋತಿರ್ಲಿಂಗ, ಅವ್ಯಕ್ತಲಿಂಗ. ಇದೇ ದೇವೋನ್ಮಾದ. ಅಖಂಡ ಲಿಂಗದ ಬೆಳಗಿನಲ್ಲಿ ಸೂರ್ಯಚಂದ್ರ ನಕ್ಷತ್ರಗಳು ಬೆಳಕು ಕಾಣುವವು. ಇದೇ ಜ್ಞಾನಜ್ಯೋತಿ ಎಂದು ಕರೆಯುವರು. ಪರಂಜೋತಿ ಎಂದು ಅನ್ನುವರು. ಈ ಲಿಂಗದ ಬೆಳಗು, ಮಾತು ಮನಂಗಳಿಗೆ ನಿಲುಕದು. ಇದು ನಿರುಪಾಧಿಕ ನಿರ್ಮಲ ಪರಂಜ್ಯೋತಿ ಎಂದು ಕೆಲವರು ಬಣ್ಣಿಸಿರುವರು. ಲಿಂಗವನ್ನು ಯಾರು ಹೇಗೆ ಹೊಗಳಿದರೂ ಅದು ಕಡಿಮೆಯೇ ಸರಿ. ಇದನ್ನು ಶರಣರು ಬಚ್ಚ ಬರಿಯ ಬೆಳಕು ಎಂದು ಕರೆದರು.

ಇದರ ಮೇಲಿಂದ ಲಿಂಗದ ರಹಸ್ಯವನ್ನು ಸಾಮಾನ್ಯವಾಗಿ ಅರಿಯು ರೆಂದು ಹೇಳಿದಂತೆ ಆಗುವದು. ಪಂಚಾಚಾರ್ಯರು ಐದು ಜ್ಯೋತಿರ್ಲಿಂಗ ಗಳಲ್ಲಿ ಉದ್ಭವಿಸಿದರು ಎಂದು ಹೇಳುವದರ ಅರ್ಥವೇನು? ಜ್ಞಾನವೇ ರೂಪುಗೊಂಡು ಬಂದವರು. ಅಥವಾ ಮಹಾಕಾರಣಲಿಂಗದಿಂದ ಕಾರಣ ಲಿಂಗಕ್ಕೆ, ಕಾರಣ ಲಿಂಗದಿಂದ ಸೂಕ್ಷ್ಮಲಿಂಗಕ್ಕೆ, ಸೂಕ್ಷ್ಮ ಲಿಂಗದಿಂದ ಸ್ಥೂಲ ಲಿಂಗಕ್ಕೆ ಬಂದು ಕಾರ್ಯಪ್ರವೃತ್ತರಾದ ಮಹಾ ಶರಣರೆಂದು ಅರ್ಥ ವಾಗುವದಿಲ್ಲವೇ? ಜಗತ್ತಿನ ಉದ್ಧಾರಕ್ಕೆ ಬಂದವರೆಲ್ಲ ಲಿಂಗೋದ್ಭವರೇ ಸರಿ. ಬಸವನೂ ಕೂಡ ಲಿಂಗೋದ್ಭವನಾಗುವದಿಲ್ಲವೇ? ಯಾಕಂದರೆ ಎಲ್ಲವೂ ಲಿಂಗವೆಂದ ಕಾಲಕ್ಕೆ ಲಿಂಗದಿಂದ ಬರದೆ ಎಲ್ಲಿಂದ ಬರಬೇಕು? ಪುಲ್ಲಿಂಗ ದಿಂದ ಸ್ತ್ರೀಲಿಂಗಕ್ಕೆ ಹೋಗಿ ಸ್ತ್ರೀಲಿಂಗದಿಂದ ಹೊರಗೆ ಬರುವವರೆಲ್ಲರೂ ಮಾನವರು. ಜ್ಞಾನವಾದರೇ ಅವರು ಲಿಂಗೋದ್ಭವರು.

————

# ವೀರಶೈವ ಸಾಂಪ್ರದಾಯಗಳು.

(ಲೇಖಕ:— ಸತ್ಯವಾದಿ)

—೦—

ವೀರಶೈವರಲ್ಲಿ ಚತುರ್ವಿಧ ಸಾಂಪ್ರದಾಯಗಳು ಕಾಲಕಾಲಕ್ಕೆ ಬಳಿಕೆಯುಲ್ಲಿ ಬಂದಂತೆ ಸಂಶೋಧನೆಗಳಿಂದ ಕಂಡುಬರುತ್ತದೆ. ಅವು ಯಾವವೆಂದರೆ—

(೧) ದ್ರಾವಿಡ ಸಾಂಪ್ರದಾಯ. (೨) ಆರಾಧ್ಯ ಸಾಂಪ್ರದಾಯ. (೩) ಶರಣ ಸಾಂಪ್ರದಾಯ. (೪) ಆಚಾರ್ಯ ಸಾಂಪ್ರದಾಯ.

## ೧. ದ್ರಾವಿಡ ಸಾಂಪ್ರದಾಯ.

ದ್ರಾವಿಡ ಸಾಂಪ್ರದಾಯವು ಅತಿ ಪ್ರಾಚೀನವಾದುದು. ಅದು ಮೊದಲು ಐಹೊಳ್ಳಿಯಲ್ಲಿ ಪ್ರಾದುರ್ಭವಿಸಿತು. ಅವರ ಮೂಲ ಭಾಷೆಯು ಕನ್ನಡ ಸಂಸ್ಕೃತದ ಸಂಪರ್ಕವು ಅದಕ್ಕಿರಲಿಲ್ಲ. ಆ ಕಾಲದ ವೀರಶೈವರಿಗೆ ಆದ್ಯರು ಪುರಾತನರು ಎಂಬ ಹೆಸರು ಅವರು. ಕನ್ನಡದಲ್ಲಿ ಅನೇಕ ವಚನಗಳನ್ನು ರಚಿಸಿದ್ದರು. ಅವು ಬಸವಣ್ಣನವರ ಕಾಲದ ವರೆಗೂ ಪ್ರಚಲಿತವಿದ್ದಂತೆ ತೋರುತ್ತದೆ. ಅಂತೆಯೇ ಬಸವಣ್ಣನವರು "ಆದ್ಯರ ವಚನ ಪರುಷ ಕಂಡಯ್ಯಾ" ಎಂದು ಹಾಡಿದ್ದಾರೆ. ವೇದಾಗಮ ಕಾಲಗಳಿಗಿಂತಲೂ ಅದು ಹಿಂದಿನದು. ಕೃತುಯುಗದ ಆರಂಭದಲ್ಲಿ ಎಷ್ಟೋ ಆರ್ಯ ಋಷಿಗಳು ವೀರಶೈವಮತವನ್ನಂಗೀಕರಿಸಿ ಶಿವಾಗಮಗಳ ಉತ್ತರಾರ್ಧದಲ್ಲಿ ಅದನ್ನು ಪ್ರತಿಪಾದಿಸಿದಂತೆ ತೋರುತ್ತದೆ. ಪುರಾತನರ ಕನ್ನಡ ವಚನಗಳು ನಮಗೆ ಉಪಲಬ್ಧವಿಲ್ಲದಿದ್ದರೂ ಅವುಗಳ ತಿರುಳನ್ನೇ ಸಂಸ್ಕೃತದಲ್ಲಿ ಹೇಳಿದ ಕೆಲವು ಆಗಮಗಳೂ ಶರಣರ ವಚನಗಳೂ ನಮಗೆ ದೊರೆಯುತ್ತವೆ.

ಆಗಮಗಳಿಂದ ನಮಗೆ ಕಂಡುಬರುವದೇನಂದರೆ ಪರಮೇಶ್ವರನಿಗೆ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನವೆಂಬೈದು ಮುಖಗಳಿದ್ದು ಮೊದಲಿನ ನಾಲ್ಕು ಮುಖಗಳಿಂದ ಬೇರೆ ಬೇರೆ ಶೈವ ಮತಗಳು ಉತ್ಪನ್ನವಾದವು. ಐದನೆಯ ಶ್ರೇಷ್ಠವಾದ ಮುಖದಿಂದ ವೀರಶೈವ

ಮತದ ಉತ್ಪತ್ತಿಯಾಯಿತು. "ಲಿಂಗಾಂಗಿಗಳ ಉತ್ಪತ್ತಿ ಈಶಾನ ಮುಖದಿಂದ ನೋಡಾ" ಎಂದು ಸಿದ್ಧರಾಮೇಶ್ವರನು ತನ್ನದೊಂದು ವಚನದಲ್ಲಿ ಅಪ್ಪಣೆ ಕೊಡಿಸಿದ್ದಾನೆ. ಸ್ವಾಯಂಭು ಆಗಮದಲ್ಲಿ ಹೀಗೆ ಹೇಳಿದೆ:—

"ಮನ್ಮೈವೇಶಾ ನ ಮುಖಾಜ್ಜಾತಃ ಪುರಾ ಪಂಚಮ ಸಂಜ್ಞಕಾತ್ ।
ತಸ್ಮಾತ್ ಪಂಚಾಸ್ಯಗಣಪಃ ಪಂಚವೇತಿ ಪ್ರಕೀರ್ತಿತಃ ॥"

ಸುಪ್ರಭೇದಾಗಮದಲ್ಲಿ ಹೀಗೆ ಹೇಳಿದೆ:—

"ಮಮೋರ್ಧ್ವ ಮುಖಸಂಜಾತಃ ಪಂಚವಕ್ತ್ರ ಗಣೇಶ್ವರಃ । ಅತಿವರ್ಣಾಶ್ರಮೋಪೇತೋ ವೀರಶೈವ ಮತಾಧಿಪಃ

ಮೇಲ್ಕಂಡ ಆಗಮ ಪ್ರಮಾಣಗಳಿಂದ ಪಂಚಮ ಎಂಬ ಹೆಸರಿನ ದ್ರಾವಿಡರು ವೀರಶೈವ ಮತದ ಮೂಲ ಪ್ರವರ್ತಕರೆಂದೂ ಅವರ ಮೂಲ ಪುರುಷನು ಪರಮೇಶ್ವರನ ಪಂಚಮ ಮುಖದಿಂದ ಹುಟ್ಟಿದ ಪಂಚ ವಕ್ತ್ರ ಗಣೇಶ್ವರನೆಂದೂ ಆತನ ವಂಶದವರೇ ಶುದ್ಧ ವೀರಶೈವರೆಂದೂ ತಿಳಿದು ಬರುತ್ತದೆ. ಅವರಿಗೆ ಅತಿವರ್ಣಾಶ್ರಮಿಗಳೆಂತಲೂ ಕರೆಯುತ್ತಿದ್ದರು.

ಐಹೊಳ್ಳಿಯ ಪಂಚವಕ್ತ್ರ ಗಣೇಶ್ವರನ ಮಕ್ಕಳಾದ ಮಖಾರಿ, ಕಾಲಾರಿ, ಕಾಮಾರಿ, ವೇದಾರಿ, ಪುರಾರಿ ಈ ಐವರಿಗೆ ಪರಶಿವನ ಅಪ್ಪಣೆಯ ಮೇರೆಗೆ ನಂದಿ, ಭೃಂಗಿ, ವೀರ, ವೃಷಭ, ಸ್ಕಂದ ಈ ಐವರು ಲಿಂಗಧಾರಣ ದೀಕ್ಷೆ ಮಾಡಿ ಕೈಲಾಸಕ್ಕೆ ಹೋದರೆಂದೂ, ದೀಕ್ಷಿತರಾದ ಆ ಐವರು ಗುರುಪಟ್ಟಾಧಿಕಾರಿಗಳಾಗಿ ಮುಂದೆ ತಮ್ಮ ವಂಶದ ಪುತ್ರರನ್ನು ಇಲ್ಲವೆ ಶಿಷ್ಯರನ್ನು ಪಟ್ಟಕ್ಕೆ ಕೂಡ್ರಿಸುತ್ತ ವೀರಶೈವ ಮತವನ್ನು ಹಬ್ಬಿಸಿದರೆಂದೂ ಪಂಚಾಸ್ಯ ಪುರಾಣದಿಂದ ತಿಳಿಯುತ್ತದೆ. ಇದಲ್ಲದೆ ಸ್ವಾಯಂಭು ಆಗಮದ ಪಟಲ ೮ ಮೂಲ ಪ್ರತಿಯಲ್ಲಿಯೂ ಕೂಡ ಈ ವಿಷಯವು ಪ್ರತಿಪಾದಿತವಾಗಿದೆ. ಹೇಗೆಂದರೆ:— "ನಂದ್ಯಾದಿ ಪಂಚಭಿರ್ಭೂಮೌ ದೀಕ್ಷಿತೈಃ ಪಂಚವೈರಪಿ, ವಂಶಸ್ತು ಪಂಚಮಾನಾಂತು ಗತೋ ವೃದ್ಧಿಂ ವರಾನನೇ ॥ ಭೂಮೌ ತದ್ವಂಶ ಜಾತಾನಾಂ ದೀಕ್ಷಾನುಗ್ರಹ ಕಾರಣಾತ್ । ನಿಧಾಯ ನಿಜಶಿಷ್ಯಾಂಶ್ಚ ಪುನಸ್ತೇ ಮಾಂಸಮಾಗತಾಃ ॥ ಸದಾಚಾರ ಸಂಗ್ರಹದಲ್ಲಿ ಈ ಪಂಚಮರಿಗೆ "ಕುಲಂ ಶಿವಕುಲಂ ಪ್ರೋಕ್ತಂ । ಗೋತ್ರಂ ನಂದೀಶ್ವರಾದಿಕಂ ॥ ಪ್ರವರಂ ವೀರಶೈವಶ್ಚ ಶಾಖಾತು ಪ್ರಮಥಾನ್ವಿತಾ ॥ ಎಂದು ಹೇಳಿದೆ. ಅಂದರೆ ಪಂಚಮರ ಕುಲವು ಶಿವಕುಲವು. ಗೋತ್ರವು ನಂದೀಶ್ವರಾದಿಕವು ಪ್ರವರವು ವೀರಶೈವವು. ಶಾಖೆಯು ಪ್ರಮಥ ವಂಶದಿಂದ ಬಂದುದು.

ಮೇಲ್ಕಂಡ ಪಂಚಮ ಅಥವಾ ದ್ರಾವಿಡ ವೀರಶೈವ ಸಾಂಪ್ರದಾಯವು ವೇದ-ಯಜ್ಞಯಾಗಾದಿಗಳ ವಿರುದ್ಧವಾದದ್ದು. ಅವರು ಯಜ್ಞದ ಚಿಹ್ನಗಳಾದ ಶಿಖಾಸೂತ್ರಗಳನ್ನು ಧರಿಸುತ್ತಿರಲಿಲ್ಲ. ಈ ಪಂಚಮರಲ್ಲಿಯೇ ಭಕ್ತವರ್ಗ, ಗುರುವರ್ಗ, ನಿರಾಭಾರಿ ವರ್ಗಗಳೆಂದು ಕ್ರಿಯಾಭೇದದಿಂದ ಮೂರು ವರ್ಗಗಳುದ್ಭವಿಸಿದವು. ಭಕ್ತರೆಂದರೆ ನಿತ್ಯಶುದ್ಧಕಾಯಕದಿಂದ ಗುರುಲಿಂಗ ಜಂಗಮರ ಸೇವೆ ಮಾಡುವಂಥವರು. ಗುರುಗಳೆಂದರೆ ಪಟ್ಟಾಧ್ಯಕ್ಷರು, ಚರಮೂರ್ತಿಗಳು, ಹಿರೇಮಠದವರು ಇತ್ಯಾದಿ ಪಂಚಮವಂಶ ಸಂಭೂತರು. ಇವರು ಲಿಂಗಧಾರಣ ದೀಕ್ಷಾ ಮೊದಲಾದ ಕಾರ್ಯಗಳನ್ನು ಮಾಡುತ್ತಿದ್ದರು. ಗುರುಪೀಠದವರು ಬ್ರಹ್ಮಚಾರಿಗಳಾಗಿರುತ್ತಿದ್ದರು. ಗುರುವರ್ಗದವರಿಗೆ ಆಗ ಸಿಂಹಾಸನಗಳಿರಲಿಲ್ಲ. ನಿರಾಭಾರಿಗಳೆಂದರೆ ಸಂಸಾರದ ಜಂಜಟದಿಂದ ದೂರಾಗಿ ಊರ ಹೊರಗೆ ಮಠಗಳನ್ನು ಮಾಡಿಕೊಂಡು ಲಿಂಗಾನುಸಂಧಾನ ಧರ್ಮೋಪದೇಶದಲ್ಲಿ ತತ್ಪರರಾಗಿರುತ್ತಿದ್ದರು. ಇವರೂ ಬ್ರಹ್ಮಚಾರಿಗಳು. ಇವರೆಲ್ಲರಿಗೂ ಐಹೊಳೆಯ ಪಂಚವಕ್ತ್ರ ಗಣೇಶ್ವರನ ಪಂಚಮವಂಶವೇ ಮೂಲವು. ಇದೇ ದ್ರಾವಿಡ ಸಾಂಪ್ರದಾಯವು.

ಈ ಪಂಚಮ ವಂಶದ ಗುರುಗಳು ಮುಂದೆ ತಮ್ಮ ಊಳಿಗಕ್ಕೆ ಅನುಕೂಲವಾಗಲೆಂದು ಭಿನ್ನ ಭಿನ್ನ ಜಾತಿಯ ಆಗಂತುಕರನ್ನು ತಮ್ಮ ಮಠದಲ್ಲಿ ತೆಗೆದುಕೊಂಡು ವೀರಶೈವ ಮತವನ್ನು ಬೆಳೆಸಿದರು. ಆದರೆ ಪಂಚಮರು ಆಗಂತುಕರೊಡನೆ ಊಟೋಪಚಾರವನ್ನಾಗಲಿ ಸಂಬಂಧವನ್ನಾಗಲಿ ಇಟ್ಟುಕೊಳ್ಳಲಿಲ್ಲ. ಆಗಂತುಕರಿಗೆ ಪಟ್ಟಾಧಿಕಾರವಾಗಲಿ ಮಠಾಧಿಕಾರವಾಗಲಿ ಇರಲಿಲ್ಲ. ಅವು ಪಂಚಮ ವಂಶದವರಿಗಷ್ಟೇ ಮೀಸಲಾಗಿದ್ದವು. ಈ ಬಗ್ಗೆ ಸದಾಚಾರ ಸಂಗ್ರಹದ ೧೧೯ ಪುಟದಲ್ಲಿ ಸ್ಪಷ್ಟವಾದ ಉಲ್ಲೇಖವಿದೆ. ಅದು ಹೇಗೆಂದರೆ:—

ವಂಶ್ಯ ಆಗಂತುಕಶ್ಚೇತಿ ದ್ವಿವಿಧಾ ಶಿಷ್ಯ ಉಚ್ಯತೇ ।
ಪೂರ್ವೋಕ್ತ ಪಂಚಮಾನಾಂತು ನಂದಿ ಭೃಂಗ್ಯಾದಯೋಮತಾಃ॥
ಗುರವಸ್ತು ತತಸ್ತೇಷಾಂ ದ್ವಾವಗೌ ಪರಿಕೀರ್ತಿತೌ ।
ಶೈವಶ್ಚ ಪುತ್ರವರ್ಗಶ್ಚ ಕ್ರಮಾದ್ಭೇದಃ ಪ್ರಕೀರ್ತಿತಃ ॥
ಲಿಂಗಿನಃ ಪಂಚಮಾಜ್ಞೇಯಾ ಇತರೇ ಲಿಂಗಧಾರಿಣಃ ।
ಅತಃ ಪಂಚಮಸಂಜಾತಾನ್ ಗೃಹೀತ್ವಾ ಶಿಷ್ಯ ಪುತ್ರಕಾನ್ ॥

ವೀರಮಾಹೇಶ್ವರೀಂ ದೀಕ್ಷಾಂ ಕೃತ್ವಾ ತೇ ಶಿಷ್ಯವರ್ಗಿಣಃ ।
ಪಟ್ಟಾಭಿಷೇಕಯುಕ್ತಾಂಶ್ಚ ಕುರ್ವಂತಿ ಚರವರ್ತಿನಃ ॥
ತ ಏವ ಪೂಜ್ಯಾ ವಂದ್ಯಾಶ್ಚ ನೇತರೇ ಲಿಂಗಧಾರಿಣಃ ।
ಅತೋ ಗುರುಪದ ಪ್ರಾಪ್ತಿ: ಶ್ರೇಷ್ಠಾನ್ ಪಂಚಮ ಸಂಜ್ಞಕಾನ್ ।
ವಿಹಾಯನಾಸ್ತಿ ನಾಸ್ತ್ಯೇವ ಮನ್ಯೇಷಾಂ ಲಿಂಗಧಾರಿಣಾಂ ॥

ಮೇಲಿನ ಶ್ಲೋಕಗಳಿಂದ ಪಂಚಮರು ಲಿಂಗಿಗಳು ಇತರ ಆಗಂತು ಕರು ಲಿಂಗಧಾರಿಗಳು. ಪಂಚಮರಲ್ಲಿ ಪುತ್ರವರ್ಗ ಶಿಷ್ಯವರ್ಗದ ಮಕ್ಕಳನ್ನು ದೀಕ್ಷೆಮಾಡಿ ಪೀಠಕ್ಕೆ ಅಧಿಕಾರಿಗಳನ್ನಾಗಿ ಮಾಡಬೇಕು. ಆ ಪಂಚಮರೇ ವಂದ್ಯರು; ಪೂಜ್ಯರು. ಅವರ ಹೊರತು ಉಳಿದ ಲಿಂಗಧಾರಿಗಳಿಗೆ ಗುರುಪದ ಪ್ರಾಪ್ತಿಯಿಲ್ಲ. ಇದರ ಮೇಲಿಂದ ಈಗಿನ ಗುರುಪೀಠಾಧಿಕಾರಿಗಳೆಲ್ಲ ಪಂಚಮರಿರಲೇಬೇಕು. ಇರದಿದ್ದರೆ ಅವರು ಗುರುಪೀಠಕ್ಕೆ ಅನರ್ಹರೆಂದು ಸಿದ್ಧವಾಗುತ್ತದೆ. ಈ ವರೆಗೆ ದ್ರಾವಿಡ ಸಾಂಪ್ರದಾಯವನ್ನು ಪ್ರತಿಪಾದಿಸಿದ್ದಾಯಿತು.

## ೨. ಆರಾಧ್ಯ ಸಾಂಪ್ರದಾಯ

ಇನ್ನು ಮೇಲೆ ಆರಾಧ್ಯ ಸಾಂಪ್ರದಾಯವನ್ನು ವಿವೇಚಿಸೋಣ. ದ್ರಾವಿಡ ಸಾಂಪ್ರದಾಯವು ಅನೇಕ ಶತಮಾನಗಳ ವರೆಗೆ ಅವ್ಯಾಹತವಾಗಿ ನಡೆದ ನಂತರ ತ್ರೈತಾಯುಗದಲ್ಲಿ ರೇಣುಕಾಚಾರ್ಯರು ಅಗಸ್ತ್ಯ ಋಷಿಗಳಿಗೆ ಲಿಂಗಧಾರಣ ಮಾಡಿ ವೀರಶೈವ ಮತೋಪದೇಶ ಮಾಡಿದರೆಂದು ಸಿದ್ಧಾಂತ ಶಿಖಾಮಣಿಯಲ್ಲಿ ಉಕ್ತವಾಗಿದೆ. ಈ ಮಾತು ಸಟಿಯೋ ದಿಟವೋ ಸಂಶೋಧನೆಯ ಪ್ರಶ್ನೆಯಾಗಿದೆ. ರೇಣುಕರು ಗುರುಗಳೇ ಆಗಿದ್ದರೆ ಅವರು ದ್ರಾವಿಡ ಸಾಂಪ್ರದಾಯದ ಪ್ರಕಾರ ಪಂಚಮರು ಇರಲೇಬೇಕಲ್ಲವೇ ? ಹಾಗಿರದಿದ್ದರೆ ಅವರಿಗೆ ಗುರುಪದ ಪ್ರಾಪ್ತಿಯಿಲ್ಲ. ಆದ್ದರಿಂದ ಅವರು ಪಂಚಮ ವಂಶೀಯರಿದ್ದರೋ ಇಲ್ಲವೋ ನಮಗೆ ತಿಳಿದಿಲ್ಲ. ಆಗಂತುಕರಾಗಿದ್ದರೆ ಅವರಿಗೆ ಲಿಂಗಧಾರಣ ಧರ್ಮೋಪದೇಶ ಮಾಡುವ ಅಧಿಕಾರವಿರಲಿಲ್ಲ. ಆದ್ದರಿಂದ ಅವರೂ ಉಳಿದ ಆರಾಧ್ಯರೂ ಪಂಚಮವಂಶ ಸಂಭೂತರಿರಲೇಬೇಕು. ಅವರು ಸ್ಥಾವರ ಲಿಂಗಗಳಿಂದ ಉತ್ಪನ್ನರಾದರೂ ಮೇಲ್ಕಂಡ ಶ್ಲೋಕಗಳ ಪ್ರಮಾಣದಿಂದ ಅವರಿಗೆ ಗುರುಪದ ಪ್ರಾಪ್ತಿಯಾಗಲಾರದು. ಆದರೆ ರೇಣುಕರಿಂದ ಮೊದಲ್ಗೊಂಡು ಮುಂದೆ ಪಂಚಮ ವಂಶದ ಕೆಲವು ಗುರುಪರಂಪರೆಯವರು

ದ್ರಾವಿಡ ಸಾಂಪ್ರದಾಯವನ್ನು ಬದಿಗೊತ್ತಿ ಆರ್ಯರ ವರ್ಣಾಶ್ರಮದ ಬಲಿಗೆ ಬಿದ್ದು ಅವರ ಅನುಕರಣ ಮಾಡಿದಂತೆ ತೋರುತ್ತದೆ. ಇವರು ವೇದೋಪನಿಷತ್ತುಗಳನ್ನು ಮನ್ನಿಸಹತ್ತಿದರು. ಪ್ರಾಕೃತ ಬ್ರಾಹ್ಮಣರಂತೆ ಶಿಖಾಸೂತ್ರಗಳನ್ನೂ ಧರಿಸಿದರು. ಯಜ್ಞಯಾಗಾದಿಗಳನ್ನೂ ಮಾಡಿದರು. ಉಪನಯನಾದಿ ಕ್ರಿಯೆಗಳನ್ನು ಆಚರಿಸಿದರು. ಸ್ಥಾವರ ಲಿಂಗ ಪೂಜೆಗೂ ಎಡೆಗೊಟ್ಟರು. ಆದಾಗ್ಯೂ ತಮ್ಮ ಶ್ರೇಷ್ಠತೆಯನ್ನು ಕಾಯ್ದುಕೊಳ್ಳಲಿಕ್ಕೆ ಅಪ್ರಾಕೃತ ಬ್ರಾಹ್ಮಣ, ಆರಾಧ್ಯ ಬ್ರಾಹ್ಮಣ ಎಂಬ ಹೆಸರನ್ನಿಟ್ಟುಕೊಂಡು ತಮ್ಮ ಪ್ರತ್ಯೇಕವಾದ ಜಾತಿಯನ್ನೇ ಕಲ್ಪಿಸಿಕೊಂಡು ಮೊದಲಿನ ದ್ರಾವಿಡ ಪಂಚಮರಿಗಿಂತ ಭಿನ್ನವಾದರು. ಆ ಕಾಲಕ್ಕೆ ಸಿಂಹಾಸನಗಳು ಸ್ಥಾಪಿತವಾದವೋ ಹೇಗೆಂಬುದು ತಿಳಿದಿಲ್ಲ. ಆದಾಗ್ಯೂ ಎಷ್ಟೋ ಗುರುಪರಂಪರೆಯವರು ಪೂರ್ವದ ದ್ರಾವಿಡ ಸಂಸ್ಕೃತಿಯನ್ನನುಸರಿಸಿಯೇ ನಡೆದರು. ಆರಾಧ್ಯ ಮತ್ತು ದ್ರಾವಿಡ ಪರಂಪರೆಗಳಲ್ಲಿ ದ್ರಾವಿಡ ಪರಂಪರೆಯೇ ಅಧಿಕ ಸಂಖ್ಯಾಕವಾಗಿ ಆರಾಧ್ಯ ಸಾಂಪ್ರದಾಯವು ಅಲ್ಪ ಸಂಖ್ಯಾಕವಾಗಿದ್ದಿತು. ಅಥವಾ ರೇಣುಕಾದಿಗಳ ಆಗಂತಕ ವರ್ಗವು ವೀರಶೈವ ಮತದ ಪೀಠಗಳನ್ನು ಆಕ್ರಮಿಸಿ ತಮ್ಮ ವಂಶೀಯರನ್ನು ಕ್ರಮೇಣ ಪಟ್ಟಾಧಿಕಾರಕ್ಕೆ ಬಿಡಹತ್ತಿದರೋ ಹೇಗೆಂಬದು ಸಂಶೋಧನೆಯ ಪ್ರಶ್ನೆಯಾಗಿದೆ. ಅದು ಏನೇ ಇರಲಿ ರೇಣುಕರಿಂದ ಪ್ರಾರಂಭವಾಗಿ ಬಸವಣ್ಣನವರ ವರೆಗೂ ಆರಾಧ್ಯ ಸಾಂಪ್ರದಾಯವು ಪ್ರಚಲಿತವಿದ್ದಂತೆ ತೋರುತ್ತದೆ.

## ೩. ಶರಣಸಾಂಪ್ರದಾಯ

ಅನಾದಿ ವೀರಶೈವ ಸಂಗ್ರಹಕಾರನು ಆರಾಧ್ಯ ಬ್ರಾಹ್ಮಣರನ್ನು ಆಗಂತುಕರೆಂದು ಭಾವಿಸಿಲ್ಲ. ಅವರು ಶುದ್ಧ ಪಂಚಮ ವಂಶೀಯರೇ ಎಂದು ಒಪ್ಪಿಕೊಂಡು ಬಸವಣ್ಣನವರು ಪಂಚಮ ಸಾಲೆಯವರೆಂದು ಹೇಳಿದ್ದಾನೆ. ಆದ್ದರಿಂದ ಆರಾಧ್ಯ ವೀರಶೈವರಲ್ಲಿ ಆರ್ಯ ಸಂಸ್ಕಾರಗಳು ಅನುಕೃತವಾಗಿದ್ದರೂ ಜಾತಿಯಿಂದ ಅವರು ದ್ರಾವಿಡ ಸಾಂಪ್ರದಾಯದ ಶುದ್ಧ ಪಂಚಮರೇ ಎಂದು ಹೇಳಿದ್ದಾನೆ. ಆದ್ದರಿಂದ ಬಸವಣ್ಣನು ಶುದ್ಧ ವೀರಶೈವನೆಂದಂತಾಯಿತು. ಬಸವಣ್ಣನವರು ವಯಸ್ಸಿಗೆ ಬಂದ ಮೇಲೆ ಅವರು ಆದ್ಯರ ಅಥವಾ ಪುರಾತನರ ಕನ್ನಡ ವಚನಗಳನ್ನೋದಿ ತಿಳಿದು ತನ್ನ ಮೂಲ ವಂಶದ ಪಂಚಮರಿಗೂ ಆರ್ಯರ ವರ್ಚಸ್ಸಿನಿಂದ ಮಧ್ಯಂತರದಲ್ಲಿ ಮಾರ್ಪಾಟು ಹೊಂದಿದ

ಆರಾಧ್ಯರಿಗೂ ಇರುವ ಭೇದವನ್ನು ಕಂಡು ಹಿಡಿದು ಹಿಂದಿನ ದ್ರಾವಿಡ ಸಾಂಪ್ರದಾಯವನ್ನೇ (ಸ್ವಲ್ಪ ಮಾರ್ಪಾಟುಗಳೊಂದಿಗೆ) ಪುನರುಜ್ಜೀವನಗೊಳಿಸಿದನು. ಆರಾಧ್ಯರ ಶಿಖಾಸೂತ್ರಗಳನ್ನು ಕಿತ್ತೊಗೆದನು. ಯಜ್ಞಯಾಗಾದಿಗಳನ್ನು ನಿಷೇಧಿಸಿದನು. ವೇದಾಗಮ ಶಾಸ್ತ್ರಗಳನ್ನು ಖಂಡಿಸಿ ವೀರಶೈವ ಮತವನ್ನು ಜಾತ್ಯತೀತವನ್ನಾಗಿ ಮಾಡಿ ವೀರಶೈವ ನಿರ್ಣಯ ಪ್ರಮಾವತಾರನೆಂದೂ ದ್ವಿತೀಯ ಶಂಭುವೆಂದೂ ಜಗತ್ತಿನಲ್ಲಿ ಮೆರೆದನು. ವಂಶ್ಯ ಆಗಂತುಕರಲ್ಲಿ ಭೇದವನ್ನೆಣಿಸುತ್ತಿದ್ದ ಆಗಮಗಳಿಗೆ ನಿಗಳವನ್ನಿಕ್ಕಿದನು. ಭಿನ್ನ ಭಿನ್ನ ಜಾತಿಯವರಾದ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ ಪಂಡಿತರೆಂಬ ಚತುರಾಚಾರ್ಯರಿಗೆ ಲಿಂಗ ಧಾರಣ ದೀಕ್ಷೆ ಮಾಡಿಸಿ ಅವರಿಗೆ ತಾನು ಮೂಲ ಗುರುವಾಗಿ ಅವರಿಗೂ ತಾನು ಗುರುತ್ವವನ್ನು ಕಲ್ಪಿಸಿಕೊಟ್ಟನು. ಅವಿವಾಹಿತರೇ ಗುರುಪೀಠಾಧಿಕಾರಿಗಳಾಗಬೇಕೆಂಬ ಪೂರ್ವ ಸಾಂಪ್ರದಾಯದ ಕಟ್ಟಳೆಯನ್ನು ಕಿತ್ತು ಹಾಕಿದನು. ತಾನು ಪಂಚವಣ್ಣಿಗ (ಪಂಚಮ ಬಣಜಿಗ) ನಾದ್ದರಿಂದ ಪೂರ್ವಸಾಂಪ್ರದಾಯದ ಪ್ರಕಾರ ಉಳಿದವರಿಗೆ ಗುರುವಾದನು. ಮಧ್ಯ ಕಲಶವು ಶ್ರೀಗುರು ಬಸವಾರಾಧ್ಯನದು. ಉಳಿದ ನಾಲ್ಕು ದಿಕ್ಕಿನ ಕಲಶಗಳು ಚತುರಾಚಾರ್ಯರವು. ಹೀಗೆ ಸಮಾಜ ದೀಕ್ಷೆ; ವಿವಾಹ ಪ್ರಸಂಗಗಳಲ್ಲಿ ಕಲಶಗಳನ್ನು ಹೂಡುವ ಪರಿಪಾಠವನ್ನು ಸಮಾಜದಲ್ಲಿ ಪ್ರಚಲಿತವಾಗುವಂತೆ ಮಾಡಿದನು. ಆರಾಧ್ಯ ಗುರುಗಳ ಯಜ್ಞ ಚಿಹ್ನೆಗಳಾದ ಶಿಖಾಸೂತ್ರಗಳೂ ಯಜ್ಞಕರ್ಮಗಳೂ ಉಪನಯನಾದಿ ಕಾರ್ಯಗಳೂ ಕಣ್ಮರೆಯಾದವು. ಬಸವಣ್ಣನು ಪೂರ್ವದ ಪಂಚಮ ವಂಶದ ಶಿಷ್ಯಪುತ್ರರೇ ಪಟ್ಟಾಧಿಕಾರಿಗಳಾಗಬೇಕೆಂಬ ಕಟ್ಟಳೆಯನ್ನು ಈ ರೀತಿಯಾಗಿ ಮುರಿದು ಬಿಟ್ಟನು. ವಂಶೀಯರೇ ಇರಲಿ ಆಗಂತುಕರೇ ಇರಲಿ ಪೂಜ್ಯರೂ ಯೋಗ್ಯರೂ ಆದವರಿಗೆ ಆ ಪಟ್ಟಗಳೂ ಸಲ್ಲಬೇಕೆಂಬ ನಿಯಮವನ್ನು ಪ್ರಚಾರದಲ್ಲಿ ತಂದನು. ಈ ಪ್ರಕಾರ ಶರಣ ಸಾಂಪ್ರದಾಯವು ಕರ್ನಾಟಕದಲ್ಲಿ ವಿಶೇಷವಾಗಿ ಬೆಳೆಯಹತ್ತಿತು. ಆರಾಧ್ಯರ ಸದ್ದು ಇಲ್ಲಿ ಅಡಗಿ ಕೆಲಮಟ್ಟಿಗೆ ಆಂಧ್ರ ಸೀಮೆಯಲ್ಲಿ ಸೇರಿಕೊಂಡಿತು. ಆದರೆ ಪೂರ್ವೋಕ್ತ ಪಂಚಮ ಸಾಂಪ್ರದಾಯವು ಅವ್ಯಾಹತವಾಗಿ ಹಾಗೇ ಬಳಕೆಯಲ್ಲಿ ನಡೆಯಿತು.

ಆಗಿನ ಕಾಲದ ಸಮಾಜವು ತಮ್ಮ ಪೂರ್ವ ಪಂಚಮ ವಂಶೀಯನಾದ ಬಸವಣ್ಣನೊಬ್ಬನ ಗುರುತ್ವಕ್ಕೆ ಮಾತ್ರ ಮನ್ನಣೆಯಿತ್ತಿತೇ ಹೊರತು

ಉಳಿದ ಆಗಂತುಕ ಚತುರಾಚಾರ್ಯರ ಗುರುತ್ವವನ್ನೊಪ್ಪಲಿಲ್ಲ. ಕಾಲವಿಸ್ಮರಣದಿಂದ ಅವರಿಗೆ ಗುರುತ್ವವು ಪ್ರಾಪ್ತವಾಗಲು ೨-೩ ಶತಮಾನಗಳುರುಳಿದವು. ಆಗಮಾತ್ರ ಸಿಂಹಾಸನುಗಳುದ್ಭವಿಸಿದವು. ಅದೇ ಮೇರೆಗೆ ಬಸವಣ್ಣನು ಆಗಂತುಕನಾದ ಪ್ರಭುವನ್ನು ಗುಣೈಕ ಪಕ್ಷಪಾತದಿಂದ ಜಂಗಮಪೀಠಕ್ಕೇರಿಸಿ ಉಳಿದ ಪೂರ್ವಸಾಂಪ್ರದಾಯದ ಜಂಗಮರನ್ನು ಕಡೆಗಣಿಸಿದ್ದರಿಂದ ಸಾಂಪ್ರದಾಯದ ಜಂಗಮರು ಉರಿದೆದ್ದು ಸಿಟ್ಟಿಗೊಂಡು ಹೋದರು. ಆದ್ದರಿಂದ ಅವರನ್ನು ಸಮಾಧಾನಗೊಳಿಸಿ ತಿರುಗಿ ತನ್ನರಮನೆಗೆ ಕರೆದುಕೊಂಡು ಬರಬೇಕಾದರೆ ಬಸವಣ್ಣನವರಿಗೆ ಸಾಕುಬೇಕಾಯಿತು. ಇದರಿಂದ ಆ ಕಾಲಕ್ಕೆ ಪ್ರಭುವಿನ ಜಂಗಮತ್ವವನ್ನೂ ಕೂಡ ಸಾಂಪ್ರದಾಯದ ಭಕ್ತಮಾಹೇಶ್ವರರು ಒಪ್ಪಲಿಲ್ಲೆಂದು ಸಿದ್ಧವಾಗುತ್ತದೆ. ಮುಂದೆ ವಿರಕ್ತರಿಗೆ ೧೫ನೇ ಶತಮಾನದಲ್ಲಿ ಪ್ರಾಧಾನ್ಯವುಂಟಾಯಿತು. ಬರಬರುತ್ತ ತಮ್ಮ ಗುರುತ್ವ ಜಂಗಮತ್ವವನ್ನು ಕಾಪಾಡಿಕೊಳ್ಳಲು ಆಚಾರ್ಯರೂ ವಿರಕ್ತರೂ ಕೂಡಿ ಬಸವನ ಗುರುತ್ವವನ್ನೇ ನಷ್ಟಪಡಿಸಿ ಭಕ್ತನನ್ನಾಗಿ ಮಾಡಿಬಿಟ್ಟರು.

## ೪. ಆಚಾರ್ಯ ಸಾಂಪ್ರದಾಯ.

ಮುಂದೆ ಕಾಲಾಂತರದಿಂದ ಬಸವನ ಕಾಲದಲ್ಲಿ ಪರಿತ್ಯಕ್ತವಾದ ಆರಾಧ್ಯವರ್ಗವು ವೀರಶೈವ ಧರ್ಮದಲ್ಲಿ ಪುನಃ ಕೈಹಾಕಿ ೧೮ನೆಯ ಶತಮಾನದಲ್ಲಿ ಬಸವಣ್ಣನ ಗುರುತ್ವವನ್ನೇ ತಳ್ಳಿಬಿಟ್ಟು ಕಾಶೀಪೀಠದ ವಿಶ್ವಾರಾಧ್ಯನೆಂಬ ಶೈವಬ್ರಾಹ್ಮಣನಿಗೆ ವೀರಶೈವ ದೀಕ್ಷೆಕೊಟ್ಟು ಬಸವಣ್ಣನ ಪಂಚವಣ್ಣಿಗೆವೆಂಬ ಗೋತ್ರವನ್ನು ಕಿತ್ತು ಅವನಿಗೆ ಕೊಟ್ಟು ಬಸವನ ಬದಲು ಅವನನ್ನೇ ತಮ್ಮ ಮೂಲ ಗುರುವನ್ನಾಗಿ ಮಾಡಿಕೊಂಡು ಪಂಚಸಿಂಹಾಸನಗಳನ್ನೇರ್ಪಡಿಸಿಕೊಂಡು ತಮ್ಮ ಸೂತ್ರಗೋತ್ರಗಳನ್ನು ಕಲ್ಪಿಸಿ ಆಗಮಗಳಲ್ಲಿಯೂ ಸಹ ೧೨ನೆಯ ಶತಮಾನದ ಆಚಾರ್ಯರ ಹೆಸರುಗಳನ್ನು ಪ್ರಕ್ಷಿಪ್ತಗೊಳಿಸಿ ತಮ್ಮದೊಂದು ಪಂಚಾಚಾರ್ಯರ ಸಾಂಪ್ರದಾಯವನ್ನು ಬಳಕೆಯಲ್ಲಿ ತಂದರು. ಈ ವಿಷಯುಗಳು ಅನಾದಿ ವೀರಶೈವ ಸಂಗ್ರಹವೆಂಬ ಗ್ರಂಥದ ಪ್ರಸ್ತಾವನೆಯನ್ನು ನೋಡಿದವರಿಗೆ ಮನವರಿಕೆಯಾಗದಿರದು. ಈ ಪಂಚಾಚಾರ್ಯರು ಪುನಃ ಶಿಖಾಸೂತ್ರಗಳನ್ನು ಧರಿಸಹತ್ತಿದರು. ವೇದಾಗಮಶಾಸ್ತ್ರಗಳನ್ನು ಮನ್ನಿಸಹತ್ತಿದರು. ಸ್ಥಾವರ ಲಿಂಗಗಳನ್ನು ಪೂಜಿಸಲಾರಂಭಿಸಿದರು. ಉಪನಯನಾದಿ ಕ್ರಿಯೆಗಳನ್ನು ಪ್ರಚಾರದಲ್ಲಿ ತಂದರು.

ಆದ್ದರಿಂದ ದ್ರಾವಿಡ ಸಾಂಪ್ರದಾಯದಲ್ಲಿ ಪುನಃ ಆರ್ಯ ಸಂಸ್ಕೃತಿಯು ಪ್ರವೇಶ ವಾದದ್ದು ಕಂಡುಬರುತ್ತಿದೆ. ಆದರೆ ಶರಣ ಸಾಂಪ್ರದಾಯದ ಒತ್ತಡವು ಅಧಿಕವಾದ್ದರಿಂದ ಎಷ್ಟೋ ಪಂಚಾಚಾರ್ಯರೂ, ಪಟ್ಟಾಧಿಕಾರಿಗಳೂ ಶಿಖಾ ಸೂತ್ರಗಳನ್ನು ಧರಿಸಲಿಲ್ಲ. ಪೂರ್ವೋಕ್ತ ಪಂಚಮ ವಂಶದ ಸಾಂಪ್ರ ದಾಯವು ಹಾಗೆಯೇ ನಡೆಯುತ್ತ ಬಂದು ಇನ್ನೂ ಗುರುಪೀಠ–ಜಂಗಮ ಪೀಠಗಳಿಗೆ ಪಂಚಮರನ್ನು ಅಧಿಕಾರಿಗಳನ್ನಾಗಿ ಮಾಡುವ ರೂಢಿಯುಂಟು. ಈ ರೀತಿಯಾಗಿ ವೀರಶೈವ ಸಾಂಪ್ರದಾಯವು ಕೃತಯುಗದಿಂದ ಪ್ರಾರಂಭ ವಾಗಿ ಕಲಿಯುಗದ ವರೆಗೂ ಮಾರ್ಪಾಟು ಹೊಂದುತ್ತ ಬಂದಿದೆಯೆಂದು ರೂಢಾಚಾರಗಳಿಂದ ಕಂಡುಬರುತ್ತದೆ.

ಮೇಲ್ಕಂಡ ನಾಲ್ಕು ಸಾಂಪ್ರದಾಯಗಳು ಒಂದರಲ್ಲೊಂದು ಬೆರೆತು ಹೋದದ್ದು ಈಗಿನ ಸಮಾಜದಲ್ಲಿ ಕಂಡುಬರುತ್ತಿದೆ. ಆದಾಗ್ಯೂ ಅದರಲ್ಲಿ ಪ್ರತ್ಯೇಕವಾದ ದ್ರಾವಿಡ ಸಾಂಪ್ರದಾಯವೂ ಇದೆ. ಆರಾಧ್ಯ ಸಾಂಪ್ರದಾ ಯವೂ ಅತ್ಯಲ್ಪ ಪ್ರಮಾಣದಲ್ಲಿದೆ. ಶರಣಸಾಂಪ್ರದಾಯವು ಮಾತ್ರ ಬಲ ವತ್ತರವಾಗಿದೆ. ಆಚಾರ್ಯ ಸಾಂಪ್ರದಾಯವು ಪೂರ್ವ ಪಂಚಮ ವಂಶೀ ಯರ ಮಠಗಳನ್ನೆಲ್ಲ ಆಕ್ರಮಿಸಿಕೊಂಡು ಅಯ್ಯನವರೆಂಬ ಬೇರೊಂದು ವರ್ಗವನ್ನು ಕಲ್ಪಿಸಿಕೊಂಡು ಗೋತ್ರ ಸೂತ್ರಗಳಿಂದ ಅವರನ್ನು ಬಂಧಿತರ ನ್ನಾಗಿ ಮಾಡಿ ಶರಣಸಾಂಪ್ರದಾಯದ ವಿರುದ್ಧ ತಲೆಯೆತ್ತಿನಿಂತಿದೆ. ಆದ ಕಾರಣ ಸಮಾಜದಲ್ಲಿ ಗೊಂದಲವೆದ್ದು ಜಾತ್ಯತೀತವಾದ ಸಮಾಜದಲ್ಲಿ ಗುಣಕ್ರಿಯೆಗಳಿಗೆ ಪ್ರಾಧಾನ್ಯವಿರಬೇಕೇ ವಿನಾ ಜಾತಿಗಲ್ಲವೆಂಬ ಮಾತನ್ನು ಮುಂದುವರಿಸಹತ್ತಿದೆ. ಆದ್ದರಿಂದ ಒಟ್ಟಿನ ಮೇಲೆ ಈ ಮನ್ವಂತರದಲ್ಲಿ ಶರಣ ಸಾಂಪ್ರದಾಯವೇ ಜಯಶಾಲಿಯಾಗುವದೆಂಬವರಲ್ಲಿ ಸಂದೇಹವಿಲ್ಲ. ಆ ಶುಭ ದಿನಗಳು ಶೀಘ್ರವಾಗಿ ಬರಲೆಂದು ಹಾರೈಸುತ್ತೇವೆ.

————

# ಅಕ್ಕನ ಬಳಗಗಳ ಸಂಘಟನೆ ಮತ್ತು ಕಾರ್ಯಕ್ಷೇತ್ರ.

[ ಬರೆದವರುಃ– ಅನ್ನದಾನೀಶ್ವರ ವಿರಕ್ತಮಠ, ಬಿ. ಎ. ಆನರ್ಸ, ಬಿ. ಟಿ. ]

ಕಲ್ಯಾಣದ ಅನುಭವ ಮಂಟಪದಲ್ಲಿ ಶೂನ್ಯಸಿಂಹಾಸನಾಧ್ಯಕ್ಷರಾದ ಜಗದ್ಗುರು ಅಲ್ಲಮಪ್ರಭುದೇವರ ಹಿರಿಯತನದಲ್ಲಿ ಎಲ್ಲ ಶರಣ ಶರಣೆಯರು ಜಗದ್ಗುರು ಪದವಿಯನ್ನು ಉಡುತಡಿಯ ನಮ್ಮ ಮಹಾದೇವಿಯಕ್ಕನಿಗೆ ಆತ್ಮಸಂತೋಷದಿಂದ ಅರ್ಪಿಸಿದರು. ಅಕ್ಕನ ಅದ್ವಿತೀಯ ವೈರಾಗ್ಯ, ಅಸಾಧಾರಣವಾದ ಕಷ್ಟ ಸಹಿಷ್ಣುತೆ, ಅನುಪಮ ತ್ಯಾಗ, ಅಸಾಮಾನ್ಯ ಜ್ಞಾನ, ಲೋಕೋತ್ತರವಾದ ವಚನಗಳು, ಒಟ್ಟಾರೆ ಅಕ್ಕನ ಅಮರ ಜೀವನ ಮತ್ತು ಅಮರ ವಚನಗಳು ಜನಮನದ ಮೇಲೆ ಅಚ್ಚಳಿಯದ ಪರಿಣಾಮ ಮಾಡಿದವು. ಅಕ್ಕನ ಹೂವಿನಂತೆ ಪೂರಾ ಅರಳಿದ ವ್ಯಕ್ತಿತ್ವದ ಪ್ರಭಾವವು ಭೂತಕಾಲದಲ್ಲಿಯಂತೆ ಆಧುನಿಕ ಕಾಲದಲ್ಲಿಯೂ ಜನಾಂಗದ ಜೀವನಕ್ಕೆ ದಾರಿದೀಪವಾಗಿ ಪರಿಣಮಿಸಿದೆ. ಇಷ್ಟೇ ಅಲ್ಲ. ಅಕ್ಕನ ದೈವೀ ಸಂಪತ್ತಿನಿಂದ ತುಂಬಿದ ಅಧ್ಯಾತ್ಮಸಾಧನವೂ, ವಿಶ್ವಧರ್ಮದ ರಹಸ್ಯವೂ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ರಂಗಗಳಲ್ಲಿಯ ದ್ವೇಷವನ್ನು ಕಡಿಮೆ ಮಾಡಿ ಶಾಂತಿಯನ್ನು ಸ್ಥಾಪಿಸಬಲ್ಲವು. ಜಗತ್ತಿನ ಉಜ್ವಲ ಭವಿತವ್ಯವನ್ನು ರೂಪಿಸಲು ಸಮರ್ಥವಾಗಿವೆ.

ಜಗತ್ತಿಗೆ ಮಾರ್ಗದರ್ಶಕವಾದ ಅಕ್ಕನ ಚರಿತ್ರೆ ಮತ್ತು ವಚನಗಳನ್ನು ವಚನಸಾಹಿತ್ಯ ಪಿತಾಮಹ ಡಾಕ್ಟರ ಹಳಕಟ್ಟಿಯವರು ಬೆಳಕಿಗೆ ತಂದರು. ಧರ್ಮ ಮತ್ತು ರಾಷ್ಟ್ರೀಯತೆಗಳನ್ನು ಸಮನ್ವಯಗೊಳಿಸಿಕೊಂಡಿದ್ದ ಕರ್ನಾಟಕ ಗಾಂಧಿ ಎಂದು ಹೆಸರಾಂತ ಹರ್ಡೇಕರ ಮಂಜಪ್ಪನವರು ಅಕ್ಕನ ಹುಣ್ಣಿಮೆಯನ್ನೂ ಜಯಂತಿಯನ್ನೂ ಕನ್ನಡನಾಡಿನಲ್ಲಿ ಶರಣಸಂದೇಶದ ಮೂಲಕ ಪ್ರಾರಂಭಿಸಿದರು. ಅಕ್ಕನ ಬಳಗ ಎಂಬ ಹೆಸರಿನಿಂದ ಅಲ್ಲಲ್ಲಿ ಸಂಘಗಳು ಜನ್ಮತಾಳಿದವು. ಕನ್ನಡ ನಾಡಿನ ಹೆಂಗಳೆಯರಲ್ಲಿ ಜಾಗೃತಿಯಾಯಿತು.

**ಕರ್ನಾಟಕದಲ್ಲಿ ಅಕ್ಕನ ಬಳಗಗಳುಃ—** ನಮ್ಮ ಚೆಲುವ ಕನ್ನಡ ನಾಡಿನಲ್ಲಿ ಅಕ್ಕನ ಬಳಗಗಳು ಅನೇಕ ಕಡೆಗೆ ಸ್ಥಾಪಿಸಲ್ಪಟ್ಟಿವೆ. ಹುಬ್ಬಳ್ಳಿ,

ಗದಗ, ಬಾಗಲಕೋಟೆ, ಸೊಲ್ಲಾಪುರ, ಚಿಕ್ಕೋಡಿ, ರಾಣೆಬೆನ್ನೂರ, ದಾವಣಗೆರೆ, ಬೆಂಗಳೂರ, ರಾಮದುರ್ಗ, ಬೆಳಗಾವಿ ಮುಂತಾದ ಅನೇಕ ಸ್ಥಳಗಳಲ್ಲಿ ಅಕ್ಕನ ಬಳಗಗಳು ಕಂಗೊಳಿಸುತ್ತವೆ. ಗದಗ, ಬಾಗಲಕೋಟೆ, ಹುಬ್ಬಳ್ಳಿ ಮುಂತಾದ ಕಡೆಗೆ ಅಕ್ಕನ ಬಳಗಗಳಿಗೆ ಸ್ವತಂತ್ರ ಕಟ್ಟಡಗಳೂ ಇವೆ. ತಮಗೆ ತಿಳಿದ ರೀತಿಯಲ್ಲಿ ಈ ಬಳಗಗಳು ಕಾರ್ಯವನ್ನೂ ಮಾಡುತ್ತಿವೆ.

**ಕಾರ್ಯರಂಗ:—** ಅಕ್ಕನ ಬಳಗಗಳ ಕಾರ್ಯರಂಗವು ಇಲ್ಲಿಯ ವರೆಗೆ ವಿಸ್ತಾರ ಹೊಂದಿಲ್ಲ. ಕೆಲವು ಬಳಗಗಳು ಶ್ರಾವಣ ಮಾಸದಲ್ಲಿ ಪುರಾಣ ಹಚ್ಚುತ್ತವೆ. ಶ್ರಾವಣಮಾಸದಲ್ಲಿ ಕೆಲವು ಕೀರ್ತನ, ಪ್ರವಚನಗಳನ್ನು ಮಾಡಿಸುತ್ತವೆ. ಕೆಲವು ಕಡೆಗೆ ಹಾಡುಗಳನ್ನು ಹೇಳಿ ಆರುತಿ ಮಾಡುತ್ತಾರೆ. ಬಾಲಿಕೆಯರಿಂದ ಅಕ್ಕನ ವಚನಗಳನ್ನು ಹೇಳಿಸುತ್ತಾರೆ. ವರ್ಷಕ್ಕೊಮ್ಮೆ ಅಕ್ಕನ ಜಯಂತಿಯನ್ನು ಮಾಡುತ್ತಾರೆ. ಆದರೆ ಸುಸಂಘಟಿತವಾದ, ನಿಶ್ಚಿತವಾದ, ವ್ಯಾಪಕವಾದ ಕಾರ್ಯಕ್ರಮವು ಅಕ್ಕನ ಬಳಗಗಳ ಮುಂದೆ ಇಲ್ಲದಿರುವದರಿಂದಲೇ ನಮ್ಮ ಬಳಗಗಳು ತಮಗೆ ಹೊಳೆದಂತೆ ಸಾಗಿವೆಯೆಂದು ಹೇಳಬಹುದು. ಈಗ ಅಕ್ಕನ ಬಳಗಗಳಿಗೆ ಸರಿಯಾದ ಮಾರ್ಗದರ್ಶನವನ್ನು ಮಾಡುವದು ಅಗತ್ಯವಾಗಿದೆ. ಒಂದು ವಿಶಾಲವಾದ ಕಾರ್ಯಕ್ರಮವನ್ನು ಇಡುವದು ಅವಶ್ಯವಾಗಿದೆ.

**ಕಾರ್ಯಕ್ರಮ:—** ಎಲ್ಲಕ್ಕೂ ಮೊದಲು ಅಕ್ಕನ ಬಳಗಗಳ ಸಂಘಟನೆ ಮಾಡಬೇಕು. ಕರ್ನಾಟಕದಲ್ಲಿ ಮತ್ತು ಹೊರಗೆ ಎಷ್ಟು ಅಕ್ಕನ ಬಳಗಗಳವೆಯೆಂಬುದನ್ನು ನಿಶ್ಚಿತಪಡಿಸಬೇಕು. ಸ್ವತಂತ್ರ ಕಟ್ಟಡಗಳಿದ್ದ ಅಕ್ಕನ ಬಳಗಗಳ ಸಂಖ್ಯೆಯನ್ನು ನಿರ್ದಿಷ್ಟಪಡಿಸಬೇಕು. ವಾರ್ಷಿಕ ವರದಿಗಳು ಪ್ರಕಟವಾಗಿದ್ದರೆ ಅವುಗಳನ್ನು ಕಲೆಹಾಕಬೇಕು. ವರದಿಯಲ್ಲಿಯ ಕಾರ್ಯ ಮತ್ತು ಆರ್ಥಿಕ ಪರಿಸ್ಥಿತಿಯನ್ನು ಅವಲೋಕಿಸಬೇಕು. ಆರ್ಥಿಕ ಪರಿಸ್ಥಿತಿಯು ಚನ್ನಾಗಿದ್ದ ಬಳಗಗಳನ್ನು ಗುರುತಿಸಬೇಕು. ಲಕ್ಷದಲ್ಲಿಡಬೇಕು. ಯೋಗ್ಯವಾದ ಒಂದು ಮಧ್ಯ ಸ್ಥಳದಲ್ಲಿ ಅಕ್ಕನ ಬಳಗಗಳ ಪ್ರಾತಿನಿಧಿಕವಾದ ಪರಿಷತ್ತನ್ನು ಕರೆಯಬೇಕು. ಪರಿಷತ್ತಿಗೆ ಪ್ರತಿಯೊಂದು ಬಳಗದಿಂದ ಇಬ್ಬರು ಪ್ರತಿನಿಧಿಗಳು ಬರುವಂತೆ ಏರ್ಪಾಡಾಗಬೇಕು. ಪರಿಷತ್ತಿನಲ್ಲಿ ಅಕ್ಕನಬಳಗಗಳ ಸಂಯುಕ್ತ ಸಂಘ ಅಥವಾ ಕೇಂದ್ರ ಅಕ್ಕನ ಬಳಗವನ್ನು ಸ್ಥಾಪಿಸಬೇಕು.

ಕೇಂದ್ರ ಅಕ್ಕನ ಬಳಗದ ಸಂಘಟನೆ, ನಿಯಮ ಮತ್ತು ಕಾರ್ಯಕ್ರಮವನ್ನು ಪ್ರತಿ ಅಕ್ಕನ ಬಳಗಕ್ಕೂ ಅನ್ವಯಿಸಬೇಕು. ಕೇಂದ್ರದ ಮುಖ್ಯ ಕಚೇರಿಯು ಮಧ್ಯ ಸ್ಥಳದಲ್ಲಿರಬೇಕು. ಕೇಂದ್ರದಿಂದ ಹೆಣ್ಣುಮಕ್ಕಳಿಗೆ ಮೀಸಲಾಗಿದ್ದ ಒಂದು ವಾರಪತ್ರಿಕೆ ಮತ್ತು ಮಾಸಪತ್ರಿಕೆಯನ್ನು ಹೊರಡಿಸಬೇಕು. ಸಂಘಟಕರನ್ನೂ ಪ್ರಚಾರಕರನ್ನೂ ನಿಯಮಿಸಬೇಕು. ಹೆಣ್ಣುಮಕ್ಕಳಿಗಾಗಿ ಈಗ ಅಲ್ಲಲ್ಲಿ ಹೊರಡುವ ಪತ್ರಿಕೆಗಳಿಗೆ ಪ್ರೋತ್ಸಾಹ ಕೊಡುತ್ತ ಸರಿಯಾದ ಮಾರ್ಗದರ್ಶನ ಮಾಡಬೇಕು.

**ಕೇಂದ್ರವು ಲಕ್ಷಿಸತಕ್ಕ ಸಂಗತಿಗಳು:—** ಕೇಂದ್ರ ಅಕ್ಕನ ಬಳಗವು ಎಲ್ಲ ಅಕ್ಕನ ಬಳಗಗಳಿಗೆ ಯೋಗ್ಯ, ಸುಸಂಸ್ಕೃತ ಸಮನ್ವಯ, ಮಾರ್ಗದರ್ಶನ ಮಾಡಲಿಕ್ಕೆ ಬೇಕು. ಅಕ್ಕನ ಬಳಗಗಳು ಪಕ್ಷಾತೀತ, ವರ್ಗಾತೀತ, ಜಾತ್ಯಾತೀತವಾಗಿರಬೇಕು. ಎಲ್ಲ ಹೆಣ್ಣುಮಕ್ಕಳಿಗೂ ಅಲ್ಲಿ ಸ್ಥಾನವಿರಬೇಕು. ಅಕ್ಕನ ಬಳಗಗಳಲ್ಲಿ ಅಕ್ಕನ ಜೀವನಕ್ಕೆ ಸಂಬಂಧಿಸಿದ ಎಲ್ಲ ಭಾವಚಿತ್ರಗಳಿರಬೇಕು. ಆ ಭಾವಚಿತ್ರಗಳನ್ನು ನೋಡಿದರೆ ಅಕ್ಕನ ಜೀವನ ತಿಳಿಯಬೇಕು. ಅಕ್ಕನ ವಿಶ್ವಧರ್ಮದ ತತ್ವಗಳಿಗೇನೇ ಅಲ್ಲಿ ಪ್ರಮುಖ ಸ್ಥಾನವಿರಬೇಕು. ಅಂಥ ವಿಶ್ವಧರ್ಮದ, ಸಾಂಸ್ಕೃತಿಕ, ನೈತಿಕ, ಆಧ್ಯಾತ್ಮಿಕ, ಸಾಮಾಜಿಕ ತತ್ವವಿಚಾರಗಳನ್ನೊಳಗೊಂಡ ಅಕ್ಕನ ಸ್ವತಂತ್ರ ವಚನ ಗ್ರಂಥವನ್ನು ಪ್ರಕಟಿಸಬೇಕು. ವಿಶ್ವಧರ್ಮದ, ಆಧ್ಯಾತ್ಮ ಸಾಧನೆಯ, ಸುಸಂಸ್ಕೃತ ಮತ್ತು ಸುಶಿಕ್ಷಿತ ಅಮರ ವಚನಗಳನ್ನು ಛಾಪಿಸಿ, ವಚನ ಪಟಗಳನ್ನು ತಯಾರಿಸಿ, ಬಳಗಗಳಲ್ಲಿ ತೂಗಹಾಕಬೇಕು. ಅಕ್ಕನ ಗ್ರಂಥಾಲಯ, ಅಕ್ಕನ ವಾಚನಾಲಯಗಳನ್ನು ಸ್ಥಾಪಿಸಬೇಕು. ಮಹಿಳಾಮಂಡಳ ಎಂಬ ಹೆಸರಿಗಿಂತಲೂ ಅಕ್ಕನ ಬಳಗ ಎಂಬ ಹೆಸರು ಹೆಚ್ಚು ಆತ್ಮೀಯ ಭಾವದಿಂದ ಕೂಡಿದ್ದೂ, ಸುಸಂಸ್ಕೃತವೂ ಆಗಿದೆ. ಅಕ್ಕನ ಬಳಗದವರು ಶಿಶುವಿಹಾರ ನಡಿಸಬೇಕು. ಸ್ತ್ರೀ ಶಿಕ್ಷಿಕೆಯಿಂದ ಸಮಾಜ ಶಿಕ್ಷಣ ವರ್ಗಗಳನ್ನು ಸಾಗಿಸಬಹುದು. ಹೊಲಿಗೆಯ ವರ್ಗ, ಕಸೂತಿ, ಚಿತ್ರ, ಸಂಗೀತ, ಔಷಧೋಪಚಾರ ವರ್ಗಗಳನ್ನು ತೆರೆಯಬಹುದು. ಹೂದೋಟ ತಯಾರಿಕೆಯ ತರಬೇತು ಕೊಡಬಹುದು. ಶಿಶುಸಂಗೋಪನ, ಆರೋಗ್ಯ, ಪಾಕಶಾಸ್ತ್ರ, ಗೃಹವಿಜ್ಞಾನ, ದಾಂಪತ್ಯ ವಿಜ್ಞಾನ, ಸಂತಾನ ವಿಜ್ಞಾನ ಮುಂತಾದ ವಿಚಾರಗಳಿಗೆ ಸಂಬಂಧಿಸಿದ ವರ್ಗಗಳನ್ನು ನಡೆಯಿಸಬಹುದು. ಪ್ರಾರ್ಥನೆ,

ವಚನ ಸ್ಪರ್ಧೆ, ವಚನ ಗಾಯನ, ಕಾವ್ಯಗಾಯನ, ಗಮಕ ಕಲೆ, ಸಾಹಿತ್ಯ ಮತ್ತು ಸಾಂಸ್ಕೃತಿಕ ವರ್ಗಗಳು, ಭಾಷಣಕಲೆ, ಪ್ರವಚನ, ಕೀರ್ತನ ವರ್ಗಗಳನ್ನು ಪ್ರಾರಂಭಿಸಬಹುದು. ವಿಶ್ವಜೀವನ ಸಂಸ್ಕೃತಿಯು ಮಂಟಪವಂತೂ ಅಕ್ಕನ ಬಳಗಗಳ ಹೃದಯದಂತಿರಬೇಕು. ಹೆಣ್ಣುಮಕ್ಕಳ ಜ್ಞಾನಶಕ್ತಿ, ಹೃದಯಶಕ್ತಿ ಮತ್ತು ಕರ್ತೃತ್ವಶಕ್ತಿಗಳು ವಿಕಾಸಹೊಂದುವಂತೆ ಅಕ್ಕನ ಬಳಗಗಳು ಯೋಜನೆ ಮಾಡಿದ ತದನುಸಾರ ನಡೆಯಬೇಕು. ಹೆಂಗಸರ ಬಡತನ, ನಿರುದ್ಯೋಗ, ರೋಗ, ಅಜ್ಞಾನ, ಅಸ್ವಚ್ಛತೆ, ಆಲಸ್ಯ, ಸಂಕುಚಿತ ಭಾವನೆ, ಅಂಧ ಶ್ರದ್ಧೆ, ಪುರಾಣ ಮತವಾದ, ದಾಸ್ಯ ಮುಂತಾದ ಅನಿಷ್ಟವು ತೊಲಗುವಂತೆ ಅಕ್ಕನ ಬಳಗಗಳು ಕಾರ್ಯಪ್ರವೃತ್ತವಾಗಬೇಕು. ಅಕ್ಕನ ಬಳಗದ ಸದಸ್ಯೆಯರಿದ್ದ ಓಣಿಗಳಲ್ಲಿ ಕೌಟುಂಬಿಕ ಅನುಭವಮಂಟಪಗಳನ್ನು ಸಾಗಿಸಿ ಸುಮಧುರ ಬಾಂಧವ್ಯವನ್ನು ನೆಲೆಗೊಳಿಸಬಹುದು. ಭಾರತದ ಸಮಾಜಕಲ್ಯಾಣ ಕೇಂದ್ರ, ಮಹಿಳಾಮಂಡಳ ಮುಂತಾದ ಸ್ತ್ರೀ ಸುಧಾರಣೆಗೆ ಸಂಬಂಧಿಸಿದ ಸಂಘಗಳೊಡನೆ ಸಹಕರಿಸಿ ಕಾರ್ಯ ಸಾಗಿಸಬೇಕು. ಕರ್ನಾಟಕದ ಜನಜೀವಾಳದಂತಿದ್ದ ಶರಣ-ಶರಣೆಯರ ವಚನ, ಸರ್ವಜ್ಞ ವಚನ, ಜನಪದ ಅಥವಾ ಜನತಾ ಸಾಹಿತ್ಯದ ಹಾಡುಗಳು, ದಾಸರ ಪದಗಳು ಮುಂತಾದ ಜನಪದ ಸಾಹಿತ್ಯವನ್ನು ಸಂಗ್ರಹಿಸುವ, ಪ್ರಕಟಿಸುವ, ಪ್ರಸಾರಗೊಳಿಸುವ, ಸಂಶೋಧಕರಿಗೆ ಸಹಾಯ ಮಾಡುವ ಕಾರ್ಯವನ್ನು ಕೈಕೊಳ್ಳಬಹುದು. ಜನಪದ ಗೀತೆಗಳನ್ನು ತಿಂಗಳುಗಟ್ಟಲೆ ಹಾಡುವ ಹೆಣ್ಣುಮಕ್ಕಳನ್ನು ಬೈಲಹೊಂಗಲದಲ್ಲಿ ನಾನು ಕಂಡಿದ್ದೇನೆ. ಅವರ ಹಾಡುಗಳನ್ನು ಸಂಗ್ರಹಿಸಬೇಕು. ಡಾ. ಗದ್ದಗಿಮಠ, ಸಿಂಪಿ ಲಿಂಗಣ್ಣ, ಜೋಳದರಾಶಿ ದೊಡ್ಡನಗೌಡ ಮುಂತಾದವರ ಕೂಡ ಸಂಪರ್ಕವಿಟ್ಟರೆ ವಿಪುಲ ಜನತಾ ಹಾಡುಗಳು ದೊರೆಯುತ್ತವೆ. ಕೇಂದ್ರವು ಬಲಿತರೆ ಹೆಣ್ಣುಮಕ್ಕಳ ಶಾಲೆ, ಟ್ರೇನಿಂಗ ಕಾಲೇಜಗಳನ್ನು ಕೂಡ ಸ್ಥಾಪಿಸಬಹುದು. ಹುಬ್ಬಳ್ಳಿಯಲ್ಲಿರುವ ಮಹಿಳಾ ವಿದ್ಯಾಪೀಠದ ಕೂಡ ಮತ್ತು ಧಾರವಾಡ ಜಿಲ್ಲಾ ಮಹಿಳಾಮಂಡಳದವರ ಸಹಕಾರದಿಂದ ಅಕ್ಕನಬಳಗಗಳು ಸದ್ಯಕ್ಕೆ ಕೆಲಸ ಸಾಗಿಸಬಹುದು.

**ಯಾರು ಮಾಡಬೇಕು ?** ಹುಬ್ಬಳ್ಳಿಯ ಶಂಗವ್ವತಾಯಿ ಕರವೀರಶೆಟ್ಟರ, ಸೊಲ್ಲಾಪುರದ ಜಯದೇವಿತಾಯಿ ಲಿಗಾಡೆ, ಬೆಳಗಾವಿಯ ಪದ್ಮಾವತಿ

ತಾಯಿ ಅಂಗಡಿ ಮುಂತಾದ ಸ್ತ್ರೀ ಮುಂದಾಳುಗಳು ಈ ಕಾರ್ಯಕ್ಕೆ ಮುಂದಾಳುಗಳಾಗಬೇಕು. ಬಂಥನಾಳ ಶಿವಯೋಗಿಗಳು, ಮುಧೋಳದ ಮೃತ್ಯುಂಜಯ ಶಿವಯೋಗಿಗಳು, ಧಾರವಾಡ ಮೃತ್ಯುಂಜಯ ಶಿವಯೋಗಿಗಳು, ಬೆಂಗಳೂರ ಸರ್ಪಭೂಷಣ ಮಠದ ಮಹದೇವ ಶಿವಯೋಗಿಗಳು, ರಾ. ಬ. ಡಾ. ಹಳಕಟ್ಟಿಯವರು ವಿಜಾಪುರ ಮುಂತಾದವರು ಸ್ತ್ರೀ ಮುಂದಾಳುಗಳಿಗೆ ಎಲ್ಲ ತರದ ಸಹಾಯ ಮಾಡಬೇಕು. ಜಗದ್ಗುರುಗಳು ಧನಸಹಾಯ ಮಾಡಬೇಕು. ಶ್ರೀಮಂತರೂ ಧನಸಹಾಯ ಮಾಡಬೇಕು. ಕಲಿತ, ಸುಸಂಸ್ಕೃತ ಹೆಂಗಳೆಯರು ಕಾರ್ಯಕರ್ತರಾಗಬೇಕು.

ಧಾರವಾಡ ಜಿಲ್ಲಾ ಮಹಿಳಾಮಂಡಳದ ಅಧ್ಯಕ್ಷಿಣಿ ಶ್ರೀಮತಿ ಶಾಂತಾದೇವಿ ಮಾಳವಾಡ, ಹುಬ್ಬಳ್ಳಿ ಮಹಿಳಾ ವಿದ್ಯಾಪೀಠದ ಶ್ರೀಮತಿ ನಾಗಮ್ಮ ಪಾಟೀಲ, ಶ್ರೀಮತಿ ಲೀಲಾವತಿ ಮಾಗಡಿ, ಗಿರಿಜಾದೇವಿ ಇಚ್ಚಂಗಿಮಠ ಮುಂತಾದವರು ಯೋಗ್ಯ ಸಲಹೆ ಸಹಕಾರಗಳನ್ನು ನೀಡಬಲ್ಲರು. ಮಹಾಸಭೆಯ ಮಹಿಳಾ ವಿಭಾಗವು ಈ ಕಾರ್ಯವನ್ನು ಸಂಘಟಿಸಬಹುದು. ಕಸ್ತೂರಬಾ ಗ್ರಾಮ ಸೇವಿಕೆಯರು ಸಹಕಾರ ಮಾಡಬಲ್ಲರು. ಸಮಾಜ ಕಲ್ಯಾಣ ಮಂಡಳದವರು ಧನಸಹಾಯ ಮಾಡಬಲ್ಲರು. ಕನ್ನಡ ಪ್ರಾಥಮಿಕ ಶಿಕ್ಷಕಿಯರು ತಮ್ಮ ಪಾಲಿನ ಕರ್ತವ್ಯ ಮಾಡಬೇಕು. ಪತ್ರಿಕಾ ಸಂಪಾದಕರು, ಸಮಾಜ ಸೇವಕರು, ಸ್ತ್ರೀ ಸಂಘಟಕರಾಗಿರುವ ಕಾಂಗ್ರೆಸ್ ಸ್ತ್ರೀ ಮುಂದಾಳುಗಳು ಈ ಕಾರ್ಯದಲ್ಲಿ ಚೈತನ್ಯ ಸ್ಫೂರ್ತಿ ಜ್ಞಾನಗಳನ್ನು ಹಂಚಬಲ್ಲರು. ಹೆಣ್ಣುಮಕ್ಕಳ ಟ್ರೇನಿಂಗ ಕಾಲೇಜಿನ ಪ್ರಾಧ್ಯಾಪಕರು ಮತ್ತು ಪ್ರಾಧ್ಯಾಪಿಕೆಯರು ತಮ್ಮ ಪಾಲಿನ ಸೇವೆ ಮಾಡಬಲ್ಲರು. ಮುಖ್ಯವಾಗಿ ಸ್ತ್ರೀಯರು ಮತ್ತು ಎರಡನೆಯದಾಗಿ ಸ್ತ್ರೀ ಸಮಾಜ ಹಿತಚಿಂತಕರಾದ ಪುರುಷರೂ ಹೀಗೆ ಎಲ್ಲರೂ ಸಹಕಾರದಿಂದ ದುಡಿದರೆ ಈ ವ್ಯಾಪಕ ಕಾರ್ಯಕ್ರಮವು ಅಸಾಧ್ಯವೇನೂ ಅಲ್ಲ. ಅಕ್ಕನ ಬಳಗಗಳು ಈ ದಿಸೆಯಲ್ಲಿ ವಿಚಾರಿಸಲು ಸಿದ್ಧವಾಗಿ ಕಾರ್ಯರಂಗಕ್ಕಿಳಿಯಬೇಕೆಂಬುದೇ ನನ್ನ ಹಾರೈಕೆ.

---

# ತ್ರಿಗುಣಿಗಳು

[ ಬರಹಗಾರರು:— ಎಸ್. ಎಸ್. ಶಾಬಾದಿ, ಟ್ರೇ. ಕಾ. ಲಚ್ಯಾಣ. ]

ಈ ಜಗತ್ತಿನಲ್ಲಿ ಪ್ರತಿಯೊಬ್ಬ ಮಾನವರು ಭಿನ್ನ ಭಿನ್ನ ತೆರನಾಗಿ ಕಾಣುತ್ತಿರುವರು. ಇದು ಎಲ್ಲರೂ ಅರಿತಿರಲಿಕ್ಕೆ ಸಾಕು. ನಮಗೆ ದಿನದ ವ್ಯವಹಾರದಲ್ಲಿಯೂ ನಡೆನುಡಿಯಲ್ಲಿಯೂ ಆಹಾರ ವಿಹಾರದಲ್ಲಿಯೂ ಈ ಕೊರತೆಯನ್ನು ಕಾಣಬಹುದು. ಈ ವಿಷಯವನ್ನು ತಿಳಿದುಕೊಳ್ಳುವದು ಅತ್ಯಗತ್ಯ. ಮುಖ್ಯವಾಗಿ ಮಾನವರಲ್ಲಿರತಕ್ಕಂಥಾ ತಾಮಸ, ರಾಜಸ, ಸಾತ್ವಿಕ ಈ ಗುಣಗಳೇ ಈ ಭಿನ್ನತೆಗೆ ಮುಖ್ಯ ಕಾರಣಗಳಾಗಿರುವವು. ಯಾವ ನಲ್ಲಿ ಯಾವ ಗುಣದ ಅಂಶ ಹೆಚ್ಚಿಗಿರುವದೋ ಆ ಗುಣವೇ ಪ್ರಕಟಕ್ಕೆ ಬರುತ್ತಿರುವದು. ಅಂತೆಯೇ ತಾಮಸಿ, ರಾಜಸಿ, ಸಾತ್ವಿಕ ಹೀಗೆ ಮಾನವ ರಲ್ಲಿ ಮೂರು ಭಾಗಗಳನ್ನು ವಿಂಗಡಿಸಿರುವರು. ತಾಮಸಿಗೆ ರಾಕ್ಷಸನೆಂದೂ ರಾಜಸಾಧಿಕನಿಗೆ ಮಾನವನೆಂದೂ ಸಾತ್ವಿಕ ಗುಣಸಂಪನ್ನನಿಗೆ ದೇವನೆಂದೂ ಶಿವಶರಣರು ನುಡಿದಿರುವರೇ ಹೊರ್ತು ದೇವ ದಾನವ ಮಾನವರು ಬೇರೆ ಬೇರೆ ಲೋಕಗಳಲ್ಲಿ ಅಂದರೆ ಸ್ವರ್ಗ, ಮೃತ್ಯು, ಪಾತಾಳಗಳಲ್ಲಿ ವಾಸಿಸು ತ್ತಿರುವರೆಂಬುದು ಸುಳ್ಳು.

ಸತತ ಹಿಂಸಾಮಯನಾಗಿ ಕ್ರೂರಿಯಾಗಿ ಆ ಮಾರ್ಗದಲ್ಲಿಯೇ ತೃಪ್ತಿ ಪಡೆಯುವವನು ರಾಕ್ಷಸನೆಂದೂ, ಪರರ ಸುಖದುಃಖಗಳಿಗೆ ಕೊರಗದೆ ಸದಾ ತನ್ನ ಸುಖವನ್ನೇ ಸಾಧಿಸುವವನು ಮಾನವನೆಂದೂ, ತಾನು ತನ್ನ ಮಾತೃ ಭೂಮಿ ಸುಖವಾಗಿರಲೆಂದು ತನಗೆ ಎಷ್ಟೇ ತೊಂದರೆಗಳು ಸಂಭವಿಸಿದರೂ ಅಡೆತಡೆಗಳಿಗೆ ಬಾಗದೆ ತನ್ನ ಪ್ರಾಣಾರ್ಪಣ ಮಾಡಲು ಸಿದ್ಧನೂ, ಪರರ ಸುಖವೇ ತನ್ನ ಸುಖ, ಪರರ ಹಿತವೇ ತನ್ನ ಹಿತವೆಂದು ಕಲ್ಪಿಸುವವನೂ ಪರರ ಆನಂದವೇ ತನ್ನ ಆನಂದವೆಂದು ಲೋಲಾಡುವವನೇ ದೇವನೆಂದೂ ಸಂಜ್ಞೆಯುಂಟು.

ಒಂದೇ ನಾಣ್ಯಕ್ಕೆ ಎರಡು ಮೈಗಳಿರುವಂತೆ ಒಂದು ಲೌಕಿಕವಾದರೆ ಇನ್ನೊಂದು ಅಲೌಕಿಕವಾಗಿಹುದು. ಅಲೌಕಿಕವೇ ಅಧ್ಯಾತ್ಮಿಕ. ಅದನ್ನೇ

ಬಸವಾದಿ ಪ್ರಮಥರು ಬಲವಾಗಿ ತಮ್ಮ ವಚನ ವಾಙ್ಮಯಗಳಲ್ಲಿ ಕಾಣಿಸಿರುವರು. ಅದನ್ನು ವಿವೇಚಿಸುವಾ,

## ಸಾತ್ವಿಕ ಗುಣದ ಲಕ್ಷಣಗಳು

॥ಗ್ರಂಥ॥ ಸತ್ಯಂ ಜ್ಞಾನಂ ತಪೋ ಮೌನಂ । ತೋಷಃ ಶಾಂತಿರ್ವಿವೇಕತಾ ।
ಉತ್ಸಾಹೋ ನಿಶ್ಚಯೋ ಧೈರ್ಯಮಂ । ಸಾತ್ವಿಕಸ್ಯ ಚ ಲಕ್ಷಣಂ ॥

ಎಂಬಂತೆ (೧) ಸತ್ಯ (೨) ಜ್ಞಾನ (೩) ತಪ (೪) ಮೌನ (೫) ಹರುಷ (೬) ಕ್ಷಮೆ (೭) ಸಾಹಸ (೮) ನಿಶ್ಚಯ (೯) ಧೈರ್ಯ (೧೦) ವಿವೇಕ ಇಂತೀ ದಶಲಕ್ಷಣದಿಂದೊಡಗೂಡಿದ ಸಾತ್ವಿಕನೇ ದೇವನೆಂದರ್ಥ.

೧. ಸತ್ಯಃ— ಕೊಟ್ಟ ಮಾತು, ನುಡಿದ ನುಡಿ, ಹಿಡಿದ ಆಚರಣೆ ಇವುಗಳಲ್ಲಿ ತನಗೆಷ್ಟು ಎಡರುಗಳು ಬಂದರೂ ಅಂಜದೆ ಸದಾ ಸರ್ವದಾ ಪ್ರಾಮಾಣಿಕತನದಿಂದ ನಡೆಯುವದು. "ಒಮ್ಮೆ ಪುಸಿನುಡಿದರೆ ಕೊರೆದೀಡುವೆ ನೀನಾಲಿಗೆಯಾ. ನುಡಿಯಂತೆ ನಡೆ ಇರದಿದ್ದರೆ ಸುಡುವೆನೀತನುವನ್ನು" ಅನ್ನತಕ್ಕಂಥಾ ಸ್ಥಿತಿಪ್ರಾಪ್ತಿಗೆ ಸತ್ಯವೆನ್ನುವರು.

ವಚನಕಾರರು ಸತ್ಯದ ಮೇಲ್ಮೆಯನ್ನು ಹೀಗೆ ಸಮರ್ಥಿಸಿರುವರುಃ —

ನುಡಿಯಬಹುದು ಅದ್ವೈತವನೊಂದುಕೋಟಿ ವೇಳೆ
ಒಮ್ಮೆ ನುಡಿಯಬಹುದೇ ಸದ್ಭಕ್ತಿ ಸದಾಚಾರವನು
ನುಡಿದಂತೆ ನಡೆವ ನಡೆದಂತೆ ನುಡಿವ ಸದ್ಭಕ್ತಿ ಸತ್ಯ
ಸದಾಚಾರಯುಕ್ತ ಮಹಾತ್ಮರ ಪಾದವ ಹಿಡಿದು ಬದುಕಿಸಯ್ಯ
ಕಪಿಲಸಿದ್ಧ ಮಲ್ಲಿಕಾರ್ಜುನಾ ॥

ಅದರಂತೆ,

ನುಡಿದರೆ ಮುತ್ತಿನ ಹಾರದಂತಿರಬೇಕು ।
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು ।
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು ।
ನುಡಿದರೆ ಲಿಂಗ ಮೆಚ್ಚಿ ಅಹುದೆನ್ನಬೇಕು ।
ನುಡಿಯೊಳಗಾಗಿ ನಡೆಯದಿದ್ದರೆ
ಕೂಡಲಸಂಗಮದೇವನೆಂತೊಲಿವನಯ್ಯ ॥

ಎಂಬಂತೆ ನುಡಿನಡೆಯೊಂದಾಗಿ ಈ ಜನ್ಮವೇ ಕಡೆಯಾಗಿ ವರ್ತಿಸುವ ಮಹಾತ್ಮನ ಸ್ಥಿತಿಯೇ ಸತ್ಯವೆಂದೂ ಅದುವೇ ನಿತ್ಯವೆಂದು ಪ್ರತಿಪಾದಿಸಿರುವರು.

೨. ಜ್ಞಾನಃ— ಜ್ಞಾನ = ತಿಳಿ. ಏನನ್ನು ತಿಳಿ ? ಯಾರನ್ನು ತಿಳಿ ? ಎಂದು ಹುಡುಕುತ್ತಿರುವದೇ ಜ್ಞಾನ. ಅದೆಂತೆನೆ,

ಚರಾಚರ ವಸ್ತುವಿನಲ್ಲಿ ನಿತ್ಯ ಅನಿತ್ಯವನ್ನರಿದು ನಿತ್ಯವಾದ ವಸ್ತುವಿನಲ್ಲಿ ಬೆರೆಯುವ ತಿಳಿಗೆ ಜ್ಞಾನವೆಂದು ಅನ್ನುವರು. ವ್ಯವಹಾರದಲ್ಲಿ ಜ್ಞಾನವೆಂದರೆ ತಿಳಿದುಕೊಳ್ಳುವಿಕೆ ಎಂದು ಅನ್ನುವದೇನೋ ನಿಜ. ಮಾತ್ರ ಏನನ್ನು ತಿಳಿದುಕೊಳ್ಳುವಿಕೆ ಎಂಬುವ ಪ್ರಶ್ನೆಗೆ ಉತ್ತರ ಹುಡುಕುವ ವರೆಗೆ ನಿಜವಾಗಿ ಜ್ಞಾನಿಯಾಗಲಾರ. ಪ್ರಮಥರು ಇದಕ್ಕನುಗುಣವಾಗಿ ಸರಲ ರೂಪದಲ್ಲಿ ಉತ್ತರವನ್ನು ಹೇಳಿರುವರು.

ಜ್ಞಾನವೆಂದು ವಾದಿಸುವ ಅಣ್ಣಗಳಿರಾ ಕೇಳಿರಯ್ಯ ।
ಜ್ಞಾನವೆಂದರೆ ಮಹತ್ವಗಳ ಮಾಡಿ ಮೆರೆದುದು ಜ್ಞಾನವೇ ? ಅಲ್ಲಲ್ಲ.
ಜ್ಞಾನವೆಂದರೆ ಸ್ವರ್ಗದ ವಾರ್ತೆ ಕೇಳಿ ಕೀರ್ತಿ ಹುಟ್ಟಿದುದು ಜ್ಞಾನವೇ? ಅಲ್ಲಲ್ಲ.
ಜ್ಞಾನವೆಂದರೆ ತತ್ಕಾಲಕ್ಕಾಗುವ ಸುಖದುಃಖ ಹೇಳಿದುದು ಜ್ಞಾನವೇ? ಅಲ್ಲಲ್ಲ.
ನಿನ್ನರಿವು ಕೈಕರಣವಾಗಿರೆ ದೇಹವಳಿದರೇನು ದೇಹ ಧರಿಸಿದರೇನು
ಎಲೆ ಅಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ ॥

ಎಂದು ವಚನ ಸಾಹಿತಿಗಳು ಜ್ಞಾನದ ಮೂಲವನ್ನು ತಿಳಿಸಿರುವರು.

ಮಹತ್ವ, ಸ್ವರ್ಗದ ವಾರ್ತೆ, ತತ್ಕಾಲಿಕ ಸುಖದುಃಖ ಇವುಗಳನ್ನು ಹೇಳಿದರೆ ಅವನಿಗೆ ಜ್ಞಾನಿ ಎಂದೆನಲಾಗದು. ಅದೆಂತೆನೆ—

ಮಂತ್ರ ಜಪಿಸುವಲ್ಲಿ ಮಹತ್ವಾಯಿತಿ ತಂತ್ರ ಗುಣಿಸುವಲ್ಲಿ ಸ್ವರ್ಗದ ವಾರ್ತೆ ತಿಳಿಯಿತು. ಪ್ರಸಂಗಕ್ಕನುಸರಿಸಿ ಪ್ರಸಂಗ ಚಿಂತಾಮಣಿ ನೋಡಿ ಸುಖದುಃಖ ಹೇಳುವದಾಯಿತು. ಇದು ಜ್ಞಾನವಲ್ಲ ತನ್ನರಿವು ತನ್ನ ಕರತಲಾಮಲಕವಾಗಿ ಅರಿದಂಥಾ ವಸ್ತುವಿನಲ್ಲಿ ಬೆರದೇಕ ರಸವಾಗುವದಕ್ಕೆ ಯಾವದು ಸಾಹಾಯ್ಯವಾಗುವದೋ ಅದುವೇ ಜ್ಞಾನವೆಂದು ಬಲವಾಗಿ ಮಂಡಿಸಿದ್ದಾರೆ.

**ಅದರಂತೆ.**

ಸುಖವ ಬಲ್ಲಾತ ಸುಖಿಯಲ್ಲ. ದುಃಖವ ಬಲ್ಲಾತ ದುಃಖಿಯಲ್ಲ
ಸುಖದುಃಖವೆಂಬೆರಡನ್ನು ಬಲ್ಲಾತನು ಜ್ಞಾನಿಯಲ್ಲ।
ಹುಟ್ಟಿದ ಮುನ್ನ ಸತ್ತವರ ಕುರುಹ ಬಲ್ಲಡೆ ಆತನೇ ಬಲ್ಲತನ ಮಹಾ
ಜ್ಞಾನಿ। ಎಂದು ಹೇಳಿದ್ದಾರೆ. ಇದ.ವೇ ನಿಜವಾದ ಜ್ಞಾನ.

೩. **ತಪ:**— ತಪ, ಧ್ಯಾನ, ನಿಜವಾದ ಧ್ಯಾನವೇ ತಪವಲ್ಲದೆ ಬಕನಧ್ಯಾನ ತಪವಲ್ಲ. ಸತಿಸುತಾದಿಗಳ ಧ್ಯಾನ ತಪವಲ್ಲ. ಪದಾರ್ಥ ಪರಸತಿ ಬಯಸುವದು ತಪವಲ್ಲ. ಇವೆಲ್ಲವುಗಳು ಬಕನ ಉದರ ತೃಪ್ತಿಯಂತೆ ತಪವಾಗುವದಲ್ಲದೆ ನಿಜವಾದ ತಪಗಳೆಂದಿಗೂ ಆಗಲರಿಯವು. ನಿಜವಾದ ತಪವೆಂತೆಂದೊಡೆ ಒಂದೇ ಮಾತಿನಲ್ಲಿ ಹೇಳುವದಾದರೆ ಸಾಕೆಂಬುದೇ ತಪವೆಂದು ಹೇಳಬಹುದಲ್ಲದೆ ಬೇಕೆಂಬುದು ತಪನಲ್ಲ ಈ ತಪವು ಎಂತಿರಬೇಕೆಂದು ನಿಜಗುಣಾರಾಧ್ಯರು ಸುಶ್ರಾವ್ಯವಾಗಿ ನಿರೂಪಿಸಿರುವರು.

ಮಾಡಲಿಲ್ಲವೇ ತಪವು ಮಾಡಲಿಲ್ಲವೇ। ಕೊಡೆಸುಗುಣದೊಡನೆ
ತಿಳಿದು ನೋಡೆ ತ್ರಿವಿಧ ಕರಣದಲ್ಲಿ ।ಪ॥

ಎಂಬಂತೆ ಸಾಧನ ಚತುಷ್ಟಯುವೆನಿಪ ಮನ ಬುದ್ಧಿ ಚಿತ್ತ ಅಹಂಕಾರಾದಿಗಳ ದೋಷವನ್ನು ಹೋಗಲಾಡಿಸಿ ವಿಕಲ್ಪ ಅಭೇದ ಅಂವು ನೀನೆಂಬುವ ಪರಮ ಪುರುಷಾರ್ಥವನ್ನು ಗಳಿಸಿಕೊಂಡು ಕಾಯದಿಂದಲೂ ವಚನದಿಂದಲೂ ಮನಸಿನಿಂದಲೂ ತ್ರಿಕರಣಪೂರ್ವಕವಾಗಿ ತದೇಕಚಿತ್ತನಾಗಿ ತನ್ನ ನಿಜಸ್ವರೂಪದ ಧ್ಯಾನವೇ ತಪವಾಗಿರುವದು.

೪. **ಮೌನ:**— ಮೌನವೆಂದರೆ ಮೂಕವಲ್ಲ. ಮೂಕನೆಂದರೆ ಮೌನಿಯಲ್ಲ. ಮೌನವನು ಮಾಡುವೆನೆಂದು ಮೂಕತನದಲಿ ಕುಳಿತು ಮನವನ್ನು ಹರಿಬಿಟ್ಟರೆ ಮೌನವನು ಮಾಡಿದಂತಾಗುವದೇ ? ಉಗುಳು ನುಂಗಿದರೆ ಹಸಿವೆ ಹಿಂಗುವದೇ ? ಮನವ ಹರಿಬಿಟ್ಟ ಮೌನ ಹೃದಯದ ಹಸಿವು ಹಿಂಗಿಸುವದೇ ? ಇಲ್ಲ ! ಇಲ್ಲ !!

ಅದಕ್ಕಾಗಿಯೇ ಕಡಕೋಳ ಮಡಿವಾಳನವರು ಹೀಗೆ ಹಾಡಿರುವರು— " ಎಷ್ಟು ತೊಳಿಯಲಮ್ಮ ಮನದನ ಮೈಲಿಗ್ಹೋಗದಮ್ಮ " ಎಂದು.

ಮನವನ್ನು ಹಿಂಬಿಟ್ಟು ಮಾಡುವ ಮೌನ ಕೆರೆಯಲ್ಲುಂಡು ತೆರೆಯ ಪೊಗಳುವಂತೆ ಶಿವನ ಸ್ಮರಿಸುವೆನೆಂದು ವಿಷಯವಾಸನೆಯನ್ನು ಸ್ಮರಿಸುತ್ತ ಕುಳಿತ ಡಾಂಭಿಕ ಮೌನಿಗೆ ಪರಬ್ರಹ್ಮನ ಚಿಂತೆ ಏಕೆ ? ಮಾಡುವದೊಂದು, ಆಡುವದೊಂದು, ನುಡಿಯುವದೊಂದಾತ ಮೌನಿಯಾಗಿ ಕುಳಿತು ಮನವ ಮಾದರ ಕೇರಿಯಲ್ಲಿ ನೆಲೆಸಿದ್ದರೆ ಅದು ಮೌನವೇ ? ಅಲ್ಲಲ್ಲ. ಗುರಿ ಇಲ್ಲದ ಕಪಿಯು ಟೊಂಗೆಗೆ ಹಾರಿದಂತೆ. ಗುರಿಯಿಲ್ಲದ ಕಪ್ತಾನನ ಹಡಗಿನಂತೆ ಗುರಿ ಇಲ್ಲದವನ ಮೌನ ಸಲ್ಲದು. ಮನವ ಶೋಧಿಸುವ ಮೌನ ಬೇಕು ! ಮನವ ಖಂಡಿಸುವ ಮೌನ ಬೇಕು !! ತನುವ ದಂಡಿಸುವ ಮೌನ ಬೇಕು !!! ಭವದ ಹಂಗನ್ನು ಹಿಂಗಿ ತಾನೇ ತಾನಾಗಿ ಅನ್ಯರಿಲ್ಲಾಗಿ ಶೂನ್ಯದೊಳು ಬೆರೆತು ನಾನಾರೊಡನೆ ಮಾತಾಡಲಿ ಎಂಬ ಮೌನವೇ ಮೌನ. ಮೂಕನ ಕನಸಿನಂತಿಹುದೇ ಮೌನ. ಬಸವಾದಿ ಪ್ರಮಥರ ವಚನದಂತೆ—

ದೆಶೆ ದೆಶೆಯಲ್ಲಿ ನಿಮ್ಮನೇ ಕಾಂಬೆ । ಎದ್ದು ನೋಡಿ ನಿಮ್ಮನೇ ಕಾಂಬೆ ।
ನಿದ್ದೆಗೈದು ನಿಮ್ಮನೇ ಕಾಂಬೆ । ಅಹೋರಾತ್ರಿ ನಿನ್ನ ಧ್ಯಾನದೊಳಿರಿಸು ।
ಮಹಾಲಿಂಗ ಕಲ್ಲೇಶ್ವರಾ ॥

ಎಂಬಂತೆ ಸತತ ತನ್ನ ಸ್ವರೂಪ ಚಿಂತನೆ ತನ್ನಂತರಂಗದಲ್ಲಿ ಚಿಂತಿಸುತ್ತಿಹುದೇ ನಿಜವಾದ ಧ್ಯಾನ. ಅದುವೇ ಮೌನ.

೫. ಹರುಷಃ— ಸುಖದುಃಖಗಳಿಗೆ ಮೀರಿ ಇಹವೆಲ್ಲವೂ ಸ್ವಪ್ನವಾಗಿ ಸುಖದುಃಖಗಳನ್ನಿದಿರಾಗಿಟ್ಟು ತಾನು ಸಾಕ್ಷಿಕನೆಂದರಿದ ಹರುಷವೇ ಹರುಷವಲ್ಲವೇ ? ಅಹಹಾ ! ಆ ಹರುಷ ಬಣ್ಣಿಸಲಳವಲ್ಲ. ಅಣ್ಣ ಜಗದಣ್ಣ ಬಸವಣ್ಣನವರ ಹರುಷ ಪೂರಿತ ಉದ್ಗಾರ ಸಾಮಾನ್ಯವೇ ?

ಜಗವ ಸುತ್ತಿಪ್ಪುದು ನಿನ್ನಯ ಮಾಯೆಯಯ್ಯ ।
ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯ ।
ಜಗಕೆ ಬಲ್ಲಿದ ನೀನು ನಿನಗೆ ಬಲ್ಲಿದ ನಾನು ಕಂಡಯ್ಯ ।
ಜಗವು ನಿನ್ನೊಳಗೆ ನೀನು ನನ್ನೊಳಗೆ । ಕರಿಯು
ಕನ್ನಡಿಯೊಳು ಅಡಗಿದಂತಯ್ಯ ನೀನೆನ್ನೊಳಡಗಿದೆ
ಕೂಡಲಸಂಗಮದೇವಾ ॥ ಅನ್ನುವಲ್ಲಿ,

ನಿನಗೆ ಬಲ್ಲಿದ ನಾನು ಕಂಡಯ್ಯ ಹಾಗೂ ನೀನು ನನ್ನೊಳಗೆ ಎಂಬ ನುಡಿಯಲ್ಲಿ ಹರುಷವಾರುಧಿ ಉಕ್ಕಿ ಆನಂದ ತುಂದಿಲರಾಗಿ ನುಡಿದ ನುಡಿಯು ಹರುಷೋದ್ಗಾರವಲ್ಲದೆ ಮತ್ತೇನು ? ಅಷ್ಟ ಕೋಟಿ ರೋಮಂಗಳಲ್ಲಿ ಪರ ಬ್ರಹ್ಮನ ನೋಟವನೇ ಕಂಡು ಆ ನೋಟವೇ ಸುಖದ ಕೂಟಾಗಿ ಪಡು ತ್ತಿರುವ ಹರುಷವೇನೆಂಬೆ. ಇದುವೇ ನಿಜವಾದ ಹರುಷವಾರುಧಿಯಾಗಿಹುದು.

೬. **ಕ್ಷಮೆ:**— ಆರೇನಂದರೂ ಓರಂತಿಪ್ಪುದೇ ಸಮತೆ। ಆರು ಜರಿದರೂ
ಅವರೆನ್ನ ಮನದ ಕಾಳಿಕೆ ಕಳೆದರೆಂಬುದೇ ಸಮತೆ। ಜರಿದವ
ರೆನ್ನ ಜನ್ಮ ಬಂಧುಗಳೆಂಬೆ। ಹೊಯ್ವವರೆನ್ನ ಆತ್ಮ ಮಿತ್ರ
ರೆಂಬೆ। ಸ್ತುತಿಸಿದವರೆನ್ನ ಹೊನ್ನಶೂಲಕ್ಕಿಕ್ಕಿದರು ನೋಡಾ

ಎಂಬಂತಿಹುದೇ ಕ್ಷಮೆ. ಎಲ್ಲರೂ ನನ್ನವರು. ಅನ್ಯರಲ್ಲ ಅನ್ನುವ ಭಾವ ಬಲಿಯುವದೇ ಕ್ಷಮೆ. ಸ್ತುತಿನಿಂದೆಗಳಿಗೆ ಮನವ ಚಲಿಸದಿಹುವೇ ಕ್ಷಮೆ. ಸ್ತುತಿನಿಂದೆಗಳಿಗೆ ನಾನು ಸಂಬಂಧನಲ್ಲನೆಂಬುದೇ ಕ್ಷಮೆ. ನಾನು ಎಂಬುವ ಅಧ್ಯಾಸ ಇಲ್ಲದಾಗ ಕ್ಷಮೆಯು ತಾನಾಗಿ ಬಪ್ಪುದು. ಅಕ್ಕನು ಕ್ಷಮೆಯ ಬಗ್ಗೆ ವ್ಯಕ್ತಮಾಡಿದ ರೀತಿ ಇಂತಿಹುದು. ಎಂತೆನೆ,

ಬೆಟ್ಟದ ಮೇಲೊಂದು ಮನೆಮಾಡಿ ಮೃಗಂಗಳಿಗಂಜಿದೊಡೆಂತಯ್ಯ।
ಸಮುದ್ರತೀರದಲೊಂದು ಮನೆಮಾಡಿ ನೊರೆತೆರೆಗಳಿಗಂಜಿದೊಡೆಂತಯ್ಯ।
ಸಂತೆಯಲೊಂದು ಮನೆಮಾಡಿ ಶಬ್ದಕ್ಕೆ ನಾಚಿದೊಡೆಂತಯ್ಯ ॥

ಎಂದು ಹೇಳಿಕೊಂಡಿದ್ದುದು ಸ್ತುತ್ಯ. ಎಲ್ಲದಕ್ಕೆ ಕ್ಷಮಾಶೀಲನಾ ಗೆಂದೇ ಬೋಧಿಸಿಹಳು. ಇದುವೇ ನಿಜವಾದ ಕ್ಷಮೆ.

೭. **ಸಾಹಸ:**— ಸಾಹಸ = ಪ್ರಯತ್ನ. ಪ್ರಯತ್ನವೆಂದರೆ ಯಾವ ಯಾವ ಪ್ರಯತ್ನ ಎಂಬುದೇ ತಿಳಿಯುವದು ಸಾಹಸ. ಹೆಣ್ಣಿಗಾಗಿ ಪ್ರಯತ್ನವೋ ? ಮಣ್ಣಿಗಾಗಿ ಪ್ರಯತ್ನವೋ ? ಹೊನ್ನಿಗಾಗಿ ಪ್ರಯತ್ನವೋ ? ಹೆಣ್ಣಿಗಾಗಿ ಪ್ರಯತ್ನ ಮಾಡಿ ರಾವಣ ಹೆಣ್ಣಾಗಿ ಹೋದ. ಮಣ್ಣಿಗಾಗಿ ಪ್ರಯತ್ನಿಸಿ ದುರ್ಯೋಧನನು ರಣರಂಗದಲ್ಲಿ ಮಣಿದ. ಹೊನ್ನಿಗಾಗಿ ಪ್ರಯ ತ್ನಿಸಿ ಕುಬೇರನು ಮತಿಹೀನನಾದ. ಅಂದ ಬಳಿಕ ನಮ್ಮೆಲ್ಲರ ಪ್ರಯತ್ನ ಏತಕ್ಕಾಗಿ ? ಯಾವುದಕ್ಕಾಗಿ ? ಇದರ ಅರಿವು ಅವಶ್ಯ. ನಮ್ಮ ಸಾಹಸ ಅರುಹಿನ ಕುರುಹಿಗಾಗಿ. ಇದಕ್ಕನುಗುಣವಾಗಿಯೇ ಭಕ್ತಿಭಾಂಡಾರಿ ಬಸ ವಣ್ಣನವರು ಬೋಧಿಸಿಹರಲ್ಲಾ—

ಹೆಣ್ಣಿಗಾಗಿ ಕೆಟ್ಟರು, ಮಣ್ಣಿಗಾಗಿ ಕೆಟ್ಟರು,
ಹೊನ್ನಿಗಾಗಿ ಕೆಟ್ಟರು. ನಿನಗಾಗಿ ಯಾರು ಕೆಡಲಿಲ್ಲವಯ್ಯ
ಕೂಡಲಸಂಗಮದೇವಾ.

ಹೀಗಾದ ಬಳಿಕ ನಮ್ಮ ಸಾಹಸ ಏತಕ್ಕೆ ? ಇಂದ್ರಿಯಾದಿಗಳನ್ನು ಗೆಲುವೆನೆಂಬುದೇ ಸಾಹಸ. ಅರಿಷಡ್ವರ್ಗಗಳನ್ನು ಮೆಟ್ಟುವೆನೆಂಬುದೇ ಸಾಹಸ. ಗುಣತ್ರಯಗಳನ್ನು ಹಣಿಯುವೆನೆಂಬುದೇ ಸಾಹಸ. ನಾನಾರೆಂಬುದು ತಿಳಿದು ಕೊಳ್ಳಲು ಹವಣಿಸುವದೇ ಸಾಹಸ. ಇದುವೇ ನಿಜವಾದ ಸಾಹಸವಲ್ಲದೆ ಅನ್ಯಕ್ಕೆ ಸಾಹಸ ಮಾಡಿ ಹುಸಿಯಾಗಿ ಹಸೆಗೆಡುವರನ್ನು ಕಂಡು ಗಹಗಹಿಸಿ ನಗುತಿಹಳು ಮಾಯೆ.

೮. ನಿಶ್ಚಯಃ— ನಿಶ್ಚಯ = ಸ್ಥಿರ. ಯಾವುದು ಸ್ಥಿರವಸ್ತುವೋ ಅದನ್ನು ವಿಂಗಡಿಸಿ ಸ್ಥಿರವಾಗಿಪ್ಪುದೇ ನಿಶ್ಚಯ. ಇದಕ್ಕೆ ಛಲವೆಂದೂ ಅನ್ನುವದುಂಟು. ಶರಣನಿಗೆ ಯಾವ ಛಲ ಬೇಕು ಎಂಬುದು ಶರಣರು ಹೇಳಿಕೊಂಡಿದ್ದಾರೆ.

ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ ।
ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ ।

ಅದಕಂತೆ ಅಂದಂತೆ ಆಗಲಿ, ಮಾದಂತೆ ಮಾಣಲಿ ಎನಲಾಗದೆಂದು ವಿವರಿಸುವರಲ್ಲದೆ ಛಲಬೇಕು ಹಿಡಿದುದು ಬಿಡಲಾಗದೆಂದು

ಅಡಿಗಡಿಗೆ ಬಂದಡರುತಿಪ್ಪ ಛಲ ನಿನಗೆ ಬೇಡ ಕಂಡಾ ವ್ಯಾಡನೇ ಎನ್ನೊಡನೆ ನೀ ತೊಡರಿ ಸಸಿನೇ ಹೋಗಲಾಯ ಎಂತಂದಡೆಯು ನಾನಂಜುವನಲ್ಲ. ಸಂತತ ಘಾಸಿ ಮಾಡಿದಡೆಯೂ ಕಂತುಹರ ಅಭಯ ಕರನು ಎನ್ನ ನೇಮಕ್ಕೆ ಅಂದರೆ ನಿಶ್ಚಯಕ್ಕೆ ಅಡ್ಡ ಬಂದಡೆಯೂ ಒಡವೆಯ ಸವಿದು ಒಡಲನೊಡ್ಡುವೆ. ಕಡಾಗುವಡೊಮ್ಮೆ ಹಳಚಿ ನೋಡುವೆ. ಬಡವನ ಕೈಕಸುವ ನೋಡು ನೋಡಯ್ಯ ಸಂಗ ಪ್ರಿಯ ಚನ್ನ ಬಂಕೇಶ್ವರ ॥

ಎಂದು ತಮ್ಮ ದೃಢನಿಶ್ಚಯವನ್ನು ವಿವರಿಸಿದ್ದಾರೆ. ಪ್ರಮಥರು ಇಂತಪ್ಪ ನಿಶ್ಚಯವೇ ನಿಜವಾದ ನಿಶ್ಚಯವೆಂದು ಹೇಳಿದ್ದಾರೆ.

೯. ಧೈರ್ಯಃ— ಏನು ಎಡರು ತೊಡರುಗಳು ಬಂದರೂ ನಿಶ್ಚಯದ ಗುರಿಯನ್ನು ಸಾಧಿಸುವದೇ ಧೈರ್ಯ. ತರಹರಿಸದ ಘೋರ ಸಂಸಾರವ ತ್ಯಜಿಸಿ, ಅನುವಿನಿಂದ ಆನು ತಿಳಿದುಕೊಳ್ಳುವದೇ ಧೈರ್ಯ. ಕಾಲಕರ್ಮಕ್ಕೆ ಒಳಗಾಗದೆ ವಿಶಾಲ ಮತಿಯಿಂದ ಮುಂದಡಿ ಇಡುತಿಹುದೇ ಧೈರ್ಯ. ಇಂದ್ರಿಯಾದಿಗಳ ಕೂಡ ಯುದ್ಧಮಾಡಿ ಜಯಿಸುವದು ಸಾಮಾನ್ಯ ಧೈರ್ಯವೇ?

ಶರೀರವೆಂಬ ರಣರಂಗದೊಳು ಮನವೆಂಬ ಸೇನಾಧಿಪನಾಡಳಿತದಲ್ಲಿ ಕರಣಾದಿ ಕಾಲಾಳುಗಳ ಕೂಡ ಅಜ್ಞಾನದಾವರಣ ಶಿಬಿರದಲ್ಲಿ ಅಹಂಕಾರಿಯುಕ್ತ ಜೀವನೊಡನೆ ಯುದ್ಧ ಮಾಡಿ ಮಾಯೆಯನ್ನು ಮುರಿದಿಕ್ಕಿ ಸ್ಥೂಲ ಕೋಟೆಯನ್ನು ಭೇದಿಸಿ, ಸೂಕ್ಷ್ಮ ಕೋಟೆಯಲ್ಲಿ ಪ್ರವೇಶಿಸಿ ಕಾರಣ ಕೋಟೆಯುಲ್ಲಿಳಿದು ನಿಜಾನಂದ ಪ್ರಾಪ್ತಿಮಾಡಿಕೊಂಡ ಧೈರ್ಯವು ಸಾಮಾನ್ಯವೇ ? ಇದುವೇ ನಿಜವಾದ ಧೈರ್ಯವೆಂದು ವೇದಾಗಮಗಳು ಸಾರುತಿಹವು. ಶೃತಿ ಶಾಸ್ತ್ರ ಸಿದ್ಧಾಂತವಿರುವದಲ್ಲದೆ ಅನುಭವಜನ್ಯಮಾಗಿಹುದು.

೧೦. ವಿವೇಕಃ— ವಿವೇಕ = ಅಭೇದವನ್ನು ಸಾಧಿಸಿದ ಬುದ್ಧಿ. ಭೇದವನ್ನು ತ್ಯಜಿಸಿದ ಬುದ್ಧಿಗೆ ವಿವೇಕವೆನ್ನಬಹುದು. ಇದರಲ್ಲಿ (೧) ವರ ವಿವೇಕಿ (೨) ವಿವೇಕಿ ಎಂದು ವಿಂಗಡಿಸಿರುವರು. ಹೇಗೆಂದರೆ:— (೧) ಭೂತ ಪ್ರತಿಬಂಧಕವನು ನೀಗಿದವನೇ ವಿವೇಕಿ. (೨) ಭೂತ ಪ್ರತಿಬಂಧಕವನು ನೀಗದ ಡಾಂಭಿಕವೃತ್ತಿಯೇ ವರವಿವೇಕಿ. ಅದೆಂತೆಂದೊಡೆ, ನಿಜಗುಣಾರಾಧ್ಯರು ಹೇಳಿದಂತೆ.—

"ಆಗದಾಗದು ವರವಿವೇಕಿಗೆ ಮುಕ್ತಿ" ಎಂಬಂತೆ ವೈರಾಗ್ಯದಿಂದ ಅಖಿಳ ಸಂಸಾರವನು ಅಳಿದು ಗುರುವಿನಿಂದ ನಿಗಮಾರ್ಥವ ತಿಳಿದರೂ ಹೊರ್ತು ಮುನ್ನಿನ ಸಂಸರಣದಿಂದ ಕಂಗೆಟ್ಟು ಪರವ ಅಪರೋಕ್ಷವಾಗದಿದ್ದರೆ ಅದು ವರವಿವೇಕವೇ ಅಲ್ಲದೆ ವಿವೇಕವಾಗಲಿಯದು. ಬಹುವಿಧಗಳನುಳಿದು, ಅಹಿತವಾದವನಳಿದು ಸಂಸ್ಮರಣವನು ಮರೆದು ಬುದ್ಧಿಯಲ್ಲಿ ನಿಜಾನಂದ ಕರಿಗೊಂಡರೆ ಅದುವೇ ನಿಜವಾದ ವಿವೇಕವಾಗುವದು.

ಈ ರೀತಿಯಾಗಿ ಸಾತ್ವಿಕನು ಸರ್ವಸಂಗ ಪರಿತ್ಯಾಗ ಮಾಡಿ ಪ್ರತಿಫಲಾಪೇಕ್ಷೆ ಇಲ್ಲದೆ ಬಹಿರಂಗದಲ್ಲಿ ಪ್ರಾಮಾಣಿಕತನವನ್ನೂ ತನ್ನ ದೇಶ, ವಿದೇಶ, ವಿಶ್ವದ ಜ್ಞಾನವನ್ನೂ ಅಂದರೆ ಆಗುಹೋಗುಗಳನ್ನೂ, ತನ್ನ ನಾಡಿನೇಳ್ಗೆ ತನ್ನೇಳ್ಗೆಯ ಬಗ್ಗೆ ತಪವನ್ನೂ, ಸಂತೋಷವನ್ನೂ, ಶಾಂತಿಯನ್ನೂ, ದೇಶಾಭಿವೃದ್ಧಿ ಕಾರ್ಯದಲ್ಲಿ ಉತ್ಸಾಹವನ್ನೂ, ನಿಶ್ಚಯವನ್ನೂ, ತನ್ನ ತನ ತನ್ನ ದೇಶದ ಅನಾಹುತಕ್ಕೆ ಧೈರ್ಯವನ್ನೂ ತಂದುಕೊಂಡು ಅಂತರಂಗದಲ್ಲಿ ಮೇಲೆ ವಿಧಿಸಿದ ದಶಲಕ್ಷಣದಿಂದ ಆತ್ಮಚಿಂತನೆಯನ್ನೂ ಮಾಡುವದೇ ಸಾತ್ವಿಕನ ಗುರಿಯಾಗಿಹುದು. ಇಂತಪ್ಪ ಸಾತ್ವಿಕನು ನೆಲೆಸಿದ ನಾಡೇ ಸುಖದ ಬೀಡು ಆತನು ನುಡಿದುದೇ ವೇದ ನಡೆದುದೇ ಪುಣ್ಯಕ್ಷೇತ್ರವಾಗಿಹುದು. ಅಧ್ಯಾತ್ಮ ಬೀಡಾದ ಕನ್ನಾಡಿನಲ್ಲಿ ಕರ್ನಾಟ ಕಾಂಬೆ. ತನ್ನ ಉದರದಲ್ಲಿ ಸಾತ್ವಿಕರನ್ನು ದಯಪಾಲಿಸಲಿ, ಅಸ್ತು.

————

From
*Shivanubhava*
*Office*
BIJAPUR

R. N. B. 2554



ಶ್ರೀ. ಎಸ್. ವ್ಹಿ. ಹೆಂಜಿ
ಬಸವೇಶ್ವರ ಹಾಯ್‌ಸ್ಕೂಲ
ಪೊ— ಬಾಗಲಕೋಟ





---

ಈ ಪತ್ರಿಕೆಯನ್ನು ಇದರ ಸಂಪಾದಕರಾದ ರಾ॥ ಬ॥ ಪಿ. ಜಿ. ಹಳಕಟ್ಟಿ, ಬಿ. ಎ. ಎಲ್. ಎಲ್. ಬಿ. ಇವರು ವಿಜಾಪೂರ ವಾರ್ಡ ನಂ. [illegible] ಮನೆ ನಂ [illegible] ರಲ್ಲಿರುವ ಹಿತಚಿಂತಕ ಪಾವರ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿ [illegible]




# ವೈದಿಕ ಧರ್ಮಕ್ಕೂ ವೀರಶೈವ ಧರ್ಮಕ್ಕೂ ಬಹಳೇ ವ್ಯತ್ಯಾಸ

( ಬರೆದವರು:- ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ. )

---

ಅನೇಕರು ವೇದಾಂತಕ್ಕೂ ವೀರಶೈವ ಸಿದ್ಧಾಂತಕ್ಕೂ ಹೋಲಿಸುವರು. ವೈದಿಕ ಧರ್ಮವು ವೀರಶೈವ ಧರ್ಮಕ್ಕಿಂತ ಹಿಂದಿನಿಂದ ಬಂದುದೆಂದು ಈಗಸಹಜ ಎಲ್ಲರಿಗೂ ತಿಳಿಯುವಂತೆ ಆಧಾರಗಳು ಕೆಲವು ದೊರೆತಿವೆ. ಮೋಹೆಂಜೆದಾರ ಹರಪ್ಪಾ ಮೊದಲಾದ ಕಡೆಗಳಲ್ಲಿ ವೀರಶೈವ ಅಂದರೆ ಅಂಗದ ಮೇಲೆ ಲಿಂಗ ಧರಿಸುವ ಧರ್ಮದವರ ಕುರುಹುಗಳು ದೊರೆತಿವೆ. ಇವು ದ್ರಾವಿಡ ಸಂಸ್ಕೃತಿಯ ತುಟ್ಟ ತುದಿಯ ಶ್ರೇಷ್ಠತೆಯ ಕುರುಹುಗಳಾಗಿವೆ. ದ್ರಾವಿಡರಿಂದಲೇ ವೈದಿಕ ಧರ್ಮದವರು ಅನೇಕವನ್ನು ಕಡ ತೆಕ್ಕೊಂಡಿದ್ದಾರೆ. ಹೀಗೆ ದ್ರಾವಿಡ ಸಂಸ್ಕೃತಿಯು ಸ್ವತಂತ್ರವಾದುದು ಪುರಾತನವಾದುದು ಆಗಿದೆ. ಆದರೂ ವೈದಿಕರ ತುಳಿತಕ್ಕೆ ಸುಚ್ಚು ನುಗ್ಗಾಗಿ ಕೆಲವು ಕಡೆ ಬಾಳಿ ಬದುಕಿಕೊಂಡಿದೆ. ನಮ್ಮಲ್ಲಿ ಕೆಲವರು ವೈದಿಕ ಧರ್ಮಕ್ಕೆ ವೀರಶೈವವನ್ನು ಹೋಲಿಸಿದರೆ ತಾವು ಶ್ರೇಷ್ಠರೆನಿಸಿಕೊಳ್ಳುವೆವೆಂಬ ಭ್ರಮೆಯಿಂದ ಹೀಗೆ ಮಾಡುತ್ತಿರುವಂತೆ ತೋರುವದು. ಆಗಮಗಳು ಎಲ್ಲಕ್ಕೂ ಮೊದಲು ವೀರಶೈವರ

ಗ್ರಂಥಗಳಾಗಿರುವವು. ಅವುಗಳನ್ನು ವೇದಕ್ಕೂ ಪೂರ್ವದಲ್ಲಿ ಬರೆದರು. ಹಿಂದಿನಿಂದ ಅನೇಕ ಗ್ರಂಥಗಳು ಆಗಮಗಳ ಆಧಾರದಿಂದ ಬರೆಯಲ್ಪಟ್ಟವು. ಸಿದ್ಧಾಂತ ಶಿಖಾಮಣಿ, ವಚನಸಾಹಿತ್ಯ ಮೊದಲಾದ ಅನೇಕ ಗ್ರಂಥಗಳೆಲ್ಲ ಆಗಮ ತತ್ವಗಳ ಆಧಾರದ ಮೇಲೆ ಬರೆಯಲ್ಪಟ್ಟಿರುವವು. ವೀರಶೈವ ಸಾಹಿತ್ಯವು ಸಂಸ್ಕೃತ ಕನ್ನಡ ತೆಲಗುಗಳಲ್ಲಿ ಅಪಾರವಾಗಿ ಬೆಳೆದು ಬಂದಿದೆ. ಆ ಗ್ರಂಥಗಳ ಹೆಸರನ್ನು ಕೊಟ್ಟರೆ ದೊಡ್ಡದೊಂದು ಪಟ್ಟಿಯೇ ಆಗುವದು. ಅದಕ್ಕೆ ಇಲ್ಲಿ ಅವುಗಳ ಹೆಸರುಗಳನ್ನು ಬರೆದಿಲ್ಲ. ಆ ಎಲ್ಲ ಗ್ರಂಥಗಳನ್ನು ನೋಡಿದರೆ ವೈದಿಕ ಧರ್ಮಕ್ಕೂ ವೀರಶೈವ ಧರ್ಮಕ್ಕೂ ಬಹಳವಾಗಿ ವ್ಯತ್ಯಾಸ ಇರುವದು ಸಹಜ ಕಂಡು ಬರುವದು. ಆ ವ್ಯತ್ಯಾಸಗಳನ್ನು ಒಂದೊಂದಾಗಿ ಕೆಳಗೆ ವಿವರಿಸಲಾಗುವದು.

(೧) ವೀರಶೈವ ಸ್ತ್ರೀಯು ಗರ್ಭಿಣಿಯಾದ ಆನೇ ತಿಂಗಳಲ್ಲಿ ಶಾಸ್ತ್ರೋಕ್ತ ವಿಧಿವತ್ತಾಗಿ ಹೊಟ್ಟೆಯ ಮೇಲೆ ಲಿಂಗಧಾರಣ ಮಾಡುವರು. ಯಾಕಂದರೆ ಆಗ ಹೊಟ್ಟೆಯೊಳಗಿನ ಕೂಸಿಗೆ ಜೀವಕಳೆಯು ಬಂದಿರುವದು. ಕೂಸಿಗೆ ಆಗಿನಿಂದಲೇ ವೀರಶೈವ ಸಂಸ್ಕಾರಗಳು ಪ್ರಾರಂಭವಾಗುವವು. ಆದರೆ ವೈದಿಕರಿಗೆ ಈ ಸಂಸ್ಕಾವೇ ಇಲ್ಲ. ಆ ಕೂಸು ಆ ಸ್ತ್ರೀ ಶೂದ್ರರಾಗಿಯೇ ಇರುವರು.

(೨) ವೈದಿಕರನ್ನು ಕಂಡು ಹುಡುಗನಿಗೆ ಮಾತ್ರ ಎಂಟು ವರ್ಷಕ್ಕೆ ಉಪನಯನ (ಮುಂಜವೆ) ಎಂಬ ಕ್ರಿಯೆಯನ್ನು ಮಾಡಿ ಚಂಡಿಕೆಯನ್ನು ಬಿಡುವರು ಅಲ್ಲದೆ ಜನಿವಾರವನ್ನು ಹಾಕುವರು.

ವೀರಶೈವರಲ್ಲಿ ಎಂಟು ವರ್ಷಕ್ಕೆ ಶಿವದೀಕ್ಷೆಯನ್ನು ಕೊಟ್ಟು ಮಂತ್ರೋಪದೇಶ ಮಾಡುವರು. ಇದಕ್ಕೆ ಗಂಡು ಹೆಣ್ಣೆಂಬ ಭೇದವನ್ನು ವೀರಶೈವರು ಮಾಡುವದಿಲ್ಲ.

(೩) ವೀರಶೈವರ ಸ್ತ್ರೀಯರಿಗೂ ಕೂಡ ಅಷ್ಟಾವರಣಗಳುಂಟು. ಅವು ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ ರುದ್ರಾಕ್ಷಿ ಮಂತ್ರ ಇವುಗಳು. ವೈದಿಕ ಸ್ರೀಯರಿಗೆ ಯಾವ ಸಂಸ್ಕಾರವೂ ಇಲ್ಲ. ಇವರು ಹುಟ್ಟಿದಂದಿನಿಂದ ಸಾಯುವ ತನಕ ಶೂದ್ರರಾಗಿಯೇ ಇರುವರು. ಇವರಿಗೆ ಜ್ಞಾನ ಮೋಕ್ಷಕ್ಕೆ ಅಧಿಕಾರವೇ ಇಲ್ಲ. ಸಂಸಾರ ತ್ಯಾಗ ಮಾಡುವ ಅಧಿ

ಕಾರ ಇವರಿಗಿಲ್ಲ. ಆದರೆ ವೀರಶೈವ ಸ್ತ್ರೀಯು ಜ್ಞಾನ ಮೋಕ್ಷಕ್ಕೆ ಅಧಿಕಾರಿಗಳಿರುವರು. ಬೇಕಾದಾಗ ಸಂಸಾರ ತ್ಯಾಗ ಮಾಡುವ ಅಧಿಕಾರವಿರುವದು.

(೪) ಮಡಿ, ಮೈಲಿಗೆ ಜನನ ಸೂತಕ, ಮರಣ ಸೂತಕ, ಮುಟ್ಟಾಗುವ ದೋಷ ಮೊದಲಾದ ಮಡಿ ಮೈಲಿಗೆಗಳು ವೀರಶೈವ ಸ್ತ್ರೀಯರಿಗೆ ಇಲ್ಲ. ಯಾಕಂದರೆ ಅವರ ಅಂಗದ ಮೇಲೆ ಸದಾ ಲಿಂಗದೇವರು ಇರುವದರಿಂದ ದೋಷಗಳು ತಗಲುವದಿಲ್ಲ. ಸದಾ ಪರಿಶುದ್ಧರಾಗಿಯೇ ಇರುವರು.

ವೈದಿಕ ಸ್ತ್ರೀಯರಿಗೆ ಯಾವ ಸಂಸ್ಕಾರ ಇರಲಾರದಕ್ಕಾಗಿ ಅವರಿಗೆ ಮಡಿ ಮೈಲಿಗೆ ಸೂತಕ ಮುಡಚಟ್ಟುಗಳು ಇರುವವು.

(೫) ವೀರಶೈವ ಸ್ತ್ರೀಪುರುಷರು ಅಂಗದ ಮೇಲೆ ಲಿಂಗ ಧರಿಸುವರು. ವಿಭೂತಿ, ರುದ್ರಾಕ್ಷಿ ಧರಿಸುವರು. ಪಾದೋದಕ ಪ್ರಸಾದ ಸೇವಿಸುವರು. ಆದರೆ ವೈದಿಕ ಸ್ತ್ರೀಯರು ಇವುಗಳನ್ನು ಎಂದೂ ಧರಿಸಿಲ್ಲ. ಜನಿವಾರವೂ ಕೂಡ ಇವರಿಗೆ ಇರುವದಿಲ್ಲ. ಲಗ್ನವಾದ ಬಳಿಕ ವೈದಿಕ ಸ್ತ್ರೀಯರ ಜನಿವಾರವನ್ನು ಗಂಡನೇ ಧರಿಸಿ ಎರಡು ಜನಿವಾರಗಳನ್ನು ಮಾಡಿಕೊಳ್ಳುವನು. ಇವರ ಸ್ತ್ರೀಯರು ಸದಾ ಸೇವಾ ಧಾರಿಗಳೇ ಇರುವರು. ಸ್ಥಾನ ಬದಲಾಯಿಸುವದಿಲ್ಲ. ಆದರೆ ವೀರಶೈವ ಸ್ತ್ರೀಯರು, ಭಕ್ತ, ಮಹೇಶ, ಪ್ರಸಾದಿ ಪ್ರಾಣಲಿಂಗಿ, ಶರಣೆ, ಐಕ್ಯ ಹೀಗೆ ಸ್ಥಾನಗಳನ್ನು ಪಡೆದು ಮುಕ್ತಳಾಗುವಳು.

(೬) ವೀರಶೈವ ಸ್ತ್ರೀಪುರುಷರು ಸತ್ತರೆ ಅವರ ಶರೀರವು ಲಿಂಗಮಯವಾಗಿ ಪವಿತ್ರವಾಗಿರುವ ಕಾರಣ ಅವರ ಹೆಣವನ್ನು ಸಿಂಗರಿಸಿ ವಿಮಾನದಲ್ಲಿ ಕೂಡ್ರಿಸಿ ಮಸಣಕ್ಕೆ ಒಯ್ದು ಕುಣಿಯಲ್ಲಿ ಕೂಡ್ರಿಸಿ ಕೈಯಲ್ಲಿ ಲಿಂಗ ಕೊಟ್ಟು ಕೂಡ್ರಿಸಿ ಹುಗಿಯುವರು. ದೇಹ ಬಿಡುವದಕ್ಕಿಂತ ಮೊದಲು ಇಲ್ಲವೆ ದೇಹ ಬಿಟ್ಟಬಳಿಕ ಬೇಕಾದಷ್ಟು ಧಾನಧರ್ಮಗಳನ್ನು ಬಡಬಗ್ಗರಿಗೆ ಮಾಡುವರು. ಸಕಲ ವಾದ್ಯ ವೈಭವಗಳೊಂದಿಗೆ ಹೆಣವನ್ನು ಮೆರಿಸುವರು. ಆದರೆ ವೈದಿಕ ಸ್ತ್ರೀಪುರುಷರು ಸತ್ತರೆ ಸದಗಿಯ ಮೇಲೆ ಮಲಗಿಸಿ ಮಸಣಕ್ಕೆ ಒಯ್ದು ಸುಡುವರು. ಹೆಣದ ಮುಂದೆ ಹೊಸ ಗಡಿಗೆಯಲ್ಲಿ ಬೆಂಕಿಯನ್ನು ಹಿಡಿದುಕೊಂಡು ಹೋಗುವರು. ದಾನಧರ್ಮಗಳನ್ನು ಮಾಡುವರು. ಸುಟ್ಟ ಬಳಿಕ ಎಲುಬುಗಳನ್ನು ಆರಿಸಿ ಹೊಳೆ ಹಳ್ಳಗಳಲ್ಲಿ ಚಲ್ಲುವರು. ಇವರು

ಹತ್ತುದಿನಕ್ಕೆ ಸೂತಕ ಹೋದಬಳಿಕ ದಿನವನ್ನು ಮಾಡುವರು. ವೀರಶೈವರು ಮೂರು ದಿನಕ್ಕೆ ದಿನವನ್ನು ಮಾಡುವರು. ಹೆಣವನ್ನು ಸಿಂಗರಿಸುವದಿಲ್ಲ ವಾದ್ಯವಿಲ್ಲ, ಮೆರಿಸುವದಿಲ್ಲ.

(೭) ವೀರಶೈವರು ಯಜ್ಞ, ಯಾಗ, ಹೋಮಹವನಗಳನ್ನೂ ಮಾಡುವದಿಲ್ಲ. ವೈದಿಕರು ಇವುಗಳನ್ನು ಮಾಡುವರು. ಇಂಥ ಸುಧಾರಣೆಯ ಕಾಲದಲ್ಲಿಯೂ ಕೂಡ ಯಜ್ಞಮಾಡುವರು. ಇದಕ್ಕಾಗಿಯೇ ವಚನಕಾರರು ಇವುಗಳನ್ನು ಬಹುವಾಗಿ ಖಂಡಿಸಿದ್ದಾರೆ. ಕಿಚ್ಚು ದೈವವೆಂದು ಹವಿಯ ನಿಕ್ಕುವ ಹಾರುವರ ಮನೆಯಲಿ ಕಿಚ್ಚೆದ್ದು ಸುಡುವಾಗ ಬಚ್ಚಲ ನೀರು ಬೀದಿಯ ಧೂಳವ ಹೊಯ್ದು ಬೊಬ್ಬಿಟ್ಟೆಲ್ಲರ ಕರೆವರಯ್ಯ? ಕೂಡಲಸಂಗಮ ದೇವ ವಂದನೆಯ ಮರೆದು ನಿಂದಿಸುವರಯ್ಯ.

> ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು ಎಲೆ ಹೋತೆ, ಅಳು ಕಂಡಾ. ವೇದವನೋದಿದವರ ಮುಂದೆ ಅಳು ಕಂಡಾ. ನೀನತ್ತುದಕ್ಕೆ ತಕ್ಕುದ ಮಾಡುವನು ಕೂಡಲಸಂಗಮದೇವಾ.

ಈ ಪ್ರಕಾರ ಹೋಮಹವನ ಯಜ್ಞಯಾಗಗಳನ್ನು ಬಲವಾಗಿ ಅನೇಕ ರೀತಿಯಾಗಿ ಖಂಡಿಸಿದ್ದಾರೆ.

(೮) ವೀರಶೈವರಲ್ಲಿ ಜಾತಿಭೇದಗಳಿಲ್ಲ, ಶಿವಭಕ್ತರನೆಲ್ಲ ಒಂದೇ ಎಂಬೆ. ಅಂಗದ ಮೇಲೆ ಲಿಂಗವಿದ್ದಡೆ ಸಂಗಯ್ಯನೆಂಬೆ. ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಲಿಂಗಧಾರಿಗಳಾಗಿ ಶಿವಭಕ್ತರಾದವರೆಲ್ಲ ಒಂದೇ ಎಂಬೆ. ಭಕ್ತ-ಭವ ಎಂದು ಎರಡೇ ಜಾತಿ. ಲಿಂಗದೇವನ ಪೂಜಿಸಿ ಕುಲವನರಸದಿರು. ಶಿವಭಕ್ತರೆಲ್ಲ ಶಿವಕುಲದವರು. ಲಿಂಗ ಮುಟ್ಟದವನೇ ಕೀಳು ಜಾತಿ. ಶಿವ ಭಕ್ತನೇ ಕುಲಜ. ವೀರಶೈವರಲ್ಲಿ ವೈದಕದವಶಲ್ಲಿ ಇದಂತೆ ಜಾತಿಗಳಲ್ಲಿ ಒಂದೇ ಜಾತಿ, ಒಂದೇ ಕುಲ, ಉದ್ಯೋಗದಿಂದ ಜಾತಿ ಕುಲಗಳಾಗುವದಿಲ್ಲ ಎಂದು ವೀರಶೈವರಲ್ಲಿ ಇರುವದು.

ವೈದಿಕರಲ್ಲಿ ಅನೇಕ ಜಾತಿಗಳು ಮೇಲು ಕೀಳು ಭೇದ ಮುಟ್ಟಬೇಡ. ಮಡಿಮೈಲಿಗೆ ಹೆಚ್ಚು ಕಡಿಮೆ ಇವುಗಳಿಗೆ ಲೆಕ್ಕವಿಲ್ಲ. ಅಲ್ಲಿ ಉದ್ಯೋಗದಿಂದಲೇ ಕುಲಜಾತಿಗಳು ಬಂದಿರುವವು.

(೯) ಉದ್ಯೋಗಗಳೆಲ್ಲ ಒಂದೇ ಎಂದು ವೀರಶೈವರು ನಂಬಿದ್ದಾರೆ. ಯಾವ ಉದ್ಯೋಗವು ಹೆಚ್ಚಲ್ಲ ಕಡಿಮೆಯಲ್ಲ. ಎಲ್ಲರೂ ಸಮಾಜಕ್ಕೆ

ಪೋಷಕರು. ಒಂದಿಲ್ಲದೆ ನಡೆಯುವದಿಲ್ಲೆಂದು ನಂಬಿದ್ದಾರೆ. ಶರೀರದಲ್ಲಿ ಸಕಲ ಇಂದ್ರಿಯಗಳು ಅಷ್ಟೆ. ಹೆಚ್ಚಿಲ್ಲ ಕಡಿಮೆ ಇಲ್ಲ. ಇವೆಲ್ಲ ಶರೀರಕ್ಕೆ ಪೋಷಕವಾಗಿರುವವು ಎಂದು ನಂಬಿದ್ದಾರೆ.

ದೇವ ಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಳ್ಳೆನು. ಭಕ್ತರಲ್ಲಿ ಕಾಯಕದ ಭೇದವ ಮಾಡೆನು. ಸೆಟ್ಟಿ ಎಂಬೆನೆ ಸಿರಿಯಾಳನ ? ಮಡಿವಳನೆಂಬೆನೆ ಮಾಚಯ್ಯನ ? ಡೋಹರನೆಂಬೆನೆ ಕಕ್ಕಯ್ಯನ? ಮಾದರನೆಂಬೆನೆ ಚನ್ನಯ್ಯನ ? ಸಮಗಾರನೆಂಬೆನೆ ಹರಳಯ್ಯನ ? ಕುರುಬನೆಂಬೆನೆ ಗೊಲ್ಲಾಳನ ? ಬೇಡನೆಂಬೆನೆ ಕನ್ನಯ್ಯನ ? ಕುಂಬಾರನೆಂಬೆನೆ ಗುಂಡಯ್ಯನ ? ಜಾಡನೆಂಬೆನೆ ದೇವರದಾಸಿಮಯ್ಯನ ? ಕೊರವೇರನೆಂಬೆನೆ ನುಲಿಯ ಚಂದಯ್ಯನ ? ಎಂದು ಪ್ರಶ್ನೆ ಹಾಕಿದ್ದಾರೆ. ಅಂದರೆ ಇವರ ಉದ್ಯೋಗದ ಮೇಲಿಂದ ಜಾತಿ ಕುಲಗಳನ್ನು ಎಣಿಸುವದಿಲ್ಲ. ಉದ್ಯೋಗವೆಲ್ಲ ಅಷ್ಟೇ. ಉದ್ಯೋಗದಿಂದ ಹೊಟ್ಟೆ ಬಟ್ಟೆಗೆ ಮಾತ್ರ ಸಿಗುವದೆಂದಬಳಿಕ ಅವುಗಳಲ್ಲಿ ಭೇದವಿಲ್ಲವೆಂದು ವೀರಶೈವರು ತಿಳಿದಿದ್ದಾರೆ. ಆದರೆ ವೈದಿಕರು ಉದ್ಯೋಗಗಳಲ್ಲಿ ಭೇದ ಮಾಡಿದ್ದಾರೆ. ಅವುಗಳ ಮೇಲಿಂದಲೇ ಉಚ್ಚ ನೀಚ ಎಂಬ ಜಾತಿ ಕುಲಗಳನ್ನು ಕಲ್ಪಿಸಿದ್ದಾರೆ ಈ ಜಾತಿಗಳಿಗೆ ಲೆಕ್ಕಗಳಿಲ್ಲದಾಗಿದೆ. ಇದಕ್ಕಾಗಿಯೇ ಅನೇಕ ಮಹಾತ್ಮರು ಅವುಗಳನ್ನು ಹೊಡೆದು ಹಾಕಲು ಯತ್ನಿಸುವರು.

(೧೦) ವೀರಶೈವರಲ್ಲಿ ಪರಸ್ಪರ ಅನ್ನೋದಕ ಲಗ್ನಗಳ ವ್ಯಾವಹಾರ ಮಾಡಬೇಕೆಂದು ವಿಧಿಸಿದರು

ಉಂಬಲ್ಲಿ ಉಡುವಲ್ಲಿ ಕ್ರಿಯೆಯಳಿಯಿತ್ತೆಂಬರು. ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರೇನಯ್ಯ ? ಆವ ಕುಲದವನಾದರೇನು ? ಶಿವಲಿಂಗವಿದ್ದವನೇ ಕುಲಜನು. ಕುಲವನರಸುವರೇ ಶರಣರಲ್ಲಿ ಜಾತಿಸಂಕರನಾದಬಳಿಕ ? ಶಿವೇ ಜಾತಃ ಕುಲೇ ಧರ್ಮಃ । ಪೂರ್ವ ಜನ್ಮ ವಿವರ್ಜಿತಃ । ಉಮಾ ಮಾತಾ ಪಿತಾ ರುದ್ರಃ ಈಶ್ವರಃ ಕುಲಮೇವಚ ॥ ಎಂದುದಾಗಿ ಒಕ್ಕುದ ಕೊಂಬೆನವರಲ್ಲಿ. ಕೂಸ ಕೊಡುವೆ. ಎಂದು ಅನ್ನೋದಕ ಲಗ್ನಗಳ ಸಂಬಂಧ ಭೇದ ಮಾಡುವದು ಒಳ್ಳೆಯದಲ್ಲ ಎಂದು ಹೇಳಿದ್ದಾರೆ.

ಆದರೆ ವೈದಿಕರಲ್ಲಿ ಇವುಗಳ ವ್ಯವಹಾರ ನಡೆಯುವದಿಲ್ಲ. ಎಲ್ಲರ ಅಡಿಗೆಗಳು ಬೇರೆ ಬೇರೆ ಆಗುವವು. ಬೇರೆ ಬೇರೆ ಊಟ ಮಾಡುವರು

ಒಂದು ಜಾತಿಯವರು ಇನ್ನೊಂದು ಜಾತಿಗೆ ಹೆಣ್ಣನ್ನು ಕೊಡುವದನ್ನು ವೈದಿಕ ಧರ್ಮವು ಒಪ್ಪುವದಿಲ್ಲ.

(೧೧) ವೀರಶೈವರು ವರ್ಣಗಳನ್ನು ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರರೆಂಬ ಜಾತಿಭೇದವನ್ನು ಒಪ್ಪುವದಿಲ್ಲ. ಇವುಗಳನ್ನು ವೈದಿಕ ಧರ್ಮವು ಒಪ್ಪುವದು. ಈಗ ನಾಲ್ಕೇ ಜಾತಿಗಳಿಲ್ಲ ಈ ಪ್ರತಿಯೊಂದರಲ್ಲಿ ನೂರಿನ್ನೂರು ಜಾತಿಗಳಾಗಿ ಹೋಗಿ ಈ ನಾಲ್ಕರಿಂದಲೇ ಅಸಂಖ್ಯ ಜಾತಿಗಳಾಗಿವೆ. ಬ್ರಾಹ್ಮಣರಲ್ಲಿ ಅಸಂಖ್ಯ ಜಾತಿಗಳಾಗಿವೆ ಒಬ್ಬರಿಗೊಬ್ಬರು ಅನ್ನೋದಕ ಲಗ್ನಗಳ ವ್ಯವಹಾರಗಳನ್ನು ಮಾಡುವದಿಲ್ಲ. ಅಲ್ಲದೆ ಅವರಲ್ಲಿ ಒಬ್ಬರನ್ನೊಬ್ಬರು ಮುಟ್ಟುವದೂ ಇಲ್ಲ. ಇನ್ನು ಉಳಿದ ಮೂರು ವರ್ಣಗಳ ಗತಿಯನ್ನು ವಿಚಾರಿಸಿರಿ. ಇದರಿಂದಲೇ ದೇಶ ಹಾಳಾಗಿ ಹೋಗಿದೆ. ಏನೋ ಈಗ ಜಾಗ್ರತವಾಗಹತ್ತಿದೆ. ಮುಂದೆ ಏನಾಗುವದೋ ನೋಡಬೇಕು.

(೧೨) ವೀರಶೈವರು, ಹೊಲೆಯನಾದರೂ ಸದಾಚಾರಿಯಾದವನೇ ಕುಲಜನೆಂದು ಮನ್ನಿಸುವರು. ಆದರಂತೆ ವಚನಕಾರರು ಸಹ ಹೇಳಿದ್ದಾರೆ.

> ಕೊಲ್ಲುವವನೇ ಮಾದಿಗ. ಹೊಲಸು ತಿಂಬುವವನೇ ಹೊಲೆಯ. ಹೊಲಸು ಕೆಲಸ ಮಾಡುವವನೇ ಹೊಲೆಯ, ಸಕಲ ಜೀವಾತ್ಮರಿಗೆ ಲೇಸನೇ ಬಯಸುವವನೇ ಕುಲಜನು. ಹೊಲೆಯುಂಟೇ ಲಿಂಗವಿದ್ದೆಡೆಯಲ್ಲಿ? ಕುಲಉಂಟೆ ಜಂಗಮವಿದ್ದೆಡೆಯಲ್ಲಿ? ಹೊಲೆಯೊಳಗೆ ಹುಟ್ಟಿ ಕುಲವನರಸದಿರು. ಸತ್ತುದನೆಳೆವ ನೆತ್ತಣದ ಹೊಲೆಯ? ಕೂಡಲ ಸಂಗನ ನಂಬದವನೇ ಹೊಲೆಯ.

ಆದರೆ ವೈದಿಕ ಧರ್ಮದಲ್ಲಿ ಸದ್ಧಾಚಾರ ಮಹತ್ವಕೊಡದೆ ಜಾತಿಗೆ ಹೆಚ್ಚಾಗಿ ಮಹತ್ವಕೊಡುತ್ತಿರುವರು. ಅನೇಕ ಮಹಾತ್ಮರು ಈ ಅನ್ಯಾಯಗಳ ವಿರುದ್ಧ ಹೋರಾಡಿ ಹೋದರು. ಆದರೆ ವೈದಿಕ ಧರ್ಮದ ಕಟ್ಟಳೆಗಳು ಇನ್ನೂ ಸಡಿಲಾಗಿಲ್ಲ.

(೧೩) ವೀರಶೈವರಲ್ಲಿ ಕಾಯಕಕ್ಕೆ ಮಹತ್ವ ಕೊಟ್ಟಷ್ಟು ಮತ್ತಾರೂ ಕೊಟ್ಟಿಲ್ಲ. ಗುರುನಾದಡೂ ಕಾಯಕದಿಂದ ಮುಕ್ತ. ಜಂಗಮುಕ್ಕಾದಡೂ ಕಾಯಕಬೇಕು. ಕಾಯಕದಿಂದ ಲಿಂಗದ ಕುಲ ಹರಿವುದು. ಕಾಯಕವೇ ಕೈಲಾಸ, ಕಾಯಕದಲ್ಲಿ ನಿರತನಾದಡೆ ಗುರುದರುಶನ ಮರೆಯಬೇಕು. ಲಿಂಗ

ಪೂಜೆಯು ಮರೆತುಬಿಡಬೇಕು. ಜಂಗಮ ಮುಂದಿದ್ದರೂ ಹೆಂಗು ಹರಿಯ ಬೇಕು, ಎಂದು ಹೇಳಿದ್ದಾರೆ. ಕಾಯಕದಿಂದ ಸುಖ ಶಾಂತಿಗಳು ಸಮಾಜ ದಲ್ಲಿ ನೆಲಿಸುವವು. ಆದರೆ ವೈದಿಕ ಧರ್ಮದಲ್ಲಿ ಕಾಯಕಕ್ಕೆ ಮಹತ್ವಕೊಡದೆ ವೇದಾಂತಕ್ಕೆ ಜ್ಞಾನಕ್ಕೆ ಮಹತ್ವ ಕೊಟ್ಟಿದ್ದಾರೆ. ವೇದ ಓದಿದವನು ಕಾಯಕ ಮಾಡುವದಿಲ್ಲ. ವೇದವನ್ನು ಬ್ರಾಹ್ಮಣರೇ ಓದಬೇಕು. ಅವರು ಬರೇ ಪೂಜೆ ವೈದಿಕ ಕ್ರಿಯೆಗಳನ್ನು ಮಾಡುವರು. ಉಳಿದ ಉದ್ಯೋಗಗಳನ್ನು ಮಾಡು ವದು ಕೀಳೆಂದು ಬಗೆಯುವರು. ಅದಕ್ಕೆ ಬ್ರಾಹ್ಮಣರ ಮನೆಯಲ್ಲಿ ಇನ್ನೂ ಹೊಲದಲ್ಲಿ ಕಳೆತೆಗೆಯುವದು, ಮುಸುರೇ ತೊಳೆಯುವದು, ಬೀಸುವದು, ದನಗಾಯುವದು, ಒಕ್ಕಲತನ, ಕುಟ್ಟುವದು, ಕಟ್ಟಿಗೆ ಕುಳ್ಳುಗಳನ್ನು ಆರಿಸು ವದು, ಇಂಥ ಉದ್ಯೋಗಗಳು ಕೀಳೆಂದು ಬಗೆದು ಮಾಡುವದಿಲ್ಲ. ಅವರು ಪ್ರತಿಯೊಂದಕ್ಕೆ ಕೂಲಿಯವರನ್ನೇ ಹಚ್ಚುವ ಪದ್ಧತಿ ಇರುವದು. ಈಗೀಗ ಮಹಾತ್ಮರ ಉಪದೇಶದಿಂದ ಕಾಯ್ದೆ ಕಾನೂನುಗಳ ಮೂಲಕ ಇದರಲ್ಲಿ ಸ್ವಲ್ಪ ಸುಧಾರಣೆ ನಡೆದಿದೆ.

(೧೪) ಜ್ಯೋತಿಷ್ಯ, ಹೊತ್ತಿಗೆ, ಮೂಡಣ ಮೊದಲಾದವುಗಳನ್ನು ವೀರಶೈವರು ಕೇಳಬಾರದೆಂದು ವಿಧಿಸಿದ್ದಾರೆ. ಇದರಿಂದ ಮಾನವನು ಹೇಡಿ ಯಾಗಿ ಕಾಯಕ ಮಾಡದೆ ಪ್ರಯತ್ನ ಮಾಡದೆ ಹಣೆಗೆ ಕೈಹಚಿ ಕೂಡ್ರುವ ನೆಂದು ವಿಚಾರಿಸಿ ಹೀಗೆ ವಿಧಿಸಿದ್ದಾರೆ. ಒಂದು ದಿನ ಒಂದೇ ಶಿವಶರಣನೆಂ ಬುವಂಗೆ. ಲಗ್ನವೆಲ್ಲಿಯದೊ ವಿಘ್ನವೆಲ್ಲಿಯದೊ ಸಂಗಯ್ಯ? ದೋಷವೆಲ್ಲಿ ಯದೊ ದುರಿತವೆಲ್ಲಿಯದೊ ಸಂಗಯ್ಯ? ನಿಮ್ಮ ಮಾಣದೆ ನೆನೆವಂಗೆ ಭವ ಕರ್ಮವೆಲ್ಲಿಯದೊ? ಶುಭಲಗ್ನವೆನ್ನಿರಯ್ಯ. ರಾಶಿ ಕೂಟ ಋಣ ಸಂಬಂಧ ಉಂಟೆಂದು ಹೇಳಿರಯ್ಯ. ಚಂದ್ರಬಲ ತಾರಾಬಲ ಉಂಟೆಂದು ಹೇಳಿರಯ್ಯ. ನಾಳಿನದಿನಕ್ಕಿಂತ ಇಂದಿನ ದಿನವೇ ಲೇಸೆಂದು ಹೇಳಿರಯ್ಯ. ಆದರೆ ವೈದಿಕ ಧರ್ಮದವರು ಇವುಗಳನ್ನು ಮನ್ನಿಸುವರು. ಇವುಗಳ ನೆರವು ಇಲ್ಲದೆ ಮುಂದೆ ಸಾಗುವದಿಲ್ಲ. ಅವುಗಳನ್ನು ಕೇಳಬಾರದು, ನಂಬಬಾರದು ಎಂದು ಎಲ್ಲಿಯೂ ಹೇಳಿಲ್ಲ. ಪ್ರತಿಯೊಂದಕ್ಕೂ ಮುಹೂರ್ತ ಕೇಳುವದು ಹೆಚ್ಚಾದದ್ದರಿಂದ ಜೋಯಿಸರು ಭಟ್ಟರು ಎಂದು ಜಾತಿಯಾಗಿಬಿಟ್ಟಿದೆ.

(೧೫) ವೀರಶೈವವು ಶಕ್ತಿವಿಶಿಷ್ಟಾದ್ವೈತವಾಗಿರುವದು. ಶಿವಶಕ್ತಿಯರು ಇದ್ದಾರೆ. ಅವರು ಅವಿನಾಭಾವ ಸಂಬಂಧದಿಂದ ಇದ್ದಾರೆ. ಶಿವನ ನೆನಹು

ಸಂಕಲ್ಪದಿಂದ ಈ ಶಕ್ತಿ ಶಿವನಿಂದ ಹೊರಹೊರಟು ಇದೆಲ್ಲ ಸೃಷ್ಟಿಯನ್ನು ನಿರ್ಮಿಸಿ ಆಳುವಳು. ಶಿವನು ಸಾಕ್ಷೀಭೂತನು ಇವಳು ಶಿವನಿಗಾಗಿ ಆಟ ವಾಡುವಳು. ವೀರಶೈವರು ಪ್ರಕೃತಿ-ಪುರುಷ-ಪರಶಕ್ತಿ-ಪರಶಿವ ತತ್ವಗಳನ್ನು ಒಪ್ಪುವರು. ಪ್ರಕೃತಿ ಜಡವಿದೆ. ಇದರ ಸಂಗದಿಂದ ಪುರುಷನು ಜಾಡ್ಯ ಕ್ಕೊಳಗಾಗಿದ್ದಾನೆ. ಪರಶಕ್ತಿಯು ಮಾತ್ರ ಚೈತನ್ಯ ಸೂಚಕವಾಗಿರುವಳು. ಪರಶಕ್ತಿಯುತನಾದ ಪರಶಿವನು ಚೈತನ್ಯಾತ್ಮಕನಾಗಿರುವನು. ಇದೇ ವೀರ ಶೈವ ಶಕ್ತಿವಿಶಿಷ್ಟಾದ್ವೈತದ ಸಿದ್ಧಾಂತವು.

ಆದರೆ ವೈದಿಕ ಧರ್ಮವು ಅದ್ವೈತ, ದ್ವೈತ, ವಿಶಿಷ್ಟಾದ್ವೈತವೆಂದು ಮೂರು ಪಂಗಡವಾಗಿದೆ. ಜಗವು ಭ್ರಮೆ ಭ್ರಾಂತಿ ಎನ್ನುವರು. ನಸುಗತ್ತಲಲ್ಲಿ ಹಗ್ಗನ್ನು ನೋಡಿ ಹಾವೆಂದು ಭ್ರಮಿಸಿದಂತೆ ಈ ಜಗವು ಅಜ್ಞಾನ ದಿಂದ ತೋರುವದು. ನಿಜವಾಗಿ ಜಗವು ಸುಳ್ಳೆಂದು ಹೇಳುವರು. ಬ್ರಹ್ಮ ನೊಬ್ಬನೆ ಸತ್ಯನಾಗಿದ್ದಾನೆಂದು ನಂಬುವರು. ಇದರಿಂದ ಹೇಡಿಗಳಾಗಿ ಕಾಯಕ ಮಾಡದೆ. ಅಧಮರಾದವರ ಸಂಖ್ಯೆಯೇ ಹೆಚ್ಚಾಗಿರುವದು.

ದ್ವೈತವು ಜೀವಾತ್ಮ-ಪರಮಾತ್ಮ ಎಂಬ ಎರಡು ಭೇದಗಳನ್ನು ನಿರಂತರ ಒಪ್ಪುವರು. ಜೀವ-ಜಡದಲ್ಲಿ, ಜೀವ ಜೀವರಲ್ಲಿ ಜಡಪರಮರಲ್ಲಿ, ಜಡ-ಜಡದಲ್ಲಿ ಭೇದವನ್ನು ಮನ್ನಿಸುವರು.

ವಿಶಿಷ್ಟಾದ್ವೈತವು ಚಿತ್ ಅಚಿತ್ ಈಶ್ವರ ಮೂರು ತತ್ವಗಳಿರುವವೆಂದು ಹೇಳುವರು. ಚಿತ್ (ಜೀವ) ಅಚಿತ್ (ಪ್ರಕೃತಿ) ಇವು ದಾಳಿಂಬ ಹಣ್ಣಿನ ಕಾಳಿನಂತೆ ಈಶ್ವರನಲ್ಲಿ ಇರುತ್ತವೆ. ಚಿದ ಚಿತ್ತಿನಿಂದ ಕೂಡಿದ ಪರಮಾತ್ಮ ಒಂದೆಯಾಗಿದೆ ಎಂದು ನಂಬುತ್ತಾರೆ.

ಈ ಪ್ರಕಾರ ವೈದಿಕ ಸಿದ್ಧಾಂತದಿಂದ ವೀರಶೈವ ಸಿದ್ಧಾಂತವೂ ಕೂಡ ಭೇದ ಉಳ್ಳದ್ದಾಗಿ ಈಗೀಗ ಶ್ರೀ ರಾಮಕೃಷ್ಣರು ಶ್ರೀ ಅರವಿಂದರು ವೀರಶೈವ ಸಿದ್ಧಾಂತಕ್ಕೆ ಸರಿಹೋಗುವಂತೆ ಹೇಳುವರು. ಜಗವೇ ಶಕ್ತಿಯನ್ನು ಒಪ್ಪು ವಂತಾಗಿದೆ. ವೇದಾಂತಿಗಳು ಇಹ ಪರಕ್ಕೆ ಭೇದವನ್ನು ಮಾಡುವರು. ವೀರ ಶೈವರು ಇಹಪರದಲ್ಲಿ ಭೇದವನ್ನು ಮಾಡುವದಿಲ್ಲ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು. ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವು. ಈ ಲೋಕದಲ್ಲಿ ಮತ್ತನಂತ ಲೋಕ, ಶಿವಲೋಕ ಶಿವಾಚಾರ. ಭಕ್ತನಂಗಣವೇ ವಾರಣಾಸಿ. ಕಾಯಕವೇ ಕೈಲಾಸ. ಭಕ್ತ

ನಿದ್ದ ತಾವೇ ದೇವಲೋಕ. ಸಂಸಾರಕ್ಕೆ ಮಿಥ್ಯ ಎಂದು ವೀರಶೈವನು ಹೇಳುವದಿಲ್ಲ. ಈ ಪ್ರಪಂಚ (ಲೋಕ) ಶಿವಪ್ರಪಂಚವನ್ನಾಗಿ ಮಾಡುವದೇ ವೀರಶೈವನ ಕರ್ತವ್ಯ. ಮುಕ್ತಿಯನ್ನು ಕೂಡ ಅವನು ಬಯಸುವದಿಲ್ಲ.

(೧೫) ವೀರಶೈವ ಧರ್ಮವು ಬೇಕಾದಷ್ಟು ಬೇಕಾದಂತೆ ಗಳಿಸಿ ಐಷ ಆರಾಮುದಲ್ಲಿರಬೇಕೆಂದು ಹೇಳುವದಿಲ್ಲ. ಅದರಲ್ಲಿ ತನ್ನ ಉದರಂಭರಣಕ್ಕೆ ಸಾಲುವಷ್ಟು ಇಟ್ಟುಕೊಂಡು ಉಳಿದುದನ್ನು ಸಮಾಜಸೇವೆಗೆ ದಾಸೋಹ ಭಾವದಿಂದ ಅರ್ಪಿಸುವದೇ ಆಗಿದೆ. ವೀರಶೈವರಲ್ಲಿ ದಾಸೋಹವು ಬಹು ಮಹತ್ವದ್ದಿದೆ. ಅನ್ನ ದಾಸೋಹ, ಜ್ಞಾನ ದಾಸೋಹ, ಧನ ದಾಸೋಹ, ವಿದ್ಯಾದಾಸೋಹವೆಂದು ಅನೇಕ ದಾಸೋಹಗಳಿರುವವು. ಅದಕ್ಕಾಗಿ ಇನ್ನೂ ಅನೇಕ ವೀರಶೈವರ ಮಠಗಳಲ್ಲಿ ಅನ್ನ ವಸ್ತ್ರ ವಿದ್ಯ ಜ್ಞಾನ ವೊದಲಾದವುಗಳ ದಾಸೋಹ ನಡೆದಿರುವದು. ಇದರಿಂದ ಧನವು ಗಳಿಸಿದಲ್ಲೇ ಸಂಗ್ರಹವಾಗಿ ಉಳಿದು ಸಮಾಜಕ್ಕೆ ಬಡತನ ಬರಬಾರದೆಂದು ಆರ್ಥಿಕ ಸಮತೆಯನ್ನು ಸಾಧಿಸಿದ್ದಾರೆ.

ನಾನು ಆರಂಬವ ಮಾಡುವೆನಯ್ಯಾ ಗುರುಪೂಜೆಗೆಂದು. ನಾನು ಬೇವ ಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು. ನಾನು ಪರಸೇವೆಯ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು. ನಾನಾವ ಕರ್ಮಂಗಳ ಮಾಡಿ ದರೂ ಆ ಕರ್ಮದ ಫಲಭೋಗವ ನೀ ಕೊಡುವೆ ಎಂಬುದ ನಾ ಬಲ್ಲೆ. ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ ಮಾಡೆನು. ನಿಮ್ಮ ಸೊಮ್ಮು ನಿಮಗೆ ಸಲಿಸುವೆನು. ನಿಮ್ಮಾಣೆ ಕೂಡಲಸಂಗಮದೇವ.

ತ್ರಿವಿಧ ದಾಸೋಹವಿರುವದು— ತನು ದಾಸೋಹ, ಮನ ದಾಸೋಹ, ಧನ ದಾಸೋಹ ಅಂದರೆ ಸಮಾಜಕ್ಕೆ ತನು ಮನ ಧನ ಕೊಟ್ಟು ದುಡಿ ಎಂದು ಹೇಳುವರು. ಇದಕ್ಕೆಲ್ಲ ಪ್ರಸಾದಿಸ್ಥಲವೆನ್ನುವರು. ಅಂದರೆ ಗಳಿಸಿದ ಗಳಿಕೆ ಯನ್ನು ಹೆಚ್ಚಾಗಿ ಭೋಗಿಸದೆ ಪ್ರಸಾದರೂಪದಿಂದಲೇ ಭೋಗಿಸಬೇಕೆಂದು ಅದರ ಮರ್ಮ. ಅದಕ್ಕಾಗಿ ಮನೆ ಬಡವಾದರೂ ಮನ ಘನಸಂಪನ್ನವಾ ಗಿರಬೇಕೆಂದು ಹೇಳಿದ್ದಾರೆ.

ಆದರೆ ವೈದಿಕಧರ್ಮದಲ್ಲಿ ಇದೆಲ್ಲಕ್ಕೂ ವಿರೋಧ ವ್ಯತ್ಯಾಸವೇ ಇರು ವದು. ಬೇಕಾದಂತೆ ಬೇಕಾದಷ್ಟು ಗಳಿಸಿ ಬೇಕಾದಷ್ಟು ಭೋಗಿಸಲಿಕ್ಕೆ ಮನು ವಿನ ಕಾಯ್ದೆಯಿಂದಲೇ ವಿಧಿಸಲಾಗಿದೆ.

(೧೬) ವೀರಶೈವರಿಗೆ ಧಾರ್ಮಿಕ ಸಮಾನತೆ ಹಾಗೂ ಸ್ವಾತಂತ್ರ್ಯತೆ ಇರುವದು. ಎಲ್ಲರಿಗೂ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳು ಸರಿ ಸಮಾನವಾಗಿಯೇ ಇರುವವು. ಸಗಲ ಉದ್ಯೋಗಗಳು ಒಂದೇ ಜಾತಿ ಇಲ್ಲ. ಕುಲವಿಲ್ಲ. ಶಿವಭಕ್ತರೆಲ್ಲ ಒಂದೇ ಎಂದ ಮೇಲೆ ಧಾರ್ಮಿಕ ಸಮಾನತೆಗೆ ಎಂಥ ಅವಕಾಶವಿರುವದು ವಿಚಾರಿಸಿರಿ. ಯೋಗ್ಯತೆ, ತ್ಯಾಗ, ವೈರಾಗ್ಯ, ಜ್ಞಾನ, ಬ್ರಹ್ಮಚರ್ಯ ಪಾಲನೆ, ಸೇವೆ, ಸತ್ಯ, ಅಹಿಂಸೆ ಮೊದಲಾದ ಹೆಚ್ಚಿನ ಗುಣಗಳಿಂದಲೇ ಅವನಿಗೆ ಗುರುತ್ವಬರುವದು. ನಮ್ಮಲ್ಲಿ ಈಗಿನ ಗುರುತ್ವದ ಪದ್ಧತಿಯಾಗಲಿ, ಅಯ್ಯಾಚಾರದ ಪದ್ಧತಿಯಾಗಲಿ ಬಂದುದು ವೈದಿಕ ಧರ್ಮದಿಂದ ಬಂದು ಸೇರಿರಬೇಕೆಂದು ಅನಿಸುವದು. ಇಲ್ಲದಿದ್ದರೆ ವೀರಶೈವ ತತ್ವದ ಪ್ರಕಾರ ಈಗ ಗುರುವರ್ಗವೇ ಇರುತ್ತಿರಲಿಲ್ಲ. ಅದು ಯೋಗ್ಯತೆಯ ಮೇಲೆ ಅವಲಂಬಿಸಿರುತ್ತಿತ್ತು. ಇದರಿಂದಲೇ ನಮ್ಮ ತತ್ವ ಸಮಾಜ ಸಿದ್ಧಾಂತಗಳೆಲ್ಲ ಹಾಳಾಗಿ ಐಕ್ಯತೆ ಸಂಘಟನೆಗಳಿಲ್ಲದಾಗಿವೆ.

ಆದರೆ ವೈದಿಕ ಧರ್ಮದಲ್ಲಿ ವರ್ಣಗಳು, ಜಾತಿಗಳು, ಕುಲಗಳು ಇದ್ದುದರಿಂದ ಗುರುತ್ವವು ಒಂದೇ ವರ್ಗಕ್ಕೆ ಬಂದಿದೆ. ಸ್ತ್ರೀಯರೂ, ಶೂದ್ರರೂ ಮೋಕ್ಷಕ್ಕೆ ಅಧಿಕಾರಿಗಳಲ್ಲ. ಬ್ರಾಹ್ಮಣರಿಗೇ ಮೋಕ್ಷ. ಉಳಿದವರೆಲ್ಲ ಸೇವಾ ಧಾರಿಗಳು. ಕ್ಷತ್ರಿಯರು ಇವರನ್ನು ಸಂರಕ್ಷಿಸುವವರು. ವೈಶ್ಯರು ಇವರಿಗಾಗಿ ವ್ಯಾಪಾರ ಒಕ್ಕಲುತನ ಮಾಡಬೇಕು. ಶೂದ್ರರು ಕೂಲಿ ಸೇವೆ ಮಾಡಬೇಕೆಂದು ವಿಧಿಸಲಾಗಿದೆ. ಅದಕ್ಕೆ ವೈದಿಕ ಧರ್ಮದಲ್ಲಿ ಸಮಾನತೆ ಇಲ್ಲ. ಸ್ವಾತಂತ್ರ್ಯವೂ ಇಲ್ಲ. ಭೇದವು ಎಲ್ಲ ಕಡೆಗೂ ಮನೆಮಾಡಿಕೊಂಡಿರುವದು. ಇದನ್ನು ಕಳೆಯುವದಕ್ಕಾಗಿ ಮಹಾತ್ಮರು ಸದಾ ಯತ್ನಿಸುವರು. ಆದರೂ ಸುಧಾರಣೆ ಇಲ್ಲ.

(೧೮) ವೀರಶೈವರಲ್ಲಿ ಸಾಮಾಜಿಕ ಸಮಾನತೆ ಇರುವದು. ಸಾರ್ವಜನಿಕ ಕೆಲಸಗಳಲ್ಲಿ ಎಲ್ಲರಿಗೂ ಅಷ್ಟೇ ಹಕ್ಕುಬಾಧ್ಯತೆಗಳಿರುವವು. ಅದಕ್ಕಂತೆ ಶಿವಾನುಭವ ಮಂಟಪದಲ್ಲಿ ಎಲ್ಲ ಜಾತಿಯ ಶರಣರೂ ಸರಿಸಮಾನ ಸ್ಥಾನಗಳಲ್ಲಿ ಕುಳಿತೇ ಶಿವಾನುಭವ ಚರ್ಚೆಯಲ್ಲಿ ಭಾಗವಹಿಸಿ ವಾಸಿಸುತ್ತಿದ್ದರು. ಅಲ್ಲದೆ ವಚನಗಳನ್ನೂ ಸಹ ರಚಿಸಿದ್ದಾರೆ. ಅವರೆಲ್ಲರೂ ಶರಣಸ್ಥಲವನ್ನು ಹತ್ತಿ ಎಲ್ಲರೂ ಸಮಭಾವದಿಂದಲೇ ಇದ್ದರು. ಆದರೆ ವೈದಿಕ ಧರ್ಮದಲ್ಲಿ ಇಂಥ ಅನುಭವಮಂಟಪಗಳಿರಲಿಲ್ಲ. ಬ್ರಾಹ್ಮಣರೇ ಶಾಸ್ತ್ರ ವೇದಾಂತ ಓದ

ಲಿಕ್ಕೆ ಅಧಿಕಾರಿಗಳು, ಉಳಿದವರು ಓದಕೂಡದು, ಮಂತ್ರ ಅನ್ಯರಿಗೆ ಹೇಳ ಕೂಡದು, ವಿದ್ಯವನ್ನು ಉಳಿದವರು ಕಲಿಯುತ್ತಿರಲಿಲ್ಲ. ಭೂಲೋಕದ ದೇವರೆಂದರೇನೆ ಬ್ರಾಹ್ಮಣರು, ಅದಕ್ಕಾಗಿ ಭೂಸುರರೆಂದು ಹೆಸರು ಬಂದಿದೆ. ಅದರಂತೆ ಅಯ್ಯಗಳಿಗೂ ಕೂಡ ಭೂಲೋಕದ ರುದ್ರರೆಂದು ಹೇಳುವರು. ಇದಾದರೂ ವೈದಿಕ ಧರ್ಮದಿಂದ ಬಂದಂತೆ ತೋರುವದು. ಈ ವೈದಿಕ ಧರ್ಮದಿಂದ ಕಡ ತಂದವುಗಳನ್ನು ಬಿಡುವದು ಒಳಿತು. ವೀರಶೈವರಲ್ಲಿ ಕೆಲವರು ಮಡಿ ಮೈಲಿಗೆ ಎಂದು ಬಹುವಾಗಿ ಪಾಲಿಸುವರು ಕೆಲವರು ಹೋಮಹವನಗಳನ್ನು ಸಹ ಮಾಡುವರು ಅಲ್ಲದೆ ಗುರುತ್ವದ ಗುತ್ತಿಗೆಯೂ ಕೂಡ ಇರುವದು. ಇವೆಲ್ಲವುಗಳನ್ನು ನಮ್ಮವರು ಎಷ್ಟು ಜಾಗ್ರತೆ ಬಿಡು ವರೋ ಅಷ್ಟು ಜಾಗ್ರತೆಯಾಗಿ ವೀರಶೈವವು ಮುಂದುವರಿದು ವಿಶ್ವಧರ್ಮ ವಾಗುವದು. ಬರೇ ಬಾಯಿಯಿಂದ ವೀರಶೈವ ತತ್ವಗಳು ವಿಶಾಲವಾಗಿವೆ. ಅವೆಲ್ಲ ವಿಶ್ವಧರ್ಮವಾಗಲಿಕ್ಕೆ ಬಹಳೇ ಯೋಗ್ಯವಾಗಿವೆ ಎಂದ ಮಾತ್ರಕ್ಕೆ ಕೆಲಸವಾಗದು. ಅದರಂತೆ ಹಿರಿಯರು ಸ್ವಾಮಿಗಳು ನಡೆದು ಪ್ರಚಾರ ಮಾಡಿ ದರೆ ಒಳಿತಾಗುವದು ಬರೇ ಬಾಯಿ ಮಾತುಗಳಿಂದ ಏನೂ ಪ್ರಯೋಜ ನವಿಲ್ಲ.

ವೈದಿಕ ಧರ್ಮದ ಬೋಧೆಗಳಿಗಾಗಿ, ಹಿಂಸೆಗಾಗಿ, ಮೇಲು ಕೀಳೆಂಬ ತ್ರಾಸಿಗಾಗಿ ಕ್ಷತ್ರಿಯ ಅರಸರಲ್ಲಿ ಜನಿಸಿದ ಗೌತಮಬುದ್ಧನು ಹೊಸಧರ್ಮ ವನ್ನೇ ಸ್ಥಾಪಿಸಿದನು. ಮುಂದೆ ಆ ತ್ರಾಸು ಪುನಃ ಆಗಹತ್ತಲು ಬ್ರಾಹ್ಮಣ ರಲ್ಲಿ ಬಸವೇಶ್ವರ ಮಹಾತ್ಮನು ಜನಿಸಿ ಮೇಲೆ ವಿವರಿಸಿದ ವೀರಶೈವ ತತ್ವ ಗಳನ್ನು ಬೆಳಿಸಿದನು. ಅವನು ಸಣ್ಣ ಹುಡುಗನಿದ್ದಾಗ ವೈದಿಕ ಧರ್ಮಕ್ಕೆ ವಿರೋಧ ಮಾಡಹತ್ತಿದನು. ೮ ವರ್ಷದವನಾದಾಗ ಉಪನಯನವನ್ನೇ ತಿರ ಸ್ಕರಿಸಿ ಮನೆಬಿಟ್ಟು ಕೂಡಲಸಂಗಮಕ್ಕೆ ಬಂದು ವೀರಶೈವ ದೀಕ್ಷೆಯನ್ನು ಪಡೆದು ಬ್ರಾಹ್ಮಣ ಧರ್ಮವನ್ನೇ ತೊರೆದದ್ದು ಏನು ತೋರಿಸುವದು ವಾಚ ಕರೇ ಊಹಿಸಿರಿ. ಪರಶಿವನ ಇಚ್ಛೆಯಂತೆ ಇದೆಲ್ಲ ನಂದಿ ಅವತಾರ ದ್ವಿತಿಯ ಶಂಭುವೆನಿಸಿದ ಬಸವೇಶ್ವರರು ಹಾಳಾದ ವೀರಶೈವ ಮತವನ್ನು ಪುನಃ ಉದ್ಧಾರ ಮಾಡಿದ್ದು ನೋಡಿದರೆ ಪರಮಾತ್ಮನ ಪೂರ್ವ ಯೋಚನೆಯಂತೆ ಇವೆಲ್ಲ ಕೆಲಸಗಳು ನಡೆದವೆಂದು ಸಕಲರಿಗೂ ವಿಚಾರ ಹೊಳೆಯದೆ ಇರ ಲಾರದು. ಸಣ್ಣ ಬಾಲಕನಲ್ಲಿ ಈ ಪ್ರಕಾರದ ಬುದ್ಧಿ ಭಾವನೆಗಳು ಹೇಗೆ ಬಂದವು ? ಇದಕ್ಕೆ ಪ್ರೇರಕರಾರು ? ಇದೇನು ತತ್ವಜ್ಞಾನಗಳನ್ನೆಲ್ಲ ತಿಳಿದ

ಬಳಿಕ ಬುದ್ಧನಂತೆ ಬೇರೆ ತತ್ವಗಳು ಬಂದವುಗಳೂ ಅಲ್ಲ. ಜನಿಸುವದ ಕ್ಕಿಂತ ಪೂರ್ವದಲ್ಲಿ ಇದರ ಯೋಜನೆ ನಡೆದಿತ್ತೆಂದು ಅನಿಸುವದು. ಅದ ರಂತೆ ಅವನು ಜನನವಾದ ಮೇಲೆ ಸಹ ಬ್ರಾಹ್ಮಣತ್ವಕ್ಕೆ ವಿರೋಧವನ್ನೇ ಚಿಕ್ಕವನಿದ್ದಾಗಲೇ ಕೂಸು ಇರುವಾಗಲೇ ಮಾಡಹತ್ತಿದ್ದು ವಿಚಾರಶೀಲರಿಗೆ ಹೊಳೆಯುವದು. ಪರಮಾತ್ಮನು ಈ ವೈದಿಕ ಧರ್ಮದ ಈ ಕಟ್ಟುನಿಯಮಗಳಿಗೆ ಅವುಗಳನ್ನೆಲ್ಲ ತೊರೆದು ಹಾಕಲೋಸುಗ ಸಮತೆಯ ವೀರಶೈವ ಧರ್ಮದ ಉದ್ಧಾರವನ್ನು ಬಸವೇಶ್ವರನ ಅವತಾರಲಿಂಗ ಮಾಡಿಸಿದ್ದು ಒಳ್ಳೇ ನಂಬ ಲರ್ಹವಾದ ನಿಜಸಂಗತಿ ಎಂದು ಹೇಳಬಹುದು. ಅನೇಕರು ಹಯಸ್ಸಾದ ಬಳಿಕ ಎಲ್ಲ ತತ್ವಗಳ ಅಭ್ಯಾಸವನ್ನು ಮಾಡಿ ಯೋಗ್ಯ ಕಂಡದ್ದಕ್ಕೆ ಕೈಹಾಕುವ ರೂಢಿಯಿರುವದು. ಆದರೆ ಬಸವೇಶ್ವರನು ಇಂಥ ರೂಢಿಗಳಿಗೆ ಒಳಗಾಗದೆ ಪರಮಾತ್ಮನ ಯೋಜನೆಯಂತೆ ಅವತಾರತಾಳಿ ಕಾರ್ಯಮಾಡಿದನೆಂದು ಹೇಳಲಿಕ್ಕೆ ಏನೂ ಅಡ್ಡಿ ಇಲ್ಲ. ಇವರಿಗೆ ೩೬ ವರ್ಷ ಆಯುಷ್ಯ ಎಂಟು ವರ್ಷ ಮನೆಯಲ್ಲಿ ಬ್ರಾಹ್ಮಣ್ಯದ ವಿರುದ್ಧ ಸದಾತಂಟೆ ಮಾಡುವದರಲ್ಲಿ ಹೋಯಿತು. ೧೬ ವರ್ಷ ಸಾಧನ ಮಾಡುವದರಲ್ಲಿ ಕಳೆಯಿತು. ೩ ವರ್ಷ ಪ್ರವಾಸದಲ್ಲಿ ಕಳೆಯಿತು. ಉಳಿದ ೯ ವರ್ಷಗಳನ್ನು ಧರ್ಮದ ಉದ್ಧಾರದಲ್ಲಿ ರಾಜಕಾರಣದಲ್ಲಿ ಮಂತ್ರಿಕರಣಿಕ ಮೊದಲಾದವುಗಳಲ್ಲಿ ಕಲ್ಯಾಣದಲ್ಲಿ ಕಳೆದ ದ್ದನ್ನು ಧರ್ಮಕ್ರಾಂತಿಗಾಗಿ ಆರೇಳು ವರ್ಷ ಸಿಕ್ಕಂತೆ ತೋರುವದು. ಇಷ್ಟು ಅಲ್ಪಕಾಲದಲ್ಲಿ ಇಂಥ ಅದ್ಭುತ ಸುಧಾರಣೆಯನ್ನು ದೇಶದ ತುಂಬ ೮೦೦ ವರ್ಷ ಗಳ ಹಿಂದೆ ಮಾಡಿದ್ದನ್ನು ವಿಚಾರಿಸಿದರೆ ಪರಶಿವನ ಪೂರ್ವ ಯೋಜನೆ ಯಂತೆ ಇದೆಲ್ಲ ನಡೆಯಿತಲ್ಲದೆ ಬೇರೇ ಇಲ್ಲ. ಅದಕ್ಕೆ ವೀರಶೈವವು ಸಮ ಭಾವದ ಸಮತೆಯ ಧರ್ಮವಾಗಿದೆ. ಇದು ವಿಶ್ವಧರ್ಮವಾಗಲಿಕ್ಕೆ ಏನೂ ಅಡ್ಡಿ ಇಲ್ಲ. ಎಲ್ಲ ಮಾನವ ಕೋಟಿಗೆ ಒಗ್ಗುವಂಥ ತತ್ವಗಳು ಇದರಲ್ಲಿ ಅಡಕವಾಗಿವೆ. ಇದನ್ನು ಒಳ್ಳೇ ರೀತಿಯಿಂದ ಪ್ರಚಾರ ಮಾಡಿದರೆ ಜಗತ್ತೇ ಈ ವಿಶ್ವಧರ್ಮದಂತೆ ನಡೆಯಲು ಹತ್ತುವದೆಂದು ಅನಿಸುವದು.

# ಎಂ. ಎಲ್. ನಾಗಣ್ಣನವರಿಗೆ ಎಚ್ಚರಿಕೆ.

( ಬರೆದವರುಃ— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ. ( ಇಂಡಿ )

............●............

ವೀರಶೈವವು ಶಕ್ತಿವಿಶಿಷ್ಟಾದ್ವೈತವೇ ಹೌದು! ಹೌದು! ಅಷ್ಟೇ ಏಕೆ? ಜಗತ್ತಿನ ಯಾವತ್ತೂ ಧರ್ಮಗಳೂ ಕೂಡ ನಿಜವಾಗಿ ಶಕ್ತಿವಿಶಿಷ್ಟಾದ್ವೈತಗಳೇ ಆಗಿರುವವೆಂದು ಶಿವಾನುಭವದಲ್ಲಿ ವಿವರಿಸಲಾಗಿದೆ. ಆದರೆ ವೀರಶೈವರಾಗಿ ಹುಟ್ಟಿ ನೀವೊಬ್ಬರೇ ಅದ್ವೈತವೆಂದು ಹುಯ್ಯಲ ಎಬ್ಬಿಸುವ ಕಾರಣವೇನು ? ಉಳಿದವರಿಗೆ ತಮ್ಮ ಇಷ್ಟ ಬಂದಂತೆ ನಡೆಯಲಿಕ್ಕೆ ಬರೆಯಲಿಕ್ಕೆ ಸ್ವಾತಂತ್ರ್ಯವಿರುವದು. ಅದ್ವೈತ ಬೇಕಾದರೆ ಅತ್ತ ಕಡೆಗೆ ಹೋಗಲು ನಿಮಗೆ ಯಾರೂ ಅಡ್ಡೀ ಮಾಡಿಲ್ಲವಷ್ಟೇ ?. ಉಳಿದವರನ್ನೆಲ್ಲ ನೀವೊಬ್ಬರು ಮಾತ್ರ ಅದ್ವೈತದಂತೆ ನಡಿಯುವಂತೆ ಮಾಡುವ ಹೊಣೆಯನ್ನು ಹೊತ್ತಂತೆ ತೋರುವದು. ಡಾ. ನಂದೀಮಠರವರ ಆಶ್ರಯ ಪಡೆವರೆ ತಾವು ಉಳಿಯಬಹುದೆಂದು ತಿಳಿದು ಪುನಃ ಪುನಃ ಅವರ ಹೆಸರನ್ನು ತಾವು ಎತ್ತುವಂತೆ ತೋರುವದು. ಮೊದಲಿನ ಅವರ ಅದ್ವೈತ ವಿಚಾರವು ಈಗ ಹೋಗಿದೆ. ಅವರಲ್ಲಿ ಈಗ ಶಕ್ತಿವಿಶಿಷ್ಟಾದ್ವೈತವೇ ಬಂದಿರುವದೆಂದು ಪಾಪ! ನಿಮಗೆ ಇನ್ನೂ ಗೊತ್ತಾದಂತೆ ತೋರುವದಿಲ್ಲ. ಅಂತು ನಿಮ್ಮ ಕೈಯ್ಯನ್ನು ಎಲ್ಲರೂ ಬಿಟ್ಟಂತೆ ಆಗಿದೆ. ಹೀಗಾಗಿ ನೀವು ಮುಳುಗುವರಲ್ಲಾ! ಎಂದು ಮಾತ್ರ ನಮಗೆ ಕರುಣ ಬರುವದು. ವಯಸ್ಸು ಆಗಿದೆ. ಮುಳುಗಿದರೇನು ನಷ್ಟವಿಲ್ಲೆಂದು ಸಮಾಧಾನ ಹಚ್ಚಿಕೊಳ್ಳಬೇಕಾಗಿದೆ.

ಸಾಮಾನ್ಯವಾಗಿ ಇತ್ತಿತ್ತಲಾಗಿ ನಿಮ್ಮಂಥವರಿಂದಲೇ ವೀರಶೈವರಲ್ಲಿ ಪಂಚಾಚಾರ್ಯರ ಬಣ, ಬಸವನ ಬಣಗಳೆಂದೂ, ಪಟ್ಟದವರ ಬಣ, ವಿರಕ್ತರ ಬಣ ಎಂದೂ ಎರಡು ಬಣಗಳು ಕೆಲವು ಕಾಲದ ಹಿಂದೆ ಆಗಿವೆ. ಅವುಗಳು ಈಗ ಸಾವಧಾನವಾಗಿ ಮಾಯವಾಗುತ್ತಿರುವದು ಒಂದು ಶುಭಸೂಚನೆಯೇ ಸರಿ. ಪಂಚಾಚಾರ್ಯರ ಬಣದಲ್ಲಿ ಮುಖಂಡರಾದ ಪಂಡಿತ ಕಾಶೀನಾಥ ಶಾಸ್ತ್ರಿಗಳು ಕೆಲವು ಗ್ರಂಥಗಳನ್ನು ಬರೆದು ವೀರಶೈವವು ಶಕ್ತಿವಿಶಿ

ಷ್ಟಾದ್ವೈತವೆಂದು ಸಿದ್ಧ ಮಾಡಿದ್ದಾರೆ. ಅದರಂತೆ ಸಿದ್ಧಾಂತಶಿಖಾಮಣಿಯು ಲ್ಲಿಯೂ ಕಾಣಿಸಿದ್ದಾರೆ. ಬಸವನ ಬಣದವರಂತೂ ಶಕ್ತಿವಿಶಿಷ್ಟಾದ್ವೈತಿಗ ಳೆಂಬ ಮಾತಿನಲ್ಲಿ ಸಂಶಯುವೇ ಇಲ್ಲ. ಈ ಎರಡು ಬಣಗಳನ್ನು ಬಿಟ್ಟು ನೀವು ಯಾವ ಬಣಕ್ಕೆ ಸೇರಿರುವಿರೆಂಬುದು ತಿಳಿಯದಾಗಿದೆ. ನೀವು ಈ ಎರಡೂ ಬಣಗಳನ್ನು ಬಿಟ್ಟು ಮೂರನೇ ಬಣದವರೆಂದರೆ ವೀರಶೈವರಲ್ಲದ ಶ್ರೀ ಶಂಕರಾಚಾರ್ಯರ ಬಣದವರೆಂದು ತೋರುವದು ಶಂಕರಾಚಾರ್ಯರು ವೀರಶೈವರಿಗೆ ಏನೂ ಸಂಬಂಧವಿಲ್ಲ. ಅದರಂತೆ ವೇದ ಉಪನಿಷತ್ತುಗಳೂ ಕೂಡ ನಮ್ಮ ಧರ್ಮಗ್ರಂಥಗಳಲ್ಲ. ನಮ್ಮ ಧರ್ಮಗ್ರಂಥಗಳು ಆಗಮಗಳು, ವಚನಗಳು, ಸಿದ್ಧಾಂತ ಶಿಖಾಮಣಿ ಮೊದಲಾದವುಗಳೇ ಆಗಿರುವವು. ಉಳಿದ ವೇದ ಉಪನಿಷತ್ತುಗಳನ್ನು ಓದಲು ಅಡ್ಡಿ ಇಲ್ಲ. ನೀವು ಶೈವರಾದ ಶಂಕ ರಾಚಾರ್ಯರ ಚಿತ್ರವನ್ನು ಅನೇಕ ಸಲ ನಿಮ್ಮ ಪ್ರಕಟನೆಯಲ್ಲಿ ಹಾಕಿದ್ದೀರಿ. ಹೀಗಾದರೆ ನೀವು ಶೈವ ಸಾಂಪ್ರದಾಯದವರೆಂದು ನಾವು ಏಕೆ ತಿಳಿಯ ಬಾರದು ?

ವೀರಶೈವ ಸಿದ್ಧಾಂತವು ಶುದ್ಧಾದ್ವೈತವೆಂದು ಸಿದ್ಧ ಮಾಡುವ ನಿಮ್ಮ ರೀತಿಯು ವಿಚಿತ್ರವಾದದ್ದು. ಪ್ರಶ್ನೆ ಕೇಳುವವರು ನೀವೆ. ಅದಕ್ಕೆ ಉತ್ತರ ಹೇಳುವವರೂ ನೀವೆ. ಶಂಕಾ ತಕ್ಕೊಳ್ಳುವವರೂ ನೀವೆ. ಅದಕ್ಕೆ ಸಮಾ ಧಾನ ಹೇಳುವವರೂ ನೀವೆ. ಇದರಿಂದ ನಮ್ಮ ಬೆನ್ನನ್ನು ನೀವೇ ಥಪ್ಪರಿಸಿ ಕೊಳ್ಳುವಂತೆ ಆಗುವದೇ ಹೊರತು ನಿಮ್ಮ ಕೃತಿಗೆ ಅನ್ಯರಾರೂ ಶಬ್ಬಾಸ್ ಕೊಟ್ಟಂತೆ ಕಾಣುವದಿಲ್ಲ.

ವೈದಿಕ ಮತವು ಈಶ್ವರ ಜೀವ ಪ್ರಪಂಚವನ್ನು ಒಪ್ಪಿದರೆ ವೀರಶೈ ವರು ಪರಶಿವ, ಪರಶಕ್ತಿ, ಪುರುಷ ಪ್ರಕೃತಿಗಳನ್ನು ಒಪ್ಪುತ್ತಾರೆ. "ವೇದಕ್ಕೆ ಅನುಸಾರವಾಗಿರುವ ಆಗಮಗಳೇ ಪ್ರಮಾಣವೆಂದು" ಸಿದ್ಧಾಂತ ಸಿಖಾಮ ಣಿಯ ೫ನೇ ಪರಿಚ್ಛೇದದ ೧೨-೧೩ನೇ ಶ್ಲೋಕಗಳನ್ನು ಉದಹರಿಸಿದ್ದೀರಿ. ಇದರ ಮೇಲಿಂದ ವೇದಗಳು ಮೊದಲು ಆಗಮಗಳು ಹಿಂದೆ ಬರೆದವುಗ ಳೆಂದು ಹೇಳಿದಂತೆ ಆಗುವದು. ಇದಂತೂ ಶುದ್ಧ ತಪ್ಪು ತಿಳುವಳಿಕೆ. ವೇದ ಗಳು ಆರ್ಯರಿಂದ ಬರೆದವುಗಳು. ಆಗಮಗಳು ದ್ರಾವಿಡರಿಂದ ಬರೆದವು ಗಳು. ದ್ರಾವಿಡರೇ ಬಾರತದ ಮೂಲನಿವಾಸಿಗಳು. ಇಗ ಒಳ್ಳೇ ಶ್ರೇಷ್ಠತರ ವಾದ ಶೈವ ವೀರಶೈವ ಸಂಸ್ಕೃತಿಯು ಭಾರತದಲ್ಲಿ ನೆಲಸಿತ್ತು. ಅತಿ ಪ್ರೌಢ

ಲಿಸ ಗ್ರಂಥಗಳೇ ಆಗಮುಗಳು. ಹಿಂದಿನಿಂದ ಆರ್ಯರು ಏಸಿಯೂದ ವಾಯವ್ಯ ದಿಕ್ಕಿನಿಂದ ಹಿಂದುಸ್ಥಾನದಲ್ಲಿ ಬಂದು ನೆಲಿಸಿದರು. ಆಗ ಇವರು ವೇದ ಗಳನ್ನು ಬರೆದು ವೈದಿಕ ಧರ್ಮವನ್ನು ಸ್ಥಾಪಿಸಿದರು, ಈಗೀಗ ಆಗಮ ಗಳು ಅತಿ ಪುರಾತನವಾದವುಗಳೆಂದು ಕೆಲವರು ಕಂಡುಹಿಡಿದಿದ್ದಾರೆ. ವೇದ ಗಳಲ್ಲಿ ನಮ್ಮ ಲಿಂಗಪೂಜೆಯನ್ನು ಶಶ್ನಪೂಜೆಯೆಂದು ಟೀಕೆ ಮಾಡಿದ್ದು ನೋಡಿದರೆ ವೇದಗಳಲ್ಲಿ ಲಿಂಗಪೂಜೆಗೆ ವಿರೋಧವಿತ್ತೆಂದು ಸಹಜ ತೋರು ವದು. ಈ ಧರ್ಮವನ್ನು ಹತ್ತಿಕ್ಕುವ ಸಲುವಾಗಿ ಹಾಗೆಲ್ಲ ಅವರು ಮಾಡಿ ದ್ದಾರೆಂದು ಅನಿಸುವದು. ಆದರೂ ನೀವು—"ವೇದದ ಅನುಸಾರವಾಗಿರುವ ಆಗಮುಗಳೆಂದು'' ಹೇಳಿ ನಮ್ಮನ್ನು ನೀವು ಕೀಳರನ್ನಾಗಿ ಮಾಡಲು ಪ್ರಯತ್ನಿಸಿದಂತೆ ಆಗುವದು. ಅಲ್ಲದೆ ಮೊದಲೇ ಅಂದರೆ ಶ್ರುತಿಯೇ ಪರಮ ಪ್ರಮಾಣವೆಂದು ಸಿದ್ಧವಾಯಿತು ಎಂದು ಬರೆದಿದ್ದೀರಿ, ಆಗಮುಗಳು, ವಚನ ಗಳು, ಸಿದ್ಧಾಂತಶಿಖಾಮಣಿ ಮೊದಲಾದವುಗಳು ನಮ್ಮ ಗ್ರಂಥಗಳೇ ಅಲ್ಲೆಂದು ಒಂದು ರೀತಿಯಿಂದ ಹೇಳಿದಂತೆ ಆಗಿರುವದು. ಮೊದಲು ವೇದಗಳು ನಮ್ಮ ಧರ್ಮಗ್ರಂಥಗಳಲ್ಲೆಂದು ಅಳಿದುಕೊಂಡು ಮುಂದೆ ಬರೆಯಲಿಕ್ಕೆ ಸುರುಮಾ ಡಬೇಕು.

ಪರಬ್ರಹ್ಮ ವಸ್ತುವೊಂದೇ ಸತ್ಯ (ಉದಯ ನಾಶಗಳಿಲ್ಲದೆ ಯಾವಾ ಗಲೂ ಇರತಕ್ಕದ್ದು.) ಪ್ರಪಂಚವು ಮಿಥ್ಯ. (ನಿಜವಾಗಿಲ್ಲದೆ ಇರುವಹಾಗೆ ತೋರತಕ್ಕದ್ದು.) ವೀರಶೈವರಿಗೆ ಪರಬ್ರಹ್ಮವೆಂಬ ಶಬ್ದವೇ ಸಂಬಂಧವಿಲ್ಲ. ಪರಶಿವ ಎಂದು ನಮ್ಮ ಶಬ್ದವಾಗಿದೆ ನೀವು ಯಾವುದನ್ನೂ ವೀರಶೈವ ಪರ ವಾಗಿ ಬರೆಯುತ್ತಿಲ್ಲ. ಹೇಳುತ್ತಿಲ್ಲ. ಈ ಪ್ರಪಂಚವು ಎಂದು ಯಾವಾಗ ಪರಮಾತ್ಮನ ಸಂಕಲ್ಪಮಾತ್ರದಿಂದ ಪರಶಕ್ತಿಯು ರೂಪುಗೊಂಡು ಪ್ರಪಂಚ ವಾದಳೆಂದು ಹೇಳಲಿಕ್ಕೆ ಯಾರಿಗೂ ಶಕ್ಯವಿಲ್ಲ. ಎಷ್ಟೋ ಕೋಟಿ ವರ್ಷ ಗಳಿಂದ ಈ ಪ್ರಪಂಚಕ್ಕೆ ಅಸ್ತಿತ್ವ ಇರುತ್ತದೆ. ಅದರ ಕಾರ್ಯಗಳು ಹೀಗೆ ಅವ್ಯಾಹತವಾಗಿ ಸಾಗಿವೆ. ಮುಂದೆಯೂ ಹಾಗೇ ಸಾಗುವದು. ಅನೇಕ ವರ್ಷ ಉಂಡು, ತಿಂದು, ಬಾಳಿ, ಗಳಿಸಿ, ಹಡೆದು, ಮಡಿದು, ದುಡಿದು, ಇರುತ್ತಿದ್ದರೂ ಇದಕ್ಕೆ ಸುಳ್ಳು ಸುಳ್ಳು ಎಂದು ಸುಳ್ಳಿನ ಧ್ಯಾನ ಮಾಡಿ ಪರಮಾತ್ಮನ ಲೀಲೆಗೆ ಬೈದು ನಿಂದಿಸಿ ಮಹಾ ಅಪರಾಧವನ್ನೇ ಮಾಡು ತ್ತಿರುವಿರಿ. ಮಾಯಾಮಾತ್ರಮಿದು ದ್ವೈತಂ, ಅದ್ವೈತಂ ಪರಮಾರ್ಥಂ

ಎಂದು ಹೇಳುವ ನೀವು ಇಂಥ ಕಾಲದಲ್ಲಿ ಮೈಸೂರ ರಾಜಪಾಲರಿಗೆ ಹರಿಜನೋದ್ಧಾರವು ಸಮಂಜಸವಲ್ಲೆಂದು ಅದು ಶಾಸ್ತ್ರೋಕ್ತವಲ್ಲೆಂದು ಬಿನ್ನಪತ್ರಿಕೆಯನ್ನೇಕೆ ಕಳಿಸಿದ್ದೀರಿ ? ಇದರ ಮೇಲಿಂದ ನಿಮ್ಮ ಅದ್ವೈತವು ಬಾಯಿಬ್ರಹ್ಮವಿದ್ದಂತೆ ತೋರುವದು. ನಿಮ್ಮ ಈ ಬಾಯಿಯು ಅದ್ವೈತವು. ಯಾವ ಮಾಯೆಯಿಂದ ಕಲ್ಪಿಸಲ್ಪಟ್ಟಿದೆ ತಿಳಿಯದಾಗಿದೆ. ನಿಮ್ಮ ಹೇಳಿಕೆಯ ಪ್ರಕಾರ ಮಾಯೆ ಯಂಬವಳಿದ್ದು ಆಕೆ ಇದೆಲ್ಲ ಆಟ ನಡಿಸಿದ್ದಾಳೆಂದು ಹೇಳಿದಂತೆ ಆಗುವದಿಲ್ಲವೇ ?

ಅನಾದಿ ನಿಧನಾಚ್ಛಾಂತಾಚ್ಛಿ ವಾತ್ಪರಮ ಕಾರಣಾತ್ ।
ಇಚ್ಛಾಶಕ್ತಿರ್ವಿನಿಷ್ಕ್ರಾಂತಾ ತತೋಜ್ಞಾನಂ ತತಃಕ್ರಿಯಾ।
ತತ್ರೋತ್ಪನ್ನಾನಿ ಭೂತಾನಿ ಭುವನಾನಿ ಚತುರ್ದಶ ॥

ಎಂಬ ಆಗಮೋಕ್ತಿಯಂತೆ ಎಂದು ಹೇಳಿ ಇದರ ಅರ್ಥವನ್ನು ಸಹ ಮಾಡಲಿಕ್ಕೆ ಬಂದಿಲ್ಲ. ನೀವು ಸಂಸ್ಕೃತ ಕಲಿತಂತೆ ತೋರುವದಿಲ್ಲ. ಬೇಕಾದಂಥ ಪದ್ಯಗಳಿಗೆ ನಿಮ್ಮ ತಲೆಯಲ್ಲಿರುವ ಅದ್ವೈತದ ಅರ್ಥವನ್ನೇ ಮಾಡುವಂತೆ ತೋರುವದು. ನಾವು ಸಂಸ್ಕೃತ ಕಲಿಯದಿದ್ದರೂ ಇದರ ಅರ್ಥವು ನೀವು ಮಾಡಿದಂತೆ ಇಲ್ಲವೆಂದು ನಮಗೆ ಅನಿಸುವದು. ಇದರಲ್ಲಿ ಪರಬ್ರಹ್ಮವೆಂಬ ಶಬ್ದವೇ ಇಲ್ಲ. ಅಹಂ ಇದಂ ಎಂಬ ಶಬ್ದಗಳೇ ಇದರಲ್ಲಿಲ್ಲ. ಅಹಮಸ್ಮಿ, ಅಹಂ ಬಹುಸ್ಯಾಂ ಪ್ರಜಾಯೇಯ ಎಂಬ ಶಬ್ದಗಳು ಇದರಲ್ಲಿ ಇಲ್ಲದೆ ಅವುಗಳನ್ನು ಸೇರಿಸಿ ಅರ್ಥ ಬರೆದಿದ್ದೀರಿ. ಹೀಗೆ ಸಂಸ್ಕೃತ ಪದ್ಯಗಳಿಗೆ ಬೇಕಾದಂತೆ ಅರ್ಥ ಬರೆದರೆ, ಕುರುಬರಿದ್ದ ಊರಿಗೆ ಕಲಿಯಲಾರದ ಲಫಂಗನು ಹೊಟ್ಟೆಗಾಗಿ ಕೀರ್ತನ ಹೇಳಲಿಕ್ಕೆ ಹೋದಂತೆ ಆಗುವದು. "ರಂ, ರುಂ, ಕಂ, ಕುಂ, ಗುಂ, ಗಂ ಎಂದರೆ ಹೀಗೆ ಒಂದು ಊರಲ್ಲಿ ಒಬ್ಬ ಕುರುಬನಿದ್ದನು." ಎಂದು ಹೇಳುವಂತೆ ನಿಮ್ಮ ಸಂಸ್ಕೃತ ಪದ್ಯಗಳ ಅರ್ಥಗಳಿರುವವು. ಇದರ ಗುದುಮುರಿಗೆಗೆ ಬಿದ್ದರೆ ಗಾಳಿಯನ್ನು ಗುದ್ದಿ ಮೈ ನೋಯಿಸಿಕೊಂಡಂತೆ ನಿಮಗೆ ಮಾತ್ರ ದಣಿವೆಯಾಗುವದು. ಗಾಳಿಗೆ ಏನೂ ಆಗುವದಿಲ್ಲೆಂದು ಜ್ಞಾಪಕದಲ್ಲಿ ಇಡಬೇಕು. ಅಲೆಗಳಿಲ್ಲದ ಸಮುದ್ರದಲ್ಲಿ ಅಲೆಗಳು ಎಲ್ಲಿಂದ ಬಂದವು ? ಹ್ಯಾಗೆ ಬಂದವು ? ಯಾಕೆ ಬಂದವು? ಇದಕ್ಕೆ ನಿಮ್ಮ ಉತ್ತರವಂತೂ ಯಾವ ಬಿನ್ನವತ್ತಳಿಕೆಯಲ್ಲಿಯೂ ಇಲ್ಲ.

ಸುಮ್ಮನಿದ್ದ ಗಿಡವು ಏಕೆ ಅಲುಗಾಡಬೇಕು ? ಹೀಗೆಲ್ಲ ಆಗಬೇಕಾದರೆ ಒಂದು ಶಕ್ತಿ ಬೇಕಲ್ಲವೇ ? ಸಮುದ್ರದಲ್ಲಿ ಅಲೆಗಳಾಗಲಿಕ್ಕೆ ಒಂದು ಶಕ್ತಿಯೇ ಕಾರಣವಾಗಿದೆ. ಅದನ್ನು ಮಾತ್ರ ಮರೆತುಬಿಡುವಿರಿ. ತಾಯಿಯನ್ನೇ ಮರೆತು ಬರೇ ತಂದೆಗೆ ಹುಟ್ಟಿದೆವೆಂದು ಹೇಳಿದಂತೆ ಆಗುವದು.

ಈ ಜಗತ್ತಿನ ಮೇಲೆ ಇರುವದಕ್ಕಿಂತ ಹೆಚ್ಚಾಗಿ ಸಮುದ್ರದಲ್ಲಿಯೇ ಅಸಂಖ್ಯ ಜೀವ ಕೋಟಿಗಳುಂಟು. ಉಪ್ಪುಂಟು. ಪ್ರಪಂಚ ಉಂಟು. ಮುತ್ತುಂಟು. ಮತ್ತು ಏನೇನೋ ಉಂಟು. ಆದರೂ ಅದಕ್ಕೆಲ್ಲ ಸಮುದ್ರ ವೆನ್ನುವರು. ಅದರಂತೆ ಪರಶಿವನಲ್ಲಿ ಒಂಭತ್ತು ತರದ ಶಕ್ತಿಗಳೆದ್ದಾರೆ. ಅವರೇ ನವದುರ್ಗಿಯರು. ಈ ಎಲ್ಲ ಶಕ್ತಿಗಳ ಒಂದೇ ರೂಪಾದ ಪರಶ ಕ್ತಿಯು ಪರಶಿವನಲ್ಲಿ ಇದ್ದಾಳೆ. ಅವಳೇ ಇದೆಲ್ಲ ಸೃಷ್ಟಿ ಸ್ಥಿತಿ ಲಯಕ್ಕೆ ಕಾರಣಳಾಗಿದ್ದಾಳೆ. ಕಾರಣ ರೂಪನು ಶಿವನಾದರೆ ಕಾರ್ಯ ರೂಪಳು ಆ ಶಕ್ತಿಯೇ ಆಗಿದ್ದಾಳೆ. "ಪರಬ್ರಹ್ಮನಲ್ಲಿ ನಾನ –ಇದು–ಕರ್ತೃ–ಕರ್ಮ–ಕ್ರಿಯಾ ರೂಪ ಭೇದ ವ್ಯತ್ಯಾಸ ಇರುವದಿಲ್ಲ." ಎಂದು ಹೇಳುವವರು ಪುನಃ ಅದೇ ಕ್ಷಣದಲ್ಲಿ ಅಹಂ ಅಸ್ಮಿ ಅಹಂ ಬಹುಸ್ಯಾಂ ಪ್ರಜಾಯೇಯ ಅರುಹು ಇಚ್ಛೆ ಗಳು ಎಲ್ಲಿಂದ ಬಂದವು ? ಯಾರೂ ಇಲ್ಲದ ಮನೆಯೊಳಗಿಂದ ಅನೇಕ ಮಂದಿ ಜನರು ಹೊರಗೆ ಬಂದರೆಂದು ಹೇಳಿದಂಥ ಹುಚ್ಚತನ ಬರು ವದು. ಇದ್ದುದರಿಂದ ಇದೇ ಹೊರಗೆ ಕಾಣಿಸುವದು ಹೊರತು ಏನೂ ಇಲ್ಲದುದರಿಂದ ಇದ್ದುದು ಎಂದೂ ಹೊರಗೆ ಬರಲಾರದು. ಮಹಾ ಕಾರಣದಿಂದ ಕಾರಣ ಬಂದಿತು. ಕಾರಣದಿಂದ ಸೂಕ್ಷ್ಮ ಬಂದಿತು. ಸೂಕ್ಷ್ಮ ದಿಂದ ಈ ಸ್ಥೂಲ ಬಂದಿತು. ಸ್ಥೂಲಕ್ಕಿಂತ ಸೂಕ್ಷ್ಮದಲ್ಲಿ, ಸೂಕ್ಷ್ಮಕ್ಕಿಂತ ಕಾರಣದಲ್ಲಿ, ಕಾರಣಕ್ಕಿಂತ ಮಹಾ ಕಾರಣದಲ್ಲಿ ಶಕ್ತಿ ಹೆಚ್ಚೆಚ್ಚಾಗಿ ಇರುವ ದೆಂಬ ಅನುಭವವು ವ್ಯವಹಾರದಲ್ಲಿ ಕೂಡ ಅನಿಸುವದು. ಆಣೆಕಲ್ಲಿಗಿಂತ ನೀರಿನ ಶಕ್ತಿ ಹೆಚ್ಚು. ನೀರಿಗಿಂತ ಉಗಿಯಲ್ಲಿ ಶಕ್ತಿ ಹೆಚ್ಚೆಂಬುದು ಕಂಡುಂಡ ಮಾತಾಗಿರುವದು. ಇದರ ಮೇಲಿಂದ ಮಹಾ ಕಾರಣನಾದ **ಪರಶಿವನಲ್ಲಿ** ಸರ್ವಶಕ್ತಳಿರುವಳೆಂದು ತೋರುವದು. ಹಾಲಿನಲ್ಲಿ ಬೆಣ್ಣೆ ಇದ್ದರೂ ಕೂಡ ಬರೇ ಹಾಲೇ ಎಂದು ಹೇಗೆ ಕರೆಯುವರೋ ಅದರಂತೆ ಪರಶಿವನೆಂದು ಕರೆದರೂ ಪರಶಕ್ತಿ ಇದ್ದೇ ಇರುವಳು. ಆ ಹಾಲಿಗೆ ಬೆಣ್ಣೆಯಿಂದ ಯಾವ ಆತಂಕಗಳು ಹೇಗೆ ಇರದೆ ಪೋಷಕವಾಗುವವೋ ಅದರಂತೆ **ಪರಶಿವನಲ್ಲಿಯು** ಪರಶಕ್ತಿಯು ಆತಂಕವಾಗಿರದೆ ಅವನ ಪರಿಪೂರ್ಣತೆಗೆ **ಪೋಷಕವಾಗಿ** ಹಾಲಿ

ನಂತೆ ಒಂದೇಯಾಗಿ ತೋರುವದು. ಇದಕ್ಕೆ ನೀವು ಅದ್ವೈತವೆಂದು ಅರ್ಥ ಮಾಡುತ್ತಿರುವಿರಿ. ಇದು ಶುದ್ಧ ತಪ್ಪು. ಹೀಗಿರುವದರಿಂದ ನಾವು ಶಕ್ತಿ ವಿಶಿಷ್ಟಾದ್ವೈತಿಗಳೆಂದು ಹೇಳುನೆವು. ಪರಶಕ್ತಿಯಿಂದೊಡಗೂಡಿ ಒಂದೇ ಒಂದಾಗಿ ತೋರುವ ಪರಶಿವನೆಂದು ಇದರ ಅರ್ಥವಾಗುವದು.

'ಸಮುದ್ರವೇ ಅಲೆಯಾಗಿ ತೋರಿದರೆ ಆ ಅಲೆಯು ಸಮುದ್ರವೇ ಹೊರತು ಬೇರಿಲ್ಲ ಎಂದು ಹೇಳಿದ್ದೀರಿ ಪರಬ್ರಹ್ಮನೇ ಹೀಗೆ ಪ್ರಪಂಚವಾಗಿ ತೋರಿದನೇ ಹೊರತು ಇದು ಪ್ರಪಂಚವಲ್ಲ. ಆದರೆ ಇದೆಲ್ಲ ಪರಬ್ರಹ್ಮವೆಂದು ನೀವು ಹೇಳಿದರೆ'' ಇದಕ್ಕೆ ಮಿಥ್ಯವೆಂದಂತೆ ಹೇಗಾಯಿತು. ತೋರುವದೆಲ್ಲ ಪರಮಾತ್ಮನೆಂದು ಹೇಳಿದಂತೆ ಆಗುವದು ಹೊರತು ಮಿಥ್ಯವೆಂದಂತಾಗು ವದಿಲ್ಲ. ಅಲೆಗಳು ಏಳಬೇಕಾದರೆ ಒಂದು ಶಕ್ತಿ ಬೇಕಲ್ಲವೆ ಅದರಂತೆ ಈ ಪ್ರಪಂಚ ಆಗಬೇಕಾದರೆ ಒಂದು ಪರಶಕ್ತಿಯೇ ಬೇಕು ಎಂದು ಸಿದ್ಧವಾ ಗುವದಿಲ್ಲವೇ? ಆ ಪರಶಿವನ ಪರಶಕ್ತಿಯೇ ಹೀಗೆಲ್ಲ ಬಹುರೂಪಾಗಿ ಪರ ಶಿವನಿಗಾಗಿ ಲೀಲೆ ಮಾಡುವಳೆಂದು ಸಿದ್ಧವಾಗುವದಿಲ್ಲವೇ? 'ಅಲೆಯು ರೂಪ ದಿಂದ ಸತ್ಯವಾಗಿರದೆ ಸಮುದ್ರರೂಪದಿಂದ ಸತ್ಯವಾಗಿದೆ ಎಂದು ಸಿದ್ಧ ಮಾಡಲಿಕ್ಕೆ ಹೊರಟಿದ್ದೀರಿ'' ನಿರಾಕಾರ ಸಮುದ್ರಕ್ಕೆ ಸಾಕಾರ ಅಲೆಯು ರೂಪ ಬರುವದು ಯಾತರಿಂದ? ಒಂದು ಶಕ್ತಿಯಿಂದಲ್ಲವೆ? ಅದರಂತೆ "ಪರಬ್ರಹ್ಮನಲ್ಲಿ ತೋರುವ ಶಕ್ತಿಯು ಶಕ್ತಿರೂಪದಲ್ಲಿ ಸತ್ಯವಾಗಿರದೆ ಪರ ಬ್ರಹ್ಮರೂಪದಿಂದ ಸತ್ಯವಾಗಿದೆ." ಹೀಗಂದರೇನು? ಬಸುರಾಗಿ ಹಡೆಯು ವಾಕೆ ನನ್ನ ಹೆಂಡತಿ ಸತ್ಯವಾದರೂ ಆಕೆಯ ಹೆಸರನ್ನು ಹೇಳದೆ ನನ್ನ ಹೆಸರನ್ನೇ ಹೇಳಕೊಳ್ಳುವೆನೆಂದಂತೆ ಆಗುವದು. ನಿಮ್ಮ ಹೇಳಿಕೆಯಲ್ಲಿ ಪರ ಬ್ರಹ್ಮನಲ್ಲಿ ಶಕ್ತಿ ಇರುವಳೆಂದು ಮೊದಲು ಒಪ್ಪಿಕೊಂಡು ನಿಮ್ಮ ದುರುಳ ಅದ್ವೈತಕ್ಕೆ ದೋಷ ಬರುವದೆಂದು ಶಕ್ತಿ ತೋರಿದರೂ ಸತ್ಯವಾಗಿರದೆ ಪರ ಬ್ರಹ್ಮರೂಪದಿಂದ ಸತ್ಯವಾಗಿದೆ ಎಂದು ಅಪಾರ್ಥ ಅರ್ಥವನ್ನು ಮಾಡುತ್ತ ನಡೆದಿದ್ದೀರಿ.

ಶ್ರೀರಾಮಕೃಷ್ಣರು ಪರಬ್ರಹ್ಮಕ್ಕೆ ತಾಯಿ ಎಂದು ಪೂಜಿಸಿದರು. ಯಾಕಂದರೆ ತಂದೆಯ ಭಾವಕ್ಕಿಂತ ದೇವರಲ್ಲಿ ತಾಯಿ ಭಾವ ಮಕ್ಕಳಿಗೆ ಹೆಚ್ಚು ಪ್ರಿಯಕರ ಸಲಿಗೆಯದು. ಆದಕ್ಕೆ ಪರಬ್ರಹ್ಮ ಒಬ್ಬನೇ ಇರುವನೆಂದು ಹೇಳಹೊರಟ ನೀವು ಅಪರು ಸ್ತ್ರೀ ಆಕಾರದ ಮೂರ್ತಿಯನ್ನೇಕೆ ಮಾಡಿ ದರು. ತಂದೆಯಲ್ಲಿ ತಾಯಿಯ ಭಾವ ಮಾಡಿದರೆ ತಂದೆ ಎಂದೂ ತಾಯಿ

ಯಾಗಲಾರ. ಅವನೇನು ಮೊಲೆ ಕುಡಿಸಲಾರ, ಹಡೆಯಲಾರ, ರಾಮಕೃಷ್ಣ ರಿಗೆ ನಿರ್ವಿಕಲ್ಪ ಸಮಾಧಿ ಹೇಳಿದ ಗುರುವಾದ ಶಕ್ತಿವಿರೋಧಿ ತೋತಾ ಪುರಿಗೆ ಪ್ರತಿಯಾಗಿ ಶಕ್ತಿ ಇರುವಿಕೆಯನ್ನು ಸಿದ್ಧಮಾಡಿ ಅವನಲ್ಲಿಯ ಅಜ್ಞಾ ತನವನ್ನು ಹೋಗಲಾಡಿಸಿ ಗುರುವಿಗೆ ಗುರುವಾದ ಕಥೆಯನ್ನಷ್ಟು ಓದಿ ನೋಡಿರಿ. ಅಪೂರ್ಣ ಓದಿಕೊಂಡು, ಅನುಭವ ಪಡೆಯದೆ ಸಾಧನಗೈಯದೆ ತ್ಯಾಗ ಮಾಡದೆ ಬರೆದರೆ ತೀರಲಿಲ್ಲ. ಇಂಥದಕ್ಕೆ ಯಾರೂ ಮುಂಬಾಗು ವದಿಲ್ಲ. ಇದರಂತೆ ಶಂಕರಾಚಾರ್ಯರಿಗೂ ವಶಿಷ್ಠ ಮುಮುಕ್ಷುಗಳಿಗೂ ಮಹ ಮಹತಾಯಿಯ ಅನುಭವವಾದ ಕಥೆಗಳು ಜಗಪ್ರಸಿದ್ಧವಿದ್ದರೂ ನೀವು ಅವು ಗಳನ್ನು ಓದಿಲ್ಲ ಕೇಳಿಲ್ಲೆಂದು ಅನಿಸುವದು. ಅವುಗಳನ್ನು ಓದಿದರೂ ಕೇಳಿ ದರೂ ನಿಮ್ಮ ಮೊಂಡತನವನ್ನು ಎಂದೂ ಬಿಡಬಾರದೆಂದು ಪಣತೊಟ್ಟಂತೆ ಕಾಣುವದು.

ಪಿಂಡಸ್ಥಲದ ಪರಶಿವಪರವಾದ ೩೩ನೇ ಶ್ಲೋಕವನ್ನು ಬರೆದಿದ್ದೀರಿ. ಆದರೆ ಅದರ ಹಿಂದಿನ ಶಿವಶಕ್ತಿಯ ಪರವಾದ ಶ್ಲೋಕವನ್ನು ಕಣ್ಣೆತ್ತಿ ನೋಡಿಲ್ಲೇಕೆ ? ಅದರಂತೆ ಜ್ಞಾನಶೂನ್ಯಸ್ಥಲದ ಕೆಲಪದ್ಯಗಳನ್ನು ಹೇಳಿ ಅದ್ವೈತವೆಂದು ಸಿದ್ಧಮಾಡಿದ್ದೀರಿ. ವೀರಶೈವರ ಶಕ್ತಿವಿಶಿಷ್ಟಾದ್ವೈತವು ಕೂಡ ಕಡೆಗೆ ಅದ್ವೈತಕ್ಕೆ ಹೋಗುವದು. ಆದರೆ ಅದಕ್ಕೆ ಹೋಗಬೇಕಾದರೆ ಶರೀರಬೇಕು, ಶಕ್ತಿಬೇಕು, ಮನಬೇಕು, ಎಲ್ಲವೂ ಬೇಕು. ಹೊಳೆದಾಟಿ ಹೋಗಬೇಕಾದರೆ ಡೋಣಿಬೇಕು, ಹುಟ್ಟುಬೇಕು, ಹುಟ್ಟು ಹೊಡೆಯುವವರೂ ಬೇಕು. ಅವರಿಗೆಲ್ಲ ಶಕ್ತಿಯೂಬೇಕು. ಇದನ್ನೇ ವೀರಶೈವರು ಶಕ್ತಿವಿಶಿಷ್ಟಾ ದ್ವೈತವೆನ್ನುವರು. ಶಿವಾದ್ವೈತವನ್ನುವರು ದ್ವೈತಾದ್ವೈತವೆಂದರೂ ಇದೇ ಸರಿ.

"ಸತ್ಕರ್ಮೋಪಾಸನೆಗಳಿಂದ ತಮ್ಮ ಅಂತಃಕರಣವನ್ನು ಶುದ್ಧಿಮಾಡಿ ಕೊಂಡು ಶ್ರೋತ್ರಿಯ ಬ್ರಹ್ಮನಿಷ್ಠನಾದ ಸದ್ಗುರುವಿನ ಅನುಗ್ರಹದಿಂದ ಪಾರ ಮಾರ್ಥವಾದ ತಮ್ಮ ಪರಬ್ರಹ್ಮ ಸ್ವರೂಪವನ್ನು ಯಾರು ಸಾಕ್ಷಾತ್ಕಾರ ಮಾಡಿಕೊಂಡಿರುತ್ತಾರೋ ಅಂತಹ ಜ್ಞಾನಿಗಳು ಮಾತ್ರ ವೀರಶೈವಸಿದ್ಧಾಂತವು ಶುದ್ಧಾದ್ವೈತವೆಂದು ಒಪ್ಪುತ್ತಾರೆಯೇ ಹೊರತು ಇತರರು ಒಪ್ಪಲು ಸಾಧ್ಯ ವಿಲ್ಲ." ಎಂದು ಬರೆದಿದ್ದೀರಿ. ಬರೆಯುವದೊಂದು ಮಾಡುವದೊಂದು ನಿಮ್ಮಲ್ಲಿ ಇದ್ದಂತೆ ತೋರುವದು. ಅದಕ್ಕಂತಲೇ ನೀವು ಶಕ್ತಿವಿಶಿಷ್ಟಾ ದ್ವೈತವನ್ನು ಒಪ್ಪಿಕೊಂಡಿಲ್ಲ. ನಿಮಗೆ ಯೋಗ್ಯ ಗುರುಗಳು ಸಿಕ್ಕಲ್ಲ

ನಿಮಗೆ ಸಾಕ್ಷಾತ್ಕಾರವಂತೂ ಆಗೇ ಇಲ್ಲ. ಯಾಕಂದರೆ ನೀವು ಪರಶಿವನಲ್ಲಿ ಪರಶಕ್ತಿಯನ್ನು ಒಪ್ಪಿಲ್ಲ. ಅರ್ಧಾಂಗವನ್ನು ಒಪ್ಪಿದ ನೀವೊಬ್ಬರೇ ಅರ್ಧಮರ್ಧ ಬುದ್ಧಿಯವರೆಂದು ತೋರುವದು. ಉಳಿದ ಸಕಲ ವೀರಶೈವರು ಪೂರ್ಣಾಂಗ ( ಪರಶಿವ ಪರಶಕ್ತಿಯರನ್ನು ) ಒಪ್ಪಿಕೊಂಡದ್ದರಿಂದ ಪೂರ್ಣ ಬುದ್ಧಿಯವರು ಪೂರ್ಣ ಮಾನವರು ಪೂರ್ಣ ಯೋಗಿಗಳು ಪೂರ್ಣ ಪೂಜಕರು ಎಂದು ಹೇಳಿದಂತೆ ಆಗುವದು.

"ವೀರಶೈವ ಮತದ ಕೈಪಿಡಿ" ಯನ್ನು ಮೊದಲು ಬರೆದ ಗ್ರಂಥವು ಈಗ ಡಾ. ನಂದೀಮಠರವರೇ ಶಕ್ತಿವಿಶಿಷ್ಟಾದ್ವೈತವೇ ವೀರಶೈವರ ಸಿದ್ಧಾಂತವೆಂದು ಬೇರೆ ಗ್ರಂಥವನ್ನು ಬರೆಯಬೇಕೆಂದು ಮಾಡಿದ್ದಾರೆ. ಬೇಕಾದರೆಂದು ವಿಚಾರಿಸಿ ನೋಡಿರಿ. ಅಂತು ನಿಮಗೆ ಉದಾಹರಣೆ ಕೊಡಲಿಕ್ಕೆ ವೀರಶೈವರಲ್ಲಿ ಯಾರೂ ಈಗ ಇಲ್ಲದಂತೆ ಆಗಿದೆ. ನೀವು ಏಕಾಕಿಯಾಗಿ ಲೋಕನಾಯಕನಾಗಹೊರಟಂತೆ ಹಾಸ್ಯಾಸ್ಪದವಾಗಿರುವುದು.

೧೯೫೭ ನೇ ಎಪ್ರೀಲ ಮೇ ಸಂಚಿಕೆಯನ್ನು ಸರಿಯಾಗಿ ಓದಿದಂತೆ ಕಾಣುವದಿಲ್ಲ. ಈ ಸಿದ್ಧಾಂತವನ್ನು ಕ್ರಿ. ಶ. ೮ನೇ ಶತಮಾನದಲ್ಲಿ ನೀಲಕಂಠಾಚಾರ್ಯರು ಹೇಳಿದರೆಂದು ಹೇಳುವರು. ರೇಣುಕಾಚಾರ್ಯರೇ ಇದರ ಆಚಾರ್ಯರೆಂದು ಅನ್ನುವರು ಆದರೆ ಇದನ್ನು ಇನ್ನೂ ಸರಿಯಾಗಿ ಶೋಧಿಸಬೇಕಾಗಿದೆ." ಎಂದು ನಾವು ಬರೆದಿದ್ದೇವೆ. ಅದನ್ನೇ ನಿಮ್ಮ ಪ್ರಕಟನೆಯಲ್ಲಿ "ವೀರಶೈವ ಮತವನ್ನು ಸ್ಥಾಪಿಸಿದವರು ಶ್ರೀ ರೇಣುಕ ಭಗವತ್ಪಾದರು ಎಂಬ ವಿಷಯವು ಅನುಮಾನಾಸ್ಪದವು ಎಂದು ಹೇಳಿ ಶ್ರೀ ನೀಲಕಂಠ ಶಿವಾಚಾರ್ಯರ ಶಕ್ತಿ ವಿಶಿಷ್ಟಾದ್ವೈತ ಮತಕ್ಕೆ ಸ್ಥಾಪಕರು." ಎಂದು ಬರೆದಿದ್ದೀರಿ. ಹೀಗೆ ಕಣ್ಣಿದ್ದು ಕುರುಡರಂತೆ ಕಿವಿ ಇದ್ದು ಕಿವುಡರಂತೆ ಮಾಡಬಾರದು. ಮುಪ್ಪಿನ ಕಾಲಕ್ಕೆ ಅರುವು ಮರವು ಹಿಡಿದಿರಬಹುದೋ ಏನೋ ಎಂದು ಸಂಶಯ ಬರುವದು.

ನಾನು ನೀಲಕಂಠಾಚಾರ್ಯರೆಂದರೆ ನೀವು ನೀಲಕಂಠ ಶಿವಾಚಾರ್ಯರೆಂದು ಬರೆದರೆ ಎಂಥ ತಪ್ಪ ಮಾಡಿದಂತೆ ಆಗುವದು. ನೀಲಕಂಠಾಚಾರ್ಯರು ಕ್ರಿ. ಶ. ೮ನೇಯ ಶತಮಾನದಲ್ಲಿ ಇದ್ದವರು. ನೀಲಕಂಠ ಶಿವಾಚಾರ್ಯರು ಕ್ರಿ. ಶ. ೧೪೦೦ನೇ ಶತಮಾನದಲ್ಲಿ ಇದ್ದವರು. ವೀರಶೈವ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ನೀಲಕಂಠಾಚಾರ್ಯರು ಕಂಡು ಹಿಡಿದಿದ್ದಾರೆ. ಹೇಳಿದರು. ನಾವು ಬರೆದರೆ ವೀರಶೈವ ಮತವನ್ನು ಸ್ಥಾಪಿಸಿದವರು ಶ್ರೀ

ರೇಣುಕ ಭಗವತ್ಪಾದರು ಎಂಬ ವಿಷಯವು ಅನುಮಾನಾಸ್ಪದವು ಎಂದು ನೀವು ಬರೆದಿದ್ದೀರಿ. ಸಿದ್ಧಾಂತ ಬೇರೆ ಮತಸ್ಥಾಪನೆಯು ಬೇರೆ. ಸಿದ್ಧಾಂತ ದಲ್ಲಿ ಬೇರೆ ಬೇರೆ ಸುಧಾರಣೆಗಳನ್ನು ಕಾಲ ಕಾಲಕ್ಕೆ ಮಾಡಬಹುದು. ಆದರೆ ವೀರಶೈವ ಮತವು ಯಾವಾಗಲೂ ಒಂದೇ ಇರತಕ್ಕದ್ದು. ಆದರೆ ಯೋಗ್ಯ ಪ್ರಸಿದ್ಧ ಉತ್ತಮ ಅವತಾರಿಕರ ಉಪದೇಶಕರಂತೆ ಸಿದ್ಧಾಂತದಲ್ಲಿ ಹೆಚ್ಚು ಕಡಿಮೆಯಾಗಬಹುದು. ಕೂಸು ಇದ್ದಾಗ ಎಲ್ಲ ಅಂಗೋಪಾಂಗಗಳು ಚಿಕ್ಕ ವಿರುವವು. ಆದರೆ ದೊಡ್ಡವನಾದಬಳಿಕ ಸಕಲವೂ ಮಾರ್ಪಡುವದು. ಆದರೆ ಮನುಷ್ಯನಲ್ಲಿ ಇರುವ ಮೂಲ ತತ್ವಗಳು ಯಾವಾಗಲೂ ಒಂದೇ ಇರಬೇಕಲ್ಲ ವೇನು ? ಅದರಂತೆ ಸಿದ್ಧಾಂತ ಮತಗಳಲ್ಲಿ ಸಂಬಂಧವಿರುವದು. ಅಲ್ಲದೆ ಮತವನ್ನು ಇಂಥವರಿಂದ ಸ್ಥಾಪಿತವಾಯಿತೆಂದರೆ ಅದಕ್ಕೆ ಕಡಿಮೆಯದೆನಿಸು ವದು. ಅದಕ್ಕೆ ಮಿತಿ ಅಳತೆ ಕಾಲಗಳನ್ನು ಹೇಳಿದಂತೆ ಆಗುವದು. ವೇದ ಧರ್ಮವನ್ನು ಯಾರೂ ಸ್ಥಾಪಿಸಿಲ್ಲ. ಋಷಿಗಳು ತತ್ವಗಳನ್ನು ಸಿದ್ಧಾಂತಗ ಳನ್ನು ಬರೆದರು. ಅದರಂತೆ ವೀರಶೈವವನ್ನು ಯಾರೂ ಸ್ಥಾಪಿಸಿಲ್ಲ. ಆಚಾ ರ್ಯರು ಶರಣರು ಅದರ ಬಗ್ಗೆ ತತ್ವ, ಸಿದ್ಧಾಂತ, ನಿಯಮ, ದರ್ಶನ ಮೊದಲಾದವುಗಳನ್ನು ಬರೆದು ಬೋಧಿಸಿ ಹೋದರು. ಮಹಮ್ಮದೀಯ ಧರ್ಮ, ಜೈನ ಧರ್ಮ, ಬೌದ್ಧ ಧರ್ಮ, ಕ್ರೈಸ್ತ ಧರ್ಮ ಮೊದಲಾದವು ಗಳಿಗೆ ಸ್ಥಾಪಕರಿರುವರು. ಇಂಥ ಇಸ್ವಿಯಲ್ಲಿಯೇ ಇದು ಬಂದಿತು. ಇದಕ್ಕೂ ಮೊದಲು ಇಲ್ಲೇ ಇಲ್ಲೆಂದು ಹೇಳಿ ಕಡಿಮೆಯದೆಂದು ನಾವೇ ಒಪ್ಪಿಕೊಂ ಡಂತೆ ಆಗುವದು. ನಮ್ಮದು ದ್ರಾವಿಡ ಸಂಸ್ಕೃತಿ. ವೇದ ಪೂರ್ವದ್ದು ಎಂದು ಎಲ್ಲರಿಗೂ ಈಗೀಗ ಅನಿಸಿರುವದು. ಅಂದರೆ ಯಾರಿಂದ ಯಾವಾಗ ಆಯಿತೆಂದು ಹೇಳುವದು ಹೇಗೆ ಶಕ್ಯವಿದೆ ? ಪಂಚಾಚಾರ್ಯರು, ಶರಣರು ಅದಕ್ಕೆ ಕಾಲಕ್ಕೆ ತಕ್ಕಂತೆ ಸ್ಥಿತಿಯನ್ನು ತಂದುಕೊಟ್ಟರು. ಆಗಮಗಳಿಗಿಂತ ಮೊದಲು ಈ ವೀರಶೈವವು ಇರಲೇಬೇಕೆಂದು ಹೇಳಬಹುದು. ಯಾಕಂದರೆ ಮೊದಲು ಧರ್ಮ ಮತಗಳು ಇರುವವು. ಹಿಂದಿನಿಂದ ಅವುಗಳ ಗ್ರಂಥ ಗಳು ಆಗುವವು. ಅದರಂತೆ ಮೊದಲು ವೀರಶೈವವು. ಆ ಮೇಲೆ ಆಗ ಮಗಳು ಬಂದವು. ಪಂಚಾಚಾರ್ಯರ ಕಾಲವು ವೇದಗಳ ತರುವಾಯವೆಂದು ಹೇಳುವರು. ಆಗಮಗಳು ವೇದಕ್ಕಿಂತ ಪೂರ್ವದಲ್ಲಿ ಇದ್ದವು. ಅದಕ್ಕಿಂತ ಪೂರ್ವದಲ್ಲಿ ವೀರಶೈವ ಮತವಿತ್ತೆಂದು ಹೇಳುವ ಕಾಲಕ್ಕೆ ಅದರ ಸ್ಥಾಪ ಕರ ಕಾಲವನ್ನು ಹೇಳುವದು ಶಕ್ಯವಿಲ್ಲ. ಅಲ್ಲದೆ ಯಾರು ಸ್ಥಾಪಿಸಿದರೆಂದು

ಹೇಳುವದಂತೂ ದೂರೇ ಉಳಿಯಿತು. ಅದಕ್ಕೆ ಸಿದ್ಧಾಂತವನ್ನು ಹೇಳುವ ಕಾಲಕ್ಕೆ ಮತಸ್ಥಾಪಕರಾದ ಪಂಚಾಚಾರ್ಯರನ್ನು ಎತ್ತಿ ಹಿಡಿದು ಉಳಿದ್ಧು ಕೊಳ್ಳಲಿಕ್ಕೆ ನೀವು ಯತ್ನಿಸಬಾರದು. ಬೇಕಾದರೆ ಪಂಡಿತರನ್ನು ಕೂಡಿಸಿ ಈ ವಿಚಾರವನ್ನು ನಿಷ್ಕರ್ಷಿಸಬಹುದು.

ಸಾವಧಾನಪತ್ರಿಕೆಯ ಸಂಪಾದಕರಾದ ಪಂ. ನಾನಭೂಷಣ ಶಾಸ್ತ್ರಿಗಳು "ವೀರಶೈವಧರ್ಮವು ಎಂದು ಯಾರಿಂದ ಜನ್ಮವೆತ್ತಿತೆಂಬುದು ಯಾವ ಇತಿಹಾಸಕಾರನ ಬುದ್ಧಿಗೂ ಗೋಚರವಾಗಿಲ್ಲ. ಆದರೆ ಅದು ಪೂರ್ಣಾವಸ್ಥೆಗೆ ಬಂದು ೧೨ನೇ ಶತಮಾನದ ಬಸವಾದಿಗಳ ಕಾಲದಲ್ಲಿ ಬಂದುದನ್ನು ಮಾತ್ರ ಯಾರೂ ನಿರಾಕರಿಸರು. ಎಂದು ಬರೆದಿದ್ದಾರೆ. ಇದು ನಾವು ಮೇಲೆ ಬರೆದುದನ್ನೇ ಸ್ಫುತಪಡಿಸುವದು ಇದೇ ಸತ್ಯ, ಶತಸತ್ಯವಾಗಿದೆ. ಇದರಲ್ಲಿ ಯಾವ ಸಂಶಯವೇ ಇಲ್ಲ. ಆದರೆ ನೀವು (ನಾಗಣ್ಣನವರು) ಬರೆಯುವದು ಶುದ್ಧ ತಪ್ಪು. ಎಲ್ಲರಿಗೆ ನಿಜವಾದುದು ಮೇಲಿನಂತೆ ತಿಳಿವದೆ. ಆದರೆ ನಿಮಗೆ ಮಾತ್ರ ಇನ್ನೂ ಏನೂ ತಿಳಿಯದಿರುವದೇ ಬಹು ಹಾಸ್ಯಾಸ್ಪದವೇ ಸರಿ. ಅಂದಮೇಲೆ ವೀರಶೈವವು ಶಕ್ತಿವಿಶಿಷ್ಟಾದ್ವೈತವೆಂಬುದು ಹೇಗೆ ತಿಳಿಯಬೇಕು ಬಹಳ ಜನರಿಗೆ ಇಳಿಯುತ್ತ ಹೋದಂತೆ ತಿಳಿಯುತ್ತ ಹೋಗುವದಂತೆ ಆದರೆ ನಾಗಣ್ಣನವರೆ ನಿಮಗೆ ಇದರ ವಿರುದ್ಧ ಮಾಡುವದಕ್ಕೆ ಬಹು ದುಃಖವೆನಿಸುವದು.

ವೀರಶೈವ ಶಬ್ದದ ಅರ್ಥವನ್ನು ಸಿದ್ಧಾಂತಶಿಖಾಮಣಿಯಲ್ಲಿ ಹೇಳಿದಂತೆ ನೀವು ಮಾಡಿರುವಿರಿ. ವಿ. ಅಂದರೆ ಶಿವಜೀವರ ಐಕ್ಯ ಎಂಬ ವಿದ್ಯೆ ಒಂದು ಹೇಳಿದ್ದೀರಿ. ಯಾವ ಶಬ್ದಕೋಶದಲ್ಲಿಯೂ ಹೀಗೆ ಅರ್ಥವಿಲ್ಲ. ವಿ. ಅಂದರೆ ಹೊರತು–ಇಲ್ಲಿದೆ. ದೂರವಾದ–ನಾನಾತರಹದ ಎಂದು ಅರ್ಥವದೆ. ಅದಕ್ಕೆ ನಾನು ವಿ ಅಂದರೆ ನಿಮ್ಮಂತೆ ವಿತಂಡವಾದಿ ಎಂದು ಹೇಳಿದರೆ ಬರುವದೆಂದು ಅನಿಸುವದು. ವೀರ+ಶೈವ ಎಂದು ಸಂದಿಯಾಗಿದೆ. ವೀರ ಎಂವರೆ ಶಕ್ತಿಯುಳ್ಳ, ಶೈವ ಎಂದರೆ ಶಿವೋಪಾಸಕ–ಅಂದರೆ ಶಕ್ತಿಯುಳ್ಳ ಶಿವನ ಉಪಾಸಕರು ಎಂದು ಸರಳ ಅರ್ಥವೇ ಆಗುವದು. ಇದನ್ನು ಅರ್ಥಕೋಶದಲ್ಲಿ ನೋಡಿಕೊಳ್ಳಿರಿ. ಸಿದ್ಧಾಂತಸಿಖಾಮಣಿಯಲ್ಲಿ ಕವಿಯ ಬೆಡಗಿನ ಅರ್ಥವು ಹಾಗಾಗುವದು. ಆದರೆ ಅದು ನಿಜವಾದ ಶಬ್ದಾರ್ಥವೆಂದೂ ಆಗದು. ಅದು ಕವಿಯ ಹೃದ್ಗತದ ಅರ್ಥವೇ ಹೊರತು ನಿಜವಾದ ಅರ್ಥವಲ್ಲಿ. ಉದಾಹರಣೆಗಾಗಿ ವಕೀಲ ವ ವಚನಭ್ರಷ್ಟ, ಕ್ರಿ= ಕ್ರಿಯಾಭ್ರಷ್ಟ, ಲ=

ಲಬಾಡ, ವಕೀಲ = ವಚನಭ್ರಷ್ಟ, ಕ್ರಿಯಾಭ್ರಷ್ಟ, ಲಬಾಡ ಎಂದು ಅರ್ಥ ಮಾಡುವರಲ್ಲ. ಅದರಂತೆ ವೀರಶೈವದ ಅರ್ಥವನ್ನು ಕವಿಯು ಬಹು ಪ್ರೀತಿಯಿಂದ ಹಾಗೆ ಮಾಡಿರುವದು ಹೊರತು ನಿಜವಾದ ಶಬ್ದಾರ್ಥವು ನೀವು ಮಾಡಿದಂತೆ ಇರುವದು.

ವೈದಿಕ ಮತವನ್ನು ಶಂಕರಾಚಾರ್ಯರೇ ಮಾಡಿದ್ದಾರೆಂದು ಬರೆದ್ದು ಮಹಾ ದೊಡ್ಡ ಅಪರಾಧವನ್ನು ಮಾಡಿದ್ದೀರಿ. ಅವರು ಸ್ಥಾಪಕರಲ್ಲ. ಬೌದ್ಧ ಧರ್ಮದವರಿಂದ ಹಾಳಾಗಿರುವ ವೈದಿಕ ಮತವನ್ನು ಪುನರುಜ್ಜೀವನಗೊಳಿಸಿದ್ದಾರೆ. ಇದನ್ನು ವೈದಿಕ ಧರ್ಮದವರು ಕೇಳಿದರೆ ಓದಿದರೆ ಅವರ ಕ್ಷಮೆಯನ್ನು ಸಹ ಕೇಳಬೇಕಾದೀತು ! ಅದಕ್ಕೆ ಹೀಗೆ ಬರೆಯಬೇಡಿರಿ. ವೈದಿಕ ಧರ್ಮಕ್ಕೆ ವೀರಶೈವರಂತೆ ಸ್ಥಾಪಕರಿಲ್ಲೆಂದು ನೆನಪಿಡಿರಿ-

ವೀರಶೈವಸಿದ್ಧಾಂತವನ್ನು ತಿಳಿದ ಮಠಾಧಿಪತಿಗಳು ಪಂಡಿತರು ಜನರು ಅತ್ಯಂತ ವಿರಳ ಎಂದು ಹೇಳುವ ನೀವು ಮೊದಲು ಅದನ್ನೇ ಎಳ್ಳಷ್ಟು ತಿಳಿದಿಲ್ಲ. ನುಚ್ಚು ರೊಟ್ಟಿ ಕಚಿಪಿಜೆ ಕಲಿಸಿದಂತೆ ನಿಮ್ಮ ಸಿದ್ಧಾಂತವಿರುವದು.

ಶ್ರೀ. ಮ. ನಿ. ಪ್ರ ಸ್ವ. ಬಂಧನಾಳ ಶಿವಯೋಗಿಗಳು ಹೆಂಸಭಾವಿಯಲ್ಲಿ ಶಿವಾನುಭವ ಶಬ್ದಕ್ಕೆ ಪಾರಿಭಾಷಿಕ ಅರ್ಥ ಮಾಡಿದ್ದು ಸರಿ ಅದೆ. ಶಿವಾ+ ಅನುಭವ, ಶಿವಾ= ಶಿವೆ, ಪಾರ್ವತಿ ಶಕ್ತಿ ಎಂದು ಅರ್ಥಕೋಶದಲ್ಲಿ ಅರ್ಥವಿರುವದು ನೋಡಿಕೊಳ್ಳಿರಿ. ಅದಕ್ಕೆ ಶಕ್ತಿಸಮೇತ ಶಿವನ ಅನುಭವವೆಂದು ಅರ್ಥ ಸಹಜ ಹೊರಡುವದು. ಶಿವ+ಅನುಭವ ಶಿ ಕಾರದೊಳಗಿನ ಇಕಾರವು ಸ್ತ್ರೀಲಿಂಗವೆನಿಸುವದು. ಅದನ್ನು ತೆಗೆದರೆ ಶವ ಆಗುವದು ಸಹಜವಿದೆ. ಅದಕ್ಕೆ ಶಕ್ತಿರಹಿತ ಶಿವನು ಶವನಾಗುವದರಲ್ಲಿ ಸಂದೇಹವೇ ಇಲ್ಲ. ಶಿವ ಶಕ್ತಿಯರ ಅವಿನಾಭಾವ ಸಂಬಂಧವೂ ಕೂಡ ಈ ಶಿವಾನುಭವ ಶಬ್ದದಲ್ಲಿ ಪಾರಿಭಾಷಿಕವಾದ ಅರ್ಥದಿಂದ ಅಡಕವಾಗಿದೆ. ಎರಡೂ ರೀತಿಯ ಸಂಧಿಗಳಿಂದ ಶಕ್ತಿ ಸಮೇತ ಶಿವನೆಂದೇ ಅರ್ಥ ಹೊರಡುವದು. ಅದಕಂತೇ ವೀರಶೈವ ಸಿದ್ಧಾಂತವು ಶಕ್ತಿವಿಶಿಷ್ಟಾದ್ವೈತವೇ ಹೌದು. ಶಕ್ತಿಸಹಿತ ಅನುಭವ ಪಡೆದವರೇ ಎಲ್ಲ ಜ್ಞಾನಿಗಳಿದ್ದಾರೆ. ನಿಮಗೆ ಶಕ್ತಿಯ ಜ್ಞಾನವಾಗಲಾರದಕ್ಕಾಗಿ ನಿಮಗೆ ಇನ್ನೂ ಜ್ಞಾನವಾಗಲೆಂದೇ ಹೇಳಬಹುದು. ಶ್ರೀರಾಮಕೃಷ್ಣರ ವಚನಾಮೃತವನ್ನು ಓದಿದರೆ ತಿಳಿಯುವದು. ಶಕ್ತಿಯನ್ನು ಮರೆತು

ಬರೇ ಶಿವನ ಉಪಾಸನೆಯನ್ನು ಮಾಡಿದರೆ ಶಿವಜ್ಞಾನವಾದಾಗ ಶಕ್ತಿಯ ಪೂರ್ಣ ಪ್ರಜ್ಞೆ ಬರುವದು. ಶಕ್ತಿಯ ಅಸ್ತಿತ್ವ ಆಗ ಅವರಿಗೆ ತಿಳಿಯುವದು ಎಂದು ಹೇಳಿದ್ದಾರೆ. ಅದಕ್ಕೆ ತೋತಾಪುರಿಗೆ ಶಕ್ತಿಯ ಜ್ಞಾನವು ಅವರಿಂದಲೇ ಆಯಿತು. ಆಗ ಅವನಿಗೆ ನಿಜವಾದ ಆನಂದ ಶಾಂತಿಗಳುಂಟಾದವು. ಹೀಗೆ ಶಂಕರಾಚಾರ್ಯರಿಗೆ, ವಶಿಷ್ಠರಿಗೆ, ಅರವಿಂದರಿಗೆ, ರಾಮಕೃಷ್ಣರಿಗೆ ಅನೇಕರಿಗೆ ಆಗಿದೆ. ನೀವು ಯಾವ ಯಾವ ಇತಿಹಾಸವನ್ನು ಓದಿದ್ದೀರಿ ? ಶಕ್ತಿ ಮಾಯಾ ಅವಿದ್ಯಾ ವಿದ್ಯಾ ಪ್ರಪಂಚ ಮೊದಲಾದವುಗಳು ಯಾವಾಗಲೂ ಬೀಜರೂಪದಿಂದ ಅವಿನಾಭಾವ ಸಂಬಂಧದಿಂದ ಕಾರಮೇಘದೊಳಗಣ ಮಿಂಚಿನಂತೆ, ಫಲರಸದೊಳಗಣ ನವರುಚಿಯಂತೆ, ಶಶಿಯೊಳಗಣ ತಣ್ಪಿನಂತೆ, ಮರೀಚಿಯೊಳಗಣ ಬಿಸಿಲಿನಂತೆ, ಆಲಿಯೊಳಗಿನ ತೇಜದಂತೆ, ಶಿಲೆಯೊಳಗಣ ಪಾವಕದಂತೆ, ಉದಕದೊಳಗಣ ಪ್ರತಿಬಿಂಬದಂತೆ, ಚಿನ್ನದೊಳಗಣ ಬಣ್ಣದಂತೆ, ಕನ್ಯೆಯೊಳಗಣ ಸ್ನೇಹದಂತೆ, ವೃಕ್ಷದೊಳಗಣ ಬೀಜದಂತೆ ಶಿವಶಕ್ತಿಯರು ಇದ್ದಾರೆ. ಬೇಕಾದಂಥ, ಬೇಕಾದಷ್ಟು ಆಧಾರ, ಉದಾಹರಣೆ, ಅನುಭವಗಳನ್ನು ಕೊಟ್ಟರೂ ನೀವು ವಾದವನ್ನು ಬಿಡುವಂತೆ ತೋರುವದಿಲ್ಲ. ಇದರಂತೆ ಅನೇಕರು ನಿಮಗೆ ಉತ್ತರ ಕಳಿಸಿದರೂ ಇನ್ನೂ ನಿಮ್ಮ ಹಟವನ್ನೇ ಬಿಡಬಾರದೆಂದರೆ ಏನಿದರ ಅರ್ಥ ತಿಳಿಯದಾಗಿದೆ. ಸಿದ್ಧಾಂತಶಿಖಾಮಣಿಯ ೫ನೇ ಪರಿಚ್ಛೇದ ೬ನೇ ಪರಿಚ್ಛೇದಗಳಲ್ಲಿಯ ಹೀಗೆ ಬರೇ ಅದ್ವೈತಪರವಾಗಿಯೇ ಇರುವ ಶ್ಲೋಕಗಳನ್ನು ಸದಾ ಬರೆಯುತ್ತ ಅಪಾರ್ಥ ಅರ್ಥ ಮಾಡುತ್ತ ಸಕಲ ಶಾಸ್ತ್ರವನ್ನೇ ಕೆಡಿಸುತ್ತ ನಡೆದಿದ್ದೀರಿ. ಸಲ್ಪ ಶಾಂತರಾಗಿರಿ. ಸರಿಯಾಗಿ ಸಾಧನ ಮಾಡಿರಿ. ಮುಪ್ಪಿಗೆ ಒಪ್ಪುವಂತೆ ನಡೆಯಿರಿ.

ನಿಮಗೆ ಮೋಕ್ಷಬೇಕಾದರೆ ಹೋಗಿರಿ ಈಗಲೇ ಇನ್ನೂ ಎಷ್ಟು ದಿನ ಈ ಸುಳ್ಳು ಸಂಸಾರದಲ್ಲಿ ಉ. ಮ. ಹೇ. ಮ. ಗಳನ್ನು ಮಾಡುವಿರಿ. ಉಳಿದವರು ಶಿವಾನುಭವ ಸಂಘ ಸಮ್ಮೇಳನ ಮಾಡಿ ಅನ್ಯರ ಉದ್ಧಾರ ಮಾಡಿ ಸ್ವಾರ್ಥತ್ಯಾಗಿಗಳಾಗಲಿ ನೀವು ಒಳ್ಳೇ ಸ್ವಾರ್ಥಿಗಳಾಗಿ ಮುಕ್ತರಾಗಿರಿ ಎಲ್ಲರನ್ನೂ ಇಲ್ಲಿ ದುಃಖದಲ್ಲಿ ಇರಿಸಿ ನೀವೊಬ್ಬರೇ ಸುಖದಲ್ಲಿ ಇರುವದು ಎಂಥ ಸ್ವಾರ್ಥ ವಿಚಾರಿಸಿರಿ? ಅದಕ್ಕೆ ನೀವೇ ಭಗವಂತನ ಧ್ಯಾನ ಪೂಜೆಗಳನ್ನು ಮಾಡಿ ನಿಮ್ಮ ಅಂತಃಕರಣವನ್ನು ಶುದ್ಧಮಾಡಿಕೊಂಡು ಸ್ವಾರ್ಥ ಬಿಡಿರಿ. ಶಕ್ತಿಯನ್ನು ಅರಿಯಿರಿ.

ಲಿಂಗಾಂಗ ಸಾಮರಸ್ಯದ ಅರ್ಥವನ್ನು ಶ್ರೀ ಮ. ನಿ. ಪ್ರ. ಸ್ವರೂಪಿಗಳಾದ ಬಂಥನಾಳ ಶಿವಯೋಗಿಗಳಿಗೆ ಉಪದೇಶಿಸುವದು ನಿಮಗೆ ಬಹು ಹೇಯವೆನಿಸುವದು. ನೀವು ಹೊಸದಾಗಿ ಪಾರಮಾರ್ಥಕ್ಕೆ ಒಲಿದಿರಬಹುದು. ಅವರು ಹುಟ್ಟುವಾಗಲೇ ಆ ಪದವಿಯನ್ನು ಪಡೆದು ಬಂದಿರುವರು. ನೀವು ಯಾರಿಗೂ ಉಪದೇಶಿಸಲಿಕ್ಕೂ ಬರೆಯಲಿಕ್ಕೂ ನಿಜ ಅಧಿಕಾರಿಗಳಲ್ಲೆಂದು ನಿಮ್ಮ ಯಾವತ್ತೂ ಆಂತರಿಕ ವ್ಯವಹಾರ ಬಲ್ಲವರಿಗೂ ಹಾಗೂ ನಿಮ್ಮ ಲೇಖನಗಳನ್ನು ಓದಿದವರಿಗೂ ಅನಿಸದೆ ಬಿಡುವದಿಲ್ಲ. ಮಠಾಧಿಪತಿಗಳೂ, ಪಂಡಿತರೂ, ವೀರಶೈವ ಸಿದ್ಧಾಂತವನ್ನು ಚನ್ನಾಗಿ ಅರಿತಿದ್ದಾರೆ. ನೀವು ಮಾತ್ರ ಇನ್ನೂ ತಿಳಿದಿಲ್ಲ. ಕಾಲ ಹೋಗುವ ಮುನ್ನ ಅರಿತುಕೊಳ್ಳಿರಿ. ನಿಮ್ಮ ಮೋಕ್ಷದ ಅರ್ಥ ಬಹು ಪವಿತ್ರವಾಗದೆ ಸತ್ತಬಳಿಕ ನಿಮಗೆ ಮೋಕ್ಷವಾಗುವದು. ಅದೇನು ಉದ್ರಿ ಪಂಚಾಂಗವಲ್ಲ. ಇಷ್ಟುದಿನಗಳಳಿದರೂ ಮೋಕ್ಷ ಶಬ್ದದ ಅರ್ಥವೇ ಗೊತ್ತಿಲ್ಲೆಂದ ಮೇಲೆ ಸತ್ತ ಬಳಿಕ ನಿಮಗೆ ಏನಾದರೂ ಏನು ಪ್ರಯೋಜನ ? ಆದದ್ದೆಲ್ಲ ಮೋಕ್ಷವೆನ್ನುತ್ತ ಸತ್ತರಾಯಿತೆಂದು ನಿಮ್ಮ ಶಾಸ್ತ್ರಾರ್ಥವಾಗಿದೆ. ದಯಮಾಡಿ ಇಂಥ ಮೋಕ್ಷವನ್ನು ಅನ್ಯರಿಗೆ ಹೇಳಬೇಡಿರಿ. ಮಹಾ ಅಪರಾಧ ಮಾಡಿದಂತೆ ಆಗುವದು.

"ಕೆರವಗಿವ ಶುನಿಯು ಖಂಡ ಶರ್ಕರವ ಮೆಲ್ಲುವುದೆ ?" ಎಂಬ ನಿಮ್ಮ ಬರಹವು ನಿಮಗೇ ಹತ್ತುವದು. ಶಕ್ತಿವಿಶಿಷ್ಟಾದ್ವೈತವೆಂಬ ಖಂಡ ಶರ್ಕರವ ಮೆಲ್ಲಲು ಇನ್ನಾದರೂ ಕಲಿಯಬೇಕು. ನಿಮ್ಮ ಲೇಖದಲ್ಲಿ ಎಲ್ಲರಿಗೂ ಹುಚ್ಚುಚ್ಚಾರ ಬೈಯುವದು ಮೂರ್ಖತನವೇ ಸರಿ ಯಾರಿಗೂ ಬೈಯದಂತೆ ತತ್ವವಿಚಾರವನ್ನೇ ಮಾಡಬೇಕು. ಬಾಯಿಯನ್ನು ಲೇಖಣಿಯನ್ನು ಬಿಗಿಹಿಡಿದು ಉಪಯೋಗಿಸಬೇಕು ಎಂದು ಎಚ್ಚರಿಕೆಯನ್ನು ಕೊಡಬಯಸುವೆವು.

## ವಿಜಯಪುರ ನಗರಸಭೆಯ ಶಿಕ್ಷಣ ಸಮಿತಿಯ ಪರವಾಗಿ

# ಶಿಕ್ಷಣಾಭಿವೃದ್ಧಿಗೆ ಪ್ರೋತ್ಸಾಹನ




* ವಿನಾಯಕನ ಉತ್ಸವದಲ್ಲಿ ಜಿಲ್ಲಾಧಿಪತಿಗಳು *

ಹರುಷ ಶರಧಿ! ಶ್ರೀ. ಎಸ್. ರಾಮನಾಥನ್ ।
ಸರಸ ಸಂದರ್ಶನದ ಶುಭದಾಯ ಮಿಲನ ॥
ಹೇರಲಗಿಯವರ, ಯಶಸ್ವೀ ಸುಖಸದನ ।
ಹಾರೈಸಲಿ, ಶ್ರೀಮಂಗಲ ಮೂರ್ತಿ ಗಜಾನನ ॥೧॥

ಶ್ರೇಷ್ಠ ವಿಜಯಪುರದ ಪ್ರಜಾರಾಜ್ಯ ಸೇವೆಯನು ।
ಇಷ್ಟ ಸ್ವಾತಂತ್ರ್ಯ ಸುಜನ ಹಿತದ ಹಿರಿಮೆಯನು ॥
ನಿಷ್ಠೆಯಿಂ ಪಾಲಿಸುತ, ಆಡಳಿತೆಯ ಕರ್ತವ್ಯವನು ।
ದೃಷ್ಟಿ ಜ್ಞಾನಪರ ಸಾಮೂಹಿಕ ಸಮತೆಯನು ॥೨॥

ಪ್ರೇಮದಾಮಂತ್ರಣಕೆ ಆಶಾದೀಪ ಬೆಳಗಿಸುತ ।
ನೆಮ್ಮದಿ ಒಡಗೂಡಿ, ಸತಿ ಸುಮಿತ್ರಾದೇವಿ ಸಹಿತ ॥

ನಮ್ಮ ಎಸ್. ಎಸ್. ಹೇರಲಗಿ ಸಮೂಹವಂ ಪ್ರೋತ್ಸಾಹಿಸುತ ।
ಸುಮಹೋದಯ ಜಿಲ್ಲಾಧಿಪತಿ ಶ್ರೀ ಎಸ್. ಎನ್. ರಾಮನಾಥನ್ ॥೩॥

ಕಾಂತಿ ಪೊಂದುತಿಪ, ಕರ್ನಾಟಕಕೆ ಕೀರ್ತಿಯುತ ।
ಶಾಂತಿ ಯೋಜನೆ ಪಂಚವಾರ್ಷಿಕ ಫಲಿಸುತ ।
ಕ್ರಾಂತಿಮಯದೇಳ್ಗೆಯಲಿ ಶ್ರಮಪ ವಹಿಸುತ ।
ಪ್ರಾಂತ ನವ ಮೈಸೂರಿಗೆ ಲೋಕಪ್ರಿಯರಾಗುತ ॥೪॥

ಭಾರತದ ಒಡೆಯಲಾಗಿರುವ ಬಂಧು ರಾಜ್ಯಂಗಳಲಿ ॥
ವೀರ ಕನ್ನಾಡು ಓಲಾಟದೊಳು ಮೇಲಾಡುವದರಲಿ ॥
ನಿಮ್ಮ ಮತಿನೈಪುಣ್ಯಗಳ ಹಿರಿ ಸೇವೆ ಸಲ್ಲಲಿ ।
ನಿಮ್ಮ ವಂಶವು ಬೆಳಗಿ, ನಾಡು ನಿಮ್ಮನು ಪಾಡುತಿರಲಿ ॥೫॥

—o—

# ಶ್ರಾವಣಮಾಸದ ಸಂದರ್ಶನ.

(ಲೇಖಕಃ— ಶ್ರೀಯುತ ಸಿ. ನಾ. ಮಹಾಂತಣ್ಣವರ-ಹೊನೂರು.)



ವರ್ಷದಲ್ಲಿ ಉಂಟಾಗಿರುವ ಹನ್ನೆರಡು ಮಾಸಗಳಲ್ಲಿ ಒಂದೊಂದು ಮಾಸದ ಕಾಲಮಾನವನ್ನನುಸರಿಸಿ, ಅಯನಗಳೂ, ಋತುಗಳೂ, ಮಾಸಗಳೂ, ಪಕ್ಷಗಳೂ, ವಾರಗಳೂ, ದಿನಗಳೂ, ತಾಸುಗಳೂ, ಗಳಿಗೆಗಳೂ, ಫಳಗಳೂ, ವಿಫಳಗಳೂ, ನಿಮಿಷಗಳೂ ಉಂಟಾಗಿರುವವಷ್ಟೇ! ಈ ಕಾಲವಿಭಾಗಗಳನ್ನ ನುಸರಿಸಿ, ಕೆಲವರು ಚಾತುರ್ಮಾಸಗಳೆಂದು ಮೂರು ವಿಭಾಗಗಳನ್ನು ಮಾಡಿ ಕೊಂಡಂತೆ, ನಮ್ಮೀ ಕರ್ನಾಟಕ ಸಮಾಜವು ಬೇಸಿಗೆಕಾಲ, ಮಳೆಗಾಲ, ಚಳಿಗಾಲವೆಂದು ತ್ರಿವಿಧವನ್ನುಂಟು ಮಾಡಿಕೊಂಡು, ಒಕ್ಕಲಿಗರು ಬೇಸಿಗೆಯು ಬೇಸಾಯವನ್ನೂ, ನೇಕಾರರು ಅದೇ ಬೇಸಿಗೆಯಲ್ಲಿ ತಮ್ಮ ಕೂಡಿಟ್ಟ ಕೈಗಾ ರಿಕೆಯ ಒಡವೆಗಳನ್ನು ಮಾರಿ ತಮ್ಮ ಕಾಳಿನ ಸಂಗ್ರಹನನ್ನು, ವ್ಯಾಪಾರ ಸ್ಥರು ಅರಿವೆಅಂಚಡಿ ಕೈಗಾರಿಕೆಯ ಸಾಮಾನುಗಳ ವ್ಯಾಪಾರ ಮಾಡಿ ಬಂದ ಹಣದಿಂದ ತಮ್ಮ ಜೀವನೋಪಾಯಗಳನ್ನೂ ಮಾಡುವಂತೆ, ಬೇರೆ ಬೇರೆ ಕಾಯಕದವರು ತಮ್ಮ ತಮ್ಮ ವೃತ್ತಿಗನುಸರಿಸಿ ತಮ್ಮ ಯೋಗ್ಯತಾನುಸಾರ ವಾಗಿ ಜೀವನದ ಪದಾರ್ಥಗಳನ್ನು ಕೂಡಿಟ್ಟು ಮುಂಗಾರಿಯ ಮಳೆರಾಜ ನನ್ನು ಸ್ವಾಗತಿಸುತ್ತ ಮೃಗಪಂಚಕಗಳಲ್ಲಿ ಉಂಟಾದ ಹದವನ್ನರಿತು, ಬೆದೆ ಗಾಲೊಳು ತಕ್ಕ ಬೀಜಗಳ ಬಿತ್ತಿದನಂತರ ಜಗದೀಶನು ಜಗದಾಕಾರನಾಗಿ, ಥಳಥಳಿಸಿ ಹೊಳೆಹೊಳೆವ ನಳನಳಿಪ ಬೆಳೆಗಳನ್ನೀಕ್ಷಿಸುತ್ತ ಶ್ರಾವಣಮಾಸವು ಬರುತಿರಲು, ಸದಾನಂದವನ್ನು ಬೀರುವ ವೇದಶಾಸ್ತ್ರ ಆಗಮ ಪುರಾಣೋ ಕ್ತಿಗಳನ್ನು ಕೇಳಲು ಯೋಗ್ಯವಾದ ಈ ಶ್ರಾವಣಮಾಸದಲ್ಲಿ ಶ್ರವಣಮಾಡುತ್ತ ಕೇಳಿದ್ದನ್ನು ಮನನ ಮಾಡುತ್ತ ಹಾಗೆಯೇ ನಿಧಿಧ್ಯಾಸಪನ್ನು ನಿಲ್ಲಿಸುತ್ತ ಸತ್ಕ್ರಿಯೆವಿಡಿದು, ಗುರುಲಿಂಗಜಂಗಮದ ದಾಸೋಹಿಗಳಾಗಿ ಚತುರ್ವಿಧ ಷಡ್ವಿಧ ನವವಿಧ ಭಕ್ತಿಸಂಪನ್ನರಾಗಿ, ಲಿಂಗತ್ರಯವಿಡಿದು ಪೂಜಿಸಿ, ಅಂಗ ತ್ರಯದೊಳು ಅಳವಡಿಸಿಕೊಂಡು ದಶವಿಧ ಪಾದೋದಕ ಏಕಾದಶ ಪ್ರಸಾದ ಗಳ ಪರಿಯನ್ನರಿತು ಲಿಂಗಾಂಕ ಸಾಮರಸ್ಯವನ್ನು ಹೊಂದುವಂಥ ಸಾಧನ ಸಾಹಿತಿಗಳಾಗಿ, ಪ್ರತಿಯೊಂದು ಮಾಸಾಂತ್ಯದಲ್ಲಿ ಒದಗುವ ಚತುರ್ದಶಿಗಳಲ್ಲಿ

ಶಿವಶರಣರು ಆಚರಿಸುತ್ತ ಬಂದ ಮಹಾಮನೆಯು ಶಿವಾಚಾರವನ್ನೇ ಸ್ವಯ ಚರ ಪರ ಜಂಗಮವಿಡಿದು ಮಹಾ ಶಿವರಾತ್ರಿ ಶಿವಯೋಗ ಕಾಲದೊಳು ಬಿತ್ತಿದ ಬೀಜವೂ ಹತ್ತಿಯು ತೊಳೆಯೂ ಕೈಗೆ ಬರುವ ಸಂಗ್ರಹದ ಸಂಧಾನದಲ್ಲಿ ಅಂದರೆ ಶಿವಯೋಗಕಾಲದಲ್ಲಿ (ಮಾಘಮಾಸಾಂತ್ಯದಲ್ಲಿ) ಇಡೀ ಸಮಾಜವೇ ಲಿಂಗಾಂಗಸಂಗ ಸಮರಸಹೊಂದಿ ಸಂದಿಲ್ಲದ ಸುಖಸಾಮ್ರಾಜ್ಯದಲ್ಲಿ ಇರುವ ಶಿವಾನುಭವವು ಸಕಲ ಜೀವಿಗಳಿಗೂ ಸಂಭವನೀಯವೇ ಸರಿ.

ಜಗದೀಶನಿತ್ತ ಹೊಲಮನೆಗಳಿದ್ದ ಹೊವುನೂರ (ಹುನ್ನೂರ) ಎಂದೆನಿಸುವ ಊರಿಗೆ ಸದ್ಯಕ್ಕೆ ಧಾರವಾಡ ವಾಸಿಯಾದ ನಾನು ಶ್ರಾವಣ ಮಾಸದ ಮೊದಲನೇ ವಾರದಲ್ಲಿ ಹೋದೆನು, ಅಲ್ಲಿ ದೇಗುಲದ ಜ್ಞಾನಮಂದಿರದಲ್ಲಿ ಬೆಳಿಗ್ಗೆ ೫|| ಗಂಟೆಯಿಂದ ೬|| ಗಂಟೆಯ ವರೆಗೆ ಶ್ರೀ ನಿಜಗುಣಾರ್ಯರ ಪಾರಮಾರ್ಥ ಗೀತೆಯೂ ಸಂಜೆಯ ೫|| ಗಂಟೆಯಿಂದ ೬|| ಗಂಟೆಯ ವರೆಗೆ ವೃತ್ತಿಪ್ರಭಾಕರ ರತ್ನವೆಂಬ ಶಾಸ್ತ್ರಾನುಭವವೂ ಶ್ರೀಬಸವೇಶ್ವರ ದೇವಾಲಯದಲ್ಲಿ ಸಂಜೆಯ ೭|| ಗಂಟೆಯಿಂದ ೮|| ಗಂಟೆಯ ವರೆಗೆ ಶ್ರೀ ಭಗವದ್ಗೀತೆಯೂ ಗದಗಿನ ಸ್ವಾಮಿಗಳಾದ ಶ್ರೀ ಷ. ಬ್ರ. ಗಳಾದ ಶ್ರೀ ಮಲ್ಲಿಕಾರ್ಜುನರೆಂಬ ಮಹಾನುಭಾವರಿಂದ ಆಷಾಢಮಾಸದೊಳಾರಂಭವಾಗಿ ಚ್ಯುತಿಯಿಲ್ಲದೆ ಸಾಗಿದ್ದನ್ನು ಕೇಳಿ ದಿನಂಪ್ರತಿ ನಾನಾದರೂ ಶ್ರವಣಮನನ ನಿಧಿಧ್ಯಾಸಗಳಿಂದ ಆನಂದಾಬ್ಧಿಯಲ್ಲಿ ಮುಳುಗಿ, ಸದ್ಭಕ್ತ ಮಹಾತ್ಮೆಯ ಮಹಾನಂದವರ್ತಿಯಾಗಿ ಷಟ್‌ಸ್ಥಲಗಳಲ್ಲಿ ಕಂಡುಬಂದ ಶ್ರುತಿಜ್ಞಾನ ಮತಿಜ್ಞಾನ ಖಂಡ ಜ್ಞಾನ ಕೇವಲಜ್ಞಾನ ಜ್ಯಾತಿಜ್ಞಾನ ಪರಂಜ್ಯೋತಿ ಜ್ಞಾನಗಳು ಕ್ರಮಗೊಂಡು ನಿಯತವಾಗಿ ನಿಲ್ಲುತ್ತ ಜ್ಞಾನತ್ರಯುಗಳಾದ ಜ್ಞಾತೃ ಜ್ಞಾನ ಜ್ಞೇಯುಗಳ ಹಾಗು ಧ್ಯಾತೃ, ಧ್ಯಾನ, ಧ್ಯೇಯುಗಳ, ಮತ್ತು ಮನ, ಮನನ, ಮನನೀಯುಗಳ, ಜಾಗ್ರತ್, ಸ್ವಪ್ನ ಸುಷುಪ್ತಿಗಳ, ವಿಶ್ವತೈಜಸ. ಪ್ರಾಜ್ಞಗಳ, ಅಧಿಭೂತ, ಅಧಿದೈವ, ಅಧ್ಯಾತ್ಮಗಳ, ತತ್, ತ್ವಂ, ಅಸಿಗಳ, ಜೀವಾತ್ಮ, ಅಂತರಾತ್ಮ, ಪರಮಾತ್ಮಗಳ ಸ್ವರೂಪವೂ ಆಯಾ ಸ್ವರೂಪಗಳ ಅನುಭವವೂ ಆಗುತ್ತ, ತೋರುವ ತೋರಿಕೆಯೇನೂ ಇಲ್ಲದಂತಾಗಿ, ಶಿವನ ಸದ್ರೂಪವು ಸಮನಿಸಿ ಚಿದ್ರೂಪವು ನೆಲೆಗೊಂಡು ಚಿನ್ಮಯ ಸ್ವರೂಪದಲ್ಲಿ ಅಂದರೆ ಲಿಂಗಾಂಗ ಸಮರಸದಲ್ಲಿ ಲೀನವಾಗುವ ಆ ಬೋಧಾಮೃತವು ಸಚ್ಚಿದಾನಂದ ನಿತ್ಯಪರಿಪೂರ್ಣದ ಲಕ್ಷಣಗಳು ಆಯಾ ಅಧಿಕಾರಿಗಳ ಸಾಧನಸಾಮಗ್ರಿಗಳಂತೆ ತೋರ ಹತ್ತಿದವೆಂದು ಹೇಳಲು ಆನಂದವೆನಿಸುವದು.

ಆ ಊರಲ್ಲಿ ಭಕ್ತಿಯಖಣಿ, ಶಾಂತಿಯಮಣಿ, ಪರುಷದಖಣಿ, ಸತತೋದ್ಯೋಗದ ಶಿಖಾಮಣಿಯಾದ ಚಿಕ್ಕಾದ ಓಣಿಯ ಶ್ರೀಬಸವೇಶ್ವರ ದೇವಾಲಯದ ಪಟಾಂಗಣದ ವಿಶಾಲತೆಯ ರಮ್ಯವಾದ ಮಣಿಮಂಟಪದಲ್ಲಿ ಮಹಾವಿದ್ಯಾವಿಶಾರದರಾದ ಶಿವಮೂರ್ತಿಗಳ ಅಗ್ರಪೀಠವು ದಿನಮಣಿಯ ಉದಯಕಾಲದ ಸಂಭ್ರಮದ ಸರ್ವೇಶ್ವರನ ಕಾಂತಿಯನ್ನು ಬೀರುತ್ತಿತ್ತು. ಅಲ್ಲಿಗೆ ದಿನಾಲು ಶ್ರೀ ಭಗವದ್ಗೀತೆಯ ಶ್ರವಣ ಮಾಡಲು ಅಕ್ಕನ ಬಳಗವೂ ಬಸವನ ಬಳಗವೂ ಕಿಕ್ಕಿರಿದು ಕೂಡುತ್ತಿರುವದಲ್ಲದೆ, ಸರ್ವಸಂಗಡದ ಬಂಧುಭಗಿನಿಯರೂ ಪುರುಷರೂ ಆಗಮಿಸಿ ಮೂರು ಸಾವಿರಕ್ಕಿಂತ ಕಡಿಮೆಯಿಲ್ಲದಷ್ಟು ಜನಾಂಗವು ಕೂತುಕೊಂಡಾಗ ಗೀತಗಾಯನ, ವಚನಗಾಯನ, ಸ್ತೋತ್ರಗಾಯನಾದಿಗಳು ಮುಗಿದ ಕೂಡಲೆ ಸ್ವಾಮಿಗಳ ಶಿವಯೋಗಸಂಧಾನಾಬ್ಧಿಯ ತೆರೆಗಳು ಮಂಗಲಮಯವಾಗಿ ಮೂರ್ತಗೊಂಡು ಹೊರಹೊಮ್ಮುತ್ತ ಪ್ರಾರಂಭಿಸಿದ ಅವರ ಬ್ರಹ್ಮ ಶಿವಚಿಂತನದ ಸ್ವರೂಪದಲ್ಲಿ ನಮಸ್ತೇ ಎಂಬ ಶಬ್ದ ಹೊರಬೀಳುವಾಗ ಮೂರು ಸಾವಿರ ಆತ್ಮಗಳ ಸ್ವರೂಪವನ್ನು ಕಂಡುಹಿಡಿದರೆ, ಆಗ ಒಂದು ಸೂಜಿ ಕೆಳಗೆ ಬಿದ್ದದ್ದಾದರೆ, ಆ ಸಪ್ಪಳವು ಎಲ್ಲರಿಗೂ ಕೇಳ ಬರುವಂತೆ ನಿಃಶಾಬ್ದತ್ಮಕವಾಗಿ, ನಿರಾವರಣವಾಗಿ, ಚಿತ್ತೈಕಾಗ್ರವಾಗಿ ನಿರಾಳವಾಗಿ ಶ್ರವಣಾತುರವಾಗಿ ತೋರುತ್ತಿತ್ತು. ಈ ಸ್ಥಿತಿಯು ಶಾಸ್ತ್ರ ಮುಗಿಯುವ ವರೆಗೂ ಇರುವ ಪರಿಣಾಮವು ಆ ಸ್ವಾಮಿಗಳ ಸಪ್ತಭೂಮಿಕೆಗಳ ಷಟ್‌ಸ್ಥಳಗಳ ಸಾರಾಮೃತವನ್ನು ಉಂಡ, ಜಂಜಡವಿಲ್ಲದ ಮಹಾನಂದದ (ಮಹಾಜ್ಞಾನದ) ಪ್ರಭಾಪ್ರಕಾಶವೆಂದೇ ಹೇಳಲು ಅಡ್ಡಿ ಇಲ್ಲ.

ಪ್ರತಿ ದಿವಸ ಮುಂಜಾನೆ ೫॥ ಗಂಟೆಯಿಂದ ೬॥ ಗಂಟೆಯ ವರೆಗೆ ಶ್ರೀ ನಿಜಗುಣಾರ್ಯರ ಪಾರಮಾರ್ಥ ಗೀತೆಯು ಸಾಗುತ್ತಿತ್ತಷ್ಟೇ! ಇದರಲ್ಲಿ ೧೦ ಗತಿಗಳಿದ್ದು ೧ನೇ ಗತಿಯಲ್ಲಿ ವಸ್ತು ಹಾಗೂ ಶಕ್ತಿಗಳ ವಿಮರ್ಶೆಯೂ ೨ನೇ ಗತಿಯಲ್ಲಿ ಭೂತಪಂಚೀಕರಣವೂ ೩ನೇ ಗತಿಯಲ್ಲಿ ಆ ಪಂಚಭೂತಗಳ ಗುಣವಿವರಣೆಯೂ ೪ನೇ ಗತಿಯಲ್ಲಿ ಸೃಷ್ಟಿಕ್ರಮ ಹಾಗು ಅಂಡಜ, ಪಿಂಡಜ, ಜರಾಯುಜ, ಉದ್ಭಿಜ, ಮಲತ್ರಯ, ಶರೀರದ ಉತ್ಪತ್ತಿ, ಸಪ್ತಧಾತು, ಷಡ್ಭಾವ, ಷಟ್‌ಚಕ್ರ, ಆ ಚಕ್ರಗಳ ಸ್ಥಳಕುಳದಳ, ಪಂಚಕೋಶ, ಅರಿಷಡ್ವರ್ಗಾದಿಗಳ ವಿವರಣೆಯೂ ೫ನೇ ಗತಿಯಲ್ಲಿ ಕರಣ ಚತುಷ್ಟಯಗಳ ಕಾರ್ಯ ಹಾಗೂ ಸಂಕಲ್ಪವಿಕಲ್ಪಗಳ ವಿಕಾರವೂ ೬ನೇ ಗತಿಯಲ್ಲಿ ಬಂಧಮೋಕ್ಷಗಳ ಪರಿಯೂ ಹೇಳಲ್ಪಟ್ಟಿದೆ.

ಇದರಂತೆ ಶ್ರೀ ಚನ್ನಬಸವದೇವರು ವಿರಚಿಸಿದ ಕರಣಹಸಿಗೆಯಲ್ಲಿ ಓಂಕಾರ ಪ್ರಣವದ "ಅಕಾರೇಚ ಉಕಾರೇಚ ಮಕಾರೇಚ ತೃತೀಯತೆ | ಇದಮೇಕಂ ಸಮುತ್ಪನ್ನಂ ಓಂ ಇತಿ ಜ್ಯೋತಿರೂಪಕಂ॥" ಈ ಶ್ಲೋಕಾನುಭವದಿಂದಲೂ ಓಂಕಾರಾತ್ಪ್ರಭವಾವೇದಂ ಓಂಕಾರಾತ್ಪ್ರಭವಾ ಸ್ವರಂ | ಓಂಕಾರಾತ್ಪ್ರಭವಾ ಸರ್ವಂ ತ್ರೈಲೋಕ್ಯಂ ಸಚರಾಚರಂ ||" ಈ ಶ್ಲೋಕದಿಂದಲೂ ನಾಲ್ಕು ವೇದಗಳೂ ಉಪವೇದಗಳೂ ಆಗಮಗಳೂ ಶಾಸ್ತ್ರಗಳೂ ಪುರಾಣಗಳೂ ಷಡಧ್ವ ಷಡ್ಗುಣ ವಸ್ತುಗಳೂ ತತ್ವಪಂಚಕವೂ, ಸಪ್ತ ಭುವನಂಗಳೂ ಹುಟ್ಟಿದವು ಮಹಾದೇವನ ಸದ್ಯೋಜಾತ ಮುಖದಿಂದ ಪೃಥ್ವಿ, ವಾಮದೇವ ಮುಖದಿಂದ ಅಪ್ಪು, ಅಘೋರ ಮುಖದಿಂದ ತೇಜ, ತತ್ಪುರುಷ ಮುಖದಿಂದ ವಾಯು, ಈಶಾನ ಮುಖದಿಂದ ಆಕಾಶಗಳೆಂಬ ಪಂಚ ಭೂತಗಳು ಹುಟ್ಟಿದವು. ಆಕಾಶ ತತ್ವದ ಅಧಿದೈವ ಸದಾಶಿವನು. ಈತನ ಕೃತ್ಯವು ತಿರೋಧಾನವು. ಅಗ್ನಿತತ್ವದ ಅಧಿದೈವ ರುದ್ರನು. ಈತನ ಕೃತ್ಯವು ಲಯವು. ಅಪ್ಪು ತತ್ವದ ಅಧಿದೈವ ವಿಷ್ಣುವು. ಈತನ ಕೃತ್ಯ ಸ್ಥಿತಿಯು ಪೃಥ್ವಿತತ್ವದ ಅಧಿದೈವ ಬ್ರಹ್ಮನು. ಈತನ ಕೃತ್ಯ ಸೃಷ್ಟಿಯು.

ಅಂಡಜ, ಪಿಂಡಜ, ಜರಾಯುಜ, ಉದ್ಭಿಜಗಳೆಂಬ ಸೃಷ್ಟಿಯ ಉತ್ಪತ್ತಿಸ್ಥಿತಿಲಯಗಳಿಗೆ ಕಾರಣರು ಬ್ರಹ್ಮ ವಿಷ್ಣು ರುದ್ರರು. ಆಯಾ ಚೇತನಗಳ ಪಾಪ ಪುಣ್ಯಗಳ ಮಾನದಂತೆ ಆಯಾ ಜನ್ಮಗಳನ್ನು ಕೊಡುವ ಈಶ್ವರನೇ ತಿರೋಧಾನ ಕೃತ್ಯದ ಅಧಿದೇವತೆಯಾಗಿ ತಾನೇ ಜೀವ ನೆನಿಸಿ, ತಾನೇ ಸರ್ವ ಚೇತನಗಳಿಗೆ ಪೂಜ್ಯ ರೂಪನಾಗಿರುತಿಹನಷ್ಟೇ! ಬ್ರಹ್ಮ ಜ್ಞಾನದಿಂದ ಬ್ರಾಹ್ಮಣನೆನಿಸಿದಾತನು, ಅನಾಚಾರದಿಂದ ಶೂದ್ರನೆನಿಸಿದ ಹಾಗೆ, ಆ ಈಶ್ವರನೇ ವಿಷಯಾಸಕ್ತನಾಗಿ ಜೀವನಾಗಿಹನು. ಆ ಜೀವನೇ ಅನೇಕ ಜನ್ಮದ ಸಂಸ್ಕಾರದೊಳು ಪುಣ್ಯಮಂ ಗೈದು ಮಾನವ ಜನ್ಮಕ್ಕೆ ಬಂದು ಜ್ಞಾನಾಜ್ಞಾನದ ಸತ್ಯಾಸತ್ಯದ ಕ್ರಿಯಾಕ್ರಿಯೆಯ ಧರ್ಮಾಧರ್ಮದ ಆಧಾರಾಧೇಯದ ಭಾವಾಭಾವದ ದೃಶ್ಯಾದೃಶ್ಯದ ಅಹಂ ಇದಂ ದ ವಿಷಯಾವಿಷಯದ ಸಂಕಲ್ಪ ವಿಕಲ್ಪದ ಜೀವ ಪರಮರ ಅಥವಾ ಅಂಗ ಲಿಂಗಗಳ ಸುವಿಚಾರದಿಂದ ಚಿತ್ತ ಸುಚಿತ್ತ, ಬುದ್ಧಿ ಸುಬುದ್ಧಿ, ಅಹಂಕಾರ ನಿರಹಂಕಾರ, ಮನ ಸುಮನ, ಜ್ಞಾನ ಸುಜ್ಞಾನ, ಭಾವ ಸದ್ಭಾವಗಳನ್ನರಿಯಲು ಸದ್ಗುರುಗಳ ಸನ್ನಿಧಿಯಿಂದ ಹಿತಾಹಿತಗಳನ್ನರಿತು ಸಂಸಾರದಲ್ಲಿ ಹೇಯವುಂಟಾಗಿ ವೈರಾಗ್ಯ ಸಂಪದವನ್ನು ಪಡೆಯುವದೇ ಮುಮುಕ್ಷುವಿಗೆ ಮೊದಲನೇ ಭೂಮಿಕೆಯು.

ಮೋಕ್ಷ ವಿಷಯಂ ವೈರಾಗ್ಯಂ
ಬಂಧಂ ವಿಷಯ ಮೋಹಕಂ

ಎಂಬದಾಗಿಯೂ "ಕಣ್ಣಮುಂದಿನ ಕಾಮನ ಕೊಂದು, ಮನದ ಮುಂದಿನ ಆಶೆಯ ತಿಂದು ಆತನ ಅರಿ. ಆತುರ ವೈರಿ ಮಾರೇಶ್ವರಾ ||೧||" ಹಾಗು "ಕಂಗಳ ಕರುಳ ಕೊಯ್ದುವರ ಮನದ ತಿರುಳ ಹುರಿದವರ ಮಾತಿನ ಮೂಲ ಬಲ್ಲವರ ತೋರಯ್ಯ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ ||" ಮತ್ತು "ಮೋಹ ಏವ ಮಹಾ ಮೃತ್ಯುರ್ಮುಮುಕ್ಷೋರ್ವಪುರಾದಿಷು | ಮೋಹೋ ವಿನಿರ್ಜಿತೋಯೇನ ಸಮುಕ್ತಿ ಪದಮರ್ಹತಿ ||"

ಅರ್ಥ:— ಯಾವನು ದೇಹಾದಿಗಳಲ್ಲಿರುವ ರಾಗವನ್ನು ಜಯಿಸುವನೋ ಅವನೇ ಮುಕ್ತಿಪದಕ್ಕೆ ಅರ್ಹನಲ್ಲದೆ ವಿಷಯಾಸಕ್ತನಿಗೆ ಸಾಧ್ಯವಾಗಲಾರದು. ಇದೇ ವಿಷಯವಾಗಿ ಶ್ರೀ ನಿಜಗುಣ ಶಿವಯೋಗಿಗಳು—

ಅಹಮೆಂಬೀ ಬಗೆ ದೇಹದೊಳಿರ್ಕು | ಬಹಿರಂಗದೊಳಿದಮೆಂಬುದು ತೋರ್ಕು || ಅದು ಕೇಳೀ ಸಕಲಾರ್ಥದೊಳಿರ್ಕು | ಅದರಿಂ ಬಹು ಬಗೆ ನಿರವಧಿಯುಕ್ಕು || ಕೆಲಕೆಲವೆಡೆಯೊಳಗಪ್ರಿಯವಲ್ಲಿ || ಹಿಡಿವ ಬಿಡುವ ಕರ್ಮಕ್ಕದು ಮೂಲ | ತಡೆಯದೆ ತತ್ಕರ್ಮವೆ ಭವ ಮೂಲ || ಅದರಿಂದಭಿರುಚಿ ನಿನಗೆತ್ತಾನು | ಉದಿಸಿತ್ತಾದೊಡೆ ಕೇಳದು ತಾನು || ವಿದಿತಂ ಬಂಧನೆನಿಪ ಸಂಸಾರ | ಅದನುಳಿದರೆ ನೀನೀಶಂ ಧೀರಂ ||೧|| ಎಂಬದಾಗಿ ಸಂಸಾರ ಬಂಧವನ್ನು ಉಸುರಿ,

ಇಂದ್ರಿಯ-ಗೋಚರಮಾದ ವಿಷಯಮಂ | ಪೊಂದಿ ಪ್ರಿಯಮಂ ಮೇಣ ಪ್ರಿಯಮಂ || ಬಗೆಯಲು ದೇಹದೊಳುಂಡಿರಬೇಕು | ಮಿಗೆ ಕಾಮಿಸಿ ಭೋಗಿಪುದದು ಸಾಕು || ಕಾಮಂ ಕ್ರೋಧಂ ಮೋಹಾದಿಗಳು | ತಾವು ಸವು ಹೃದಯ ಗ್ರಂಥಿಗಳು || ಆಗಳು ಅವರಿಂದತ್ತಿತ್ತೊಲಿವ | ಆ ಗಂಟಿನ ಭವಬಂಧನ ಮನವ || ಪುಟ್ಟುವ ಸುವಿವೇಕದ ಮನದಿಂದ | ನೆಟ್ಟನೆ ಕಡಿವುದು ಮಸೆದುಳಿಯಿಂದ || ಜಡದಿಹ ಸಂಕಲೆಯಂ ಕಡಿವಂತೆ | ಕಡಿದೊಡೆ ನೀನಹೆ ಮುನ್ನಿರ್ದಂತೆ ||೨|| ಮೋಕ್ಷ ಸ್ವರೂಪವನ್ನು ನಿರ್ಧರಿಸಿರುವರು.

ನಮ್ಮ ಶಿವಶರಣರಾದರೂ ಸಂಸಾರ ಹೇಯ ಸ್ಥಲದಲ್ಲಿ,

ಚಂದ್ರಮನಂತೆ ಕಳೆ ಸಮನಿಸಿತ್ತೆನಗೆ, ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತ್ತಯ್ಯ, ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು, ಇನ್ನೆಂದಿಗೆ ಮೋಕ್ಷನಹುದೋ ಕೂಡಲಸಂಗಮದೇವಾ ||೧||

ಒಂದು ಯೋನಿಯಲ್ಲಿ ಬಂದ ದುಃಖವ ನಾನೆಂದಿಗೂ ಕಳೆಯಲಾರೆ. ಏಂಭತ್ತುನಾಲ್ಕು ಯೋನಿಯೆಂದರೆ ಇನ್ನೇವೆನಯ್ಯ ? ನೊಂದೆನಯ್ಯ. ಮತ್ತೊಂದನರಿಯದ ಶಿಶು ಬೆಂದೆನಯ್ಯ ! ಶಿವ ಶಿವ ! ಎನ್ನ ಕಂದ ನೀ ಬಾರೆಂದು. ಕಂಬನಿಯ ತೊಡೆದು, ಎತ್ತಿ ಎತ್ತಿ ಆನಂದದಿಂದ ಕಣ್ದೆರೆ ಉಳಿಯುಮೇಶ್ವರಾ ||೩||

ಕೆಲವರು ಷಟ್ಕರ್ಮಗಳನ್ನಾಚರಿಸಿ, ಆಯಾ ಫಲಪದಗಳನ್ನನುಭವಿಸಿ, ಪುನಃ ಜೀವಿಗಳಾಗಿಯೇ ಉಳಿದು ಮತ್ತೆ ಸಂಸಾರ ತಾಪತ್ರಯಗಳಲ್ಲಿಯೇ ಸವೆಯುಪರು. ಇದನ್ನರಿತ ಜೀವನು ವಿವೇಕದಿಂದ ಭವದುಃಖಂಗಳ ನೋಡಿ ಅವನ್ನತಿಗಳೆದು ದುಃಖಂ ಬೆರಸದ ಸುಖಮಂ ನೋಡಿ, ಈ ಸಂಸಾರದ ವಿಷಯಗಳನ್ನೆಲ್ಲ ನಿರಸನಂಗೈದು, " ನಾಯಿಯು ಎಲುವನ್ನು ಬಾಯಿಯಾಡಿಸಿದಂತೆ ವಿಷಯಾಸಕ್ತಿಯೆಂದು ನಿಶ್ಚಯಿಸಿ, ತನ್ನ ಮನವ ವಿಷಯವಿಮುಖ ಮಾಡಿ ಒಳ್ಳೇ ಬಟ್ಟೆಯನಾರಯ್ಯುತ್ತ ಇರುವವನೇ ಸುಖದಿಚ್ಛೆಯ ಯೋಗಿ.

ವಿರತಿಗೆ ಬೀಜ, ರೂಪ, ಕಾರ್ಯಗಳನ್ನರಿಯುವದೇ ನಿಜ ಧೈರ್ಯ. ವಿಷಯ ದೋಷವನು ಊಹಿಸುವದು ಬೀಜವು. ಬಳಿಕಾ ವಿಷಯವನ್ನು ಚನ್ನಾಗಿ ಬಿಟ್ಟೇ ಬಿಡುವದು ರೂಪವು. ಬಳಿಕ ಆಯಾ ವಿಷಯವಾಸನೆಯು ತೀವ್ರ ಮನವನ್ನಾವರಿಸುತ್ತಿರಲು ಛಲಬಲದಿಂದ ಬಿಟ್ಟದ್ದೇ ಕಾರ್ಯವು. ಇದೇ ವಿರತಿಯ ನಿಜಲಕ್ಷಣವಾಗಿ, ಇದನುಳ್ಳಾತನೇ ಸಹಜ ವಿರಾಗಿ.

ಬಳಿಕೀ ಸಂಸ್ಕೃತಿಯಲ್ಲಿ ನೂತನವಮಂ ಕಾಣದೆ, ನೋಡಿದ್ದನ್ನೇ ನೋಡುತ್ತ, ವಾಸಿಸಿದ್ದನ್ನೇ ವಾಸಿಸುತ್ತ, ಕೇಳಿದ್ದನ್ನೇ ಕೇಳುತ್ತ, ಮುಟ್ಟಿದ್ದನ್ನೇ ಮುಟ್ಟುತ್ತ, ಉಂಡದ್ದನ್ನೇ ಉಣ್ಣುತ್ತ, ಪಿಷ್ಟ ವಿಪೀಷಣ ನ್ಯಾಯದಂತೆ ಅನುಭವಿಸುವ ಪ್ರಸಂಗದಲ್ಲಿ ಆತನ ವಿರತಿ ಬಲಿಯಲು ವಿರತಿಯೊಳಳವಟ್ಟವನೆಂದು ತಿಳಿಯಬೇಕು.

ಮತ್ತು ಇಹಪರ ಭೋಗದಲ್ಲಿಯೂ ಸುರನರ ವಂದ್ಯತೆಯಲ್ಲಿಯೂ ನಿಜ ಸುಖವಿಲ್ಲದ ಅಜಹರಿ ಪದಗಳಿಂದೇನು ? ಇವೆಲ್ಲವ ಅನುಭವಿಸುವಾಗಷ್ಟೇ ಸುಖವು. ಕಾರಣ ಬಿಡಬೇಕಾದವುಗಳನ್ನು ಬಿಟ್ಟು, ಕಡು ಚಪಲತೆಯ ಚಿತ್ತು, ವಿವಿಧ ವಾಸನೆಗಳಿಳಿವನಕ ಭವಮಾಲೆ ಪರಿದು, ನಿಜವರಿದು, ಸಮತೆ ನೆಲೆಗೊಂಡು, ಬಹು ದುಃಖದ ಗ್ರಂಥಿ ಕಡಿದು, ಸಹಜಾರೋಗ್ಯತೆಯೊದಗಿ, ನಿಜಸುಖ ಕೊಡುವರಾರೆಂದು ಹಂಬಲಿಸುವದೇ ವಿರತಿಯ ಪರಿಪಾಕ ದೆಸೆಯು.

ತಡೆಯದೆ ಸುಕೃತವನಾಚರಿಪವನು । ಬಿಡುವ ದುಷ್ಕೃತವನೆಲ್ಲವನು ॥
ಧರ್ಮಂಗಳನೆಡೆವಿಡಿದಾಚರಿಪ । ಧರ್ಮ ಫಲಂಗಳನುರೆ ಧಿಕ್ಕರಿಪ ॥
ಪರರ ಸಿರಿಗೆ ಮತ್ಸರವಂ ಮಾಡ । ಪರಪೀಡೆಯ ನೆನಹಿನೊಳೊಡಗೂಡ ॥
ದೇಶೋಚಿತ ಕಾಮೋಚಿತವಾಗಿ । ಅಸುರಗತಿಮುಳಿದನುಗುಣವಾಗಿ ॥
ಒಂದೆರಡಿನಿವಾತಂ ನುಡಿವ । ಕುಂದದಿಳೆಗೆ ಸೊಗಸಾಗಿರೆ ನಡೆವ ॥
ಇಂತೆಸಗುವ ಯೋಗವುಳ್ಳವನು । ಇಂತಾದಿಯ ಭೂಮಿಕೆಯುಳ್ಳವನು ॥
ಜೀವೇಶ್ವರ ಯೋಗವನರಿದಂದು । ಭಾವಾಧ್ಯಾಸಕೆ ಹರವಾದಂದು ॥
ಭವದ ಲತೆಯ ಬೇರಂ ಕೊಯ್ದವನು । ತವೆ ಪರಮಾನಂದವನೈದವನು ॥

ನಿಜಸುಖೇಚ್ಛೆಗೆ ವಿರತಿಯೇ ಕಾರಣವಾದ್ದರಿಂದ ಮೊದಲನೇ ಭೂಮಿಕೆಯನ್ನು ಹೇಳುವದಾಯಿತು. ಮತ್ತು ಷಟ್‌ಸ್ಥಲದಂತೆ ಭಕ್ತಸ್ಥಲವನ್ನೂ ಪರ್ಯಾಯದಿಂದ ಹೇಳುವದಾಯಿತು. ಇನ್ನು ೨ನೇ ಭೂಮಿಕೆಯಾದ ಆತ್ಮ ವಿಚಾರದ ಬಗೆಯನ್ನು ತಿಳಿದುಕೊಳ್ಳುವಾ.

ಈ ಭೂಮಿಕೆಗೆ ಯೋಗವು ಅವಶ್ಯವು. ಯೋಗಕ್ಕೆ ಬೀಜ, ರೂಪ, ಕಾರ್ಯಗಳುಂಟು. ನಿಯಮ ನಿಯಮಾದ್ಯಂಗಳೇ ಬೀಜವು. ಹಲವು ತರದ ಸದುಪಾಯಗಳಿಂದಲೂ ಅನುಭಾವಿಗಳ ಒಡನಾಟದಿಂದಲೂ ಚಲಿಸುವ ಮನವನ್ನು ಸುಸ್ಥಿರಗೊಳಿಸುವದೇ ರೂಪವು. ಹೆಚ್ಚು ದುಃಖ ಕೊಡುವ ಕರ್ಮಂಗಳನ್ನೂ ಬಹಿರ್ವ್ಯಾಪಾರಗಳನ್ನೂ ಬಿಡುವದೇ ಕಾರ್ಯವು. ಇಂತು ಈ ಮೂರನುಳ್ಳವನೇ ಯೋಗಿ. ಯೋಗಾಂಗಗಳು ಬಹುವಿಧವಾಗಿದ್ದರೂ ಯೋಗಿಗೆ ಅವೆಲ್ಲ ವಿಧಿಯಾಗಿರುವವು. ದಶಭೇದವಾದ ಯಮವೂ ದಶಭೇದವಾದ ನಿಯಮವೂ ಹಲವು ವಿಧವಾದ ಆಸನವೂ ಏಳು ವಿಧವಾದ ಪ್ರಾಣಾಯಾಮವೂ ಅನ್ನವನುಂಬುವದು ಪ್ರತ್ಯಾಹಾರವೂ ಹೃದಯಸ್ಥಳ ವಿಚಾರದ ಧಾರಣವೂ ಶಿವಮೂರ್ತಿಯ ನೆನಹಿನ ಧ್ಯಾನವೂ ಆ ಧ್ಯಾನದೊಳು ಮನವ ಸುಸ್ಥಿರಗೊಳಿಸುವ ಮೌನವೂ ಸಗುಣಾಷ್ಟಾಂಗದ ಸಂಜ್ಞೆಗಳಾಗಿರುವವು.

ಇವುಗಳ ಸುಲಕ್ಷಣಗಳಾದ ಅಗುಣಾಷ್ಟಾಂಗಗಳು ಅತ್ಯುತ್ತಮವಾಗಿರುವವು. ತನುಮುಖ್ಯದ ವಿರತಿಯೇ ಯಮ. ಘನ ನಿಜ ಪದರತಿಯೇ ನಿಯಮ. ಬಾಹ್ಯದುದಾಸೀನವೇ ಆಸನ, ಬಾಹ್ಯ ಕರಣಂಗಳಳಿವೇ ಪ್ರಾಣಾಯಾಮ. ಜಡವಿಮುಖತೆಯೇ ಪ್ರತ್ಯಾಹಾರ, ಪಡೆದ ನಿಜಸ್ಥಿತಿಯೇ ಧಾರಣೆ. ಪರಮ ತಾನೆಂಬುದೇ ತದ್ಧ್ಯಾನ. ಪರಮಾತ್ಮನಲ್ಲಿಯೇ ಮನಮುಳುಗಲದೇ ಮೌನ.

ಈ ನಿರ್ಗುಣ ಯೋಗದ ಅನುಗುಣವಾಗಿ ಶುದ್ಧ ಬುದ್ಧಿಯಾಗಿರುವಾತನೇ ಯೋಗಿ. ಈ ಪುಣ್ಯಪುರುಷನು ದೇಹಾದಿಗಳ ಆತ್ಮತೆಗಳ ಕಳೆದು, ಊಹಿಸಲು ಯೋಗ್ಯವಾದ ಆತ್ಮವಿಚಾರತೆಯೊಳಿದ್ದು ಗುರುಗಳನ್ನು ಸೇವಿಸುವವನಾಗಿ, ಯಾವಾಗಲೂ ಸುವಿಚಾರ ಪರನಾಗಿ ಸಾರತರ ಶಾಸ್ತ್ರವನ್ನು ಕೇಳುತ್ತ ಘೋರ ಭವದ ಕೇಡಂ ಕಾಣುತ್ತ ಇರುವುದೇ ೨ ನೇ ಭೂಮಿಕೆಯುಳ್ಳವನು. ಹಾಗು ಮನದ ವಿಕಲ್ಪಗಳನು ಅಳಿಯುತ್ತ ಸಕಲಾರ್ಥಗಳ ಬಿಡುತ್ತ ನಿಜಸುಖ ದೊರೆವ ಮಾರ್ಗವ ತೋರುವ ಗುರುವಿನ ವೇದ ರಹಸ್ಯವ ತಿಳಿಯುತ್ತ ಜೀವೇಶ್ವರರ ನಿಜ ಲಕ್ಷಣವರಿದು, ಒಂದರೊಳಾದ ಉಭಯಾಧ್ಯಾಸವನು, ಮುಂದೆ ಆ ಬಹು ವಿಧದ ಅಧ್ಯಾಸವನು, ಜೀವೇಶ್ವರರ ಏಕತ್ವದ ನಿಲವನು ಭಾವಿಸುತ, ಆ ಸಹಜಾತ್ಮನ ನಿಜವ ತಿಳಿವ ವಿಚಾರವೇ ಅಧ್ಯಾತ್ಮವಿಚಾರವು.

ಇಂತಪ್ಪ ಆತ್ಮ ವಿಚಾರಿಯು ಮುಟ್ಟದ ಹಾಗೆ, ಹೆರೆಯುಚ್ಚಿದ ಹಾವಿನ ಸುಖದಂತೆ ವೈರಾಗ್ಯದ ಬಲದಿಂದ ವಿಷಯ ಭ್ರಾಂತಿಗಳನುರೆ ಬಿಟ್ಟು ನಿರ್ವಾಸನೆಯುಳ್ಳವನಾಗಿ ಶಾಂತಿಮಯನಾಗಿ ಪೂರ್ವಾಶ್ರಯಂಗಳ ನಿರಸನ ಮಾಡಿ, ಗುರುವರನ ಕೃಪಾಕಟಾಕ್ಷದಿಂದ ತತ್ವನುಸೀತಿ ಮಹಾವಾಕ್ಯದ ವಾಚ್ಯ ಲಕ್ಷ್ಯಂಗಳಾದ ಜೀವ ಶಿವೈಕ್ಯ ಅರ್ಥಂಗಳ ತಿಳಿವವನಾಗಿ ಮಾಯಾದ್ಯುಪಹಿತ ತತ್ಪದವಾಚ್ಯ, ಕಾಯಾದ್ಯುಪಹಿತ ತ್ವಂ ಪದವಾಚ್ಯ, ಪರತರ ಬ್ರಹ್ಮವೇ ತತ್‌ಪದ ಲಕ್ಷ್ಯ, ತುರ್ಯ ನಿಜಾತ್ಮನೆ ತ್ವಂ ಪದ ಲಕ್ಷ್ಯ, ಉಭಯ ಪದದ ವಾಚ್ಯಾರ್ಥವ ಬಿಟ್ಟು, ಶುಭ ಲಕ್ಷ್ಯಾರ್ಥವ ಲಕ್ಷಿಸಿಕೊಟ್ಟು ಚಿದಖಂಡೈಕರಸವನರು ಹಿಪುದು ಅದು ತಾನೆ ಅಸಿಪದದರ್ಥವೆನಿಪುದು. ಹೇಗೆ ಘಟಮಠಗಳೆರಡಂ ಬಿಚ್ಚಿದೊಡೆ, ದಿಟವಾದ ಆಕಾಶವು ಉಳಿಯುವಂತೆ, ಮಕುಟಾ ಕೃತಿಯಳಿಯಲು ಮಿಸುನಿಯ ಗಟ್ಟಿ ಉಳಿವಂತೆ, ತತ್ಪದದ ಸರ್ವಜ್ಞತ್ವವನ್ನೂ ತ್ವಂ ಪದದ ಕಿಂಚಿಜ್ಞತ್ವವನ್ನೂ ಉಳಿದು, ಚೈತನ್ಯವೆರಲ್ಲಿಯೂ ಒಂದೆಂಬುದನು ತಿಳಿದು, ಲಕ್ಷಪದದ ಅರ್ಥವೇ ಅಕ್ಷಯ ಪದವೆನಿಸುವದು.

ಜೀವಾತ್ಮ ಪರಮಾತ್ಮರ ವಿಚಾರವು ಶಿವಶರಣರದಷ್ಟು ಗಮನಕ್ಕೆ ತರುವಾ.

ತನ್ನ ತಾನರಿವುದೇ ಪರಮಾತ್ಮಯೋಗ. ತನ್ನ ತಾ ಮರೆವುದೇ ಮಾಯಾ ಸಂಬಂಧ. ಅಂತರಂಗ, ಬಹಿರಂಗ, ಪರಮಾಕಾಶ ಮಧ್ಯದಲ್ಲಿ ಪರಮಾ

ತ್ಮನು ಪರಬ್ರಹ್ಮ ಸ್ವರೂಪನು ನಿತ್ಯ ನಿರಂಜನ ಉಪನಃತೀತನು ನಿಷ್ಪತಿ ಕೇವಲ ನಿಃಕಲ ಸ್ವರೂಗನು. ಭ್ರೂಮಧ್ಯದಲ್ಲಿ ಪರಮಾತ್ಮನೇ ಅಂತರಾತ್ಮ ನೆನಿಸಿ ಸಕಲ ನಿಃಕಲನಾಗಿಪ್ಪನು. ಹೃದಯಸ್ಥಾನದಲ್ಲಿ ಪರಮಾತ್ಮನೇ ಜೀವಾತ್ಮನಾಗಿ ಕೇವಲ ಸಕಲನಾಗಿಪ್ಪನು. ಬ್ರಹ್ಮಸ್ಥಾನದಲ್ಲಿ ನಿಷ್ಕಲ ಗುರುಮೂರ್ತಿ. ಲಿಂಗವು ಭ್ರೂಮಧ್ಯದಲ್ಲಿ ನಿಷ್ಕಲ ಪರಂಜ್ಯೋತಿರ್ಲಿಂಗ. ಹೃದಯ ಸ್ಥಾನದಲ್ಲಿ ಕೇವಲ ಸಕಲ ಜಂಗಮಲಿಂಗ. ಇಂತೀ ಪರಮಾತ್ಮನೇ ಅಂತರಾತ್ಮ. ಪರಮಾತ್ಮನೇ ಜೀವಾತ್ಮ. ಬಹಿರಂಗದಲ್ಲಿ ಪರಮಾತ್ಮನೇ ಗುರುಲಿಂಗ, ಪರಮಾತ್ಮನೇ ಶಿವಲಿಂಗ. ಇಂತು ಪರಬ್ರಹ್ಮವೇ ಪರಮಾತ್ಮ, ಪರಮಾತ್ಮನೇ ಸರ್ವಾತ್ಮ, ಪರಮಾತ್ಮನೇ ಸರ್ವಗತ, ಪರಮಾತ್ಮನೇ ಆತ್ಮಗತ, ಇದು ಕಾರಣ ಪರಮಾತ್ಮನೇ ಅಂತರಂಗ ಬಹಿರಂಗ ಭರಿತ ಪ್ರಾಣಲಿಂಗ. ಇಂತರಿದುದೇ ಪರಮಾತ್ಮಯೋಗ. ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

೩ ನೇ ಭೂಮಿಕೆಯಾದ ನಿಸ್ಸಂಗದ ವಿಷಯವಾಗ ವಿಚಾರಿಸಲು ವೈರಾಗ್ಯ ಹಾಗು ಆತ್ಮವಿಚಾರಗಳ ಬಲದಿಂದ ವಿಷಯ ವಿಮುಖನಾಗಲು ಜ್ಞಾನದೃಷ್ಟಿಯು ಪ್ರಕಾಶಿಸಲು ಆ ಜ್ಞಾನಕ್ಕೆ ಬೀಜ ರೂಪ ಕಾರ್ಯಗಳುಂಟಾಗುವವು. ಶ್ರವಣಾದಿಕವೇ ಬೀಜ. ಶ್ರುತಿಗಳ್ದು ಯುಕ್ತ್ಯನು ಯೋಗದಿಂದ ಅಹಮಾತ್ಮರನು ಸಹಜವಾಗಿ ಪ್ರಥಕ್ಕರಿಸುವದು ರೂಪ. ಮತ್ತು ಆಹಮ್ಮಿನೊಳಿರ್ದ ಸಂಸಾರಮೋತ್ತಿನೊಳು ಬರುತಿರುವ ದುಃಖವಿಚಾರ ತೋರಿದೊಡೆ ಅದಕ್ಕಾನು ಸಾಕ್ಷಿಕನೆಂದೂ ಬೇರೆ ಅದರಿಂದವೆ ಸುಖಿ ಚಿನ್ಮಯನೆಂಬುದೇ ಕಾರ್ಯವೆಂದು ನಂಬುವದು ನಿಸ್ಸಂಗತ್ವವು.

ಈ ಮೂರನೇ ಭೂಮಿಕೆಯಲ್ಲಿ ಸಾಮಾನ್ಯಾಸಂಗ, ವಿಶೇಷಾಸಂಗವೆಂದು ಎರಡು ವಿಧವು. ಬಾಹ್ಯ ವಿಷಯಗಳ ಚಿಂತೆಯಿಲ್ಲದ ನಿರರ್ಥಕ ಗೋಷ್ಠಿಗಳ ನತಿಗಳೆದ ನಿಜವೈರಾಗ್ಯದ ಬಲದಿಂದ ಸುಜನರ ಗೋಷ್ಠಿಗಳನ್ನನುಸರಿಸಿ ಸುವಿಚಾರವೆಂಬ ಭಸಿತದಿಂದ ಬುದ್ಧಿಯೆಂಬ ಕನ್ನಡಿಯನ್ನು ಬೆಳಗಿ, ವಿಷಯವೆಂಬ ಮಲಿನ ಪೋಗಲು ಆ ಕನ್ನಡಿಯನ್ನು ಇದಿರಿಟ್ಟು ನೋಡಿದಾಗಲೇ ಬಚ್ಚ ಬರಿಯ ಸಮಸುಖವೆನಿಸಿರ್ದ ನಿಜವೇ ತೋರುವದು. ಅದುವೇ ತಾನು ಸದ್ರೂಪವು ಚಿದ್ರೂಪನೆನಿಸುವನು. ಈತನೇ ಸಕಲ ನಿಷ್ಕಲನು. ಹಾಗು ಸಾಮಾನ್ಯಾಸಂಗನು. ಆ ತೋರಿದ ನಿಜವು ತನ್ನಲ್ಲಿ ಸದಾ ಸನ್ನಿಹಿತವಾದದ್ದೇ ವಿಶೇಷಾಸಂಗವು. ಅದುವೇ ಕೇವಲ ನಿಷ್ಕಲವೂ, ಚಿದ್ರೂಪವೂ, ಚಿನ್ಮಯವೂ ಸರಿ.

ಈ ಬಗ್ಗೆ ಶಿವಶರಣರ ಅನುಭವವು—

ಸಂಕಲ್ಪವೆಂಬ ಸಂಕೋಲೆಯು ಹರಿಯಿತ್ತಯ್ಯ, ಕಾಮವೆಂಬ ಕಂಬ ಕಿತ್ತೀಡಾಡಿತ್ತಯ್ಯ, ಮಾಯೆಯೆಂಬ ಮಾವತಿಗನ ಮೀರಿತ್ತು. ಆಶೆಯೆಂಬ ಅಂಕುಶಕ್ಕೆ ನಿಲ್ಲದು. ಮಾಯಾಪಾಶವೆಂಬ ಪಾಯದಳ ಅಂಜಿ ಓಡಿತ್ತು. ಮದಗಜವೆಂಬ ಆನೆ ಉಳಿದ ಬಳಿಕ ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗದಲ್ಲಿ ಆನೆ, ಆನೆ, ಎಂಬುದೇನೋ ಇಲ್ಲದೆ ಹೋಯಿತ್ತು.

ವೈರಾಗ್ಯ ಬಲಿತು ಜಡಾಜಡಗಳನ್ನು ವಿಂಗಡಿಸಿ, ಜಡಗಳನ್ನುಳಿದು ಅಜಡವು ಆವರಿಸಿ, ಮನವು ಸುಸ್ಥಿರಗೊಳ್ಳುವ ಗುರೂಪದೇಶದಿಂದ ನಿಸ್ಸಂಗದ ನಿಜತ್ವವು ಶಾಸ್ತ್ರಾಧಾರದಿಂದ ಹಾಗು ನಿಜಾನುಭವದಿಂದ ಮತ್ತು ಸದ್ಬುದ್ಧಿಯಿಂದ ಜಾಗರಣದೊಳು ಮನವರಿಕೆಯಾಗಿ ಮುಂದೆ ಶಿಷ್ಯನು ೪ನೇ ಭೂಮಿಕೆಯಾದ ವಾಸನಾಕ್ಷಯದಿಂದಾಗುವ ಪರಿಯ ಕೇಳುವವನಾಗುವನು.

೪ನೆಯ ಭೂಮಿಕೆ:—

ಬಳಿಕಾ ಭೂಮಿತ್ರಯುಗಳ್ ಬಲಿದು । ತಿಳಿವಿನ ಸುಖದನುಭವದೊಳು ನಲಿದು ॥<br>
ಎಲ್ಲಾ ಯಿಂದ್ರಿಯದೊಲವಂ ಜರಿದು । ಎಲ್ಲಾ ವಿಷಯದ ಮತೆಯುಂ ಮರೆದು॥<br>
ಜಗದಾಭಾಸಂ ತೋರುತ್ತಿಹುದು । ನೆಗಳಿದ ವಾಸನೆ ಲಯಿಸುತ್ತಿಹುದು ॥<br>
ಅದರಿಂದದನು ವಿಲಾಯಿನಿಯೆಂದು । ಚದುರ್ಪೇಳುವರಾ ದಶ ಬಂದು ॥<br>
ನೆಲಿಸಲು ಯೋಗಿಯ ಮತಿ ಧೃಡನಾಗಿ । ಚಲಿಸದೆ ತೋರ್ಪುದು ಸುಖಮಯವಾಗಿ ॥ ಅದು ತದ್ಧ್ಯಾನಿಗೆ ತಿಳಿಕನಸಕ್ಕು । ಅದು ನಾಲ್ಕನೆಯ ಸುಭೂಮಿಕೆಯಕ್ಕು ॥೧॥

ವೀರಶೈವ ಷಟ್‌ಸ್ಥಲಗಳಲ್ಲಿ ೧ನೇ ಭೂಮಿಕೆಯು ಭಕ್ತಸ್ಥಲದಲ್ಲಿಯೂ ೨ನೇ ೩ನೇ ಭೂಮಿಕೆಗಳು ಮಹೇಶಸ್ಥಲದಲ್ಲಿ ೪ನೇ ಭೂಮಿಕೆಯು ಪ್ರಸಾದಿಸ್ಥಲದಲ್ಲಿ ವ್ಯಕ್ತವಾಗುವವು. ಇವು ೪ ಭೂಮಿಕೆಗಳು ಅಥವಾ ಮೂರು ಸ್ಥಲಗಳು ಮಾರ್ಗಕ್ರಿಯೆಯಲ್ಲಿ ಬರುವವು.

ಶಬ್ದ, ಸ್ಪರ್ಶ, ರೂಪು, ರಸ, ಗಂಧ ಪಂಚೇಂದ್ರಿಯಗಳೆಲ್ಲ ಏಕಾಕಿಗಳಾಗಿರ್ದವು. ತಮ್ಮೊಳಗೆ ತಾವು ಹರಿಯದೆ ಏಕಾಕಿಗಳಾಗಿರ್ದವು. ಸಕಳೇಶ್ವರ ದೇವರಲ್ಲಿ ಪರಿಣಾಮ ಪ್ರಸಾದವ ಪದವಿಯ ಪಡೆದನಾಗಿ ಎನ್ನೊಡನೆ ಹುಟ್ಟಿ ನೀವೆಲ್ಲ ಸುಖಿಗಳಾದಿರಯ್ಯ ಎಂಬದಾಗಿ ಶಿವಶರಣರಾನುಭವವು.

ಇನ್ನು ೫ನೇ ಭೂಮಿಕೆಯಾದ ಆನಂದಿನಿ—

ಸರ್ವ ದ್ವೈತವನಳಿದುಳಿದಿರ್ದ । ನಿರ್ವ್ಯಾಪಾರವೆ ವ್ಯೆಯಾಗಿರ್ದ ॥
ಯೋಗಿವಿಷಯದ ಸಂಕಲ್ಪನೆಯುಳಿದು। ಆಗಳೆ ಪೂರ್ಣಾಹಂಕೃತಿದಳೆದು ॥
ಆ ಸಂಸೃತಿ ವಾಸನೆ ಪೋಗಿ । ಓಸರಿಸದ ನಿಜಸುಖ ತಾನಾಗಿ ॥
ಸಂತತಂತಮರ್ಮುಖನಾಗಿಹನು। ಚಿಂತಿ ಸದಾ ಸುಖಮೂರ್ಛೆಯೊಳಿಹನು॥
ಒಮ್ಮೊಮ್ಮೆ ಬಹಿರ್ಮುಖನಾದಂದು। ನೆಮ್ಮಿದ ನಿಜಸುಖಮದು ಬಳಿಸಂದು॥
ಸಂಚರಿಪಂ ಪರವಶನೆಂತಂತೆ। ಪಂಚಮ ಪದವಿದು ಸುಪ್ತಿಯುಮಂತೆ ॥೧॥

೪ನೇ ಸ್ಥಲವಾದ ಶಿವಶರಣಾನುಭವವು:—

ಸ್ಥೂಲ ತನುವ ಬಿಟ್ಟು ಕಂಡಿಹೆನೆಂದಡೆ ನೀನೇ ಪ್ರಮಾಣು, ಕ್ರಿವಿಡಿದು ಅಂಗದಲ್ಲಿ ನಿಂದ ಕಾರಣ. ಸೂಕ್ಷ್ಮ ತನುವನೊಲ್ಲದೆ ನಿನ್ನ ನೋಡಿ ಕಂಡೆಹೆನೆಂದಡೆ ನೀವೇ ಪ್ರಮಾಣು. ಭಾವದ ಕೊನೆಯ ಅರ್ಚಿಸಿಕೊಂಬೆಯಾಗಿ. ಕಾರಣ ತನುವ ಮರೆದು ನಿನ್ನ ನೋಡಿ ಕಂಡೆಹೆನೆಂದಡೆ ನೀವೇ ಪ್ರಮಾಣು, ಚಿದಂತ್ಯ ಚಿತ್ಪ್ರಕಾಶದ ಬೆಳಗಿನಲ್ಲಿ ಕಟ್ಟುವಡೆದೆಯಾಗಿ. ಇಂತೀ ಜಾಗ್ರದಲ್ಲಿ ಕ್ರಿವಂತನಾಗಿ ಸ್ವಪ್ನದಲ್ಲಿ ಆತ್ಮ ಸ್ವರೂಪನಾಗಿ ಸುಷುಪ್ತಿಯಲ್ಲಿ ಮೂರ್ಛೆಯಿಂದ ಅಮೂರ್ತಿಯಾಗಿ, ವಿರಳಕ್ಕೆ ವಿರಳನಾಗಿ ಪರಿಪೂರ್ಣ ವಸ್ತು ನೀನಲಾ, ಭಕ್ತಿಕಾರಣನಾಗಿ, ಶಂಭುಗಿಂದತ್ತ ಸ್ವೆಯಂಭುಗಿಂದಿತ್ತ ಅತಿಬಳ ನೋಡಾ. ಮಾತುಳುಗ ಮಧುಕೇಶ್ವರಾ.

ಇನ್ನು ೬ನೇ ಭೂಮಿಕೆಯಾದ ತೂರ್ಯವು—

ಆನಂದಿನಿಯೆಂಬ ಭೂಮಿಯೊಳು । ತಾನಭ್ಯಾಸಿಗೆ ಮೇಲ್ಭೂಮಿಯೊಳು॥
ಆನಂದಾವಿರ್ಭವ ಮನವ । ಆನಂದದೊಳಡಗಿಸು ತನ್ಮನವ ॥
ಮಾಡಲು ನಿರ್ವಾಸನೆ ಚಿತ್ತಾಗಿ । ಕೂಡ ದ್ವೈತಂ ದ್ವೈತಂ ಪೋಗಿ॥
ಏನುಂ ತೋರದೆ ಬರಿ ಬಯಲಾಗಿ । ಆನಂದದ ಪರ್ಣವೆ ತಾನಾಗಿ॥
ವರ ಚಿತ್ರದ ದೀಪದ ತೆರನಕ್ಕು । ತುರಿಯ ವಿದಾರನೆಯುವನಿಯುಕ್ಕು॥
ಆತನು ಪರಪದವಾಗಿರುತಿಹನು । ಆತನ ಖಂಡೈಕರಸಂ ತಾನು ॥೧॥

೫ನೇ ಸ್ಥಲಾಚರಣೆಯ ಶರಣಸ್ಥಲಾನುಭವವು –

ಗಮನ ನಿರ್ಗಮನಕೆ ಗಮನ ನಿರ್ಗಮನವಾಯ್ತು ।
ಘನಕೆ ಘನವು ನಿರ್ಗಮನವಾಯಿತ್ತು ॥
ಘನಸ್ನೇಹವಳಿದು ತಾನೇ ತಾನಾದಲ್ಲಿ ।
ಮನಕಗೋಚರವಾದ ಪರವು ತಾನೆ ॥೧॥

—ಶ್ರೀ ಪ್ರಭುದೇವರ ಮಂತ್ರಗೋಪ್ಯ.

ಭಾವಾರ್ಥ:— ಜ್ಞಾನಕ್ರಿಯೆಯಿಂದ ಆಚರಿಸುತ್ತಿರ್ಪ ಶರಣನೇ ಗಮನ ಸ್ವರೂಪು. ಲಿಂಗವೇ ನಿರ್ಗಮನ ಸ್ವರೂಪು. ಶರಣನುವಿುಸುತ್ತಿರುವ ಗಮನವು ನಿರ್ಗಮನದ ಲಿಂಗದೆಡೆಗೆ. ಹೀಗೆ ಅರಿವು ಹಿಡಿದುಗಮಿಸುತ್ತಿರುವ ಶರಣನು ಅರಿವಿಂಗೆ ತೆರಹಿಲ್ಲದ ಘನಲಿಂಗವನು ತಿಳಿದು ಭಿನ್ನವಿಡದೆ ಶಿವೋಽಹಂ ಎಂಬ ಇರುವಿಕೆಯ ತೂರ್ಯಾವಸ್ಥೆಯಿಂದ ಗಮನವು ನಿಂದು ನಿರ್ಗಮನ ಲಿಂಗವೇ ಆದುತ್ತಿರುತ್ತಾನೆ. ಹೀಗೆ ಅಭಿನ್ನತೆಯಿಂದ ಘನಕ್ಕೆ ಘನವಾದ ಮಹಾ ಘನದ ಅರಿವು ಘಟಿಸಿ ನಿರ್ಗಮನಿಯಾಗಿ ನಿಂದ ಶರಣನಲ್ಲಿ ಭಿನ್ನವಿಲ್ಲದಿರುವ ಮಹಾಘನ ಲಿಂಗವು ನಿರ್ಗಮನ ಸ್ವರೂಪದಲ್ಲಿಯೂ ಭಕ್ತಿಮುಖದಲ್ಲಿ ಗಮಿಸುತ್ತಿದ್ದ ಲಿಂಗವು ಗಮನ ಸ್ವರೂಪದಲ್ಲಿಯೂ ನಿಂದಿತ್ತು. ಹೀಗೆ ಅರಿವ ಅರುಹಿಸಿಕೊಂಬುವ ಎರಡನ್ನೂ ಅಳಿದು, ಅಭಿನ್ನ ಜ್ಞಾನದಿಂದ ಶಿವೋಽಹಂ ಎಂದು ಕಡೆಗೆ ಶಿವಸುಖವನು ತಿಳಿವುತಿರ್ಪ ಅರಿವು ಅಡಗಿ ನಿಂದ ಶರಣನು ತಾನೇ ಶಿವತತ್ವದ ಉಳಿವೆಯಾದಲ್ಲಿ ಆ ಶರಣನ ಹಸ್ತದಲ್ಲಿದ್ದ ಮನಕೆ ಅಗೋಚರವಾಗಿದ್ದ ಲಿಂಗದ ಪರಮ ಕಳೆಯ ಕುರುಹು ತಾನೆಯಲ್ಲದೆ ಭಿನ್ನ ಕುರುಹುವಿಡಿದು ಗಮಿಸುವ ಗಮನವಲ್ಲ. ಶರಣನ ಕ್ರಿಯೆಯಲ್ಲವೂ ನಿಃಕ್ರಿಯೆಯಾಗಿರುವ ಅಖಂಡ ಲಿಂಗವೇ (ಮನಗೋಚರವಾದ ಪರವು ತಾನೆ)

ಸಾರಾಂಶಃ— ಮರಣಾವಸ್ಥೆಯಂ ಪಡೆದಂತೆ ವ್ಯಾಪಾರ ಶೂನ್ಯನಾಗಿದ್ದರೂ ನಿತ್ಯನಾಗಿ, ಮನೋವ್ಯಾಪಾರವಿಲ್ಲದೆಯೂ ಶಾಂತನಾಗಿ, ಅಹಂಕಾರ ಮಮಕಾರವಿಲ್ಲದೆಯೂ ಸುಖದುಃಖ ಮೋಹಾತ್ಮಕ ಗುಣತ್ರಯದ ವಾಸನೆಯಿಲ್ಲದೆಯೂ ಹೃದಯ ಸ್ಥಾನವದ್ನು ಮೀರಿದುದೇ ತೂರ್ಯಾವಸ್ಥೆಯು.

೭ನೇ ಭೂಮಿಕೆ ತೂರ್ಯಾತೀತವು:—

ಅಗಳೆ ಪರಮಾತ್ಮನು ತಾನಾಗಿ । ಯೋಗಿ ಮಗುಳೆ ವರ್ತಿಪನಂತಾಗಿ ॥
ತಾನೇ ತನ್ನೊಳು ವ್ಯವಹರಿಪಂತೆ । ಜಾನಿಸೆ ತೆರೆ ಜಲದೊಳು ಸುಳಿವಂತೆ ॥
ಶರೀರ ಸಂಪಿಗೆಯುಂಡಳಿಯಂತೆ । ಉರುಳುವುದಾರಬ್ಧ ಸವೆದಂತೆ ॥
ಸಪ್ತಮಪದವಿದು ತೂರ್ಯಾತೀತ । ಕ್ಲುಪ್ತಿರಹಿತ ವಾಙ್ಮನಸಾತೀತ ॥
ಸತ್ತೆನಲಿಲ್ಲವ ಸತ್ತೆನಲಿಲ್ಲ । ಚಿತ್ತೆನಲಿಲ್ಲವ ಚಿತ್ತೆನಲಿಲ್ಲ ॥
ಅದು ಕೇಳ್ಭಾವಕೆ ಗೋಚರವಲ್ಲ । ಅದರಿಂ ನಿಜವಂತಿಂತೆನಲಿಲ್ಲ ॥೧॥

ಷಟ್‍ಸ್ಥಲಗಳ ನೂರೊಂದು ಸ್ಥಲಗಳಲ್ಲಿ ಅಡಕವಾದ ಜ್ಞಾನ ಶೂನ್ಯಾನುಭಾವವು ಕೆಳಗಿನಂತೆ:—

ನಾನು ನೀನು ಅರಿದೆ ಮರೆದೆ, ಅಳಿದುಳಿದೆನೆಂಬ ಸಂಶಯಭ್ರಮೆ, ಆ ತತ್ವವು ತತ್ವವಿವೇಕದ ಭ್ರಮೆ, ಸ್ಥೂಲ ಸೂಕ್ಷ್ಮ ವಿಪರೀತ ಭ್ರಮೆ, ಪುಣ್ಯಪಾಪ ಸ್ವರ್ಗ ನರಕ ಬಂಧ ಮೋಕ್ಷ ಪ್ರವರ್ತಕ ನಿವರ್ತಕ ಯೋಗ ದಾಶೆಯ ನಿಲಕುಭ್ರಮೆ, ಅಂತರ್ಮುಖ ಭ್ರಮೆ, ಅದ್ವೈತ ಭ್ರಮೆ, ಮಂತ್ರ ಭ್ರಮೆ, ಆದಿಷಟ್ಕರ್ಮ ಹುಸಿಜೀವ ಪರಮೈಕ್ಯ ಸಂಧಾನ ಭ್ರಮೆ, ನಾಹಂ ಭ್ರಮೆ, ಕೋಹಂಭ್ರಮೆ, ಸೋಹಂ ಭ್ರಮೆ, ತತ್ವವೇಷ್ಟಿತ ಜಗಕ್ಕೆಲ್ಲ ಮಾಯಾಮಯಂ ಕೂಡಲಸಂಗಾ ನಿಮ್ಮ ಶರಣಂಗೆ ಆವ ಭ್ರಮೆಯೂ ಇಲ್ಲ.

ಈ ವಚನದ ಶರಣಾನುಭವದಿಂದ ಸಪ್ತಭೂಮಿಕೆಗಳು ಮಾನವನಿಗೆ ಅಳವಡಲು ಅತಿ ಕಷ್ಟ ; ಆದ್ದರಿಂದ ಜಗತ್ತು ಜೀವಶಿವರುಗಳಲ್ಲಿ ತೋರುವ ಶಿವತತ್ವದ ಜ್ಞಾನವು ಪಂಚಾಚಾರ, ಅಷ್ಟಾವರಣ, ಲಿಂಗೈಕ ನಿಷ್ಠೆಗಳಿಂದ ಸಂಸಾರದೊಳಗಿದ್ದುಕೊಂಡೇ ಕೆಸರೊಳಗಿನ ಕಮಲದೋಪಾದಿಯಲ್ಲಿ ನಿಃಪ್ರಪಂಚಿಯಾಗಿ ಆತ್ಮತತ್ವ ೨೫ ವಿದ್ಯಾತತ್ವ ೧೦ ಶಿವತತ್ವ ೧ ಅಂತು ೩೬ ತತ್ವ ಜ್ಞಾನಿಯಾಗಿ ಅಂಗಸ್ಥಲದ ೪೪ ಲಿಂಗಸ್ಥಲದ ೫೭ ರ ಪ್ರಭೇದವರಿಯುತ್ತ ಮೊದಲು ಭಕ್ತಸ್ಥಲಾಚರಣೆಯಲ್ಲಿ ಆಸಕ್ತನಾಗಿ ತನ್ನ ಶರೀರದಲ್ಲಿ ಇಷ್ಟ ಪ್ರಾಣ ಭಾವಲಿಂಗಗಳ ಸ್ಥಳಕುಳಗಳನ್ನರಿತು ಗುರುಲಿಂಗಜಂಗಮುಗಳಲ್ಲಿ ಭಕ್ತಿಯನ್ನು ವಹಿಸುತ್ತಲಿದ್ದು ಸತ್ಕಾಯಕ ವಹಿಸಿದ್ದಾದರೆ ಲಿಂಗಾಂಗ ಸಮರಸವು ಕೈಗನ್ನಡಿಯಂತೆಂಬುದು ಕೆಳಗಿನ ವಚನದಿಂದ ಸಹಜಗೊತ್ತಾಗುವದು.

ಪೃಥ್ವಿ, ಸಲಿಲ, ಪಾವಕ, ಪವನ, ಅಂಬರ ಸೂರ್ಯ, ಚಂದ್ರ, ಆತ್ಮರೆಂಬ ಅಷ್ಟತನುವ ಭೇದಿಸಿ, ಶ್ರೋತ್ರ, ನೇತ್ರ, ಘ್ರಾಣ, ಜಿಹ್ವೆ, ತ್ವಕ್ಕುಗಳೆಂಬ ಪಂಚೇಂದ್ರಿಯಂಗಳನರಿದು, ವಾಕ್ಕು ಪಾಣಿ ಪಾದ ಗುದ ಗುಹ್ಯವೆಂಬ ಕರ್ಮೇಂದ್ರಿಯಗಳನ್ನು ತೊರೆದು, ಪ್ರಾಣೋಪಾನ, ವ್ಯಾನ ಉದಾನ, ಸಮಾನ, ನಾಗಕೂರ್ಮಕೃಕಚ ದೇವದತ್ತ, ಧನಂಜಯವೆಂಬ ದಶವಾಯುಗಳ ಸಂಚವ ಮುರಿದು, ಮನ ಬುದ್ಧಿ ಚಿತ್ತ ಅಹಂಕಾರವೆಂಬ ಚತುಃಕರಣಂಗಳನೊಂದು ಮಾಡಿ, ಜ್ಞಾನವನೆ ಬೆಳಿಸಿ, ಧ್ಯಾನವ ನೆಲೆಗೊಳಿಸಿ, ಚಿತ್ತ ಸುಯಿಧಾನವಾಗಿ, ನಿಜಸಂಧಾನದ ಸಮಾಧಿಯಲ್ಲಿನಿಂದು, ಲಿಂಗಾರ್ಚನೆಯಂ ಮಾಡುವ ಶಿವಶರಣರ ಪಾದವ ತೋರಯ್ಯ. ॥ ಸಾಕ್ಷಿ ॥ "ವ್ಯಾಪಾರಂ ಸಕಲಂ ತ್ಯಕ್ತ್ವಾ ಸರುದ್ರೋ ರುದ್ರಮರ್ಚಯೇತ್ " ಎಂಬ ಶ್ರುತಿ ನಿಮ್ಮ ಶರಣರಿಗೆ ಸಂದಿತ್ತು ಕೂಡಲಚನ್ನಸಂಗಮದೇವಾ.

ಹುನ್ನೂರ ಪ್ರಾಥಮಿಕ ಶಾಲಾ ಇಮಾರತು ತೀರ ಸಣ್ಣದಿದ್ದು ಪ್ರತಿಯೊಂದು ಕ್ಲಾಸನ್ನು ಮೂರು ಮೂರು ತಾಸೇ ಹಾಕುತ್ತಿದ್ದಾರೆ. ಈ ಅಡಚಣಿಯನ್ನು ಯಾರೂ ದೂರಮಾಡಿದ್ದಿಲ್ಲ. ಪ್ರಮುಖರಲ್ಲಿ ಇಬ್ಬಣವು ಕಂಡುಬರುತ್ತಿತ್ತು. ಈ ಸ್ವಾಮಿಗಳ ಆಗಮನದಿಂದ ಸಮಾಜವು ಏಕೀಕರಣಮಾಡಲ್ಪಟ್ಟು ಒಂದು ವಾರದಲ್ಲಿ ಅಜಮಾಸು ೭ ಸಾವಿರ ರೂಪಾಯಿಗಳು ರೋಖ ವಸೂಲಾಗಿ ಆರು ಸಾವಿರ ರೂಪಾಯಿಗಳು ವಿಜಾಪುರ ಸರಕಾರಿ ಟ್ರೇಝುರಿಗೆ ಜಮಾಮಾಡಲ್ಪಟ್ಟವು. ಒಂದು ಸಾವಿರ ರೂಪಾಯಿಗಳಿಂದ ಜ್ಞಾನಮಂದಿರದ ಹಿಂಭಾಗದಲ್ಲಿ ಬ್ರಹ್ಮಚಿಂತನೆಗೂ ಶಿವಯೋಗಕ್ಕೂ ನೆಲಮನೆ ಮೇಲ್ಪನೆಗಳನ್ನು ಕಟ್ಟುವ ಕೆಲಸವು ಭರದಿಂದ ಸಾಗಿದೆ. ಇವೆಲ್ಲ ಮಹಾತ್ಮರ ಮಹಾನುಭಾವದ ಫಲವೇಸರಿ.

ಈ ಶ್ರಾವಣಮಾಸದಲ್ಲಿ ತೇರದಾಳ ಜಮಖಂಡಿ ಮಹಾಲಿಂಗಪುರಗಳಲ್ಲಿ ಶಾಸ್ತ್ರಾನುಭವವು ನಡೆದು ಸರ್ವಸಮಾಜದ ದೃಷ್ಟಿಯು ಇಹಪರಗಳಲ್ಲಿ ಪಸರಿಸಿದ್ದು ಶುಭಸೂಚಕವೇ ಸರಿ.

ಮಾನವರಿಗೆ ಜಾಗ್ರ ಸ್ವಪ್ನ ಸುಷುಪ್ತಿಗಳೆಂಬ ಮೂರವಸ್ಥೆಗಳು ತಮ್ಮಿಂದ ತಾವೇ ತೋರಿ, ಸಂಸಾರಾತ್ಮಕವಾಗಿಹವು. ಮಿಕ್ಕ ತೂರ್ಯ ತರ್ಯಾತೀತವೆರಡವಸ್ಥೆಗಳು ಯೋಗಾಭ್ಯಾಸದಿಂದ ಜನಿಸಿ ಮುಕ್ತಿಸಾಧನಗಳಾಗಿರುವವು. ಈ ಅವಸ್ಥೆಗಳು ಗುರುಕೃಪೆಯಿಂದರಿದು ಜೀವನ್ಮುಕ್ತರಾಗಬೇಕು.

# ಪುರುಷಾರ್ಥಗಳ ಸಾಧನ ಹಾಗೂ ಜೀವನ

ಶ್ರೀ ನಿ. ಪ್ರ. ಸ್ವ. ಶ್ರೀ ಗುರುಶಾಂತಲಿಂಗ ಮಹಾ ಸ್ವಾಮಿಜಿ ವಿರಕ್ತಮಠ, ದುಘನಿ.
ಇವರ ಪ್ರಸಾದವಾಣಿ.
( ಸಂಗ್ರಾಹಕ— ಸುರೇಶ ಹೊಸಟ್ಟಿ )

" ಧರ್ಮಾರ್ಥ ಕಾಮ ಮೋಕ್ಷಾಣಾಂ ಯಶಯಿತೋಸಿನವಿದ್ಯತೆ ।
ಅಜಾಗಲಸ್ತನಸ್ಸೇವ । ತಸ್ಯ ಜನ್ಮ ನಿರರ್ಥಕಂ "

ಮಾನವನು ತನ್ನ ಜೀವಿತದ ಅವಧಿಯನ್ನು ಕಳೆಯುವಾಗ ಪುರುಷಾರ್ಥಗಳ ಅರ್ಥವನ್ನು ಹಿಗ್ಗಿಸಿ ಪ್ರಸಾದ ಮತ್ತು ಹೆಸಾದವಾದ ದಿವ್ಯ ಮಾರ್ಗವನ್ನು ಅನುಸರಿಸಬೇಕೇ ಹೊರತು ಅರ್ಥವನ್ನು ಕುಗ್ಗಿಸಿ ಅಧೋಮುಖಿಯಾಗಿ ಅನುಕೂಲ್ಯಸಿಂಧುವಾಗಿ ಅಧಃಪತನದ, ಅವಿಚಾರದ, ಅವಿವೇಕಯುಕ್ತ, ಅರ್ಥ ವಿಹೀನವಾದ ಹುರುಳನ್ನು ಹೊಟ್ಟಾಗಿಸುವದರಲ್ಲಿ ಬೆಲೆಯಿಲ್ಲ. ಸಾಮಾನ್ಯವಾಗಿ ಬಹುಜನರು ತಿಳಿದುಕೊಂಡ ಪುರುಷಾರ್ಥಗಳೇ ಬೇರೆ. ಸಾಂಪ್ರದಾಯದ ಪುರುಷಾರ್ಥಗಳೆಂದರೆ ಧರ್ಮ, ಅರ್ಥ, ಕಾಮ, ಮೋಕ್ಷವೆಂದು ಇಟ್ಟುಕೊಂಡಾಗ ಅವನ್ನಾದರೂ ಎಷ್ಟರ ಮಟ್ಟಿಗೆ ಶುದ್ಧೀಕರಿಸಿ, ಆಚರಿಸಿ, ಅನುಭವಿಸಿ ಲಿಂಗಾಂಗಸಾಮರಸ್ಯ ಪಡೆಯುವರೋ ತಿಳಿಯದು. ಇವುಗಳನ್ನು ಸಾಧಿಸದವನು " ಆಡಿನ ಕುತ್ತಿಗೆಯ ಕೆಳಗಿನ ಮೊಲೆಗಳಂತೆ ವ್ಯರ್ಥ " ವೆಂದು ಸುಜ್ಞನರು ಹೇಳಿದುದು ಸೂಕ್ತವಾದುದು.

ಈಗ ಧರ್ಮದ ವಿಷಯವಾಗಿ ಮಾತನಾಡುವಾಗ ಧರ್ಮವೆಂದರೆ ಒಂದು ಕಟ್ಟುನಿಟ್ಟಿನ ಸಂಕುಚಿತ ಪ್ರವೃತ್ತಿಯ ಆಚರಣೆ ಎಂದು ಕೆಲವರು ತಿಳಿದುಕೊಂಡರೆ ಮತ್ತೆ ಕೆಲವರು ವೇಷ ಭೂಷಣದಿಂದ ಸಮಾಜದ ವೈಶಿಷ್ಟ್ಯವನ್ನು ಪ್ರತಿಪಾದಿಸಿ ಇಂಥ, ಇಂಥವರ ಎಂದು ಒಂದು ಪಕ್ಷೀಯ ಏಕಧ್ವನಿಯನ್ನು ಉಬ್ಬುಬ್ಬಿ ಹೇಳಿ ಅದರ ಹೆಸರಿನಲ್ಲಿ ಹೊಟ್ಟೆ ಹೊರೆದುಕೊಂಡು ಕಾಲ ಕಳೆಯುವ ಮಬ್ಬುಗಳಿಗೇನು ಕೊರತೆಯಿಲ್ಲ. ಮುಸ್ಲೀಮರು ತಮ್ಮ ಧರ್ಮಾಚರಣೆಯನ್ನು ತಾವು ಆಚರಿಸುವರು. ದಾಡಿ, ಮೀಸೆ, ಪಂಜೆ ಹೀಗೆ ಅವರನ್ನು ನೋಡಿ ಕೂಡಲೇ ಇವರು ಇದೇ ಧರ್ಮದವರು ಎಂದು ಎತ್ತಿ

ತೋರಿಸುವಂತಾದರೆ ಮುಗಿಯಲಿಲ್ಲ. ವೀರಶೈವರು, ಲಿಂಗಾಂಗಿಗಳು, ಭಸ್ಮ ಧಾರಣರು, ಬ್ರಾಹ್ಮಣರು, ಜನಿವಾರ, ಹೀಗೆ ಅನೇಕ ಜಾತಿಮತಗಳ ಸಾಂಪ್ರದಾಯಗಳು ಏನೇ ಇದ್ದರೂ ಸಹ ಎಲ್ಲರೂ ಪಾಲಿಸಬೇಕಾದ ಧರ್ಮದ ನಿಯಮಗಳು ಇವೆ. ಅವೆಲ್ಲವನ್ನು ಬಿಟ್ಟು ಬಾಹ್ಯಾಚರಣೆಯನ್ನು ಮೇಲು ಮಾಡಿ ದೊರೆಯುವ ಮಾನವರಿಗೆ ಧರ್ಮದ ನಿಜವಾದ ಅರ್ಥ ಹೊಳೆಯದು.

ಹಾಗಾದರೆ ಯಾವುದು ಧರ್ಮ ? ಧರ್ಮವನ್ನು ಪ್ರತಿಪಾದಿಸುವ ಶಬ್ದ ಸಂಪತ್ತಿಯಿಂದ ವ್ಯಾಕರಣ ತೀರ್ಥರಾಗಿ ಮಾತಾಡಿದರೆ ತೀರಿತೇ ? ಅದು ಎಂದೂ ಅಲ್ಲ. ಆಡುವದು, ಮಾಡುವದು, ಎರಡೂ ಜೀವನದ ಹೊರ ಮತ್ತು ಒಳಗಿನ ಶಕ್ತಿ ಇದ್ದಹಾಗೆ. "ಸಕಲ ಜೀವಾತ್ಮರಿಗೂ ಲೇಸನೇ ಬಯಿಸುವದು ಧರ್ಮ. ಸತ್ಯ ನುಡಿಯುವದೇ ಧರ್ಮ; ಆಚಾರವೇ ಧರ್ಮ; ಮಾನವ ಕುಲವೇ ಧರ್ಮ; ಪರಧನ, ಪರಸ್ತ್ರೀ, ಪರಪೀಡೆ, ಪರನಿಂದೆಗಳಿಂದ ವಿಮುಕ್ತನಾಗುವದೇ ಧರ್ಮ. ಅಹಿಂಸೆಯೇ ಧರ್ಮ; ಲಿಂಗ ಮೆಚ್ಚಿ ನಡೆಯುವದೇ ಧರ್ಮ; ಗುರು ಲಿಂಗ ಜಂಗಮ ಆರಾಧನೆಯೇ ಧರ್ಮ. ಶರಣರ, ಸಂತ ; ಸಾಧುಗಳ, ಫಕೀರರ ಸಹವಾಸ ಮಾಡುವದೇ ಧರ್ಮ. ಹೃದಯ, ಮನಸ್ಸು ಪರಿಶುದ್ಧಗೊಳಿಸಿಕೊಂಡು, ದೇವ ದೇವನ ಅಗಾಧ ಲೀಲೆ, ಅವನ ಆಟವನ್ನು ನೋಡಿ ನಲಿಯುವದೇ ಧರ್ಮ. ಕಿವಿ ಉತ್ತಮವಾದ ಶಿವಭಜನೆ, ಶಿವಕೀರ್ತನೆ ಕೇಳುವದೇ ಧರ್ಮ; ಕಣ್ಣು ಶಿವ ಸ್ವರೂಪನ್ನು ನೋಡುವದೇ ಧರ್ಮ; ಮೂಗು ಶಿವ ಶ್ವಾಸವನ್ನು ಮಾಡುವದೇ ಧರ್ಮ. ತ್ವಚ ಶಿವಸ್ಪರ್ಶ ಮಾಡುವದೇ ಧರ್ಮ; ಪಂಚೇಂದ್ರಿಯಗಳು ಪಂಚಮುಖನ ಪ್ರಾರ್ಥಿಸುವದೇ ಧರ್ಮ; ತಾನು ದೇವರು ಆಗುದೇ ಧರ್ಮ. ದೇವರೇ ಧರ್ಮ, ಧರ್ಮವೇ ದೇವರು. ದೇವ ಜೀವ ಸಾಮರಸ್ಯವನ್ನು ಹೊಂದಿ ಅಖಂಡದಲ್ಲಿ ಲೀನವಾಗಿ ಅನಂತ ಯಾತನೆಗಳಿಂದ ಮುಕ್ತವಾಗುವದೇ ಧರ್ಮ. ಇದು ಯಾವ ಧರ್ಮದಲ್ಲೇ ಇರಲಿ, ಯಾವದೇ ಇರಲಿ ಅವನೇ ನಿಜವಾದ ಮಾನವ. ಧರ್ಮವನ್ನರಿತವ ಮಹಾತ್ಮ ಉಳಿದದ್ದು ವ್ಯರ್ಥ. ಉಳಿದವರೂ ವ್ಯರ್ಥ. ಶಿವಮೆಚ್ಚುಗೆಯದಲ್ಲ !

ಇನ್ನು ಅರ್ಥದ ವಿಷಯವಾಗಿ ಹೇಳುವಾಗ ಹಣವೆಂದೇ ನಾವು ತಿಳಿದುಕೊಂಡಾಗಲೂ ಸಹ ಅದನ್ನು ಕೂಡಾ ಯಾವ ರೀತಿಯಿಂದ ಸಂಗ್ರಹಿಸಬೇಕೆನ್ನುವ ನಿಯಮವಿದೆ. ಜೀವನದಲ್ಲಿಯ ವ್ಯವಹಾರ ಸಾಗಿಸುವದಕ್ಕೆ

ಹಣ ಬೇಕು. ಆದರೆ ಅದು ಲಿಂಗ ಮೆಚ್ಚಿಗೆಯಾಗುವಂಥದಾಗಿರಬೇಕು. ಬೇಕಾದ ಹಾದಿಯಿಂದ ಹಣ ಗಳಿಸಲು ಬಹುದು. ಕಳ್ಳತನ ಮಾಡಿ, ಮೋಸ ಮಾಡಿ ಕೊಲೆಸುಲಿಗೆ ಮಾಡಿ ಹಣವನ್ನು ಗಳಿಸಬಹುದು. ಮತ್ತು ಮತ್ತೊಬ್ಬರನ್ನು ಅನ್ಯಾಯವಾಗಿ ಹಿಂಸಿಸಿ ಹಿಯ್ಯಾಳಿಸಿಯೂ ಗಳಿಸಬಹುದು. ಆದರೆ ಅದು ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ, ಸತ್ಪಾತ್ರಕ್ಕೆ ಸಲ್ಲದು. ನಾಯಿಯ ಹಾಲು ಪಂಚಾಮೃತಕ್ಕೆ ಸಲ್ಲಬಹುದೇ ? ಸಾಧ್ಯವಿಲ್ಲ. ಮತ್ತೊಬ್ಬರನ್ನು ಕೊರಗೆಸಿ ಮರುಗಿಸಿ ಮರುಳು ಮಾಡಿ ಮಾಟ ಮಾಡಿ ಗಳಿಸಿದ ಹಣವು ಕೋಟಿ ಕೋಟಿಯಾಗಿದ್ದರೂ ವ್ಯರ್ಥ. ಕಾಯಕವೇ ಕೈಲಾಸವೆಂದು ಮನಮುಟ್ಟಿ ತನುಮುಟ್ಟಿ ನಿರ್ಮಲ ಶುದ್ಧ ಆಚರಣೆಯಿಂದ ಬಂದ ಒಂದು ಕಾಸು ಬೆಲೆಯುಳ್ಳದ್ದು. ಬದುಕಿನಲ್ಲಿ ಬೇಕಾದಷ್ಟು ಗಳಿಸಬೇಕೆನ್ನುವ ಆಶೆಗಳು ಇರಬಹುದು; ಹಾಗೆ ಇರುವದೂ ಸಹಜ. ಆದರೆ ಶರಣ ಜನರಿಗೆ ಇಂಥ ಹುಚ್ಚು ಇರುವದಿಲ್ಲ. ಅವರು ನ್ಯಾಯ ಸಮ್ಮತ, ಧರ್ಮ ಸಮ್ಮತ, ಜಂಗಮ ಸಮ್ಮತವಾಗುವ ಕಾರ್ಯವೆಸಗಿ ಹಣ ಗಳಿಸುತ್ತಾರೆ. ಅಷ್ಟೇ ಬಳಿಸುತ್ತಾರೆ. " ನನಗಾಗಿ ನನ್ನ ಮಡದಿ ಮಕ್ಕಳಿಗಾಗಿ ಕುದಿದೆನಾದರೆ ತಲೆದಂಡ; ತಲೆದಂಡ ಕೂಡಲಸಂಗಮದೇವಾ '' ಎಂಬ ವಿವೇಕಯುಕ್ತವಾಗಿ ವಿಚಾರಿಸಿ ನಡೆಯುವದೇ ಹಾಗೆ ವ್ಯವಹರಿಸಿ ಗಳಿಸುವದೇ ನಿಜವಾದ ಅರ್ಥ. ಅರ್ಥವನ್ನು ತಿಳಿದುಕೊಂಡು ಅರ್ಥ ಗಳಿಸಬೇಕು. ಅದು ಆಗದಿದ್ದರೆ ಅದೆಲ್ಲಾ ವ್ಯರ್ಥವೆಂಬುದು ಮರೆಯಲಾಗದು. ದುಡ್ಡಿನ ದುರಾಶೆಯಿಂದ ತನುಮನವನ್ನು ಮಡಿಪಾಗಿಟ್ಟು, ಶಿವನ ನಿಲವನರಿಯದೆ ಮರಣವಾದರೆ ಭವದ ಬಾಧೆ ತಪ್ಪದು. ಅವರಿಗೆ ಪುನರಪಿ ಜನನ, ಪುನರಪಿ ಮರಣ ಚಕ್ರದಲ್ಲಿ ತಿರುಗಬೇಕಾಗುವದು. ಗಳಿಸಿದಷ್ಟು ಪರೋಪಕಾರ ಪಾರಮಾರ್ಥಕ್ಕಾಗಿ ಬಳಿಸಬೇಕು. ನಾಳೆಯದು ಎಂಜಲವೆನ್ನುವ ಪ್ರಾಂಜಲ ಮನಸ್ಸಿರಬೇಕು. ಅಂದರೆ ಶಿವನ ಕರುಣೆಯ ಕಣ್ಣು ತೆರೆಯುವದು. ಕೇವಲ ಹಣದ ಹುಚ್ಚಿನಲ್ಲಿ ಹುಳುವಾಗಿ ಕಳೆಯುವದು ಮಾನವನಿಗೆ ಸಲ್ಲದು. ಪುಣ್ಯದ ಅರ್ಥ ಗಳಿಸಬೇಕು. ದಾಸೋಹಂ ಭಾವವಿರಬೇಕು. ದೇವನ ಸಂಪ್ರೀತಿಯ ಸಂಪತ್ತು ನಮ್ಮನ್ನು ಬದುಕಿಸುವದೇ ಹೊರ್ತು ಹಾಳಾಗಲಿರುವ ಈಗಣ ಈ ಹೊನ್ನು; ಈ ಮಣ್ಣು ಬದುಕಿಸಲಾರವು. ಇವು ನಮ್ಮನ್ನು ಮರಣ ಮುಖಕ್ಕೆ ಒಯ್ದು ನಿಲ್ಲಿಸುತ್ತವೆ. ಆಗ ಜ್ಞಾನದ ಅರಿವಾಗುವದು. ಅದು ವ್ಯರ್ಥ.

ಕಾಮವೆಂದರೆ ಬಹಳ ಜನರು ((*Sex*) ವಿಷಯಸುಖಭೋಗವೆಂದೇ ತಿಳಿದುಕೊಂಡುದು ಹೆಚ್ಚು. ಅದು ನಿಜವಾದ ಕಾಮವಲ್ಲ, ಅಂಥ ಕಾಮ ಸುಖಕ್ಕಾಗಿ ಸತ್ತವರು ಕೋಟಿ; ನಿನಗಾಗಿ ಸತ್ತವರನ್ನೊಬ್ಬರನ್ನೂ ಕಾಣೆ; ಎನ್ನುವಹಾಗೆ ಕಾಮ ವಿಷಯ ವಾಸನಾರಹಿತವಾದದ್ದೇ ನಿಜವಾದುದು. “ಅಂಗದ ಮೇಲೆ ಇಟ್ಟ ಆಶೆ ಕಾಮವಾಗುವದು, ಲಿಂಗದ ಮೇಲೆ ಇಟ್ಟ ನಿಷ್ಠೆ ನಿಷ್ಕಾಮವಾದುದು. ಕಾಮವೆಂದರೆ ಆಶೆ, ಆಶೆಯದ ಬೆಂಬತ್ತಿದವನು ಹಿಂತಿರುಗಿ ಬಂದಿಲ್ಲ. ನಿಷ್ಕಾಮ ಸಕಾಮಗಳು ಬೆಳಕು, ಕತ್ತಲೆಯಂತೆ. ಕಮಲು ಕೆಸರಿನಂತೆ, ಹೆಣ್ಣನ್ನು ನೋಡಿ ಆಶೆಪಡುವದು, ಭೋಗೇಚ್ಛಪಡುದು ಕಾಮಗಳು. ಅದನ್ನೇ ಪಾರ್ವತಿದೇವಿ ಶಕ್ತಿ ಶಾರದೆ ಎಂದು ಕಲ್ಪಿಸಿ ಆರಾಧಿಸುವದೇ ಸುಕಾಮ. ನೋಡುವ ದೃಷ್ಟಿ ಬದಲಾಗಬೇಕು. ಹೊನ್ನು ಮಣ್ಣು ಸಮಾನವಾಗಿ ಕಾಣದ ಹೊರ್ತು ಕಾಮದ ನಿಜವಾದ ಅರ್ಥ ಹೊಳೆಯಲಾರದು. ಅದಕ್ಕಾಗಿ ‘ಹೆಣ್ಣಿಗಾಗಿ ಸತ್ತವರು ಉಂಟು. ಮಣ್ಣಿಗಾಗಿ ಸತ್ತವರು ಉಂಟು. ಹೊನ್ನಿಗಾಗಿ ಸತ್ತವರು ಉಂಟು. ಆದರೆ ಇವನ್ನು ಮೀರಿದ ಆ ಅಗೋಚರ ಅನುಪಮ ಶಕ್ತಿಗಾಗಿ ಸತ್ತವರು ವಿರಳ. ಭವದ ಬೀಜವ ಹುರಿದು, ಭಗವಂತನ ದಿವ್ಯ ಸಾನ್ನಿಧ್ಯ ಸಾಕ್ಷಾತ್ಕಾರ ಪಡೆಯುವದೇ ನಿಜವಾದ ಕಾಮ. ನಾವು ಜಗತ್ತನ್ನು ಪ್ರೀತಿಸಬೇಕು, ಜಗದಲ್ಲಿಯ ಎಲ್ಲ ವಸ್ತುಗಳನ್ನೂ, ಎಲ್ಲ ಪ್ರಾಣಿಗಳನ್ನೂ ಪ್ರೀತಿಸಬೇಕು. ಆದರೆ ಅವೆಲ್ಲ ದೇವನು ಒಡ್ಡಿದ ಮಾಯಾಜಾಲದ ಎಳೆಗಳೆಂದು ತಿಳಿದಿರಬೇಕು. ಜಾಲಗಾರನು ಬಲೆಯೊಗೆದು ಮೀನು ಹಿಡಿಯುವ ಹಾಗೆ ದೇವರು ತನ್ನ ಮಾಯಾ ಲೀಲಾ ಜಾಲವನ್ನು ಭವಸಾಗರದಲ್ಲಿ ಒಗೆದು ಅಲ್ಲಿಯೇ ಒದ್ದಾಡುವಂತೆ ಮಾಡುತ್ತಾನೆ. ಇದರ ಇತ್ಯರ್ಥವನ್ನು ತಿಳಿದುಕೊಂಡು ಅದರಿಂದ ಪಾರಾಗಬೇಕು. ಎಷ್ಟೋ ಜನ್ಮಜನ್ಮಗಳನ್ನು ಅಂಥ ಬಲೆಯಲ್ಲಿಯೇ ನಾವು ಕಾಮದ ಆಶೆಯದ ಕೈಹಿಡಿದು ಕಳೆದುದಾಗಿದೆ. ಆದರೆ ಈ ತಿಳಿವಳಿಕೆಯ ಜನ್ಮದಲ್ಲಿ ಮತ್ತೆ ಅದಕ್ಕೆ ಮನಸ್ಸು ಮಾಡಿದರೆ ಮೂರ್ಖತನ. ಈ ಬಂಧನದಾಚೆಗೆ ಭಗವಂತನ ಪಾದಪದ್ಮದಲ್ಲಿ ಸೇರುವ ಸದಿಚ್ಛೆಯಿಂದ ಕೂಡಿದವರಾಗಿರಬೇಕು. ಕಾಮಾತೀತರಾಗಿ ಭಕ್ತಿ ಭಾವದಲ್ಲಿ ಮನಸ್ಸಿಟ್ಟು ಭವದಬಂಧನ ಕಡಿಯಲು ಇಂದಿನಿಂದಲಾದರೂ ಸಾಧನಗೈಯಬೇಕು. ಜೀವನ ಸಾರ್ಥಕ ಮಾಡಿಕೊಳ್ಳಬೇಕು. ಈ ಬೇಕುಬೇಡುಗಳನ್ನು ಕ್ಷಯಗೊಳಿಸಬೇಕು. ಶುದ್ಧಾತ್ಮದಿಂದ ಸರ್ವಂ ಲಿಂಗ

ಮಯಜಗತ್'' ಎನ್ನುವ ದೃಷ್ಟಿ ಬೆಳೆಯಬೇಕು, ಗುರುಲಿಂಗಜಂಗಮರನ್ನು ಮೆಚ್ಚಿಸಬೇಕು, ಮೋಹಿಸಬೇಕು, ಇದೇ ನಿಜವಾದ ಕಾಮವು.

ಮೋಕ್ಷ, ಸ್ವಗ, ಶಿವಲೋಕ, ಕೈಲಾಸ, ಈ ಎಲ್ಲ ಪದಗಳನ್ನು ಎಲ್ಲ ಜನರು ಬಳಿಸುತ್ತಿರುವದೆಂದರೆ ತಿಳಿದುಕೊಂಡದ್ದೆಂದರೆ ಅದೊಂದು ಸುಖದತಾಣ. ಆರಾಮಧಾಮ, ಎಲ್ಲ ಅಷ್ಟೈಶ್ವರ್ಯದ ಆಗರ; ಎಂದು ಅದು ಎಂದೂ ಹಾಗಲ್ಲ. ಇರುವದೂ ಇಲ್ಲ. ಮೋಕ್ಷ ಇದರ ನಿಜವಾದ ತಿಳುವಳಿಕೆಯ ಅರ್ಥವೆಂದರೆ ಬಿಡುಗಡೆ ಎಂದು ಈ ಕಷ್ಟ ಕಾರ್ಪಣ್ಯಮಯ ಶರೀರವನ್ನು ತೊರೆದು ಶಿವ ಪಾದ ಸೇರುವದೇ ಮೋಕ್ಷ ಅಂಥ ಒಂದು ಶಕ್ತಿ ಸಂಪಾದಿಸಬೇಕಾದರೆ ಬೇರೊಂದುಕಡೆ ಹುಡುಕಾಡುವದೇ ಬೇಡ ತನ್ನಲ್ಲಿಯೇ ತನ್ನ ಹತ್ತಿರವೇ ಇರುವದು. ಆದರೆ ಅದನ್ನು ಹುಡುಕಿ ತೆಗೆದು ನೋಡುವದು ಮಾತ್ರ ಮರೆಯಬಾರದು. "ಸತ್ಯವ ನುಡಿವುದೇ ಸ್ವರ್ಗ, ಆಚಾರವೇ ಸ್ವರ್ಗ'' ಎಂದು ಸರಳವಾಗಿ, ಸುಂದರವಾಗಿ, ಸಾಧನ ಜೀವನ ಮಾಡುವ ಜನರಿಗೆ ಶರಣರು ಸ್ವರ್ಗದ ಬಾಗಿಲು ತೆರೆದಿಟ್ಟಿದ್ದಾರೆ. ಎಲ್ಲವನ್ನು ಕೊಟ್ಟು ಬಿಡಬಹುದು. ಕಳೆದುಕೊಳ್ಳಬಹುದು, ಆದರೆ ಸತ್ಯವನ್ನು ಎಂದೂ ಕೊಡಲಾಗದು, ಬಿಡಲಾಗದು, ಜೀವನದ ಆಂತರಿಕ ಮತ್ತು ಭಾಹ್ಯಕವಾದ ಶುದ್ಧೀಕರಣ ಮಾಡಿಕೊಂಡಾಗಲೇ ಆತ್ಮಲಿಂಗದ ಪರಂಜ್ಯೋತಿ ಪ್ರಕಾಶವಾನವಾಗಿ ಬೆಳಗುವವನು. ಕುಸಂಸ್ಕಾರಯುಕ್ತ ಎಲ್ಲ ಆಶೆಯುಗಳನ್ನು ತೊರೆಯಬೇಕು. ಶಿವನೊಬ್ಬನೇ ದೈವವೆಂದು ನಂಬಿಕರೆದಡೆ ಓ ಎಂಬನೇ. ನಂಬಲರಿಯರು, ನಚ್ಚಲರಿಯರು, ಡಂಭಿನಾಭಕ್ತರು. ಶ್ರದ್ಧೆ, ವಿಶ್ವಾಸ, ನಂಬುಗೆ, ಇವು ಮೊದಲು ಜೀವನದಲ್ಲಿ ಪ್ರತಿಷ್ಠಾಪಿಸಿಕೊಳ್ಳಬೇಕು. ಈ ಮೋಹಿತ ಪರದೆಯಿಂದ ಪಾರಾಗಿ ಮುಕ್ತತ್ವದ ಮಂದಿರವನ್ನು ಸೇರುವದೇ ಮೋಕ್ಷ. ಅದು ನಾವು ಸಾಧಕರಾಗಿ ಶರಣರ ಸುವಿಚಾರಗಳನ್ನು ತಿಳಿದು ನಡೆದುಕೊಂಡಾಗಲೇ ಆ ಮೊಕ್ಷ ಪ್ರಾಪ್ತವಾಗುವದು. ದಾನಧರ್ಮಾದಿಗಳನ್ನು ಮಾಡಿ ಪರಹಿತ ಪರಸುಖಕ್ಕಾಗಿ ಪ್ರಯತ್ನಿಸಬೇಕು. ಮೋಹವನ್ನು ಕ್ಷಯಗೊಳಿಸಿದಾಗ ಮೋಕ್ಷ ಸಿಗುವದು. ಮೋಹಿತನಾದವನಿಗೆ ಜೀವನ ಮುಕ್ತಿಯಿಲ್ಲ. ಧರ್ಮ, ಅರ್ಥ, ಕಾಮಾದಿಗಳ ನೈಜವಾದ ಅರ್ಥ ತಿಳಿದುಕೊಂಡು ನಡೆದರೆ ಮೋಕ್ಷದೊರೆಯುವದು. ಮೋಕ್ಷವೆಂದರೆ ಹಣಕೊಟ್ಟು ಕೊಳ್ಳುವ ವಸ್ತುನಲ್ಲ. ಬಾಡಿಗೆ ಕೊಟ್ಟು ಆರಾಮ ತಗೆದುಕೊಳ್ಳುವ ಕಷ್ಟ ಹೊಸವಲ್ಲ.

ಕಾಯಾ, ವಾಚಾ, ಮನಸ್ಸು ನಿರ್ಮಲಗೊಳಿಸಿ ನಿತ್ಯತೃಪ್ತನಾಗಿ ನಿತ್ಯನಿರಂಜನನಾಗಿ ಬಾಳಬೇಕಾಗುವದು. ಅದೇ ಮೋಕ್ಷ. ಮೋಕ್ಷವೆಂದರೆ ಒಂದು ಸುಖದ ನಿವಾಸವಲ್ಲ. "ನುಡಿದಂತೆ ನಡೆವುದೇ ಮೋಕ್ಷ."

---

# ಲಚ್ಯಾಣ ಪುಣ್ಯತಿಥಿಯಲ್ಲಿ

( ಬರೆದವರು:— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ. ( ಇಂಡಿ )

---

ಕನ್ನಡನಾಡಿನಲ್ಲಿಯೇ ಒಳ್ಳೇ ಪ್ರಸಿದ್ಧ ಪ್ರಬುದ್ಧ ಪ್ರಭಾವಶಾಲಿ ಸ್ವಾಮಿಗಳೂ ಒಳ್ಳೇ ಕಳಕಳಿಯಿಂದ ಸಮಾಜ ಕಲ್ಯಾಣ ಮಾಡುವ ಮಹಾಶಿವಯೋಗಿಗಳೂ ವಿದ್ಯಾಪಕ್ಷಪಾತಿಗಳೂ ಆದ ಬಂಥನಾಳೇಶ್ವರರೂ ಬೋರ್ಡಿಂಗ ಶಾಲೆ, ಹಾಯಸ್ಕೂಲ, ಕಾಲೇಜಗಳನ್ನು ಸ್ಥಾಪಿಸಲು ಹೆಣಗಿದ ಹೆಣಗಾಡುತ್ತಿರುವ ಶ್ರೀ ಸಂಗನಬಸವ ಶಿವಯೋಗಿವರ್ಯರೂ ಅನೇಕ ಮಠಗಳಿಗೆ ಅಧಿಕಾರಿಗಳಾದ ವಿಖ್ಯಾತ ಶರಣ ಮಾರ್ಗಾವಲಂಬಿಗಳೂ, ಪುರಾಣ ಪ್ರವಚನ ವ್ಯಾಖ್ಯಾನ, ಕಂಠೀರವರೂ ಶ್ರೀ ಸಂಗನಬಸವನೇ ಈಗ ಶ್ರೀಸಂಗನಬಸವನಾಗಿ ಬಂದಂಥ ಶ್ರೀಗಳವರೂ ಕೋಪತೊರೆದು ಮುಗುಳ್ನಗೆಯಿಂದಲೇ ಸಕಲರಿಗೆ ಉತ್ತರಿಸುವ ಧರ್ಮವೇತ್ತರೂ ದೇಶ ಕಾಲ ಪರಿಸ್ಥಿತಿಗೆ ಹೊಂದಿಕೊಂಡು ನುಡಿದು ನಡೆಯುವ ಧೀರ ಸ್ವಾಮಿಗಳೂ ಸಣ್ಣ ಸ್ಥಾನದಿಂದ ಸ್ವಪ್ರಯತ್ನದಿಂದಲೇ ಒಳ್ಳೇ ಉಚ್ಚ ಸ್ಥಾನಕ್ಕೆ ಏರಿದ ಶಿವಯೋಗಿಗಳೂ ವ್ಯವಹಾರ ವೇದಾಂತಗಳೆರಡನ್ನೂ ಜೀವನದಲ್ಲಿ ಸಮನ್ವಯಗೊಳಿಸಿದ ಮಹಾಶರಣರೂ, ತಿರುಕನಿಂದ ಅರಸನಿಂದ ಪೂಜ್ಯಗೊಳ್ಳುವ ಮಹಾಶಿವಯೋಗಿಗಳೂ ಒಳ್ಳೇ ಶಿವಾನುಭವಿಗಳೂ ೭೭೦ ಅಮರಗಣಂಗಳ ಪೂಜೆಗೈದು ನಾಡು ದೇಶಗಳಲ್ಲಿಯೇ ಅಮರ ಕೀರ್ತಿಯನ್ನು ಗಳಿಸಿದ ಧರ್ಮಾಧಿಕಾರಿಗಳೂ ಆದ ಶ್ರೀ ಸಂಗನಬಸವ ಶಿವಯೋಗಿಗಳು ಲಚ್ಯಾಣ ಸಮಾರಂಭದಲ್ಲಿ ಎದ್ದು

ಕಾಣುತ್ತಿದ್ದರು. ಇಂಥ ಶ್ರೀಗಳವರ ಆಹ್ವಾನದ ಮೇರೆಗೆ ಲಚ್ಯಾಣದ ಸಿದ್ಧಲಿಂಗದೇವರ ಪುಣ್ಯತಿಥಿಯಲ್ಲಿ ನಾನೂ ಭಾಗಿಯಾಗಿದ್ದೆನು, ಇದೊಂದು ನನ್ನ ಭಾಗ್ಯೋದಯದ ಕಾಲವೆಂದೇ ನಾನು ನೆರೆನಂಬಿದ್ದೇನೆ.

ಇಲ್ಲಿಯ ಮಠದ ವಿಸ್ತೀರ್ಣ ನೋಡಿ ನಾನು ದಂಗುವರಿದೆನು. ಒಂದು ಕಡೆ ಹಾಯಸ್ಕೂಲದ ಕಟ್ಟಡಗಳು ಇನ್ನೊಂದು ಕಡೆ ಟ್ರೇನಿಂಗ ಕಾಲೇಜದ ಕಟ್ಟಡಗಳು ಮತ್ತೊಂದು ಕಡೆ ಭೋಜನದ ಕಟ್ಟಡಗಳು ಮಗ ದೊಂದು ಕಡೆ ಶಿಕ್ಷಕರ ಹಾಗೂ ವಿದ್ಯಾರ್ಥಿಗಳ ವಸತಿ ಗೃಹದ ಕಟ್ಟಡಗಳು ಅಲ್ಲೊಂದು ಕಡೆ ಸಾಧು ಸನ್ಯಾಸಿಗಳ ವಾಸದ ಕಟ್ಟಡಗಳು. ಇಲ್ಲೊಂದು ಕಡೆ ಶಿವಾನುಭವ ಕಟ್ಟಡಗಳು ಮಧ್ಯದಲ್ಲಿ ಮಹಾ ಸಿದ್ಧ ಪುರುಷನಾದ ಸಿದ್ಧ ಲಿಂಗೇಶ್ವರನ ಗದ್ದುಗೆ, ಗುಡಿ, ಮಂಟಪಗಳ ಕಟ್ಟಡಗಳು ಒಂದು ಕಡೆ, ಶ್ರೀ ಸಂಗನಬಸವ ಶಿವಯೋಗಿಗಳು ವಾಸ ಮಾಡುವ ಕಮರೀ ಮಠದ ಕಟ್ಟ ಡಗಳು ಬೇರೆ ಕಡೆಗೆ ನಿತ್ಯ ದಾಸೋಹದ ಕಟ್ಟಡಗಳು ಹಲವು ಕಡೆ ಪಾಂಥ ಸ್ಥರು ಉಳಿದುಕೊಳ್ಳುವ ಕಟ್ಟಡಗಳು ಹೀಗೆ ಅನೇಕ ಪ್ರಕಾರದ ಕಟ್ಟಡಗ ಳಿಂದ ಅದೊಂದು ಸಿದ್ಧಲಿಂಗನ ನಗರವಾಗಿ ಪರಿಣಮಿಸುತ್ತಿರುವದು.

ಎತ್ತ ನೋಡಿದತ್ತ ಅನೇಕ ಭಜನೆಯ ಮೇಳದವರು ಅನುಭವ ಪೂರ್ಣವಾದ ಭಕ್ತಿ ಭರಿತವಾದ ಪದಗಳನ್ನು ಅಹೋರಾತ್ರಿ ಹಾಡಿ ಜನ ರನ್ನು ತಣಿಸುತ್ತಿರುವರು. ಮಂಟಪದಲ್ಲಿ ಸಪ್ತಾಹ ನಡೆದಿತ್ತು. ಅಸಂಖ್ಯ ಕಾವಿ ಬಟ್ಟೆಯ ಸಾಧುಗಳು ಅಲ್ಲಿ ಕಾಣುತ್ತಿದ್ದರು. ಅಲ್ಲದೆ ಪಟ್ಟದವರು, ವಿರಕ್ತರು, ಮಠಾಧೀಶರರೂ ಆಗಮಿಸಿದ್ದರು. ಶ್ರೀ ಸ್ವಾಮಿ ಲಿಂಗಾನಂದ (ಬಿ. ಎ. ಆನರ್ಸ) ಇವರು ಎಂಟು ದಿನ ಪ್ರವಚನ ಹೇಳಿ ಜನರನ್ನು ಬಹು ವಾಗಿ ತಣಿಸಿದ್ದರು. ಪರಮ ಶಾಂತಿಮಯನೂ ಪರಮ ಶಕ್ತಿಮಯನೂ ಆದ ಶ್ರೀ ಶಾಂತವೀರ ಮಹಾ ಸ್ವಾಮಿಗಳು ಬಬಲೇಶ್ವರ ಇವರು ಈ ಪುಣ್ಯ ತಿಥಿಯಲ್ಲಿ ಮುಖ್ಯ ಅಥಿತಿಗಳಾಗಿ ಆಗಮಿಸಿದ್ದೊಂದು ಲಚ್ಯಾಣಕ್ಕೆ ಒಳ್ಳೇ ಕಳೆಯನ್ನು ತಂದುಕೊಟ್ಟಿತ್ತು. ಅನೇಕ ತರದ ವಾದ್ಯದವರು ಗಾಯಕರು ಆಗಮಿಸಿ ಜನವೃಂದವನ್ನು ತಮ್ಮ ವಿದ್ಯೆಯಿಂದ ತಣಿಸುತ್ತಿದ್ದರು. ಜನರು ಈಸಲ ಪ್ರತಿ ಸಲಕ್ಕಿಂತ ಹೆಚ್ಚಾಗಿ ಆಗಮಿಸಿತ್ತೆಂದು ಆಡಿಕೊಳ್ಳುತ್ತಿದ್ದರು.

ಈ ಜಾತ್ರೆಯಲ್ಲಿ ಒಂದು ಒಕ್ಕಲತನದ ಪ್ರದರ್ಶನ ಒಂದು ಕಲೆಯ ಪ್ರದರ್ಶನ, ಒಂದು ನೂಲು ನೇಗಿಯ ಪ್ರದರ್ಶನ ಏರ್ಪಟ್ಟಿದ್ದವು. ನಿತ್ಯ

ಆಧ್ಯಾತ್ಮ ವಿಷಯದ ಚರ್ಚೆ ಎರಡು ವೇಳೆ ನಡೆಯುತ್ತಿತ್ತು. ಇದರಲ್ಲಿ ಒಬ್ಬರು ಮಾಯಾವಾದವನ್ನು ಪ್ರತಿಪಾದಿಸುತ್ತಿದ್ದರು. ಬ್ರಹ್ಮ ಸತ್ಯ ಜಗತ್ತು ಮಿಥ್ಯವೆಂದು ತರ್ಕಪೂರ್ಣ ವಾದವನ್ನು ಮಾಡುತ್ತ, ಪರಮಾನುಭವ ಬೋಧೆಯನ್ನು ಹೇಳುತ್ತಿದ್ದರು. ಉಳಿದವರು ಜಗತ್ತೂ ಸತ್ಯ, ಬ್ರಹ್ಮನೂ ಸತ್ಯ ಎಂದು ಅನುಭವಯುಕ್ತವಾದ ಶರಣರ ಪ್ರಮುಥರ ವಚನಗಳಿಂದ ಸಿದ್ಧ ಮಾಡಿ ತೋರಿಸುತ್ತಿದ್ದರು. ಸಾಮಾನ್ಯವಾಗಿ ಈ ಲೇಖಕರೂ, ಶ್ರೀ ಶಾಂತವೀರ ಸ್ವಾಮಿಗಳೂ ಶ್ರೀ ಬಿದರಿ ಕುಮಾರ ಸ್ವಾಮಿಗಳೂ ಶಕ್ತಿವಿಶಿಷ್ಟಾದ್ವೈತವನ್ನು ಪ್ರತಿಪಾದಿಸುತ್ತಿದ್ದರು. ಇಂಡಿಯ ಸಿದಗೊಂಡಪ್ಪನೂ ನಿಂಬಾಳದ ಸ್ವಾಮಿಗಳೂ ಅದ್ವೈತವನ್ನು ಪ್ರತಿಪಾದಿಸುತ್ತಿದ್ದರು. ಈ ಚರ್ಚೆಗಳು ಬಹು ಸ್ವಾರಸ್ಯವಾಗಿ ಜರುಗಿದವು. ಈ ಚರ್ಚೆಯನ್ನು ಕೇಳಿದವರಿಗೆ ಮಾತ್ರ ಅದರ ಅನುಭವವಾಗಿ ಆನಂದ ಹೊಂದಿರುವದರ ದ್ಯೋತಕಗಳು ಮುಖದ ಮೇಲೆ ಎದ್ದು ಕಾಣುತ್ತಿದ್ದವು. ಸಭೆಯಲ್ಲಿ ಗದ್ದಲವೆದ್ದಾಗ ಬೇರೆಯವರ ವ್ಯಾಖ್ಯಾನ ರುಚಿಸದಾಗ ಜನ ಬೇಸತ್ತಾಗ ಶ್ರೀ ಬಂಥನಾಳ ಶಿವಯೋಗಿಗಳು ಎದ್ದು ನಿಂತ ಕೂಡಲೇ ಎಲ್ಲರೂ ಚಪ್ಪಾಳೆ ತಟ್ಟಿ ಶಾಂತರಾಗಿ ಕೇಳಲು ಕೂತು ಬಿಡುತ್ತಿದ್ದರು. ಈ ಪ್ರಕಾರ ಜನರ ಹೃದಯಗಳನ್ನು ಆಕರ್ಷಿಸುತ್ತಿದ್ದರು. ಇವರು ಸಮಯೋಚಿತ ಭಾಷಣಗಳನ್ನು ಮಾಡುತ್ತಿದ್ದರು. ಪ್ರತಿ ಸೋಮವಾರ ಇವರು ಮೌನವನ್ನು ಆಚರಿಸುತ್ತಿದ್ದರೂ ಸನ್ನೆಯಿಂದಲೇ ಜನರನ್ನು ಶಾಂತಗೊಳಿಸಿ ತಣಿಸುತ್ತಿದ್ದರು. ಈ ಲೇಖಕರೂ ಎರಡು ಭಾಷಣಗಳನ್ನು ಮಾಡಿ ಶಿವನು ಶಕ್ತಿಸಮೇತನಾಗಿರುವನೆಂದೂ, ಬ್ರಹ್ಮನಲ್ಲಿ ಜಗವು ಬೀಜರೂಪದಲ್ಲಿ ಮೊದಲೇ ಇರುವದೆಂದೂ ಹೇಳಿದರು. ಶ್ರೀ ಲಿಂಗಾನಂದರು ಇದನ್ನು ಎತ್ತಿ ಹಿಡಿದು ಶರಣರ ಉದಾತ್ತ ವಿಶಾಲ ತತ್ವಗಳನ್ನು ಒಳ್ಳೇ ಮನನೀಯವಾಗಿ ಹೇಳಿ ಶರಣರು ವಿಶ್ವ ಧರ್ಮವನ್ನೇ ಆಚರಿಸುತ್ತಿದ್ದರೆಂದು ಸ್ಪಷ್ಟಪಡಿಸಿದರು. ಬಹುತರ ಎಲ್ಲ ಸ್ವಾಮಿಗಳು ಶ್ರೀ ಬಂಥನಾಳ ಶಿವಯೋಗಿಗಳ ವಿಶಾಲ ಹೃದಯವನ್ನೂ ಕಾರ್ಯವನ್ನೂ ಬಹುವಾಗಿ ಬಣ್ಣಿಸಿದರು. ನಿಜವಾಗಿ ಅವರು ಬಣ್ಣಿಸಿಕೊಳ್ಳುವ ಮಹಾಪುರುಷರಿದ್ದಾರೆ. ಸಕಲರ ಕೂಡ ಒಳ್ಳೇ ನಿರಭಿಮಾನದಿಂದ ನಿರಹಂಕಾರದಿಂದ ಸಮಾನಸ್ಕಂದರಂತೆ ವರ್ತಿಸುತ್ತಿದ್ದುದರಿಂದ ಸಕಲರ ಮನವನ್ನು ತಮ್ಮ ಕಡೆಗೆ ಸೆಳೆದುಕೊಂಡಿದ್ದಾರೆ.

ಇವರು ಅಲ್ಪ ಕಾಲದಲ್ಲಿಯೇ ಅನೇಕ ಮಠಗಳಿಗೆ ಅಧಿಕಾರಿಗಳಾಗಬೇಕಾದರೆ ಇವರ ಮೇಲೆ ಜನತೆಯ ಪ್ರೀತಿ ಎಷ್ಟಿರುವದೆಂಬುದನ್ನು ವಾಚ

ಕರೇ ಊಹಿಸಬಹುದು. ಲಚ್ಯಾಣದಲ್ಲಿ ಇವರು ಸಾಧಿಸಿದ ಕಾರ್ಯಗಳನ್ನು ಪ್ರತ್ಯಕ್ಷಹೋಗಿ ನೋಡದೆ ತಿಳಿಯುವಂತಿಲ್ಲ. ಇದೊಂದು ಮಹಾದೊಡ್ಡ ಕ್ಷೇತ್ರವಾಗಿ ಯಾತ್ರಾ ಸ್ಥಳವಾಗಿ ಪರಿಣಮಿಸಿದೆ. ದಾಸೋಹವಂತೂ ಸದಾ ನಡದೇ ಇರುವದು. ಮಠಕ್ಕೆ ಹೊಂದಿ ಉಗಿಬಂಡಿಗಳು ಶಿಳ್ಳು ಹೊಡೆಯುತ್ತ ಅತ್ತಿಂದ ಇತ್ತ, ಇತ್ತಿಂದ ಅತ್ತ ಮೇಲಿಂದ ಮೇಲೆ ಹೋಗುತ್ತಿರುವದು ಆಶ್ರಮಕ್ಕೆ ಒಳ್ಳೇ ಶೋಭೆಯನ್ನುಂಟು ಮಾಡಿರುವದು. ಸ್ವಾಮಿಗಳ ನೆರವಿನಿಂದ ಊರಲ್ಲಿ ಈಗಿನ ಕಾಲದ ಎಲ್ಲ ಸುಧಾರಣೆಗಳು ಆಗಿರುವವು. ಅದರಂತೆ ಬಂಥನಾಳ, ರೂಗಿ, ಪುನಾ, ರಾಯಚೂರ, ಕೃಷ್ಣಾ ಮೊದಲಾದ ಇನ್ನೂ ಅನೇಕ ಊರುಗಳಲ್ಲಿಯ ಮಠಗಳೂ ಕೂಡ ಒಳ್ಳೇ ಸುಧಾರಣೆಯ ಸ್ಥಿತಿಯಲ್ಲಿಯೇ ಇರುತ್ತವೆ. ಇವುಗಳ ಆರ್ಥಿಕ ಪರಿಸ್ಥಿತಿ ಒಳ್ಳೇ ಉತ್ತಮವಿರುತ್ತದೆ. ಅನೇಕ ಜಮೀನುಗಳು ಮಠದ ಕೆಳಗೆ ಬಂದಿವೆ. ಅಸಂಖ್ಯ ಜನರು ಒಳ್ಳೇ ಭಯಭಕ್ತಿಯಿಂದ ನಡೆದುಕೊಂಡು ತನು, ಮನ, ಧನ ಮೊದಲಾದವುಗಳಿಂದ ಮಠಗಳಿಗೆ ಸಹಾಯ ಮಾಡಿ ಸ್ವಾಮಿಗಳಿಗೆ ಉತ್ತಮ ಸೇವೆ ಸಲ್ಲಿಸುತ್ತಿರುವರು. ಹೀಗಂತೆ ಎಲ್ಲ ಕಡೆಗಳಲ್ಲಿ ದೊಡ್ಡ ಪ್ರಮಾಣದಿಂದ ಪುಣ್ಯತಿಥಿ ಜಾತ್ರೆಗಳು ಜರಗಿ ಧಾರ್ಮಿಕ ನೈತಿಕ ಸಾಮಾಜಿಕ ಆಧ್ಯಾತ್ಮಿಕ ಮೊದಲಾದ ಸುಧಾರಣೆಗಳು ಆಗುತ್ತಿರುವವು ಇದೆಲ್ಲ ಮಹಾಸ್ವಾಮಿಗಳ ಪುಣ್ಯ ಪ್ರಭಾವವೇ ಸರಿ. ಇವರ ಪ್ರಭಾವದಿಂದ ಮರಾಠಿ ಆಂಧ್ರ ನಾಡುಗಳಲ್ಲಿ ಮಠಗಳಾಗಿ ವೀರಶೈವ ಉಚ್ಚ ಸಂಸ್ಕೃತಿಯನ್ನು ಬೆಳಗುತ್ತಿರುವದು, ಒಳ್ಳೇ ಅಭಿಮಾನದ ಸಂಗತಿಯೇ ಸರಿ. ಇಂಥ ಮಹಾಮಹಿಮರನ್ನು ವೀರಶೈವರು ವೀರಶೈವ ಮಹಾಸಭೆಯ ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿದ್ದು ಅವರ ಹಿರಿಮೆಯನ್ನು ವ್ಯಕ್ತಗೊಳಿಸುವದು. ಇವರು ಸಮಾಜಕ್ಕೆ ಅನೇಕ ಮುಖದಿಂದ ಸೇವೆ ಸಲ್ಲಿಸಿದ್ದಾರೆ. ಈ ಮಹಾ ಸ್ವಾಮಿಗಳಂತೆ ಸಕಲ ಸ್ವಾಮಿಗಳು ಸಮಾಜಕ್ಕೆ ಕಳಕಳಿಯಿಂದ ಸೇವೆ ಮಾಡುತ್ತ ನಡೆದದ್ದಾದರೆ ಹಿಂದುಳಿದ ನಮ್ಮ ಸಮಾಜವು ಭರಗುಡುತ್ತ ಎದ್ದೇಳುವದರಲ್ಲಿ ಸಂದೇಹವೇ ಇಲ್ಲ. ಪೂಜ್ಯ ಮಹಾಸ್ವಾಮಿಗಳು ಎಲ್ಲ ಕಾರ್ಯಕ್ಷೇತ್ರಗಳಲ್ಲಿ ಬಹುವಾಗಿ ಜಯ ಸಾಧಿಸಿರುವದು ಕಂಡುಬರುವದು. ಆದರೆ ಸಾಹಿತ್ಯ ಕ್ಷೇತ್ರದಲ್ಲಿ ಅಂದರೆ ವಚನ ಸಾಹಿತ್ಯವನ್ನು ಬಹುವಾಗಿ ಪ್ರಚಾರ ಮಾಡಲು ನೆರವಾದೆಂತೆ ತೋರುವದಿಲ್ಲ. ಅದಕ್ಕೆ ಇದೊಂದು ಕೊರತೆಯನ್ನು ಸ್ವಾಮಿಗಳು ಹೋಗಲಾಡಿಸುವಂತೆ ಮಾಡುವರೆಂದು ನೆರೆನಂಬಿದ್ದೇವೆ. ವೀರಶೈವ

ಸಾಹಿತ್ಯದ ಯೋಗ್ಯ ಗ್ರಂಥಗಳನ್ನು ಪ್ರಕಟಪಡಿಸುವಲ್ಲಿ ತನು, ಮನ, ಧನಗಳಿಂದ ನೆರವು ನೀಡಿ ವೀರಶೈವವನ್ನು ಹೆಚ್ಚಾಗಿ ಪ್ರಚಾರ ಮಾಡಬೇಕೆಂದು ಸಹ ಬೇಡಿಕೊಳ್ಳುವೆವು.

ಇವರಲ್ಲಿ ವಿರಕ್ತ ಪಟ್ಟದವರು ಎಂಬ ಭೇದವಿಲ್ಲ. ಇವರಲ್ಲಿ ಬಂದವರೆಲ್ಲ ತಕ್ಕ ಮಾನ ಮನ್ನಣೆ ಹೊಂದುತ್ತಿರುವದು ಕಂಡು ಬರುವದು. ವಿರಕ್ತ ಪಟ್ಟದವರನ್ನು ಒಂದೇ ಸ್ಥಾನದಲ್ಲಿ ಕೂಡಿಸುವದೆಂದರೆ ಎರಡು ಕೋಣಗಳನ್ನು ಕೂಡಿಸಿದಂತೆಯೇ ಸರಿ. ನಾ ಹೆಚ್ಚು ನೀ ಹೆಚ್ಚು ಎಂದು ಸದಾ ಬಡಿದಾಡುವವರೇ ಇದ್ದರೂ ಇವರಲ್ಲಿ ಎಲ್ಲರೂ ಸಹಜ ಸರಳ ರೀತಿಯಿಂದ ತಕರಾರು ಮಾಡದೆ ಕೂಡಿ ಹೋಗುವರು. ಇದೊಂದು ಮಹಾ ಸ್ವಾಮಿಗಳ ದಿವ್ಯ ಪ್ರಭಾವವೆಂದೇ ಹೇಳಬೇಕಾಗಿದೆ. ಇವರಿಂದ ವಿರಕ್ತ-ಪಟ್ಟ, ಪಂಚಾಚಾರ್ಯ-ಬಸವ ಈ ಭೇದಗಳು ಬಹುತರ ಈಗ ಕಡಿಮೆಯಾಗಿರುವವು.

ಪುಣ್ಯತಿಥಿಗೆ ಲಚ್ಯಾಣದಲ್ಲಿ ನೆರೆದ ಅಜಮಾಸು ಐದಾರು ನೂರು ಸಾಧು ಜನಂದೊಂದು ಸಂಘವನ್ನು ಸ್ಥಾಪಿಸಿ ಇವರಿಂದ ಸಮಾಜಸೇವೆಯಾಗಿ ನಿಯಮಬದ್ಧವಾಗಿ ನಡೆಯುವಂತೆ ಮಾಡಬೇಕೆಂದು ವಿಚಾರಿಸಲಾಗಿತ್ತು. ಆದರೆ ವೇಳೆಯ ಅಭಾವದ ಮೂಲಕ ಈ ಕಾರ್ಯ ಜರಗಲಿಲ್ಲ. ಮುಂದಿನ ಸಲ ಇದನ್ನು ಸಾಧಿಸುವ ಇಚ್ಛೆಯನ್ನು ಸ್ವಾಮಿಗಳು ವ್ಯಕ್ತ ಮಾಡಿದ್ದಾರೆ. ಹೀಗೆ ಸ್ವಾಮಿಗಳು ಪ್ರತಿಯೊಂದು ರೀತಿಯಿಂದ ಸಮಾಜಕ್ಕೆ ಸೇವೆ ಸಲ್ಲಿಸುತ್ತಿರುವರು. ಎಲ್ಲ ಸ್ವಾಮಿಗಳು ಇವರ ಅನುಕರಣ ಮಾಡಿ ಕೃತಾರ್ಥರಾಗಬೇಕು. ತಮ್ಮ ಕೈಲಾದಷ್ಟು ಸಮಾಜ ಕಲ್ಯಾಣಕ್ಕೆ ಹೆಣಗಬೇಕು. ಅಂದರೆ ಮಹಾ ಸ್ವಾಮಿಗಳ ಕಾರ್ಯಗಳಿಗೆ ನೆರವಾದಂತೆ ಆಗುವದು. ಬರೇ ಪೂಜೆ ಮಾಡಿಸಿಕೊಂಡು ಊಟ ಹೊಡೆದರೆ ತಿದ್ದುವದಲ್ಲ. ಆ ಕಾಲ ಹೋಗಿ ಬಹು ದಿನಗಳಾದವು. ಹೊಸ ಮನ್ವಂತರಕ್ಕೆ ಹೊಂದಿಕೊಂಡು ನಾವೆಲ್ಲ ಸ್ವಾಮಿಗಳು ನಡೆದುಕೊಳ್ಳಬೇಕು. ಎಲ್ಲ ತರಗತಿಯ ಜನರನ್ನು ತಮ್ಮ ಕಡೆಗೆ ಸ್ವಾಮಿಗಳು ಸೆಳೆದಿದ್ದಾರೆ. ಕಲಿತವರೂ, ಕಲಿಯಲಾರದವರೂ, ಶಿರಿವಂತರೂ, ದರಿದ್ರರೂ, ಅಧಿಕಾರಿಗಳೂ, ನಿರಧಿಕಾರಿಗಳೂ, ಶ್ರೇಷ್ಠರೂ, ಕನಿಷ್ಠರೂ, ಉಚ್ಚರೂ, ನೀಚರೂ, ಬಡವರೂ, ಬಲ್ಲಿದರೂ ಹೀಗೆ ಸಕಲರೂ ಇವರಿಗೆ ಪೂಜ್ಯ ಭಾವದಿಂದ ನಡೆದುಕೊಳ್ಳುತ್ತಿರುವದೊಂದು ಒಳ್ಳೇ ವೈಶಿಷ್ಟ್ಯವೆಂದೇ ಹೇಳಬೇಕು. ಸಾಹಿತಿಗಳೂ, ಕಲೆಗಾರರೂ, ಕವಿಗಳೂ, ಶಾಸ್ತ್ರಿಗಳೂ, ಸಕಲರೂ ಇವರಿಗೆ ಒಳ್ಳೇ ಮಾನ ಮನ್ನಣೆ ಕೊಡುವರು. ಈ ಪ್ರಕಾರ ಇವರ ಪ್ರಭಾವವು ಸಕಲರಲ್ಲಿಯೂ ಬೀರುತ್ತಿರುವದು. ಎಲ್ಲರೂ ಇವರಲ್ಲಿ ಬಂದು ತಮ್ಮ ಸೇವೆ ಸಲ್ಲಿಸಿ ಹೋಗುತ್ತಿರುವರು.

ಈ ಪ್ರಕಾರ ಈ ಮಹಾಸ್ವಾಮಿಗಳು ಸಕಲ ರೀತಿಯಿಂದ ಆದರ್ಶ ಪ್ರಾಯರಾಗಿದ್ದಾರೆ. ಇವರಷ್ಟು ಸಕಲರ ಕೂಡ ವ್ಯವಹರಿಸುವ ಚಾತುರ್ಯ ವನ್ನು ನಾನು ಬೇರಾರಲ್ಲಿಯೂ ಕಂಡಿರುವದಿಲ್ಲ. ಹೀಗಾಗಿ ಎಲ್ಲರೂ ಇವ ರಿಗೆ ಆಪ್ತಪ್ರೀತಿಯ ಮಿತ್ರರಾಗಿಯೇ ಬಿಟ್ಟಿದ್ದಾರೆ. ಕೆಲ ಅಹಂಕಾರೀ ಸ್ವಾಮಿಗಳು ಇವರ ಏಳ್ಗೆಯನ್ನು ಸಹಿಸುವದಕ್ಕೆ ಹೊಟ್ಟೆಕಿಚ್ಚಿನಿಂದ ಟೀಕೆ ಮಾಡಿದರೂ ಕೂಡ ನಗನಗುತ್ತ ಅವರಿಗೆ ಉತ್ತರಿಸುತ್ತ ಅವರ ಸೇಡವನ್ನು ಸಹಜ ಕಡಿಮೆ ಮಾಡುವದೊಂದು ಇವರ ಹೆಚ್ಚಿನ ಸ್ವಭಾವವೇ ಸರಿ ಮೊನ್ನಿನ ಪುಣ್ಯತಿಥಿಯಲ್ಲಿ ತಮಗಿಂತ ಕಿರಿಯರನ್ನು ಅಡ್ಡಪಾಲಿಕೆಯಲ್ಲಿ ಕೂಡ್ರಿಸಿ ಮೆರಿಸಿದ್ದು ಇವರ ನಿರಹಂಕಾರ ವ್ಯಕ್ತವಾಗುವದು. ನಾನಂತೂ ಇವರು ಕೋಪಗೊಂಡು ಮುಖ ಕೆಂಪೇರಿದ್ದನ್ನು ನೋಡಿಲ್ಲ ಯಾವಾಗಲೂ ಮುಗುಳ್ನಗೆಯನ್ನೆಲ್ಲ ಬೀರುವರು. ಸದಾ ಇವರು ಜನ ಸಂದಣಿಯಲ್ಲಿ ಗಂಟೆ ಜಾಂಗಟೆ ಮೊದಲಾದವುಗಳ ಗದ್ದಲದಲ್ಲಿಯೇ ಅನಿವಾರ್ಯವಾಗಿ ಬಾಳಬೇ ಕಾಗಿದೆ. ಆದರೂ ಮನಸ್ಸನ್ನು ಕದಡಿಸುವದಿಲ್ಲ. ಶಾಂತಿಯಿಂದಲೇ ಬಾಳ್ವ ವರು. ಹೀಗಾಗಿ ಈ ಸ್ವಾಮಿಗಳ ಸ್ಥಾನವು ಬಹು ಉಚ್ಚ ಮಟ್ಟಕ್ಕೆ ಏರಿದೆ.

೭೭೦ ಅಮರಗಣಂಗಳ ಪೂಜೆಯನ್ನು ಮಾಡಿ ದೇಶದ ತುಂಬ ವೀರ ಶೈವರ ಅಮರ ಸಂದೇಶಗಳನ್ನೂ ಉಚ್ಚ ಸಂಸ್ಕೃತಿಯನ್ನೂ ಹರಡಿ ಕೀರ್ತಿ ಶಾಲಿಗಳಾಗಿದ್ದಾರೆ. ಆದರೂ ಇನ್ನಷ್ಟು ಧೈರ್ಯ ತಾಳಿ ಶರಣರ ತತ್ವ ದಂತೆ ಈ ಪೂಜೆ ನಡಿಸಿದ್ದರೆ ಮಹಾತ್ಮಾಗಾಂಧಿಯವರಂತೆ ಬಹು ಬೆಳಕಿಗೆ ಬರುವದರಲ್ಲಿ ಸಂದೇಹವಿಲ್ಲ. ಇಂಥ ಪೂಜೆಯನ್ನು ಸಹ ಅವರು ತೀವ್ರ ಕೈಕೊಳ್ಳುವರೆಂದು ನಮಗೆ ಬಲವಾದ ನಂಬಿಗೆ ಉಂಟಾಗಿದೆ. ಇವರು ತಾವೊಬ್ಬರೆ ಮುಂದೆ ಹೋಗಬಯಸುವದಿಲ್ಲ. ಇಡೀ ಸಮಾಜವನ್ನು ಸಾವ ಧಾನವಾಗಿ ಎತ್ತುತ್ತ ಮುಂದುವರಿಸುತ್ತ ನಡೆದಿದ್ದಾರೆಂದು ಇವರ ನಡೆನುಡಿ ಯಿಂದ ಬಲ್ಲವರಿಗೆ ತಿಳಿಯದೆ ಇರದು. ಇವರು ಆದಿವಾಸಿಗಳಿಂದ ಸಹ ಮುಟ್ಟಿ ನಮಸ್ಕರಿಸಿಕೊಳ್ಳುವರು. ಇಂಥ ಮಹಾಸ್ವಾಮಿಗಳು ಪಂಚಾಳರಲ್ಲಿ ಜನಿಸಿದ ಸಿದ್ಧಲಿಂಗದೇವರ ಪುಣ್ಯತಿಥಿಯನ್ನು ನಿರಭಿಮಾನ ನಿರಹಂಕಾರದಿಂದ ಭಕ್ತಿ, ಪ್ರೀತಿ, ವಿಶ್ವಾಸಗಳಿಂದಲೇ ಆಚರಿಸುತ್ತಿರುವರು. ಅನ್ಯರೆಂಬ ಭೇದ ಎಳ್ಳಷ್ಟೂ ಮಾಡುವದಿಲ್ಲ. ಇದನ್ನು ಸಕಲರೂ ಕಲಿತುಕೊಂಡು ಆಚರಿಸು ವದು ಒಳ್ಳೇ ಭೂಷಣವಾಗಿರುವದು. ಅಂತು ಪುಣ್ಯತಥಿಯು ಸಕಲರಿಗೂ ಆದರ್ಶವಾಗಿತ್ತು.

———೦———

# ಹರಿಹರದೇವನ ಮಲುಹಣ ರಗಳೆ.

[ ಲೇಖಕರುಃ– ಶ್ರೀಯುತ ಮ. ಮಲ್ಲಪ್ಪ ಜ್ಞಾನಮಂದಿರ, ಹಲಗೂರು ]

............ ● ............

ಹರಿಹರದೇವನದು ಒಂದು ವಿಶಿಷ್ಟವಾದ ಭಕ್ತಿಮಾರ್ಗ. ಭಕ್ತಿಯೇ ಸಾಕ್ಷಾತ್ಕಾರವಾಗಿ ಮಾನವನ ರೂಪನ್ನು ತಾಳಿರುವಂತೆ ತನಗೆ ಬೇಕಾದ ಅನೇಕ ಪ್ರತಿಕೃತಿಗಳನ್ನು ತನ್ನ ಹೃದಯ ಗರ್ಭಗುಡಿಯಲ್ಲಿ ಪ್ರತಿಷ್ಠಿಸಿ ಕವಿಯು ಪಂಪಾಪತಿಯ ಕೃಪೆಗೆ ಪಕ್ಕಾಗುತ್ತಾನೆ. ರಗಳೆಯ ಹೊಸ ಛಂದಸ್ಸಿನಲ್ಲಿ ಭಾವಮಯವಾದ ಶಿವಭಕ್ತರ ಕಥೆಗಳನ್ನು ಉದ್ವೇಗ ತುಂಬಿ ಹಾಡಿದವನಿರುವನು ಎಂದು ಕವಿ ಕಾವ್ಯ ಪರಿಚಯ ಕೃತಿಯಲ್ಲಿ ಉಕ್ತವಾಗಿದೆ. ರಗಳೆಗಳಲ್ಲಿ ಬರುವ ಪ್ರತಿಯೊಬ್ಬ ಭಕ್ತ ಭಕ್ತೆಯರ ಪಾತ್ರವೂ ಈತನ ಭಕ್ತಿಯ ಒಂದು ಪ್ರತೀಕವಾಗಿದೆ. ಇಲ್ಲಿ ಕಾಣಬರುವ ಕಣ್ಣಪ್ಪನಾಗಲೀ ತಿರುನೀಲಕಂಠನಾಗಲೀ, ಮಲುಹಣನಾಗಲೀ, ಯಾರೇ ಆಗಲೀ ಸಕಲರೂ ಹರಿಹರದೇವನ ಭಕ್ತಿಯ ಒಂದೊಂದು ವಿಶೇಷ ಭಂಗಿಯ ಪ್ರತಿಮೆಗಳು ಭಕ್ತಿಗೆ ಬಾಗಿಲಾಗಿ ಮಾನವಶಕ್ತಿಯು ಸಾಗಿದರೆ ಮಾತ್ರ ಮುಕ್ತಿಗೆ ಮಾರ್ಗ ಸಿಕ್ಕುತ್ತದೆ. ಕಷ್ಟ ಕಾರ್ಪಣ್ಯಗಳಿಗೆ ಕರಗದೆ ಕಾಲು ಹಾಕಿದಾಗ ಮಾತ್ರ ಪರದಲ್ಲಿ ಪರಮಾನಂದವನ್ನು ಪಡೆಯುವಂತಾಗುತ್ತದೆ.

ಈ ತತ್ವದ ಬುನಾದಿಯ ಮೇಲೆ ಹರಿಹರದೇವನು ಕಾವ್ಯವನ್ನು ಕಡೆಯದೆ ಇಲ್ಲ. ಈ ಮಥನದ ಫಲವೇ ಮಲುಹಣ ರಗಳೆಯು ಜನ್ಮತಾಳುವಂತೆ ಮಾಡಿದೆ. ಹರಿಹರದೇವನ ಪ್ರಸಾದಿಕ ವಾಣಿಯಿಂದ ಹೊರಹೊಮ್ಮಿದ ಮನೋಹರ ಮಧುಪಾತ್ರೆಯೇ ಮಲುಹಣ ರಗಳೆ. ಇದರಲ್ಲಿ ಕವಿಯ ಅನೇಕ ಸಾಧನೆಗಳನ್ನು ನೋಡಬಹುದಾಗಿದೆ. ಸಂಪ್ರದಾಯ ಶರಣತೆಯ ಶಬ್ದಾಲಂಕಾರ, ಅರ್ಥಾಲಂಕಾರ ವರ್ಣನೆಗಳು ಇಲ್ಲಿ ಇವೆ. ಚಿತ್ರತರವಾದ ಬಗೆಯಲ್ಲಿ ಸನ್ನಿವೇಶಗಳ ವಿಸ್ತಾರವಾದ ವರ್ಣನೆಗಳನ್ನು ಅಳವಡಿಸಿ, ಶೃಂಗಾರದ ಪರಿಕರದ ಮೇಲೆ ಕಾವ್ಯ ಪರಿಕರವನ್ನು ಸುರಿದು ಶೃಂಗಾರ ಪೂಜೆಯನ್ನು ಕವಿಯು ನಡೆಯಿಸಿದ್ದಾನೆ. ಈ ಶೃಂಗಾರ ಪೂಜೆಯು ಶಂಕರನ ಪೂಜೆಯಾಗಿ ಪರ್ಯವಸಾನವಾಗುವ ಬಗೆಯುಲ್ಲಂತೂ ಅತ್ಯಂತ ರಮಣೀ

ಯತಿಯನ್ನು ಪರಿಸ್ಪಷ್ಟಗೊಳಿಸಿ ಪರಿಣಾಮವನ್ನು ಸಫಲಗೊಳಿಸಿದ್ದಾನೆ. ಮಲು ಹಣನ ಪಾರ್ಥಿವ ಪ್ರಣಯವು ದೈವ ಭಕ್ತಿಯಾಗಿ ಪರಿವರ್ತಿತವಾಗಿದೆ. ಮಲು ಹಣ ಮತ್ತು ಮಲುಹಣಿಯರ ಪ್ರಣಯಕ್ಕೆ ಮಲುಹಣಿಯ ತಾಯಿಯು ಮಧ್ಯೆ ಅಡ್ಡಿಬರುತ್ತಾಳೆ. ಮಲುಹಣನ ಪ್ರಾರ್ಥನೆಯಿಂದ ಶಿವನು ಪ್ರತ್ಯಕ್ಷ ನಾಗುತ್ತಾನೆ. ಈ ನಾಲ್ಕು ಪಾತ್ರಗಳಿಂದಲೇ ಕವಿಯು ನಾಟಕವನ್ನಾಡಿಸಿ ಆದರತ್ತ ನಮ್ಮನ್ನು ಸಾಗಿಸಿದ್ದಾನೆ. ಡಾ. ರಂಗನಾಥ ಶ್ರೀನಿವಾಸ ಮುಗುಳಿ ಯವರು ಕವಿಯ ವಿಚಾರವಾಗಿ ಇಂತು ನುಡಿದಿದ್ದಾರೆ.

"ಹರಿಹರನು ಹಿರಿಯ ಭಕ್ತ ಕವಿ. ಮೇಲಾದ ಶಿವಕವಿ. ಇವನೆಲ್ಲ ಕೃತಿಗಳಲ್ಲಿ ಭಕ್ತಿಪೂರ್ಣವಾದ ಭಾವ ನಿರ್ಭರವಾದ ಸಮಗ್ರ ವ್ಯಕ್ತಿತ್ವ ವೊಂದು ಕಾಣುತ್ತದೆ. ಪಾಂಡಿತ್ಯ ಪ್ರತಿಭೆಗಳ ರೆಕ್ಕೆಗಳನ್ನು ಬಿದಿರಿ ಭಕ್ತ ಹೃದಯವನ್ನು ತೆರೆದು ದಣಿವಿಲ್ಲದೆ ಹಾಡುತ್ತ ಹಾರುವ ಹಕ್ಕಿಯಂತೆ ಅವನು ತೋರುತ್ತಾನೆ."

ಕಾವ್ಯದ ಸಾರಭೂತವಾದ ಕಂದ ಪದ್ಯವೊಂದನ್ನು ಹಾಡಿದ ಮೇಲೆ ಕವಿಯು ಕಥೆಯನ್ನು ಹೇಳಲು ಆರಂಭಿಸುತ್ತಾನೆ. ಹದನರಿತು ಆಯಾಯ ಸಮಯಕ್ಕೆ ಯೋಗ್ಯವಾಗಿ ವರ್ಣನೆಯನ್ನು ಕೊಡುವ ಹರಿಹರದೇವನ ಕೌಶ ಲ್ಯವು ವ್ಯಕ್ತವಾಗಿದೆ. ಕಾಶ್ಮೀರ ದೇಶವು ಶ್ರೀ ವಸುಮತೀವದನ ಮುಕುರ ವಾಗಿದೆ. ಅಲ್ಲಿ ಶ್ರೀ ಶಾರದಾದೇವಿಯು ನೆಲೆಸಿದ್ದಾಳೆ. ಮನೋಹರ ಕಲಾ ವಿದರು ಕಂಗೊಳಿಸಿರುತ್ತಾರೆ. ಘನವಿಚಾರಗಳನ್ನು ಕೇವಲ ಕೆಲವು ನುಡಿಗ ಳಲ್ಲಿಯೇ ಹೃದ್ಯವಾಗಿ ಹೇಳುವ ಹದದ ಹಿರಿಮೆಯು ಹರಿಹರದೇವನಲ್ಲಿ ಹುದುಗಿರುವುದು ಚನ್ನಾಗಿ ವ್ಯಕ್ತವಾಗುತ್ತಿದೆ.

ಊರೂರ್ಗೆ ತೀವಿದ ತಟಾಕ ನಿಕರಂಗಳಿಂ
ಊರೂರ್ಗೆ ಕಿಕ್ಕಿರಿದು ಕೊರ್ವಿದ ಬನಂಗಳಿಂ
ಬನದೊಳಗೆ ಸುಳಿತರ್ಪ ಕಸ್ತುರಿ ಮೃಗಂಗಳಿಂ
ಬಿನದದಿಂ ಪರಿತರ್ಪ ಚಮರೀ ಮೃಗಂಗಳಿಂ
ದೇವಮಾತೃಕ ನದೀಮಾತೃಕದ ಬೆಳೆಗಳಿಂ
ದೇವ ನದಿಯಂದದಿ ಪರಿವರಿವ ನದಿಗಳಿಂ
ನಗರಿನಗರಿಯೊಳೆಸೆವ ದೇವಾಲಯಂಗಳಿಂ
ಮುಗಿಲನಳ್ಕಿರಿವ ಘನ ಮಾಡ ಕೂಟಂಗಳಿಂ

ಕಾಶ್ಮೀರ ದೇಶದ ವಾತಾವರಣವು ನಮ್ಮ ಕಣ್ಣಿನ ಮುಂದೆ ಬಂದು ನಿಲ್ಲುತ್ತದೆ. ಶಬ್ದಗಳ ಶ್ಲೇಷೆಯ ಮೂಲಕ ಅಲ್ಲಿನ ಸುಸ್ಥಿತಿಯ ಸ್ಥಾಪನೆ ಮಾಡುವ ಬಗೆಯನ್ನು ಕವಿಯು ತೋರಿಸಿದ್ದಾನೆ.

ಬಂಧನಂ ಪೂಮಾಲೆಯೊಳಗಲ್ಲದಿಲ್ಲಲ್ಲಿ
ಅಂಧ ಕತ್ವಂ ಕಳ್ತಲೆಯೊಳಲ್ಲದಿಲ್ಲಲ್ಲಿ
ತೊಯ್ವ ನುಡಿ ಕೆಯ್ಗಳೊಳ್ಮಾನಿನಿಯರಳಕದೊಳ್
ಬಯ್ವ ನುಡಿ ಗಿಳಿಗಳೊಳ್ನಲ್ಲರೊಳ್ ಸರಸದೊಳ್
ಬಡತನಂ ಲತೆಗಳೊಳ್ ಲಲನೆಯರ ನಡುವಿನೊಳ್
ಕೆಡಿಸುವುದು ವಂಶಮಂ ಮೋದರೊಳ್ ವೃಷಭನೊಳ್
ಅವನಿಗತಿ ಕಂಟಕಂ ಕೇತಕೀ ವೃಂದದೊಳ್
ಭುವನ ಕಂಟಂಕವೆಂಬುದಂಬುಜದನಾಳರೊಳ್
ಪೆರ್ಚುರ್ಕುಂದೆಂಬುದಾ ಚಂದ್ರನೊಳ್ ಶರಧಿಯೊಳ್
ಪೆರ್ಚಿರ್ದ ದಾನಾರ್ಥವೆಂಬುದಾ ತುಂಬಿಯೊಳ್

ನಾಡಿನ ಸಂತತ ಸೌಖ್ಯವನ್ನು ವಾಚಕರಿಗೆ ಕವಿಯು ಸರಳವಾಗಿ, ಸಾಂಗೋಪಾಂಗವಾಗಿ ತಿಳಿಸಿದ್ದಾನೆ. ಕಾಶ್ಮೀರ ದೇಶದಲ್ಲಿ ಭೂದೇವತೆಯ ನೊಸಲ ತಿಲಕವಾಗಿರುವ ಭಾರತೀ ಪೀಠವು ಒಂದು ನಗರ ಇದು ಪರಿ ಶುದ್ಧ ಸ್ಫಟಿಕದ ಕೋಟೆಯಿಂದ ಸುತ್ತುವರಿಯಲ್ಪಟ್ಟು, ಶಿವಕಥನ, ಶೈವಾ ಗಮ ಶ್ರವಣಗಳಿಂದಲೂ, ಕಳಹಂಸ, ಮಿಥುನಗಳು ಬಳಸಿದ ಕೊಳಗಗ ಳಿಂದಲೂ, ಬಾಳೆ, ಕಿತ್ತಳೆ, ನೇರಿಳೆ, ನಿಂಬೆ ಇತ್ಯಾದಿ ತೋಟಗಳಿಂದಲೂ, ಅಲ್ಲಲ್ಲಿ ಶಶಿಕಾಂತ ಭವನಿಕೆಗಳಿಂದಲೂ, ನವ ಸೂರ್ಯ ಸೋಮವೀಥಿಗಳಿಂದಲೂ ರಾರಾಜಿಸುತ್ತಿರುತ್ತಿವೆ. ಸಾಂಪ್ರದಾಯಿಕ ನಗರ ವರ್ಣನೆಯಿದ್ದರೂ ವಿಸ್ತಾರ ವಿರದೆ ಹೆಚ್ಚನ್ನು ಅಳವಡಿಸಿಕೊಂಡಿರುವ ಕಿರಿದಿದೆ. ಈ ಭಾರತೀ ಪೀಠ ವನ್ನು ವೀರಲಕ್ಷ್ಮೀವರನೂ, ಗಾಂಭೀರ್ಯವಿಸ್ತರನೂ ಆದ ಅಪ್ರತಿಮ ಭೂಪನು ಆಳುತ್ತಿರುತ್ತಾನೆ. ಸಂಪತ್ತಿನಲ್ಲಿ ಕುಬೇರನಿಗೆ ಸರಿಸಮಾನವಾದ ಸುವರ್ಣ ಭಟ್ಟನೆಂಬ ವಿಪ್ರನು ಅಲ್ಲಿ ಇದ್ದನು. ಈತನ ಔದಾರ್ಯದ ವರ್ಣನೆಯಲ್ಲಿ ಕನ್ನಡ ಸಂಸ್ಕೃತಿಯ ಆದರ್ಶವನ್ನು ನೋಡಬಹುದಾಗಿದೆ.

ಪೊರ್ದಿದಪೊರ್ರೆದರ್ಗೆ ಕೋಟಿ ಸಂಖ್ಯೆಯ ಧನಂ
ಸಾರ್ದ ಶಿಷ್ಯಾವಳಿಗನಂತ ಸಂಖ್ಯೆಯ ಧನಂ

ಹೆಸರ ಸತ್ರಂ ಹೆಸರ ಪುರವರ್ಗವಲ್ಲಲ್ಲಿ
ಹೆಸರ ಕೆರೆಯುರವಟಿಗೆ ಯೂರವೆಗಳಲ್ಲಲ್ಲಿ
ಹೆಸರ ಗ್ರಾಹರಂ ಶಿವಾಲಯುಗಳಲ್ಲಲ್ಲಿ
ಹೆಸರ ಧರ್ಮ ಪ್ರಕರಣವೆಣಿಸಲೆನಗರಿದಲ್ಲಿ

ಈ ವಿಪ್ರನಿಗೆ ಮಲುಹಣವೆಂಬ ಮಗನು ಜನಿಸುತ್ತಾನೆ. ಈ ಮಗು ಪಿತನ ಕಣ್ಮಣಿಯಾಗಿ, ಮಾತೆಯ ಮುದ್ದಾಗಿ, ಮಕ್ಕಳ ಮಾಣಿಕ್ಯವಾಗಿ ಬೆಳೆಯುತ್ತಿರುತ್ತಾನೆ. ಉಪನಯನ, ಶೈವೋಪದೇಶವು ಈತನಿಗೆ ದೊರಕುತ್ತದೆ. ನೃತ್ಯ, ಸಂಗೀತ, ವೇದ, ಶಾಸ್ತ್ರವನ್ನು ಕಲಿತುಕೊಳ್ಳುತ್ತಾನೆ. ಆಗಲೇ ಈತನ ಜನಕನು ಈತನಿಗೆ ನೂರು ವರ್ಷಗಳಿಗಿಂತಲೂ ಹೆಚ್ಚಿಗೆ ಕಾಲಕ್ಕೆ ಆಗುವಂತೆ ಹೊನ್ನನ್ನು ಕೂಡಿಸಿಡುತ್ತಾನೆ ಕಾಲನ ದಾಳಿ ಸಿಂದು ರೋಗದ ದಾಳಿ ಬಂದು ಉಗ್ರ ಜ್ವರದ ತಾಪದಿಂದ ಅಳ್ಕಿ ಸುವರ್ಣಭಟ್ಟನು ಸತ್ತು ಹೋಗುತ್ತಾನೆ. ಮುಂದುಗೆಟ್ಟ, ಅರಿವುಗೆಟ್ಟ ಮಲುಹಣನು ಸರ್ವಸಂಭ್ರಮದಿಂದ ತಂದೆಯ ಸಂಸ್ಕರಿಸಿ, ಪಿಂಡಪಿತೃ ಕಾರ್ಯವನ್ನು ಸಲ್ಲಿಸುತ್ತಾನೆ. ಬರುಬರುತ್ತ ಉತ್ತಮ ವ್ಯವಹಾರ ಪರಿಣತನಾಗಿ ಇರುತ್ತಿರಲು ಮಲುಹಣನಿಗೆ ಪ್ರಾಯವು ಪ್ರಾಪ್ತವಾಗುತ್ತದೆ. ಈ ಯೌವನೋದಯದ ಸನ್ನಿವೇಶವನ್ನು ಕವಿಯು ಮನೋಜ್ಞವಾಗಿ ವರ್ಣಿಸಿದ್ದಾನೆ.

ಸವಿನುಡಿಗಳಂ ಕಿವಿಗಳಾಲಿಸಲ್ತೊಡಗಿದವು
ನೋಟವೊಪ್ಪುವ ರೂಪನೆಚ್ಚರಿಸಲೆಳಸಿದವು
ಕೋಟಿಗೆಳಿಸುವ ಪುರ್ಬು ಗಂಟಿಕ್ಕತೊಡಗಿದವು
ನವ ಮಧುರಮಂ ಜಿಹ್ವೆ ಬಯಸಲನುಗೈಯಿತ್ತು
ನವಗಂಧಮಂ ಘ್ರಾಣ ಬರಿಯಲನುಗೈಯಿತ್ತು
ಗುಡಿ ಮೆಲ್ಲ ಮೆಲ್ಲನಕ್ಷೆಗಳತ್ತ ಹೊದ್ದಿತ್ತು
ನಡೆಯುರವಣೆಯನುಳಿದು ಗಮಕದೊಳ್ಬೆರಸಿತ್ತು
ಕರಕಳಂಕನು ರುಚಿಯ ನೋವನಂಗೈಸಿದವು
ಕರಣತತಿಭೋಗ ಸಂಪದವನುನಿಚ್ಛೈಸಿದವು

ಹರೆಯದ ಮೂಲಕ ಮಲುಹಣನ ಪಂಚೇಂದ್ರಿಯ ಪ್ರೀತಿ ಹೆಣ್ಣಿನಾಸೆಯಾಗಿ ತಿರುಗುತ್ತದೆ.

ಅಂಗರುಚಿ ಮುಗ್ಧೆಯರ ಕಣ್ಗೆ ಕನ್ನಡಿಯಾಗೆ ಹರಿಹರದೇವನ ಉತ್ತಮ ಕಲ್ಪನಾಶಕ್ತಿಗೆ ಇದು ದರ್ಪಣವಾಗಿದೆ. "ಸುರಕುಜದ ಚಂದನದ ಕರ್ಪೂರದ ಸಸಿಯಂತೆ, ಪರಿಮಳದ ಚಂದ್ರಿಕೆಯ ಕಾಂತಿಕರುವಿಟ್ಟಂತೆ" ಮಲುಹಣನು ಹರೆಯುದವನಾಗುತ್ತಾನೆ.

ಇತ್ತ ಆ ನಾಡಿನ ದೇವತೆಯಾದ ವಿಜಯೇಶ್ವರ ಸ್ವಾಮಿಯ ಪಾತ್ರದ ವಿಳಾಸಿನಿಯಾದ ಪದ್ಮಾವತಿಗೆ ಮಲುಹಣಿ ಎಂಬ ಪುತ್ರಿ ಇರುತ್ತಾಳೆ. ಸುಲಕ್ಷಣೆಯಾಗಿ, ನಾಟ್ಯವಿದ್ಯಾ ಪಾರಂಗತೆಯಾಗಿ, ರತಿಯ ಪ್ರತಿರೂಪಾಗಿ ಈಕೆ ಇರುತ್ತಾಳೆ. ಸಾಂಪ್ರದಾಯಿಕತೆಯಲ್ಲಿಯೂ ನೂತನ ಚಮತ್ಕೃತಿಯನ್ನು ಕಾಣುವಂತೆ ವರ್ಣನೆಯನ್ನು ಕವಿಯು ಕೊಟ್ಟಿದ್ದಾನೆ.

ಮನವನೆಡೆಗೊಂಡನಾ ಮನಸಿಜಂ ಪರಿತಂದು
ತನುವೆಡೆಗೊಂಡುದಾ ಸೌಭಾಗ್ಯವೆಯ್ತಂದು
ಪ್ರೇಮದಿಂ ಮಧು ರೂಪಿನೊಳ್ಪುಗಲ್ಕಾತನಂ
ಪೂಮುಡಿಯನಿಂಬುಗೊಂಡುದು ಮಕರಕೇತನಂ
ಭ್ರೂಲತೆಯನಾಶ್ರಯಿಸಿತಿಕ್ಷು ಚಾಪಂ ನೋಡ
ಆ ಲೋಕನವನೊತ್ತುಗೊಂಡವಲರ್ಗಣಿ ನೋಡ

ಸರ್ವಾಂಗಗಳಿಗೆ ಹೋಲಿಸಿದ ವಸ್ತುಗಳು ಸಾಮಾನ್ಯವಾಗಿ ಸಾಂಪ್ರದಾಯಿಕವಾದರೂ ಅವುಗಳಲ್ಲೆಲ್ಲ ಕಾಮ, ಆತನ ಪರಿವಾರದ ವಸ್ತು ಹಾಗೂ ಜೀವಿಗಳ ಸಹಚರ್ಯವನ್ನು ಸಮಗ್ರವಾಗಿ ತಂದಿರುವಲ್ಲಿ ಕಥಾನಕದ ಔಚಿತ್ಯವಾದ ಮಲುಹಣ ಮಲುಹಣಿಯರ ಕಾಮ ಸೂತ್ರದ ಬಂಧನದಲ್ಲಿ ಸಾರ್ಥಕತೆಯನ್ನು ಹೊಂದಿವೆ. ಆಕೆಯ ತುಂಬು ಹರೆಯವು ಚೆಲುವಿನ ಹೊನಲಾಗಿದೆ.

ಅಳಿತುಡುಂಕದ ಮಘಮಘಿಪ ಬಿರಿಮುಗುಳಂತೆ
ಎಳಸುವ ಚಕೋರಿ ನೊಗವಿಡದ ಚಂದ್ರಿಕೆಯಂತೆ
ಪಿಕ ಚುಂಚು ಸಂಚಾರವಿಲ್ಲದೆಳೆದಳಿರಂತೆ
ಶುಕ ಮುಖದಿ ಅಣ್ಣೆವಳಿಯದ ಪಕ್ವಫಳಿದಂತೆ
ತೊಳತೊಳಗಿ ಬಳೆವುತಿರ್ದಳ್ ಚಂದ್ರಕಳೆಯಂತೆ
ನಳನಳಿಸಿ ಬಳೆವುತಿರ್ದಳ್ ಕುಸುಮಶರದಂತೆ

ಈಕೆಯ ಸಕಲ ಅವಯವಗಳ ಚಲುವಿನ ಬಣ್ಣನೆಯಲ್ಲಿ ಶಬ್ದಗಳ ಆಯ್ಕೆ ಮತ್ತು ಶೈಲಿಯ ಸೊಬಗು ಬಹು ರಮಣೀಯವಾಗಿದೆ. ಮಗಳ ಸಸುಂದರ ರೂಪನ್ನು ಪದ್ಮಾವತಿಯು ನೋಡಿ ಸುಖರಸದಲ್ಲೋಲಾಡುತ್ತಾಳೆ.

ಕಡುನೇಹದಿಂ ನವಲಾಸ್ಯಮುಂ ಮೈಗೊಳಿಸಿ
ಮೃಡನೊಲ್ವರಸಗಾನಮುಂ ನೆರೆಕೊರಳ್ಗೊಳಿಸಿ
ಮಗಳ ನಿಟ್ಟಿಸುತ ಕಣ್ಣೊಳಗಿಕ್ಕಿ ಮುಚ್ಚುತಿರೆ
ಮಿಗೆ ವಿಳಾಸಿನಿಯರಿಂ ಸಿಂಗರಿಸುತಿರುತಮಿರೆ

ದ್ವಿತೀಯ ಸ್ಥಲದಲ್ಲಿ ಪ್ರಾರಂಭದಲ್ಲಿನ ಕಂದಪದ್ಯವೊಂದನ್ನು ಬಿಟ್ಟು ಉಳಿದುದೆಲ್ಲ ಗದ್ಯದಲ್ಲಿದೆ. ಈ ಕಾವ್ಯದ ಯೋಗ್ಯತೆಯನ್ನು ಇದು ಅದ್ವಿತೀಯವಾಗಿ ಎತ್ತಿತೋರಿಸುತ್ತದೆ. ಇಂದ್ರಿಯ ವೇದ್ಯವಾದ ವರ್ಣನೆಗಳ ಸೊಗಸು ಇಲ್ಲಿ ಸೂರೆಯಾಗಿದೆ. ಈಗ ಎಲ್ಲವೂ ಮಲುಹಣಿಗೆ ಹೊಸದು.

ಹೊಸ ನಡೆ ಹೊಸ ನುಡಿ ಹೊಸ ಮುಡಿ ।
ಹೊಸ ಹೊಸ ಸೌಭಾಗ್ಯವೆಸೆವ ಹೊಸ ಲಾವಣ್ಯಂ ।
ಹೊಸ ಹರೆಯಂ ಹೊಸ ನೋಟಂ ।
ಹೊಸ ಜವ್ವನದೇಳ್ಗೆ ಮಲುಹಣಿಗೆ ಚಿತ್ರತರಂ ॥

ಒಂದು ದಿವಸ ಪದ್ಮಾವತಿಯು ಮಲುಹಣಿಯನ್ನು ಸಕಲಾಲಂಕೃತೆಯನ್ನಾಗಿ ಮಾಡಿಕೊಂಡು ಸಖಿಯರ ಸಂಗಡ ವಿಜಯೇಶ್ವರ ದೇವಸ್ಥಾನಕ್ಕೆ ಕರೆತರುತ್ತಾಳೆ. ಮಲುಹಣಿಯ ಅಲಂಕಾರ ವೈಭವದಂತೆಯೇ ಇಲ್ಲಿನ ಶೈಲಿಯ ಸೊಗಸೂ ಸಹ ಅಲಂಕಾರದಿಂದ ಇನ್ನೂ ರಮಣೀಯವಾಗಿದೆ.

" ಚಕ್ರಮಿಥುನಕ್ಕೆ ಗವಸಣಿಗೆಯನಿಕ್ಕುವಂತೆ ಕುಚಯುಗಕ್ಕೆ ಕಂಚುಕೆಯಂ ತೊಡಿಸಿ ತೋರಮುತ್ತಿನ ಹಾರಮಂ ಹತ್ತೆ ಸಾರ್ಚಿ ಶಶಿಬಿಂಬಕ್ಕೆ ಶುಕ್ರನಂ ಸೇರಿಸುವಂತೆ ಮುಖಬಿಂಬದೊಳ್ ಮುತ್ತಿನ ಮೂಕುತಿಯಂ ಮೇಳ್ವಿಸಿ ಕಾವನಂಬಂ ಕತ್ತುರಿಯ ಸಾಣೆಯಿಕ್ಕುವಂತೆ ಕಜ್ಜಳಮನೆಚ್ಚ ಎಳೆಲತೆಯಂ ಬೆಳ್ದಿಂಗಳಂ ಬಾಸಣಿಸುವಂತೆ ನವದುಕೂಲಮಂ ನಿರಿವಿಡಿದುಡಿಸಿ "

ದೇವಸ್ಥಾನಕ್ಕೆ ಸಖೀಜನಸಹಿತಳಾಗಿ ಅಲಂಕೃತ ಮಲುಹಣಿಯು ಬರುವಾಗ—

"ಮಲುಹಣಿಯು ಮರೆಗೊಂಡು ಕರ್ಬಿನ ಬಿಲ್ಲಗೊಲೆಗೇರಿಸುತ್ತ ಎಲರ್ಬಂ ನಡೆತರೆ."........"ತುಂಬಿಗಳ ಝೇಂಕಾರಂ ಕಂಕಣದ ಝಣ ಕ್ಕಾರಂ ನೂಪುರದ ಕ್ರೇಂಕಾರಂಪಾದ ಮುದ್ರಿಕೆಯ ಠಣಕ್ಕಾರಂ ಮದ ನನ ಬಿಲ್ಲ ಟೇಂಕಾರಂಬೆರಸಿ ಬೆಳೆದು ಪುರಜನರ ಕಿವಿಗಳ್ಗೆ ಹೊಸ ಸವಿಗಳಂ ಸಾಲಿಡೆ. "

ಇಲ್ಲಿ ಪಂಚೇಂದ್ರಿಯ ಪ್ರೀತಿಯನ್ನು ಉಂಟು ಮಾಡುವ ಕವಿಯ ವರ್ಣ ನಾಸಾಮರ್ಥ್ಯದ ಕಿವಿಕಣ್ಣುಗಳ ಆಕರ್ಷಣೆಯು ಪರಿಸ್ಫುಟವಾಗಿದೆ.

ಮಲುಹಣ ಮೊದಲಿನಿಂದಲೂ ಪರಮಶಿವಭಕ್ತ. ವಿಜಯೇಶ್ವರನಿಗೆ ನಿತ್ಯನೇಮದ ಪೂಜಾದಿಗಳನ್ನು ಮಾಡುತ್ತಿರುವ ಈತನು ಭಕ್ತಿಯಲ್ಲಿ ಯಾರಿಗೂ ಕಡಿಮೆಯಿರಲಿಲ್ಲ. ಈ ಬಗೆಯ ಮಲುಹಣ ನಿತ್ಯನಿಯಮದಂತೆ ಸ್ನಾನಾದಿ ಗಳನ್ನು ಮುಗಿಸಿಕೊಂಡು, ಮಡಿಯನ್ನುಟ್ಟು ಜೊತೆಗಾರರ ಜೊತೆಯಲ್ಲಿ ದೇವಸ್ಥಾನಕ್ಕೆ ಪೂಜೆಗಾಗಿ ಬರುತ್ತಾನೆ. ದೇವರ ಪೂಜೆಯು ಮುಗಿದ ಮೇಲೆ ಮುಂದಣ ರಂಗಮಂಟಪದ ಮಧ್ಯೆ ನರ್ತನವನ್ನು ನೋಡಲು ಬಂದಿದ್ದ ಮಂದಿಯನ್ನು ಮಲುಹಣನು ನೋಡುತ್ತಾನೆ. ಆಗ ವಿವಾಹ ಮುಹೂರ್ತದ ತೆರೆ ಸರಿವಂತೆ ಮಲುಹಣ ನೋಡೆ ನೋಡೆ ಜವನಿಕೆಯೋಡುತ್ತದೆ. ನರ್ತಕಿ ಯಾಗಿ ಬಂದಿದ್ದ ಮಲುಹಣಿಯ ದೃಷ್ಟಿಯೂ, ಮಲುಹಣನ ದೃಷ್ಟಿಯೂ ಪರಸ್ಪರ ನೆಟ್ಟು ಉಭಯರೂ ಮೋಹಪರವಶರಾಗುತ್ತಾರೆ. ರಂಗಮಂಟಪ ವಿರಹಮಂಟಪವಾಗುತ್ತದೆ. ಈಶ್ವರ ಕೇಳಿ ರತೀಶ್ವರ ಕೇಳಿಯಾಗುತ್ತದೆ. ಧನಿಕನಾದ ಈತನು ಮಲುಹಣಿಯ ಸೆಜ್ಜೆ ಮನೆಯನ್ನು ಸೇರುತ್ತಾನೆ. ಸಾಮಾನ್ಯವಾಗಿ ಕನ್ನಡ ಕವಿಗಳು ದಾಂಪತ್ಯದ ಚಿತ್ರಣದಲ್ಲಿಯೂ ಎಲ್ಲೆ ಮೀರುವುದು ಕಾಣಬರುತ್ತದೆ. ಇಲ್ಲಿನ ವಿಲಾಸದ ಚಿತ್ರಣದಲ್ಲಿ ಇವರಿಬ್ಬರ ಮೇಲೆ ಮೀರಿದ ಶೃಂಗಾರದ ಆನಂದವನ್ನು ಚಿತ್ರಿಸುವಲ್ಲಿ ಎಲ್ಲೆ ಮೀರದೆ, ಕ್ರಿಯೆಯನ್ನು ಭಾವವಾಗಿ ರೂಪುಗೊಳಿಸಿ, ಭಾವಗಳನ್ನು ಗಮ್ಯಮಾಡುವಲ್ಲಿ ಹಲವು ರಮ್ಯರೂಪಕಗಳನ್ನು ಬಳಸಿ ರಸಮಯವಾದ ಶೃಂಗಾರ ಚಿತ್ರಣ ವನ್ನು ನೀಡುವಲ್ಲಿ ನಿಜವಾದ ಮಹಾಕವಿಯ ಸಾಮರ್ಥ್ಯವನ್ನು ಹರಿಹರ ದೇವನು ವ್ಯಕ್ತಪಡಿಸಿದ್ದಾನೆ.

" ನೋಟವರಿದಪ್ಪುವ ಸೈರಣೆಯವರಿದು ಸೋಂಕುವ ಆಸೆಯರಿದ ಲಂಗಿ ಸುವ ಬಯಕೆಯುರಿದು ಬೆರಸುವ ಮನವರಿದನುಭವಿಸುವ ಇಚ್ಛೆಯರಿದು

ಹೆಚ್ಚುವ ಅಗ್ಗಳಿಕೆಯರಿದು ಬೋಳೈಸುವ ಎಚ್ಚರಿಕೆಯ ಸಮರತಿಯೊಳಿರ್ದು ಹಿಗ್ಗಿ ಸುಖದ ಸೋಂಕು ಸೆಳೆಯಲನುಗೆಯ್ವಲ್ಲಂ ಮುನ್ನಂ ರೋಮಾಂಚದ ಬಾಸುಳೆಳ್ಚಿ ಸುಕುಮಾರಾಂಗಿಯೆನಳೊಲ್ದು ನೆರೆವ ಸುಖಸಮುಯದೊಳ್ಕರುಣ ವೆಲ್ಲಂ ನೋಟ ನೋಟವೆಲ್ಲಂ ನುಡಿನುಡಿಯೆಲ್ಲಂ ವಿರಹವಿರಹವೆಲ್ಲಂ ದೈನ್ಯ ದೈನ್ಯವೆಲ್ಲಂ ಸಾತ್ವಿಕಂ ಸಾತ್ವಿಕವೆಲ್ಲಿಂ ಮೆಯ್ ಮೆಯ್ಯೆಲ್ಲಂ ಕೂಟಂ ಕೂಟ ವೆಲ್ಲಂ ಮನಂ ಮನವೆಲ್ಲಂ ಮೆಚ್ಚು ಮೆಚ್ಚೆಲ್ಲಂ ಸೋಲಂ ಸೋಲವೆಲ್ಲಂ ರಸಮಯವಾಗಿ."

ಅಲ್ಲಿ ಇಬ್ಬರೂ ರತಿಸುಖವನ್ನನುಭವಿಸುತ್ತಾರೆ. ಎಷ್ಟು ದಿವಸಗಳಾದರೂ ಇಬ್ಬರಿಗೂ ತೃಪ್ತಿಯೇ ಆಗುವುದಿಲ್ಲ. ನೂರು ವರ್ಷಗಳಿಗೆಂದು ಸುವರ್ಣ ಭಟ್ಟನು ಕೂಡಿಸಿಟ್ಟ ಹೊನ್ನು ಕೆಲವು ದಿನಗಳಲ್ಲಿಯೇ ಸವೆದುಹೋಗುತ್ತದೆ. ಮಲುಹಣನಿಗೆ ಮಾತ್ರ ಮಲುಹಣಿಯ ಆಸೆಯು ತೀರುವದಿಲ್ಲ. "ಮುಡಿದ ಹೂವಗಲ್ದೊಡಂ ಹಿಡಿದ ಪರಿಮಳವಗಲದಿರ್ಪಂತೆ ಮೋಹ ರಸವಾರದೆ ಮಲುಹಣ ಮಲುಹಣಿ ಪರಮಾನುರಾಗದೊಳಗಲದಿರೆ ಮಲುಹಣನ ಧನ ವೆಲ್ಲ ವ್ಯಯವಾಗುತ್ತದೆ. ಅರ್ಥದ ಸವಿಗೆ ಮನಮುಂ ನಾಲಗೆಯುಂ ಲವ ಲವಿಸಿ ಮಿಕ್ಕುಮೀರಿದ ರಕ್ಕಸಗುಂಟಣಿ ಪದ್ಮಾವತಿಯು ದುರಾಲೋಚನೆ ಮಾಡುತ್ತಾಳೆ.

ಪ್ರಣಯಿಗಳ ಜೊತೆಯ ಗಾಢತೆಗಾಗಿ ಇಲ್ಲಿ ಭೇರುಂಡಪಕ್ಕಿಯ ಹೋಲಿ ಕೆಯನ್ನು ಕೊಟ್ಟಿರುವದು ಸಹಜತೆಗೆ ಸಾಕ್ಷಿಯಾಗಿದೆ. ನಿನ್ನ ಮಾವನು ವಸ್ತ್ರಾಭರಣವನ್ನು ತಂದಿದ್ದಾನೆ ಎಂದು ತಾಯಿಯು ಹೇಳಿಕಳುಹಿಸಿ ಗಂಡ ನಿಂದ ಮಗಳನ್ನು ಅಗಲಿಸಲು ಪತಿರಹಿತ ಮಗಳು ನೊಸಲ ಕಣ್ಣ ಹೊಗೆ ಸುತ್ತಿದ ಪೂಸರದಂತೆ ಕೆಳದಿಯರ ಕಯೊಳ್ಮೆಯ್ಯ ನೀಡಾಡೆ ಮೆಲ್ಲ ಮೆಲ್ಲನೆ ಬಂದು ತಾಯಿಯನ್ನು ನೋಡುತ್ತಾಳೆ. ಹಣ ಮುಗಿಯಿತು, ಹರೆಯ ಹರಿ ಯಿತು, ಮಲುಹಣನ ಸಹವಾಸವನ್ನು ಬಿಡು ಎಂದ ತಾಯಿಯನ್ನು ಮಲು ಹಣಿಯು ಲೋಭ ಮುಂತಾಗಿ ಹುಟ್ಟಿದ ದೀನೆ, ಮುಪ್ಪ ಮುಂತಾಗಿ ಹುಟ್ಟಿದ ನಿರಸಸುಖಮಂ ಕೊಯ್ವಮಾನಸಗರಗಸವೇ ಆಗಿದ್ದೀಯ ಎನ್ನುತ್ತಾಳೆ. ಮಗಳ ಮೋಹದ ಫಲಿತವಾಗಿ ಕ್ರಮಕ್ರಮವಾಗಿ ಕೊಂಚ ಕೊಂಚ ಕಾಲ ಮಗಳನ್ನು ಅಗಲಿಸುವ ಅಭ್ಯಾಸವನ್ನು ತಾಯಿಯು ಮಾಡಿಸುತ್ತಾಳೆ. ಆಗಾಗ್ಗೆ ಮಲುಹಣನನ್ನು ಸೆಜ್ಜೆಯೊಳು ಮೂದಲಿಸಿ ಕುಳ್ಳಿರ್ದ ಕಡೆ ತುಚು ಹರಿದು ನಿಂದಿರ್ದೆಡೆಯೊಳು ನೀರನ್ನು ಚಲ್ಲುತ್ತಾಳೆ. ಮನೆಯ ಮುಂದೆ ಸುಳಿವ

ಶ್ರೀಮಂತ ತರುಣರ ಉಡುಗೆತೊಡುಗೆಯನ್ನು ನೋಡಿ ಸಹಿಸಲಾರದೆ ಅವುಹು ಕಚ್ಚಿ ನಿಷ್ಕಾರಣವಾಗಿ ವಿಲಾಸಿನಿಯರನ್ನು ಬಡಿದು ಕಾಲ್ಗಗಳವನ್ನು ತೆಗೆಯುತ್ತಾಳೆ. ಬೇನೆ ಇಲ್ಲದೆ ನರಳ್ದು ಸಾವಿಲ್ಲದೆ ಶೋಕಂಗೆಯ್ದು ಮಲುಹಣನನ್ನು ಮನೆಯಿಂದ ಹೊರದೂಡುತ್ತಾಳೆ. ಮಲುಹಣಿಯೂ ಸಹ ನಿರುಪಾಯಳಾಗುತ್ತಾಳೆ. ಮನದಲ್ಲಿಯೇ ಮಮ್ಮಲ ಮರುಗುತ್ತಾಳೆ, ವಿರಹ ಸೇವನೆಯಿಂದ ಬೇಯುತ್ತಾಳೆ; ಆದರೆ ತಾಯಿ ಕೈಕೆಳಗಿನ ಮಗಳು ಮಾಡುವುದು ತಾನೆ ಏನಿದೆ ?

ತೃತೀಯ ಸ್ಥಲದಲ್ಲಿ ಮಲುಹಣನ ವಿರಹತಾಪದ ವರ್ಣನೆಗೆ ಹೆಚ್ಚಿನ ಸ್ಥಾನವಿದೆ. ಕನ್ನಡ ಮಹಾ ಕಾವ್ಯಗಳಲ್ಲಿ ವಿರಹ ವರ್ಣನೆ ಬಿಡಲಾರದ ಕರ್ಮವಾಗಿ ಬಹುವೆಡೆ ಸಾಂಪ್ರದಾಯಿಕವಾಗಿ ಬಂದಿದೆ. ಹರಿಹರನಲ್ಲಿ ಅಕ್ಕ ಮಹಾದೇವಿಯ ಆತ್ಮದ ವಿರಹ, ಬಸವಣ್ಣನವರ ಭಕ್ತಿಯ ವಿರಹ; ಇವುಗಳ ಜೊತೆಗೆ ನಿಲಬಲ್ಲ ಸನ್ನಿವೇಶವು ಇದೊಂದೇ ಎಂದು ಮನವರಿಕೆಯಾಗದೆ ಇರದು. ವರ್ಣನಾಶಕ್ತಿಗೆ ಮಲುಹಣನ ರಗಳೆ ಉತ್ತಮ ಉದಾಹರಣೆಯಾಗಿದೆಯೆಂದು ಡಾ. ರಾ|| ಬ|| ಫ. ಗು. ಹಳಕಟ್ಟಿಯವರು ಹೇಳಿದ್ದು ಸಾರ್ಥಕವಾಗಿದೆ. ಹೊರಟು ಹೋಗಲಾರದೆ ಮನೆಯ ಮುಂದೆಯೇ ಮಲುಹಣನು ಮರುಗಿ ತಾಪಿಸುತ್ತ ಹುಚ್ಚನಂತಾಗಿ ಹಂಬಲಿಸುತ್ತಿರುತ್ತಾನೆ.

ನಿಂದರಂ ಕಂಡು ಮಲುಹಣಿ ಎನುತೆ ಸೋಂಕುವಂ
ಬಂದರಂ ಕಂಡು ಮಲುಹಣಿ ಎನುತ್ತಪ್ಪುವಂ
ಕಮಳಮಂ ಮಲುಹಣಿಯ ಮೊಗವೆಂದು ಮುಟ್ಟುವಂ
ಕುಮುದಮಂ ಕಣ್ಗಳೆಂದಕ್ಷೆಯೊಳಗೊತ್ತುವಂ

ಅಭಿನವ ಪಂಪನ ಕಾವ್ಯಾರಾಮದಲ್ಲಿ ಶ್ರೀರಾಮನ ಆಲಾಪವೂ ಇದೇ ಬಗೆಗೆ ಸೇರಿರುತ್ತೆ. ದಾರಿ ದಾರಿಗಳಲ್ಲಿ, ಬೀದಿ ಬೀದಿಗಳಲ್ಲಿ ಮಲುಹಣಿಯ ಕಳವಳದಿಂದ ತಳಮಳಿಸಿ ಕೊನೆಗೆ ಮಲುಹಣಿಯ ಮನೆಯ ಮುಂದಣ ಎಂಜಲು ಚೆಲ್ಲುವ ಒಂದು ಹೊಸ ಕುಳಿಯೊಳಗೆ ನಿಂತು ಮಲುಹಣಿಯ ಧ್ಯಾನವನ್ನೇ ಮಾಡುತ್ತಿರುತ್ತಾನೆ. ಆಗ ಮಲುಹಣಿಯು ಊಟ ಮಾಡಿದ ಹರಿಯಾಣವನ್ನು ತೊಳೆದು ಮಲುಹಣನ ಮೇಲೆ ಆ ನೀರನ್ನು ಚೆಲ್ಲಲು 'ಹಾ ! ಮಲುಹಣಿ !! ಹಾ ! ಮಲುಹಣಿ !!!' ಎಂದು ಒರಲುತ್ತಾನೆ. ಈ ಕೂಗನ್ನು ಕೇಳಿದ ಮಲುಹಣಿ ಓಡಿ ಬಂದು ಸಂತೈಸಿ ಹೊರಟುಹೋಗುವಂತೆ ಹೇಳಿ ತನ್ನ ಸಜ್ಜೆ ಮನೆಗೆ ಹೋಗುತ್ತಾಳೆ; ಆದರೆ ಭ್ರಾಂತಿ ಪಟ್ಟ

ಮಲುಹಣನು ಆ ಇರುಳೆಲ್ಲಾ ಅಲ್ಲಿಯೇ ನಿಂತಿರಲು ಹಿಮವು ರಾಶಿ ರಾಶಿಯಾಗಿ ಬಿದ್ದು ಆತನನ್ನು ಪೂರ್ತಿಯಾಗಿ ಮುಚ್ಚಿತು. ವಿರಹದ ಉರಿಯಿಂದ ಅದೇ ಶಿಶಿರೋಪಚಾರವಾದಂತಾಯಿತು.

ಎಳೆಯ ಬೆಳ್ಮುಗಿಲೊಳಗೆ ಹೊಳೆವ ಪಾವಕನಂತೆ
ಹೊಳೆವಾಲಿ ಕಲ್ಲ ಮನೆಯೊಳಗಿರ್ಪ ರವಿಯಂತೆ
ದಿಟ್ಟಿಸಲ್ ಕಣ್ಮುಚ್ಚಿ ಹೊಯ್ವ ಸೀತದ ನಡುವೆ
ಮುಟ್ಟಿದೊಡೆ ಕೈ ಕಡಿದು ಬೀಳ್ವ ತುಹಿನದ ನಡುವೆ
ನೆನೆದೊಡೆ ಮನಂ ಮುರುಂಟುವ ಸೀತಳದ ನಡುವೆ
ತನುಕರಗಿ ಕೋಡಿಸುವ ಬಹಳ ಸೀತದ ನಡುವೆ

ಪದ್ಮಾವತಿಯಿಂದ ಆಗಬಾರದ ಅಪಮಾನಗಳು ಆದರೂ ಅದನ್ನೆಲ್ಲ ಸಹಿಸಿಕೊಂಡು ಸಾಗುತ್ತಿರುವ ಮಲುಹಣನ ಏಕನಿಷ್ಠ ಪ್ರೇಮ, ಕಷ್ಟಸಹಿಷ್ಣುತೆಯು ಗೊತ್ತಾಗುತ್ತದೆ. ಮಂಜಿನಿಂದ ಆವೃತವಾಗಿ ಯಾವುದರ ಜ್ಞಾನವೂ ಇಲ್ಲದೆ ಮಲುಹಣನನ್ನು ಬೆಳಗಿನ ಸಮಯದಲ್ಲಿ ಬಂದ ಮಲುಹಣಿಯು ನೋಡುತ್ತಾಳೆ; ಪ್ರಲಾಪಿಸುತ್ತಾಳೆ.

ಅಕಟಕಟ ಮಲುಹಣಂ ಹಿಮದೊಳ್ಮುಳುಂಟಿದಂ
ಅಕಟಕಟ ಪಾಪಿ ಎನಗೊಲ್ದು ನೆರೆಮುಗ್ಗಿದಂ
ಪಾಪಿಯಾದೆಂ ಪಾಪಿಯಾದೆಂ

ಹಿಮವನ್ನು ಮರವುಟ್ಟಿನಿಂದ ಮಲುಹಣಿಯು ತೆಗೆಯಿಸುತ್ತಾಳೆ.

ಕಪಟವಳಿದೊಳಗೊಪ್ಪುವನು ರಾಗವಿರ್ಪಂತೆ
ಯುಪಚಾರವಳಿದು ಸತ್ಯ ಸ್ನೇಹವಿರ್ಪಂತೆ
ಇರ್ದನಾ ಮಲುಹಣಂ ವಿರಹಕ್ಕೆ ತಂಪಾಗಿ
ಇರ್ದನಾ ಮಲುಹಣಂ ತಾಪಕ್ಕೆ ತೆರಹಾಗಿ

ಮಲುಹಣಿಯ ಉಪಚಾರವು ಉದಾತ್ತ ಪ್ರೇಮದ ನೆನಪನ್ನು ತರುತ್ತದೆ. ಭವಭೂತಿಯು "ಅದ್ವೈತಂ ಸುಖದುಃಖಯೋರನುಗತಂ ಸರ್ವಸ್ವಾವಸ್ಥಾಸು" ಎಂದು ಹೇಳಿರುವದು ಈ ಸಮಯದಲ್ಲಿ ಸಮಂಜಸವಾಗಿ ಕಾಣುತ್ತದೆ. ಪ್ರಿಯಾರಾಧನೆಯ ರೀತಿಯನ್ನು ಹರಿಹರದೇವನು ಹೃದ್ಯವಾಗಿ ಚಿತ್ರಿಸಿದ್ದಾನೆ.

ಮಲುಹಣನನಳ್ಕರಿಂ ಕರುಣದಿಂದಂ ನೋಡಿ
ಮಲುಹಣಿ ಮನೋದುಃಖದಿಂದೆ ನುಡಿದಳ್ಬಾಡಿ

ಎನ್ನಮೇಲಿಕ್ಕುವೀ ಚಿತ್ತದಾತುರತೆಯಂ
ಪನ್ನಗಾಭರಣನೊಳ್ಮಾಳ್ದುದೆನ್ನೊಲ್ಮೆಯಂ
ಎಂದ ಮಾತಂ ಕೇಳ್ದು ಬಳಿಕ ನೀನೆನಗಪ್ಪೆ
ಇಂದುಧರನಂ ಬೇಡು ನಿನ್ನತ್ತ ನಾಂ ಬಪ್ಪೆ
ಎನ್ನ ಹವಣೇ ಕೋಟಿ ಮಲುಹಣಿಯರಾಗರೇ
ಮನಸಿಜಾರಿಯನರಿದು ದುಃಖಮಂ ನೀಗರೇ
ಬೇಡಿಕೊಳ್ಳೀಶ್ವರನೊಳಿನ್ನ ಮಲುಹಣ ಪೋಗು
ನೋಡಬಾರದು ವಿರಹದನುತಾಪಮಂ ನೀಗು

ಪ್ರಿಯೆಯ ಉಪದೇಶವೇ ಆರಾಧನೆಯಾಗಿ ಬೆಳಗುತ್ತದೆ. ತನ್ನಂತ ಹವಳಿಗಾಗಿ ಇಷ್ಟು ಕಷ್ಟವನ್ನು ಸಹಿಸಿದವನು ಪರಮೇಶ್ವರನನ್ನು ಇಷ್ಟೇ ನಿಷ್ಠೆಯಿಂದ ಪ್ರೀತಿಸಿದ್ದರೆ ದೊರಕುವ ಫಲವು ಹಿರಿದಾದದ್ದು ಎಂಬುದು ಆಕೆಯ ಬುದ್ಧಿಗೆ ಮಿಂಚುಹೊಳೆದಂತಾಗುತ್ತದೆ. ಈ ಬಗೆಯ ಏಕನಿಷ್ಠೆಗೆ ಪರಮೇಶ್ವರನೊಬ್ಬನೇ ಪಾತ್ರನು ಎಂಬ ಭಾವನೆಯು ಬೇರೂರುತ್ತದೆ. ಕಾಮವು ಪ್ರೇಮವಾಗಿ ಮಾರ್ಪಟ್ಟಾಗ, ಕಾಮವಿಕಾರಕ್ಕೆ ಪ್ರೇಮಸಂಸ್ಕಾರ ಒದಗಿದಾಗ ಬರುವ ಮಾತುಗಳು ಇವು. ಕುರುಡು ಕಾಮದ ಆಶೆಗೆ ತುತ್ತಾಗಿರುವ ನಾಯಿಜೀವಿಯಂತಹ ಮಲುಹಣನು ಅಮೌಲ್ಯವಾದ ಮನುಷ್ಯ ಜೀವನವನ್ನೇ ಹಾಳುಮಾಡುವನಲ್ಲಾ ಎಂಬ ಅನುಕಂಪ, ಸಹಾನುಭೂತಿಯು ಮಲುಹಣಿಯಲ್ಲಿ ಜನಿಸಿ, ಹೃದಯದ ಬೆಳಕನ್ನು ಚೆಲ್ಲಲು ಯತ್ನಿಸುತ್ತಾಳೆ. ತತ್ಫಲವಾಗಿ ಕಾಮುಕನು ಪ್ರೀತಿಯ ಭಕ್ತನಾಗುತ್ತಾನೆ.

ವಿರಹಮಂ ತೆಗೆದು ಹರನಮೇಲಿಕ್ಕಿದಂ
ತನಿನೇಹಮಂ ಶಿವನ ಮೆಲ್ಲಡಿಗೆ ಸಾರ್ಚಿದಂ

ವಿಜಯೇಶ್ವರನ ರಂಗಮಂಟಪಕ್ಕೆ ಬಂದು ಮಲುಹಣನು ಧ್ಯಾನಾಸಕ್ತನಾಗುತ್ತಾನೆ. ಮಲುಹಣಿಯ ಪ್ರೇಮವನ್ನು ಬಿಡದೆ ತನ್ನ ಸಹಚರಿಯೊಡನೆ ಪರಮೇಶ್ವರನ ಸಾಹಚರ್ಯ ಮಾಡಬೇಕೆನ್ನುವ ಧ್ಯೇಯವನ್ನಿಟ್ಟುಕೊಂಡು ಆರಾಧಿಸುವ ಪರಿಸ್ಪಷ್ಟ ಚಿತ್ರವನ್ನು ಕವಿಯು ಕೊಟ್ಟಿದ್ದಾನೆ.

ದೇವ ಶಂಕರ ಭಕ್ತಜನ ಮನೋರಥ ರೂಪ
ದೇವ ಶಶಿಧರ ಶರಣ ಹೃದಯ ಸದಮಳದೀಪ
ಗೌರೀ ಕಚಪ್ರಚಯ ಪುಷ್ಪಗಂಧಕ್ಕೆಳಸಿ

ಘೋರೆನುತ್ತಿರಗಿ ಮಧುಕರ ವ್ರಜಮನನುಕರಿಸಿ
ಮೆರೆವಗರಳದಗರುವ ಕರುಣಿಸುದು ಕರುಣಿಸುದು
ಹರೆಯ ಮಧುರಾಂಶ ಮಂಡಿತ ಮುಕುಟ ಕರುಣಿಸುದು
ಗಿರಿಜಾ ಮನೋಹರನೆ ಕರುಣಿಸುದು ಕರುಣಿಸುದು

ಭಕ್ತನಾದ ಮಲುಹಣನ ಮನೋರಥವು ಮಲುಹಣಿ ಆಕೆಯ ರೂಪದಲ್ಲಿಯೇ ಶಂಕರನನ್ನು ಕಾಣುವೆನೆಂಬ ಧ್ವನಿಯು ಬಹಳ ಚೆನ್ನಾಗಿದೆ, ಗಿರಿಜೆಯ ತಲೆಯನ್ನು ಶಿರದ ಸಮೀಪದಲ್ಲಿರಿಸಿ ಆಕೆಯ ಹೂ ಮುಡಿಯ ಆಮೋದವನ್ನು ಸಂತಸದಿಂದ ಸವಿವ ಮಧುರ ಚಿತ್ರದ ನೆನಪು ಈ ಸಮಯಲ್ಲಿ ಶಂಕರನಿಗಾಗುವಂತೆ ಕಂದಿರುವುದು ಗೌರೀ ಪ್ರೇಮದ ಸೂಚನೆಯಿಂದ ಮಲುಹಣಿಯ ಪುನರ್ಮಿಲನದ ಸೂಚನೆಯನ್ನು ಸೂಕ್ಷ್ಮವಾಗಿ ಕೊಟ್ಟಿದ್ದಾನೆ. ಭಕ್ತನ ಭಕ್ತಿಗೆ ಶಂಕರನು ಮೆಚ್ಚಿ ಮಹಾಲಿಂಗದಿಂದ ಹೊರಬಂದು ವರವನ್ನು ಕೇಳೆಂದು ಹೇಳುತ್ತಾನೆ. ಮಲುಹಣನು ಸಂತೋಷದಿಂದ ಪರಮೇಶ್ವರನ ಪಾದಕ್ಕೆ ಎರಗುತ್ತಾನೆ. ಮಲುಹಣಿಯ ಜೊತೆಯಲ್ಲಿ ಇನ್ನೂ ನೂರು ವರ್ಷ ಕಾಲ ಇರುವಂತೆಯೂ ಅನಂತರ ಕೈಲಾಸಕ್ಕೆ ಕರೆದೊಯ್ಯುವಂತೆಯೂ ವರವನ್ನು ಕೇಳಿಕೊಳ್ಳುತ್ತಾನೆ. ಶಂಕರನು 'ತಥಾಸ್ತು' ಎಂದು ಅಂತರ್ಧಾನನಾಗುತ್ತಾನೆ.

---

ಸೂಚನೆ:— ಗದುಗಿನ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ೨-೩ ತಿಂಗಳು ಹುಸ್ನೂರಲ್ಲಿ ಶಾಸ್ತ್ರ ಕಥನವನ್ನು ಅವ್ಯಾಹತವಾಗಿ ನಡಿಸಿದ್ದು ಅದರ ವಿವರಣೆಯ ಲೇಖವು ನಮ್ಮ ಕಡೆಗೆ ಬಂದಿವೆ. ಅದನ್ನು ಸ್ಥಳಾಭಾವಕ್ಕೋಸ್ಕರ ಈ ಸಂಚಿಕೆಯಲ್ಲಿ ಪ್ರಸಿದ್ಧಿಸಿಲ್ಲ. ಅದನ್ನು ಮುಂದಿನ ತಿಂಗಳಿನ ಸಂಚಿಕೆಯಲ್ಲಿ ಪ್ರಸಿದ್ಧಿಸುವೆವು.

**— ಸಂಪಾದಕ**





ಸಂಪಾದಕರು

ಡಾ|| ರಾ. ಬ. **ಫ. ಗು. ಹಳಕಟ್ಟಿ,**

**ಬಿ. ಎ. ಎಲ್. ಎಲ್. ಬಿ.**

**ವಿಜಾಪುರ.**



**[ ವಾರ್ಷಿಕ ಚಂದಾ ೫-೧೨-೦ ಅಂಚೆಯ ವೆಚ್ಚ ಬೇರೆ ]**

**ಜೂನ ೧೯೫೭**

# ★ ವಿಷಯಾನುಕ್ರಮಣಿಕೆ ★





---




ಸಂಪುಟ ೩೧ ಸಂಚಿಕೆ ೬

ಜೂನ ೧೯೫೭

# ಕಲ್ಯಾಣದ ಕ್ರಾಂತಿಯ ಕಾರಣ ಪುರುಷ
# ಬಸವಣ್ಣನವರು

[ ಲೇಖಕರು:– ಶ್ರೀಯುತ "ಭ್ರಮರ" ]



ಭೂಲೋಕದಲ್ಲಿ ಅನ್ಯಾಯ ಅಧರ್ಮಗಳು ಅತಿಯಾಗಿ ಧರ್ಮಗ್ಲಾನಿಯುಂಟಾದ ಸಮಯದಲ್ಲಿ ಅನೇಕ ಮಂದಿ ಮಹಾತ್ಮರು ಅವತರಿಸಿ, ಖಿಲವಾಗುತ್ತಿದ್ದ ಧರ್ಮವನ್ನು ಪುನರುಜ್ಜೀವಿತಗೊಳಿಸಿದ್ದಾರೆ. ಬುದ್ಧ, ಏಸು, ಮಹಮ್ಮದ, ಬಸವಣ್ಣ ಮತ್ತು ಗಾಂಧೀಜಿಯವರು ಮಹಾ ಸಾಧಕರೂ, ಧರ್ಮ ಪ್ರವರ್ತಕರೂ ಆಗಿದ್ದು ವಿಶ್ವಸೌಖ್ಯ, ಸಮಸ್ತ ಧರ್ಮ ಸಮನ್ವಯಕ್ಕಾಗಿ ತನುಮನಧನಗಳಿಂದ ದುಡಿದಿದ್ದಾರೆ. ಇಂತಹ ಮಹಾಪುರುಷರನ್ನು ಸದಾಕಾಲವೂ ನೆನೆವುದೊಂದಗ್ಗಳಿಕೆ. ಅವರ ತ್ಯಾಗಮಯ ಜೀವನ, ನಡೆನುಡಿಯಾದರ್ಶಗಳು ಮಾನವರಾಗಿ ಬಾಳಬೇಕೆನ್ನುವವರಿಗೆ ದಾರಿದೀಪ, ಸ್ಫೂರ್ತಿದಾಯಕ. ಈ ಮಹಾನುಭಾವರ ಪಂಕ್ತಿಯಲ್ಲಿ ಬಸವಣ್ಣನವರ ವಿಶಿಷ್ಟತೆ ಏನೆಂಬುದನ್ನು ವಿಚಾರಿಸೋಣ.

ಹನ್ನೆರಡನೆಯ ಶತಮಾನದಲ್ಲಿ ನಡೆದ "ಕಲ್ಯಾಣದ ಕ್ರಾಂತಿ" ವೀರಶೈವ ಧರ್ಮಜಾಗೃತಿಗೆ ಬುನಾದಿಯಾಯಿತು. ಸಕಲದೇಶ, ಸಕಲಕಾಲ, ಸಮಸ್ತ ಜನರಿಗೂ ಸರ್ವಸಮಾನವಾಗಿ 'ಸಕಲಜೀವಿಗಳಿಗೆ ಲೇಸನೇ ಬಯಸಬೇಕೆಂ'ದ ಧರ್ಮವು ಮತವೈಷಮ್ಯ, ಮೇಲು ಕೀಳು, ಅಂಧಾಚರಣೆ ಪರ

ಸ್ಪರ ದ್ವೇಷಾಸೂಯಗಳಿಂದ ಕಲುಷಿತವಾಗಿ, ಅಶಾಂತಿ ಅನ್ಯಾಯಗಳ ಉಗಮಸ್ಥಾನವಾಗಿತ್ತು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಕರ್ಮಜಡತ್ವ, ಅಸ್ಪೃಶ್ಯತೆ, ಅನ್ಯಾಯ ಮತ್ತು ಅಜ್ಞಾನಗಳನ್ನು ನಿರ್ಮೂಲ ಮಾಡಿ ಇಹ ಪರಗಳೆರಡರಲ್ಲಿಯೂ ಮಾನ್ಯವಾಗಬಹುದಾದಂಥ ಧರ್ಮಕ್ರಾಂತಿಯುಂಟು ಮಾಡಲು ಸಮರ್ಥ ಜ್ಞಾನಿಗಳೊಬ್ಬರ ಆವಶ್ಯಕತೆಯಿತ್ತು. ಈ ಪರಿಸ್ಥಿತಿಯೇ ಅಂತಹ ಮಹಾತ್ಮರನ್ನಪೇಕ್ಷಿಸಿ ಪಡೆಯಿತೆಂಬಂತೆ ಜಗಜ್ಯೋತಿಯಾಗಿ ಬಸವೇಶ್ವರರು ಜನ್ಮತಾಳಿದರು.

ಬಸವಣ್ಣನವರಿಗಿಂತ ಹಿಂದೆ ಶೈವಧರ್ಮವು ಪ್ರಚಾರದಲ್ಲಿತ್ತು. "ಶೈವ ಸಂಸ್ಕೃತಿಯ ಚರಿತ್ರೆ ಏನಿಲ್ಲವೆಂದರೂ ಹತ್ತು ಸಹಸ್ರವರ್ಷಗಳಿಗೆ ಹಿಂದೆ ಹೋಗುವ ಪುರಾತನ ಇತಿಹಾಸವಾಗಿದೆ. ಪುರಾತನವೂ ವಿಸ್ತಾರವೂ ಆದ ಈ ಧರ್ಮವು ಭಾರತದಲ್ಲಿ ಅಲ್ಲದೆ ಈಜಿಪ್ಟ್, ಕ್ರೀಟ್, ಮೆಸೊಪೊಟೇಮಿಯ ಚೀಣ ಮುಂತಾದ ಪರರಾಷ್ಟ್ರಗಳಲ್ಲಿಯೂ ಇದ್ದಿತೆಂಬುದಕ್ಕೆ ಅನೇಕ ಕುರುಹು ಮತ್ತು ಸ್ಮಾರಕಗಳ ಆಧಾರವಿದೆ." ಆದರೂ ಕಗ್ಗಲ್ಲಿನಂತಿದ್ದ ಈ ಧರ್ಮವನ್ನು ಹಸನಾಗಿ ನಯವಾಗಿ ಕೆತ್ತಿ ಸುಂದರವಾದ ವೀರಶೈವ ವಿಗ್ರಹವನ್ನಾಗಿ ರೂಪಿಸಿದವರು ಬಸವಣ್ಣನವರೇ. ಆದ್ದರಿಂದ ಬಸವಣ್ಣನವರು ವೀರಶೈವ ಮತಸ್ಥಾಪಕರು. ಎಂಬ ಮಾತು ಕೇವಲ ಅತಿಶಯೋಕ್ತಿ ಅಥವಾ ಅತಿ ಅಭಿಮಾನದ ಅಜ್ಞಾರ ಮಾತಲ್ಲ. ಶೈವ-ವೀರಶೈವ ಧರ್ಮಗಳ ಇತಿಹಾಸವನ್ನು ಅವಲೋಕಿಸಿದ ಯಾರಿಗಾದರೂ ಈ ಸತ್ಯ ದೃಢವಾದೀತು. ಶೈವಧರ್ಮದ ಕೆಲವೊಂದು ನ್ಯೂನತೆಗಳನ್ನು ತಿದ್ದಿ, ಒಂದು ವ್ಯವಸ್ಥಿತ ವಿಕಾಸ ಸ್ಥಿತಿಗೆ ತಂದು ಮತ ಪುನರುಜ್ಜೀವಿತಗೊಳಿಸಿ ಶೈವವನ್ನು ವೀರಶೈವನ್ನಾಗಿ ರೂಪಿಸಿದವರು ಬಸವಣ್ಣನವರು.

ಬಸವಣ್ಣನವರ ಜೀವನ ಧರ್ಮಸಾರ, ಶಿವತತ್ತ್ವವನ್ನು ಜಾತ್ಯಾತೀತ ಜಗತ್ ಕಲ್ಯಾಣ ಧರ್ಮವಾಗಿ ಪರಿಣಾಮಗೊಳಿಸಿದ ಬಗೆ ಇವುಗಳನ್ನು ಮೂರು ಮುಖ್ಯ ಸಂಗತಿಗಳಿಂದ ತಿಳಿಯಬಹುದು.

೧. ಕನ್ನಡ ಭಾಷಾಭಿವರ್ಧಕ,
೨. ಹಿಂದೂ ಧರ್ಮೋದ್ಧಾರಕ ಮತ್ತು
೩. ವೀರಶೈವ ಮತಸ್ಥಾಪಕ.

ಎಂಬ ಈ ಮೂರು ಮುಖ್ಯ ದೃಷ್ಟಿಗಳಿಂದ ಬಸವಣ್ಣನವರ ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲೋಣ.

ಭಾಷಾದೃಷ್ಟಿಯಿಂದ ವಿಚಾರ ಮಾಡಿದಾಗ ಬಸವಣ್ಣನವರು ಕನ್ನಡ ನಾಡಿಗೆ, ಕನ್ನಡ ನುಡಿಗೆ ಮಹೋಪಕಾರ ಮಾಡಿದ್ದಾರೆ. ಅಷ್ಟೇಕೆ, ಕೇವಲ ಕವಿಯಾಗಿಯೇ ಬಾಳಿಬದುಕಿದ ಯಾರೂ ಈ ಭಕ್ತಿಯೋಗಿಯಷ್ಟು ಭಾಷೆಗೆ ಸಹಾಯಕರಾಗಿಲ್ಲ. ಪಂಡಿತರಿಗೆ ಮಾತ್ರ ಮೀಸಲಾಗಿ ಭಾರವಾದ ಚಿನ್ನದ ಆಭರಣಗಳಿಂದ ಅಲಂಕೃತ ಬಂಧಿಯಾಗಿ ಅರಮನೆಯಲ್ಲಿ ಬವಣೆಗೊಳಗಾಗಿದ್ದ ಸಾಹಿತ್ಯ ದೇವಿಯನ್ನು ಸರಳವಾದರೂ ಸುಂದರವಾದ ಉಡುಪುಗಳಿಂದ ಅಲಂಕರಿಸಿ ಪ್ರತಿ ಕನ್ನಡಿಗನ ಮನೆ ಮನೆ ಬಾಗಿಲಿಗೂ ಈ ಜ್ಞಾನ ಜ್ಯೋತಿಯನ್ನು ಕೊಂಡೊಯ್ದ ಸ್ತುತ್ಯಕಾರ್ಯ ವಚನಕಾರರಿಗೆ ಸಲ್ಲುತ್ತವೆ. "ದೈವವಾಣಿಯು ಜನದಾಣಿಯ ಮಟ್ಟಕ್ಕಿಳಿಯುವುದು ಅಸಾಧ್ಯವಾದಾಗ ಜನವಾಣಿಯನ್ನೆ ದೈವವಾಣಿಯ ಮಟ್ಟಕ್ಕೇರಿಸಿದ ಕೀರ್ತಿ" ನಿಜವಾಗಿಯೂ ವಚನಕಾರರಿಗೆ ಮೀಸಲು. ಜನತೆಗೆ ಅರ್ಥವಾಗದ ಅನುಪಯೋಗ ಶಾಸ್ತ್ರೀಯ ಸಾಹಿತ್ಯರಚನಾಮಾರ್ಗ ಅವರಿಗೆ ಶಸ್ತ್ರಮಾರ್ಗವಾಗಿರಬೇಕು. ಛಂದಸ್ಸು ಮಾತ್ರೆ, ಗುರುಲಘುಗಳ ಗುಣಾಕಾರದ ಗೊಂದಲ ಅವರಿಗೆ ತಲೆ ಬೇಸರವೆನಿಸಿರಬಹುದು. ಇಷ್ಟಲ್ಲದೆ ವೀರಶೈವ ಮತದ ತತ್ವಗಳು ಸಾಮಾನ್ಯ ಜನತೆಗೂ ಅರ್ಥವಾಗಲು ಸರಳವಾದ ಹೊಸ ಕನ್ನಡದ ಅವಶ್ಯಕತೆ ಅನಿವಾರ್ಯವಾಗಿತ್ತು. ಇದೇ ದೃಷ್ಟಿಯಿಂದ ವಚನವಾಙ್ಮಯ ರೂಪುತಾಳಿತು. ವಚನಸಾಹಿತ್ಯ ಭಾಷಾದೃಷ್ಟಿಯಿಂದ ಸರಳವಾಗಿದ್ದರೂ ಅದರಲ್ಲಡಗಿರುವ ಜೀವನಸೌಂದರ್ಯ, ಉನ್ನತ ಭಕ್ತಿಭಾವದೃಷ್ಟಿ, ಶ್ರೇಷ್ಠಸಾಹಿತ್ಯ ಲಕ್ಷಣಗಳಾದ ಲೋಕಾನುಭವ ಮತ್ತು ಜೀವನ ಪ್ರತಿಬಿಂಬ ಅಸದೃಶವಾದುವು. ಶ್ರೇಷ್ಠ ಗದ್ಯ ಸಾಹಿತ್ಯಕ್ಕೆ ವಚನಶಾಸ್ತ್ರವೇ ಬುನಾದಿ. ಅಧ್ಯಾತ್ಮಜ್ಞಾನದ ಅತಿಶಯತೆಯು ಜೊತೆ ಜೊತೆಯಲ್ಲೆ ರಸಪ್ರವಾಹದಂತೆ ಹರಿದುಬಂದಿರುವ ಜೀವನ ಧರ್ಮಸೂತ್ರಗಳಿಂದ ವಚನಸಾಹಿತ್ಯ ಜಗತ್ತಿನ ಪ್ರಖ್ಯಾತ ಅನುಭಾವಸಾಹಿತ್ಯಗಳಲ್ಲಿ ಅತ್ಯಂತ ಹಿರಿಯ ಸ್ಥಾನಗಳಿಸಿವೆ. ಉದಾಹರಣೆಗಾಗಿ ನಮ್ಮ ನುಡಿ ಇಂತಿರಬೇಕೆಂದು ತಿಳಿಸುವ ಬಸವೇಶ್ವರರ ಒಂದು ವಚನವನ್ನು ನೋಡಿ.

ನುಡಿದರೆ ಮುತ್ತಿನ ಹಾರದಂತಿರಬೇಕು.
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.

ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು
ನುಡಿದರೆ ಲಿಂಗವೆಚ್ಚಿ 'ಅಹುದಹುದೆ'ನಬೇಕು
ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಮದೇವ
ನೆಂತೊಲಿವನಯ್ಯಾ"

ಕನ್ನಡ ನುಡಿ ನೆಲೆಗಟ್ಟಿನ ಸಾರಸರ್ವಸ್ವವೂ ಈ ನುಡಿಗಳಲ್ಲಿ ಮುತ್ತಿನ ಹಾರದಂತೆ ಕಂಗೊಳಿಸಿವೆ. "ಮಾತೇ ಜ್ಯೋತಿರ್ಲಿಂಗ" ಎಂಬ ವಾಣಿಯು ಸಾರ್ಥಕತೆ ವ್ಯಕ್ತಗೊಂಡಿರುವುದು ವಚನವಾಙ್ಮಯದಲ್ಲಿ.

ಬಸವಣ್ಣನವರು ಭಾಷೆಯ ಸರಳತೆಯಲ್ಲಿ ಭಾವವನ್ನು ಕಡೆಗಾಣಿಸಿರಲಿಲ್ಲ. ಉನ್ನತ ಭಕ್ತಿಭಾವವನ್ನು ಸರಳವಾದ ಪದಗಳಲ್ಲಿ ಹೊರಹೊಮ್ಮಿಸುವುದೇ ಅವರ ಭಾಷಾ ಸೃಷ್ಟಿಯ ದೃಷ್ಟಿಯಾಗಿತ್ತು. ಸಾಹಿತ್ಯಸೃಷ್ಟಿಯ ಶಾಸ್ತ್ರೀಯ ತಾಳಮಾನಕ್ಕಿಂತ ಕೂಡಲಸಂಗನೊಲುಮೆಗೆ ಭಕ್ತಿರಸ ತನ್ಮಯತೆ ಆವಶ್ಯಕವೆಂಬ ಭಾವವನ್ನು—

ತಾಳಮಾನ ಸರಿಸವನರಿಯೆ! ಓಜೆಬಜಾವಣೆಯ ಲೆಕ್ಕವನರಿಯೆ! ಅಮೃತಗಣ ದೇವಗಣವನರಿಯೆ! ಕೂಡಲಸಂಗಮದೇವಾ—ನಿನಗೆ ಕೇಡಿಲ್ಲವಾಗಿ ನಾನು ಒಲಿದಂತೆ ಹಾಡುವೆ"

ಎಂಬ ವಚನದಲ್ಲು "ಆಡಿಕೊಂಡಾರೆಂದು ಅಂಜಲದೇಕೆ....ಏನನೂ ಅರಿಯೆನೆಂದು ಮೌನಗೊಂಡಿರಲೇಕೆ? ಕೂಡಲಸಂಗಮದೇವರ ಮುಂದೆ ದಂದಣ ದತ್ತಣ ಎನ್ನಿ" ಎಂಬ ವಚನದಲ್ಲೂ ವ್ಯಕ್ತಗೊಳಿಸಿದ್ದಾರೆ. ಅವರು ಬಳಸಿರುವ ಶಬ್ದಗಳು ತಿಳಿಗನ್ನಡದ ಸಾಮಾನ್ಯಪದಗಳಂತಿದ್ದರೂ ಪ್ರತಿಪದಕ್ಕೂ ತನ್ನದೇ ಆದ ಒಂದು ವಿಶಿಷ್ಟ ಭಾವಾರ್ಥವಿದೆ. ಅಂತಹ ಪದಪುಂಜಗಳಲ್ಲಿ ಭಕ್ತಿರಾಗದ ಮಹೋನ್ನತಿ ಹೇಗೆ ತೂಗಿ ಬಂದಿತೆಂಬುದನ್ನು ನೋಡಿ—

ವಚನದಲ್ಲಿ ನಾಮಾಮೃತ ತುಂಬಿ, ನಯನದಲ್ಲಿ ನಿಮ್ಮ ಮೂರುತಿ ತುಂಬಿ,
ಮನದಲ್ಲಿ ನಿಮ್ಮ ನೆನಹು ತುಂಬಿ, ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ,
ಕೂಡಲಸಂಗಮದೇವಾ ನಿಮ್ಮ ಚರಣಕಮಲದಲಾನು ತುಂಬಿ.

ಇಲ್ಲಿ ಆತ್ಮಮನ ಸಕಲೇಂದ್ರಿಯಗಳೂ ಸಂಗನ ಧ್ಯಾನದಿಂದ ಪುಳಕಗೊಂಡು ಪುನೀತವಾದ ರೀತಿ. ನಾಮಾಮೃತ ಭಾವಾಮೃತ ಸಮ್ಮಿಲನದ

ಸಾರ್ಥಕ್ಯ ನಿಜವಾಗಿಯೂ ಪ್ರೈವೆತ್ತು ಬಂದಿದೆ. ಕೂಡಲಸಂಗನ ಚರಣ ಕಮಲಗಳಲ್ಲಿ ತುಂಬಿಯಾಗಿ ನಿಂತ ಅವರ ವ್ಯಕ್ತಿತ್ವ ಭಕ್ತಿಯೆಂಬ ಕಮಲ ದಲ್ಲಿ ಅವಿನಾಭಾವದಿಂದ ಐಕ್ಯಗೊಂಡಿದೆ.

ಆದ್ಯವಚನಕಾರರಾದ ಬಸವಣ್ಣನವರನ್ನೇ ಅನುಸರಿಸಿ ಅವರ ಅನಂತರ ಅನೇಕ ಮಂದಿ ಶಿವಶರಣರು ವಚನವಾಙ್ಮಯವನ್ನು ಮತ್ತಷ್ಟು ವೃದ್ಧಿಗೊಳಿಸಿದರು. ನೂರಾರುಮಂದಿ ಶರಣರಿಂದ ಸೃಷ್ಟಿಯಾದ ಅಸಂಖ್ಯಾತ ವಚನ ಸಾಹಿತ್ಯ ಕನ್ನಡಿಗರ ರತ್ನಭಂಡಾರ. ಹರಿಹರ ಕವಿಯೊಬ್ಬನೆ ನೂರಿಪ್ಪತ್ತಕ್ಕೂ ಮೇಲ್ಪಟ್ಟು ರಗಳೆಗಳನ್ನು ಬರೆದಿದ್ದಾನೆ. ಸಂಸ್ಕೃತ ಸಾಹಿತ್ಯದ ಅಲೆಗಳಬ್ಬರದಲ್ಲಿ ಕನ್ನಡ ಕಣ್ಮರೆಸಿಕೊಂಡಿದ್ದಾಗ ಅದಕ್ಕೊಂದು ಜೀವಂತ ಧ್ವನಿಯನ್ನು ಕೊಟ್ಟು ಬೆಳಕಿಗೆ ತಂದು ಕನ್ನಡಿಗರಿಗೆ ಎದೆಗಾರಿಕೆಯನ್ನೂ ಕನ್ನಡ ನುಡಿಗೊಂದು ನೆಲೆಗಟ್ಟನ್ನೂ ಕಟ್ಟಿದವರಾದ್ದರಿಂದ ಬಸವಣ್ಣನವರಿಗೆ "ಕನ್ನಡ ಭಾಷಾಭಿವರ್ಧಕ" ಎಂಬ ಮಾತು ಅಕ್ಷರಶಃ ಒಪ್ಪುತ್ತದೆ. ಇವರ ಮಾರ್ಗದಲ್ಲೆ ಮುಂದುವರಿದು ಸಾಹಿತ್ಯ ರಚನಾಮಾರ್ಗ ಸಂಪೂರ್ಣ ಬದಲಾವಣೆಹೊಂದಿತು. ಬಹುಕಾಲದಿಂದ ಬಂದಿದ್ದ ಶಾಸ್ತ್ರೀಯ ಮಾರ್ಗ ರಗಳೆ, ಷಟ್ಪದಿ, ಸಾಂಗತ್ಯ, ಗದ್ಯ, ತ್ರಿಪದಿ ಮುಂತಾದ ವಿವಿಧ ಪ್ರಕಾರಗಳಿಗೆ ತನ್ನ ಸ್ಥಾನವನ್ನು ಬಿಟ್ಟುಕೊಟ್ಟಿರು.

೨. ಇದಿಷ್ಟು ಬಸವಣ್ಣನವರು ಮತ್ತು ಭಾಷೆಗೆ ಸಂಬಂಧಿಸಿದ ವಿಷಯವಾಯಿತು. ಧಾರ್ಮಿಕ ವಿಚಾರದಲ್ಲಿ ಬಸವಣ್ಣನವರು ಸಾಧಿಸಿದ ಪ್ರಗತಿ ಎಷ್ಟೆಂಬುದನ್ನು ವಿಶ್ವಮಾನ್ಯ ಧರ್ಮದ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ವಿಚಾರಿಸಬೇಕು. ಒಂದು ವಿಧದಲ್ಲಿ ಅವರು ಅಭಿವೃದ್ಧಿಗೊಳಿಸಿದ ಭಾಷೆಯೂ ಕೂಡ ಮತಪ್ರಚಾರಕ್ಕೊಂದು ಸಾಧನಸಾಮಗ್ರಿ ಎಂಬುದನ್ನು ಮರೆಯುವಂತಿಲ್ಲ. ಹನ್ನೆರಡನೆಯ ಶತಮಾನಕ್ಕೆ ಮುಂಚೆ ವೈದಿಕ ಧರ್ಮವೇ ಹಿಂದೂಧರ್ಮವೆನಿಸಿತ್ತು. ಆದರೆ ಈ ಧರ್ಮದ ಕಟ್ಟುಪಾಡುಗಳು ಕೇವಲ ಅರ್ಥಹೀನ ಕಂದಾಚಾರಗಳಾಗಿದ್ದವು. "ಬ್ರಾಹ್ಮಣ್ಯ" ಎಂಬ ಪದಮಾತ್ರ ಇದ್ದಿತೇ ಹೊರತಾಗಿ ಮೇಲ್ಜಾತಿ ಕೀಳ್ಜಾತಿಗಳೆಂಬ ತಾರತಮ್ಯ ಪ್ರಾಣಿಹಿಂಸೆ, ಅನ್ಯಾಯ ಅಜ್ಞಾನಾಂಧಕಾರ ಎಲ್ಲೆಲ್ಲೂ ತಾಂಡವವಾಡುತ್ತಿತ್ತು. ಹೀಗೆ ಹಲವಾರು ದೃಷ್ಟಿಗಳಿಂದ ಕಲುಷಿತವಾಗಿದ್ದ ವೈದಿಕ ಧರ್ಮವು ಕೆಲವರಿಗೆ ಮಾತ್ರ ಅನ್ವಯಿಸಿದ ಸಂಕುಚಿತ ಧರ್ಮವಾಗಿತ್ತು. ಯಜ್ಞ

ಯಾಗಗಳ ನೆಪದಲ್ಲಿ ಆಡು, ಕುರಿ, ಕೋಳಿಗಳ ಪ್ರಾಣ ಹಿಂಸೆ ಸ್ವಾಭಾವಿಕ ವಾಗಿತ್ತು. ಆಧ್ಯಾತ್ಮ, ದೈವಸಾಕ್ಷಾತ್ಕಾರದ ಹುರುಪಿನಲ್ಲಿ ಇಹಲೋಕದ ಬಾಳನ್ನು ಮರೆತದ್ದರಿಂದ ಜನರ ಸುಖಕ್ಕೆ ಭಂಗವುಂಟಾಗಿತ್ತು.

ಧರ್ಮದೃಷ್ಟಿ ಹೀಗಿದ್ದರೆ ಧರ್ಮಗ್ರಂಥಗಳ ರೀತಿನೀತಿಯು ಮತ್ತೊಂದು ತೆರನಾಗಿತ್ತು. ವೇದೋಪನಿಷತ್ತುಗಳ ಅರ್ಥಸಾರ ಪಂಡಿತರಿಗಲ್ಲದೆ ಜನ ಸಾಮಾನ್ಯರಿಗೆ ಅರ್ಥವಾಗುತ್ತಿರಲಿಲ್ಲ. ಶೂದ್ರನಾದವನಿಗೆ ಪುಣ್ಯಗ್ರಂಥಗಳ ನ್ನೋದುವ ಅಧಿಕಾರವೂ ಇರಲಿಲ್ಲ. ಇದರಿಂದ ಜನರಲ್ಲಿ "ಸಾಕುಮಾಡೋ ಜನ್ಮಸಾಕುಮಾಡೋ" "ಏಕೆನ್ನ ಈ ಲೋಕಕೆಳೆತಂದೊ ಹರಿಯೆ" ಎಂಬ ನಿರಾಶಾವಾದ ಅಂಕುರಿಸಿ ಧರ್ಮ ಮತ್ತು ಲೋಕವ್ಯವಹಾರ ದೃಷ್ಟಿಗಳೆರಡ ರಲ್ಲೂ ಜನರು ಅಜ್ಞಾನಾಂಧಕಾರದಲ್ಲಿದ್ದರು.

ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಹಿಂಸೆ, ಅನ್ಯಾಯ ಅಜ್ಞಾನ ಗಳನ್ನು ಖಂಡಿಸಿ ವಿಶ್ವಮಾನ್ಯವಾದ ವಿಶಾಲ ಧರ್ಮವನ್ನು ಆಚರಣೆಗೆ ತಂದವರು ಬಸವಣ್ಣನವರು. ಪ್ರಪಂಚದ ಜನತೆ ಸುಖಶಾಂತಿಗಳಿಂದ ಬಾಳಲು ಏನೇನು ಆವಶ್ಯಕವೋ ಆ ಉದಾತ್ತ ಗುಣಗಳೆಲ್ಲವೂ ಪುನರುಜ್ಜೀ ವಿತಗೊಂಡ ವೀರಶೈವ ಧರ್ಮದಲ್ಲಡಗಿವೆ ಎಂಬುದನ್ನು ತೋರಿಸಿಕೊಡುವುದೇ ಅವರ ಜೀವನ ಧ್ಯೇಯವಾಗಿತ್ತು. ಮಹಾಸಾಧಕರೂ ಭಕ್ತರೂ ಆದ ಅವರ ಜೀವನದಲ್ಲಿ ಮಾನವೀಯ ಗುಣಗಳು ಕ್ರಮಕ್ರಮವಾಗಿ ವಿಕಾಸಗೊಂಡಂತೆ ಅವರ ಅನುಯಾಯಿಗಳೂ ಹೆಚ್ಚಿದರು.

ಬಸವಣ್ಣನವರ "ಮಹಮನೆ"ಯಲ್ಲಿ ಪ್ರತಿನಿತ್ಯವೂ ನಡೆಯುತ್ತಿದ್ದ ಜಂಗಮಸೇವೆ, ಅನುಭವಗೋಷ್ಠಿಗಳು ಅವರ ಮಾನವ ಪ್ರೇಮವನ್ನೂ "ಜೀವನೇ ಶಿವ" ಎಂಬ ತತ್ತ್ವವನ್ನು ಚೆನ್ನಾಗಿ ಪ್ರತಿಪಾದಿಸುತ್ತವೆ.

ಇಹಲೋಕದ ಬಾಳು ಸುಗಮವಾಗಬೇಕಾದರೆ ಕೇವಲ ಭಕ್ತಿಪ್ರೇಮವೇ ಸಾಕೆಂದು ಬಸವಣ್ಣನವರು ತಿಳಿದಿರಲಿಲ್ಲ. ಇಲ್ಲಿನ ಸಕಲ ಜೀವಿಗಳೂ ಕ್ಷೇಮವಾಗಿರಬೇಕೆಂಬುದು ಅವರ ಅಂತರಂಗದ ಹಂಬಲವಾಗಿತ್ತು. ಬಾಳಿನಲ್ಲಿ ನೊಂದ ನಿರ್ಗತಿಕರು, ತಿರಸ್ಕೃತರಾಗಿದ್ದ ಕೀಳ್ಜಾತಿಯವರಲ್ಲಿ ಅವರಿಗೆ ಅಪಾರ ಕರುಣೆ ಇತ್ತು. ಲೋಕದ ನೂರು ನೋವುಗಳನ್ನು ತಾವೇ ಅನು ಭವಿಸಿದರೆಂಬಂತೆ ಹೃದಯವನ್ನು ವಿಶಾಲವಾಗಿ ತೆರೆದು ನೋಡುತ್ತಿದ್ದರು.

ಈ ಬೇಗುದಿಯ ಕಾರಣದಿಂದಲೆ "ಮೇಲು ಕೀಳು"ಗಳನ್ನು ಬೂದಿಮಾಡಿ ವರ್ಣಾಶ್ರಮ ಧರ್ಮದ ಸಂಕುಚಿತ ಉದ್ಯೋಗ ಪದ್ಧತಿಯನ್ನು ತಪ್ಪಿಸಿ ಯಾವ ವ್ಯಕ್ತಿಯೇ ಆಗಲಿ ತನ್ನ ಸಾಮರ್ಥ್ಯ ಮತ್ತು ಇಚ್ಛೆಗಳಿಗೆ ಒಪ್ಪುವ ಯಾವುದಾದರೂ ಸತ್ಯ ಶುದ್ಧ ಉದ್ಯೋಗವನ್ನು ಮಾಡಬಹುದೆಂದು ಪ್ರತಿಪಾದಿಸಿದರು. ಇದರಿಂದ ವರ್ಣಕ್ಕೂ ಕಾಯಕಕ್ಕೂ ಇದ್ದ ಬಲಾತ್ಕಾರದ ಸಂಬಂಧ ಕಡಿದು ಭಾರತೀಯರ ಉದ್ಯೋಗಾವಲಂಬನೆ ಉದಾರವಾಯಿತು. "ಕಾಯಕವೇ ಕೈಲಾಸ" ಎಂಬ ಅಣ್ಣನವರ ವಾಣಿಯಂತೆ ಪ್ರತಿಯೊಬ್ಬರೂ ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವಹಿಸಲೇಬೇಕಾಗಿತ್ತು. ಕಾಯಕದಲ್ಲಿ ಅಂತಸ್ತಿರಲಿಲ್ಲ, ಮೇಲು ಕೀಳೆಂಬ ಭಾವವಿರಲಿಲ್ಲ. ಭಕ್ತರಲ್ಲಿ ಜಾತಿಯನ್ನೆ ರಸುತ್ತಿರಲಿಲ್ಲ.

ಬಸವಣ್ಣನವರ ಮಹಮನೆಗೆ ಬರುತ್ತಿದ್ದ ಜಂಗಮರಲ್ಲಿ ಎಲ್ಲ ಜಾತಿಯ ಎಲ್ಲ ದೇಶ ಮತ್ತು ಭಾಷೆಗಳ ಶರಣರೂ ಇದ್ದಾರೆ. ಆ ಅನುಭವಗೋಷ್ಠಿಯೊಂದು ಸರ್ವಧರ್ಮ ಸಮ್ಮೇಲನದ ಸಂಕೇತ. ಚನ್ನಬಸವಣ್ಣ, ಅಲ್ಲಮ ಪ್ರಭು, ಸಿದ್ಧರಾಮ, ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ, ಮಾಚಿದೇವ, ಮೋಳಿಗೆಮಾರಯ್ಯ, ಚಿಕ್ಕಯ್ಯ, ಚನ್ನಯ್ಯ, ಕಕ್ಕಯ್ಯ, ದೇವರದಾಸಿಮಯ್ಯ, ಹರಳಯ್ಯ, ಮಧುವರಸ ಇವರೇ ಮೊದಲಾದವರು ಈ ಗಣಂಗಳಲ್ಲಿ ಮುಖ್ಯರು.

ವೀರಶೈವ ಧರ್ಮದಲ್ಲಿ ಸ್ತ್ರೀಪುರುಷರಿಬ್ಬರಿಗೂ ಸಮಾನ ಸ್ವಾತಂತ್ರ್ಯ ಸಮಾನ ಅಂತಸ್ತುಗಳನ್ನು ತಂದುಕೊಟ್ಟವರು ಬಸವಣ್ಣನವರು. ಪುರುಷರಷ್ಟೆ ಅಥವಾ ಅದಕ್ಕಿಂತ ಮಿಗಲಾಗಿ ಸ್ತ್ರೀಯರಿಗೆ ಧಾರ್ಮಿಕ ಮತ್ತು ಸಾಮಾಜಿಕ ಸ್ವಾತಂತ್ರ್ಯವಿತ್ತು. ಅಕ್ಕಮಹಾದೇವಿ, ಸತ್ಯಕ್ಕ, ನೀಲಾಂಬಿಕೆ, ಗಂಗಾಂಬಿಕೆ, ಮುಕ್ತಾಯಕ್ಕ, ಲಿಂಗಮ್ಮ ಮತ್ತು ರೆಮ್ಮವ್ವೆ ಮುಂತಾದ ಮಹಿಳಾ ರತ್ನಗಳು ಜ್ಞಾನದ ಖನಿಗಳಾಗಿ ಮೆರೆದಿದ್ದಾರೆ.

ಗಾಂಧೀಜಿಯವರು ಇಪ್ಪತ್ತನೆಯ ಶತಮಾನದಲ್ಲಿ ಶ್ರಮಿಸಿದ ಅಸ್ಪೃಶ್ಯೋದ್ಧಾರ"ವನ್ನು ಬಸವಣ್ಣನವರು ತಮ್ಮ ಕಾಲದಲ್ಲಿಯೇ ಸಾಧಿಸಿ ಸಫಲರಾಗಿದ್ದಾರೆ. ಬ್ರಾಹ್ಮಣನಾದ ಮಧುವರಸ ಮತ್ತು ಅಂತ್ಯಜನಾದ ಹರಳಯ್ಯನವರಲ್ಲಿ ಹೆಣ್ಣು ಕೊಟ್ಟು ತರುವ ಸಂಬಂಧವನ್ನು ಸಾಧಿಸಿದ್ದು ಈ ಶತಮಾನದಲ್ಲೂ ಅಚ್ಚರಿಗೊಳಿಸುವ ಪವಾಡ. ವೀರಶೈವ ವಿಶ್ವಧರ್ಮದಲ್ಲಿ

ಶಿವದೀಕ್ಷೆಯನ್ನು ಪಡೆದ ಅಸ್ಪೃಶ್ಯರಲ್ಲಿ ಮಾದರ ಚನ್ನಯ್ಯ, ಡೋಹರ ಕಕ್ಕಯ್ಯ, ಶ್ವಪಚಯ್ಯ, ಹರಳಯ್ಯ, ಶಿವನಾಗಮಯ್ಯ, ಮಹಾಕಾಳಯ್ಯ, ಧೂಳಯ್ಯ, ಮರುಳಸಿದ್ಧ, ಕಲ್ಯಾಣಮ್ಮ ಮತ್ತು ಗುಡ್ಡವ್ವೆ ಇವರು ಮುಖ್ಯರು. ಬಸವಣ್ಣನವರು ಇವರಿಗೆ ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನಿತ್ತು ಗುರು, ಜಂಗಮ ಹಿರಿಯ ಮಹೇಶ್ವರರೆಂದು ಗೌರವಿಸಿದ್ದಾರೆ. ಅಸ್ಪೃಶ್ಯ ರಲ್ಲಿ ಅಗ್ರಗಣ್ಯನಾದ ಮರುಳಸಿದ್ಧನು ಪಂಚಪೀಠಗಳಲ್ಲಿ ಒಂದಾದ ಉಜ್ಜಿ ಯಿನೀ ಸದ್ಧರ್ಮಪೀಠವನ್ನು ಸ್ಥಾಪಿಸಿ ವೀರಶೈವ ಧರ್ಮದ ಒಬ್ಬ ಮಹಾ ಆಚಾರ್ಯ ಪುರುಷನಾಗಿ ಮೆರೆದಿದ್ದಾನೆ.

ಬಸವಣ್ಣನವರ ಅಸ್ಪೃಶ್ಯತಾ ಪ್ರೇಮ ಅಸದೃಶವಾದುದು. "ನನಗೆ ಪುನರ್ಜನ್ಮದಲ್ಲಿ ನಂಬಿಕೆಯಿಲ್ಲ. ಆದರೆ ಮತ್ತೆ ಈ ಲೋಕದಲ್ಲಿ ಜನಿಸುವು ದಾದರೆ ಅಸ್ಪೃಶ್ಯರ ಜಾತಿಯಲ್ಲಿ ಜನಿಸಬೇಕೆಂಬ ಆಸೆಯಿದೆ" ಎಂಬುದಾಗಿ ಗಾಂಧೀಜಿ ಹೇಳಿದರು. ಈ ವಿಚಾರದಲ್ಲಿ ಬಸವಣ್ಣನವರು ಇನ್ನು ಮುಂದೆ ಹೋಗಿ ಹೀಗೆನ್ನುತ್ತಾರೆ.

ಚನ್ನಯ್ಯನ ಮನೆಯ ದಾಸಿಯ ಮಗನು,
ಕಕ್ಕಯ್ಯನ ಮನೆಯ ದಾಸಿಯ ಮಗಳು
ಇವರಿಬ್ಬರೂ ಹೊಲದಲ್ಲಿ ಬೆರಣಿಯ ಆಯಹೋಗಿ
ಸಂಗವ ಮಾಡಿದರು. ಇವರಿಬ್ಬರಿಗೆ ಹುಟ್ಟಿದ ಮಗ ನಾನಯ್ಯ
ಕೂಡಲಸಂಗಮದೇವ ಸಾಕ್ಷಿಯಾಗಿ.

ಎನಗಾರೂ ಇಲ್ಲ, ಎನಗಾರೂ ಇಲ್ಲ ಎಂಬರು
ಬಾಣನವ ನಾನು, ಮಯೂರನವ ನಾನು,
ಕಾಳಿದಾಸನವ ನಾನು! ಕಕ್ಕಯ್ಯ ಶ್ವಪಚಯ್ಯ
ಚಿಕ್ಕಯ್ಯ ಚನ್ನಯ್ಯ ಎತ್ತಿ ಮುದ್ದಾಡಿ ಸಲಹಿದರೆನ್ನ ಕೂಡಲ
ಸಂಗಯ್ಯಾ.

ಹಿರಿಯಯ್ಯ ಶ್ವಪಚಯ್ಯ, ಕಿರಿಯಯ್ಯ ಕಕ್ಕಯ್ಯ,
ಅಯ್ಯಗಳ ಅಯ್ಯ ಮಾದಾರ ಚನ್ನಯ್ಯ
ಕೂಡಲಸಂಗಮದೇವಾ ನಿಮ್ಮ ಶರಣರೊಲಿದೆನ್ನ
ಸಲಹುವರಾಗಿ.

ಈ ಮೂರು ವಚನಗಳಲ್ಲಿ ಬಸವಣ್ಣನವರು-ನಿಕೃಷ್ಟರಾಗಿ ನೊಂದಿದ್ದ ಕೀಳ್ಜಾತಿಯವರಲ್ಲಿ ಎಷ್ಟೊಂದು ಅತಿಶಯ ಪ್ರೀತಿ ಇಟ್ಟಿದ್ದರೆಂಬ ಅಂಶ ಬಹು ಸೊಗಸಾಗಿ ವ್ಯಕ್ತಗೊಂಡಿದೆ.

ಬಸವಣ್ಣನವರ ಕಾಲದಲ್ಲಿ ಜಂಗಮರಾಗಿ ಬಂದು ಹೋಗುವುದು ಈ ಕಾಲದಷ್ಟು ಸುಲಭವಾಗಿರಲಿಲ್ಲ. ಬಂದು ಉಂಡುಹೋಗುವ ನಿರುದ್ಯೋಗಿ ಅಯ್ಯಗಳಿಗೆ ಸ್ಥಾನವಿರಲಿಲ್ಲ. ಅವನು ನಡೆನುಡಿಗಳಲ್ಲಿ ಪರಿಶುದ್ಧನಾಗ ಇತರರಿಗೆ ಮೇಲ್ಪಂಕ್ತಿಯಾಗಿರಬೇಕಾಗಿತ್ತು. ನಿಜವಾದ ಶರಣ ಮಹಾಛಲವಂತನಾಗಿರಬೇಕಾಗಿತ್ತು. ಶರಣರಿಗೆ ಯಾವ ಯಾವ ವಿಚಾರಗಳಲ್ಲಿ ಛಲ ಬೇಕೆಂದರೆ—

ಛಲಬೇಕು ಶರಣಂಗೆ 'ಪರಧನವನೊಲ್ಲೆನೆಂ'ಬ
ಛಲಬೇಕು ಶರಣಂಗೆ 'ಪರಸತಿಯನೊಲ್ಲೆನೆಂ'ಬ
ಛಲಬೇಕು ಶರಣಂಗೆ 'ಲಿಂಗಜಂಗಮ ಒಂದೆಂ'ಬ
ಛಲಬೇಕು ಶರಣಂಗೆ 'ಪ್ರಸಾದ ದಿಟವೆಂ'ಬ!
ಛಲವಿಲ್ಲದವರ ಮೆಚ್ಚ ನಮ್ಮ ಕೂಡಲಸಂಗಮದೇವಾ"

ಶರಣನ ಗುಣಲಕ್ಷಣಗಳನ್ನು ಹೇಳುವುದಕ್ಕೆ ಹೋಗಿ ನಿಜವಾದ ಮಾನವತಾ ಗುಣಗಳನ್ನೇ ಈ ವಚನದಲ್ಲಿ ಅಣ್ಣನವರು ಅಡಗಿಸಿದ್ದಾರೆ. ಕೈ, ಬಾಯಿ, ಕಚ್ಚೆ ಈ ಮೂರರಲ್ಲೂ ಪರಿಶುದ್ಧನಾಗಿರುವುವೇ ನಿಜವಾದ ಶರಣನ ಲಕ್ಷಣಗಳು. ಹಾಗಿಲ್ಲದೆ ಪರಧನ ಪರಸತಿಯಂಗಳುಪಿ, ಬಾಯಿಗೆ ಬಂದಂತೆ ಗಳಪುವ ದುರ್ಮಾರ್ಗಿಯು ಮಾಡುವ ಪೂಜೆ ನಿಷ್ಪ್ರಯೋಜಕ. ಅವನ ಪೂಜೆ ಸಂಗಂಗೆ ತೃಪ್ತಿಗೊಳಿಸದು ಎಂಬ ಅಂತರಾರ್ಥ—

ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರೆ!
ಪಾಪಿ ಹುವ್ವನೇರಿಸಲು ವ.ಸೆದಡಾಯುಧದ ಘಾಯ!
ಕೂರ್ಪವರ ನಾರನೂ ಕಾಣೆನೂ ಡೋಹಾರ ಕಕ್ಕಯ್ಯನಲ್ಲದೆ
ವ್ಯಾಕತ್ತಿಯುಳ್ಳ ನಮ್ಮ ಮಡಿವಾಳ ಮಾಚಯ್ಯ
ನಿನ್ನಾಸತ್ತಿಗರಿವರಯ್ಯಾ ಕೂಡಲಸಂಗಮದೇವಾ

ಈ ಮಾತುಗಳಲ್ಲಿ ಅಭಿವ್ಯಕ್ತವಾಗಿದೆ. ಅವರ ಅಂತರಂಗದಿಂದ ಚಿಮ್ಮಿ ಬಂದ ಒಂದೊಂದು ಮಾತೂ ಒಂದೊಂದು ತುತ್ತು. ಆದ್ದರಿಂದಲೆ-"ವಚನಗಳಲ್ಲಿ ಶರಣರು ಐಕ್ಯರಾಗಿದ್ದರೆ" ಎಂಬ ಮಾತು ಸತ್ಯವಾಗಿದೆ.

ಇಂತಹ ವಿಶಾಲ ಭಾವನೆ, ಮಾನವ ಸಹಜಕರುಣೆ, ಅನುಕಂಪ, ಸಮತೆ, ಶಾಂತಿ, ವಿಶ್ವಭ್ರಾತೃತ್ವಗಳ ಪನುಪನುಗುಣಗಳಿಂದ ವೀರಶೈವ ಧರ್ಮವು ವಿಶ್ವಮಾನ್ಯ ಧರ್ಮವಾಗಿದೆ. ಇದು ಬಸವಣ್ಣನವರ ತ್ಯಾಗ, ದುಹತ್ಸಾಧನೆ ಮತ್ತು ಸಾಹಸಗಳ ಫಲ.

ಬಸವಣ್ಣನವರು ಆರಾಧ್ಯ ಬ್ರಾಹ್ಮಣ ಕುಲದಲ್ಲಿ ಜನಿಸಿ ಅದನ್ನು ತೊರೆದು ವೀರಶೈವ ಧರ್ಮ ಸಂಸ್ಥಾಪಕರಾದ್ದರಿಂದಲೇ ಈ ಧರ್ಮಕ್ಕೆ ನಾವು ಹೆಚ್ಚಿನ ಬೆಲೆ ಕೊಡಬೇಕಾಗಿದೆ. ಹಿಂದೂ ಧರ್ಮವೆನಿಸಿದ್ದ ವೈದಿಕ ಧರ್ಮದ ಅರ್ಥಹೀನ ಅಂಧಾಚಾರಗಳನ್ನು "ಹೋತನ ಗಂಟಲಂ ಬಿಗಿದಂತೆ ಇರ್ದ ಜನ್ನಿವಾರಮಂ ಬಿಸುಟುವಂತೆ" ಬಿಸುಟ ಮತ್ತೊಂದು ಧರ್ಮಾನು ಯಾಯಿಗಳಾಗಿ ಅದನ್ನು ವಿಶ್ವಮಾನ್ಯ ಹಿಂದೂ ಧರ್ಮವೆನಿಸಿದರು. ಹಿಂದೂ ಧರ್ಮದ ಉದ್ಧಾರ ಪ್ರಗತಿಗಳಗೆ ಅವರು ತ್ಯಾಗಮಾಡಿರುವಷ್ಟು ಅವರು ದುಡಿದಿರುವಷ್ಟು ಮತ್ತಾರೂ ದುಡಿದಿಲ್ಲ.

ಈ ಎಲ್ಲ ಕಾರಣಗಳಿಂದ ಬಸವಣ್ಣನವರು ವೇದ ಮತು ಉಪನಿಷತ್ತುಗಳಲ್ಲಿ ಹೇಳಿರುವ ವೈದಿಕ ಧರ್ಮದ ತಿರುಳನ್ನೆ ವಚನಗಳಲ್ಲಿ ಹೇಳಿದರು ಎಂಬುದು ವಿಚಾರ ಹೀನರ ಮಾತು. ವೈದಿಕ ಮತಧರ್ಮ ಮತ್ತು ಸಾಹಿತ್ಯಗಳನ್ನು ವಿರೋಧಿಸುವುದೇ ಅವರ ಧ್ಯೇಯವಾಗಿತ್ತು. ಅವರು ಉಪನಯನ ಕಾರ್ಯವನ್ನು ತಿರಸ್ಕರಿಸಿ ಗೃಹತ್ಯಾಗ ಮಾಡಿದ್ದೂ ಇದೇ ದೃಷ್ಟಿಯಿಂದ. ಒಂದು ಧರ್ಮ-ಯಜ್ಞಯಾಗಗಳಲ್ಲಿ ದೇವರನ್ನು ಕಾಣಲೆತ್ನಿಸಿದರೆ ಮತ್ತೊಂದು ಧರ್ಮ "ಜೀವಿಗಳಲ್ಲಿ ದೇವರನ್ನು" ಕಂಡಿತು. ಒಂದು ಮೇಲ್ಜಾತಿ, ಕೀಳ್ಜಾತಿಗಳ ತಾರತಮ್ಯಕ್ಕೆ ಪಕ್ಕಾಗಿದ್ದರೆ ಮತ್ತೊಂದು "ಕುಲವೊಂದೆ ಶರಣಂಗೆ" ಎಂದು ಸಾರಿತು. ದೇವರ ಪ್ರಸನ್ನತೆಗೆ ಜೀವದ ಬಲಿ ಸರಿಯೆಂದು ಒಂದು ಧರ್ಮ ತಿಳಿದಿದ್ದರೆ ಮತ್ತೊಂದು "ದಯೆಯಿಲ್ಲದ ಧರ್ಮವದೆಂತಯ್ಯ" ಎಂದು ಸವಾಲುಹಾಕಿತು. ಸಾಹಿತ್ಯಗ್ರಂಥಗಳನ್ನು ಓದುವ ಅಧಿಕಾರ, ಜ್ಞಾನಾರ್ಜನೆಯ ಸ್ವಾಮ್ಯ ಪಂಡಿತರಿಗೆ ಮತ್ತು ಮೇಲ್ಜಾತಿಗೆ ಮಾತ್ರ ಎಂದು ಒಂದು ಧರ್ಮ ಹೇಳಿದ್ದರೆ ಮತ್ತೊಂದು ಜಗತ್ತಿನ ಸಕಲ ಜೀವಿಗಳಿಗೂ ಜ್ಞಾನಾರ್ಜನೆಗೆ ಸಮಾನ ಅಧಿಕಾರವಿರಬೇಕೆಂದಿತು. ಅದೇ ದೃಷ್ಟಿಯಿಂದ ಕ್ಲಿಷ್ಟವಾದ ಶಾಸ್ತ್ರೀಯ ಸಾಹಿತ್ಯಕ್ರಮವನ್ನೂ ಸರಳ ಸುಂದರ ಕನ್ನಡ ಮಾರ್ಗಕ್ಕೆ ತಿರುಗಿಸಿತು. ಒಂದು ಕಾಯಕದಲ್ಲಿ ಮೇಲಂತಸ್ತು ಕೆಳಅಂತಸ್ತುಗಳಿಂದು ಸಮಾನತೆಯನ್ನು ಕಡಿದಾಗ ಮತ್ತೊಂದು

ಎಲ್ಲಾ ಸತ್ಯಶುದ್ಧ ಕಾಯಕಕ್ಕೂ ಸಮಾನ ಬೆಲೆಯನ್ನು ಗೊತ್ತುಪಡಿಸಿ ಸಮತಾವಾದವನ್ನು ಪುಷ್ಟೀಕರಿಸಿತು. ಇಂತಹ ಉದಾರದೃಷ್ಟಿ, ಉದಾತ್ತ ಗುಣಗಳಿಂದ ಬೀಜರೂಪದಲ್ಲಿದ್ದ ಹಿಂದೂಧರ್ಮವು ವಿಕಾಸಗೊಂಡು ಧರ್ಮದ ವಟವೃಕ್ಷವಾಗಿ ಮೆರೆಯಿತು.

ಕಾಯಕದ ಮಹತ್ವ, ಸ್ತ್ರೀಸ್ವಾತಂತ್ರ್ಯ, ಅಸ್ಪೃಶ್ಯೋದ್ಧಾರ ಕನ್ನಡ ಭಾಷಾಭಿವೃದ್ಧಿ, ಸಮತೆ ಮತ್ತು ಸ್ವಾತಂತ್ರ್ಯಗಳ ದೃಷ್ಟಿಯಿಂದ ಇನ್ನಿತರ ಮತೋದ್ಧಾರಕರು ಸಾಧಿಸಲಾಗದ ಕಾರ್ಯಗಳನ್ನು ಬಸವಣ್ಣನವರು ಸಾಧಿಸಿ ಯಶಸ್ವಿಯಾಗಿದ್ದಾರೆ. ಕೇವಲ ಪರೋಪದೇಶ ಪಾಂಡಿತ್ಯದಲ್ಲಿ ಪ್ರವೀಣರೆನಿಸದೆ ನಡೆದಂತೆ ನುಡಿದು, ನುಡಿಯಂತೆ ನಡೆದು ನಡೆನುಡಿಗಳೆರಡರಲ್ಲೂ "ಜೀವ ಶಿವ" ಸಾಮರಸ್ಯವನ್ನು ತಂದುಕೊಂಡು ಲೋಕಕಲ್ಯಾಣದ ಅಮೃತಮಯ ಗುಣಗಳನ್ನು ಮೆರೆದಿದ್ದಾರೆ. ಅವರ ವಚನಗಳಲ್ಲಿ ಧರ್ಮ ಮತ್ತು ಜೀವನೋತ್ಕರ್ಷಗಳ ರಹಸ್ಯವಿದೆ. ನಡೆನುಡಿ ಜೀವನ ಭಕ್ತಿಭಾವಗಳಲ್ಲಿ ಸ್ವರ್ಗವನ್ನು ಭೂಮಿಗಿಳಿಸುವ ಅಮೃತತ್ವವಿದೆ. ಪರಿಪೂರ್ಣತೆಯಿದೆ. ಆ ಮಹಾತ್ಮರ ಜಯಂತಿಯ ಈ ಶುಭಸಮಯದಲ್ಲಿ ಅವರ ಸದ್ಗುಣ ಮಂಗಳ ಮಯಮೂರ್ತಿ ಮತ್ತೊಮ್ಮೆ ನಮ್ಮ ಹೃದಯದಲ್ಲಿ ಮೂಡಿ ಬರಲಿ. ಎಂಟು ನೂರು ವರುಷಗಳ ಮುಸುಕಿನಲ್ಲಿದ್ದಂತೆ ಕಂಡುಬರುವ ಆ "ಕಲ್ಯಾಣದ ಕ್ರಾಂತಿ" ಇಂದು ಮತ್ತೊಮ್ಮೆ ಮೊಳಗಿ ವಿಶ್ವಕಲ್ಯಾಣವನ್ನು ಸಾಧಿಸಲಿ.

    

# ಆಧುನಿಕ ಶಿಕ್ಷಣ

[ ಲೇಖಕರು:– ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ.]

ವಿಶ್ವ ಸುಧಾರಣೆಗೆ ಶಿಕ್ಷಣವೇ ಮೂಲವಾದುದು. ಶಿಕ್ಷಣದಿಂದಲೇ ಇಂದು ಅನೇಕ ರಾಷ್ಟ್ರಗಳು ಅತಿ ಮುಂದುವರೆದು ಜಗತ್ತಿನ ಜನತೆಗೆ ಒಂದು ಅದ್ಭುತವಾದ ಶಕ್ತಿಯನ್ನು ತೋರಿದ್ದು ಈ ಶಿಕ್ಷಣದಿಂದಲೇ. ವಿಶ್ವದ ಆಗು ಹೋಗುಗಳೆಲ್ಲ ಕೇವಲ ಶಿಕ್ಷಣದಿಂದಲೇ ಮುಂದುವರೆದಿವೆ, ಮುಂದುವರೆಯುತ್ತಲಿವೆ. ಆದರೆ ನಮ್ಮ ಭರತಭೂಮಿಯು ಇದರ ವಿರುದ್ಧದೆಶೆಯಲ್ಲಿ ಸಾಗಲು ಕಾರಣಗಳು ಅನೇಕ ಉಂಟು. ಆ ಕಾರಣಗಳನ್ನು ಕುರಿತು ಪ್ರಾಸ್ತಾಪಿಸಿದ ಲೇಖವೇ ಈ "ಆಧುನಿಕ ಶಿಕ್ಷಣ"ದ್ದಾಗಿದೆ.

ನಮ್ಮ ಭರತಭೂಮಿಯು ಅನೇಕ ಶತಮಾನಗಳಿಂದಲೂ ಕಲಾ ಕೈಗಾರಿಕೆ, ವ್ಯಾಪಾರ ಉದ್ಯೋಗ, ರಾಜಕೀಯತೆ, ಅರ್ಥಶಾಸ್ತ್ರ ಪಾಂಡಿತ್ಯ ಮುಂತಾದವುಗಳಿಗೆ ಜಗತ್ತನ್ನೇ ಮೀರಿಸುವ ಒಂದು ಅದ್ಭುತ ರಾಷ್ಟ್ರವಾಗಿತ್ತು. ಆದರೆ ಆಯಾ ಜನತೆ ತಮ್ಮ ತಮ್ಮ ಉದ್ಯೋಗ ವ್ಯವಸಾಯವನ್ನು ಚನ್ನಾಗಿ ಅರಿತುಕೊಂಡು ಅದರಲ್ಲಿಯೇ ಅಭಿವೃದ್ಧಿಯನ್ನು ಹೊಂದಿ ಹೆಸರುಪಡೆದುಕೊಳ್ಳುವದು ಒಂದು ವಿಶಿಷ್ಟವಾದ ವಾಡಿಕೆಯಾಗಿತ್ತು. ಆದರೆ ಇಂದು ಈ ಯಾವ ವ್ಯವಸಾಯಗಳೂ ಚನ್ನಾಗಿ ನಡೆಯುದಿದ್ದದ್ದು ನಮ್ಮ ಈ ದೇಶದ ಶಿಕ್ಷಣವೇ ಮೂಲ ಕಾರಣವಾಗಿದೆ.

ಶಿಕ್ಷಣವು ಹೊಟ್ಟೆಯ ಪಾಡಿಗೋಸುಗವಲ್ಲ, ಜ್ಞಾನಾಭಿವೃದ್ಧಿಗಾಗಿ ಎಂದು ತಿಳಿದ ಜನ ವಿರಳ. ಇಂದು ಶಿಕ್ಷಣ ಪಡೆಯುವವರೆಲ್ಲ ಕೇವಲ ಇಲೇಕ್ಟ್ರಿಕ್ ಸಹಾಯದಿಂದ ಬೀಸುತ್ತಿರುವ ಗಾಳಿ, ಮೆತ್ತನೆಯ ಆಸನ, ಮಗ್ಗುಲಿನಲ್ಲಿ ಬೊಂಬೆಯಂತೆ ನಿಂತಿರುವ ಸಿಪಾಯಿ, ವೆಚ್ಚಕ್ಕೆ ಇತರ ಕೂಲಿಕುಂಬಳಿ ಮಾಡಿ ಬೆವರು ಸುರಿಸುವವರಿಗಿಂತಲೂ ಹೆಚ್ಚು ಸಂಬಳ ಇಂತಹ ನೌಕರಿಗಳಿಗಾಗಿ. ಹೀಗಿದ್ದ ಸಮಯದಲ್ಲಿ ಅನೇಕ ಉದ್ಯೋಗಗಳು ನಾಶವಾಗದೆ ಬಿಡಬಹುದೇ ? ಇಂದು ಕೇವಲ ಒಂದೇ ಒಂದು ಉದ್ಯೋಗವನ್ನು ಪರಿಶೀಲಿಸೋಣ. ಶಿಂಪಿಗರ ಉದ್ಯೋಗವು ಎಷ್ಟೊಂದು ಕನಿಷ್ಟಮಟ್ಟಕ್ಕೆ ಇಳಿದಿದೆ ಎಂಬುದು

ಸರ್ವರೂ ತಿಳಿದ ಸಂಗತಿಯೇ ಆಗಿದೆ. ಇದಕ್ಕೆ ಕಾರಣವಾದರೂ ಇಂದಿನ ಶಿಕ್ಷಣ ಹಾಗು ಸರಕಾರವೇ ಕಾರಣ. ಇಂದು ಆ ಉದ್ಯೋಗವನ್ನು ಬ್ರಾಹ್ಮಣ ಮೊದಲ್ಗೊಂಡು ಅಂತ್ಯಜರ ವರೆಗೆ ಸರ್ವರೂ ಆ ವಿದ್ಯೆಯಲ್ಲಿ ವ್ಯಾಪಿಗಳಾಗಿದ್ದಾರೆ. ಹೀಗಾಗಿ ಆ ಉದ್ಯೋಗಸ್ಥರು ಎರಡನೆಯ ವಿದ್ಯೆಯನ್ನರಿಯದೆ ದೀನರಾಗಿ ಕಾಲ್ಕಳೆಯುತ್ತಿದ್ದಾರೆ. ಒಂದು ವೇಳೆ ಆ ಉದ್ಯೋಗವನ್ನು ಬಿಟ್ಟು ಬೇರೆ ಇನ್ನಾವ ಉದ್ಯೋಗವನ್ನಾದರೂ ಮಾಡಬಹುದು. ಆದರೆ ಇಂದಿನ ಶಿಕ್ಷಣಾಸುರ ಎಲ್ಲ ಉದ್ಯೋಗದಲ್ಲಿಯೂ ವ್ಯಾಪಿಸಿದ್ದಾನೆ. ಹೀಗಾಗಿ ಸರ್ವ ಜನತೆಯೂ ದೀನ ದರಿದ್ರರಾಗಿ ಕಾಲ್ಕಳೆಯುವ ಅವಸ್ಥೆಯುಂಟಾಗಿದೆ. ಇಂದು ಸರ್ವರಿಗೂ ಸರ್ವ ಉದ್ಯೋಗಗಳನ್ನು ಕಲಿಸಲು ಕೋಟ್ಯಾನುಕೋಟಿ ಹಣ ವೆಚ್ಚ ಮಾಡಿ ಸುಂದರ ಸುಂದರವಾದ ಕಾಲೇಜುಗಳ ಕಟ್ಟಡಗಳೂ, ಇನ್ನಿತರ ಯಂತ್ರ ಸಾಮಗ್ರಿಗಳೂ ಮುಂತಾದವುಗಳಿಗೆ ಸರಕಾರವು ವಿಪರೀತ ಹಣ ವೆಚ್ಚಮಾಡಿದೆ. ಈ ಹಣ ವೆಚ್ಚಮಾಡಿದುದು ನಿರುದ್ಯೋಗ ನಿವಾರಣೆಗಲ್ಲ, ಪರಿಶ್ರಮಿಸಿ ಬಳಲುವದಕ್ಕಾಗಿ. ಇಂದಿನ ಶಾಲೆಕಾಲೇಜುಗಳಲ್ಲಿ ಬಡಿಗತನ, ಕಂಬಾರಿಕೆ, ಕುಂಬಾರಿಕೆ, ನೇಕಾರಿಕೆ ಮುಂತಾದವುಗಳನ್ನು ಕಲಿಸಲ್ಪಡುತ್ತಿವೆ. ಆದರೆ ಇನ್ನುಳಿದುದು ನಾವದಿಗರ ಧಂದೆ. ಅದುವಾದರೂ ಇನ್ನು ಕೆಲವೇ ದಿನಗಳಲ್ಲಿ ಶಾಲೆ ಕಾಲೇಜುಗಳಲ್ಲಿ ಶಿಕ್ಷಣ ಸಿಗಬಹುದಾಗಿದೆ.

"ವಿನಾಶಕಾಲೇ ವಿಪರೀತ ಬುದ್ಧಿ" ಎಂಬಂತೆ ಈ ಮೇಲೆ ತಿಳಿಸಿದ ಅನೇಕ ಉದ್ಯೋಗಗಳು ಯಾವ ಸುಧಾರಣೆಯ ರೂಪ ತಾಳಿವೆ? ಎಷ್ಟೊಂದು ಜನತೆ ಅದರಲ್ಲಿ ಪ್ರವೀಣರಾಗಿ ಸುಖದಿಂದ ಬಾಳಿದ್ದಾರೆ? ಆ ಉದ್ಯೋಗ ಕಲಿತು ಸರ್ಟಿಫಿಕೆಟ್ಟು ಕೂಡಹಾಕಿ, ಲಂಚಕೊಟ್ಟು ಮಾಸ್ತರರಾದವರೇ ಸುಖಿಗಳಾಗಿದ್ದಾರೆ ಹೊರತು ಬಡಜನರ ಬಳಲಿಕೆ ಬಗೆಯುವವರಾರೂ ಇಲ್ಲ. ಹಸಿದವರ ಪಾಡು ಹಸಿಯದವರಿಗೇನು ಗೊತ್ತು ಎಂಬಂತಾಗಿದೆ. ಈ ಎಲ್ಲ ವಿಚಾರಗಳನ್ನು ಸರಕಾರವು ವಿಚಾರಿಸತಕ್ಕದ್ದಾಗಿದೆ.

ಇಂದಿನ ಶಿಕ್ಷಣಕ್ಕೆ ವೆಚ್ಚವಾದ ಹಣದ ಎಣಿಕೆಯನ್ನು ದೊಡ್ಡ ದೊಡ್ಡ ಪದವೀಧರ ಮಂತ್ರಿಗಳು ಆಯಾ ದೇಶಗಳಲ್ಲಿ ಸಂಚರಿಸಿ ಮಾನಪತ್ರ, ಪುಷ್ಪಮಾಲೆಗಳನ್ನು ಸ್ವೀಕರಿಸಿದ ಆನಂದದಲ್ಲಿ ಹೇಳುವದೊಂದು ರೂಢಿಯ ಮಾತಾಗಿದೆ. ಇದನ್ನೆಲ್ಲ ಕೇಳಿದ ಜನ ಅಚ್ಚರಿಗೊಂಡು ಹರುಷಿತರಾಗಿ ಅವರ ನಾಮಕರಣವನ್ನು ಉಚ್ಚರಿಸಿ, ಚಪ್ಪಾಳೆತಟ್ಟಿ ಜಯಜಯಕಾರ ಮಾಡುವ

ದುಂಟು. ಇದಿರು ಯಾವದಾದರೊಂದು ಪ್ರಶ್ನೆ ಕೇಳಲು ಬರುವಂಥ ಜನತೆಗೆ ಆಸ್ಪದವಿಲ್ಲ; ಮೇಲಾಗಿ ಬಂದ ಅತಿಥಿಗಳಿಗೆ ವೇಳೆಯೂ ಇರುವದಿಲ್ಲ. ಹೀಗಾಗಿ ಹಲವು ಜನ ಮುಖಂಡರು ಮೇಲಿನವರು ಮೇಲೆಯೇ ಏರುತ್ತ ಲಿದ್ದಾರೆ. ಇತ್ತ ಆಯಾ ಮೂಲೋದ್ಯೋಗಗಳ ಮೇಲೆ ಹೊಟ್ಟೆಹೊರೆದು ಕೊಳ್ಳುವವರು ಎಷ್ಟು ಜನ ಇಂದು ಹೊಟ್ಟೆಗಿಲ್ಲದೆ ಸಾಯುತ್ತಿರುವರೆಂಬುದೂ ಹೀಗಾಗಲು ಕಾರಣವೇನೆಂಬುದನ್ನು ಅರಿಯದವರೇ ಆಗಿರಬಹುದು ಉದ್ಯೋಗ ವ್ಯವಸಾಯಗಳು ನಾಶವಾದರೆ ದೇಶವೇ ನಾಶವಾದಂತೆ. ಆ ಪರಿಸ್ಥಿತಿಯಲ್ಲಿ ನಾವಿಂದು ಕಾಲಕಳೆಯುತ್ತಿರುವದು ನಮ್ಮ ಅಜ್ಞಾನತನವೇ ಸರಿ.

ಇಲ್ಲಿ ಇನ್ನೊಂದು ಪ್ರಶ್ನೆಯನ್ನು ವಿಚಾರಿಸೋಣ. ಒಬ್ಬ ಬಾಲಕ ತನ್ನ ತಂದೆ ಮುತ್ತಾತರಿಂದ ನಡೆಯುತ್ತ ಬಂದ ಉದ್ಯೋಗವನ್ನು ಚಿಕ್ಕಂದಿ ನಿಂದಲೇ ನೋಡುತ್ತ ಸರ್ವವನ್ನೂ ಅರಿತವನಾಗಿ ಅದಕ್ಕಿಂತಲೂ ಹೆಚ್ಚು ಸುಧಾರಣೆಯನ್ನು ಆ ಉದ್ಯೋಗದಲ್ಲಿ ಆತನು ಹೊಂದುತ್ತಾನೆ. ಆದರೆ "ತೊಗಲಲ್ಲೇನು ಬಲ್ಲ ತಿಮ್ಮಣ್ಣ" ಎಂಬಂತೆ ಆ ಯಾವ ದೃಶ್ಯವನ್ನೇ ಕಾಣದ, ಅರ್ಧ ಬಾಲ್ಯ ತೀರಿದ ಮಕ್ಕಳಿಗೆ ಆ ಅರಿಯದ ಉದ್ಯೋಗ ಕಲಿಸಿದರೆ ಆ ಉದ್ಯೋಗ ಆತನಿಗೆ ಬರಬಹುದೇ? ಕಲಿಸಿದ ಗುರುಗಳಾದರೂ ಅವರೇ. ಕೇಳುವದೇನು? ಪರೀಕ್ಷೆಯಲ್ಲಿ ಹಾಗೂ ಹೀಗೂ ಪಾಸಾಗಿ ಮುಂದೆ ಹಲವು ದಿವಸ ಅಂದರೆ ವಯಸ್ಸಿನ ನಿರ್ಬಂಧದ ವರೆಗೆ ತಾವು ಕಲಿತ ಶಿಕ್ಷಣದ ಶಿಕ್ಷಕ ಜಾಗೆಗಾಗಿ ನೂರಾರು ರೂಪಾಯಿ ಸಾಲಮಾಡಿಯಾದರೂ ವೆಚ್ಚಮಾಡಿ, ಹಲವರಕಾಲಿಗೆರಗಿದಲ್ಲಿ ನೌಕರಿ ಸಿಕ್ಕರೆ ಆತನ ಪುಣ್ಯ. ಇಲ್ಲದಿದ್ದರೆ ಅನಿವಾರ್ಯ ಪಕ್ಷಕ್ಕೆ ತಾವು ಕಲಿತ ಉದ್ಯೋಗ ಪ್ರಾರಂಭಿಸುವದುಂಟು. ಆದರೆ ಆದಿಯಿಂದಲೂ ಆಯಾ ಉದ್ಯೋಗಗಳನ್ನು ಮಾಡುತ್ತ ಬಂದಿರುವ ಜನ ಇನ್ನೂ ಅಲ್ಪ ಪ್ರಮಾಣದಲ್ಲಿಯಾದರೂ ಇರುವದರಿಂದ ಈ ಅರ್ಧ ಮರ್ಧ ಕಲಿತ ಕಾಲೇಜಿನ ಜನರ ಆಟವು ನಡೆಯದಾಗಿ ಒಬ್ಬರಿಗಿಂತ ಮತ್ತೊಬ್ಬರು ಕಡಿಮೆ ಬೆಲೆಯಲ್ಲಿ ಕೆಲಸು ಮಾಡಿಕೊಟ್ಟರೇ ಮಾತ್ರ ಅರ್ಧಮರ್ಧವಾದರೂ ಹೊಟ್ಟೆ ಹೊರಕೊಳ್ಳಬಹುದು. ಅದರಲ್ಲಿಯೂ ಕಲೆಯನ್ನು ತೋರಿಸಿದರೆ ತೀರೇಹೋಯಿತು ಕುಡಿಯಲು ಗಂಜಿ ಸಹಿತ ಸಿಗದಂತಾಗುವದೆಂದು ಹೇಗೆ ಆಗಲಿ ಒಂದು ರೂಪು ಕೊಟ್ಟು ಮಾಡುವದು ಸ್ವಾಭಾವಿಕವಾಗಿದೆ. ಹೀಗಾಗಿ ಇಂದಿನ ಶಿಕ್ಷಣದಿಂದಲೇ ಕಲೆಯ ಕೊಲೆಯಾಗಿದೆ.

ಶಿಕ್ಷಣವು ಮಾನವನನು ಅಂತ್ಯದ ವರೆಗೆ ಕಲಿತರೂ ತೀರದು. ಇಂದು ಬಿ. ಏ. ಎಲ್. ಎಲ್. ಬಿ. ಗಳಾಗಿ ಅನೇಕ ಜನ ವಕೀಲೀ ವ್ಯವಸಾಯು ನಡಿಸಿದ್ದಾರೆ. ಆದರೆ ಈ ಮೊದಲು ಅವರಿಗಿದ್ದ ಸ್ಥಾನಮಾನ ಹಾಗು ಸೌಕರ್ಯ ಇಂದು ಇಲ್ಲದಿರಲು ಹೆಚ್ಚು ಹಣಗಳಿಸುವ ಉಪಾಯವೇ ಕಾರಣ. ಜಿಲ್ಲೆಗೊಬ್ಬ ಕಲೇಕ್ಟರನಿರುತ್ತಾನೆ. ಆದರೆ ಆ ಕಲೇಕ್ಟರ ಜಾಗೆಯ ವ್ಯಾಪ್ತಿಗಾಗಿ ಹಾಗು ಇನ್ನಿತರ ಪ್ರಮುಖ ಜಾಗೆಗಳಿಗಾಗಿ ಸಾವಿರಾರು ಕಲಿತ ಜನ ಕಂಗೆಟ್ಟು ಅಲೆಯುತ್ತಿರುವದು ಈ ಶಿಕ್ಷಣದಿಂದಲೇ. ಲಂಚುಗುಳಿತನ, ಕಳವು, ಅತ್ಯಾಚಾರ, ಮೋಸುಗಾರಿಕೆ ಮುಂತಾದವುಗಳು ಜನಿಸಿದುದು ಇಂದಿನ ಇಂಥ ಶಿಕ್ಷಣದಿಂದಲೇ.

ಶಿಕ್ಷಣರಂಗದಲ್ಲಿ ಹಳ್ಳಿಗಳಿಗಿಂತಲೂ ಪಟ್ಟಣಗಳಲ್ಲಿ ಮಿತಿಮೀರಿ ದುರಾವಸ್ಥೆ ವ್ಯಾಪಿಸಿದೆ. ಶಿಕ್ಷಕರಿಗೆ ಪಟ್ಟಣದ ಸೊಬಗಿನ ಉಡುಪು ತೊಡಪು, ಸಿನೇಮಾ ನಾಟಕ ಮುಂತಾದವುಗಳಿಗಾಗಿ ಸಂಬಳ ಸಾಲದೆ ಬಡಮಕ್ಕಳಿಂದ ಹಣ ಸುಲಿಯುವ ಒಂದು ಉಪಾಯ ಕಲಿತಿದ್ದಾರೆ. ಶಾಲೆಯ ವೇಳೆಯಲ್ಲಿ ಮಕ್ಕಳಿಗೆ ಮನದಟ್ಟಾಗುವಂತೆ ಕಲಿಸದೆ, ಮಿಕ್ಕ ವೇಳೆಯಲ್ಲಿ ತಮ್ಮ ಮನೆಯಲ್ಲಿಯಾಗಲಿ, ಬಾಲಕರ ಮನೆಯಲ್ಲಾಗಲಿ ಶಿಕ್ಷಣ ಕಲಿಸಿ ಹಣ ಪಡೆಯುವದೊಂದು ರೂಢಿಯೇ ಆಗಿದೆ. ಯಾವನೇ ಒಬ್ಬ ಬಡವಿದ್ಯಾರ್ಥಿ ಹಣ ಕೊಡಲಿಕ್ಕಾಗದಿದ್ದಲ್ಲಿ ಶಾಲೆಯಿಂದ ಹೊಂತಳ್ಳುವ ಇಲ್ಲವೇ ಪರೀಕ್ಷೆಯಲ್ಲಿ ನಪಾಸು ಮಾಡುವ ಬೆದರಿಕೆ ಹಾಕುವದುಂಟು. ಇದರಿಂದ ಬಡ ಬಾಲಕರು ತಮ್ಮ ಪಾಲಕರಿಗೆ ತೊಂದರೆಕೊಟ್ಟು ಕೂಲಿಕುಂಬಳಿಮಾಡಿ ರಕ್ತಸುರಿಸಿದ ಪ್ರತಿಫಲದ ಹಣ ಹೀರುವ ನರರಕ್ಕಸರಾಗಿ ಹಲವರು ಬಾಳುವೆ ಸಾಗಿಸಿದ್ದಾರೆ. “ತನ್ನ ಹೊಟ್ಟೆಯ ಪಾಡಿಗಾಗಿ ಮಾತ್ರ ವಿದ್ಯೆ ಕಲಿಸುವವನು ಗುರುವಲ್ಲ, ಅವನೊಬ್ಬ ವ್ಯಾಪಾರಿ” ಎಂದು ಮಹಾಕವಿ ಕಾಳಿದಾಸನು ಹೇಳಿದುದನ್ನು ಪ್ರತಿಯೊಬ್ಬ ಶಿಕ್ಷಕರು ಅರಿತು ಆಚರಿಸಬೇಕು.

ಚಲನಚಿತ್ರಗಳು ಶಿಕ್ಷಣಕ್ಷೇತ್ರಕ್ಕೆ ಅಪಾರ ಸಹಾಯವನ್ನು ನೀಡಬಹುದಾಗಿವೆ. ಆದರೆ ಇದು ಇಂದು ಜನಮನಸೆಳೆಯುವ, ಉಲ್ಲಾಸ ಹೊರಸೂಸುವಂಥದಾಗಿದೆ. ಐತಿಹಾಸಿಕ, ಪೌರಾಣಿಕ ಚಿತ್ರಗಳನ್ನು ಹೊರಡಿಸುವ ನಿರ್ಮಾಪಕರು ಧೈರ್ಯಶಾಲಿಗಳಾಗಿರಬೇಕಾದ ಪ್ರಸಂಗವು ಇಂದು ಬಂದೊದಗಿದೆ. ಹೀಗಾಗಿ ಅಂಥ ನೈತಿಕ ಹಾಗು ಭಕ್ತಿಯ ಚಿತ್ರಗಳು ಬೆಳಕಿಗೆ

ಬಾರದಾಗಿವೆ. ಇದರಂತೆ ಅಂಥ ಗ್ರಂಥಗಳ ಗತಿಯೂ ಹೀಗಾಗಿದೆ. ಇದರಿಂದ ತಿಳಿದುಬರುವದೇನೆಂದರೆ, ಇನ್ನು ಹಲವು ವರುಷಗಳಲ್ಲಿ ಧರ್ಮಗಳು ನಾಶಹೊಂದಿ ಅಧರ್ಮವು ನೆಲೆವೀಡಾಗಿ ಅನಾಗರಿಕತೆಯು ತಾಂಡವವಾಡಲು ಸಂದೇಹವಿಲ್ಲ.

## ಇಂದಿನ ರಾಜಕೀಯ ಮಾರ್ಗ

ಪ್ರಜಾಸತ್ತಾತ್ಮಕ ರಾಷ್ಟ್ರ ನಿವಾಸಿಗಳಾದ ನಮ್ಮೆಲ್ಲರಿಗೂ ಸರಿಸಮಾನ ಹಕ್ಕು ಬಾಧ್ಯತೆಗಳು ಪ್ರಾಪ್ತವಾಗಿವೆ. ನಮ್ಮನ್ನಾಳುವ ಜನರನ್ನು ನಾವೇ ಆರಿಸಿ ಕಳಿಸುವವರಾಗಿದ್ದೇವೆ. ಆದರೆ ಆರಿಯದೆ ಆದ ಮಿತಿಮೀರಿದ ವೆಚ್ಚದಿಂದಲೂ ಕಲಾಕೈಗಾರಿಕೆ ನಿಂತಿದ್ದರಿಂದಲೂ ರಾಷ್ಟ್ರದ ಆರ್ಥಿಕ ಪರಿಸ್ಥಿತಿ ಕೆಟ್ಟಿರುವ ಮೂಲಕ ಆಯಾ ಪ್ರಾಂತಗಳಿಗೆ ಆಗಬೇಕಾದ ಕೆಲಸಗಳು ಆಗದಿರುವದು ಸ್ವಾಭಾವಿಕ. ಆದರೆ ಓಟಿಗೆ ನಿಲ್ಲುವ ಹಲವು ಉಮೇದವಾರರು ನಾನು ಹಾಗೆ ಮಾಡುತ್ತೇನೆ, ಹೀಗೆ ಮಾಡುತ್ತೇನೆ ಎಂದೂ, ಇನ್ನು ಕೆಲವರು ಹಲವರ ಟೀಕೆ ಮಾಡಿಯೂ, ನಟನೆ ಮಾಡಿ ಅತ್ತೂ ಕರದು ಜನತೆಯಿಂದ ಓಟು ಪಡೆದುಕೊಳ್ಳುವದುಂಟು. ಮುಂದೆ ಆ ಕೆಲಸಕ್ಕೆ ಅರ್ಹರಲ್ಲದ ಹಾಗು ವಿಷಮ ಪರಿಸ್ಥಿತಿಯಿಂದ ಕೆಲಸವಾಗದ್ದರಿಂದ ತಾವಿರುವ ಊರನ್ನು ಹಾಗೂ ಜಿಲ್ಹೆಯನ್ನು ಬಿಟ್ಟು ಬೇರೆಡೆಗೆ ತೆರಳುವದುಂಟು. ಹೀಗಾಗಿ ಜನತೆಯು ಎಂಥವರಿಗೆ ಓಟು ಕೊಡಬೇಕೆಂಬುದನ್ನರಿಯದೇ ಮಾತು ಬಲ್ಲ, ಇಲ್ಲವೆ ಮಾತು ಕಲಿತ ನಟನೆ ಮಾಡುವ ನಟನಿಗೇ ಓಟು ಕೊಡುವದರಿಂದ ಕಾಯಿದೆ ಬಲ್ಲ ಕಲಿತ ಜನ ಹಿಂದುಳಿದಿದ್ದಾರೆ. ಹೀಗಾಗಿ ಮೇಲ್ಕಟ್ಟದ ಜನತೆಯಲ್ಲಿ ಬಹು ಜನ ಸ್ವಾರ್ಥರೂ, ಅಲ್ಪ ವಿದ್ಯಾವಂತರೂ ಆಗಿದ್ದಾರೆ. ಹೀಗಿರುವದರಿಂದ ಇಡೀ ದೇಶವೇ ವಿನಾಶದ ದಾರಿಯತ್ತ ಸಾಗಿದೆ. ಇಂಥ ದಿವ್ಯವಾದ ಅಧಿಕಾರವನ್ನು ಸರಕಾರವು ಜನತೆಗೆ ನೀಡಬಾರದಿತ್ತು.

ಬಂಡವಳಶಾಹಿಗಳಿಂದ ಅನೇಕೋ ವ್ಯವಸಾಯಗಳಾಗುತ್ತವೆ. ಆದರೆ ಅವರಿಗೂ ಪ್ರೋತ್ಸಾಹವಿಲ್ಲ. ದುಡಿಮೆಗಾರರಿಗಂತೂ ಎಂದೋ ಪ್ರೋತ್ಸಾಹವಿಲ್ಲ. ಕೇವಲ ದಿನಕ್ಕೊಂದು ಕಾಯಿದೆ ಮುಂದು ಮಾಡಿ ಇತ್ತ ದುಡಿಮೆಗಾರರಿಗೂ ಅತ್ತ ಬಂಡವಳದಾರರಿಗೂ ಕತ್ತಿನ ಮೇಲೆ ನೊಗಹೂಡಿ ಮುಂದೆ ಸಾಗಿದೆ ಇಂದಿನ ರಾಜಕೀಯ. ಕಾಯಿದೆಗಳು ಸ್ಥಿರವಾಗಿ ಸಾಗದಿರುವದು ಅಜ್ಞಾನದ ಮೂಲಕವೆಂದರೆ ತಪ್ಪಾಗದು. ಕಾಯಿದೆಯು ಕಠೋರವಾಗಿರ

ಬೇಕು ನಮ್ಮ ರಾಜ್ಯವೆಂದು ನಮ್ಮ ಜನತೆಗೆ ಬೇಕಾದಂತೆ ನಡೆಯಲು ನುಡಿಯಲು ಅಧಿಕಾರವಿರಬಾರದು. ಹಿಂದೆ ಆಳಿ ಹೋದ ಬ್ರಿಟಿಷರು ಭಾಷಣ ಕಾರರು ನುಡಿದ ನುಡಿಯನ್ನು ಪರಿಶೀಲಿಸಿ ನಡೆಯುತ್ತಿದ್ದರು. ಹೀಗಾಗಿ ಭಾಷಣಕಾರರೆಲ್ಲರೂ ರಾಜಕಾರಣಬಲ್ಲವರೇ ಆಗಿದ್ದರು. ಆದರೆ ಈಗಿನ ಕಾಲಕ್ಕೆ ಹೆಚ್ಚಾಗಿ ರಾಜಕಾರಣ ಅರಿಯದವರೂ ಸ್ವಾರ್ಥಿಗಳೂ ಆದ ಜನ ಮುಂದೆ ಬರುತ್ತಿದ್ದಾರೆ. " ತುಂಬಿದ ಕೊಡ ತುಳುಕುವದಿಲ್ಲ " ಎಂಬಂತೆ ನುರಿತ ಜನ ಎಲ್ಲಿಯೋ ಮೂಲೆಗುಂಪಾಗಿದ್ದಾರೆ. ಹೀಗಿರುವಲ್ಲಿ ರಾಜಕಾರಣವು ಸುರಳಿತವಾಗಿ ಸಾಗಬಹುದೇ ?

ಬ್ರಿಟಿಷ ಸರಕಾರವು ನಮ್ಮ ದೇಶದಾಡಳಿತೆಯನ್ನು ಶಿಥಿಲಗೊಳಿಸಿದ ರೆಂದು ಅಪಪ್ರಚಾರ ಮಾಡುವದು ಶುದ್ಧ ತಪ್ಪು ತಿಳುವಳಿಕೆ. ಅವರಿಂದಲೇ ವಾಹನಸೌಕರ್ಯ ವಗೈರೆ ಅಭಿವೃದ್ಧಿಹೊಂದಿವೆ. ಅವರು ತಮ್ಮ ಬಂಡವಳ ದಾರ ವಿಜ್ಞಾನಿಗಳಿಂದ ಇಂಥ ದಿವ್ಯ ಕಾರ್ಯಗಳನ್ನು ಮಾಡಿಸಿ, ಇಂತಿಷ್ಟು ವರುಷ ಅವರು ಅದರ ಲಾಭ ಪಡೆದು ಮುಂದೆ ಸರಕಾರದ ವಶಕ್ಕೆ ಕೊಡ ಬೇಕೆಂಬ ನಿಯಮದಿಂದ ಆಯಾ ಉದ್ಯೋಗ ವ್ಯವಸಾಯಗಳನ್ನು ಅಭಿವೃದ್ಧಿ ಗೊಳಿಸಿ, ಇಂದು ಅದರ ಯಾವ ಹಕ್ಕನ್ನೇ ಇಟ್ಟುಕೊಳ್ಳದೆ ಬಿಟ್ಟು ಹೋಗಿದ್ದಾರೆ. ಅಂದ ಮೇಲೆ ಅವರನ್ನು ತೆಗಳುವದು ಶುದ್ಧ ತಪ್ಪಲ್ಲವೇ ?

ಈ ಸಮಯ ನಮ್ಮ ರಾಷ್ಟ್ರವು ಸ್ವಾತಂತ್ರ್ಯತೆ ಪಡೆದು ಹತ್ತು ವರುಷ ಮಿಕ್ಕುತ್ತ ಬಂದರೂ ಯಾವದೊಂದು ವ್ಯವಸಾಯ ಸುರಳಿತ ಸಾಗಿದೆ ? ಯಾವದರಿಂದ ಲಾಭವಾಗಿದೆ ? ಇದ್ದ ಫೂಲುಗಳು ಒಂದೊಂದಾಗಿ ಬಿದ್ದು ನಾಶಹೊಂದುತ್ತಲಿವೆ. ಅದರಿಂದ ಅಸಂಖ್ಯ ಜನರ ಮರಣಕ್ಕೆ ಹಾಗು ಹಾನಿಗೆ ಇಂದಿನ ಸರಕಾರ ಗುರಿಯಾಗಿದೆ. ಆದರೆ ಇದೇ ಹಾನಿಯು ಬ್ರಿಟಿಷರ ಕಾಲಕ್ಕೆ ಸಂಭವಿಸಿದ್ದರೆ ಅವರ ಮೇಲೆ ದೊಡ್ಡ ಆರೋಪವೇ ಬರುತ್ತಿತ್ತಲ್ಲವೇ ? ಇದ್ದುದನ್ನು ಸುರಕ್ಷಿತವಾಗಿ ಕಾಪಾಡಿಕೊಳ್ಳಲಾಗದವರಿಗೆ ಇನ್ನು ಮುಂದೆ ಸುಧಾರಣೆಹೊಂದುವ ಬಗೆಯೆಂತು ?

ಇಂದು ವೆಚ್ಚ ಬಹಳವಾಗಿದೆ. ಆದರೆ ಅಧಿಕಾರ ಕಡಿಮೆಯಾಗಿದೆ. ಯಾರ ಕೈಯ್ಯಲ್ಲಿಯೂ ಮುಖ್ಯಾಧಿಕಾರವಿಲ್ಲದಂತಾಗಿದೆ. ಹಾಗು ಅದರಂತೆ ಕಾಯಿದೆಗಳಾಗಿವೆ. ಹೆಸರಿಗೆ ಮಾತ್ರ ಕಲೇಕ್ಟರ, ಎಮ್. ಎಲ್. ಎ., ಎಂ. ಪಿ. ಗಳು. ಆದರೆ ಅವರಿಗಾದರೂ ಸ್ವತಂತ್ರತೆಯ ಯಾವ ಹಕ್ಕುಗಳು

ಇವೆ ? ಈ ಹಿಂದೆ ಬ್ರಿಟಿಷರ ಕಾಲದ ಅನೇಕ ದೊಡ್ಡ ದೊಡ್ಡ ಅಧಿಕಾರಿಗಳು ಮಹತ್ಕಾರ್ಯಗಳನ್ನು ಮಾಡಿದ್ದರೆಂಬುದಕ್ಕೆ ಲಾರ್ಡ ವಿಲಿಯಂ ಬೆಂಟಿಂಕ ಮುಂತಾದವರ ಇತಿಹಾಸವೇ ಕಾರಣವಾಗಿದೆ. ಆದರೆ ಇಂದು ಶಿಕ್ಷಣದಿಂದ ಮೊದಲ್ಗೊಂಡು ರಾಜಕೀಯದ ವರೆಗೂ ದುರಾವಸ್ಥೆಯುಂಟಾಗಿದೆ. ಇದಕ್ಕೆ ಕಾರಣವಾದರೂ ಶಿಕ್ಷಣವಲ್ಲವೇ ?

ಈಗಿನ ಕಾಲಕ್ಕೆ ಶಿಕ್ಷಣಕ್ಕೆ ಹಾಗೂ ಕೂಲಿಕಾರರಿಗೆ, ಕಲಾಕಾರರಿಗೆ ಮಾನ್ಯತೆಯೇ ಇಲ್ಲ. ಆದುದರಿಂದಲೇ ಪರೀಕ್ಷೆಯ ಪೇಪರುಗಳು ಪರೀಕ್ಷೆಗಿಂತಲೂ ಪ್ರಥಮದಲ್ಲಿ ಹಲವರ ಪ್ರಯತ್ನದ ಫಲವಾಗಿ ದೊರಕಿ, ಸರ್ಟಿಫಿಕೆಟ್ ಜೋಡನೆಗೆ ಕಾರಣವಾಗಿದೆ. ಸರ್ಟಿಫಿಕೆಟ್ಟು ಈಗಿನ ಕಾಲದ ಸಾಕ್ಷಾತ್ ಲಕ್ಷ್ಮಿಯು. ಯಾವ ಪ್ರಕಾರವೇ ಆಗಲಿ ತೇರ್ಗಡೆ ಹೊಂದಿದವನೇ ಚಾಣಾಕ್ಷನೆಂದೆನಿಸಿಕೊಳ್ಳುವ ಈ ಸಮಯದಲ್ಲಿ ಹಗಲಿರುಳೂ ದುಡಿದು ದುಗ್ಗಾಣಿಗೆ ಕೈಚಾಚಲು ಯಾರಾದರೂ ಸಿದ್ಧರಾಗಬಹುದೇ ?

ನೇಕಾರರ ಗೋಳಂತೂ ಪರಮೇಶ್ವರನೇ ಬಲ್ಲ. ಇದರಂತೆಯೇ ಸರ್ವ ಕೂಲಿಕಾರರ ಗೋಳಾಗಿದೆ. ಒಟ್ಟಿನಲ್ಲಿ ತಿಳಿಯಬೇಕಾದರೆ, ಎಂದಿನ ವರೆಗೆ ನಮ್ಮ ದೇಶದ ಪರಿಶ್ರಮಿಗಳಿಗೆ ಸುಖವಿಲ್ಲವೋ ಅಲ್ಲಿಯ ವರೆಗೆ ನಮ್ಮ ದೇಶದ ಈ ದಾರಿದ್ರ್ಯವು ತಪ್ಪಿದ್ದಲ್ಲ.

.... .... .... .... ....

# ಆಶೆಯ ಮೂರು ರೂಪಗಳು.

[ ಲೇಖಕರ— ಶ್ರೀ ನಾ. ಮ "ಸಿದ್ಧರಾಮು" ನಾಗರಹಾಳು. ]

ಆಶೆಯು ಮೂರು ರೂಪಗಳು ಯಾವುವು ? ಆಶೆಯು ಮೂರು ರೂಪಗಳು, (೧) ಹೊನ್ನು, (೨) ಹೆಣ್ಣು, (೩) ಮಣ್ಣು. ಆಶೆಯು ಮುಖ್ಯವಾಗಿ ಈ ಮೂರು ರೂಪಗಳಿಂದ ಮನುಷ್ಯನನ್ನು ಆವರಿಸುವುದು. ಆಶೆಯೆಂಬ ಮಾಯಾಜಾಲದಲ್ಲಿ ಮಾನವನು ಸಿಕ್ಕಿಕೊಂಡು ತೊಳಲಿ ಬಳಲುವನು. ಮನವೆಂಬ ಮರ್ಕಟವು ಮನುಷ್ಯನನ್ನು ಚಪಲಚೇಷ್ಟೆಗಳಿಗೆ ಗುರಿ ಮಾಡುವುದು. ಹೊನ್ನೆಂದರೆ ಬರಿಯ ಭಂಗಾರವೆಂದರ್ಥವಲ್ಲ. ಹೊನ್ನಿನ ಅರ್ಥದಲ್ಲಿ ಧನ-ಧಾನ್ಯಗಳು ಸೇರಿಕೊಂಡಿವೆ. ಸೃಷ್ಟಿ ಮೊದಲುಗೊಂಡು ಮಾನವನ ಶರೀರವು ಎಂದಾದರೊಂದುದಿನ ಅಳಿದು ಹೋಗಲೇಬೇಕು. ಅಂದಮೇಲೆ 'ತಾನೇ' ಸುಖವಾಗಿ ಜೀವಿಸುವುದು ಸ್ಥಿರವಲ್ಲವೆಂದಮೇಲೆ ಈ ಮಾನವನಿಗೆಷ್ಟೇಕೆ ಆಶೆ ?

" ಕಾಂಚನವೆಂಬ ನಾಯಿ ನೆಚ್ಚಿ ನಿಮ್ಮನು ನಾನು ಮರೆದೆಯ್ಯಾ
ಕಾಂಚನಕ್ಕೆ ವೇಳೆಯಲ್ಲದೆ ನಿಮ್ಮ ಪೂಜೆಗೆ ವೆಳೆಯಿಲ್ಲ.
ಹಡಕಿಗೆ ಮೆಚ್ಚಿದೆ ಸೊಣಗನು ಅಮೃತದ ರುಚಿಯು
ಬಲ್ಲುದೆ ಕೂಡಲಸಂಗಮದೇವಾ ? "

"ಶ್ರೀ ಭಗವಾನ್ ಬಸವಣ್ಣ"

ಮೇಲಿನ ಭಗವಾನ್ ಶ್ರೀ ಬಸವಣ್ಣನವರ ವಚನವು ಬಹಳ ಉತ್ಕೃಷ್ಟವಾಗಿದೆ. ಕಾಂಚನವೆಂಬ ನಾಯಿಯನ್ನು ಮೆಚ್ಚಿ ನಿಮ್ಮನ್ನು ಮರೆತೆನು. ಕಾಂಚನಕ್ಕೆ ಗಮನಕೊಡಲಿಕ್ಕೆ ಸಮಯವುಂಟು. ಆದರೆ ನಿಮ್ಮನ್ನು ಪೂಜಿಸಲಿಕ್ಕೆ ನನಗೆ ಸಮಯವಿಲ್ಲದಾಯಿತು. ಕೊಳೆತ ಮಾಂಸವನ್ನೇ ಮೆಚ್ಚಿದ ನಾಯಿಗೆ ಅಮೃತದ ರುಚಿಯು ಗೊತ್ತಾಗುವುದೇ ಕೂಡಲಸಂಗಮದೇವಾ? ಎಂಬ ಅಣ್ಣನವರ ವಚನದ ತಾತ್ಪರ್ಯವು ಬಹಳ ಸೂಕ್ತರೀತಿಯಲ್ಲಿದೆ. ಹೊನ್ನು ಮಾನವನಿಗೆ ಹುಚ್ಚು ಹಿಡಿಸುತ್ತದೆ. ಅಕಸ್ಮಾತ್ತಾಗಿ ಮನೆಯನ್ನು ಬಿಚ್ಚಿ ಕಟ್ಟಿಸುವಾಗ ಹೇರಳವಾದ ದ್ರವ್ಯ ಸಿಗುವುದುಂಟು. ಆ ಹೊನ್ನಿನ

ಗಟ್ಟಿಗಳನ್ನು ನೋಡಿದ ಕೂಡಲೇ ಎಷ್ಟೋ ಮಂದಿಗೆ ಹುಚ್ಚು ಹಿಡಿಯುವುದುಂಟು. ಅಂತಹದು ಪಾಪಿಯು ಪರಧನ. ಇನ್ನೂ ಹೆಣ್ಣು. "ಹೆಣ್ಣೆಂಬುದು ಕೇವಲ ಕುರುಡ ಪ್ರೇಮದ, ಕೇವಲ ಕರಣೇಂದ್ರಿಯ ತೃಪ್ತಿಯ ಮುದ್ದೆಯಲ್ಲ." ಕೇವಲ ಒಬ್ಬ ಮನುಷ್ಯ ಬಡಸ್ಥಿತಿಯಲ್ಲಿದ್ದಾಗ ದೇವರು ಕರುಣಪಟ್ಟು ಸ್ವಲ್ಪ ಉತ್ತಮಸ್ಥಿತಿಗೆ ಮಾರ್ಪಡಿಸಿದರೆ ಇನ್ನೂ ಸಾಹುಕಾರನಾಗಿ ಚಕ್ರಬಡ್ಡಿಯಲ್ಲಿ ಸಾಲಕೊಟ್ಟು ಬಡವರ ಬೆನ್ನೆಲುಬು ಬಾಗಿಸಿಬಿಡಬೇಕೆಂಬಾಶೆ ಹೋದ ಪಕ್ಕೆಯ ಹೊಲವೆಂದು ಊರಿನ ಎಲ್ಲ ಭೂಮಿಗಳು ತನ್ನವೇ ಆಗಬೇಕೆಂಬ ಆಶೆ. "ಭೂಮಿ ತನ್ನ ಸೊತ್ತೆಂದು ಹೇಳುವವನನ್ನು ನೋಡಿ ಭೂದೇವಿ ನಗುತ್ತಾಳೆ. ಕೃಪಣನನ್ನು ಕಂಡು ಧನನಗುತ್ತದೆ." ಸಣ್ಣಪರ್ಣ ಕುಟೀರದಲ್ಲಿರುವವನು ದೊಡ್ಡ ಬಂಗಲಿಯಾದರೆ ಚನ್ನಾಗಿರುತ್ತದೆಂಬಾಶೆ. ಬಂಗಲಿ ಆದರೆ ಅರಮನೆ ಇದ್ದಹಾಗೆ ಇದ್ದರೆ ಬಹಳ ಸೊಗಸಾಗಿರುತ್ತದೆಂಬಾಶೆ. ಬಂಗಲಿ ಆದರೆ ಅರಮನೆ ಇದ್ದಹಾಗೆ ಇದ್ದರೆ ಬಹಳ ಸೊಗಸಾಗಿರುತ್ತದೆಂಬಾಶೆ. ಬರಿಯ ಅರಮನೆಯೊಂದಿದ್ದರೆ ಸಾಲದು. ಅದರಲ್ಲಿ ತಕ್ಕ ಸುಂದರ ಯುವತಿಯರಿರಬೇಕೆಂಬಾಶೆ. "ಆಶೆಗೆ ತುದಿಯಿಲ್ಲ, ಆಕಾಶಕ್ಕೆ ನಿಚ್ಚಣಿಗೆಯಿಲ್ಲ" ಎಂಬ ಗಾದೆಯ ಮಾತಿನಂತೆ ಮಾನವನಿಗೆ ಎಲ್ಲಿಯ ವರೆಗೆ ಆಶೆ? ಅದಕ್ಕೆ ತುದಿಯೇ ಇಲ್ಲದ ಹಾಗೆ ಇದೆ. ಹಬ್ಬಗಳಿಗಾಗಿ ಕಾದು ಹಣ ಕೂಡಿಸಿಕೊಂಡು ಕಪಟತನದ ಮಾಯಾಜಾಲವನ್ನು ಬಡವರ ಮೇಲೆ ಎಸೆದು ಚಕ್ರಬಡ್ಡಿಯಲ್ಲಿ ಹಣ ಕೊಟ್ಟು ತಮ್ಮ ಕಟಜಾಲದಲ್ಲಿ ಸಿಕ್ಕಿಸಿಕೊಂಡು ಒದ್ದಾಡುವಂತೆ ಮಾಡುವರು. ಕಪಟವೆಂಬುದು ಯಾವಾಗಲೂ ಗಿಡ್ಡ ಕಂಬಳಿ. ಅದನ್ನು ಮುಖದ ಮೇಲೆಳೆದು ಕೊಂಡರೆ ಕಾಲ ಹೊರಹಣಕುತ್ತದೆ." ಪಾಪ ಬಡವರು ಹೊಟ್ಟೆಗೆ ಹಿಟ್ಟಿಲ್ಲದೆ, ಅರೆಮೈ ಮುಚ್ಚಿಕೊಳ್ಳಲಿಕ್ಕೂ ಸಹ ಚೂರು ಬಟ್ಟೆ ಇಲ್ಲದ ಸಮಯದಲ್ಲಿ ಆದೂ ಅಲ್ಲದಲೇ ಮನೆಯಲ್ಲಿ ಹೆಂಡರು ಮಕ್ಕಳು ಅನ್ನಾ...ಅನ್ನಾ...ಅನ್ನಾ ಎಂಬ ಕೊರಗಿನ ಕೂಗು ಕೇಳುವ ಸಮಯದಲ್ಲಿ ಆ ಬಡವನು ತನ್ನ ಹೆಂಡರ ಮಕ್ಕಳ ಗೋಳು ಕಣ್ಣತುಂಬ ನೋಡಲಾರದೆ ಅವರನ್ನು ರಕ್ಷಿಸುವುದಕ್ಕೋಸ್ಕರ ಸಾಹುಕಾರರ ಬಾಗಿಲು ಕಾದು ಅವರಿಂದ ಉತ್ಕೃಷ್ಟವಾದ ಚಕ್ರಬಡ್ಡಿಯಲ್ಲಿ ಸಾಲ ತೆಗೆದುಕೊಂಡು ಸಾಹುಕಾರರ ಸಾಲದ ಮಾಯಾ ಜಾಲದಲ್ಲಿ ಬೀಳುವುದೇನು ಆಶ್ಚರ್ಯಕರವಾದ ಸಂಗತಿ ಅಲ್ಲ.

ಇದುವರೆಗೆ ಹೇಳಲ್ಪಟ್ಟದ್ದು ಬಹಿರಂಗದ ಹೊನ್ನು, ಹೆಣ್ಣು, ಮಣ್ಣು ಗಳಿಗೆ ಸಂಬಂಧಿಸಿದೆ. ಈಗ ಅಂತರಂಗದ ವಿಷಯವೇನೆಂದರೆ ಹೊನ್ನು = ಜ್ಞಾನ, ಭಾವ. ಹೆಣ್ಣು = ಬುದ್ಧಿ, ಪ್ರಾಣ. ಮಣ್ಣು = ದೇಹ, ಇಂದ್ರಿಯ ಗಳು. ಇವುಗಳ ಪರಿಶುದ್ಧತೆಯೇ ಮಾನವನ ಪರಮೋಚ್ಚಭಾವವು. ಭೂಮಿ ನಿನ್ನದಲ್ಲ. ಹೇಮ ನಿನ್ನದಲ್ಲ. ಕಾಮಿನೀ ನಿನ್ನವಳಲ್ಲ. "ನಿನ್ನದೆಂಬುದು ಜ್ಞಾನರತ್ನ ಕಾಣಿರೋ" ಎಂಬ ಪ್ರಭುದೇವರ ವಚನವು ಜ್ಞಾನಭಾವಕ್ಕೆ ಸಂಬಂಧಿಸಿದಂಥ ವಚನವಿದು. ಶರೀರವು ಮಣ್ಣು. ಮನವು ಹೆಣ್ಣು. ಆತ್ಮವು ಜ್ಞಾನರೂಪಿವಾದ ಹೊನ್ನು. ಈ ಮೂರನ್ನು ಪರಿಶುದ್ಧಿಗೊಳಿಸು ವುದಾಗಿದ್ದರೆ ಮೇಲ್ಕಂಡ ಹೊನ್ನು-ಹೆಣ್ಣು-ಮಣ್ಣುಗಳು ಆತ್ಮೋನ್ನತಿಗೆ ಒಳ್ಳೆಯವುಗಳು. ಮೊದಲು ಹೇಳಿದ ಭೌತಿಕಕ್ಕೆ ಸಂಬಂಧಿಸಿದ ಹೊನ್ನು-ಹೆಣ್ಣು-ಮಣ್ಣುಗಳು ಬೇಕು. ಬೆ"ಕೆಂಬುದಕ್ಕೆ ಅಳತೆ ಇದೆ. ಲೌಕಿಕ ಜೀವ ನದಲ್ಲಿ ಮನುಷ್ಯನ ಬದುಕುವಿಕೆಗೆ ಸಾಧನ. ಆದರೆ ಬಾಳುವಿಗೆ ಜ್ಞಾನ, ಬುದ್ಧಿ, ದೇಹ ಇವುಗಳಿಂದ ಪರಿಶುದ್ಧತೆಯನ್ನು ಪಡೆಯುವುದಾಗಿದ್ದರೆ ಆತ್ಮೋನ್ನತಿಗೆ ಮತ್ತು ನಿಜವಾದ ಶಾಂತಿ ಕಾರಣವಾಗುತ್ತವೆ. ಆದ್ದರಿಂದ ಕಾಯಕಷ್ಟದಿಂದ ಸಂಪಾದಿಸಿ ವ್ಯಕ್ತಿ ಮತ್ತು ಸಮಾಜಗಳಿಗೆ ನೆರವಾಗುತ್ತ ಬಳಿಕ ಮನದ ಪವಿತ್ರತೆಯಿಂದ ಆತ್ಮವಿಕಾಸಕ್ಕೆ ಅನುಕೂಲವಾಗಿರುತ್ತದೆ. ಹೀಗಿಲ್ಲದೆ ಸ್ವಾರ್ಥದಿಂದ ಸಂಪಾದಿಸಿ ರಾಕ್ಷಸೀ ರಾಕ್ಷಸೀ ಮಹತ್ವಕಾಂಕ್ಷಿ ಯಾಗುತ್ತದೆ. ತನಗೂ ಸುಖವಿಲ್ಲ. ಸಮಾಜಕ್ಕೂ ಹಿತವಿಲ್ಲ. ಆದಕಾರಣ ಅಂತರಂಗ ಬಹಿರಂಗವೆಂಬುದರ ಒಳಗುಟ್ಟನ್ನು ಚನ್ನಾಗಿ ತಿಳಿದು ಮೂರನ್ನೂ ತ್ಯಾಗ ಮಾಡಿ ಭೋಗಿಸುವುದು ಯೋಗವೆಂದು ಕರೆಯಲ್ಪಡುತ್ತದೆ. ಯೋಗ ಭೋಗಗಳ ಸಮನ್ವಯವೇ ವಿಶ್ವಧರ್ಮವೆನಿಸುತ್ತವೆ. ಇಂಥಹ ಜನತಾ ಧರ್ಮವು ಮಾನವ ಮಾತ್ರದವರಿಗೆಲ್ಲ ಅವಶ್ಯವಾಗಿ ಬೇಕು. ಇದು ಮತ, ಪಂಥ, ದರ್ಶನ. ಇವುಗಳಿಗೆ ಬಾಧಕವಿಲ್ಲ. ಮತದರ್ಶನಗಳ ಒಳಗುಟ್ಟು ಮಾನವಧರ್ಮ. ಇದನ್ನು ತಿಳಿದು ಇದರಂತೆ ಆಚರಿಸಿ ಅನುಭವಿಸಿದರೆ ಸುಖವಾಗುವುದು. ಇಲ್ಲವಾದರೆ ಇಂದ್ರನು ಐಶ್ವರ್ಯವಂತನಾಗಿದ್ದರೂ ರಾಕ್ಷಸರಿಂದ ದುಃಖವು ತಪ್ಪಲಿಲ್ಲ. ಅಂದಬಳಿಕ ಸಾಮಾನ್ಯರ ಪಾಡೇನು?

ಮಣ್ಣಿಗಾಗಿ ಸಣ್ಣಾದರು ಪಾಂಡವ-ಕೌರವರು.
ಹೆಣ್ಣಿಗಾಗಿ ಹುಣ್ಣಾದರು ರಾಮ-ರಾವಣರು.
ಹೊನ್ನಿಗಾಗಿ ಸುಣ್ಣಾದರು ಪಾಶ್ಚಾತ್ಯರು.

ಆದ್ದರಿಂದ ಈ ಮೂರರ ವ್ಯಾಪಾರವು ಒಳ್ಳೆಯದನ್ನಾಗಿ ಮಾಡಿಕೊಳ್ಳುವ ಜಾಣ್ಮೆಯು ಮನುಷ್ಯಮಾತ್ರದವರಿಗೆಲ್ಲ ಅವಶ್ಯವಾಗಿಬೇಕು. ಬೇಕೆಂಬುದು ಬೆಂಕಿಯಾಗಿರಬಾರದು. ಅದು ಬೆಳಕಾಗಿ ಪರಿಣಮಿಸಬೇಕು. ಇದರಲ್ಲಿದೆ ಜಾಣತನದ ಉದ್ದೇಶವು. ಇದನ್ನು ನಾವೆಲ್ಲರೂ ಕಲಿಯತಕ್ಕದ್ದು. ಅರಿವು, ಆಚಾರ, ಅನುಭವ ಇವುಗಳನ್ನೇ ಸಂಪಾದಿಸಲು ಮಾನವಮಾತ್ರದವರಿಗೆಲ್ಲ ಅನಿವಾರ್ಯವಾದ ಕಾರ್ಯವು. ಹೀಗೆ ಮತಿಗೆ ಹೊಳೆದ ಪರಿ ಸುಮತಿಗಳ ಎದುರಿಗೆ ಇಡಲ್ಪಟ್ಟಿದೆ. ಇದರ ವಿಮರ್ಶೆಯು ಬಲ್ಲವರ ಮೇಲೆ ಬಿದ್ದಿದೆ. ಹೀಗೆ ಈ ವಿಷಯನ್ನು ವಿರಮಿಸುತ್ತೇನೆ.

    

# ವೀರಶೈವರ ಅಹಿಂಸಾವಾದ

[ಲೇಖಕಃ— ಶ್ರೀ ಶಿವಕುಮಾರ (ತುಂಗಳ)]



"ಅಹಿಂಸಾ ಸತ್ಯ ವಚನಂ ಸರ್ವ ಭೂತಾನು ಕಂಪನಂ
ಶಮೋದಾನಂ ಯಥಾ ಶಕ್ತಿಗಾರ್ಹಸ್ಥ್ಯೋ ಧರ್ಮ ಉಚ್ಯತೇ"

ಸನ್ಯಾಸಿಗಳಿಗಷ್ಟೇ ಅಲ್ಲ! ಗೃಹಸ್ಥರಿಗೂ ಅಹಿಂಸೆಯು ಧರ್ಮವಾಗಿರುವದು. ಹಿಂಸೆಯು ಅಹಿಂಸೆಯನ್ನು ನುಂಗಿದರೂ, ಕ್ರಾಂತಿಯು ಶಾಂತಿಯನ್ನು ಕಬಳಿಸಿದರೂ ಕೊನೆಗೊಮ್ಮೆ ಈ ಅಸೂರೀ ಶಕ್ತಿಗಳ ಬಲ ತಗ್ಗಲೇಬೇಕು; ವಂದಿಸಲೇಬೇಕು. ಪ್ರಯತ್ನಶೀಲ ಮಾನವನು ಮೇಲಿಂದ ಮೇಲೆ ಪೆಟ್ಟುತಿಂದು ಪ್ರತಿಫಲವಿಲ್ಲದೆ ಮರುಗಿ ಕೊನೆಗೊಮ್ಮೆ ದೈವಿಶಕ್ತಿಗೆ ಮೊರೆಹೋಗುವಂತೆ; ವಂದಿಸುವಂತೆ!

ಒಮ್ಮೊಮ್ಮೆ ಹಿಂಸೆಗೆ ಜಯುವಾದುದು ಕಂಡುಬಂದರೂ ಹಿಂಸೆಯಿಂದ ಗಳಿಸಿದ ಜಯವಾಗಲಿ, ರಾಜ್ಯವಾಗಲಿ ಶಾಶ್ವತವಾದುದಲ್ಲ. ಅದು ಕ್ಷಣಿಕವಾದದು; ಕ್ಷಣಿಕಾನಂದವನ್ನುಂಟು ಮಾಡುವಂಥದ್ದು. ಜೊತೆಗೆ ದ್ವೇಷಾಸೂಯುಗಳ ತಾಯಿಯು. ಅಂತೆಯೇ ಹಿಂಸೆಯ ಪರಮಭಕ್ತ, ಕ್ರಾಂತಿವೀರ ನೆಪೋಲಿಯನ್ನನು ಕೂಡಾ ಈ ರೀತಿ ಉದ್ಗಾರ ತಗೆಯುತ್ತಾನೆ.

"ಪ್ರಪಂಚದಲ್ಲಿ ಶಕ್ತಿಯ ಬಲದ ಮೇಲೆ ರಕ್ತ ಹರಿಸಿ ಎಷ್ಟೋ ಜನರು ಚಕ್ರಾಧಿಪತ್ಯವನ್ನು ಕಟ್ಟಿದರು. ಅಲೆಗ್ಝಾಂಡರ, ಚಾರ್ಲಿಮೆಗೆನ್, ನಾನು ಮುಂತಾದವರೇ ಇದಕ್ಕೆ ಉದಾಹರಣೆ. ಆದರೆ ಈ ಚಕ್ರಾಧಿಪತ್ಯಗಳೆಲ್ಲ ಮರಳ ಮೇಲೆ ಕಟ್ಟಿದ ಮನಗಳಂತೆ ಕೆಲವು ವರುಷಗಳಲ್ಲಿ ಸರ್ವನಾಶವಾದವು. ಆದರೆ ಪ್ರತಿಯೊಬ್ಬರ ಹೃದಯದಲ್ಲಿ ಪ್ರೇಮದ ತಳಹದಿಯ ಮೇಲೆ ರಾಜ್ಯವನ್ನು ಕಟ್ಟಿದ ಕೃಸ್ತನೊಬ್ಬನ ರಾಜ್ಯ ಮಾತ್ರ ಆ ಚಂದ್ರಾರ್ಕವಾಗಿ ರಾರಾಜಿಸುವದು."

ಸೆಂಟ ಹೆಲನಾ ದ್ವೀಪದ ಸೆರೆಮನೆಯಲ್ಲಿಂದ ಹೊರಟ ಮರಿ ಸಿಂಹನ ಈ ಉದ್ಗಾರವು. ತಮ್ಮ ಶಕ್ತಿಯ ಬಲದಿಂದ ವಿಶ್ವವನ್ನೇ ಅದಲುಬದಲು

ಗೊಳಿಸಬಲ್ಲೆವೆಂದು ದೃಢವಾಗಿ ನಂಬಿದ ಮಹಾವೀರಾಧಿವೀರರೆಲ್ಲರೂ ಕೊನೆಗೊಮ್ಮೆ ಅಹಿಂಸೆಯ ಭಕ್ತರಾಗಬೇಕಾಗುವದನ್ನು ಸಾರುತ್ತಿರುವದು.

ಪ್ರತಿಯೊಬ್ಬ ಮಾನವನಿಗೆ ಆಹಾರ, ಆಶ್ರಯ ಆಚ್ಛಾದನ, ಅರಿವು, ಔಷಧ, ಈ ಪಂಚ ಆಕಾರಗಳು ಅವಶ್ಯಕವಾಗಿರುವಂತೆ, ಪ್ರತಿಯೊಂದು ಧರ್ಮಕ್ಕೆ ಅಹಿಂಸೆ, ಶಾಂತಿ, ಸಹಾನುಭೂತಿ, ಪರೋಪಕಾರ, ಸತ್ಯ, ಅಹಂಭಾವತನದ ಅಭಾವ, ಉದಾರ, ಉದಾರತ್ವ, ನಮ್ರತ್ವ, ಪ್ರಾಮಾಣಿಕತ್ವ, ಸರಳತನ, ಪವಿತ್ರತನ, ನಿಯಮಿತತನ, ಸ್ಥಿರತ್ವ, ಪೂರ್ಣತ್ವ, ಎಂಬೀ ತ್ರಿಪಂಚತ್ವದಲೇ ಪರಂಜ್ಯೋತಿಯ ಪ್ರಾಪ್ತಿಯಂದೂ, ಪರಂಪದವಿಯೆಂದೂ, ಪ್ರತಿಯೊಂದೂ, ಧರ್ಮಗಳು ಉದ್ಘೋಷಿಸುತ್ತವೆ. ಆದರೆ ಇಂದು ಕೆಲವೆಡೆಗೆ ಧರ್ಮದ ನಿಜ. ಬೆಳಕು ನಶಿಸತೊಡಗಿದೆ; ಅದರ ಬದಲು ಅಂಧಾಚರಣೆಯು ಬೆಳೆಯತೊಡಗಿದೆ. ಆದರೆ ಅದು ಧರ್ಮೋತ್ಪಾದಕರ ಹಾಗೂ ಧರ್ಮದ ತಪ್ಪಲ್ಲ; ಧರ್ಮವಾರ್ತಾಂಡರ, ಪಾಖಂಡಿಗಳ ತಪ್ಪು! ಕೀರ್ತನ ಹಚ್ಚಿದಾಗ ಕಾಲ್ಮರಿಗಳು ಕಳವಾದರೆ ಅದು ಕೀರ್ತನ ಹಚ್ಚಿದವನ, ಹೇಳುವವನ ತಪ್ಪೆ?

ಜಗತ್ತಿನ ಪ್ರತಿಯೊಂದು ಧರ್ಮವು ಅಹಿಂಸೆಯುನ್ನು ಉದ್ಘೋಷಿಸುತ್ತಿದ್ದರೂ ಅಹಿಂಸೆಗೆ ಪ್ರಾಮುಖ್ಯತೆಯನ್ನಿಟ್ಟಿದ್ದರೂ ಭಾರತವು ಅಹಿಂಸೆಯ ತವರೂರೆಂದು ಖ್ಯಾತಿಗಳಿಸಿದೆ. ಆದರೆ ಅಹಿಂಸೆಯ ಅರ್ಥವನ್ನು ನಾವು ಎಲ್ಲ ಕಡೆಗೆ ಒಂದೇ ಮಾಪಿನಿಂದ ಅಳೆಯಲಾಗದು. ಕಾರಣಾ ನಮಗೆ ಪ್ರಾಣಿವಧೆಯು ಹಿಂಸೆಯಾಗಿ ತೋರಿದರೆ ಟಂಡ್ರಾ ಪ್ರದೇಶದವರೆಗೆ ಅದು ಉದ್ಯೋಗವಾಗುವದು. ಅಲ್ಲಿ ವಾಸಿಸುವವರಿಗೆ ಪ್ರಾಣಿವಧೆ ಮಾಡಬೇಡಿರೆಂದರೆಂತು? ಒಂದು ದೃಷ್ಟಿಯಿಂದ ಸಸ್ಯಗಳನ್ನು ಕೊರೆಯುವದೂ ಹಿಂಸೆಯಾಗುವದು. ಈ ರೀತಿ ಅರ್ಥ ಹಚ್ಚುತ್ತ ಹೋದರೆ "ಜೀವ ಜೀವಿಗಳನ್ನು ತಿಂದು ಜೀವಿಪ ಜಗತ್ತು ಸಿರ್ಜೀವಿಯಾದೀತು."

ಸಕಲ ಜೀವಿಗಳು ಜೀವಿಗಳನ್ನು ತಿಂದು ಬದುಕುವಾಗ ಅಹಿಂಸೆ ಎಂಬ ಶಬ್ದವಾದರೂ ಉಳಿಯಿತು ಹೇಗೆ? ಯಾವುದಕ್ಕೆ ಅಹಿಂಸೆ ಎನ್ನಬಹುದು? ಎಂಬೀ ಸಮಸ್ಯಗಳೇಳುವದು ಸಹಜ. ಆದರೆ ಹಿಂಸೆಯಾವದು, ಹಿಂಸೆ ಮಾಡುವದರಲ್ಲಿ ಮಹದಂತರವಿದೆ. ಪ್ರತಿನಿತ್ಯ ನಮ್ಮ ಕೈಯಿಂದಲೇ ಆಗುವ ಸಾವಿರಾರು ಹಿಂಸೆಗಳು ಬುದ್ಧಿಪೂರ್ವಕವಾಗಲಾರವು.

ಉದ್ಯೋಗದಲ್ಲಿ ತೊಡಗಿದಾಗ ನಮಗರಿಯದಂತೆ ಆದವುಗಳು. ಒಕ್ಕಲಿಗನು ಹೊಲ ಊಳುವಾಗ, ಕಮ್ಮಾರನು ಕಬ್ಬಿಣ ಕಾಸುವಾಗ, ಕುಂಬಾರನು ಕೆಸರು ತುಳಿಯುವಾಗ ಆದ ಹಿಂಸೆಗಳು ಬುದ್ಧಿಪೂರ್ವಕವಾದವುಗಳಲ್ಲ. ಬುದ್ಧಿ ಪೂರ್ವಕವಾಗಿ ಮಾಡುವ ಕೊಲೆಯು ಮಾತ್ರ ಹಿಂಸೆಯಾಗುವದು. ಅಂತೇ ಬೇಟೆಯಾಡಿ ಜೀವಿಸುವದು ಅನಿವಾರ್ಯವಿದ್ದಲ್ಲಿ ಅದು ಉದ್ಯೋಗ, ಆಟ ಕ್ಕಾಗಿ ಬೇಟೆಯಾಡುವದು ಹಿಂಸೆ. ಆದುದರಿಂದ ಇಂಥ ಆಚರಣೆಯು ಅಹಿಂಸೆಯೆಂದು ಯಾದಿಯನ್ನೇ ತಯಾರಿಸುವದು ಯಾರಿಂದಲೂ ಸಾಧ್ಯವಿಲ್ಲ. ವಿವೇಕ ಒಪ್ಪುವದೆಲ್ಲ ಅಹಿಂಸೆ. ಅದುವೇ ಪರಮೋಧರ್ಮ" ಎಂದಿಷ್ಟೇ ಹೇಳಬಹುದು.

ಭಾರತದ ಪ್ರತಿಯೊಂದು ಧರ್ಮದಲ್ಲಿಯೂ, ಅದರ ಕಣಕಣಗಳಲ್ಲಿಯೂ ಅಹಿಂಸೆಯು ತುಂಬಿ ನಿಂತಿದೆ ಎಂಬುದಕ್ಕೆ ಇಲ್ಲಿ ಆಗಿ ಬೆಳಗಿದ ಮಹಾ ವ್ಯಕ್ತಿಗಳೇ ನಿದರ್ಶನವಾಗಿದ್ದಾರೆ.

ಮಹಾತ್ಮಾ ಮಹಾವೀರರ ಕಠೋರ ಅಹಿಂಸೆಯು ನೊರಜನ್ನು ಸಹ ಕೊಲ್ಲೆನೆಂಬ ಧೃಡತೆಯು ಜಗತ್ತಿನ ಜನರನ್ನು ಬೆರಗುಗೊಳಿಸುವಂಥದ್ದಾಗಿದೆ. ಆದರೆ ಬುದ್ಧ, ಬಸವ, ಮಹಾತ್ಮರ ಮಾತು ಬೇರೆ. ಈ ಮೂರು ಮಣಿಗಳಿಗೂ ಅಹಿಂಸೆಯೇ ದಾರ. ಮಹಾತ್ಮಾ ಬುದ್ಧನು ಅಹಿಂಸೆಯ ಕೈದೀವಿಗೆಯಿಂದ ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಮಹಾ ಕ್ರಾಂತಿಯನ್ನು ಸಾಧಿಸಿದರೆ, ಮಹಾತ್ಮಾ ಬಸವೇಶ್ವರರು ಅದೇ ಕೈದೀವಿಗೆಯಿಂದ ಧಾರ್ಮಿಕ, ಸಾಮಾ ಜಿಕ, ಆರ್ಥಿಕ ಕ್ಷೇತ್ರಗಳಲ್ಲಿ ಬೆಳಕು ಬೀರಿದರೆ ಮಹಾತ್ಮಾ ಗಾಂಧೀಜಿ ಅವರು ಧಾರ್ಮಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಕ್ಷೇತ್ರಗಳಲ್ಲಿ ಮಹಾ ಕ್ರಾಂತಿಯನ್ನು ಮಾಡಿ ತೋರಿದರು. ಅವರ ಸತ್ಯಾಗ್ರಹವೆಂಬ ಅಸ್ತ್ರಕ್ಕೆ ಅಹಿಂಸೆಯೇ ಹಿಡಿಕೆ. ಇಂಥ ಪವಿತ್ರ ಅಹಿಂಸೆಯು ಹೇಡಿಗಾಗಲಿ, ಹೇಡಿ ಧರ್ಮಕ್ಕಾಗಲಿ, ಹೇಸಿಗಾಗಲಿ, ಹೇಸಿಯ ಗುಂಪಿಗಾಗಲಿ ತಕ್ಕುದಲ್ಲ. ಅದು ಅವಕ್ಕೆ ನಿಲುಕದ ಮಾತು. ಸಾಧ್ಯತೆಗೆ ಧೈರ್ಯ ಬೇಕು, ಧೃಡತೆ ಬೇಕು, ತ್ಯಾಗ ಬೇಕು.

ನಮ್ಮಲ್ಲಿ ಧರ್ಮೋದ್ಧಾರಕ್ಕಾಗಿ ಹೆಣಗಾಡಿದ ಅನೇಕ ಮಹಾತ್ಮರಿ ದ್ದಾರೆ; ಅನೇಕ ಧರ್ಮಗಳಿವೆ; ಅನೇಕ ಪಂಗಡಗಳಿವೆ. ಆದರೆ ಅದರಲ್ಲಿ ಭಾರತದ ಹಾಗೂ ವಿಶ್ವದ ಸರ್ವಾಂಗೀಣ ಉನ್ನತಿಗಾಗಿ ಶ್ರಮಿಸಿದ ಕೆಲವೇ ಗುಂಪುಗಳಲ್ಲಿ ವೀರಶೈವರಿಗೊಂದು ವಿಶಿಷ್ಟ ಸ್ಥಾನವಿದೆ.

ಇಂದಿನವರು ವೀರಶೈವ ಧರ್ಮವನ್ನು ಪೂಜಿಸಲಿ; ಪೂಜಿಸದಿರಲಿ. ಬಸವಣ್ಣನವರು ಶರಣರ ಸಮೂಹವು ಜಗದೋದ್ಧಾರಕರೆಂದು ಅರಿತು ಅಪ್ಪಿಕೊಳ್ಳಲಿ ಅಥವಾ ಮರೆತು ತಳ್ಳಲಿ, ಅದಾವದರ ಗೊಡವೆ ನಮಗೆ ಬೇಕಿಲ್ಲ. ವಿಶ್ವವಂದ್ಯ ವೀರಶೈವ ಧರ್ಮದಲ್ಲಿ ಮೊಳೆತು ಬೆಳೆದು ಹಿರಿದಾಗಿ ನಿಂತ ಅಹಿಂಸೆಯನ್ನು ಇಲ್ಲಿ ಕಾಣುವದೇ ಮುಖ್ಯ.

ಸರ್ವ ಸಗುಣ ಸಂಪನ್ನವಾದ ಈ ಧರ್ಮದಲ್ಲಿ ಅಹಿಂಸೆಗೊಂದು ಪ್ರಮುಖ ಪಾತ್ರವಿದೆ. ಉಜ್ವಲ ಶಿವೋಪಾಸಕರಾದ ವೀರಶೈವರು ಶಿವನ ಹೆಂಡತಿಯಾದ ಕಾಳಿಕಾದೇವಿಗೂ ಸಹ ಬಲಿಕೊಡಲಾರರು. ಅವಳೂ ಇವರ ಕೈಯಲ್ಲಿ ಸಿಕ್ಕು ಶಿವಪ್ರಿಯು, ಶಾಂತಿ, ಶರ್ವಾಣಿ ಸಕಲ ಲೋಕ ಹಿತೆ ಯಾಗಿದ್ದಾಳೆ; ಶಾಕಾಹಾರಿಯಾಗಿದ್ದಾಳೆ.

ಈ ಒಂದೇ ನಿದರ್ಶನದಿಂದ ವೀರಶೈವರಲ್ಲಿ ಅಹಿಂಸೆಯ ಸ್ಥಾನವನ್ನು ಊಹಿಸಬಹುದು. ಇದಕ್ಕೆ ಕಾರಣ "ಸರ್ವಂ ಶಿವಂ" ಸರ್ವವೂ ಶಿವ ಮಯವಾಗಿದೆ. ಅಂದ ಮೇಲೆ ಯಾವುದನ್ನು ಹಿಂಸಿಸಬೇಕು ?

"ನಾನೊಂದು ಸುರಿಗೆಯನೇನೆಂದು ಹಿಡಿವೆನು ? ಏನಕಿತ್ತೇನನಿರಿ ವೆನು ? ಜಗವೆಲ್ಲ ನೀನಾಗಿಪ್ಪೆ ಕಾಣಾ ರಾಮನಾಥಾ."

ಶಿವಶರಣ ದೇವರದಾಸಿಮಯ್ಯನು (೧೦೦೮–೨೪) ತೃಣಕಾಷ್ಠ ಮೊದ ಲಾದವುಗಳಲ್ಲಿ ದೇವರ ಅಸ್ತಿತ್ವವನ್ನು ಕಂಡನು. ಅಂತೇ ತಾನು ಕತ್ತಿ ಯನ್ನು ಹಿಡಿಯಲಿಲ್ಲ; ಅಲ್ಲದೆ ಸುತ್ತಲೆಲ್ಲ ತಿರುಗಾಡಿ ಬೇಡರಿಗೂ, ಕೊಲೆ ಗಡಕರಿಗೂ, ಅಹಿಂಸೆಯ ಮಹತ್ವವನ್ನು ಅರುಹಿ, ಅವರಿಗೆ ಬೇರೆ ವ್ಯವ ಸಾಯಗಳನ್ನು ಕಲ್ಪಿಸಿಕೊಟ್ಟು ಅವರನ್ನು ಸುಮಾರ್ಗಕ್ಕೆ ತಂದನು.

ಅಹಿಂಸೆಯಿಲ್ಲದ ಸಮಾಜ, ನಾಡು, ಅಜ್ಞಾನದ ಬೀಡು, ಅಂಧಕಾರದ ಕೂಪ, ಅನಾಗರಿಕರ ಗುಂಪು ಎಂದು ಹೇಳಬಹುದು. ಅರಿವುಗೇಡಿತನವೇ ಅಹಿಂಸೆಯನ್ನು ಅರಿಯಲಾರದು. ದೇವರ ಹೆಸರಿನಲ್ಲಾಗಲಿ, ಧರ್ಮದ ಹೆಸರಿನಲ್ಲಾಗಲಿ ನಡೆಯುವ ಹಿಂಸೆಗಳು ಸ್ವಾರ್ಥ ಸಾಧಕರ ಆಟಗಳೇ ಹೊರತು ದೇವರು ಬಯಸಿದ ಬೇಟೆಗಳಲ್ಲ ! ಸಕಲ ಲೋಕಕೆ ತಂದೆ ಶಿವನು. ಸಕಲವನ್ನು ಸೃಷ್ಟಿಸಿದಾತನು ಆತನು. ತಂದೆಯು ತನ್ನ ಮಕ್ಕ ಳನು ಕೊಂದು ತಿಂಬುವದುಂಟೆ ಲೋಕದಿ ? ಯಜ್ಞಯಾಗಾದಿಗಳ

ಹೆಸರಿನಲ್ಲಿ ನಡೆಯುವ ಬಲಿದಾನವು ಕೂಳಬಾಕರ ಕೈವಾಡವೆಂಬುದನ್ನು ಬಸವಣ್ಣನವರು ಅರಿತರು. ಅಂಥವರ ಕೂಡ ಆಚರಣೆಯು ಸರಿಯಲ್ಲ ವೆಂದು ಸಾರಿದರು. ಅವರನ್ನು ಕಟುವಾಗಿ ಟೀಕಿಸಿದರು.

"ಇಟ್ಟೆಯ ಹಣ್ಣ ನರಿ ತಿಂದು ಸೃಷ್ಟಿ ತಿರುಗಿತೆಂಬಂತೆ ಮಟ್ಟೆಯ ನಿಟ್ಟೆ ದ್ವಿಜರ ಮಾತದೇಕೆ ? ಹಗಲುಗಾಣದ ಗೂಗೆ ಇರುಳಾಯಿ ತೆಂದರೆ ಜಗಕ್ಕೆ ಇರುಳಪ್ಪುದೆ ಮರುಳೆ ? ಹೋಮದ ನೆವದಿಂದ ಹೋತನ ಕೊಂದು ತಿಂಬ ಅನಾಮಿಕರ ಕೂಡ ಆಡಿ ಗೆಲವುದೇನು ಕೂಡಲಸಂಗಮದೇವಾ ?"

ಈ ಅನಾಮಿಕರು ತಾವು ನುಡಿದದ್ದೇ ವೇದ, ನಡೆದದ್ದೇ ದಾರಿ, ಸಾರಿದ್ದೇ ಶಾಸ್ತ್ರವೆಂದು ಅಜ್ಞ ಜನರನ್ನು ಮಬ್ಬಿನಲ್ಲಿ ಹಾಕಿ ಉದರ ಪೋಷಣೆ ಮಾಡಿಕೊಳ್ಳುತ್ತಾರೆ. ಅಂಥವರ ಮಾತನ್ನು ನಂಬಲಾಗದು. ಏಕಂದರೆ ಅವರ ವೇದಶಾಸ್ತ್ರಗಳು ಹಿಂಸೆಗೆ ಪ್ರೋತ್ಸಾಹನವೀಯುತ್ತಿದ್ದಲ್ಲಿ ಅವು ಸತ್ಯ ವಾಗಿರಲಾರವು; ಪೂಜ್ಯವಾಗಿರಲಾರವು. ಆದಿ ಅಂತ್ಯದ ವರೆಗೂ ಪೂಜ್ಯ ವಾಗಿರುವದು ಒಂದೇ ಸತ್ಯ ! ಎರಡು ಸತ್ಯಗಳು ಎಂದೂ ಇರಲಾರವು. ಅದು ಒಂದೇ ಇರಲೇಬೇಕು. ಪೂರ್ಣವಾಗಿರಲೇಬೇಕು. ಆದಿ ಅಂತ್ಯಗ ಳಿಲ್ಲದಂತಾಗಿರಬೇಕು. ಈ ಅಸತ್ಯ ದರ್ಶನದ ಪ್ರಥಮ ಸೋಪಾನ ಅಹಿಂಸೆ. ಇದನ್ನೇರಿ ಆ ಸತ್ಯೇಂದ್ರನ ಶಿಖರವನ್ನು ಕಾಣಬೇಕು. ಇದನ್ನು ತಿರಸ್ಕರಿ ಸುವ ಮಾರ್ಗಗಳೆಲ್ಲ ಹುಸಿ !

"ನಿಮ್ಮ ವಚನ ನಮ್ಮ ಪುಣ್ಯವೆಂಬುದು ಹುಸಿಯಾಯಿತ್ತು ನೋಡಾ. ಶಾಸ್ತ್ರದ ವಚನ ಹೋತಿಂಗೆ ಮಾರಿ; ಎಂತು ನಂಬುವೆ ನಯ್ಯಾ ? ನಾನು ಕೊಲ್ಲೆನು ನೀನು ಕೊಂದಿತು ಎಂಬ ಸೊನೆ ಗಾರರನೇನೆಂಬೆನಯ್ಯ ಕೂಡಲಸಂಗಮದೇವಾ ?"

ಯಜ್ಞದ ಮಾತು ಇಂತಾದರೆ ದಿನ ನಿತ್ಯ ಮಾರಿ ಮಸಣಗಳ ಹೆಸ ರಿನಲ್ಲಿ ನೂರಾರು ಕೊಲೆಗಳಾಗುತ್ತಿವೆ. ಜಡ್ಡು ಬಂದರೆ ಕಾಳಿಗೆ ಕುರಿಬಲಿ ಕೊಡಬೇಕು; ಕೆಮ್ಮಿದರೆ ಕೋಳಿಯ ಬಲಿಯಾಗಬೇಕು. ಇದು ಪಾಖಂಡಿ ಗಳಾಡುವ ಮಾತು. ಇದಕ್ಕೆ ಶರಣರೊಪ್ಪರು.

" ಮೊರನ ಗೊಟ್ಟಗೆ ಬಪ್ಪ ಕಿರುಕುಳ ದೈವಕ್ಕೆ ಕುರಿಯನಿಕ್ಕಿಹೆನೆಂದು ನಲಿನಲಿದಾಡುವರು. ಕುರಿ ಸತ್ತು ಕಾಯುವದೇ ಹೆರಮುಳಿದವಂ? ಕುರಿ ಬೇಡ ಮರಿ ಬೇಡ. ಬರಿಯ ಪತ್ರಿಯ ತಂದು ಮರೆಯದೆ ಪೂಜಿಸು ನಮ್ಮ ಕೂಡಲಸಂಗಮದೇವನ."

ನಿಜಕ್ಕೂ ದೇವರ ಒಲುಮೆಗೆ ಕುರಿ ಮರಿಗಳ ಅವಶ್ಯಕತೆಯಿಲ್ಲ. ಶುದ್ಧಭಾವ, ಅಚಲಮನ, ಅಪಾರಶ್ರದ್ಧೆ, ಆಶೆಯಿಲ್ಲದ ಭಕ್ತಿ, ಅಮರ ಪ್ರೇಮವಿದ್ದರೆ ಶಿವ ನಿಮ್ಮ ಕಿಂಕರರ ಕಿಂಕರನಾದಾನು. ನಿಮ್ಮನ್ನು ಸ್ವರ್ಗಕ್ಕೆ ಕೈಹಿಡಿದು ಕರೆದುಕೊಂಡು ಹೋದಾನು. ದೇವನಿಗೆ ನಿಮ್ಮ ಬಲಿಬೇಡ; ಮುಂದುವರಿದು ನೋಡಿದರೆ ಪೂಜೆ ಬೇಡ, ಸಕಲ ಜೀವಿಗಳಲ್ಲಿ ದಯ ಒಂದಿದ್ದರೆ ಸಾಕು. ನೊಂದಿದವರಿಗಾಗಿ, ಪತಿತರಿಗಾಗಿ, ಪರಿತಪಿಸುವ ಜೀವಿಗಳಿಗಾಗಿ, ಕರುಣೆಯೊಂದಿದ್ದರೆ ಸಾಕು. ಈ ಕರುಣೆಯೇ ನಿಮ್ಮನ್ನು ಪ್ರೇಮ ಜೀವಿಗಳನ್ನಾಗಿ ಮಾಡುವದು. ಪ್ರೇಮ ಜೀವಿಯೇ ಅಹಿಂಸಾ ವಾದಿಯಾಗುವನು.

ಪ್ರೇಮವು ಯಾವಾಗಲೂ ಯಾರಿಗೂ ಕೆಡಕನ್ನು ಬಯಸಲಾರದು. ಅದು ಎಂದೂ ಸೇಡುತೀರಿಸಿಕೊಳ್ಳಲು ಯತ್ನಿಸುವದಿಲ್ಲ. ಪ್ರೇಮವು ಪರರಿಂದ ಏನನ್ನೂ ಬಯಸಲಾರದು. ಹೊರತಾಗಿ ಪರರಿಗೆ ನೀಡುತ್ತದೆ. ಇಂಥ ಅತ್ಯುಚ್ಚ ಪ್ರೇಮಕ್ಕೆ ಜೈನರು ಮೈತ್ರಿ ಎಂದು ಕರೆದರು. ಈ ಮೈತ್ರಿಯಿಂದಲೇ ಆತ್ಮೋನ್ನತಿಯಾಗುವದು. ಇಹ ಪರ ಎರಡನ್ನೂ ಗೆಡೆಯಬಹುದೆಂದು ಅವರು ಹೇಳುವರು. ಚೀನದವರು ಈ ಮೈತ್ರಿ ಸೂಚಕ ಅಥವಾ ಪ್ರೇಮ ಸೂಚಕವಾಗಿ "ಜೇನ" ಶಬ್ದವನ್ನು ಉಪಯೋಗಿಸುತ್ತಾರೆ. ಇದರಲ್ಲಿಯೂ ಅಹಿಂಸೆಯ ಅರ್ಥ ಅಡಕವಾಗಿದೆ.

" ಜೇನದ ಪಾಲಕನು ಪರಮ ಧರ್ಮಾರ್ಥನಾಗುವನು " ಎಂದು ಮಹಾತ್ಮಾ ಕನ್ಫ್ಯೂಶಿಯಸ್‌ನು ಹೇಳಿದ್ದಾನೆ.

ಈ ಜೇನ, ಮೈತ್ರಿ, ಪ್ರೇಮಕ್ಕೆ ಮೂಲವಾದುದು ಕರುಣೆ. ಶಿವಶರಣಿ ಅಕ್ಕನ ಕರುಣೆಯು ಕೂಗಿದು.

"ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಗಳ ಕೊಂದು ನಲಿನಲಿದಾಡುವ ! ತನ್ನ ಮನೆಯಲೊಂದು ಶಿಶುಸತ್ತರೆ ಅದಕ್ಕೆ ಮರಗುವಂತೆ ಅವಕೇಕೆ ಮರುಗನು ? ಅದೆಂತೆಂದೊಡೆ —

ಸ್ವಾತ್ಮನಾಮಿ ವೇತರಶ್ಚೈವ ದೃಷ್ಟ್ವಾನಿತ್ಯಾದಿ ಭಿನ್ನತೆ
ಸರ್ವಂ ಚಿಜ್ಯೋತಿ ದೇವೇತಿಯಃ ಪಶ್ಯತಿ ಸ ಪಶ್ಯತಿ ॥

ಎಂಬುದಾಗಿ ಜಾಲಗಾರನ ದುಃಖ ಜಗಕೆಲ್ಲ ನಗೆಗೆಡೆ ಇದುಕಾರಣ ಚನ್ನಮಲ್ಲಿಕಾರ್ಜುನಯ್ಯ ಭಕ್ತನಾಗಿದ್ದು ಜೀವ ಹಿಂಸೆಯ ಮಾಡುವ ಮಾದಿಗರನೇನೆಂಬೆನಯ್ಯ ? ”

ಭಕ್ತನಾದವನು ಜೀವ ಹಿಂಸೆ ಮಾಡಲಾಗದು. ಜೀವವು ಜಗದೀಶನ ಅಂಶವು. ಜೀವಿಗಳಲ್ಲಿ ದಯಾಪರರಾಗಿರುವದೇ ಮಾನವಂಗೆ ಭೂಷಣವೆಂದು ; ತನ್ನ ಮಕ್ಕಳನ್ನು ಪಾಲಿಸುವಂತೆ, ತನ್ನನು ತಾನು ರಕ್ಷಿಸಿಕೊಳ್ಳುವಂತೆ; ಎಲ್ಲ ಜೀವಿ ಜಂತುಗಳನ್ನು ಪಾಲಿಸಬೇಕು ; ರಕ್ಷಿಸಿಕೊಳ್ಳಬೇಕು, ಎಂದು ಸಾರಿದ್ದಾಳೆ ಅಕ್ಕ !

ಶರಣರ ದೃಷ್ಟಿಯಲ್ಲಿ ಹಿಂಸೆಯಂದರೆ ಕೇವಲ ಜೀವ ಹಿಂಸೆಯಲ್ಲ; ಮತ್ತೊಬ್ಬರಿಗೆ ಬಿರುನುಡಿಯುವದು, ಅವರ ಮನ ನೋಯುವಂತೆ ಮಾತಾಡುವದು, ಸಹ ಹಿಂಸೆಯಾಗುವದು. ಹಾಗೂ ಸಸ್ಯಾದಿಗಳನ್ನು ಸಿಕ್ಕಂತೆ ಅಲುಗಿಸುವದು, ಕಡಿಯುವದು, ಕುಡಿ ಚಿವುಟುವದು, ಹೂ ಕೀಳುವದು ಕೂಡಾ ಹಿಂಸೆಯೆಂದು ಅವರ ಕಲ್ಪನೆ ! ಈ ಕಲ್ಪನೆಯು ಅಹಿಂಸೆಯ ಪರಮೋಚ್ಚಮೆಟ್ಟಲು. ಇದು ಜೈನರ ಅಹಿಂಸೆ ಎಂದು ರೂಢಿಯಲ್ಲಿ ಕರೆಯುವದುಂಟು. ಇದು ಸಾಧ್ಯವಾಗಬೇಕಾದರೆ ಸಾಧನ ಬೇಕು, ತಪಸ್ಸುಬೇಕು. ಪೂರ್ವ ಜನ್ಮದ ಪುಣ್ಯಬೇಕು, ಗುರುಕೃಪೆ ಬೇಕು. ಇದನ್ನೆಲ್ಲ ಪಡೆದವರೇ ಮಹಾತ್ಮರು ; ಮಹಾದೇವರು. ಅಂಥವರಲ್ಲಿ ನಮ್ಮ ಶರಣ ದಸರಯ್ಯನೋರ್ವನು ಅವನು–

“ಉದುರಿ ಬೀಳುವನಕ್ಕ ನಿನ್ನ ಹಂಗಯ್ಯ ! ಉದುರಿ ಬಿದ್ದಲ್ಲಿ ಬಳಿಕ ನನ್ನೊಡವೆಯಯ್ಯ ತಂದೆ !....”ಎನ್ನುತ್ತಾನೆ.

ಗಿಡದ ಮೇಲಿನ ಹೂವು ಉದುರಿ ಬೀಳುವವರೆಗೆ ಅದು ಗಿಡದ ಸೊತ್ತು; ಉದುರಿ ಬಿದ್ದ ಮೇಲೆ ಅದು ಗಿಡದ್ದಲ್ಲ ! ಅದನ್ನು ತಂದು ಪೂಜಿಸಲು ಯಾವ ಅಭ್ಯಂತರವಿಲ್ಲವೆಂದು ತಮ್ಮದೊಂದು ವಚನದಲ್ಲಿ ಸಾರಿ ಅಹಿಂಸೆಯ ವ್ಯಾಪಕಾರ್ಥವನ್ನು ವಿವರಿಸಿದ್ದಾರೆ.

ಇನ್ನೊಂದೆಡೆ ಅವರು ಕೇಳುತ್ತಾರೆ —

“ಎಲ್ಲವನ್ನರಿವಲ್ಲಿ ಕಡೆಯಲ್ಲಿ ಕೊಲ್ಲಬೇಕೆಂಬುದೊಂದು ಭೇದ ಉಂಟೇ ? ಶಾಪವನೆಲ ಕಲಿತಲಿ ಗೆಲ ಸೋಲಕೆ, ಹೋರಬೇಕೆಂಬುದು

ಕಡೆಯಲ್ಲಿ ಒಂದು ಸೊಲ್ಲುಂಟೇ ? ಪುರಾಣವನ್ನೆಲ್ಲ ನೋಡಿದಲ್ಲಿ ಸರ್ವ ಜೀವನ ಕೊಲ್ಲು ಕೊರೆ ಎಂಬುದೊಂದು ದಳ್ಳುರಿಯುಂಟೇ ? ಶ್ರುತಿಯು ಕೇಳುವಲ್ಲಿ. ಸ್ಮೃತಿಯನ್ನು ಅಂಗೀಕರಿಸುವಲ್ಲಿ ಸರ್ವಹತವ ಮಾಡಬೇಕೆಂಬುದೊಂದು ಗತಿಯುಂಟೇ ? ಇಂತೀ ಆತ್ಮದಲ್ಲಿ ಸರ್ವಭೂತ ಹಿತವುಳ್ಳವಂಗೆ ಆತ ಅತೀತನಾಯ ವಸ್ತು ದಸರೇಶ್ವರ ಲಿಂಗವು. ”

ಧರ್ಮವಂತರಾಗುವದು ಕೊಲೆ ಸುಲಿಗೆಗಲ್ಲ ; ವೇದಾಭ್ಯಾಸ ಮಾಡುವದು ವಾದಕ್ಕಾಗಿ ಅಲ್ಲ. ಧರ್ಮದಿಂದ, ವೇದಾಭ್ಯಾಸದಿಂದ ಆತ್ಮೋನ್ನತಿಯಾಗಬೇಕು. ದಿವ್ಯದರ್ಶನಕ್ಕಾಗಿ ವಾದವಿವಾದದ ಅವಶ್ಯಕತೆಯೇನು ? ವಾದದಿಂದ ಪಾಂಡಿತ್ಯ ಪ್ರದರ್ಶನವಾಗಬಹುದು ; ಪಂಡಿತನಾಗಬಹುದು. ಮತ್ತೊಬ್ಬ ಮಹಾಪಂಡಿತನು ಗಂಟುಬಿದ್ದರೆ ತನ್ನ ದಾರಿಯಲ್ಲಿಯೇ ತನಗೆ ಸಂಶಯ ಉಂಟಾಗಬಹುದು. ಆದರೆ ಸತ್ ದೃಗೋಚರವಾಗಲಾರದು. ಏಕಂದರೆ– ಸಂದೇಹವಾದವು ಪುನಃ ಪುನಃ ಸತ್ಯಾನ್ವೇಷಣೆಯನ್ನು ಹತ್ತಿಕ್ಕಲು ಯತ್ನಿಸುತ್ತದೆ. ತಾನೇ ಅನ್ವೇಷಣೆಯನ್ನು ಆರಂಭಿಸಿ ತನ್ನ ದೌರ್ಬಲ್ಯದಿಂದ ನಿರಾಶೆಹೊಂದಿ ಮೂಢಭಾವನೆಯಿಂದ ಎಲ್ಲ ಮೌಲಿಕ ಸಮಸ್ಯೆಗಳಿಗೆ ಅದುಕಾರಾತ್ಮಕ ಉತ್ತರ ಕೊಡುವದರಲ್ಲಿಯೇ ಆಶ್ರಮಪಡೆದು ಹೋಗುತ್ತದೆ. ಈ ಸಂದೇಹವಾದಿಗಳಿಗೆ ಹಗ್ಗವು ಹಾವಾಗಿ ತಾಯಿಯ ಮೊಲೆಹಾಲು ವಿಷವಾಗಿ ಕಾಣಬಹುದು.

ಜ್ಯೋತಿ, ಸ್ವಾತಂತ್ರ್ಯ, ಅಮರತ್ವ ಇವು ಮಾನವನ ಸದೈವ ಕಾಲದ ಹಾರ್ದಿಕ ಹಂಬಲಗಳು. ಈ ಹಂಬಲುಗಳನ್ನು ಬದಿಗಿರಿಸಿ ವಾದದಲ್ಲಿ ಜಯ ಸಂಪಾದಿಸಲು ಹಂಬಲಿಸುವದೆಂದರೆ ತನ್ನ ಸಮಾಧಿಯನ್ನು ತಾನೇ ತೆಗೆದುಕೊಂಡಂತೆಯೇ ಸರಿ. ಆದುದರಿಂದ ಈ ಸಂದೇಹವಾದವನ್ನು ತೊರೆದು ಮಾನವನು ಶುದ್ಧಾತ್ಮಕ್ಕಾಗಿ ಪ್ರಯತ್ನಿಸಬೇಕು. ಶುದ್ಧಾತ್ಮವು ಮಾನವನಲ್ಲಿ ತನ್ನ ಪೂರ್ಣ ಸ್ವಾತಂತ್ರವನ್ನು ಪ್ರಕಟಗೊಳಿಸಬಲ್ಲದು. ಸಮತ್ವಯೋಗ ಕೈವಶಮಾಡಿ ಕೊಡಬಲ್ಲದು. ಈ ಸ್ವಾತಂತ್ರ್ಯ ಮತ್ತು ಸಮತ್ವದಿಂದ ಸಗುಣ ನಿರ್ಗುಣ ಶಿವನ ದರ್ಶನವಾಗುವದೆಂದು ಶರಣರ ಮತ.

“ ಸಗುಣ ನಿರ್ಗುಣ ಶಿವರೇನು ಬೇರೆಯಲ್ಲ. ಎರಡೂ ಒಂದೇ ಸತ್ಯದ ನಿಶ್ಚಯಾತ್ಮಕ, ನಿಷೇಧಾತ್ಮಕ, ಪೂರಕ ಮಗ್ಗಲುಗಳು. ನಿರ್ಗುಣದ ಕ್ತಿಮಾತ್ರದಿಂದಲೇ ಸಗುಣ ಬ್ರಹ್ಮ ಅಥವಾ ಶಿವರೂಪಿ ವಿಶ್ವವೆಲ್ಲ ರಚಿತ

ವಾಗಿದೆ. ನಿರ್ಗುಣದಿಂದಲೇ ಬ್ರಹ್ಮನ ಸರ್ವತಂತ್ರ ಸ್ವತಂತ್ರ ಸತ್ತೆ ಶಕ್ತಿ ಗಳಿರುತ್ತವೆ. ಕೇವಲ ನಿರ್ಗುಣದ ಆಧಾರದ ಮಂತ್ರದಿಂದಲೇ ಸಗುಣನ ಅನಂತ ಕ್ರಿಯಾಶೀಲತೆ ನಡೆಯುತ್ತಿದೆ." ಅಂತೇ ಸಗುಣ ನಿರ್ಗುಣ ಶಿವ ದರ್ಶನವೇ ದಿವ್ಯ ದರ್ಶನ

ಈ ದಿವ್ಯ ದರ್ಶನದಿಂದಲೇ ದಿವ್ಯಜ್ಞಾನ ವಾಗುವದೆಂದು ಅನುಭವಿಗಳ ಮತ. ಇದು ಕೈವಶವಾಗಬೇಕಾದರೆ ಸಮತ್ವಸಾಧಿಸಬೇಕು. ಸಮತ್ವಕ್ಕೆ ಸಮದೃಷ್ಟಿಬೇಕು. ಸಮದೃಷ್ಟಿಯು ಪ್ರೇಮವಿದೆ; ಪ್ರೇಮದಲ್ಲಿ ಅಂಹಿಸೆಯು ಅಂಕುರವಿದೆ. ಈ ಅಂಕುರ ಪೆರ್ಮ್ಮರವಾಗಿ ಹೂಬಿಟ್ಟು ಮಕರಂದ ಬೀರಿ, ಹೀಜು ಹಿಡಿಗಾಯಿ ಯಾಗಿ, ಫಲಭರಿತ ವೃಕ್ಷವಾದಾಗ ಮಾತ್ರ ಅದು ಪರೋಪಕಾರಿ ಜೀವಿ ಯಾದಂತಾಯಿತು. ಪರಂಜ್ಯೋತಿಯ ದಿವ್ಯ ದರ್ಶನಕ್ಕೆ ಯೋಗ್ಯವಾದಂ ತಾಯಿತು.

ಅಸತ್ಯ, ಅಸೂಯ, ಅಶಾಂತಿ, ಅಜ್ಞಾನಗಳು ಈ ಅಂಕೂರಕ್ಕೆ ಕುಠಾರ ದಂತಿವೆ. ಇವುಗಳ ನಾಶಕ್ಕಾಗಿ—

"ಭಕ್ತನು ಶಾಂತನಾಗಿರಬೇಕು. ತನ್ನ ಕುರಿತು ಒಂದು ಠಾವಿನಲ್ಲಿ ಸತ್ಯನಾಗಿರಬೇಕು. ಭೂತ ಹಿತವಹ ವಚನವ ನುಡಿಯಬೇಕು. ಸಕಲ ಪ್ರಾಣಿಗಳು ತನ್ನಂತೆ ಎಂದು ಭಾವಿಸಬೇಕು. ಅಪಾತ್ರ ದಾನವ ಮಾಡ ಲಾಗದು. ಸಕಲೇಂದ್ರಿಗಳ ತನ್ನ ಮಾಡುವದು ಇದೇ ಮೊದಲಲ್ಲಿ ದೇಹ ಶೌಚ ನೋಡಾ; ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ ಇದೇ ಸಾಧನ ಕೂಡಲಚನ್ನಸಂಗಮದೇವಾ." ಎಂದು ಚನ್ನಬಸವೇಶ್ವರರು ದಾರಿ ತೋರಿ ದ್ದಾರೆ.

ಶರಣರ ದೃಷ್ಟಿಯಲ್ಲಿ ಅಪಾತ್ರರಿಗೆ ದಾನ ಮಾಡುವದು ಸಹ ಹಿಂಸೆ ಯಾಗಿ ತೋರುವದು. ಅಪಾತ್ರರು ನಿಮ್ಮ ದಾನದ ಹಣದಿಂದ ಹೀನ ಕಾರ್ಯಗೈದರೆ ಅದಕ್ಕೆ ಹೊಣೆಯಾರು ? ಎಂಬುವದೇ ಅವರಿಗಿದ್ದ ಸಮಸ್ಯೆ. ಇದಾದರೂ ಅಹಿಂಸೆಯ ಒಂದು ಮೇಲ್ಮಟ್ಟವೆಂದು ಹೇಳಬಹುದು. ಇದರಲ್ಲಿ ಒಂದು ವಿವೇಚನೆ ಮುಂದುವರಿದಷ್ಟು ಅಪಾತ್ರರು ಮಾಡಿದ ಪಾಪಕ್ಕೆ ತಾವೇ ಕಾರಣರೆಂದು ಭಾವ ಧೃಡಪಡಿಸುತ್ತದೆ. ಭಯಭೀತಿಗಳಿಂದ ಮನ ಕಂಪಿಸುತ್ತದೆ. ಅಂಥವರಿಗೆ ದಾನವನ್ನೀಯುವದೇ ಬೇಡ ಎಂದು ಅಂತ ರ್ವಾಣಿಯೊಂದು ಮಾರ್ನುಡಿಯುತ್ತದೆ.

ಇದರ ಪ್ರತಿಫಲದಿಂದ ಮನುಷ್ಯನಲ್ಲಿ ದೈವೀ ಭಕ್ತಿಯು ಜಾಗ್ರತವಾಗುತ್ತದೆ. ಆಗ ಅವನು ವೀತರಾಗ ಭಯಕ್ರೋಧಿಯಾಗಲು ತವಕಿಸುತ್ತಾನೆ. ಸಮತ್ವ ಯೋಗ ಸಾಧಿಸಲೆಳಿಸುತ್ತಾನೆ. ಇದನ್ನು ಕೈವಶಪಡಿಸಿಕೊಳ್ಳುವದು ಸುಲಭಸಾಧ್ಯವಲ್ಲ. ಯಾರು ಏನೇ ಅನ್ನಲಿ, ಜಗವೆಲ್ಲ ಹೊಗಳಲಿ, ತೆಗಳಲಿ, ಹೊಡೆಯಲಿ, ಹಾಡಿ ಎತ್ತಿಕೊಳ್ಳಲಿ, ಸನ್ಮಾನಿಸಲಿ, ಸಾಗರದಿ ನೂಕಲಿ, ಏನೇ ಆಗಲಿ ತನ್ನ ಠಾವಿನಲ್ಲಿ ಶುದ್ಧಾತ್ಮನಾಗಿರಬೇಕು; ಸಮತ್ವವನ್ನು ಸಾಧಿಸಿಕೊಳ್ಳಬೇಕು. ಅದಕ್ಕಾಗಿ—

"ಆವನಾಗಿ ಒಬ್ಬನು ನಿಡುಮುಳ್ಳಿನ ಪೊರಳ್ಳುಗೆಯ ಮೇಣಾ ಪಾಂಸೆಯ ಹಾಸಿನ ಮೇಲೆ ಪೊರಳ್ಳುಗೆಯ; ಪೊರಳ್ದಡೆ ಮನ ವಿಸ್ಕಂದವಾಗದೊಂದೀಯಂದದಲ್ಲಿಪ್ಪಂತಪ್ಪ ನಿಮ್ಮದೊಂದು ಸಮತಾ ಗುಣ ಎನ್ನನೆಂದು ಪೊರ್ದಿಪ್ಪುದು ಹೇಳಾ ಕಪಿಲಸಿದ್ಧಮಲ್ಲಿಕಾರ್ಜುನ."
ಎಂದು ಮೊರೆಯಿಡಬೇಕು; ಕೊರಗಬೇಕು, ಕರಗಬೇಕು.

ಪ್ರಾಪಂಚಕನಾಗಿ ಬಾಳುವವನಿಗೆ ಇದೆಲ್ಲವು ಸಾಧ್ಯವೇ ? ಈ ಸಂಸಾರದಲ್ಲಿ ಪ್ರತಿ ಕ್ಷಣ ಕ್ಷಣಕ್ಕೂ ಪ್ರತಿಕಾರ ಮಾಡಬೇಕಾಗುತ್ತದೆ. ಹಿಂಸೆಗೆ ಹಿಂಸೆಯನ್ನು ನೀಡಬೇಕಾಗುತ್ತದೆ. ಸೇಡಿಗೆ ಸವ್ವಾಸೇರಾಗಬೇಕಾಗುತ್ತದೆ. ಅದು ಪಾಪವಾಗದು. ನ್ಯಾಯದ ರಕ್ಷಣೆ ! ಅನ್ಯಾಯವನ್ನು ಸಹಿಸುವದೇನು ಕಠಿಣವಲ್ಲ. ಆದರೆ ಹಾಗೆ ಮಾಡುವದು ಮಹಾ ಅಪರಾಧ. ಅಪರಾಧಿಯನ್ನಿಸಿಕೊಳ್ಳುವದಕ್ಕಿಂತಲೂ ಅನ್ಯಾಯವನ್ನು ಹೊಡೆದೋಡಿಸುವದೇ ಲೇಸು. ಕಾರಣ ಅಂಥ ಸಮಯದಲ್ಲಿ ನಾವು ಕೈಕಟ್ಟಿ ಕುಳಿತರೆ ಹೇಡಿಗಳಾಗುವೆವು ಅಲ್ಲದೆ ನಮ್ಮನ್ನವಲಂಬಿಸಿದ ಅಬಲರೂ, ಅಬಲೆಯರೂ, ನಿಸ್ಸಾಯರಾಗಿ ಜೀವ ತೆತ್ತುವ ಪ್ರಸಂಗ ಬರುತ್ತದೆ. ಇಂಥ ಸ್ಥಿತಿಯಲ್ಲಿ ಅಹಿಂಸೆಯ ಗತಿಯೇನು ? ಮನೆಯ ಮಂದಿಯ ಮಾನ ಹೋಗುವಾಗಲೂ ನಾವು ಕಣ್ಣು ಮುಚ್ಚಿ ಕುಳ್ಳಿರಬೇಕೆ ? ಈ ಸಮಸ್ಯೆಗಳ ಪರಿಹಾರವನ್ನು "ಗೀತೆ"ಯು ಈ ರೀತಿ ಬಿಡಿಸುತ್ತದೆ.

"ಸುಖ ದುಃಖೆ ಸಮೆ ಕೃತ್ವಾ ಲಾಭಾ ಲಾಭೌ ಜಯಾ ಜಯೌ-
ತತೋ ಯುದ್ಧಾಯ ಯುಜುಸ್ವ ನೈವಂ ಪಾಪಮವಾಪ್ಸ್ಯಸಿ ||"

ಜೈನ ಧರ್ಮದಲ್ಲಿಯಾದರೂ ಗೃಹಸ್ಥನ ಅನುಕೂಲತೆಗಾಗಿ ಅಹಿಂಸೆಯಲ್ಲಿ ನಾಲ್ಕು ಭಾಗಗಳನ್ನು ಮಾಡಿದ್ದಾರೆ. ಆತ್ಮ ಸಂರಕ್ಷಣಾರ್ಥವಾಗಿ

ಮಾಡುವ ಕಾರ್ಯಗಳೆಲ್ಲ ಹಿಂಸೆಯೆಂದು ಗಣಿಸಲ್ಪಟ್ಟಲ್ಲಿ ನಾವು ನಮ್ಮ ದೇಶವೆಲ್ಲ ಪಾರತಂತ್ರ್ಯಕ್ಕೆ ಒಳಪಡಬೇಕಾದೀತು. ವ್ಯಕ್ತಿಯಿಂದ ಆಗುವ ಕೊಲೆ, ನ್ಯಾಯಾಧೀಶನಿಂದಾಗುವ ಗಲ್ಲಿನ ಶಿಕ್ಷೆಗಳೆಲ್ಲ ಒಂದು ದೃಷ್ಟಿಯಿಂದ ಹಿಂಸೆಗಳೆಂದೆನಿಸಿದರೂ ಅವು ಪಕ್ಷಪಾತ ರಹಿತವಾಗಿದ್ದರೆ ಹಿಂಸೆಯಾಗಲಾರವು.

" ದಂಡೋ ಹೀ ಕೇವಲೋ ಲೋಕಮಿಮಂ ಚಾಮುಂಚ ರಕ್ಷತೀ।
ರಾಜ್ಞಾ ಶತ್ರೌಚ ಪೌತ್ರೇಚ ಯಥಾದೋಷಂ ಸಮಂ ಧೃತಃ ॥ "

(ಸಾಗರ ಧರ್ಮಾಮೃತ ೪-೫)

ಯುದ್ಧಗಳನ್ನಾಗಲಿ, ವೈರಿಗಳನ್ನಾಗಲಿ, ಶಸ್ತ್ರಾಸ್ತ್ರಗಳಿಂದಲೇ ಗೆಲ್ಲಬೇಕೆಂಬ ಕಟುನಿಯಮವೇನಿಲ್ಲ. ಸಾಮ, ಧಾಮ, ಭೇದ, ದಂಡೋಪಾಯಗಳನ್ನು ಮೀರಿ ಮತ್ತೊಂದು ಅಸ್ತ್ರವಿದೆ. ಅದುವೇ ಅಂತಃಶಕ್ತಿ; ಅಂತರಾತ್ಮದ ಪ್ರಭಾವ.

ಹೊಡೆದವರಿಗೆ ಹೊಡೆಯುವದರಿಂದ ದ್ವೇಷವು ಬೆಳದೀತೆ ಹೊರತು ಶಾಂತಿಯು ಲಭಿಸಲಾರದು. ಶಾಂತಿಯು ಅಂತರ್ನಿಹ ವಸ್ತು. ಅದನು ನಾವು ನಮ್ಮಲ್ಲಿಯೇ ವೃದ್ಧಿಗೊಳಿಸಿಕೊಳ್ಳಬೇಕು. ಆದರ ಬೆಳಕನ್ನು ಹಿಂಸೆಗಾರನ ಹೃದಯದಲ್ಲಿ ಹರುವಬೇಕು. ಇದುವೇ ಎರಡು ಹೃದಯಗಳನ್ನು ಜೋಡಿಸುವ, ದ್ವೇಷವನ್ನು ಓಡಿಸುವ ಪ್ರೇಮದ ಸಾಕಳಿಯೆಂದು ಬುದ್ಧಮತ.

"ದ್ವೇಷವು ದ್ವೇಷದಿಂದ ಅಳಿಯದೆ ಪ್ರೀತಿಯೇ ದ್ವೇಷಕ್ಕೆ ಮದ್ದು" ಎಂಬುವದು ಗಾಂಧೀಜಿಯವರ ವಾದ.

"ತನಗೆ ಮುನಿದವರಿಗೆ ತಾ ಮುನಿಯಲೇಕಯ್ಯ" ಎಂಬುವದು ಬಸವಣ್ಣನವರ ಹಿತವಚನ.

ಇವೆಲ್ಲವೂ ಆ ಅಂತಃಶಕ್ತಿಯ ಅಮರ ಕಿರಣಗಳು. ಈ ವಿಚಾರ ಮೊಳೆದು ಬೆಳೆದು ಎಲ್ಲರಲ್ಲಿ ಉಳಿದಾಗ ವಿಶ್ವಶಾಂತಿಯು ಲಭಿಸುವದು. ವಿಶ್ವಬಂಧುತ್ವ ಬೆಳೆಯುವದು. ವಿಶ್ವವೆಲ್ಲ ಒಂದೇ ಕುಟುಂಬವಾಗುವದು.

ಈ ಕಾರ್ಯ ಭಾರತದಿಂದಲೇ ಮಾತ್ರ ಸಾಧ್ಯವೆಂದು ಹೇಳಬಹುದು. ಭಾರತಿಯರ ಗಾಯತ್ರಿ ಮಂತ್ರವು ಬಹುಕಾಲದಿಂದಲೂ ವಿಶ್ವದ ಐಕ್ಯವನ್ನು ಬೋಧಿಸುತ್ತ ಬಂದಿದೆ. " ವಾಸುದೈವ ಕುಟುಂಬಿಕಃ " ಎಂದು ಹೇಳುವ

ನಮ್ಮಲ್ಲಿ ಅವಿಭಕ್ತ ಕುಟುಂಬ ಪದ್ಧತಿಯು ಹೆಚ್ಚು ಬಳಿಕೆಯಲ್ಲಿದೆ. ಅಂದ ಮೇಲೆ ಭಾರತವು ವಿಶ್ವದ ಐಕ್ಯವನ್ನು ಸಾಧಿಸಲಾರದೇ ?

ಹಿಂದೊಮ್ಮೆ ಭಾರತವು ವಿಶಾಲ ಭಾರತವಾಗಿ ಅವರೆಲ್ಲರಿಗೆ ಶಾಂತಿ ಸಮೃದ್ಧಿಯನ್ನಿತ್ತಿತು. ಅದು ಅಹಿಂಸೆಯಿಂದ, ಭಾರತವು ಆದಿಯಿಂದಲೂ ಅಹಿಂಸೆಯ ಬೀಡು. ನಮ್ಮ ರಕ್ತದಲ್ಲಿಯೂ ನಮ್ಮ ಪೂರ್ವಜರ ಸಹಕಾರ, ಸಹಜೀವನ, ಪರಸ್ಪರ ಪ್ರೇಮ, ದಯಾಭಾವವು ಚಲಿಸುತ್ತಿದೆ. ಸಹಜೀವ ನಕ್ಕೆ ಪರಸ್ಪರ ಪ್ರೇಮ ಬೇಕು. ಪ್ರೇಮಕ್ಕೆ ದಯಬೇಕು.

"ದಯವಿಲ್ಲದ ಧರ್ಮವದಾವುದಯ್ಯ, ದಯವೇ ಬೇಕು ಸಕಲ ಪ್ರಾಣಿ ಗಳಲ್ಲಿ. ದಯವೇ ಧರ್ಮದ ಮೂಲವಯ್ಯ ! " ಎಂದು ಬಸವಣ್ಣನವರು ದಯದ ಮಹತ್ವವನ್ನು ಬೀರಿದ್ದಾರೆ.

ಇಂಥ ಧರ್ಮವೀರರ ನಾಡು ಭಾರತ. ಜೀವಿಗಳಲ್ಲಿ ದಯವುಳ್ಳವರ ಬೀಡು ಭಾರತ. ಸಕಲರಲ್ಲಿ ಸಹಕಾರ ಪ್ರೇಮವನ್ನು ತೋರಿ ಬೆಳಗಿದವರ ನೆಲೆಬೀಡು ಭಾರತ. ಇಂಥ ಭಾರತಕ್ಕೆ ಅಮೂಲ್ಯವಾದ ಕಾಣಿಕೆಯನ್ನಿ ತ್ತಿತು ಕರ್ನಾಟಕ. ಅದೂ ವೀರಶೈವ ಧರ್ಮದ ಮುಖಾಂತರ.

ಶರಣರು ಅಹಿಂಸಾವಾದಿಯು. ಹೇಡಿಯಲ್ಲ, ಜಗತ್ತಿನ ಯಾವ ಶಕ್ತಿಗೂ ಬಾಗದ ವೀರಾಧಿ ವೀರನವನು; ಅಮರನು, ಅಜಯನು, ಅನಂತ ನವನು. ಅವನ ನುಡಿಯೇ ನುಡಿ; ಅವನ ನಡೆಯೇ ನಡೆ; ಅವನ ದೃಷ್ಟಿಯೇ ಕೋಟಿ ಸೂರ್ಯರನ್ನು ನಾಚಿಸುವ ಬೆಳಕು. ಆ ಬೆಳಕಿನಲ್ಲಿ ಅಜ್ಞ ಜನರ ಅಂಧಃಕಾರ ಅಳಿಯುತ್ತದೆ. ಮನದ ಕಲ್ಮಶ ಕಳೆಯುತ್ತದೆ. ನಾಡುನಡೆ ಯಲ್ಲೆಲ್ಲ, ಅವರು ಚರಿಸಿದಲ್ಲೆಲ್ಲ ಸಮೃದ್ಧಿ ಶಾಂತಿಗಳು ಬೆಳೆಯುತ್ತವೆ ಎಂದು ಸಾರಿದರು; ತೋರಿದರು. ಇಂಥ ಬಾಳನ್ನು ಬಾಳಿದರು ಶರಣರು.

ಶರಣರು ಅಹಿಂಸೆಗೆ ಅಕುಂಚಿತ ಅರ್ಥವನ್ನು ಹಚ್ಚಲಿಲ್ಲ. ವಿಶಾಲ ದೃಷ್ಟಿಯಿಂದ ವಿವೇಚಿಸಿ ಆಚರಿಸಿದರು. ತನ್ನಲ್ಲಿ ಮೊದಲು ಅಹಿಂಸೆ ಮೊಳೆಯಬೇಕು, ಸಮಾಜದಲ್ಲಿ ಅದು ಬೆಳೆಯಬೇಕು. ಸೃಷ್ಟಿಯಲ್ಲಿ ಅದು ಉಳಿಯಬೇಕು ಎಂಬ ಧ್ಯೇಯವಾದಿಗಳವರು.

ಶರಣರು ಈ ಧ್ಯೇಯಕ್ಕಂಟಿಕೊಳ್ಳಲು ಕಾರಣವೇನು ?

ಅಹಿಂಸೆಯು ಕಾಯಾ, ವಾಚಾ, ಮನಸ್ಸುಗಳನ್ನು ಪವಿತ್ರಗೊಳಿಸಿ, ಆತ್ಮದಲ್ಲಿ ಅಚಲ ಶ್ರದ್ಧೆಯನ್ನೀಸುವಂತದ್ದಾಗಿದೆ. ಹಿಂಸೆಯಿಂದ ಮನುಷ್ಯನು

ಮದೋನ್ಮತ್ತನಾಗಿ ತನ್ನನ್ನೇ ತಾನು ಸರ್ವನಾಶ ಮಾಡಿಕೊಳ್ಳುವನು. ಅಂತೇ ಅವನ ಅಭಿವೃದ್ಧಿಗೆ ಅಹಿಂಸೆ ಬೇಕು. ಅಹಿಂಸೆಯಿಂದ ಜ್ಞಾನೋದಯವಾಗುವದೆಂದು 'ಗೀತೆ' ಸಾರುತ್ತದೆ.

"ಅಮಾನಿತ್ವಮ ದಂಭಿತ್ವಮ್ ಅಹಿಂಸಾ ಕ್ಷಾಂತಿ ರಾರ್ಜವಮ್,
ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮ ವಿನಿಗ್ರಹಃ"
(ಗೀತಾ ೧೩.೮)

ಸರ್ವ ಧರ್ಮಗಳಲ್ಲಿಯೂ ಅಹಿಂಸೆಯು ಪ್ರಾಮುಖ್ಯ ಸ್ಥಾನವನ್ನು ಹೊಂದಿದೆ.

"ಅಹಿಂಸಾ ಪರಮೋಧರ್ಮಃ ಅಹಿಂಸಾ ಪರಮಂ ಸುಖಂ।
ಅಹಿಂಸಾ ಧರ್ಮಶಾಸ್ತ್ರೇಷು ಸರ್ವೇಷು ಪರಮಂ ಸ್ಮೃತಂ॥

ಶರಣರ ಕೈಗೂಸಾಗಿ ಬೆಳೆದ ವೀರಶೈವ ಧರ್ಮವಾದರೂ ಕಪಿಮಾನವನನ್ನು ಅತಿಮಾನವನನ್ನಾಗಿ ಮಾರ್ಪಡಿಸಲು ಅಹಿಂಸೆಯನ್ನೇ ಮದ್ದಾಗಿ ಉಪಯೋಗಿಸಿದೆ. ಈ ಮದ್ದು ಕೊಟ್ಟು ಅನೇಕ ಮುದ್ದು ಕಂದರನ್ನು ತಯಾರಿಸಿದೆ. ಅಂತೇ ವಿಶ್ವವಂದ್ಯವಾಗಿ ನಿಂತಿದೆ. ವಿಶ್ವದ ಧರ್ಮಗಳಲ್ಲೆಲ್ಲ ಒಂದು ಅಗ್ರಸ್ಥಾನವನ್ನು ಪಡೆದಿದೆ.

ವೀರಶೈವರ ಈ ಪ್ರಾಮುಖ್ಯತೆಗೆ ಅವರಲ್ಲಿರುವ ಅತ್ಯುಚ್ಚ ಮೆಟ್ಟಲು ಅಹಿಂಸೆಯೇ ಮೂಲವೆಂದು ಬೇರೆ ಹೇಳಬೇಕಿಲ್ಲ.

"ಜಗತ್ತಿನ ಅಹಿಂಸಾವಾದಿಗಳಿಗೆಲ್ಲ ನಾನು ವಂದಿಸಿ, ಮುಗಿಸುವೆ."

    

# ಮಹಾದೇವಿಯಕ್ಕನ ವಿಚಾರಗಳು.

[ ಲೇಖಕಿ:— ಶ್ರೀಮತಿ ಶಾಂಭವಿ ಕೆರೂಡಿ. ]



ಮಂತ್ರವಾಹಕನ ಹಸ್ತಾಂತ್ಪರ ಬೊಂಬೆಯುದು ಪರ ।
ತಂತ್ರದಿಂದಾಡುವಂತೆನ್ನಾಡಿಸುವ ।
ಸ್ವತಂತ್ರ ಶ್ರೀ ಗುರುವೆ ಕೃಪೆಯಾಗು ॥

ಇಂದು ಶಿವಶರಣರಲ್ಲಿ ಶ್ರೇಷ್ಠರಾದ ಮಹಾದೇವಿಯಕ್ಕನವರು ಜನಿಸಿದ ಈ ದಿನವು ನಮ್ಮೆಲ್ಲರ ಭಾಗ್ಯವೇ ಸರಿ. ಈ ಪುಣ್ಯ ಶ್ರೀ ಸಿದ್ಧಲಿಂಗ ಶಿವಯೋಗಿಗಳ ಕೃಪೆ ಹಾಗೂ ನೆರೆದ ಗುರುವರ್ಯರ ಆಶೀರ್ವಾದ ಬಲದಿಂದ ನಮಗೆ ದೊರೆತಿದೆ. ಸುಯೋಗವೂ ಒಂದು ಕಾರಣವಾಗಿದೆ. ಇಂದು ನಾವೆಲ್ಲರೂ ಆದರ್ಶ ಅಕ್ಕನವರ ನಾಮಸ್ಮರಣೆ ಮಾಡುವದರಲ್ಲಿ ಹುರುಪುಳ್ಳವರಾಗಿರುತ್ತೇವೆ. ಅಕ್ಕನವರು ಆಡಿದ ಒಂದೊಂದು ವಚನವೂ ನಮ್ಮೆಲ್ಲರಿಗೆ ಪಾಠ ಕಲಿಸುವಂತಹದಿದೆ.

ದಿವ್ಯ ಮೂರ್ತಿಯಾದ ಅಕ್ಕನವರು ವೀರಶೈವ ದಂಪತಿಗಳ ಉದರದಲ್ಲಿ ಜನಿಸಿದರೆಂಬುದು ತಮಗೆಲ್ಲ ತಿಳಿದ ಸಂಗತಿಯಷ್ಟೆ? ತಾಯಿ—ತಂದೆಗಳ ನೀತಿನಡತೆಗಳು ಮಕ್ಕಳಲ್ಲಿ ಸಹಜವಾಗಿ ಒಡಮೂಡುವದು ರೂಢಿಯಾಗಿದೆ. ಅಂತೆಯೇ ಶಿವಭಕ್ತಿಯುಳ್ಳ ತಾಯಿ-ತಂದೆಗಳ ಆಚರಣೆಗಳು ಅಕ್ಕನವರಲ್ಲಿ ಒಡಮೂಡಿದ್ದವು.ಆ ಆಚರಣೆಯಲ್ಲಿಯೇ ಬಂದಿದ್ದವು.

ಅಕ್ಕನವರು ಯೌವ್ವನವತಿಯರಿದ್ದಾಗ ಕೌಶಿಕರಾಜನು ವೈಹಾಳಿಗೆ ಬಂದಾಗ ಅವರನ್ನು ನೋಡಿದ್ದನು. ಅಕ್ಕನವರನ್ನು ವಿವಾಹವಾಗಲು ಹಾತೊರೆದನು. ಆಗ ಅಕ್ಕನವರು ಅವನಿಗೆ ಮೂರು ಕರಾರುಗಳನ್ನು ಮಾಡಿದರು. ಯಾವವೆಂದರೆ ಮೊದಲನೆಯದಾಗಿ ನನ್ನ ಪೂಜೆಗೆ ಅಡ್ಡಿಯಾಗಬಾರದು. ಎರಡನೆಯದಾಗಿ ನಾನು ಮಾಡುವ ಗುರು-ಲಿಂಗ-ಜಂಗಮರ ಸೇವೆಗೆ ತೊಂದರೆ ಕೊಡಬಾರದು. ಮೂರನೆಯದಾಗಿ ನೀನು ಶಿವಭಕ್ತನಾಗಲೇಬೇಕು. ಅಂದರೆ ಮಾತ್ರ ನಿನ್ನನ್ನು ಮದುವೆಯಾಗುವೆನೆಂದರು. ಕೌಶಿಕರಾಜನು ಶಿವಭಕ್ತನಾಗಲೊಪ್ಪದೆ ಅಕ್ಕನವರ ಸೆರಗನ್ನು ಸೆಳೆಯುಲು

ದ್ಯುಕ್ತನಾಗಲು ಅಕ್ಕನಾದರು ನಾಚವೆ ಬೆಚ್ಚದೆ. ಬೆದರದೆ ದಿಗಂಬರೆಯಾಗಿ ಹೊರಟರು. ಎಂಥಹ ಅಪ್ರತಿಮ ಸಾಹಸ? ಎಂಥ ವೈರಾಗ್ಯಶಾಲಿನಿ? ಈ ಸನ್ನಿವೇಶದಿಂದ ವೀರಶೈವ ಮತವೇ ಶ್ರೇಷ್ಠವೆಂಬುದು ವ್ಯಕ್ತವಾಗುವದು.

ಅಕ್ಕ ಮಹಾದೇವಿಯುವರು ದಿಂಗಂಬರೆಯಾದ ಸುದ್ದಿಯನ್ನು ಕೇಳಿದೊಡನೆ ಅವರ ತಾಯಿಯುವರಾದ ಸುಮತಿದೇವಿಯುವರು ಮರುಗುತ್ತ ಬಗೆಗೆಟ್ಟು ಓಡುತ್ತಬಂದು ಮಗಳನ್ನು ಬಿಗಿದಪ್ಪಿ "ಮುದ್ದು ಮಗಳೇ ಹೀಗೆ ದಿಗಂಬರೆಯಾಗಿ ಹೊರಟರೆ ಜನರು ನಿಂದಿಸುವರವ್ವ, ಕಾಯುದಿ ಸೀರೆಯನ್ನುಡು ಎನಲು ಅಕ್ಕನವರು—

"ಬೆಟ್ಟದಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದೊಡೆಂತವ್ವ.
ಸಮುದ್ರದ ತಡೆಯಲ್ಲಿ ಮನೆಯ ಕಟ್ಟಿಸಿ ನೊರೆ ತೆರೆಗಳಿಗಂಜಿದೊಡೆಂತವ್ವ.
ಸಂತೆಯೊಳಗೊಂದು ಮನೆಯ ನಿರ್ಮಿಸಿ ಶಬ್ದಕ್ಕೆ ನಾಚಿದೊಡೆಂತವ್ವ
ಚನ್ನಮಲ್ಲಿಕಾರ್ಜುನದೇವ."

ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ-ನಿಂದೆಗಳು ಬಂದರೆ ಕೋಪವ ತಾಳದೆ ಸಮಾಧಾನಿಯಾಗಿರಬೇಕು ಎಂದು ಉತ್ತರಿಸಿದರು. ಅಂದರೆ ಒಂದು ಗುಡ್ಡದಲ್ಲಿ ಮನೆಮಾಡಿಕೊಂಡಿದ್ದು ಅಲ್ಲಿಯೇ ವಾಸಿಸುವ ಕ್ರೂರ ಪ್ರಾಣಿಗಳಿಗೆ ಬೆದರಿದರೆ, ಅಲ್ಲಿ ನಮ್ಮ ವಾಸ ಸಾಧ್ಯವೆ? ಸಮುದ್ರದ ದಂಡೆಯಲ್ಲಿಯೇ ಮನೆಕಟ್ಟಿಕೊಂಡಿದ್ದು ಆ ಸಮುದ್ರದಲ್ಲಿಯೇ ಉಕ್ಕೇರುವ ತೆರೆಗಳಿಗೆ ಬೆದರಿದರೆ ಅದೂ ಆಗದು. ಸಂತೆ ನೆರೆಯುವಲ್ಲಿ, ಮನೆಮಾಡಿಕೊಂಡಿದ್ದು ಗದ್ದಲ ಬಹಳ ಎಂದರೆ ಆ ಮನೆಯನ್ನೇ ಬಿಟ್ಟುಬಿಡಲಿಕ್ಕಾದೀತೆ? ಈ ಭೂಮಿಯ ಮೇಲೆ ಹುಟ್ಟಿದ ಬಳಿಕ ಸುಖ-ದುಃಖಗಳೂ, ಹೊಗಳಿಕೆ-ತೆಗಳಿಕೆಗಳೂ ಬಂದೇಬರುತ್ತವೆ. ಅವುಗಳನ್ನು ಸಮವೆಂದು ಭಾವಿಸಿ ಶಾಂತಿಯಿಂದ ಇದ್ದು ದೇವಾದಿದೇವನನ್ನು ಧ್ಯಾನಿಸಬೇಕು ಎಂದು ಅಕ್ಕನವರು ಹೇಳುತ್ತಾರೆ. ಇದರಿಂದ ಯಾರೇ ಆಗಲಿ ತಾವು ಮಾಡುವ ಮಹತ್ವವಾದ ಕಾರ್ಯಗಳಿಗೆ ತೊಂದರೆಗಳು ಬಹಳಬರುತ್ತವೆ. ಆ ತೊಂದರೆಗಳಿಗೆ ಲಕ್ಷ್ಯಗೊಡದೆ ತಮ್ಮ ಉದಾತ್ತವಾದ ಗುರಿ ಸಾಧನೆಯಲ್ಲಿರಬೇಕೆಂಬ ಪಾಠವನ್ನು ಕಲಿಯುತ್ತೇವೆ.

ಸುಮತಿದೇವಿಯುವರು ಧನಿಯನ್ನು ಬಿಟ್ಟರೆ ಭಕ್ತನೊಡನೆ ಮದುವೆ ಮಾಡುವೆ ಬಾರವ್ವಾ ಎಂದು ಅಂಗಲಾಚಿ ಹೇಳಿದರು. ಅದಕ್ಕೆ ಅಕ್ಕನವರು—

"ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚಲುವಂಗೆ ನಾನೊಲಿದೆನವ್ವ,
ಎಡೆಇಲ್ಲದ, ಕಡೆಇಲ್ಲದ, ತೆರಹಿಲ್ಲದ ಚಲುವಂಗೆ ನಾನೊಲಿದೆನವ್ವ,
ಭವವಿಲ್ಲದ, ಭಯವಿಲ್ಲದ, ನಿರ್ಭಯ ಚಲುವಂಗೆ, ನಾನೊಲಿದೆನವ್ವ;
ಕುಲಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆನವ್ವ. ಚನ್ನ
ಮಲ್ಲಿಕಾರ್ಜುನ ಚಲುವ ಗಂಡನೆನಗೆ. ಈ ಕಾರಣ ಈ ಲೋಕದ
ಗಂಡರನೊಯ್ದು ಒಲೆಯೊಳಗಿಕ್ಕು" ಎಂದು ಉತ್ತರಿಸಿದರು.

ಎಂಥ ಉದಾತ್ತ ತತ್ವವಿದು! ಅವರ ಮನೋನಿಶ್ಚಯ ಎಷ್ಟು ಧೃಢವಾದುದು! ಅಷ್ಟು ಚಿಕ್ಕ ವಯಸ್ಸಿನಲ್ಲಿಯೇ ಅವರಿಗೆ ಪರಮಾತ್ಮನ ಎಲ್ಲ ಇರವುಗಳು ತಿಳಿದಿದ್ದವಲ್ಲ! ಪರಮಾತ್ಮನಿಗೆ ಹುಟ್ಟುಸಾವುಗಳಿಲ್ಲ. ಆಕಾರ ರಹಿತ, ಸೀಮಾತೀತ ಅಂಜಿಕೆಯೇ ಇಲ್ಲ. ಇವೆಲ್ಲವುಗಳಲ್ಲಿಯೂ ಜಯಶಾಲಿಯಾದ ನಿತ್ಯ ನಿರಂಜನ ಮೂರ್ತಿಗೆ ನಾನೊಲಿದು ಹೊರಟಿರುವೆ. ಈ ಲೋಕದ ಜನರು ಭವಭಯ ತೊಂದರೆಗಳಿಗೆ ತುತ್ತಾಗಿರುವರು. ಅಂಥವರನ್ನು ಸರ್ವಥಾ ಒಲ್ಲೆನೆಂದು ತಮ್ಮ ಅಚಲವಾದ ಗುರಿಯನ್ನೇ ಸಾಧಿಸಿದ್ದಾರೆ.

ಅಕ್ಕನವರು ಕಾಡಿನಲ್ಲೆಲ್ಲ ಅಲೆಯುತ್ತ ಕಲ್ಯಾಣದಲ್ಲಿ ನೆರೆದಿರುವ ಅನುಭವ ಮಂಟಪವನ್ನು ಹೊಕ್ಕರು. ಅಲ್ಲಿ ನೆರೆದಿದ್ದ ಎಲ್ಲ ಶರಣರೂ ಚಕಿತರಾದರು. ಶೂನ್ಯಸಿಂಹಾಸನದಲ್ಲಿ ವಿರಾಜಿಸುವ ಅಲ್ಲಮಪ್ರಭುವು "ಉದಮದ ಯೌವ್ವನದಿಂ ಕೂಡಿದ ಸತಿ ನೀನಿತ್ತೇತಕೆ ಬಂದೆವ್ವ. ಹದುಳದಿ ನಿನ್ನಯ ಗಂಡನ ಹೆಸರನು ಪೇಳ್ದೊಡೆ ಕುಳ್ಳಿರು. ಇಲ್ಲದಿರೆ ನಮ್ಮ ಗುಹೇಶ್ವರ ಶರಣರ ಸಂಗಸುಖವನು ಬಯಸದೆ ನಡೆ ತಾಯಿ? ಎಂದರು. ಅದಕ್ಕೆ ಅಕ್ಕನವರು—

"ಕನಕದ ತೋರಣ, ವಜ್ರದ ಕಂಬವು, ಪವಳ ಚಪ್ಪರವಿಕ್ಕಿದರು.
ಮಿನುಗುವ ನೆಲದಲಿ ಸೇಸೆಯನಿಕ್ಕುತ ವಿಭೂತಿಯನೆ ಪೂಸಿ, ಕಂಕಣ
ವನೇ ಕಟ್ಟಿ, ಮದುವೆಯ ಮಾಡಿದರೆಮ್ಮವರೆನ್ನ. ಸದಮಳ ಗುರುವೇ
ಶೆತ್ತಿಗನಾದನು. ಅಂಗವೆ ಆದನು ಮದುವಳಿಗ. ಇದಕಾರಣ ಚೆನ್ನ
ಮಲ್ಲಿಕಾರ್ಜುನನೇ ಚಲುವ ಗಂಡನೆನಗೆ" ಎಂದಳು.

ಅಂದರೆ ದೀಕ್ಷಾಸಮಯದಲ್ಲಿ ಲಿಂಗೈಕ್ಯನೊಡನೆ ಮದುವೆ ಮಾಡುತ್ತಾರೆ. ಅದಕ್ಕಾಗಿಯೇ ಶರಣಸತಿ, ಲಿಂಗಪತಿ ಎನ್ನುತ್ತಾರೆ. ಅದಕ್ಕೆ ಪ್ರಭುದೇವರು ಲಿಂಗನೊಡನೆ ಮದುವೆಯಾದರೆ ಈ ದಿಗಂಬರವೇಕೆ? ಎಂದು ಪ್ರಶ್ನಿಸಿದರು. ಅದಕ್ಕೆ ಅಕ್ಕನವರು:—

" ಮಂಗಳವೇ ಮಜ್ಜನವೆನಗೆ, ವಿಭೂತಿಯೇ ಒಳುಗುಂದದರಿಷಿಣವೆನಗೆ, ದಿಗಂಬರವೇ ದಿವ್ಯಾಂಬರವೆನಗೆ, ಶಿವಪಾದರೇಣುವೇ ಅನುಲೇಪನವೆನಗೆ, ರುದ್ರಾಕ್ಷಿಯೇ ಮೈದೊಡಿಗೆ ಎನಗೆ, ಶರಣರ ಪಾದಗಳೇ ತೊಂಡಿಲವೆನಗೆ, ಚನ್ನಮಲ್ಲಿಕಾರ್ಜುನನೇ ಚಲುವ ಗಂಡನೆನಗೆ "

ಎಂದು ಉತ್ತರಿಸಿದರು. ಆದರ್ಶ ಅಕ್ಕನವರ ಆಭರಣಗಳೇ ಬೇರೆ. ವಿಭೂತಿಯು ಅವರ ಸೌಂದರ್ಯ ಹೋಗದಂತ ಅರಿಷಿಣ. ದಿಗಂಬರತ್ವವೇ ಬಹಳ ಸುಂದರವಾದ ವಸ್ತ್ರಾಲಂಕಾರ. ಶಿವಪಾದ ಧೂಳಿಯೇ ಲೇಪಿತ ವಸ್ತು. ರುದ್ರಾಕ್ಷಿಗಳೇ ಬೆಲೆಯುಳ್ಳ ಆಭರಣಗಳು. ಶರಣರ ಪಾದಗಳೇ ಬಾಸಿಂಗಗಳಿದ್ದಂತೆ. ಶ್ರೀ ಚೆನ್ನಮಲ್ಲಿಕಾರ್ಜುನನೇ ಅಕ್ಕನವರ ಚಲುವ ಪತಿ, ಅಕ್ಕನವರ ಉತ್ತರ ಕೇಳಿ ಎಲ್ಲ ಶರಣರೂ ಚಕಿತರಾದರು.

ಅಕ್ಕನವರು:—

ನೆಲದಮರೆಯ ನಿಧಾನದಂತೆ. ಫಲದ ಮರೆಯ ರುಚಿಯಂತೆ. ಶಿಲೆಯ ಮರೆಯ ಹೇಮದಂತೆ, ತಿಲದ ಮರೆಯ ತೈಲದಂತೆ ಭಾವದ ಮರೆಯ ಬ್ರಹ್ಮವಾಗಿಪ್ಪ ಚನ್ನ ಮಲ್ಲಿಕಾರ್ಜುನನ ನಿಲವನಾರೂ ಅರಿಯರು.

ಎಂದು ವಚನ ಹಾಡಿದ್ದಾರೆ. ಅಂದರೆ ಒಂದು ಭೂಮಿಯಿಂದ ದ್ರವ್ಯಗಳಿಸಬೇಕಾದರೆ ಆ ನೆಲದಲ್ಲಿ ಅತಿ ಧೃಢವಾಗಿ ಬೇನೆಬೇಸರಿಕೆಇಲ್ಲದೆ ಕೆಲಸ ಮಾಡಿದರೆ ಅದರಿಂದ ಸರಿಯಾದ ಬೆಳೆ ಬರುತ್ತದೆ. ಯತೇಚ್ಛವಾದ ಬೆಳೆಯಿಂದ ದ್ರವ್ಯ ಸಂಪಾದನೆಯಾಗುತ್ತದೆ. ಫಲದ ಮರೆಯ ರುಚಿಯಂತೆ ಯಾವುದೇ ಹಣ್ಣನ್ನು ರುಚಿಯಾಗುವಂತೆ ತಿನ್ನಬೇಕಾದರೆ ಆ ಹಣ್ಣು ಪರಿಪಕ್ವವಾದ ಮೇಲೆ ತಿಂದರೆ ರುಚಿಸುತ್ತದೆ. ಕಸುಗಾಯಿ ಇದ್ದಾಗ ಅರ್ಧ ಮರ್ಧ ಹಣ್ಣಾದಾಗ ತಿಂದರೆ ಒಗರೋ ಹುಳಿಯೋ ಆಗಿರುತ್ತದೆ. ಅದಕ್ಕೆ ನಿಜವಾದ ರುಚಿ ಬಂದಿರುವದಿಲ್ಲ. ರವೀಂದ್ರನಾಥ ಟಾಗೋರರನವರು ಹೀಗೆ ಹೇಳಿದ್ದಾರೆ:—

How for are you from me, O Fruit ? I am hidden in your heart, O Flower. ಇದರ ಅರ್ಥ ಏನೆಂದರೆ, ಹೂ ಹಣ್ಣನ್ನು ಕೇಳುತ್ತದೆ. "ಎಲೆ ಹಣ್ಣೆ ನನ್ನಿಂದ ಎಷ್ಟು ದೂರವಿರುವೆ ?" ಆಗ ಹಣ್ಣು— "ಓ ಹೂವೇ ನಿನ್ನ ಹೃದಯದಲ್ಲೇ ನಾನಡಗಿರುವೆ" ಎಂದಿತಂತೆ. ಹಾಗಾದರೆ ಹೂವಿನಿಂದ ಹಣ್ಣಾಗುವದೇನೋ ನಿಜ. ಆದರೆ ಹೂವಿನಲ್ಲಿ ಹಣ್ಣಿದೆ ಎಂದು ಹೂವನ್ನೇ ತಿನ್ನಬಹುದೆ ? ಆ ಹೂ ಹಣ್ಣಿನ ರುಚಿ ಕೊಟ್ಟೀತೇ ? ಕೊಡಲಾರದು. ಹೂವಿನಿಂದ ಹಣ್ಣಾಗುವಾಗ ಎಷ್ಟೋ ಮಾರ್ಪಾಟುಗಳಾಗುತ್ತವೆ. ತಿಲದ ಮರೆಯು ತೈಲದಂತೆ ಅಂದರೆ ಎಳ್ಳಿನಲ್ಲಿ ಎಣ್ಣೆ ಇರುತ್ತದೆ. ಆದರೆ ಅದು ಎಳ್ಳನ್ನು ನೋಡಿದೊಡನೆ ದೊರೆಯಲಾರದು. ಆ ಎಳ್ಳನ್ನು ಗಾಣಕ್ಕೆ ಹಾಕಿ ತಿರುವಿ, ಎಳ್ಳಿನ ಚಟ್ಟ ಬೇರೆ ಎಣ್ಣೆ ಬೇರೆ ಮಾಡಿದಾಗ ನಮಗೆ ಬೇಕಾಗಿರುವ ಎಣ್ಣೆ ದೊರೆಯುತ್ತದೆ. ಶಿಲೆಯ ಮರೆಯ ಹೇಮದಂತೆ. ಅಂದರೆ ಕಲ್ಲಿನಲ್ಲಿಯೇ ನಮಗೆ ಬಂಗಾರ ದೊರೆಯುತ್ತದೆ. ಅದನ್ನು ವಿಚಾರಿಸದೆ ಕಲ್ಲೊಂದು ಒಗೆದರೆ ನಮಗೆ ಬಂಗಾರ ದೊರೆಯುವದಿಲ್ಲ. ಅದನ್ನು ಶೋಧಿಸಿ ಒರೆಗಲ್ಲಿಗೆ ತಿಕ್ಕಿ ನೋಡಿದಾಗ ನಮಗೆ ಬೇಕಾಗಿರುವ ಬಂಗಾರ ದೊರೆಯುತ್ತದೆ. ಹೀಗೆ ನೆಲದ ಮರೆಯ ದ್ರವ್ಯ, ಫಲದ ಮರೆಯ ರುಚಿ, ತಿಲದ ಮರೆಯ ತೈಲ, ಶಿಲೆಯ ಮರೆಯ ಬಂಗಾರ ಇವೆಲ್ಲವುಗಳೂ ಅರಿಯದೆ ನೋಡಿದವರಿಗೆ ಹೇಗೆ ಗೊತ್ತಾಗುವದಿಲ್ಲವೋ ಹಾಗೆ ನಮ್ಮ ಭಾವನೆಯ ಮರೆಯಲ್ಲಿರುವ ಸರ್ವವ್ಯಾಪಿಯಾದ ಪರಮಾತ್ಮನ ವಾಸವನ್ನು ಯಾರೂ ಅರಿಯರು. ಅದು ತಿಳಿದಾಗಲೇ ತಿಳಿಯುವದು. ಇದರಂತೆ ನಾವೆಲ್ಲರೂ ತಿಳಿದು ನಡೆದುದಾದರೆ ಮುಕ್ತಿದೇವಿಯು ಮಾಲೆ ಹಾಕುವಳೆಂಬ ಮಾತನ್ನು ಅಕ್ಕನವರು ಒಂದೇ ಒಂದು ವಚನದಲ್ಲಿ ತಿಳಿಸಿದ್ದಾರೆ. ಇದರ ಮರ್ಮವು ಸುಲಭವಾಗಿ ತಿಳಿದು ನಮ್ಮ ನಡೆಯಾಗುವಂತೆ ಕೃಪೆಯಾಗಲೆಂದು ಗುರುವೃಂದವನ್ನು ಭಕ್ತಿಯಿಂದ ಪ್ರಾರ್ಥಿಸುವೆ.

ಅಕ್ಕನವರು ಸುಲಭವಾದ ಒಂದೊಂದು ವಚನದಲ್ಲಿ ಆಳವಾದ ತತ್ವಗಳನ್ನು ತಿಳಿಸಪಡಿಸಿದ್ದಾರೆ. ಅದಕ್ಕೆ ಚನ್ನಬಸವೇಶ್ವರರು ಆದ್ಯರ ಅರವತ್ತು ವಚನಗಳಿಗೆ ದಂಡನಾಯಕರ ಇಪ್ಪತ್ತು ವಚನಗಳಿಗೆ ಪ್ರಭುದೇವರ ಹತ್ತು ವಚನ. ಪ್ರಭುದೇವರ ಹತ್ತು ವಚನಗಳಿಗೆ ಅಜಗಣ್ಣನವರ ಐದು ವಚನ. ಅಜಗಣ್ಣನವರ ಐದು ವಚನಗಳಿಗೆ ಕೂಡಲ ಚೆನ್ನಸಂಗಯ್ಯನಲ್ಲಿ ಮಹಾದೇವಿ

ಯಕ್ಕನವರದು ಒಂದು ವಚನ ಕಾಣಾ ಸಿದ್ಧರಾಮಯ್ಯಾ ಎಂದರು. ಅಂದರೆ ಅಕ್ಕನವರ ಒಂದು ವಚನಕ್ಕೆ ಈ ಎಲ್ಲ ಶರಣರ ಅನೇಕ ವಚನಗಳು ಸರಿಯಾಗುತ್ತವೆ. ಇವರೆಲ್ಲರೂ ಒಂದು ಪ್ರಶ್ನೆಗೆ ಅನೇಕ ಮಾತುಗಳಿಂದ ಉತ್ತರ ಕೊಟ್ಟರೆ ಅಕ್ಕನವರು ಒಂದು ಪ್ರಶ್ನೆಗೆ ಒಂದೇ ಮಾತಿನಲ್ಲಿ ಉತ್ತರ ಕೊಡುತ್ತಾರೆ. ಇಷ್ಟು ಘನವಾದ ಬುದ್ಧಿ ಅವರದು. ಹೇಳಲಸಾಧ್ಯ! ಅಂತೆಯೇ ಮೇಲ್ಪಂಕ್ತಿಯನ್ನು ಪಡೆದಿದ್ದಾರೆ.

ಈ ಎಲ್ಲ ಶರಣರ ಸಂಗ ಸುಖವನ್ನು ಕಂಡು ಅಕ್ಕನವರು ಆನಂದದಿಂದ "ಅರಸಿ ತೊಳಲಿದರಿಲ್ಲ. ಬಯಸಿ ಹೊಕ್ಕರಿಲ್ಲ. ತಪಸ್ಸು ಮಾಡಿದರಿಲ್ಲ. ಅದು ತನ್ನ ಬಹಕಾಲಕ್ಕಲ್ಲದೆ ಬಾರದು. ಶಿವನೊಲಿದಲ್ಲದೆ ಕೈಗೂಡದು. ಶ್ರೀ ಚೆನ್ನಮಲ್ಲಿಕಾರ್ಜುನಂಗೆ ಒಲಿದೆನಾಗಿ ಶ್ರೀ ಸಂಗನಬಸವನ ಶರಣರ ಪಾದವ ಕಂಡು ಬದುಕಿದೆನು" ಎಂದು ಹಾಡಿದ್ದಾರೆ.

ನಮಗೆ ಬೇಕಾದ ವಸ್ತುವನ್ನು ಹುಡುಕಿ ಹುಡುಕಿ ಬೇಸತ್ತರೂ ಅದು ನಮಗ ಸಿಗುವದಿಲ್ಲ. ಈ ಸ್ಥಾನದಲ್ಲಿ ಇದೆ ಎಂದು ಆಶೆಪಟ್ಟು ಹುಡುಕಿದರೂ ಅದು ನಮಗೆ ದೊರೆಯಲಾರದು. ಘೋರವಾದ ತಪಸ್ಸನ್ನು ಮಾಡಿದರೂ ಅದು ದೊರೆಯದು. ನಮಗೆ ಬೇಕಾದ ಅಂದರೆ ಭವ ಭಯಗಳಿಂದ ದೂರವಾಗಿ ನಿತ್ಯ ಸುಖದಲ್ಲಿ ಉಳಿಯಬೇಕಾದರೆ ಶಿವನ ಕೃಪಾದೃಷ್ಟಿ ಬೇಕು. ಅಕ್ಕನವರಿಗೆ ಆಗ ಚೆನ್ನಮಲ್ಲಿಕಾರ್ಜುನನ ಒಲುಮೆಯಾದ್ದರಿಂದ ಎಲ್ಲ ಶರಣರ ದರ್ಶನವಾಯ್ತು. ಆ ಶರಣರ ಸಂಗದಿಂದ ಮುಕ್ತಿಪದವನ್ನು ಪಡೆದರು.

ಅಂತೆಯೇ ನಮ್ಮೆಲ್ಲರಿಗೂ ಈಗ ಶಿವನ ಕೃಪೆ ಆಗಿದೆ. ಇನ್ನೂ ಆಗುತ್ತಲಿದೆ. ಹಿಂದೆ ಶ್ರೀ ಶಿದ್ಧಲಿಂಗ ಶಿವಯೋಗಿಗಳವರ ಶಾಪಕ್ಕೊಳಗಾದ ಈ ಊರು ಕಳ್ಳಿಯ ಸಾಲಾಗಿತ್ತೆಂದು ಹೇಳುವರು. ಆ ಯೋಗಿಗಳ ಕೃಪೆಗೆ ಪಾತ್ರವಾದ ಈ ಊರು ವಿದ್ಯೆಯ ಬೀಡಾಗತೊಡಗಿದೆ. ಆ ಯೋಗಿಗಳ ಕೃಪೆಯು ಈ ನಮ್ಮೆಲ್ಲರಿಗೆ ದೊರೆಯತೊಡಗಿದೆ. ಈಗ ನಡೆದಂಥ ಕಾರ್ಯಗಳೂ ಮೇಲಿಂದ ಮೇಲೆ ನಡೆಯುತ್ತವೆ. ಅಂತೆಯೇ ಇನ್ನೂ ಅವರೆಲ್ಲರ ಕೃಪಾಶೀರ್ವಾದ ಹೆಚ್ಚಾಗಿ ದೊರೆಯಲೆಂದು ಅತಿ ಭಕ್ತಿಯಿಂದ ಬೇಡುವೆ. ಆ ಆಶೀರ್ವಾದದ ಉಪಯೋಗವೂ ನಮಗೆ ಸುಲಭವಾಗಿಯೇ ಸಾಗಲೆಂದು ಸರ್ವ ಹರ, ಗುರು, ಚರಮೂರ್ತಿಗಳಲ್ಲಿ ಭಕ್ತಾಂಜಲೀ ಬದ್ಧಳಾಗಿ ಪ್ರಾರ್ಥಿಸಿಕೊಂಡು ವನ್ನೆರಡು ಮಾತುಗಳನ್ನು ಮುಗಿಸುವೆ. ಶರಣು ಶರಣಾರ್ಥಿಗಳು. ತಮ್ಮೆಲ್ಲರ ಕೃಪೆಗೆ ಪಾತ್ರಳಾಗಲಿರುವ- ಶಾಂಭವೀ ಕೆರೂಡಿ.

# ಆಧ್ಯಾತ್ಮಿಕ ಶಕ್ತಿಯ ದಿವ್ಯಪ್ರಭಾವ.

(ಬರೆದವರು:- ಶ್ರೀ ಅನ್ನದಾನೀಶ್ವರ ವಿರಕ್ತಮಠ ಬಿ. ಎ. ಆನರ್ಸ, ಬಿ. ಟಿ.)

---

(ಈ ವಿಷಯವನ್ನು ಶ್ರೀ ಅನ್ನದಾನೀಶ್ವರ ವಿರಕ್ತಮಠ, ಅವರು ಹುಬ್ಬಳ್ಳಿ ವೇದಾಂತ ಪರಿಷತ್ತಿನಲ್ಲಿ ದಿನಾಂಕ ೧೩-೪-೫೭ನೆಯ ರವಿವಾರ ಡಾ. ನಂದೀಮಠರ ಅಧ್ಯಕ್ಷತೆಯಲ್ಲಿ ತಮ್ಮ ಉಪನ್ಯಾಸದಲ್ಲಿ ಹೇಳಿದರು. ಅದರ ಸಾರಾಂಶವನ್ನು ಇಲ್ಲಿ ಕೊಡಲಾಗಿದೆ.)

ಇಂದಿನ ವಿಜ್ಞಾನಿಗಳು ಜಗತ್ತನ್ನು ನಾಶಗೊಳಿಸುವ ಅಣುಬಾಂಬು, ಜಲಜನಕ ಬಾಂಬುಗಳನ್ನು ಶೋಧಿಸಿರುವರು. ಅವರಿಗೆ ಆಧ್ಯಾತ್ಮಿಕ ವಿಜ್ಞಾನದ ಮಹತ್ವ ಗೊತ್ತಿಲ್ಲ. ವಿಜ್ಞಾನವು ಬುದ್ಧಿಶಕ್ತಿಯ ಮೇಲಿರುವ ಶುದ್ಧ ಬುದ್ಧಿಯು ದಿವ್ಯಜ್ಞಾನಶಕ್ತಿಯು. ವಿಜ್ಞಾನದ ಮುಂದಿನ ಅವಸ್ಥೆಯು ಆನಂದವು. ಈ ವಿಜ್ಞಾನ ಮತ್ತು ಆನಂದಗಳಿಗೇನೇ ಅಂತರಂಗದಲ್ಲಿಯ ದೇವನ ರಾಜ್ಯವೆಂದು ಯೋಗಿಗಳು ಹೇಳಿರುವರು. ಇತ್ತ ಆಧುನಿಕ ವಿಜ್ಞಾನಿಗಳು ಹೊರಳಬೇಕು. ಅಂದರೆ ಜಗತ್ತಿನಲ್ಲಿ ಶಾಂತಿಯು ಸ್ಥಾಪಿಸಲ್ಪಡುವದು.

ಮಾನವನ ಜ್ಞಾನ ಮತ್ತು ಅನುಭವಗಳು ಆಳವಾಗಿ ಪೂರ್ಣವಾಗಿ ದಿವ್ಯವಾಗಿ ಬೆಳಗಬೇಕಾದರೆ ಆಧ್ಯಾತ್ಮಿಕ ಶಕ್ತಿಯೇಬೇಕು. ಈ ಶುದ್ಧ ಅರಿವು ಸದಾ ಬೆಳಗಬೇಕು. ಈ ದಿವ್ಯಶಕ್ತಿಯನ್ನು ಅಂಗವಿಸಬೇಕು. ಸಾಹಿತ್ಯ, ಸಂಸ್ಕೃತಿ, ಕಲೆ, ತತ್ವಜ್ಞಾನ; ಧರ್ಮವಿಜ್ಞಾನ, ಶಾಸ್ತ್ರ ಮುಂತಾದ ಕ್ಷೇತ್ರಗಳಲ್ಲಿ ಆಧ್ಯಾತ್ಮಿಕ ಶಕ್ತಿಯ ಪ್ರವಾಹವು ಹರಿಯಬೇಕು. ಮಾನವ ಸಮಾಜ ರಚನೆಯನ್ನು ಆಧ್ಯಾತ್ಮಿಕತೆಯ ತಳಹದಿಯ ಮೇಲೆ ರಚಿಸಬೇಕು. ಅರ್ಥಶಾಸ್ತ್ರದ ತಳಹದಿಯ ಮೇಲೆ ರಚಿಸಬಾರದು. ಇಂಗ್ಲಂಡ, ಅಮೇರಿಕಾ, ಫ್ರಾನ್ಸ, ರಶಿಯಾ ಮುಂತಾದ ದೇಶಗಳ ಪಾಶ್ಚಿಮಾತ್ಯರು ಶರೀರ ಸುಖದ ಅನೇಕ ಸಾಧನಗಳನ್ನು ಬುದ್ಧಿಶಕ್ತಿಯಿಂದ ಕಂಡುಹಿಡಿದಿರುವರು. ಆದರೆ ಅವರಿಂದ ವಿಶ್ವಶಾಂತಿ ಸ್ಥಾಪಿಸಲ್ಪಡಲಾರದು. ಏಕೆ? ಅವರ ಜೀವನವು ಆಧ್ಯಾತ್ಮಿಕವಾಗಿಲ್ಲ. ಆಧ್ಯಾತ್ಮಿಕ ನಿರಕ್ಷರತೆಯನ್ನು ನಿವಾರಿಸುವದೇ ಭೌತಿಕ

ಮತ್ತು ಪಾರಮಾರ್ಥಿಕ ಸುಖ-ಶಾಂತಿಗಳ ಮೂಲಕಾರಣವೆಂಬುದನ್ನು ಜಾಗತಿಕ ಇತಿಹಾಸವು ಸಾರಿಹೇಳುವದೆಂದು ಡಾ. ರಾಧಾಕೃಷ್ಣನ್ ಅವರು ಹೇಳುತ್ತಾರೆ. ಪ್ರಜಾಪ್ರಭುತ್ವದ ತಳಹದಿಯು ಭದ್ರವಾಗಬೇಕಾದರೆ ಪ್ರತಿ ಮಾನವನ ಅಂತರಾತ್ಮದ ಘನತೆ, ಗೌರವ, ಸ್ವಾತಂತ್ರ್ಯಗಳಿಗೆ ಮಹತ್ವ ಕೊಡಬೇಕು. ವ್ಯಕ್ತಿಸ್ವಾತಂತ್ರ್ಯವೆಂದರೆ ಆತ್ಮನ ಸ್ವಾತಂತ್ರ್ಯವು. ಅರಿವು ಈ ತೆರನಾಗಿ ಜಾಗ್ರತವಾದಾಗ ಪ್ರಜಾಪ್ರಭುತ್ವವು ಯಶಸ್ವಿಯಾಗುವದು. ಅಧ್ಯಾತ್ಮವಿದ್ಯೆಯಿಂದ ವಸಾಹತುವಾದ, ಸಾಮ್ರಾಜ್ಯಲಾಲಸೆ, ಗುಲಾಮಗಿರಿಗಳು, ನಿರಂಕುಶ ಅಧಿಕಾರ ಸರ್ವಾಧಿಕಾರಗಳೂ ನಿಂತುಹೋಗುತ್ತವೆ. ನಾಗರಿಕತೆಯು ಬೆಳೆದು ಬರಬೇಕಾದರೂ ಆತ್ಮಚೈತನ್ಯ ಶಕ್ತಿಯ ಅರಿವು ಮಾನವನಲ್ಲಿ ಮೂಡಿಬರಬೇಕು.

ಅಧ್ಯಾತ್ಮಿಕತೆಯೆಂದರೇನು ? ಅಧ್ಯಾತ್ಮಿಕತೆಯು ಧರ್ಮದೊಳಗಿನ ಚೈತನ್ಯ ಶಕ್ತಿಯು. ಧರ್ಮವು ಸಜೀವವಾಗಿದ್ದಾಗ ಅಧ್ಯಾತ್ಮಿಕತೆಯು ಧರ್ಮದ ಸ್ವರೂಪವನ್ನು ಧರಿಸುತ್ತದೆ. ಧರ್ಮದಲ್ಲಿ ಅಧ್ಯಾತ್ಮಿಕತೆ ಯಿಲ್ಲದಿದ್ದರೆ ಆ ಧರ್ಮವು ಬಲಾತ್ಕಾರ, ಹಿಂಸೆ, ದ್ವೇಷಾಸೂಯೆಗಳಿಗೆ ಕಾರಣವಾಗುತ್ತದೆ. ಸ್ವಾಮಿ ಶ್ರೀ ವಿವೇಕಾನಂದರ ಅಮೃತವಾಣಿಯಲ್ಲಿ ಹೇಳಬೇಕೆಂದರೆ ಅಧ್ಯಾತ್ಮವು ಧರ್ಮದ ಜೀವಾಳವು. ಧರ್ಮದಲ್ಲಿ ನಾನಾ ನಿಷೇಧ, ಅನೇಕ ತರಹದ ಮಂತ್ರ ತಂತ್ರ, ವರ್ಣ ಜಾತಿಗಳ ಭ್ರಾಂತಿ, ಅಂಧತನ, ಕರ್ಮದ ತನಗಳು ಪ್ರವೇಶವಾದಾಗ ಅಧ್ಯಾತ್ಮ ಗಂಧವು ಅಂಥ ಧರ್ಮದಲ್ಲಿ ಹೊರಸೂಸಲಾರದು. ಈ ಪ್ರಪಂಚದಲ್ಲಿ ಅಧ್ಯಾತ್ಮದ ಗಂಧವು ನೈಸರ್ಗಿಕವಾಗಿ ಮೌನವಾಗಿ ಹೊರಸೂಸಬಲ್ಲದು. ಪ್ರಪಂಚವನ್ನು ಬಿಟ್ಟು ಸನ್ಯಾಸಿಯಾಗಿ ಹೋಗುವದಾಗಲೀ, ಪ್ರಪಂಚದಲ್ಲಿ ಆಸಕ್ತನಾಗಿ ಕರ್ಮ ಮಾಡುವದರಿಂದಾಗಲೀ ಅಧ್ಯಾತ್ಮಸಾಧನವಾಗಲಾರದು. ಸಮನ್ವಯ ಯೋಗ ದೃಷ್ಟಿಯಿಂದ ಅಧ್ಯಾತ್ಮದ ಹೂವು ಅರಳಬಲ್ಲದು. ಕನ್ನಡ ಸಾಹಿತ್ಯದಲ್ಲಿ ಅದ್ವಿತೀಯ ಮೇಧಾವಿಗಳೂ, ಸಮನ್ವಯ ಯೋಗಿಗಳೂ ಆಗಿರುವ ಶ್ರೀ ನಿಜಗುಣ ಶಿವಯೋಗಿಗಳು ಜಾತ್ಯಾಭಿಮಾನ, ವರ್ಣಾಭಿಮಾನ, ಕುಲಾಭಿಮಾನ, ಸಂಕುಚಿತ ದೇಶಾಭಿಮಾನಗಳನ್ನು ಬಿಟ್ಟು ಅಧ್ಯಾತ್ಮ ಸಾಧನ ಮಾಡಿರೆಂದು ಮಾನವರಿಗೆ ಬೋಧಿಸಿರುವರು. ಮತಭ್ರಾಂತಿನಲ್ಲಿ ಸಹಾನುಭೂತಿ, ಪ್ರೀತಿ, ಕರುಣೆ, ಅಹಿಂಸಾ ಪ್ರೀತಿಗಳು ಉಳಿಯುವದಿಲ್ಲ. ಜ್ಞಾನ ಶಕ್ತಿ, ಭಾವ ಶಕ್ತಿ, ಕ್ರಿಯಾ ಶಕ್ತಿಗಳ ಸುಂದರ ಸಮನ್ವಯವೇ ಇಂದು ಜಗತ್ತಿಗೆ ಬೇಕು. ಶ್ರೀ ನಿಜ

ಗುಣ ಶಿವಯೋಗಿಗಳೂ, ಶರಣ ಶರಣೆಯರೂ, ಡಾ. ರಾನಡೆಯವರೂ, ಶ್ರೀ ಅರವಿಂದ ಯೋಗಿಗಳೂ ಹೀಗೆ ಎಲ್ಲ ಯೋಗಿಗಳೂ- "ಸರ್ವಂ ಶಿವ ಮಯಂ ಜಗತ್" ಎಂಬ ದಿವ್ಯ ಆಧ್ಯಾತ್ಮಿಕ ಅನುಭವಕ್ಕೇನೇ ಹೆಚ್ಚಿನ ಮಹತ್ವ ಕೊಟ್ಟಿರುವರು.

ವಿಶ್ವಧರ್ಮದ ಮಾತಾಡುವವರು ಅಧ್ಯಾತ್ಮದ ಸಾಧನ, ಜ್ಞಾನ, ಅನುಭವ, ಸ್ಫೂರ್ತಿಗಳನ್ನೂ, ದಿವ್ಯಾನಂದವನ್ನೂ ಕಡೆಗಣಿಸಬಾರದು. ಅಧ್ಯಾತ್ಮ ಯೋಗವು ವಿಶ್ವಧರ್ಮದ ಆತ್ಮವು. ನೀತಿ ಕ್ರಿಯಾಚಾರಗಳು ವಿಶ್ವಧರ್ಮದ ಬಹಿರಂಗವು. ಸಮನ್ವಯ ಯೋಗವು ಸಾಧನಮಾರ್ಗವು. ಈ ಪ್ರಕಾರ ಆಧ್ಯಾತ್ಮಿಕ ವಿಶ್ವಧರ್ಮವನ್ನು ಸಾಧಿಸಿದರೇನೇ ವಿಶ್ವಶಾಂತಿಯು ಸುಲಭವಾಗಿ ಸಾಧಿಸುವದು. ಭಾರತರತ್ನ ಪಂಡಿತ ಜವಹರಲಾಲ ನೆಹರು ಅವರು ಹೇಳುವಂತೆ ಅಹಿಂಸೆಯು ಯುದ್ಧಗಳನ್ನು ತಡೆದು, ಜಾಗತಿಕ ಶಾಂತಿಯನ್ನು ತರಬಲ್ಲದು. ಆದರೆ ಆಧ್ಯಾತ್ಮಿಕತೆಯಿಂದಲೇ ಅಹಿಂಸೆಯ ಸಿದ್ಧಿ ಎಂಬ ಮಾತನ್ನು ಯಾರೂ ಮರೆಯದಿರಲಿ. ಆಧ್ಯಾತ್ಮಿಕ ಅನುಭವದಿಂದ ಅಹಿಂಸೆಯು ಮಾನವರ ಹೃದಯಗಳಲ್ಲಿ ಉಕ್ಕಿ ಬರಬಲ್ಲದು. ಆತ್ಮಾನುಭೂತಿಯಿಲ್ಲದ ಅಹಿಂಸಾ ಧರ್ಮವು ಪ್ರಾಣವಿಲ್ಲದ ದೇಹದಂತೆ. ಸಕಲರೂ ಅಧ್ಯಾತ್ಮಸಾಧನೆ ಮಾಡಿ ಆನಂದ ಪಡೆಯೋಣ; ವಿಶ್ವಶಾಂತಿಗೆ ನೆರವಾಗೋಣ.

.... .... .... .... ....

# ಶ್ರೀ ಬಸವ ಕಲ್ಯಾಣದಲ್ಲಿ ಕಂಡದ್ದು.

(ಬರೆದವರುಃ— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ (ಇಂಡಿ)



ತಾ. ೨-೫-೫೭ ನೇ ದಿನ ಜರಗಿದ ಬಸವಜಯಂತಿಯ ಉತ್ಸವಕ್ಕೆ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು ಗದಗ ಅವರ ಆವ್ಹಾನದ ಮೇರೆಗೆ ಹೋಗಿದ್ದೆನು. ಹೊರಡುವಾಗ ಅನೇಕ ಬಗೆಯ ಸ್ಫೂರ್ತಿಯ ಚಿತ್ರಗಳು ಬಸವಕಲ್ಯಾಣದ ಬಗ್ಗೆ ಮನದಲ್ಲಿ ಮೂಡುತ್ತಿದ್ದವು. ಅಲ್ಲಿ ಹೋಗಿ ನೋಡಲು ಶಿವಶರಣರ ಯಾವ ಕೃತಿಗಳು ಕಾಣಲಾರದಕ್ಕಾಗಿ ಬಹು ಮರುಗಿ ಖೇದ ಗೊಂಡೆನು. ಧ್ಯಾನದ ಗವಿಗಳು ಮಾತ್ರ ಇನ್ನೂ ಬಂದವರನ್ನು ಧ್ಯಾನಕ್ಕೆ ಆವ್ಹಾನಿಸುತ್ತಿರುವಂತೆ ಭಾಸವಾಯಿತು. ಕುಳಿತು ಧ್ಯಾನ ಮಾಡಲಿಕ್ಕೆ ಶಾಂತ ಪ್ರಶಾಂತ ತಂಪು ಗುಹೆಗಳಿರುವವು. ಇಂದ್ರಿಯ ಸುಖಸುಳ್ಳು, ಅವು ಗಳಿಗಾಗಿ ಸಿಕ್ಕಂತೆ ತಿರುಗದೆ ಗವಿಯಲ್ಲಿ ಕುಳಿತು ಪೂಜೆ ಧ್ಯಾನಗಳನ್ನು ಮಾಡಿ ನಿಮ್ಮ ಹಾಗೂ ಜಗದ ಕಲ್ಯಾಣ ಮಾಡಿರೆಂದು ಶರಣರು ಇನ್ನೂ ಬೋಧಿಸುವಂತೆ ಆ ಗವಿಗಳು ಪರಕೀಯರ ತುಳಿತಕ್ಕೆ ನುಗ್ಗಾಗದೆ ಬದುಕಿ ರುವವೆಂದು ಅನಿಸಿತು.

ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು ಗದಗ ಅವರು ಬಸವ ಕಲ್ಯಾಣದಲ್ಲಿ ಸತತ ೩ ತಿಂಗಳ ತಮ್ಮ ಸುಶ್ರಾವ್ಯ ಪ್ರವಚನಗಳಿಂದ ಜನ ಜಂಗುಳಿಯನ್ನು ತಣಿಸಿ ಶರಣರ ಸ್ಫೂರ್ತಿಯನ್ನು ಅವರಲ್ಲಿ ತಂದುಕೊಟ್ಟಿ ರುವರು. ಅವರ ಸಮನ್ವಯ ದೃಷ್ಟಿ ಅವರ್ಣನೀಯವಾದದು. ಒಳ್ಳೇ ಅನುಭವಪೂರ್ಣವಾದ ಪ್ರವಚನಗಳನ್ನು ಮಾಡುವದು ಕೇಳಿ ಸಭಿಕರು ನಗೆಗಡಲಲ್ಲಿ ತೇಲಿ ಕರತಾಡನದ ತಾಕಲಾಟದಲ್ಲಿ ಆನಂದ ಉತ್ಸವ ಹರುಷ ಗಳನ್ನು ವ್ಯಕ್ತಮಾಡುತ್ತಿದ್ದರು. ಅನೇಕ ಊರವರು ಅವರಿಗೆ ಆವ್ಹಾನಿಸ ಲಿಕ್ಕೆ ಬಂದು ಅತಿ ಆಗ್ರಹಬಡುತ್ತಿದ್ದರು. ಅವರ ಸಾದಾ ಜೀವನ ಉದಾತ್ತ ವಿಚಾರದವರು ಕೌಪೀನ ಧರಿಸಿ ಒಂದು ಖಾದಿ ಬಟ್ಟೆಯನ್ನು ಹೊರುವರು. ಒಂದೇ ಹೊತ್ತು ಊಟ ಮಾಡುವರು. ಕಸಗೂಡಿಸುವರು. ಇಂಥ ಸ್ವಾಮಿ

ಗಳನ್ನು ಯಾರು ಪ್ರೀತಿಸಲಿಕ್ಕಿಲ್ಲ? ಇವರು ಕಲ್ಯಾಣ ಕಲ್ಯಾಣದ ಸಲು ವಾಗಿ ದುಡಿಯುವದನ್ನು ಕಂಡು ನಾನೂ ಶಕ್ಯವಾದ ಮಟ್ಟಿಗೆ ದುಡಿಯ ಬೇಕೆಂದೆನು.

ಶ್ರೀ ಜ. ಗು. ಶ್ರೀಶೈಲ ಸಿಂಹಾಸನಾಧೀಶರು ಬಸವಕಲ್ಯಾಣಕ್ಕೆ ಬಂದುದು ಒಂದು ಹೆಚ್ಚಿನ ಶೋಭೆಯನ್ನುಂಟು ಮಾಡಿತ್ತು. ಅವರೂ ಒಳ್ಳೇ ವಿದ್ಯಾವಂತರು ತಪಸ್ವಿಗಳು, ಬಸವನ ಬಗ್ಗೆ ಒಳ್ಳೇ ಪ್ರೇಮಪೂರ್ವಕ ಕಳಕಳಿಯ ಭಾಷಣಗಳನ್ನು ನಿತ್ಯ ಎರಡುಸಲ ೪-೫ ದಿವಸ ಮಾಡಿದರು. ಜಗದ್ಗುರುಗಳಲ್ಲಿ ಬಸವನ ಬಗ್ಗೆ ಅಭಿಮಾನಪೂರ್ಣ ಭಾಷಣ ಮಾಡುತ್ತಿರುವವರು ಇವರೇ ಮೊದಲಿಗರು. ಈ ಪ್ರಕಾರ ಎಲ್ಲ ಜಗದ್ಗುರುಗಳು ಪಟ್ಟದವರು ಬಸವನ ಬಗ್ಗೆ ಪ್ರೇಮಾದರಗಳನ್ನು ತಳೆದರೆ ವೀರಶೈವವು ಭರಗುಡುತ್ತ ಎದ್ದೇಳುವದು. ವಿರಕ್ತ ಪಟ್ಟ ಬಸವ ಪಂಚಾಚಾರ್ಯ ಮೊದಲಾದ ಭೇದಗಳು ತಾವಾಗಿಯೇ ಅಡಗುವವು. ಜಗದ್ಗುರುಗಳ ಹಾಗೂ ಮಠಗಳ ಸೊತ್ತನ್ನೆಲ್ಲ ರಾಷ್ಟ್ರೀಕರಿಸಿ ಶರಣರ ಹೆಸರಿನಿಂದ ಒಂದು ಬ್ಯಾಂಕನ್ನು ತೆಗೆಯಬೇಕೆಂಬ ತಾವು ವಿಚಾರಿಸುತ್ತಿರುವದನ್ನು ಅಪ್ಪಣೆ ಕೊಡಿಸಿದರು. ಅಲ್ಲದೆ ಶ್ರೀ ಬಾಬಾಸಾಹೇಬ ವಾರದ ಅವರೇ ಬಸವಕಲ್ಯಾಣದ ಉದ್ಧಾರಕ್ಕೆ ಬಂದ ಬಸವನ ಅವತಾರವೆಂದು ಸಹ ಅಪ್ಪಣೆಕೊಡಿಸಲು ಸಕಲರೂ ಕರತಾಡನದಿಂದ ಅದನ್ನು ಅನುಮೋದಿಸಿ ಸ್ವಾಗತಿಸಿದರು.

ಈ ಲೇಖಕನೂ ಕೂಡ ೨-೩ ಚಿಕ್ಕ ಭಾಷಣಗಳನ್ನು ಮಾಡಿ ಬಸವನ ಕಲ್ಯಾಣದ ಬಗ್ಗೆ ವಚನಗಳ ಪ್ರಚಾರದ ಅವಶ್ಯಕತೆಯನ್ನು ತಿಳಿಸಿದರು. ಶ್ರೀ ಹಳಕಟ್ಟಿಯವರ ತರುವಾಯ ವಚನಸಾಹಿತ್ಯ ಹೇಗೆ ಉಳಿದು ಬಾಳಿ ಬೆಳೆದು ಸುತ್ತಲೂ ಹಬ್ಬಬೇಕೆಂಬದನ್ನು ತಿಳಿಸಿದರು. ಶ್ರೀ ಬಾಬಾಸಾಹೇಬರು ಕೀಳಾಗಲೊಲ್ಲದೆ ಮೇಲಾಗಲೊಲ್ಲೆನು, ಎಂಬ ಬಸವನ ವಚನಕ್ಕನುಗುಣವಾಗಿ ಕೀಳ ಕೆಲಸದಿಂದ ಹೆಚ್ಚಿನ ಕೆಲಸದ ವರೆಗೆ ಅಂದರೆ ಎಲ್ಲ ಕೆಲಸಗಳನ್ನು ಶರೀರದ ಅಭಿಮಾನವಿಲ್ಲದೆ ಮಾಡುತ್ತಿರುವದು ಕಂಡಿತು. ಅವರಿಲ್ಲದೆ ಯಾವ ಕಾರ್ಯವೂ ನಡೆಯುತ್ತಿರಲಿಲ್ಲ. ಅವರ ಚಟುವಟಿಕೆ ಸಾಹಸ ಯತ್ನ ಶಾಂತಸ್ವಭಾವ ಕಳಕಳಿ ಧರ್ಮಾಭಿಮಾನ ಭಕ್ತಿ ಪ್ರೀತಿಗಳು ಒಳ್ಳೇ ದೇಶಭಕ್ತನೆನಿಸುವವನನ್ನು ಕೂಡ ನಾಚಿಸುತ್ತಿದ್ದವು. ನಾನಂತೂ ಇಲ್ಲಿಯವರೆಗೆ ಇವರಂಥ ವ್ಯಕ್ತಿಯನ್ನೇ ನಮ್ಮ ನಾಡಿನಲ್ಲಿ ಕಂಡಿಲ್ಲೆಂದು ಹೇಳು

ವೆನು. ಆ ದಿನದ ಜಯಂತಿಯ ಜಾತ್ರೆಯಲ್ಲಿ ಇವರೇ ಎದ್ದುಕಾಣುವ ಮಹಾ ವ್ಯಕ್ತಿಗಳಾಗಿದ್ದರು. ಸಕಲರ ನಾಲಿಗೆಯಲ್ಲಿ ಶ್ರೀ ಬಾಬಾಸಾಹೇಬ ವಾರದರೇ ನೆಲಿಸಿದ್ದರು. ಸೊಲ್ಲಾಪುರದಲ್ಲಿ ಆಗುವದನ್ನೆಲ್ಲ ಬಸವಕಲ್ಯಾಣದ ಜಾತ್ರೆಯಲ್ಲಿ ಮಾಡಿದ್ದಾರೆ. ನನ್ನ ೫೧ ವರ್ಷದ ಆಯುಷ್ಯದಲ್ಲಿ ನಂದೀ ಧ್ವಜದ ಇಂಥ ಮಹಾಮೆರವಣಿಗೆಯನ್ನು ಕಂಡಿರಲಿಲ್ಲ. ಎಲ್ಲತರದ ಕಲೆ ವಾದ್ಯ ಕಸರತ್ತು ಪಾಲಕಿ ದೀಪಗಳು ಪಶುಗಳು ಮೆರವಣಿಗೆಯಲ್ಲಿ ಸೇರಿದ್ದವು. ಎರಡು ಮೈಲುದ್ದವಾದ ಮೆರವಣಿಗೆ ಇತ್ತು. ಸಕಲಜಾತಿಯವರಿಗೂ ಸರಿಸಮಾನ ಸ್ಥಾನಗಳನ್ನು ಜಾತ್ರೆಯಲ್ಲಿ ಮೆರವಣಿಗೆಯಲ್ಲಿ ಕೊಟ್ಟಿದ್ದರು. ಎರಡು ದಿನ ಕುಸ್ತಿಗಳಾದವು- ಚಿತ್ರವಿಚಿತ್ರ ಮದ್ದನ್ನು ಸುಟ್ಟರು. ಕೈಕೆಲಸಗಳ ವಸ್ತು ಪ್ರದರ್ಶನವೇರ್ಪಟ್ಟಿತ್ತು. ದನಗಳ ಪ್ರದರ್ಶನವೂ ಆಯಿತು. ಶಾಲೆಯ ಬಾಲಬಾಲಕಿಯರ ಶಕ್ತಿ, ಯುಕ್ತಿ, ಕಲೆ, ಕಾವ್ಯ ವಚನಗಳ ಸ್ಪರ್ಧೆಗಳು ಆದವು. ಎಲ್ಲರಿಗೂ ಯೋಗ್ಯ ಬಹುಮಾನಗಳನ್ನು ಶ್ರೀ ಜಗದ್ಗುರು ಸೂರ್ಯಸಿಂಹಾಸನಾಧೀಶ್ವರರ ಪವಿತ್ರಹಸ್ತದಿಂದ ಹಂಚಲಾಯಿತು. ಈ ಪ್ರಕಾರ ಈ ಬಸವಜಯಂತಿಯ ಜಾತ್ರೆಯು ಸಕಲ ರೀತಿಯಿಂದ ಆದರ್ಶವಾಗಿತ್ತು. ಇದಕ್ಕೆಲ್ಲ ಶ್ರೀ ಬಾಬಾಸಾಹೇಬ ವಾರದರವರೇ ಮುಖ್ಯ ಕಾರಣರಾಗಿದ್ದಾರೆಂದು ನನಗೆ ಅನಿಸಿತು. ಶ್ರೀ ಬಾಬಾಸಾಹೇಬರ ವಿನಯ ಸೌಜನ್ಯ ನಮ್ರತೆಗಳು ಎಂಥ ಕಟುಕನ ಎದೆಯನ್ನು ಕೂಡ ಸಹಜ ಭೇದಿಸದೆ ಬಿಡುತ್ತಿರಲಿಲ್ಲೆಂದು ನಾನು ಕಂಡೆನು.

ಕಲ್ಯಾಣದಲ್ಲಿ ಶೂನ್ಯ ಸಂಪಾದನೆಯ ಪ್ರವಚನ ನಡೆಯಬೇಕು, ಜಗದ್ಗುರುಗಳ ಅಡ್ಡಪಲ್ಲಕ್ಕಿ ಉತ್ಸವ ಅಲ್ಲಿ ಆಗಬೇಕು, ಆ ಮೇಲೆ ಕಲ್ಯಾಣದ ಉದ್ಧಾರ ಆಗಿ ಶರಣರ ಅವತಾರ ಆಗುವದೆಂದು ಕಾಲಜ್ಞಾನದ ವಚನಕ್ಕೆ ತಕ್ಕಂತೆ ಶ್ರೀ ಮಲ್ಲಿಕಾರ್ಜುನ ಮಹಾ ಸ್ವಾಮಿಗಳು ಗದಗ ಅವರು ಮೂರು ತಿಂಗಳ ಶೂನ್ಯ ಸಂಪಾದನೆಯ ಪ್ರವಚನ ಅಲ್ಲಿ ಮಾಡಿದರು. ಇದರ ಮುಕ್ತಾಯದ ಮಂಗಲವನ್ನು ಶ್ರೀ ಜಗದ್ಗುರುಗಳ ಹಸ್ತದಿಂದ ನೆರವೇರಿಸಲ್ಪಟ್ಟಿತು. ಅಲ್ಲದೆ ಅವರ ಅಡ್ಡಪಲ್ಲಕ್ಕಿಯ ಉತ್ಸವವೂ ಕೂಡ ಬಳ್ಳೇ ಆಢ್ಯತೆಯಿಂದ ಬಳ್ಳೇ ವಿಜೃಂಭಣೆಯಿಂದ ವೈಭವಪೂರ್ಣವಾಗಿ ನೆರವೇರಿತು. ಇದಕ್ಕೆಲ್ಲ ಶ್ರೀ ಬಾಬಾಸಾಹೇಬ ವಾರದ ಅವರೇ ಮುಖ್ಯ ಕಾರಣರಾಗಿದ್ದಾರೆ. ಬಸವಕಲ್ಯಾಣದ ಉದ್ಧಾರಕ್ಕೆ, ಜಾತ್ರೆಗೆ, ಜಯಂತಿಗೆ, ವೀರ

ಶೈನ ಮಹಾ ಸಭೆ ನೆರೆಯಲಿಕ್ಕೆ ಅನೇಕ ಅಧಿಕಾರಿಗಳನ್ನು, ಅನೇಕ ವಿದ್ವಾಂಸರನ್ನು, ಅನೇಕ ಜ್ಞಾನಿಗಳನ್ನು, ಅನೇಕ ಕೀರ್ತನಕಾರರನ್ನು ಶ್ರೀ ಬಾಬಾ ಸಾಹೇಬರೇ ಆಹ್ವಾನಿಸಿ, ಸಕಲರ ಮನವನ್ನು ಕಲ್ಯಾಣದತ್ತ ಸೆಳೆದಿದ್ದಾರೆ. ಅಲ್ಲದೆ, ಕಲ್ಯಾಣದ ಜನರಿಗೆ ಆವರಿಸಿದ ೮೦೦ ವರ್ಷಗಳ ಮೌಢ್ಯವನ್ನು ಕೂಡ ದೂರ ಮಾಡಿದ್ದಾರೆ. ಹೀಗೆ ಸದಾ ತನು ಮನ ಧನದಿಂದ ದುಡಿಯುವ ಶ್ರೀ ಬಾಬಾಸಾಹೇಬರಿಗೆ ಶ್ರೀ ಜಗದ್ಗುರುಗಳು ಬಸವನ ಅವತಾರವೆಂದು ಅಪ್ಪಣೆ ಕೊಡಿಸಿದ್ದು ಆಶ್ಚರ್ಯವೇನಲ್ಲ, ಎಂದು ಯಾರಿಗಾದರೂ ಅನಿಸುವದು.

ಈ ಉತ್ಸವವು ಸಕಲರಿಗೆ ನಮ್ಮದೆಂದೇ ಅನಿಸುವಂತೆ ಏರ್ಪಾಟಾಗಿತ್ತು. ಕಸ್ತ್ರಿಯವರಿಗೆ, ಕಲಾಕಾರರಿಗೆ, ಬಾಲ ಬಾಲಕಿಯರಿಗೆ, ಹಿಂದುಗಳಿಗೆ, ಮುಸಲ್ಮಾನರಿಗೆ, ಜ್ಞಾನಿಗಳಿಗೆ, ಪಂಡಿತರಿಗೆ, ಸಕಲರಿಗೆ ಬೇಕಾಗುವ ಕಾರ್ಯಕ್ರಮಗಳೇ ಇದರಲ್ಲಿದ್ದವು. ಅಂತೂ ಶ್ರೀ ಬಾಬಾಸಾಹೇಬರ ಮಹಾ ಪ್ರಯತ್ನದಿಂದಲೂ, ಜಗದ್ಗುರುಗಳ ಹಾಗೂ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳ ಆಶೀರ್ವಾದದಿಂದ ಈ ಜಾತ್ರೆಯು ಬಹು ಯಶಸ್ವಿಯಾಯಿತೆಂದು ಹೇಳಲು ಯಾವ ಅಭ್ಯಂತರವೇ ಇಲ್ಲೆಂದು ಹೇಳಬಹುದು.

ವೀರಶೈವರ, ಜೈನರ ಎಲ್ಲ ಗುಡಿಗುಂಡಾರಗಳನ್ನು ಕೆಡವಿ ಅವುಗಳ ಯಾವತ್ತು ಕಲ್ಲುಗಳಿಂದ ಒಂದು ದೊಡ್ಡ ಕಿಲ್ಲೆಯನ್ನು ಕಟ್ಟಿದ್ದು ನೋಡಿ ದುಃಖಾಶ್ರುಗಳು ಹೋದವು. ಇರಲಿ. ಕಾಲಮಹಿಮೆ, ಕಾಲಚಕ್ರವು ಸದಾ ತಿರುಗುವದು. ಕಲ್ಯಾಣದ ಉದ್ಧಾರಕ್ಕೆ ಹೆಣಗುವಾ.

ಬಸವ ಕಲ್ಯಾಣದ ಸ್ಥಿತಿಯು ೯ ವರ್ಷಗಳ ಹಿಂದೆ ಹೇಳಕೂಡದಷ್ಟು ಹೀನ ದೀನವಾಗಿತ್ತು. ಅನ್ಯ ಪ್ರದೇಶದ ಯಾರಿಗೂ ಅಲ್ಲಿ ಪ್ರವೇಶವಿರಲಿಲ್ಲ. ಅವರಿಗೂ ಉಳಿದ ಅನ್ಯ ಕನ್ನಡಿಗರಿಗೂ ಯಾವ ಸಂಪರ್ಕವಿರಲಿಲ್ಲ. ಅವರ ಮೇಲೆ ಸದಾ ದಬ್ಬಾಳಿಕೆ, ತುಳಿತ, ಒದಿಕೆಗಳೇ ಹೆಚ್ಚಾಗಿ ನಡೆದು ಜನ ಜರ್ಜರಿತವಾಗಿ ಸಾಕು ಸಾಕಾಗಿ ಹೋಗಿತ್ತು. ಪೋಲೀಸ ಕ್ರಮ ತಕ್ಕೊಂಡ ಬಳಿಕ ಸ್ವಲ್ಪ ಉಸಿರಾಡುವಂತೆ ಆಯಿತು. ಆದರೂ ಅದು ಜಹಗೀರಿ ಇದ್ದ ಮೂಲಕ ದಬ್ಬಾಳಿಕೆ ಸಾಮಾನ್ಯವಾಗಿ ನಡೆದೇ ಇತ್ತು. ಅದನ್ನು ಕನ್ನಡ ಭಾಗದಲ್ಲಿ ಕೂಡಿಸಿದ ತರುವಾಯ ಸಂಪೂರ್ಣ ಉಸುರು ಆಡಹತ್ತಿ ಈಗ ಶ್ರೀ ಬಾಬಾಸಾಹೇಬರ ನೇತೃತ್ವದಲ್ಲಿ ಭರಗುಡುತ್ತ ಮುನ್ನಡೆಯುತ್ತಿರುವದು.

ಇವರ ಪ್ರಯತ್ನದಿಂದ ಅನೇಕ ಪಂಡಿತರೂ ಅಲ್ಲಿಗೆ ಬಂದು ಹೋದರು. ಎಂದೂ ಜರುಗಲಾರದ ವೀರಶೈವ ಮಹಾ ಸಭೆಯು ಅಲ್ಲಿ ನಡೆದು ಜನಕ್ಕೆ ಹುರುಪು ಉತ್ಸಾಹಗಳನ್ನು ತಂದು ಕೊಟ್ಟಿತು. ಮುನ್ಸಿಪಾಲ್ಟಿ, ಪೋಷ್ಟು, ಮೋಟರಸ್ಟ್ಯಾಂಡ ಮೊದಲಾದ ಆಧುನಿಕ ಸುಧಾರಣೆಗಳು ಆಗಿವೆ. ಇನ್ನೂ ಎಲ್ಲ ತರದ ಸುಧಾರಣೆಗಳು ತೀವ್ರ ಆಗುವವೆಂದು ಅನಿಸುವದು. ಇವಕ್ಕೆಲ್ಲ ಶ್ರೀ ಬಾಬಾಸಾಹೇಬ ವಾರದೇವರೇ ಕಾರಣರು. ಶ್ರೀ ಮಲ್ಲಿಕಾರ್ಜುನ ಮಹಾ ಸ್ವಾಮಿಗಳ ಪ್ರವಚನವು ಅಲ್ಲಿ ಸತತ ೩ ತಿಂಗಳು ನಡೆದದ್ದು ಇವರ ಪುಣ್ಯ ಪ್ರಭಾವದಿಂದಲೇ ಸರಿ.

ಮೊದಲು ಕಲ್ಯಾಣದ ವರ್ಣನೆಯನ್ನು ಪ್ರಭುದೇವರು ಈ ಪ್ರಕಾರ ಮಾಡಿದ್ದಾರೆ— " ಕಲ್ಯಾಣವೆಂಬ ಪ್ರಣತಿಯಲ್ಲಿ ಭಕ್ತಿರಸವೆಂಬ ತೈಲವನೆರೆದು ಆಚಾರವೆಂಬ ಬತ್ತಿಗೆ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತ್ತಿರ್ದುದಯ್ಯಾ ಶಿವನ ಪ್ರಕಾಶ. ಆ ಬೆಳಗಿನೊಳಗೊಪ್ಪುತ್ತಿರ್ದರಯ್ಯಾ ಅಸಂಖ್ಯಾತ ಶರಣರು. ಭಕ್ತನಿರ್ದ ಕ್ಷೇತ್ರವೇ ಮುಕ್ತಿಕ್ಷೇತ್ರವೆಂಬುದು ಹುಸಿಯೇ ? ಭಕ್ತನಿರ್ದ ದೇಶವು ಪಾವನ. ಗುಹೇಶ್ವರಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನಬಸವಣ್ಣನ ಕಂಡು ಬದುಕಿದೆ ಕಾಣಾ ಸಿದ್ಧರಾಮಾ. " ಇಂತಹ ಕ್ಷೇತ್ರ ಬಸವಕಲ್ಯಾಣವು ಕಟುಕರ ಊರಾಗಿ ಮೆರೆಯಿತು. ಹಾಳಾಗಲು ಪ್ರಾರಂಭವಾಗುವ ಸೂಚನೆಯನ್ನು ಬಸವಣ್ಣನು ಈ ಪ್ರಕಾರ ವರ್ಣಿಸಿದ್ದಾನೆ. " ನಾನು ಬಂದ ಕಾರ್ಯಕ್ಕೆ ನೀವು ಬಂದಿರಿ. ನೀವು ಬಂದ ಕಾರ್ಯಕ್ಕೆ ನಾನು ಬಂದೆನು. ನಾನು ನೀವು ಬಂದ ಕಾರ್ಯಕ್ಕೆ ಬಂದಾತನಲ್ಲಮನು ಕಲ್ಯಾಣದ ಪ್ರಣತಿಯಾಯಿತ್ತು. ನಾನು ತೈಲನಾದೆನು. ನೀವು ಬತ್ತಿಯಾದಿರಿ. ಪ್ರಭುದೇವ ಜ್ಯೋತಿಯಾದರು. ಕೆಲವು ದಿನ ಜ್ಯೋತಿ ಬೆಳಗಿ ಪ್ರಣತಿ ಒಡೆಯಿತ್ತು. ತೈಲವರತಿತ್ತು, ಬತ್ತಿ ಆರಿತ್ತು, ಜ್ಯೋತಿ ನಿರ್ವಯಲಾಯಿತ್ತು. " ಹೀಗೆ ಹಾಳಾಗಿ ಪುನಃ ಈಗ ಕಲ್ಯಾಣ ಹೊಸ ಪ್ರಣತಿಯಾಯಿತು. ಅಲ್ಲಿಯ ಜನ ತೈಲವಾದರು. ಬಂದವರು ಬತ್ತಿಯಾದರು. ಶ್ರೀ ಬಾಬಾಸಾಹೇಬರು ಜ್ಯೋತಿಯಾದರು. ಇನ್ನು ಮುಂದೆ ಪ್ರಕಾಶ ಸುತ್ತಲೆ ಬೀರುವದು. ನಾಡು ನಲಿಯುವದು. ಶರಣರಾಗವುವಾಗುವದು. ಪೂರ್ವದ ಶಿರಿ ಕಾಣುವದು. ಕಲ್ಯಾಣವು ಸಕಲರ ಕಲ್ಯಾಣ ಮಾಡುವದರಲ್ಲಿ ಸಂದೇಹವೇ ಇಲ್ಲ. ಇಂಥ ಕಲ್ಯಾಣವನ್ನು ಸಕಲರೂ ಕಾಣಲೆಂದು ಹಾರೈಸುವೆ.

# ಕೊಳಲು



ಪಂಚ ತತ್ವದ ಕೊಳಲು ।
ಪಂಚ ಮುಖಿಯ ಕೃತಿಯು ।
ಇಂಚರವ ಗೈಯುವದು ।
ಓಂಕಾರ ಪಾಡುವದು ।
ಕೊಂಚ ಕೆಟ್ವರಿ ಧನಿಯು ।
ಮುಂಚಿನಂದದಿ ಬರದು ।
ಕಾಂಚನಕೆ ಬಳಸಿದರೆ ।

ಪಂಚ ಕ್ಲೇಶ ಬಹುದು ।
ಮಿಂಚಿನ ಹೆಣ್ಗೆಳಸಿದರೆ ।
ಹಂಚಾಗುದೀ ಕೊಳಲು ॥ ೧ ॥

ನವರಂಧ್ರದಿ ಹೊಲಸಿನ ।
ಭಯವಿರುವದು ಅದಕೆ ।
ದಿನ ದಿನದಿ ಒಳಹೊರಗು ।
ಹಸನಾಗಿ ತೊಳೆ ತೊಳೆದು ।
ಶಿವನಾಮ ನುಡಿಸುವದು ।
ಭವ ಬಾಧೆ ಬಿಡುತಿಹುದು ॥ ೨ ॥

ಕಲ್ಲಿಗೆ ತಾಕಲು ಒಡೆಯುವದು ।
ಮುಳ್ಳಿಗೆ ತಾಕಲು ಮುರಿಯುವದು ।
ಮಣ್ಣಲಿ ಬಿದ್ದರೆ ಹುಳತಿಹುದು ।
ಬೆಂಕಿಗೆ ಬಿದ್ದರೆ ಸುಡುತಿಹುದು ।

ನೀರಲಿ ಬಿದ್ದರೆ ಕೊಳೆಯುವದು ।
ಊದಲು ಬಾರದು ಇದರಿಂದ ।
ಜತನದಿ ಜೋಕೆ ಮಾಡುವದು ।

ಯತನದಿ ಕಾಯಕ ಗೈಯುವದು ।
ನಿರುತವಿ ಓಂಕಾರ ನುಡಿಸುವದು ॥ ೩ ॥

ಪ್ರಿಯನ ನುಡಿಸಲು ಅಂಜದಿರು ।
ತಾಯಿಯು ನಿತ್ಯದಿ ಪಾಡುವದು ।
ನೋಯುವ ಗಾಯನ ದೂಡುವದು ।
ಕಾಯಕ ಕೈಲಾಸೆನಿಸುವದು ।
ಮಾಯಕೆ ಮೋಹದಿ ಬೀಳದಿರು ।
ಗಾಯನಕಾಗಿಯೆ ಗಾಯನವ ।
ಭಾವದಿ ಭಕುತಿಯ ತೋರುವದು ।
ಮಧುರದ ಗಾಯನ ಪಾಡುವದು ।
ಜಗ ಕೇಳುತ ಮೈ ಮರೆಯುವದು ॥೪॥

# ಹೂ.

❋

ಮುಳ್ಳಿನ ಮರದಲಿ ।
ಒಳ್ಳೆಯ ಹೂಗಳು ।
ಎಣಿಕೆಗೆ ಲೆಕ್ಕವೆ ಇಲ್ಲ ॥೧॥

ನೆಳ್ಳುತ ಗಾಳಿಗೆ ।
ಬೀಳ್ವವು ಬಿಡದಲೆ ।
ಮಳೆ ಛಳಿಗಳ ಸಹಿಸುತ್ತಲ್ಲಿ ॥೨॥

ಮಣ್ಣಲಿ ಒಣಗುತ ।
ಬಣ್ಣವ ಕಳೆಯುತ ।
ಮಣ್ಣಿಗೆ ಬೆರೆಯುತ್ತದರಲ್ಲಿ ॥೩॥

ಅಣ್ಣಾ ನಿನ್ನಯ ।
ಬಣ್ಣದ ಹೂವನು ।
ಮಣ್ಣಿಗೆ ಎಸೆಯದೆ ಬಾಳಿಲ್ಲಿ ॥೪॥

ಹೆಣ್ಣಿಗೆ ಎಸೆಯದೆ ।
ಒಣ್ಣಿಸಿ ದೇವನ ।
ತಣಿಸುವ ಪಾದದಿ ಇರಿಸಲ್ಲಿ ॥೫॥

ಸುಣ್ಣಗೆ ಏರಿಸಿ ।
ತಣ್ಣಗೆ ಬೆರೆಯುತ ।
ಅಣ್ಣನೆ ನಿಜ ಸುಖ ಕಾಣೆಲ್ಲಿ ॥೬॥

ಹಣ್ಣಿನ ಹೂ ಮು– ।
ಕ್ಕಣ್ಣಗೆ ಏರವು ।
ಕಣ್ಣಿಗೆ ರಂಜನ ತಿಳಿ ಇಲ್ಲಿ ॥೭॥

ಬಣ್ಣದ ಹೂವೆ ।
ಬಣ್ಣನು ಬಯಸದೆ ।
ಗುಣಮಣಿಯಾಗುವದಿಲ್ಲಿ ॥೮॥

ಹಿಂದಕೆ ಅರಳಿದಿ ।
ಮುಂದಕೆ ಅರಳುವಿ ।
ಮುಗಿಯದು ಅರುವ ಬಯಕೆ ॥೯॥

ತಾಯಿಗೆ ಏರಿಸು ।
ಪಾವನವಾಗಲಿ ।
ಮಾಯದ ಮೋಹವು ಪೋಗಲಿ ॥೧೦॥

ಅಂಜದೆ ಅರಳು ।
ಅರಳುತ ಏರು ।
ಮಹಾ ತಾಯಿಯ ಮುಡಿಯಲ್ಲಿ ॥೧೧॥

— ಶ್ರೀ ಶಿವಾನಂದ ಸ್ವಾಮಿಗಳು
ಗವಿಮಠ, ತೆಗ್ಗಿಹಳ್ಳಿ.

# ಶರಣರ ವಾಙ್ಮಯದ ಸದ್ಯದ ಪರಿಸ್ಥಿತಿ.

(ಲೇಖಕಃ— ಸಂಪಾದಕ)



(೧) ಈ ಕಾಲಕ್ಕೆ ಶರಣರ ವಾಙ್ಮಯ ಸಂಶೋಧನೆಯು ಅತ್ಯಲ್ಪವಾಗಿದೆ. ಇದಕ್ಕೆ ವೀರಶೈವರೇ ಜವಾಬುದಾರರಿದ್ದಾರೆ. ಮಠಾಧಿಪತಿಗಳು ಅಷ್ಟೇ ತಪ್ಪುಗಾರರಾಗಿದ್ದಾರೆ. ಈಗ ನಡೆದದೆ ಬರೇ ತೋರಿಕೆಯ ಕೆಲಸ!

(೨) ಶ್ರೀ ಹಾನಗಲ್ಲ ಕುಮಾರಸ್ವಾಮಿಗಳವರು ಇದ್ದ ಕಾಲದಲ್ಲಿ ೩೦-೪೦ ವರ್ಷಗಳ ಹಿಂದೆ ಹಳ್ಳಿಗಳಲ್ಲಿ ಆರೂಢಸಂಧಿಗಳ ಸಂಖ್ಯೆಯು ಬಹಳ ದೊಡ್ಡದಾಗಿತ್ತು. ಆಗ ಅವರ ಹಾಡುಗಳೂ, ತತ್ವಜ್ಞಾನ ಬೋಧೆಗಳೂ ಸದಾ ನಡೆಯುತ್ತಿದ್ದವು. ಇದರಿಂದ ಕರ್ನಾಟಕದಲ್ಲಿ ಅನೈತಿಕ ಪ್ರವೃತ್ತಿಗಳು ಬಹಳ ಬೆಳೆಯಹತ್ತಿದ್ದವು. ಎಲ್ಲವೂ ಬ್ರಹ್ಮವು, ಜಗತ್ತು ಸುಳ್ಳು ಎಂಬ ವಿಚಾರಗಳು ಎಲ್ಲಕಡೆಗೂ ಪ್ರಾಬಲ್ಯವಾಗಹತ್ತಿದ್ದವು.

(೩) ಇದೇ ಸ್ಥಿತಿಯು ವೀರಶೈವರಲ್ಲಿಯೂ ಉಂಟಾಗಹತ್ತಿತ್ತು. ಆಗ ಇಂಥ ವಿಚಾರಗಳನ್ನು ಪ್ರತಿರೋಧಿಸಲು ಶ್ರೀ ಸ್ವಾಮಿಗಳಿಂದ ಶಿವಯೋಗ ಮಂದಿರವು ಸ್ಥಾಪಿತವಾಯಿತು. ಇದೇ ತಮ್ಮ ಉದ್ದೇಶವೆಂದು ಅವರು ಬಹಿರಂಗವಾಗಿ ಹೇಳುವರು. ಶಿವರಾತ್ರಿಯ ಸಮಯದಲ್ಲಿ ಹುಬ್ಬಳ್ಳಿಯಲ್ಲಿ ಮೊದಲು ಬಹು ದೊಡ್ಡ ಜಾತ್ರೆಯಾಗುತ್ತಿತ್ತು. ಆದ್ದರಿಂದ ಅದೇ ಸಮಯದಲ್ಲಿ ಶಿವಯೋಗಮಂದಿರದ ಸ್ಥಳದಲ್ಲಿ ಬೇರೊಂದು ಜಾತ್ರೆಯನ್ನು ಶ್ರೀ ಹಾನಗಲ್ಲು ಕುಮಾರ ಸ್ವಾಮಿಗಳವರು ಪ್ರಾರಂಭಿಸಿದರು. ಇದು ಮೂರು ನಾಲ್ಕು ವರುಷ ನಡೆಯುವಷ್ಟರಲ್ಲಿ ಈ ಜಾತ್ರೆಯು ಬಹಳ ಬೆಳೆಯಿತು.

(೪) ಮಧ್ಯದಲ್ಲಿ ಶಿವಾನುಭವ ಸಭೆಗಳು ಕರ್ನಾಟಕದಲ್ಲೆಲ್ಲ ಬಹಳ ಬೆಳೆದವು. ಆಗ ಶಿವಶರಣರ ವಚನಗ್ರಂಥಗಳು ಬಹಳ ಪ್ರಸಾರವಾದವು. ಶಿವಶರಣರ ಸಂಬಂಧದ ಹಾಡುಗಳು ಎಲ್ಲ ಕಡೆಗೂ ಅನ್ನಲ್ಪಡಹತ್ತಿದವು. ಇದರಿಂದ ಆರೂಢ ಮಠಗಳಲ್ಲಿರುವ ಶಿವಶರಣರು ಶಿವಾನುಭವದ ತತ್ವಗಳನ್ನು ಪರಿಶೀಲಿಸಹತ್ತಿದರು. ಇದರಿಂದ ಶರಣರ ವಾಙ್ಮಯವು ಕ್ರಮೇಣ ಬೆಳೆಯಹತ್ತಿತು.

(೫) ಆದರೆ ಈಚೆಗೆ ಈ ಪರಿಸ್ಥಿತಿಯು ಬದಲಾವಣೆಯಾಗಹತ್ತಿದೆ. ಶರಣರ ವಾಙ್ಮಯವನ್ನು ಪ್ರಕಟಿಸುವ ಕಾರ್ಯವು ಬಹುಶಃ ನಿಂತುಹೋದಂತೆ ಆಗಿದೆ. ಇದು ಖರ್ಚಿನ ಕೆಲಸವಾದ್ದರಿಂದ ಇದನ್ನು ಪ್ರಕಟನೆ ಮಾಡುವ ಕಾರ್ಯವು ನಿಂತುಹೋಗುತ್ತಲಿವೆ. ಇದರಿಂದ ಈ ವಾಙ್ಮಯಕ್ಕೆ ಸಂಬಂಧಿಸಿದ ಗ್ರಂಥಗಳು ಅತ್ಯಲ್ಪವಾಗಿ ದೊರೆಯಹತ್ತಿವೆ. ಡಾ|| ರಾ. ಬ. ಹಳಕಟ್ಟಿಯವರು ಅನೇಕ ವಚನ ವಾಙ್ಮಯ ಗ್ರಂಥಗಳನ್ನು ಮೊದಲು ಪ್ರಕಟಿಸಿದ್ದರು. ಅವುಗಳ ಜೊತೆಗೆ ಅಲ್ಪ ಬೆಲೆಯ ಗ್ರಂಥಗಳೂ ಇದ್ದವು. ಈ ದುಃಸ್ಥಿತಿಯನ್ನು ಇನ್ನುಮುಂದೆ ವೀರಶೈವ ಸಮಾಜವು ದೂರ ಮಾಡಲಿಕ್ಕೆ ಯತ್ನಿಸುವದು ಅವಶ್ಯವು.

(೬) ಅಲ್ಲಮಪ್ರಭು, ಚನ್ನಬಸವ, ಅಂಬಿಗರಚೌಡಯ್ಯ, ಮಡಿವಾಳ ಮಾಚಿದೇವ, ಸಿದ್ಧರಾಮೇಶ್ವರ, ಹಡಪದಪ್ಪಣ್ಣ, ದೇವರದಾಸಿಮಯ್ಯ ಇವರ ಗ್ರಂಥಗಳು ಮೊದಲು ಅಲ್ಪ ಬೆಲೆಗೆ ಬೇಕಾದಷ್ಟು ದೊರೆಯುತ್ತಿದ್ದವು. ಇವು ವೀರಶೈವರ ಶ್ರೇಷ್ಠ ಮಾದರೀ ಗ್ರಂಥಗಳಾಗಿವೆ. ಇವು ಈಗ ದೊರೆಯುವದಿಲ್ಲ. ಇದರಿಂದ ಭಾವಿಕ ಜನರು ಇವುಗಳನ್ನು ಬಿಟ್ಟು ಆರೂಢ ಪಂಥದ ಗ್ರಂಥಗಳನ್ನು ಮೊದಲಿನಂತೆ ಓದಹತ್ತಿದ್ದಾರೆ. ಇದರಿಂದ ಶರಣರ ವಾಙ್ಮಯವನ್ನು ಪರಿಶೀಲಿಸುವ ಒಲವು ಕಡಿಮೆಯಾಗುತ್ತಲಿದೆ.

(೭) ಮೊದಲು ತಮಿಳುದೇಶದ ೬೩ ಪುರಾತನರ ಮಂಟಪಗಳನು ರಚಿಸಿ ಅವರನ್ನು ಪೂಜೆ ಮಾಡುವ ಕಾರ್ಯಗಳು ಆಗಿಂದಾಗ್ಗೆ ನಡೆಯುತ್ತಿದ್ದವು. ಈಚೆಗೆ ಡಾ|| ರಾ. ಬ. ಹಳಕಟ್ಟಿಯವರು ಸುಮಾರು ೧೫೦ ಶಿವ ಶರಣರ ಚರಿತ್ರೆಗಳನ್ನು ಪ್ರಕಟಿಸಿದರು. ಆಗ ವೀರಶೈವ ಕೀರ್ತನಕಾರರೂ ಪುರಾಣಿಕರೂ ತಮ್ಮ ಕೀರ್ತನೆಗಳಲ್ಲಿ ಆ ಕಥೆಗಳನ್ನು ಜನರಿಗೆ ತಿಳಿಸಿ ಹೇಳುವರು. ಆದರೆ ಈಗ ಈ ರೂಢಿಯು ತಪ್ಪಿಹೋಗುವದರಲ್ಲಿ ಇದೆ. ಇದರಿಂದ ಶಿವಶರಣರ ತತ್ವಗಳ ಪರಿಶೀಲನೆಗೆ ದೊಡ್ಡ ಧಕ್ಕೆ ಬಡಿಯ ಹತ್ತಿದೆ.

(೮) ಈ ವರೆಗೆ ಡಾ|| ರಾ. ಬ. ಹಳಕಟ್ಟಿಯವರು ಶರಣರ ವಾಙ್ಮಯವನ್ನು ಪ್ರಕಟಮಾಡುತ್ತಬಂದರು. ಇದರಲ್ಲಿ ಅವರಿಗೆ ಬಹಳ ನಷ್ಟವಾಗಲು ಈ ನಷ್ಟವನ್ನು ಕೆಲಮಟ್ಟಿಗೆ ತುಂಬಿಕೊಡಬೇಕೆಂದು ಅವರಿಗೋಸ್ಕರ ಒಂದು ನಿಧಿಯನ್ನು ಅರ್ಪಿಸಬೇಕೆಂಬ ಸೂಚನೆಗಳು ಮುಂದೆ ಬಂದವು.

ಆದರೆ ಈ ಬಗ್ಗೆ ಬೆಳಗಾವ ಮತ್ತು ವಿಜಾಪುರಗಳಲ್ಲಿ ಮಾತ್ರ ಪ್ರಯತ್ನ ಗಳು ನಡಿದವು. ಇಲ್ಲಿ ಸಹ ಬಹು ಅಲ್ಪ ಪ್ರಮಾಣದಿಂದ ಈ ನಿಧಿಗಳು ಕೂಡಿ ದವು. ಬಾಗಲಕೋಟೆ, ಗದಗ, ಬಳ್ಳಾರಿ, ಹೊಸಪೇಟೆ, ಹುಬ್ಬಳ್ಳಿ, ಧಾರ ವಾಡ, ಡಾವಣಗೇರಿ, ರಾಣೆಬಿನ್ನೂರ, ಹಾವೇರಿ, ಬ್ಯಾಡಿಗಿ, ಸೊಲ್ಲಾಪುರ ಈ ಸ್ಥಳಗಳಲ್ಲಿ ಯಾರೂ ಈ ನಿಧಿಗೆ ಸಹಾಯ ಮಾಡಲು ಮುಂದಾಗಿಲ್ಲ. ಇದರಿಂದ ಶಿವಶರಣರ ವಾಙ್ಮಯ ಪ್ರಕಟನೆಯ ಕಾರ್ಯವೂ ನಿಂತು ಹೋಗಹತ್ತಿದೆ.

(೯) ಈಚೆಗೆ ಧಾರವಾಡ, ನವಲಗುಂದ, ಡಾವಣಗೇರಿ, ಚಿತ್ರಕಲ್ಲ ದುರ್ಗ, ಇಲ್ಲಿಯ ಸ್ವಾಮಿಗಳವರು ಆರೂಢ ಪಂಥದ ಗ್ರಂಥಗಳು, ವೇದಾಂತಗ್ರಂಥಗಳು, ಅರವಿಂದಬಾಬುಗಳ ಗ್ರಂಥಗಳು, ಇವುಗಳನ್ನು ಸಭೆ ಯಲ್ಲಿ ಸ್ತುತಿಸಿ ವ್ಯಾಖ್ಯಾನಗಳನ್ನು ಕೊಡಹತ್ತಿದ್ದಾರೆ. ಇದರಿಂದ ಶಿವಶರ ಣರ ಗ್ರಂಥಗಳ ಬಗ್ಗೆ ಇರಬೇಕಾದ ಮನ್ನಣೆಯು ಬಹಳ ಕಡಿಮೆಯಾಗ ಹತ್ತಿದೆ. ಇತರ ಮತಸ್ಥರ ಪ್ರೀತಿಯನ್ನು ಗಳಿಸಲು ಈ ತೆರದ ಪ್ರಯತ್ನಗಳು ನಡೆಯಹತ್ತಿವೆ.

(೧೦) ಈಚೆಗೆ ಹಂಸಭಾವಿ ಡಾವಣಗೇರಿ ಮೊದಲಾದ ಕಡೆಗೆ ಶಿವಶರಣರ ತತ್ವಗಳ ಬಗ್ಗೆ ಪರಿಷತ್ತುಗಳು ಆಗಿರುತ್ತವೆ. ಆದರೆ ನಮ್ಮ ಸಮಾಜದ ಸ್ವಾಮಿಗಳು ತಮ್ಮ ಲಕ್ಷವನ್ನು ಬೇರೆ ಕಡೆಗೆ ಎಳೆದ ದ್ದರಿಂದ ಈ ಶಿವಶರಣರ ವಾಙ್ಮಯಕ್ಕೆ ಆಘಾತಗಳು ಒದಗಹತ್ತಿರುತ್ತವೆ.

(೧೧) ಈ ಪರಿಸ್ಥಿತಿಯನ್ನು ವೀರಶೈವ ಸಮಾಜದಲ್ಲಿಯ ಮಹಾ ಸ್ವಾಮಿಗಳೂ ಶಿವಾನುಭವಿಗಳೂ ಲಕ್ಷಿಸಿ ಸಕಾಲದಲ್ಲಿ ಪ್ರಯತ್ನ ಮಾಡದೇ ಹೋದರೆ ಶಿವಶರಣರ ವಾಙ್ಮಯವು ಮೊದಲಿನಂತೆ ಶೀಘ್ರವಾಗಿ ಲೋಪ ಹೊಂದುವ ದುಶ್ಚಿನ್ಹಗಳು ತೋರಹತ್ತಿವೆ. ಸಮಾಜವು ಎಚ್ಚರಿಯಬೇಕು.

    

# ಸದ್ಗುರುವು

卐

೧

ಕೆಂಪು ಬಣ್ಣ ನಡವು ಸಣ್ಣ ।
ತಾನದಿಂದ ಗಾನ ಮಾಡಿ ।
ದಾನಿಯಂತೆ ಧನಿಯು ಮಾಡಿ ।
ಕರೆವೆ ಯಾರನು ? ॥

೨

ಸಾನುರಾಗದಿಂದ ಹಾಡಿ ।
ದಯದ ದೃಷ್ಟಿಯಿಂದ ನೋಡಿ ।
ಹಸ್ತ ಇಟ್ಟು ಹರಕೆ ಮಾಡಿ ।
ಕರುಣೆ ಯಾರಿಗೆ ? ॥

೩

ಅನ್ಯ ಜಾತಿ ಜೀವಿಯನ್ನು ।
ತನ್ನ ಜಾತಿಯಂತೆ ಮಾಡಿ ।
ಶಕ್ತಿ ಯುಕ್ತಿ ಭುಕ್ತಿ ಕೊಟ್ಟು ।
ಪ್ರೀತಿ ಯಾರಿಗೆ ? ॥

೪

ನೋಟ ಇಲ್ಲದವಗೆ ನೋಟ ।
ಕಾಲು ಇಲ್ಲದವಗೆ ಕಾಲು ।
ಕಾಡ ಜೀವಿಗಳಿಗೆ ಕೊಟ್ಟು ।
ಹರಿಸಿ ಕಾಯುವಿ ॥

೫

ಅರಿವೆ ಇಲ್ಲದವಗೆ ಅರಿವು ।
ಗುರು ಆಗಿ ನೀನು ಕೊಟ್ಟೆ ।
ಕೀಳು ಹೋಗಿ ಮೇಲು ಆಯ್ತು ।
ಏನು ಸೋಜಿಗ ? ॥

೬

ಗುರುವಿನಿಂದ ಮಂತ್ರ ಕೇಳಿ ।
ಶರಣು ಆಯ್ತು ಸಕಲ ತರದಿ ।
ತನ್ನ ತಾನು ಮರೆತು ಅದಕೆ ।
ಅರ್ಪಣಾಯಿತು ॥

೭

ಇಂಥ ಕಾಡ ಶಿಷ್ಯನನ್ನು ।
ಭ್ರಾಂತಿ ಬಿಡಿಸಿ-ಕರೆದುಕೊಂಡು ।
ಮಂತ್ರ ಹೇಳಿ ಕಿವಿಯಲೊಂದು ।
ಗವಿಯಲಿಟ್ಟಿತು ॥

೮

ಶಿಷ್ಯ ಬಿಡದೆ ಮಂತ್ರ ಧ್ಯಾನ ।
ಮಾಡಿ ಗುರುವಿನಂತೆ ಆದ ।
ಗುರುವು ಶಿಷ್ಯ ಪ್ರೇಮವಿಂತು ।
ಕಾರ್ಯ ಮಾಡಿತು ॥

೯

ಗುರುವಿನಲ್ಲಿ ಗುಲಾಮನಾಗಿ ।
ಮರೆತು ಮಾಯ ಮೋಹಗಳನು ।
ಇರಿಸಿ ಭಕ್ತಿ ಭವದ ಬಾಧೆ ।
ತೊರೆದು ಬಿಡುವದು ॥

— ಶ್ರೀ ಶಿವಾನಂದ ಸ್ವಾಮಿಗಳು
ಗವಿಮಠ, ತೆಗ್ಗಿಹಳ್ಳಿ.

# ವೀರಶೈವವು ಶಕ್ತಿವಿಶಿಷ್ಟಾದ್ವೈತವೇ ಹೌದು.

## ಹಿಂದಿನ ಸಂಚಿಕೆಯಿಂದ ಮುಂದುವರೆದದ್ದು.

( ಲೇಖಕರು:- ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ. )

ಇದೆಲ್ಲ ಹಿಂದಿನ ಪ್ರಾಚೀನ ಕಾಲದ ಶಾಸ್ತ್ರದ ಮಾತಾಯಿತು. ಇನ್ನು ಆಧುನಿಕ ೨೦ ನೇ ಶತಮಾನದ ಯಾಂತ್ರಿಕ ಯುಗದಲ್ಲಿಯ ಜ್ಞಾನಿಗಳ ವಿಷಯವನ್ನಷ್ಟು ವಿಚಾರಿಸುವಾ. ಶ್ರೀ ರಾಮಕೃಷ್ಣ ಪರಮಹಂಸ ಹಾಗೂ ಶ್ರೀ ವಿವೇಕಾನಂದರಂತೂ ಸೂರ್ಯನಷ್ಟು ಸ್ಪಷ್ಟ ಇದ್ದಾರೆ. ಅವರ ಅನುಭವ, ತತ್ವ, ಸಿದ್ಧಾಂತಗಳನ್ನಂತೂ ಪಾಶ್ಚಿಮಾತ್ಯರೂ ಕೂಡ ಒರೆಗಲ್ಲಿಗೆ ಹಚ್ಚಿ ನೋಡಿ ಪರೀಕ್ಷಿಸಿದ್ದಾರೆ. ಅವರು ಅನೇಕ ಹೊತ್ತಿಗೆಗಳನ್ನು ಬರೆದಿದ್ದಾರೆ. ಹೇಳಿಕೆಗಳನ್ನು ಪ್ರಕಟಿಸಿದ್ದಾರೆ.

ಪರಬ್ರಹ್ಮ ಪರಶಿವನು ಸೃಷ್ಟಿ, ಸ್ಥಿತಿ, ಲಯಕಾರಿಯಲ್ಲದ ಸ್ಥಿತಿಯಲ್ಲಿ ವಿಚಾರಿಸಿದರೆ ಬ್ರಹ್ಮ ಪರಶಿವ ನಿರ್ಗುಣ ಸತ್ ಎಂದೆನಿಸುತ್ತಾನೆ. ಅದನ್ನೇ ಕರ್ಮಾವಸ್ಥೆಯಲ್ಲಿ ಅಂದರೆ ಸೃಷ್ಟಿ, ಸ್ಥಿತಿ, ಲಯಕಾರಿಯಲ್ಲಿ ಶಕ್ತಿ, ಚಿತ್, ಮಾಯೆ, ಪ್ರಕೃತಿ ಪರಮೇಶ್ವರಿ ಎಂದೆನಿಸುತ್ತಾನೆ.

ಒಂದೇ ಅಗ್ನಿಯಲ್ಲಿ ಉರಿ ಮತ್ತು ಹೊಗೆಗಳು ಇದ್ದಂತೆ ಅಗ್ನಿಯೇ ಪರಶಿವ, ಉರಿಯೇ ಚಿಚ್ಛಕ್ತಿ, ಹೊಗೆಯೇ ಮಾಯೆ, ಬಿಳಿಹೊಗೆ ವಿದ್ಯ (ಅರಿವು), ಕರಿಹೊಗೆ ಅವಿದ್ಯ (ಮರವು).

ನಿರ್ಗುಣ ಸಗುಣಗಳೆರಡೂ ಒಂದೆ. ರೂಪಾಯಿಗೆ ಎರಡು ಮೈಗಳಿರುವಂತೆ ಈ ಶಿವಶಕ್ತಿಯರು ಇದ್ದಾರೆ. ಒಂದು ಮೈ ಬಿಟ್ಟು ಒಂದೇ ಮೈ ರೂಪಾಯಿ ಬೇಡಿದರೆ ಸಿಗಲಾರದು. ಒಂದು ಮೈ ಸಾಪಾದದ್ದು, ಇನ್ನೊಂದು ಮೈಯಲ್ಲಿ ಮುದ್ರೆ ಇದ್ದರೂ ಆ ರೂಪಾಯಿ ಚಲಾವಣೆಯಾಗದು. ಎರಡೂ ಮೈಗಳು ಸರಿಯಾಗಿದ್ದ ರೂಪಾಯಿ ಮಾತ್ರ ನಡೆಯುವದು. ಅದರಂತೆ ಶಿವನನ್ನು ಬಿಟ್ಟು ಶಕ್ತಿಯನ್ನು, ಶಕ್ತಿಯನ್ನು ಬಿಟ್ಟು ಶಿವನನ್ನು ಎಂದೂ ಪೂಜಿಸುವದು ಶಕ್ಯವೇ ಇಲ್ಲ. ಅದರಂತೆ ಲಿಂಗ ತತ್ವ ರಚಿತವಾಗಿದೆ.

ಆದಕ್ಕೆ ಜಯ ಜಯ ನಮಃ ಪಾರ್ವತೀ ಪತೀ ಹರ ಹರ ಮಹಾದೇವ ಎಂದೇ ಜಯಘೋಷ ಸಹ ಮಾಡುವರು.

ಮಾನವನು ಜ್ಞಾನ, ಭಕ್ತಿ, ಕ್ರಿಯೆಗಳ ಸಮನ್ವಯ ಪಡೆಯಬೇಕು. ಅಂದರೆ ಜ್ಞಾನಗಂಗೆಯು ಭಕ್ತಿಯ ಮನೆಗಳ ಪ್ರಯಾಗ ಕ್ಷೇತ್ರವಾದಾಗ ನಿಷ್ಕಾಮ ಕರ್ಮ ಮಾಡಲು ಶಕ್ಯವಾಗುವದು.

ಜ್ಞಾನ, ವಿಚಾರ, ಪುರುಷ, ಪರಶಿವ, ನಿರ್ಗುಣ, ತಂದೆಯ ಸ್ವರೂಪ, ಭಕ್ತಿ, ಪ್ರೀತಿ, ಸಗುಣ, ಪ್ರಕೃತಿ, ಪರಶಕ್ತಿ ತಾಯಿಯ ಸ್ವರೂಪ.

ಸಗುಣ-ನಿರ್ಗುಣ, ಪುರುಷ-ಪ್ರಕೃತಿ, ಜ್ಞಾನ-ಭಕ್ತಿ ವಿಚಾರ-ಪ್ರೀತಿ, ಪರಶಿವ-ಪರಶಕ್ತಿ, ಶಿವ-ಶಕ್ತಿ ಕೂಡಿದಾಗ ತಾನೇ ಕರ್ಮಪ್ರವೃತ್ತಿಯಾಗುವದು.

ದ್ವೈತವು ಭಕ್ತಿಗೆ ಸಂಬಂಧಿಸಿದ್ದು ಪರಮಾತ್ಮ ಬೇರೆ, ತಾನು ಬೇರೆ. ಅವನ ಸೇವಕನೆಂದು ಭಕ್ತಿ, ಪ್ರೀತಿ ಮಾಡಲಿಕ್ಕೆ ಮಾನವನು ಪ್ರಾರಂಭ ಮಾಡುವನು. ಇದು ಸಗುಣವು.

ಅದ್ವೈತವು ಸಾಧನೆಯ ಕಟ್ಟ ಕಡೆಯ ಮಾತು, ಇದು ಪೂರ್ಣ ಜ್ಞಾನಕ್ಕೆ ಸಂಬಂಧಿಸಿದ್ದು. ಇದನ್ನು ಬಾಯಿಯಿಂದ ಹೇಳಲಿಕ್ಕೆ ಬರುವದಿಲ್ಲ. ಸಮಾಧಿಯಲ್ಲಿ ಅನುಭವಿಸಬಹುದು. ಮನ ಬುದ್ಧಿಗಳಿಗೆ ಮೀರಿದ್ದು ಇದು ನಿರ್ಗುಣವು.

ವಿಶಿಷ್ಟಾದ್ವೈತವು ಮನ ಬುದ್ಧಿಗಳ ತುತ್ತ ತುದಿಯ ಸಿದ್ಧಿಯೇ ಸರಿ.

ಶಕ್ತಿವಿಶಿಷ್ಟಾದ್ವೈತವು ಶಿವ-ಶಕ್ತಿಯರು, ನಿರ್ಗುಣ-ಸಗುಣರು ನಿಜವೆಂದು ಪೂರ್ಣ ಅನುಭವ ಆಗುವ ಸ್ಥಿತಿ.

ಈಶ ನಿವಾಸ, ಈಶ ನಾಮರೂಪ, ಈಶ ಇವೆಲ್ಲವೂ ಚೈತನ್ಯ.

ಶಕ್ತಿಯನ್ನು ಅಲ್ಲಗಳೆದು ಬರೆ ನಿರ್ಗುಣ ಅವ್ಯಯ ಅವ್ಯಕ್ತನೆನ್ನುವ ಧರ್ಮ ಮತಪಂಥದವರಿಗೆ ಪೂರ್ಣ ಸ್ಥಿತಿಗೆ ಹೋಗಲು ಶಕ್ಯವಿಲ್ಲ. ಅಪೂರ್ಣದಲ್ಲೇ ಇರುವರು. ದ್ವೈತದಿಂದ ಅದ್ವೈತಕ್ಕೆ ಹೋಗಬಹುದು. ಸಗುಣದಿಂದ ನಿರ್ಗುಣಕ್ಕೆ ಹೋಗಬಹುದು. ಆಗ ಮಾತ್ರ ಒಳ್ಳೆಂದರೂ ಆದಿಶಕ್ತಿಯ ಅನುಭವ ತಾನೇ ಆಗುವದು.

ಕರಗಿದ ತುಪ್ಪ ನಿರಾಕಾರ, ಗಟ್ಟಿಯಾದ ತುಪ್ಪ ಸಾಕಾರ, ಸಮುದ್ರ ನಿರಾಕಾರ ಅದರಮೇಲಿನ ಏರುಪೇರು ತೆರೆಗಳೆಲ್ಲ ಸಾಕಾರ ಇದರಂತೆ ಪರಶಿವ ಪರಶಕ್ತಿಗಳೂ ಕೂಡ ಅವಿನಾಭಾವದಿಂದ ಸಂಬಂಧವಾಗಿರುವವು.

ಮಾಯೆಯೇ ಬ್ರಹ್ಮನ ಪರಿಚಯವನ್ನು ಮಾಡಿಕೊಡುವಳು. ಮಾಯೆಯು ಹೊರತು ಬ್ರಹ್ಮನ ಪರಿಚಯವನ್ನು ಮಾಡಿಕೊಡಲಿಕ್ಕೆ ಯಾರು ಸಮರ್ಥರು? ಪರಮಾತ್ಮನ ಶಕ್ತಿಯನ್ನು ತಿಳಿಕೊಂಡಹೊರತು ಬ್ರಹ್ಮನನ್ನು ತಿಳಿಕೊಳ್ಳುವ ಸಾಧನವು ದೊರೆಯುವದಿಲ್ಲ.

ಓಡುವ ಹಾವಿನಲ್ಲಿಯೂ ಸ್ವಸ್ಥವಾಗಿ ಬಿದ್ದುಕೊಂಡ ಹಾವಿನಲ್ಲಿಯೂ ಯಾವ ಸಂಬಂಧವಿರುವದೊ ಅದೇ ಸಂಬಂಧವು ಶಕ್ತಿಯಲ್ಲಿಯೂ ಬ್ರಹ್ಮನಲ್ಲಿ (ಪರಶಿವನಲ್ಲಿ) ಇರುತ್ತದೆ. ಗತ್ಯಾತ್ಮಕ ಶಕ್ತಿಯು ಮಾಯೆಯನ್ನು ಸ್ಥಿತ್ಯಾತ್ಮಕ ಶಕ್ತಿಯು ಬ್ರಹ್ಮನನ್ನೂ ಹೋಲುವವು.

ಶಾಂತಸಮುದ್ರವು ಬ್ರಹ್ಮನನ್ನೂ ಮತ್ತು ತೆರೆಗಳಿಂದ ಅಲ್ಲೋಲಕಲ್ಲೋಲವಾದ ಸಮುದ್ರವು ಮಾಯೆಯನ್ನು ಹೋಲುವದು.

ಬೆಂಕಿ ಮತ್ತು ಅದರ ದಾಹಕ ಶಕ್ತಿ ಇವುಗಳಲ್ಲಿರುವ ಸಂಬಂಧವೇ ಬ್ರಹ್ಮ ಮತ್ತು ಮಾಯೆ (ಶಕ್ತಿ) ಇವುಗಳಲ್ಲಿರುವದು.

ಪರಮೇಶ್ವರನು ನಿರಾಕಾರನೂ ಹೌದು. ಮತ್ತು ಅವನು ಸಾಕಾರ ನಿರಾಕಾರಗಳನ್ನೂ ಮೀರಿರುವನು. ಸಾರಾಂಶ ಅವನ ಸ್ಥಿತಿ ಅವನಿಗೇ ಗೊತ್ತು.

ಶಕ್ತಿಸಾಧನೆಗಳನ್ನು ಬಿಟ್ಟದ್ದರಿಂದ ಶಕ್ತಿಯೂ ಕೂಡ ನಮ್ಮನ್ನು ಬಿಟ್ಟಿದ್ದಾಳೆ. ವಿಷಯ ಸುಖದ ಪ್ರೇಮದಲ್ಲಿ ಮುಳುಗಿದ್ದೇವೆ. ಇದು ನಿಜವಾದ ಶಕ್ತಿ ಜ್ಞಾನಗಳುಂಟು. (ವಿವೇಕಾನಂದ)

*First mother then the Father* ಮೊದಲು ತಾಯಿಯ ಉಪಾಸನ ಆ ಬಳಿಕ ತಂದೆ ಅಂದರೆ ಸತ್ (ಜ್ಞಾನ ತಾನೇ ಬೆನ್ನುಹತ್ತುವದು.

—(ವಿವೇಕಾನಂದ)

ಶಿವಾವತಾರಿ ಶಂಕರಾಚಾರ್ಯರ ಹಾಗೂ ಚೈತನ್ಯರು ಭರತಖಂಡದಲ್ಲಿ ಉದಿಸಿ, ಪುನಃ ಶಕ್ತಿ ಉಪಾಸನೆಯ ಪವಿತ್ರ ಆದರ್ಶವನ್ನು ಜನಸಾಧಾರಣರಿಗೆ ತೋರಿಸಿ, ಶಿವೋಕ್ತ ತಂತ್ರ ಶಾಸ್ತ್ರಕ್ಕೆ ಪುನಃ ಗೌರವ

ವನ್ನು ಸಂಪಾದಿಸಿ ಕೊಟ್ಟರು. ಶಂಕರಾಚಾರ್ಯ ಲಿಖಿತ ಶಿವದುರ್ಗಾದಿ ಗಳ ಸ್ತವರಾಜಿ ಚೈತನ್ಯರು ಅನ್ನಪೂರ್ಣಾದೇವಿಯನ್ನು ತಮ್ಮ ಇಷ್ಟದೈವ ವಾಗಿ ತೆಗೆದುಕೊಂಡದ್ದು ವ್ಯಕ್ತವಾಗುವದು. ಅನ್ನಪೂರ್ಣೆ ಶಂಕರಾಚಾ ರ್ಯರ ಇಷ್ಟ ದೇವಿ ಎಂಬುದಕ್ಕೂ ಪ್ರಮಾಣಗಳು ದೊರಕುವವು.

—(ಶ್ರೀ ಶಾರದಾನಂದರು)

"ಪ್ರತಿಯೊಂದು ಅವತಾರ ವ್ಯಕ್ತಿಗಳೂ ಶಕ್ತಿಉಪಾಸನೆ ಮಾಡಿದರು. ಶಕ್ತಿಯ ವಿಶೇಷ ಅನುಗ್ರಹವಿಲ್ಲದೆ ಲೋಕ ಗುರುತ್ವ ಲಭಿಸುವದಿಲ್ಲ. ಅಥವಾ ಧರ್ಮಭಾಗೀರಥಿಯ ಪ್ರಬಲ ತರಂಗವನ್ನು ದೇಶದಲ್ಲೆಲ್ಲಾ ಹರಿಸಿ ಜನ ಸಾಧಾರಣರಲ್ಲಿ ಧರ್ಮ ಪ್ರಚಾರವನ್ನು ಮಾಡಲು ಸಾಧ್ಯವಾಗುವದಿಲ್ಲ."

ಚೈತನ್ಯರ ಜೀವನದಲ್ಲಿ ವೇದಾಂತ ಮತ್ತು ಶಕ್ತಿ ಭಾವನೆಗಳು ಕಾಣ ಬರುವದಿಲ್ಲ ಎಂದಾಗ ಶ್ರೀ ರಾಮಕೃಷ್ಣರು— "ಆನೆಗೆ ಎರಡು ವಿಧದ ಕೊಂಬು ಇರುವಂತೆ ಒಂದು ಹೊರಗೆ ಶತ್ರುಗಳಿಂದ ಪಾರಾಗುವದಕ್ಕೆ, ಮತ್ತೊಂದು ಒಳಗೆ ಆಹಾರವನ್ನು ಅಗಿಯುವದಕ್ಕೆ. ಇದರಂತೆಯೇ ಶ್ರೀ ಚೈತನ್ಯ ದಲ್ಲಿಯೂ ಎರಡು ವಿಧದ ಭಾವಗಳು ಇದ್ದವು. ಭಕ್ತಿ ಅವರ ಹೊರಗಿನ ಭಾವ. ಜನಸಾಮಾನ್ಯಕ್ಕೆ ಪ್ರಚಾರಕ್ಕೆ ವೇದಾಂತ ಹಾಗೂ ಶಕ್ತಿ ಉಪಾ ಸನೆಗಳು ಅಂತರಂಗದ ಭಾವ ಅದು ಅವರಿಗೋಸುಗವಾಗಿ. ಕೇಶವಭಾರತಿ ಯಿಂದ ಸನ್ಯಾಸ ತೆಗೆದುಕೊಂಡದ್ದು ಅನ್ನಪೂರ್ಣಾದೇವಿಯ ಉಪಾಸನೆ ಇದಕ್ಕೆ ನಿದರ್ಶನ."

—(ಶ್ರೀ ರಾಮಕೃಷ್ಣ)

ದೇವಿ ವೇದಮುಖವಾಗಿ ಹೀಗೆ ಹೇಳಿದಳು:— ನನ್ನಿಂದ ಪ್ರಪಂಚವೆಲ್ಲ ಜೀವಿಸಿದೆ. ಅನ್ನ ಗ್ರಹಣ ಶ್ರವಣಾದಿ ಕ್ರಿಯೆಗಳೆಲ್ಲ ನನ್ನಿಂದ ಕೆಲಸ ಮಾಡುತ್ತವೆ. ಯಾರು ನನ್ನನ್ನು ಅವಹೇಳನ ಮಾಡುವರೋ ಅವರು ನಾಶ ವಾಗುವರು. ನೀನು ಶ್ರದ್ಧಾವಾನ್ ಆದಕಾರಣವೇ ನಾನು ನಿನಗೆ ಎಲ್ಲ ವನ್ನೂ ಹೇಳುತ್ತಿರುವೆನು. ಬ್ರಹ್ಮಶಕ್ತಿಯ ಹಿಂಸಕರಾದ ಅಸುರರನ್ನು ನಾಶ ಮಾಡುವ ರುದ್ರನ ಕೈಯ್ಯಲ್ಲಿ ನಾನು ಶಕ್ತಿರೂಪಳಾಗಿ ಅವನ ಬಾಹುಬಲ ದಲ್ಲಿ ನೆಲಸಿದ್ದೇನೆ. ನಾನು ಲೋಕ ರಕ್ಷಣೆಗಾಗಿ ಯುದ್ಧದಲ್ಲಿ ನಿರತಳಾ ಗಿದ್ದೆ. ನಾನು ಆಕಾಶ ಪೃಥ್ವಿಯಲ್ಲಿ ನೆಲಿಸಿರುವೆನು. ( ಋಕ್ ದೇವೀ ಸೂಕ್ತ ) ದಲ್ಲಿ ಹೇಳಿದೆ.

ಪೂರ್ವೋಕ್ತ ಶಕ್ತಿರಾಜ್ಯದಲ್ಲಿ ಯಾರು ಅದ್ಭುತ ಪ್ರಭಾವವನ್ನು ಒಮ್ಮೆ ಮನಗಂಡಿರುವರೋ ಅವರು ಜಗತ್ತು ಚಿರಕಾಲ ಶಕ್ತಿಪೂಜೆಯಲ್ಲಿ ನಿರತವಾಗಿತ್ತು ಎಂಬುದನ್ನು ಅರಿತಿರುವರು. ಶಕ್ತಿಆರಾಧನೆಯಲ್ಲದೆ ಬೇರಾವ ಉಪಾಸನೆಯೂ ಪ್ರಪಂಚದಲ್ಲಿ ಹಿಂದೆ ಇರಲಿಲ್ಲ. ಮುಂದೆ ಇರುವಂತೆ ಇಲ್ಲ.

—(ಶ್ರೀ ರಾಮಕೃಷ್ಣ)

"ಸೈಷಾ ಪ್ರಸನ್ನಾ ವರದಾನೃಣಾಂ ಭವತಿಮುಕ್ತಯೇ" ಇವಳು ಸುಪ್ರಸನ್ನಳಾದಾಗ ಮಾತ್ರ ಮುಕ್ತಿಗೆ ಸಹಾಯಕಳಾಗುವಳು.

(ಋಕ್‌ದೇವೀ ಸೂಕ್ತ)

ದೇವಿ ನಿತ್ಯ ಸ್ವರೂಪ. ಈ ಜಗತ್ತೇ ಅವಳ ದೇಹ. ಅವಳು ಅಖಂಡ ಬ್ರಹ್ಮಾಂಡಗಳನ್ನು ತುಂಬಿರುವಳು. ಎಲ್ಲಿಂದ ಜೀವ ಜಗತ್ತು ಪ್ರಭೃತಿಗಳು ಬರುವವೋ ಅವುಗಳೆಲ್ಲದರ ಕಾರಣಸ್ವರೂಪಿಣಿ ನಾನೇ. ಪರಬ್ರಹ್ಮನೊಡನೆ ನಿತ್ಯ ಇರುವವಳು ನಾನೇ. ಯಾವ ದೇವಿ ಸರ್ವ ಭೂತಗಳಲ್ಲಿ ಚೇತನ ದಂತೆ ನೆಲಸಿರುವಳೋ ಅವಳಿಗೆ ಅನಂತ ನಮಸ್ಕಾರಗಳು.

(ಋಕ್‌ದೇವಿ ಸೂಕ್ತ)

ದ್ರವಿಡರು ಹಿಂದುಸ್ಥಾನದಲ್ಲಿ ಮೊದಲು ಶಿವಶಕ್ತಿಯರ ಪೂಜೆಗಾಗಿ ಸ್ಥಾವರಲಿಂಗಗಳನ್ನು ಪೂಜಿಸಿದರು. ೧೦ ಲಕ್ಷ ವರ್ಷ ಪೂರ್ವದಲ್ಲಿ ಶಿವಶಕ್ತಿಯರ ದ್ಯೋತಕವಾದ ಲಿಂಗ ಪೂಜೆ ಪ್ರಾರಂಭವಾಗಿದೆ ಎಂದು ಅನಿಸುವದು. ಹಿಂದುಸ್ಥಾನದಲ್ಲಿ ದ್ರವಿಡ ಸಂಸ್ಕೃತಿಯೇ ಮೊದಲಿನದು. ಆರ್ಯರು ಬಂದು ಸಿಕ್ಕ ದೇವರನ್ನು ಪೂಜಿಸಹತ್ತಿದರು.

ಪರಮಾತ್ಮನ ಕೀಲಿ ಹಾಗೂ ಕೀಲಿ ಕೈಗಳೆರಡೂ ಮಹಾತಾಯಿಯ ಹತ್ತಿರವೇ ಇರುವವು. ಅವಳೇ ತನ್ನ ಮಾಯೆಯನ್ನು ಸರಿಸಿ ಓರೆ ಮಾಡಿ ಪರಮಾತ್ಮನ ಬಾಗಿಲ ತೆರೆದು ಅವನು ತಾನು ಒಂದಾಗಿಯೇ ತೋರು ವರು. ನಾವು ಪರಮಾತ್ಮನ ಉಪಾಸನೆಯನ್ನು ಮಾಡಿದರೂ ಕೂಡ ಅವನು ತಾಯಿಗೆ ಕೇಳುವನು. ಆಗ ತಾಯಿ ಹೇಳುವಳು. "ಇರಲಿ ನಿನ್ನ ಉಪಾ ಸನೆ ಮಾಡಿದರೂ ಅಷ್ಟೇ ನನ್ನ ಉಪಾಸನೆ ಮಾಡಿದರೂ ಅಷ್ಟೇ. ನಾನು ನನ್ನ ಮಾಯೆಯನ್ನು ಓರೆ ಮಾಡಿ ಭಕ್ತನಿಗೆ ನಿನ್ನ ದರ್ಶನ ಮಾಡಿಸು

ವೆನು." ಎಂದು ಹೇಳುವಳು. ಇದಕ್ಕೆ ಸ್ವಲ್ಪ ತಡವಾಗುವದು. ಪರಮಾತ್ಮನು ಸಾಧಕನ ಮಾರ್ಗದಲ್ಲಿಯ ಅಡೆತಡೆಗಳನ್ನು ಸರಿಪಡಿಸಲಾರನು. ತಾಯಿಯೇ ಅವುಗಳನ್ನೆಲ್ಲ ಸರಿಪಡಿಸುವಳು. (ಶ್ರೀರಾಮಕೃಷ್ಣ)

ಮಹಾಕಾರಣ (ಸತ್-ಚಿತ್-ಆನಂದ) ದಿಂದ ಕಾರಣ. (ವಿಜ್ಞಾನ) ಜಗತ್ತು. ಕಾರಣದಿಂದ ಸೂಕ್ಷ್ಮ (ಮನ ಬುದ್ಧಿ ಪ್ರಾಣಗಳ) ಜಗತ್ತು. ಸೂಕ್ಷ್ಮಜಗದಿಂದ ಸ್ಥೂಲ (ಭೌತಿಕ) ಜಗತ್ತು ಹೊರಗೆ ಬಂದು ಪ್ರಕಟವಾದವು. (ಶ್ರೀ ಅರವಿಂದರು).

ಇದೆಲ್ಲದರ ಉತ್ಪತ್ತಿಗೆ ಸತ್‌ದಲ್ಲಿಯ ಚಿತ್‌ಳೇ ಕಾರಣಳಾಗಿರುವಳು. ಸತ್ ಪರಶಿವನಲ್ಲಿ ಸುಪ್ತವಾಗಿರುವ ಸಂಕಲ್ಪಶಕ್ತಿಯು (ಚಿತ್ ಪಾರ್ವತಿ) ಅವನ ಇಚ್ಛೆಯಿಂದ ಅನೇಕ ಬ್ರಹ್ಮಾಂಡಗಳ ರೂಪ ತಾಳಿ ಒಳಸೇರಿ ಪರಶಿವನಸಲುವಾಗಿ ಪಾರ್ವತಿಯು ಅನೇಕ ಲೀಲೆಗಳನ್ನು ಆಡುತ್ತಿರುವಳು.

(ಶ್ರೀ ಅರವಿಂದ)

ಸತ್ (ಪರಶಿವ) ಪರಮಶಾಂತಿಮಯ ಸ್ವರೂಪ ಚಿತ್ (ಆದಿಶಕ್ತಿ ಪಾರ್ವತಿ) ಜಗನ್ಮಾತೆಯು ಪರಮಶಕ್ತಿಮಯ ಸ್ವರೂಪ ಪರಮಶಾಂತಿಮಯನೂ ಪರಶಕ್ತಿಮಯಳೂ ಕೂಡಿ ಅರ್ಧನಾರೀ ನಟೇಶ್ವರನ ಲೀಲೆ ತೋರಿದ ಶಿವ-ಶಕ್ತಿಯ ಒಂದೇ ರೂಪವಾಗಿದೆ. ಶಾಂತಿಮಯ ಪರಶಿವನ ಸಂಕಲ್ಪ, ಪರಮಶಕ್ತಿಮಯ ಪಾರ್ವತಿಯು ಕ್ರಿಯಾಶಕ್ತಿಗಳೆರಡೂ ಕೂಡಿ ಆದದ್ದೇ ಈ ವಿರಾಟ ವಿಶ್ವದ ವಿರಾಟ ಲೀಲೆ. (ಶ್ರೀ ಅರವಿಂದ)

ಪರಶಿವನ ಚಿಚ್ಛಕ್ತಿಯೇ ಬ್ರಹ್ಮಾಂಡಗಳೊಳಗೆ ಅತಿ ಭರಿತಳಾಗಿ ತುಂಬಿ ಕ್ರಿಯಾಶಕ್ತಿಯಿಂದ ಕಾರ್ಯಮಾಡುವದರಲ್ಲಿ ಅತಿ ಪ್ರಖ್ಯಾತಳೆನಿಸಿದ ಆ ಮಹಾಮಾತೆಯೇ ಪಾರ್ವತಿ ಎನಿಸಿದ್ದಾಳೆ. ಪರಶಿವನು ಕಾರಣರೂಪನು ಪಾರ್ವತಿಯು ಕಾರ್ಯರೂಪಳು. (ವಿದ್ಯಾರಣ್ಯ)

ಹೀಗೆ ಯಾರನ್ನು ನೋಡಿದರೂ ಕೂಡ ಪರಶಿವ+ಪರಶಕ್ತಿಯುವರನ್ನು ಒಪ್ಪಿಕೊಂಡಿರುವರು. ವ್ಯಾವಹಾರಿಕ ಉದಾಹರಣೆಗಳೂ ಕೂಡ ಇವುಗಳನ್ನೇ ಬೋಧಿಸುವವು. ಆ ಇಬ್ಬರಿಂದ ಬಂದ ಈ ಜಗತ್ತಿನಲ್ಲಿಯ ಕಟ್ಟಕಡೆಯ ಜೀವಿಗಳೂ ಕೂಡ ಜೋಡಿಯಾಗಿಯೇ ಇರುವವು. ಮೊದಲು ಜೋಡಿ ಇದ್ದುದಾದರೆ ಕಡೆಯ ಜೀವಕೋಟಿಯೂ ಕೂಡ ಜೋಡಿಯಾಗಿಯೇ ಇರುವದು ಕಂಡುಬರುವದು. ಯಾರೂ ಶಕ್ತಿಯನ್ನು ಅಲ್ಲಗಳೆ

ದಿಲ್ಲ. ಆದರಲ್ಲಿ ವೀರಶೈವರು ನಿತ್ಯವಾಗಿದ್ದುದನ್ನೇ ಶೋಧಿಸಿ ಜಗತ್ತಿಗೆ ಶಕ್ತಿ ವಿಶಿಷ್ಟಾದ್ವೈತ (ಶಿವಾದ್ವೈತ) ವನ್ನು ಬೋಧಿಸಿದ್ದಾರೆ. ಶಿವಾದ್ವೈತವೆಂದರೆ ಮಾಯಾ ವಾದದ ಅದ್ವೈತವಲ್ಲ. ಶಕ್ತಿವಿಶಿಷ್ಟಾದ್ವೈತ ಹೆಸರನ್ನು ಬೇರೆ ಬೇರೆಯಾಗಿಟ್ಟುಕೊಂಡರೂ ಕೂಡ ಶಕ್ತಿಯನ್ನು ಬಿಟ್ಟು ಯಾರೂ ಹೋಗಿಲ್ಲ. ತಿಳಿಯುದೆಯೂ ಕೂಡ ಆಕೆಯನ್ನು ಹೊಂದಿಕೊಳ್ಳದೆ ಗತಿಯೇ ಇಲ್ಲ. ಆದಕ್ಕೆ ಎಲ್ಲರೂ ನಿಜವಾಗಿ ಶಕ್ತಿವಿಶಿಷ್ಟಾದ್ವೈತಿಗಳೇ ಸರಿ.

ಶ್ರೀ ಶಂಕರಾಚಾರ್ಯರು ಎಲ್ಲರನ್ನು ಸೋಲಿಸಿ ದ್ವೈತವನ್ನು ಸ್ಥಾಪಿಸಿದರೆಂದು ಹೇಳುವರು. ಆದರೆ ಕಾಶ್ಮೀರದಲ್ಲಿ ಇವರು ಹೋದಾಗ ಸ್ವತಃ ಜಗನ್ಮಾತೆಯೇ ಗೌಳಿಯಾಗಿ ಮೊಸರು ಮಾರುತ್ತ ಬಂದಳು. ಇವರು ಶಕ್ತಿಹೀನರಾಗಿ ಒಂದು ಹೆಜ್ಜೆ ಇಡಲಾರದಾದಾಗ ಅವರ ಸಮೀಪ ಸಹ ಹೋಗಲಾರದಷ್ಟು ಅಶಕ್ತರಾಗಿದ್ದರು. ಆಗ ಮಹಾತಾಯಿ ಪಾರ್ವತಿಯು ಪ್ರಜ್ಞೆಯಾಗಿ ತನ್ನ ಸೋಲನ್ನು ಒಪ್ಪಿಕೊಂಡ ಕಥೆಯು ಸರ್ವ ಶ್ರುತವಿದೆ. ಈಗಿನ ಕಾಲದಲ್ಲಿ ಅದೇ ಶಂಕರಾಚಾರ್ಯರು ಇದ್ದುದಾದರೆ ಅನೇಕ ಜನರು ಆವರನ್ನು ಸೋಲಿಸದೆ ಬಿಡುತ್ತಿದ್ದಿಲ್ಲ. ಇಂಥ ಶಂಕರಾಚಾರ್ಯರೂ ಕೂಡ ಹಿಂದಿನಿಂದ ಅನ್ನಪೂರ್ಣಾ ಪಾರ್ವತಿಯ ಸ್ತೋತ್ರವನ್ನು ಬಹುವಾಗಿ ಮಾಡಿದ್ದಾರೆ.

ಶ್ರೀರಾಮನ ಕಾಲಕ್ಕೆ ವಶಿಷ್ಠನು ಶಕ್ತಿಯನ್ನು ಬಹುವಾಗಿ ಅಲ್ಲಗಳೆಯುತ್ತಿದ್ದನು. ಬರೇ ಬ್ರಹ್ಮ ಒಂದೇ ಸತ್ಯವೆನ್ನುತ್ತಿದ್ದನು. ಅವನಿಗೂ ತಾಯಿ ಚನ್ನಾಗಿ ಬುದ್ಧಿಗಲಿಸಿದ್ದಾಳೆ. ಆಗ ಅವನೂ ಶಕ್ತಿಯ ಸ್ತೋತ್ರವನ್ನು ಬಹುವಾಗಿ ಮಾಡಿ ಹಾಡಿದ್ದಾನೆ. ಅವನೂ ಕೂಡ ತನ್ನ ಸೋಲನ್ನು ಒಪ್ಪಿಕೊಂಡನು.

ಇದೆಲ್ಲ ಹಿಂದಿನ ಕಾಲದ ಮಾತಾಯಿತು. ಮೊನ್ನೆ ಶ್ರೀ ರಾಮಕೃಷ್ಣ ಪರಮಹಂಸರ ಕಾಲಕ್ಕೆ ಶಕ್ತಿಯನ್ನು ಅಲ್ಲಗಳೆಯುತ್ತಿದ್ದ ತೋತಾಪುರಿ ಎಂಬ ನಗ್ನ ಸನ್ಯಾಸಿಯು ಕೂಡ ತನ್ನ ಸೋಲನ್ನು ಒಪ್ಪಿ ಶಿವ-ಶಕ್ತಿಯರ ಅಸ್ತಿತ್ವವನ್ನು ಒಪ್ಪಿಕೊಂಡು ತಾಯಿಯ ಸ್ತೋತ್ರಗೈದ ಕಥೆಯು ಒಳ್ಳೇ ಪ್ರಸಿದ್ಧವಿರುವದು. ಯಾರನ್ನೂ ಅವಳು ಬಿಡುವಂತಿಲ್ಲ. ಪರಶಿವನಲ್ಲಿ ಪರಶಕ್ತಿ ಇದ್ದಾಳೆಂದು ಹೇಳಿದರೆ ನಮ್ಮ ಧರ್ಮ ಕಡಿಮೆಯಾದೆಂದು ಈ ಜನರು ತಿಳಿದುಕೊಂಡಂತೆ ತೋರುವದು. ಆದಕ್ಕೆ ಅನೇಕರು ತಿಳಿಯಲಾರದಕೆ

ಅದ್ವೈತ ಅದ್ವೈತ ಎಂದು ಕೂಗುತ್ತಿರಬಹುದು. ಇದೆಲ್ಲ ಬರೀ ಬಾಯ ಕೂಗಿನ ಬಾಯಬ್ರಹ್ಮವೇ ಸರಿ. ಯಾರನ್ನೇ ವಿಚಾರಿಸಿದರೂ ಯಾವ ಗ್ರಂಥಗಳನ್ನೇ ನೋಡಿದರೂ ಶಕ್ತಿಯೂ ಇದ್ದಾಳೆಂದು ಸಹಜ ಕಂಡುಬರುವದು. ಇಷ್ಟಾದರೂ ಕೆಲವರು ಶಕ್ತಿ ಇಲ್ಲೆಂದು ಹೇಳಲಿಕ್ಕೆ ಹೇಗೆ ಧೈರ್ಯವಾಗುವದೋ ತಿಳಿಯದಾಗಿದೆ.

ಬೇಕಾದರೆ ಜಗತ್ತಿನ ಅನುಭವಿಗಳನ್ನೆಲ್ಲ ಕೂಡಿಸಿ ವಿಚಾರಿಸಿದರೆ ಶಕ್ತಿಯೂ ಇದ್ದಾಳೆಂದು ಸಹಜ ಸಿದ್ಧವಾಗುವದರಲ್ಲಿ ಸಂದೇಹವೇ ಇಲ್ಲ. ಅನುಭವಿಗಳ ಕಡೆಯಿಂದ ಒಂದುವೇಳೆ ಆಗದಿದ್ದರೂ ಕೂಡ ಮಹಾ ತಾಯಿಯೇ ತನ್ನ ಅಸ್ತಿತ್ವವನ್ನು ತಾನೇ ಆ ವಿರೋಧಿಗಳಿಗೆ ಸಿದ್ಧಮಾಡಿ ತೋರಿಸದೆ ಎಂದೂ ಬಿಡುವದೇ ಇಲ್ಲ. ಹೀಗಂತೇ ಮಹಾ ಅನುಭಾವಿಗಳಾದ ವೀರಶೈವ ಶರಣರು ಮೊದಲೇ ಆಕೆಯನ್ನು ಒಪ್ಪಿಕೊಂಡು ತಾವು ಶಕ್ತಿವಿಶಿಷ್ಟಾದ್ವೈತಿಗಳೆಂದು ಅಂದುಕೊಂಡಿರುವದು ಬಹು ಉಚಿತವೇ ಆಗಿದೆ. ಈಗ ನಡುವೆ ಕೆಲವರು ಅದ್ವೈತ ಮತದವರೆಂದು ಹೇಳಿದರೆ ತಾವು ಹೆಚ್ಚಿನವರೆನಿಸುವರೆಂದು ಭಾವಿಸಿ ವ್ಯರ್ಥವಾಗಿ ಗುದುಮುರಿಗೆಗೆ ಬಿದ್ದಿರುವರು. ಜಗತ್ತಿನ ಪ್ರತಿಯೊಂದು ಪ್ರಾಣಿಶಕ್ತಿ ವಿಶಿಷ್ಟಾದ್ವೈತವೇ ಆಗಿರುವಾಗ ವೀರಶೈವರಂತೂ ಮೊದಲೇ ಶಕ್ತಿವಿಶಿಷ್ಟಾದ್ವೈತಿಗಳೇ ಸರಿ. ವೀರಶೈವರು ಇದ್ದುದನ್ನು ಇದ್ದಂತೆ ಹೇಳಿಕೊಂಡಿದ್ದಾರೆ. ಅನ್ಯರಂತೆ ಇದ್ದುದನ್ನು ಬಿಟ್ಟು ಇಲ್ಲದ್ದನ್ನು ಹೇಳಿಕೊಂಡಿಲ್ಲ. ಅದಕ್ಕೆ ಇವರು ವೀರಶೈವರು.

(ಮುಂದುವರೆವುದು.)

# ಗ್ರಂಥ ವಿಮರ್ಶೆಗಳು.

**ಜೀವನದರ್ಪಣ:—** ಈ ಗ್ರಂಥ ರಚಿಸಿದವರು ಡಾ॥ ಎಸ್. ಬಿ. ಪಾಠಕ ಮು. ವಿಜಯಪುರ ಇವರು ಇದ್ದು ಇದರ ಪ್ರಕಾಶಕರು ಶ್ರೀ ಅಕ್ಕಿ ಸದಾಶಿವಪ್ಪನವರು ಬಿ. ಎಸ್. ಸಿ. ಮು. ವಿಜಯಪುರ ಇವರು ಇದ್ದಾರೆ. ವಿಜಾಪುರ ಪಟ್ಟಣವು ಅರವಿಂದ ವಾಙ್ಮಯದ ಪ್ರಚಾರದ ಒಂದು ಕೇಂದ್ರ ವಾಗಿರುತ್ತದೆ. ಇದರ ಪುರಸ್ಕರ್ತರು ತಾವು ಗೊತ್ತುಪಡಿಸಿದ ಸ್ಥಳಗಳಲ್ಲಿ ಮತ್ತು ದಿವಸಗಳಲ್ಲಿ ಆಗಿಂದಾಗ್ಗೆ ನೆರೆದು ಅರವಿಂದ ವಾಙ್ಮಯವನ್ನು ಪರಿ ಶೀಲನೆ ಮಾಡುತ್ತಿರುವದು ಕಂಡುಬರುತ್ತದೆ. ಇವರಲ್ಲಿ ಬಹು ಜನರು ಶಿವಶರಣರ ವಾಙ್ಮಯವನ್ನು ಸಹ ಚನ್ನಾಗಿ ಪುರಸ್ಕರಿಸುತ್ತಿರುವದು ನಮಗೆ ಕಂಡುಬಂದಿದೆ. ಆದರೆ ಇವರು ಅರವಿಂದ ವಾಙ್ಮಯಕ್ಕೆ ಮುಖ್ಯ ಸ್ಥಾನ ವನ್ನು ಕೊಡುತ್ತಿರುವದು ಕಂಡುಬರುತ್ತದೆ. ಅರವಿಂದ ವಾಙ್ಮಯದಲ್ಲಿ ಉಚ್ಚತರದ ವಿಚಾರಗಳಿರುವದು ನಿರ್ವಿವಾದವಾದದ್ದು. ಅವುಗಳು ಭಾರತದ ವೈದಿಕ ಮತ್ತು ಶೈವ ವಾಙ್ಮಯಗಳೊಳಗಿನವೆಂಬುದು ಸ್ಪಷ್ಟವಾಗುತ್ತದೆ. ಆದರೂ ವೀರಶೈವ ಅಥವಾ ಶಿವಶರಣರ ವಾಙ್ಮಯವನ್ನು ಪರಿಶೀಲಿಸಿದವ ರಿಗೆ ಅವು ಅಷ್ಟು ಅಪರಿಚಿತವಾದವುಗಳಲ್ಲ. ಈ ಎರಡೂ ವಾಙ್ಮಯಗಳು ಯೋಗ ಮತ್ತು ಅಧ್ಯಾತ್ಮ ತತ್ವ ಇವುಗಳ ವಿವೇಚನೆಯಲ್ಲಿ ಸಮಸಮೀಪ ವಾಗಿವೆ. ಆದರೆ ಈಚೆಗೆ ಅರವಿಂದರು ಇಂದ್ರಿಯಗಳಾಚೆ ಇರುವ ಶಕ್ತಿಗ ಳನ್ನು ವೃದ್ಧಿಗೊಳಿಸಿ ಪರಮಾತ್ಮನನ್ನು ಕಾಣುವ ರೀತಿಗಳನ್ನು ಕಂಡು ಹಿಡಿಯಲು ಪ್ರಯತ್ನಿಸುತ್ತಿದ್ದರೆಂಬದು ಕಂಡುಬರುತ್ತದೆ. ಮತ್ತು ಆ ಮಾರ್ಗ ದಿಂದ ಅವರು ಹೋಗಲು ಬಹಳ ಪರಿಶ್ರಮಪಡುತ್ತಿದ್ದರು. ಇದರಲ್ಲಿ ಅವರಿಗೆ ಯಶಸ್ಸು ಬಂದಿತೋ ಹೇಗೆಂಬುದನ್ನು ಅವರಿಗೂ ಅವರ ನಿಕಟ ವರ್ತಿಗಳಾದವರಿಗೂ ಮಾತ್ರ ಗೊತ್ತು. ಇತರರಿಗೆ ಅದು ತಿಳಿದಿಲ್ಲ. ಆದರೆ ಈ ದೃಷ್ಟಿಯಿಂದ ಅವರು ಬರೆದ ಗ್ರಂಥಗಳು ಅನೇಕ ಇದ್ದು ಅವು ಶರಣರ ಷಟ್‌ಸ್ಥಳಗಳಲ್ಲಿ ಮುಖ್ಯವಾಗಿರುವ ಪ್ರಾಣಲಿಂಗಸ್ಥಳ ಮತ್ತು ಅಂತಿಮದಲ್ಲಿ ರುವ ಶೂನ್ಯಲಿಂಗಸ್ಥಳಗಳು ಇವುಗಳಲ್ಲಿರುವ ವಿಚಾರಗಳನ್ನು ಬಹಳ ಹೋಲುತ್ತವೆ. ಶಿವಶರಣರು ಬಯಲು, ಶೂನ್ಯ, ಅತೀತ ವಸ್ತು ಎಂಬ ಹೆಸರುಗಳಿಂದ ಈ ಸ್ಥಳಗಳನ್ನು ಕರೆದಿರುತ್ತಾರೆ. ಯೋಗಶಾಸ್ತ್ರವು ಹಿಂದೂ ಧರ್ಮದಲ್ಲಿ ಮಹತ್ತರವಾದದ್ದೆಂಬದು ನಿಜವು. ಆದರೂ ಈ ಶಾಸ್ತ್ರದ

ವಿಸ್ತಾರವನ್ನು ಶಿವಶರಣರು ಚೆನ್ನಾಗಿ ಸಂಶೋಧಿಸಿರುವರೆಂಬದು ಅವರ ಉಕ್ತಿಗಳಿಂದ ತಿಳಿದುಬರುತ್ತದೆ. ವೀರಶೈವರಲ್ಲಿ ಬಹು ಜನರು ಅರವಿಂದ ವಾಙ್ಮಯವನ್ನು ಈಚೆಗೆ ಪರಿಶೀಲಿಸುತ್ತಿದ್ದಾರೆ. ಆದರೆ ಅದರಕೂಡ ಅವರು ವಚನಶಾಸ್ತ್ರದಲ್ಲಿ ದೊರೆಯುವ ಉಚ್ಚ ಪಾರಮಾರ್ಥಿಕ ಅನುಭವಗಳನ್ನು ಪರಿಶೀಲಿಸುತ್ತ ಅರವಿಂದ ವಾಙ್ಮಯವನ್ನು ಅಭ್ಯಾಸ ಮಾಡುವದು ಉಚಿತವು. ಕೇವಲ ಅಂದತೆಯಿಂದ ಅದನ್ನು ಅನುಸರಿಸಬಾರದೆಂದು ನಮ್ಮ ಸೂಚನೆ ಇದೆ.

ಪ್ರಕೃತ ಗ್ರಂಥದಲ್ಲಿ ಅರವಿಂದ ಯೋಗಿಗಳ ತತ್ವಗಳನ್ನು ಗ್ರಂಥಕಾರರು ಬಹು ಸುಲಭ ರೀತಿಯಿಂದ ನಮ್ಮ ಮುಂದೆ ಇಟ್ಟಿದ್ದಾರೆ. ಅರವಿಂದರ ವಾಙ್ಮಯವು ಬಹು ಕ್ಲಿಷ್ಟವಾದದು. ಆದರೂ ಶ್ರೀಯುತ ಪಾಠಕ ಇವರು ಈ ಗ್ರಂಥದಲ್ಲಿ ಅವುಗಳನ್ನು ಹಗುರಾಗಿ ವಿಶದಪಡಿಸಿದ್ದಾರೆ. ಮುಖ್ಯ ಮುಖ್ಯ ವಿಷಯಗಳನ್ನು ಅವರು ತೆಗೆದುಕೊಂಡು ಅವುಗಳನ್ನು ಅವರು ಈ ಗ್ರಂಥದಲ್ಲಿ ಸುಲಭವಾಗಿ ವಿವರಿಸಿದ್ದಾರೆ. ಅವರು ಯೋಗ್ಯ ರಹಸ್ಯ ಅರವಿಂದರ ಅಧ್ಯಾತ್ಮ ಸಾಧನ, ಭಕ್ತಿಯ ಸ್ವರೂಪ, ಕರ್ಮಯೋಗ, ಮಾತೃತತ್ವದ ಮಹತ್ವ ಆತ್ಮನ ವಿಧಿಗಳು, ಆತ್ಮಸಾಕ್ಷಾತ್ಕಾರ, ತನುತ್ರಯ ದೋಷಗಳ ಸಂಶೋಧನೆ ಈ ಮೊದಲಾದ ವಿಷಯಗಳನ್ನು ಬಹು ಸುಲಭರೀತಿಯಿಂದ ಈ ಪುಟ್ಟ ಗ್ರಂಥದಲ್ಲಿ ವಿವೇಚಿಸಿದ್ದಾರೆ. ಅವುಗಳನ್ನು ಶಿವಾನುಭವ ಪ್ರೇಮಿಗಳು ಅವಶ್ಯ ಪರಿಶೀಲಿಸಬೇಕೆಂದು ನಮ್ಮ ಸೂಚನೆ ಇದೆ. ಆದರೆ ಅವರು ತಮ್ಮದಾದ ಶರಣ ವಾಙ್ಮಯವನ್ನು ಬಿಡಕೂಡದೆಂದು ನಾವು ಎಚ್ಚರಕೊಡುತ್ತೇವೆ.

**ಹರಿಹರನ ರಗಳೆಯಲ್ಲಿ ಜೀವನ ದರ್ಶನ:** - ಈ ಗ್ರಂಥವು ಮೈಸೂರು ವಿಶ್ವವಿದ್ಯಾಲಯ ವಿಶೇಷೋಪನ್ಯಾಸ ಪುಸ್ತಕ ಮಾಲೆಯಲ್ಲಿ ಪ್ರಥಮ ಗ್ರಂಥವಾಗಿದೆ. ಈ ಗ್ರಂಥವನ್ನು ಕರ್ನಾಟಕ ಕಾಲೇಜಿನ ಪ್ರೊ. ಸ್ನ ಸ, ಮಾಳವಾಡ ಎಂ. ಎ. ಇವರು ತಯಾರಿಸಿದ್ದಾರೆ. ಇದಕ್ಕೆ ಮುನ್ನುಡಿಯನ್ನು ಮೈಸೂರು ವಿಶ್ವವಿದ್ಯಾಲಯದ ವ್ಹಾಯಿಸ ಚಾನ್ಸೆಲರರಾದ ಶ್ರೀ ಕೆ. ವಿ. ಪುಟ್ಟಪ್ಪನವರು ಬರೆದಿದ್ದಾರೆ. ಅವರು ತಮ್ಮ ಪ್ರಸ್ತಾವನೆಯಲ್ಲಿ ವಿದ್ಯಾನಿಲಯದ ಪ್ರಗತಿಯಾದುದನ್ನು ಅದರಲ್ಲಿರುವ ವಿದ್ಯಾರ್ಥಿಗಳ ಸಂಖ್ಯಾಬಾಹುಲ್ಯದಿಂದಾಗಲಿ ಅಥವಾ ಪದವೀಧರರ ಆಧಿಕ್ಯದಿಂದಾಗಲಿ ನಿರ್ಧರಿಸುವದು ಸರಿಯಲ್ಲವೆಂದು ಹೇಳಿ, ಸಂಶೋಧನೆ, ಜ್ಞಾನಾರ್ಜನೆ ಮತ್ತು ಜ್ಞಾನಪ್ರಸಾರ

ಇವುಗಳು ಗಾಢವಾಗಿ ಮತ್ತು ಸರ್ವವ್ಯಾಪಿಯಾಗಿ ನಡೆದುದರ ಮೇಲಿಂದ ಅದರ ಪ್ರಗತಿಯನ್ನು ಅಳೆಯುವದು ಯೋಗ್ಯವೆಂದು ಅವರು ಹೇಳಿದ್ದಾರೆ. ಇದು ಸರಿಯಾದ ವಿಚಾರವು. ಕನ್ನಡ ಕವಿಗಳಲ್ಲಿ ಹರಿಹರನು ಅತ್ಯುಚ್ಚ ಸ್ಥಾನವನ್ನು ಹೊಂದಿರುತ್ತಾನೆ. ಆರಂಭದಲ್ಲಿ ಅವನ ಶಬರಶಂಕರವಿಳಾಸ ಕಾವ್ಯವು ಪ್ರಸಿದ್ಧವಾಯಿತು. ಮುಂದೆ ಶಿವಾನುಭವ ಗ್ರಂಥಮಾಲೆಯಲ್ಲಿ ಅವನ ೪೦ ರಗಳೆಗಳು ೭ ಸ್ವತಂತ್ರ ಗ್ರಂಥಗಳಲ್ಲಿ ಬಹಿರಂಗಪಟ್ಟವು. ಅಂದಿನಿಂದ ಅವು ಯಾವಾಗಲೂ ಉಚ್ಚ ಶಿಕ್ಷಣದ ಕಾಲೇಜಗಳಲ್ಲಿ ಪಠ್ಯಪುಸ್ತಕಗಳಾಗಿ ಉಪಯೋಗಿಸಲ್ಪಡಹತ್ತಿದವು. ಅಂದಿನಿಂದ ಹರಿಹರ ಕವಿಯ ಯೋಗ್ಯತೆಯು ಜನತೆಗೆ ತಿಳಿಯಹತ್ತಿತು. ಹರಿಹರನು ಅನೇಕ ಶಿವಶರಣರ ಕಥೆಗಳನ್ನು ರಚಿಸಿದ್ದಾನೆ. ಒಟ್ಟಿಗೆ ಅವನ ೧೦೬ ರಗಳೆಗಳ ಹೆಸರುಗಳು ಹೊರಪಟ್ಟಿವೆ. ಗ್ರಂಥಕಾರರು ಇವುಗಳಲ್ಲಿ ಕೆಲವು ವಿಭಾಗಗಳನ್ನು ಮಾಡಿದ್ದಾರೆ. ಪುರಾತನರ ರಗಳೆಗಳ ಸಂಖ್ಯೆ ೬೧ ಇತರ ರಗಳೆಗಳು ಮೂರು, ಕೈಲಾಸದಲ್ಲಿ ನಡೆದ ಕಥೆಗಳ ರಗಳೆಗಳು ಎರಡು ನೂತನ ಶರಣರ ರಗಳೆಗಳು ೨೮ ಸಂಕೀರ್ಣ ರಗಳೆಗಳು ೧೨ ಹೀಗೆ ಗ್ರಂಥಕಾರರು ವರ್ಗೀಕರಣ ಮಾಡಿ ಈ ರಗಳೆಗಳ ವಿಮರ್ಶೆ ಮಾಡಿದ್ದಾರೆ. ಅವರು ಗ್ರಂಥದಲ್ಲಿ ಹೇಳಿರುವದೇನೆಂದರೆ, "ಹರಿಹರನು ತನ್ನ ರಸವತ್ತಾದ ಕವಿತೆಯಿಂದ ಅರ್ಥಪೂರ್ಣ ಕತೆಗಳಿಂದ ಉದಾತ್ತ ಸಂದೇಶದಿಂದ ಕನ್ನಡ ನುಡಿವೆಣ್ಣನ್ನು ಸಿಂಗರಿಸಿ ಚಿತ್ರಿಸಿ ಶಿವಶರಣರ ಹಿರಿಮೆಯನ್ನು ಕನ್ನಡ ನಾಡಿನಲ್ಲಿ ಸಾರಿದನೆಂದು ಅಂದಿದ್ದಾರೆ. ಇದು ನಿಜವಾದುದು. ಹೀಗೆ ಗ್ರಂಥಕಾರರು ವೀರಶೈವ ವಾಙ್ಮಯದಲ್ಲಿ ಒಂದು ಮುಖ್ಯ ಅಂಗವಾದ ರಗಳೆಗಳ ವಾಙ್ಮಯ ಇದರ ಮಹತ್ವವನ್ನು ಈ ಗ್ರಂಥದಲ್ಲಿ ಸ್ಫುಟಗೊಳಿಸಿದ್ದಾರೆ. ಕನ್ನಡಿಗರು ಅದರಲ್ಲಿ ಮುಖ್ಯರಾಗಿ ವೀರಶೈವರು ಪ್ರೊ|| ಮಾಳವಾಡರವರು ಮಾಡಿದ ಈ ಘನತರವಾದ ಕಾರ್ಯಕ್ಕೋಸ್ಕರ ಅವರಿಗೆ ಋಣಿಯಾಗಿದ್ದಾರೆ.

**ಮಹಿಳೆಯರ ಆತ್ಮಶ್ರೀ**:— ಈ ಹೆಸರಿನ ಚಿಕ್ಕ ಹೊತ್ತಿಗೆಯನ್ನು ಸೌ|| ಶಾಂತಾದೇವಿ ಮಾಳವಾಡ ಇವರು ಲಿಖಿಸಿದ್ದಾರೆ. ಮತ್ತು ಶ್ರೀ ನಿ. ಪ್ರ. ಸ್ವ. ಬಸವಲಿಂಗ ಮಹಾಸ್ವಾಮಿಗಳು ನವಲಗುಂದ ಇವರು ಪ್ರಕಾಶಿಸಿದ್ದಾರೆ. ಮತ್ತು ಅದರ ಪ್ರತಿಗಳನ್ನು ಅವರು ಉಚಿತವಾಗಿ ಹಂಚುವ ಯೋಜನೆಯನ್ನು ಮಾಡಿದ್ದಾರೆ. ಇದರಲ್ಲಿ ವೇದಗಳ ಕಾಲದಿಂದ ಇಂದಿನ ವರೆಗೆ ಮಹಿಳೆಯರಲ್ಲಿ ಆದ ಆತ್ಮವಿಕಾಸ ಹಾಗೂ ಪರಿವರ್ತನೆಗಳನ್ನು ಲೇಖಕೀ

ಯರು ಚಿತ್ರಿಸಿದ್ದಾರೆ. ಇದರ ಆರ್ಥಿಕ ಹೊಣೆಯನ್ನು ಶ್ರೀಮತಿ ಶಾಂತಾದೇವಿ ಯರೂ ಹಾಗು ಅವರ ಪತಿಗಳಾದ ಶ್ರೀ ಗಿಡ್ನವರೂ ವಹಿಸಿಕೊಂಡಿದ್ದು ಇದಕ್ಕೋಸ್ಕರ ಅವರು ಅಭಿನಂದನೀಯರಾಗಿರುವರು. ಲೇಖಕಿಯರು ಕೇವಲ ಶಿವಶರಣೆಯರ ಬಗೆಗೆ ಮಾತ್ರ ಬರೆಯದೆ ಇದರಲ್ಲಿ ಭಾರತ ಮಹಿಳೆಯರ ಆತ್ಮಶ್ರೀ ಮಹಿಮೆಯ ಕಲ್ಪನೆಯು ಪೂರ್ತಿಯಾಗಿ ಬರಬೇಕೆಂದು ವೇದೋಪ ನಿಷತ್ತು, ರಾಮಾಯಣ, ಮಹಾಭಾರತ ಈ ಕಾಲದ ಮಹಿಳೆಯರ ಹಾಗೂ ಜೈನ ಬೌದ್ಧಕಾಲದ ಮಹಿಳೆಯರ ಬಗೆಗೂ ವಿವೇಚನೆ ಮಾಡಿರುವರು. ಇದರಲ್ಲಿ ಅವರು "*Great women of India*" ಎಂಬ ಗ್ರಂಥ ಮತ್ತು ಶ್ರೀ ಹಳಕಟ್ಟಿಯವರು ಬರೆದ ಶಿವಶರಣರ ಚರಿತ್ರೆಗಳು ಭಾಗ ೧, ೨, ೩ ಈ ಗ್ರಂಥಗಳಿಂದಲೂ ತಾವು ಸಹಾಯ ತೆಗೆದುಕೊಂಡಿದ್ದನ್ನು ಅವರು ತಮ್ಮ ಪ್ರಸ್ತಾವನೆಯಲ್ಲಿ ಉಲ್ಲೇಖಿಸಿದ್ದಾರೆ. ಆದರಿಂದ ಈ ಚಿಕ್ಕ ಹೊತ್ತಿಗೆಯ ಉಪಯುಕ್ತತೆಯು ಹೆಚ್ಚಿದೆ. ವೇದಕಾಲದಲ್ಲಿ ಮಹಿಳೆಯರಿಗೆ ಯೋಗ್ಯ ಶಿಕ್ಷಣವು ದೊರೆಯುತ್ತಿತ್ತು. ಅವರಿಗೆ ಉಪನಯನ ಕಾರ್ಯಮಾಡಿಕೊ ಳ್ಳಲು ಸಹ ಅವಕಾಶವಿತ್ತು. ಇದರಿಂದ ಈ ಕಾಲದಲ್ಲಿ ಭಾರತವು ಒಂದು ಸುಸಂಸ್ಕೃತ ದೇಶವಾಯಿತು. ಕೆಲ ಮಹಿಳೆಯರು ಉಪಾಧ್ಯಾಯ ಆಚಾ ರ್ಯರಾಗಿದ್ದರು. ವಿಶ್ವದೇವೀ ಗಂಗಾ ಎಂಬವಳು ಸ್ಮೃತಿಸಂಗ್ರಹ ಗ್ರಂಥ ರಚಿಸಿದಳು. ಲಕ್ಷ್ಮೀದೇವಿಯು ಮಿತಾಕ್ಷರಕ್ಕೆ ವ್ಯಾಖ್ಯಾನವನ್ನು ಬರೆವಿ ದ್ದಾಳೆ. ಗಾರ್ಗಿಮೈತ್ರೇಯಿ ವಿಶ್ವವಾರಾ, ಲೋಪಾಮುದ್ರಾ, ಘೋಷಾ ಈ ಮಹಿಳೆಯರು ತತ್ವ ದರ್ಶನ ಪಡೆದವರಾಗಿದ್ದರು. ಆದರೆ ಮುಂದೆ ಮಹಿಳೆಯರಿಗೆ ಪತಿಸೇವೆಯೇ ಮುಖ್ಯವೆಂಬ ವಿಚಾರಗಳು ಉಂಟಾಗಲು ಸ್ತ್ರೀಯರು ಅಜ್ಞಾನಿಗಳಾಗಹತ್ತಿದರು. ಆದರೆ ಬಸವ ಯುಗದಲ್ಲಿ ಮಾತ್ರ ವರ್ಣಾಶ್ರಮದ ಸಂಕುಚಿತ ಭಾವನೆ ಇಲ್ಲದಾಯಿತು. ಆಗ ಮಹಾದೇವಿ ಯರ, ಕೋಲಂಬೆ, ಕೋಳೂರು ಕೊಡಗೂಸು, ಬೊಂತಲಾದೇವಿ, ಗೊಗ್ಗವ್ವೆ, ದುಗ್ಗಳೆ ಮೊದಲಾದವರು ಬೆಳಕಿಗೆ ಬಂದರು. ಅವರು ವಚನ ಕಾರ್ತಿಯರೂ ಆಗಿದ್ದಾರೆ. ಹಾಗೆಯೇ ವರದಾನಿಗುಡ್ಡಮ್ಮ, ನೀಲಾಂಬಿಕಾ ಮೊದಲಾದ ಮಹಿಳೆಯರೂ ಪ್ರಸಿದ್ಧರಾದರು. ಇವರೆಲ್ಲರ ಸಂಕ್ಷಿಪ್ತ ಚರಿತ್ರೆ ಗಳು ಈ ಗ್ರಂಥದಲ್ಲಿ ಬಂದಿವೆ. ಇದರಲ್ಲಿ ೬೩ ಪುಟಗಳಿದ್ದು ಓದುಗರು ಈ ಗ್ರಂಥವನ್ನು ಅವಶ್ಯವಾಗಿ ಸಂಗ್ರಹಿಸಬೇಕು.

—ಸಂಪಾದಕರು.

| Day & Date | Time | Subjects | Time | Subject |
|---|---|---|---|---|
| Monday 24-3-58 | 10a.m. to 12-30 p.m. | English Paper I | 2-30p.m. to 4-30p.m. | English Paper II |
| Tuesday 25-3-58 | 10a.m. to 12 noon | Elementary Mathematics (Paper I) | 2-0p.m. to 4-0p.m. | Elementary Mathematics (Paper II) |
| Wednesday 26-3-58 | 10am to 12 noon | *General Science (Paper I) Physics & Chemistry (Non-metals) | 2-0p.m. to 4-0p.m. | * General Science (Paper II) (Chemistry-Metals & Biology) |
| Thursday 27-3-58 | 10a.m. to 12 noon | History & Geography (Indian History andCivics) | 2-0p.m. to 4-0p.m. | History & Geography Paper II (Geography of the World) |
| Friday 28-3-58 | 10a.m. to | Optional Mathematics | 2-0p.m. to | Second Languages: |

ಸಂಪುಟ ೩೧ ಸಂಚಿಕೆ ೩

# ಶಿವಾನುಭವ

ಸಂಪಾದಕರು

ಡಾ॥ ರಾ. ಬ. **ಫ. ಗು. ಹಳಕಟ್ಟಿ,**

ಬಿ. ಎ. ಎಲ್. ಎಲ್. ಬಿ.

**ವಿಜಾಪುರ.**

[ ವಾರ್ಷಿಕ ಚಂದಾ ೫-೧೨-೦ ಅಂಚೆಯ ವೆಚ್ಚ ಬೇರೆ ]

**ಮಾರ್ಚ ೧೯೫೭**

# ವಿಷಯಾನುಕ್ರಮಣಿಕೆ

# ಶಿವಾನುಭವ

ಸಂಪುಟ ೩೧ | ಮಾರ್ಚ ೧೯೫೭ | ಸಂಚಿಕೆ ೩

## ಅಕ್ಕನ ಬಳಗದವರಲ್ಲಿ ವಿನಂತಿ.

(ಲೇಖಕರು— ಶ್ರೀ- ಎಚ್. ಓಂಕಾರಯ್ಯ ಮು. ಮೊಳಕಾಲ್ಮುರು.)

ಹನ್ನೆರಡನೆಯ ಶತಮಾನದ ಮಧ್ಯಕಾಲದಲ್ಲಿ ಸಾಹಿತ್ಯ, ಧಾರ್ಮಿಕ ಕ್ರಾಂತಿಯುಂಟಾಯಿತು. ಬಸವಣ್ಣನವರು ಸಾರಿದ ವಿಶ್ವಧರ್ಮದ ತತ್ವವು ಭಾರತದಲ್ಲೆಲ್ಲ ಅಲ್ಪಕಾಲದಲ್ಲಿಯೇ ಮೊಳಗಿ ಕಾಶ್ಮೀರ, ನೇಪಾಳಾದಿ ಉತ್ತರ ಪ್ರಾಂತಗಳಿಂದಲೂ ತಮಿಳು, ತೆಲುಗು ಮೊದಲಾದ ದಕ್ಷಿಣದ ನಾಡುಗಳಿಂದಲೂ ಅನಂತ ಶರಣೆ, ಶರಣರನ್ನು ಕಲ್ಯಾಣವು ಆಕರ್ಷಿಸಿತು. ಇದರಲ್ಲಿ ಕರ್ನಾಟಕದ (ಈಗಿನ ಶಿವಮೊಗ್ಗ ಜಿಲ್ಲೆಯಲ್ಲಿರುವ ಉಡುಗಣಿ-ತಡುಗಣಿ) ಎಂಬ ಗ್ರಾಮದಿಂದ ವೈರಾಗ್ಯ ನಿಧಿಯಾದ "ಅಕ್ಕಮಹಾದೇವಿ"ಯು ಭವಿಯಾದ ಕೌಶಿಕನನ್ನುಳಿದು ಕಲ್ಯಾಣದತ್ತ ಹೊರಟು, ದೂರದಿಂದಲೇ ನಗರವನ್ನು ಕಂಡು ಅದಕ್ಕೆ ದೀರ್ಘದಂಡ ನಮಸ್ಕಾರವನ್ನು ಮಾಡಿ, ಕಿನ್ನರ ಬೊಮ್ಮಯ್ಯನಿಂದ ಮಾರ್ಗದರ್ಶನವನ್ನು ಪಡೆದು ನಗರದ ಶಿವಾನುಭವ ಮಂಟಪದಲ್ಲಿ ಅನುಭವಗೋಷ್ಠಿಯಲ್ಲಿ ಕೆಲವುಕಾಲವಿದ್ದು ಅನಂತರ ಚನ್ನ ಮಲ್ಲಿಕಾರ್ಜುನನ್ನರಸುತ್ತ ಶ್ರೀಶೈಲಾಭಿಮುಖವಾಗಿ ಹೊರಟು ಕೊನೆಗೆ ಅಲ್ಲಿನ ಕದಳೀವನದಲ್ಲಿ ಬೈಲಾದಳು. ಇದು ಐತಿಹ್ಯದ ಹಿನ್ನೆಲೆಯಾಗಿದೆ.

ಅಕ್ಕನು ಹೇಳಿದ ತತ್ವಗಳನ್ನು ನಾಡಿನಲ್ಲಿ ಹರಡುವ ಉದ್ದೇಶದಿಂದ ಅಕ್ಕನಬಳಗಗಳು ಎಲ್ಲೆಡೆಯಲ್ಲೂ ಪ್ರಾರಂಭವಾಗಿ ತತ್ವಪ್ರಚಾರ ಕಾರ್ಯವನ್ನು ಕೈಕೊಂಡಿವೆ. ಅನಂತ ಶರಣರ ವಚನಗಳನ್ನು ಸಂಶೋಧಿಸಿ ಹೊರತೆಗೆದು ಮಾನ್ಯ ಡಾಕ್ಟರ ಪಿ. ಜಿ. ಹಳಕಟ್ಟಿಯವರು ಮಾಡಿರುವ ಸೇವೆ ಎಷ್ಟು ಹೇಳಿದರೂ ತೀರದಾಗಿದೆ.

ರಾವಬಹದ್ದೂರ, ವಚನಶಾಸ್ತ್ರ ಪಿತಾಮಹ, ಡಾ|| ಫ. ಗು. ಹಳಕಟ್ಟಿಯ ವರು ತಮ್ಮ ೭೫ನೇ ವರ್ಷದ ವೃದ್ಧಾಪ್ಯದಲ್ಲಿಯೂ ಸಂಶೋಧನೆ ಕಾರ್ಯ ವನ್ನು ಸತತವಾಗಿ ನಡೆಸುತ್ತ ಇಲ್ಲಿಯ ವರೆಗೆ ಸುಮಾರು ಆ೬ ಗ್ರಂಥಗಳನ್ನು ಸಾಹಿತ್ಯರತ್ನ ಗರ್ಭದಿಂದ ಆರಿಸಿ ಕಡೆವಿಕ್ಕಿ ಕುಂದಣವಿಟ್ಟು ಉತ್ತಮ ಚೌಕ ಟ್ಟಿನ ಮಧ್ಯದಲ್ಲಿ ಶೋಭಿಸುವ ರತ್ನಾಭರಣಗಳಂತೆ ಸಮಾಜ ಬಾಂಧವರ ಹಸ್ತಗತ ಮಾಡಿದ್ದಾರೆ. ಅವುಗಳಲ್ಲಿ ೧೫ ಪುಟಗಳಿಂದ ಹಿಡಿದು ೧೭೫೦ ಪುಟಗಳ ವರೆಗೆ ( ಭಾಗಗಳು ಸೇರಿ ) ಬೃಹದ್ಗ್ರಂಥಗಳಾಗುತ್ತವೆಯೆಂದರೆ ಅವುಗಳ ಮಹತ್ವವೆಂತಹುದೆಂಬುದನ್ನು ಬಾಂಧವರೆ ಯೋಚಿಸಬೇಕಾಗಿದೆ.

ಕಾಲಗರ್ಭದಲ್ಲಿ ಅಡಗಿದ್ದು ಗೆದ್ದಲು ಹುಳುಗಳಿಂದ ಆವರಿಸಲ್ಪಟ್ಟು ಇನ್ನೇನು ನುಸಿ ಹಿಡಿಯುವ ಸ್ಥಿತಿಯಲ್ಲಿದ್ದ ಈ ಪವಿತ್ರ ಕಾವ್ಯ ರತ್ನಗ ಳನ್ನು ಹಾರ ಮಾಡಿ ಕನ್ನಡ ಸಾಹಿತ್ಯ ದೇವಿಯ ಕೊರಳಲ್ಲಿ ಪವಿತ್ರಗೊಳಿಸಿ ದ್ದಾರೆ. ಈ ರತ್ನಗಳಿಂದ ಕನ್ನಡ ಸಾಹಿತ್ಯ ದೇವಿಯೂ, ಸಾಹಿತ್ಯದೇವಿ ಯಿಂದ ಈ ರತ್ನಗಳೂ ಪರಸ್ಪರ ಅಲಂಕಾರ ಭೂಷಿತವಾಗಿದ್ದಾವೆಂದರೆ ಅತಿ ಶಯೋಕ್ತಿಯೇನಲ್ಲ.

ಈ ಕಾವ್ಯಗಳು ಹೊರಗೆ ಬಂದಮೇಲೆ ಆ ಗ್ರಂಥಗಳ ಮೇಲೆ ಅನೇಕ ವಿಮರ್ಶಾತ್ಮಕ ಗ್ರಂಥಗಳು ಹುಟ್ಟಿಯೂ, ಹುಟ್ಟುತ್ತಲೂ ಜಿಜ್ಞಾಸುಗಳಿಗೆ ಅಮೃತದುಣಿಸಾಗಿ ಪರಿಣಮಿಸಿವೆ.

ಭಗಿನಿಯರೇ, ನೀವು ಕೈಕೊಂಡಿರುವ ತತ್ವಪ್ರಚಾರವು ಘನತರವಾ ದುದು. ಆದರೆ ಇದರೊಂದಿಗೆ ಶರಣರ ವಚನ ವಾಙ್ಮಯವನ್ನು ಪ್ರಚುರ ಗೊಳಿಸಲು ಯತ್ನಿಸಬೇಕು. ಅಲ್ಲದೆ ಈ ವಚನಗಳು ಹೊರಗೆ ಬರಲು ಸಹಾಯಕರಾದ ಅಭಿನವ ಬಸವೇಶ್ವರರಾದ ಶ್ರೀ. ಫ, ಗು, ಹಳಕಟ್ಟಿಯವರ ಕಾರ್ಯಕ್ಕೆ ಸರ್ವವಿಧದ ಸಹಾಯವನ್ನು ಮಾಡಲು ಯತ್ನಿಸಬೇಕು. ಇವ ರಿಗೆ ನಿಧಿ ಅರ್ಪಿಸಲು ಅನೇಕ ಸಂಘಸಂಸ್ಥೆಗಳು ಪ್ರಯತ್ನಿಸುವುದರ ಜೊತೆಗೆ ಅಕ್ಕನಬಳಗಗಳೂ ಯತ್ನಿಸಬೇಕು.

ಇದರ ಜೊತೆಗೆ ಅಖಿಲಭಾರತ ಅಕ್ಕನಬಳಗವನ್ನು ಸ್ಥಾಪಿಸಿ ಅವು ಗಳ ಆಶ್ರಯದಲ್ಲಿ ಪ್ರತಿ ಜಿಲ್ಲೆಯಲ್ಲಿಯೂ, ತಾಲೂಕು ಹಳ್ಳಿಗಳಲ್ಲಿಯೂ ಶಾಖೋಪಶಾಖೆಗಳನ್ನು ಸ್ಥಾಪಿಸುವುದಕ್ಕೆ ಬೇಕಾದ ಪ್ರಚಾರ ಕಾರ್ಯ ವನ್ನು ಕೈಕೊಂಡು ತನ್ಮೂಲಕ ಸಮಾಜ ರಾಷ್ಟ್ರದ ಪ್ರಗತಿಗೆ ಸಹಾಯ ಮಾಡಬೇಕು.

ಸಮಾಜದಲ್ಲಿ ಬಣಜಿಗ, ಸಾದ, ರಡ್ಡಿ, ಕುಂಬಾರ, ಸಜ್ಜನ, ಸಿಂಪಿಗ ಇತ್ಯಾದಿ ಅನೇಕ ಪಂಗಡಗಳಿದ್ದು ಇವುಗಳಲ್ಲಿ ಪರಸ್ಪರ ಒಳಜಗಳದಿಂದ ಅಧೋಗತಿಗೆ ಇಳಿಯುತ್ತಲಿದೆ. ಇವುಗಳನ್ನು ತಪ್ಪಿಸಲು ಪರಸ್ಪರ ಕೊಡ ಕೊಳ್ಳುವ ಕಾರ್ಯವನ್ನೂ ಮಾಡಿ ತನ್ಮೂಲಕ ಸಮಾಜದಲ್ಲಿ ಸಂಘಟನೆಯನ್ನುಂಟುಮಾಡುವುದು.

ಲಿಂಗಿ ಅಲಿಂಗಿಗಳ ಪರಸ್ಪರ ಪ್ರೀತಿಯಿಂದ ದೈಹಿಕ ಸಂಬಂಧಗಳುಂಟಾಗಿವೆ. ಇವರ ಸಂತತಿಯು ಇತೋಭ್ರಷ್ಟ, ತತೋಭ್ರಷ್ಟದಂತಾಗಿ ಸಮಾಜದಲ್ಲಿ ಲಗ್ನಾದಿ ಕಾರ್ಯಗಳಿಗೆಡೆಯಿಲ್ಲದೆ ತಮ್ಮ ಭಾವೀ ಜೀವನವನ್ನು ಕಷ್ಟದಿಂದ ನೂಕುತ್ತಲಿದ್ದಾರೆ. ಅದರಲ್ಲಿ ಇತ್ತೀಚೆಗಂತೂ ಅನೇಕ ವಿದ್ಯಾವಂತ (ಪದವೀಧರರಾದಿಯಾಗಿ) ತರುಣ ತರುಣಿಯರು ಲಗ್ನವಾಗದೆ ಪಡುವ ಪಾಡು ಜಗದೀಶ್ವರನಿಗೇ ಗೊತ್ತು. ಕ್ರಮಬದ್ಧ ಸಂತತಿಯೇ ಅನೇಕ ಎಡರಿಗೆ ಗುರಿಯಾಗಿದೆಯೆಂದಮೇಲೆ ಬೇರೆಯವರ ಪಾಡೇನು? ಇವರಿಗೆ ಶುದ್ಧೀಕರಣ, ಹೊಕ್ಕುಬಳಕೆ, ವಿವಾಹಾದಿ ಸಂಬಂಧಕ್ಕೆ ವ್ಯವಸ್ಥೆಮಾಡಿ ಸಮಾಜದಲ್ಲಿ ಎಲ್ಲರಂತೆ ಬಾಳಲು ಅವಕಾಶವನ್ನು ಕಲ್ಪಿಸಿಕೊಡುವುದು.

ಇದು ಸರಕಾರದ ನೀತಿನಿಯಮಗಳಿಂದ ಕಾನೂನು ಸಿದ್ಧವಾಗಿ ಅವಕಾಶ ಒದಗಿದರೂ ಸಮಾಜ ಬಾಂಧವರು ಸಹಕರಿಸದಿದ್ದರೆ ಕಾರ್ಯಗತವಾಗುವುದು ಕಷ್ಟ. ಇದಕ್ಕೆ ಅಕ್ಕನ ಬಳಗದಂತಹ ಸಂಸ್ಥೆಗಳು ಪ್ರೋತ್ಸಹವಿತ್ತರೇ ಆದರೆ ಇದು ಬಹುಬೇಗ ಕಾರ್ಯಗತವಾಗುತ್ತವೆ.

# ಬಸವಣ್ಣನವರನ್ನು ಕಾಣುವ ದೃಷ್ಟಿಕೋನಗಳು.

(ಲೇಖಕಃ— ಸತ್ಯವಾದಿ)



ಬಸವಣ್ಣನವರ ನಿಲವನ್ನು ಕಾಣುವ ದೃಷ್ಟಿಕೋನಗಳು ಮೂರು ವಿಧ ವಾಗಿವೆ. ಅವು ಯಾವವೆಂದರೆ. (೧) ಪೌರಾಣಿಕ, (೨) ಐತಿಹಾಸಿಕ, (೩) ಆಧ್ಯಾತ್ಮಿಕ ದೃಷ್ಟಿ. ಪೌರಾಣಿಕ ದೃಷ್ಟಿಯಿಂದ ವಿಚಾರಿಸಲು ಬಸವಣ್ಣನು ಒಬ್ಬ ದೊಡ್ಡ ಪವಾಡ ಪುರುಷನೆಂದು ಕಂಡುಬರುತ್ತದೆ. ಐತಿಹಾಸಿಕ ದೃಷ್ಟಿ ಯಿಂದ ಆತನು ಸಾಮಾಜಿಕ, ಧಾರ್ಮಿಕ ಸುಧಾರಣೆಗಳನ್ನು ಮಾಡಿದ ಮಹಾಕ್ರಾಂತಿ ಪುರುಷನಾಗಿದ್ದಾನೆ. ಆಧ್ಯಾತ್ಮಿಕ ದೃಷ್ಟಿಯಿಂದ ನೋಡಲು ಆತನು ಅತಿಮಾನವ (Super man) ಅಥವಾ ದಿವ್ಯಪುರುಷನೆಂದು ತಿಳಿದು ಬರುತ್ತದೆ. ಕಾವ್ಯಪುರಾಣಗಳಲ್ಲಿ ಬಸವಣ್ಣನ ಪವಾಡ ಮಹಿಮೆಯೇ ಹೆಚ್ಚು ಎದ್ದು ಕಾಣುತ್ತವೆ. ಆತನ ವಚನಗಳಿಂದ ನಮಗೆ ಆತನು ಸಾಮಾ ಜಿಕ ಧಾರ್ಮಿಕ ದೃಷ್ಟಿಯಿಂದ ಕ್ರಾಂತಿಯನ್ನು ಮಾಡಿದ ಮಹಾಪುರುಷ ನೆಂಬದು ಸ್ಪಷ್ಟ ವಿದಿತವಾಗುತ್ತದೆ. ಶಿವಾನುಭವ ಮಂಟಪದಲ್ಲಿ ಸಮಕಾ ಲೀನರಾದ ಶರಣರು ಬಸವಣ್ಣನವರಿಗೆ ತೋರಿಸುತ್ತಿದ್ದ ಭಕ್ತಿಗೌರವಗ ಳನ್ನೂ ತದನಂತರ ಬಸವನ ನಾಮವು ಸರ್ವ ವೀರಶೈವರಿಗೆ ಮಂತ್ರಸ್ವರೂಪ ವಾಗಿರುವದನ್ನೂ ವಿಚಾರಿಸಿದರೆ ನಿಜವಾಗಿ ಬಸವಣ್ಣನು ಅವತಾರಿ ಪುರುಷ ನೆಂಬದು ಸ್ಪಷ್ಟವಾಗುತ್ತದೆ. ಈ ಮೂರು ದೃಷ್ಟಿಕೋನಗಳಲ್ಲಿ ಹೆಚ್ಚು ಸಾಧು ವಾದುದಾವುದೆಂಬದನ್ನು ವ್ಯಕ್ತಪಡಿಸುವದೇ ಈ ಲೇಖನದ ಮುಖ್ಯ ಉದ್ದೇಶ ವಾಗಿದೆ.

## ೧. ಪೌರಾಣಿಕ ದೃಷ್ಟಿ

ಪೌರಾಣಿಕ ದೃಷ್ಟಿಯಿಂದ ಬಸವಣ್ಣನು ಪವಾಡಪುರುಷನಾಗಿದ್ದಾನೆ. ಇಂದ್ರಜಾಲ ಮಹೇಂದ್ರಜಾಲಗಳನ್ನು ಬಲ್ಲವನೆಂದು ವರ್ಣಿಸಲ್ಪಟ್ಟಿದ್ದಾನೆ. ಅಣಿಮಾದ್ಯಷ್ಟ ಸಿದ್ಧಿಗಳನ್ನು ಪಡೆದ ಸಿದ್ಧಪುರುಷನಾಗಿದ್ದಾನೆ. ಹಸ್ತ ಪರುಷ, ನೇತ್ರ ಪರುಷ, ವಾಕ್‌ಪರುಷ ಮೊದಲಾದ ಪಂಚ ಪರುಷಗಳುಳ್ಳಾತ ನಾಗಿದ್ದಾನೆ. ಅದಕ್ಕಂತೆಯೇ ಮೃತಪಟ್ಟ ಕೃಷ್ಣನೆಂಬ ಬಾಲಕನ ಜೀವ

ವುಳಿಸಿದನು. ಜೋಳದ ರಾಶಿಯನ್ನು ಮುತ್ತುಗಳನ್ನಾಗಿ ಮಾಡಿದನು. ಕಳ್ಳರು
ಕಟ್ಟಿಕೊಂಡು ಬಂದ ಬದನೇಕಾಯಿಗಳನ್ನು ಲಿಂಗಗಳನ್ನಾಗಿ ಮಾಡಿದನು.
ತನ್ನಿಷ್ಟಲಿಂಗಕ್ಕೆ ಕೇದಿಗೆಯನ್ನು ಧರಿಸಲು ಎಲ್ಲ ದೇವಾಲಯದ ಈಶ್ವರಲಿಂಗ
ಗಳಿಗೆ ಕೇದಿಗೆಗಳನ್ನೇರಿಸಿದಂತೆ ತೋರಿಸಿಕೊಟ್ಟಿದ್ದಾನೆ. ಓರ್ವ ಗವಳ
ಗಿತ್ತಿಯು ಹಾಲಿನ ಕೊಡವನ್ನು ಹೊತ್ತು ಸಾಗಿರುವಾಗ ಕಾಲು ಜಾರಲು
'ಬಸವಾ' ಎಂದು ಕೂಗಿದೊಡನೆಯೇ ಆಸ್ಥಾನದಲ್ಲಿದ್ದ ಬಸವನು ಆಕೆಯ
ಜೋಲಿಯನ್ನು ಸಂಬಾಳಿಸಿ ಕೊಡವನ್ನು ಎತ್ತಿ ಹಿಡಿದಿದ್ದಾನೆ. ಪ್ರತಿನಿತ್ಯ
೧ ಲಕ್ಷ ೯೬ ಸಾವಿರ ಗಣಂಗಳಿಗೆ ಪ್ರಸಾದ ತೃಪ್ತಿಮಾಡಿಸಿದ್ದಾನೆ. ಬಿಜ್ಜಳನ
ಭಾಂಡಾರವನ್ನು ಬಸವಣ್ಣನು ಜಂಗಮರಿಗಾಗಿ ಸೂರೆಮಾಡಿದನೆಂಬ ಅಪಾ
ದನೆಯನ್ನು ಕೇಳಿ ಬಿಜ್ಜಳನು ಗಣಿಕರಿಂದ ಲೆಕ್ಕ ಮಾಡಿಸುವಾಗ ಆ ಹಣವು
ಎಣಿಸಲಸದಳವಾಗುವಷ್ಟು ಬೆಳೆದುಬರುತ್ತದೆ. ಸಾಕ್ಷಾತ್ ನಂದಿ ವಿಗ್ರಹದ
ಬಾಯಿಯಿಂದ ಬಸವಣ್ಣನಿಗೆ ಇಷ್ಟಲಿಂಗವು ಪ್ರಾಪ್ತವಾಗುತ್ತದೆ. ಕೈಲಾಸ
ದಲ್ಲಿದ್ದ ವೃಷಭಮುಖನೆಂಬ ಗಣೇಶ್ವರನು ಏನೋ ಶಾಪವಶಾತ್ ಭೂಮಿ
ಗವತರಿಸಿ ಶಾಪವಿಮೋಚನೆಯಾದಬಳಿಕ ಕೈಲಾಸಕ್ಕೆ ತೆರಳುತ್ತಾನೆ. ಮಾದ
ಲಾಂಬಿಕೆಯು ಗರ್ಭಿಣಿಯಾಗಿ ಮೂರೊಂಭತ್ತು ತಿಂಗಳಿಗೆ ಬಸವನನ್ನು
ಹಡೆಯುತ್ತಾಳೆ. ಬಸವಣ್ಣನು ಕೊನೆಗೆ ಸಂಗಮೇಶ್ವರ ಸ್ಥಾವರ ಲಿಂಗದಲ್ಲಿ
ತನ್ನ ಪಾರ್ಥಿವ ಶರೀರವನ್ನಡಗಿಸಿ ಐಕ್ಯನಾಗುತ್ತಾನೆ; ಇತ್ಯಾದಿ.

ಮೇಲ್ಕಂಡ ಸಂಗತಿಗಳು ವಿಚಾರದೃಷ್ಟಿಯುಳ್ಳವರಿಗೆ ಅಸಂಬದ್ಧವಾ
ಗಿಯೂ ಅಸಂಭವವಾಗಿಯೂ ಕಾಣುತ್ತವೆ. ಆದರೆ ಅವು ಸಾಮಾನ್ಯರ
ಮನಸ್ಸನ್ನು ಸೆಳೆದು ಬಸವಣ್ಣನ ಬಗ್ಗೆ ಭಕ್ತಿ ಗೌರವಗಳನ್ನು ಹುಟ್ಟಿಸು
ತ್ತವೆ. ಐತಿಹಾಸಿಕ ಸತ್ಯ ಸಂಗತಿಗಳು ಸಾಮಾನ್ಯರಿಗೆ ಒಗ್ಗುವದಿಲ್ಲ.
ಅಂತೆಯೇ ಜಗತ್ತಿನ ಎಲ್ಲ ಮಹಾತ್ಮರ ಹೆಸರಿನಲ್ಲಿ ಸಹ ಅನೇಕ ಪವಾಡ
ಗಳು ನಡೆದದ್ದು ಕಂಡುಬರುತ್ತವೆ. ಆಧ್ಯಾತ್ಮಿಕ ಜೀವರುಗಳಿಗೆ ಅಣಿಮಾ
ದ್ಯಷ್ಟ ಸಿದ್ಧಿಗಳು ತಾವಾಗಿಯೇ ಲಭಿಸುತ್ತವೆಂದು ಬಲ್ಲವರು ಹೇಳುತ್ತಾರೆ.
ಆದರೆ ಅವೇ ಅವರ ಜೀವಿತದ ಮುಖ್ಯ ಗುರಿಗಳಲ್ಲ. ಆ ಸಿದ್ಧಿಗಳು
ಆತ್ಮೋನ್ನತಿಗೆ ವಿಘ್ನಗಳೆಂದು ಆ ಮಹಾತ್ಮರೇ ಹೇಳುತ್ತಾರೆ. ಆದರೆ ಸಾಮಾ
ನ್ಯರಿಗೆ ಅವೇ ಅತ್ಯಂತ ಮಹತ್ವದವಾಗುತ್ತವೆ. ಈ ಮೂಢನಂಬಿಗೆ
ಯಿಂದಲೇ ಅವರಿಗೆ ಆನಂದವೆನಿಸುತ್ತಿದ್ದರೆ ನಿಜವಾದ ಸಂಗತಿಗಳನ್ನರುಹಿ
ಜಾಣರನ್ನು ಮಾಡಿ ಅವರ ಆನಂದವನ್ನು ಕೆಡಿಸುವದು ಒಂದು ವೇಳೆ

ತಪ್ಪೆನಿಸಬಹುದು. ಒಬ್ಬ ಆಂಗ್ಲ ಕವಿಯು ಹೀಗೆ ಹೇಳಿದ್ದಾನೆ-"*If ignorance is bliss, it is folly to be wise*" ಅಂದರೆ ಅಜ್ಞಾನದಿಂದ ಆನಂದವಾಗುತ್ತಿದ್ದರೆ ಜಾಣರಾಗುವದು ಹುಚ್ಚುತನವು. ಬಹುಜನ ಸಮಾಜವು ನಿಜವಾದ ಐತಿಹಾಸಿಕ ಸಂಗತಿಗಳ ಕಡೆಗೆ ಹೆಚ್ಚು ಗಮನ ಕೊಡದೆ ಇಂಥ ಪೌರಾಣಿಕ ಸಂಗತಿಗಳ ಕಡೆಗೇ ವಿಶೇಷ ಲಕ್ಷಗೊಟ್ಟು ಪುರಾಣ ಪ್ರಸಂಗಗಳಲ್ಲಿ ಪುರಾಣಿಕರು ಪವಾಡಗಳನ್ನು ರಸವತ್ತಾಗಿ ವರ್ಣಿಸುವದುಂಟು; ಶ್ರೋತೃಗಳು ರಸಿಕತನದಿಂದ ಕೇಳುವದುಂಟು.

ಆದರೆ ಒಬ್ಬ ಮಹಾ ವಿಭೂತಿಯನ್ನು ಶ್ರೇಷ್ಠವಾದ ಮಾನುಷ್ಯತ್ವದ ಗುಣಗಳಿಂದ ವರ್ಣಿಸದೆ ಮಾಯಾವಿ ಐಂದ್ರಜಾಲಿಗನಂತೆ ಚಿತ್ರಿಸುವದು ಹಿತಕರವಲ್ಲ. ಜನರ ಮನಸ್ಸಿನಿಂದ ಈ ಮೂಢ ಕಲ್ಪನೆಗಳು ಹೋಗಬೇಕು. ಮೂಢ ಕಲ್ಪನೆಗಳಿಂದ ಮೂಢಾನಂದವೇ ಪ್ರಾಪ್ತವಾಗುವದಲ್ಲದೆ ನಿಜಾನಂದವು ಲಭಿಸದು. ಮುಗ್ಧ ಜನರ ಅಜ್ಞಾನ, ಮೂಢ ಭಾವನೆಗಳನ್ನು ಹೋಗಲಾಡಿಸಿ ನಿಜಸಂಗತಿಗಳತ್ತ ಅವರ ಮನಸ್ಸನ್ನು ತಿರುಗಿಸುವದೇ ನಾಗರಿಕ ಜೀವನದ ಗುರಿಯಾಗಿರುತ್ತದೆ. ಆದರೆ ಇದಕ್ಕೆ ವಿಪರೀತವಾಗಿ ಮುಗ್ಧ ಜನರ ಮನಸ್ಸಿನಲ್ಲಿ ಅಜ್ಞಾನ ಮೂಢ ಭಾವನೆಗಳನ್ನುದ್ರೇಕಿಸುವ ಪವಾಡಯುಕ್ತವಾದ ಸ್ವಾಮಿಗಳ ಹಾಗೂ ಶರಣರ ಪುರಾಣಗಳು ಕಾಲಕಾಲಕ್ಕೆ ರಚಿತವಾಗುತ್ತಿರುವದು ಶೋಚನೀಯವೇ. ಆದ್ದರಿಂದ ಅಂಥ ಪುರಾಣ ರಚನೆಗಳಿಗೆ ತಡೆಹಾಕಿ ನಿಜವಾದ ಚರಿತ್ರೆ ಗ್ರಂಥಗಳಿಗೆ ಪ್ರೋತ್ಸಾಹವೀಯುವದು ಹಿತಕರ. ಕಾರಣ ಸಮಾಜದ ಮುಂದಾಳುಗಳು ತಜ್ಞರಿಂದ ಸಂಶೋಧನೆಗಳನ್ನು ಮಾಡಿಸಿ ಐತಿಹಾಸಿಕ ಗ್ರಂಥ ರಚನೆ ಮಾಡಿಸುವದು ಶ್ರೇಯಸ್ಕರವು. ಅಜ್ಞ ಜನರಲ್ಲಿ ಮೂಢ ಭಾವನೆಗಳನ್ನು ಬೆಳಿಸುವದಕ್ಕಿಂತಲೂ ಸತ್ಯಸಂಗತಿಗಳ ಕಡೆಗೆ ಅವರ ದೃಷ್ಟಿಯನ್ನು ಸೆಳೆಯುವದು ಪ್ರಗತಿ ಲಕ್ಷಣವೆನಿಸುತ್ತವೆ.

### ೨. ಐತಿಹಾಸಿಕ ದೃಷ್ಟಿ.

ಐತಿಹಾಸಿಕ ದೃಷ್ಟಿಯಿಂದ ವಿಚಾರಿಸಲು ಬಸವಣ್ಣನು ಬಿಜ್ಜಳನ ಆಸ್ಥಾನದಲ್ಲಿ ಒಬ್ಬ ಕರ್ಣಿಕನಾಗಿದ್ದು ಮುಂದೆ ತನ್ನ ಬುದ್ಧಿಚಾತುರ್ಯಗಳಿಂದ ಕೋಶಾಧ್ಯಕ್ಷನೂ ಕೊನೆಗೆ ಮುಖ್ಯ ಮಂತ್ರಿಯೂ ಆಗಿದ್ದಾನೆ. ಧಾರ್ಮಿಕ, ಸಾಮಾಜಿಕ ದೃಷ್ಟಿಯಿಂದ ಅನೇಕ ಸುಧಾರಣೆಗಳನ್ನು ಮಾಡಿ

ದ್ದಾನೆ. "ದೇವನೊಬ್ಬ, ನಾವು ಹಲವು" ಎಂಬ ತತ್ವವನ್ನು ಸಾರಿ ಒಬ್ಬ ದೇವನಲ್ಲಿ ದೃಢವಾದ ಶ್ರದ್ಧೆಯನ್ನಿಟ್ಟು ನಡೆಯಬೇಕೆಂದು ಬೋಧಿಸಿದ್ದಾನೆ. ಆ ಇಷ್ಟವಾದ ಒಬ್ಬನೇ ದೇವನನ್ನು ಇಷ್ಟಲಿಂಗವೆಂದು ಭಾವಿಸಿ ಪೂಜಿಸ ಬೇಕೆಂದು ಪ್ರಚಾರ ಮಾಡಿದ್ದಾನೆ. ಆ ಕುರುಹನ್ನು ಕರಸ್ಥಲಕ್ಕೆ ಕೊಟ್ಟ ಗುರುವೂ, ಆ ಲಿಂಗವೂ ಲಿಂಗದಲ್ಲಿ ಅಡಕವಾದ ತತ್ವಗಳನ್ನೂ ಪ್ರತಿಪಾದಿ ಸುವ ಜಂಗಮವೂ ಒಂದೇ ಸ್ವರೂಪವಲ್ಲದೆ ಭೇದವನ್ನೆಣಿಸಕೂಡದೆಂದು ಸಾರಿದ್ದಾನೆ. ಈ ತತ್ವವನ್ನು ಪ್ರಚಾರಗೊಳಿಸಲು ಜಂಗಮರನ್ನು ಅರ್ಥಾತ್ ಮತಪ್ರಸಾರಕರನ್ನು ಎಲ್ಲ ಕಡೆಗೂ ಕಳಿಸಿದ್ದಾನೆ. ಬೌದ್ಧ ಭಿಕ್ಷುಗಳಂತೆಯೂ, ಕ್ರೈಸ್ತ ಮಿಶನರಿಗಳಂತೆಯೂ ಆ ಜಂಗಮರು ಬಸವಣ್ಣನ ಮತವನ್ನು ಪ್ರಸಾರ ಮಾಡಿದ್ದಾರೆ. ಬಸವಣ್ಣನ ಕಾಯಕಕ್ಕೆ ಮಹತ್ವ ಕೊಟ್ಟು ಎಲ್ಲರೂ ದೈಹಿಕ ಪರಿಶ್ರಮದ ಕೆಲಸ ಮಾಡೇ ತೀರಬೇಕು, ಅದರಿಂದ ಗುರುಲಿಂಗಜಂಗಮದ ದಾಸೋಹ ಮಾಡಬೇಕು ಎಂದು ಬೋಧಿಸಿ ಸಮಾಜದಲ್ಲಿ ರೂಢವಾಗಿದ್ದ, ಭಿಕ್ಷಾವೃತ್ತಿಯನ್ನೂ, ನಿರುದ್ಯೋಗತನವನ್ನೂ ಕಾಯಕದಲ್ಲಿ ಕೀಳುಮೇಲೆಂಬ ಭಾವನೆಯನ್ನೂ ಹೋಗಲಾಡಿಸಿದ್ದಾನೆ. ಇದಲ್ಲದೆ ಕಾಯಕದ ಮುಖಾಂತರ ಸ್ವಾರ್ಥತ್ಯಾಗವನ್ನು ಕೂಡ ಜನತೆಗೆ ಕಲಿಸಿಕೊಟ್ಟಿದ್ದಾನೆ. ಸ್ತ್ರೀಪುರುಷರಲ್ಲಿ ಭೇದಭಾವವನ್ನೆಣಿಸದೆ ಆತ್ಮೋನ್ನತಿ ಮಾಡಿಕೊಳ್ಳಲು ಇಬ್ಬರಿಗೂ ಸಮಾ ನಾಧಿಕಾರವಿರುತ್ತದೆಂಬುದನ್ನು ಲಿಂಗಧಾರಣೆ ಮುಖಾಂತರ ಸ್ಪಷ್ಟಗೊಳಿಸಿದನು. ಜಾತಿಭೇದವನ್ನು ಹುರಿದು ಜಾತ್ಯತೀತವಾದ ವಿಚಾರಗಳನ್ನು ಜನತೆಯಲ್ಲಿ ಹರಡಿದನು. ಹೊಲೆಹದಿನೆಂಟು ಜಾತಿಯವರಿಗೂ ಲಿಂಗಧಾರಣ ಮಾಡಿಸಿ ಬಳಿಕೆಯಲ್ಲಿ ತಗೆದುಕೊಂಡನು. ಸದಾಚಾರ ಸದ್ಭಕ್ತಿಯುಳ್ಳವರೇ ಕುಲ ಜರು ದುರ್ಗುಣ ದುರಾಚಾರಿಗಳಾದವರೇ ಕುಲಹೀನರು ಎಂಬ ದಿವ್ಯ ಸಂದೇಶವನ್ನು ಸಮಾಜದಲ್ಲಿ ಬೇರೂರುವಂತೆ ಮಾಡಿದನು. "ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರೆಲ್ಲ ಒಂದೇ ಎಂಬೆನು, ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಗಳಾದವರೆಲ್ಲ ಒಂದೇ ಎಂಬೆನು." ಎಂಬೀ ವಚನವು ಬಸವಣ್ಣನವರ ಜಾತ್ಯತೀತ ಭಾವನೆಯ ಕುರುಹಾಗಿದೆ.

ಬಸವಣ್ಣನವರ ಜಾತ್ಯತೀತವಾದ ತತ್ವಗಳನ್ನು ಮನ್ನಿಸಿ ಆಗಿನ ಕಾಲದ ಕುಲ ಹದಿನೆಂಟು ಜಾತಿಯ ಶುದ್ಧಾಂತಃಕರಣದ ಜನಗಳು ವೀರ ಶೈವ ಮತವನ್ನಂಗೀಕರಿಸಿದ್ದುಂಟು. ಅನ್ಯಮತೀಯರು ವೀರಶೈವ ಮತ

ವನ್ನಂಗೀಕರಿಸಿದ ಬಳಿಕ ಅವರಲ್ಲಿ ಪುನಃ ಜಾತಿಭೇದವನ್ನೆಣಿಸುತ್ತಿರಲಿಲ್ಲ. ಅಂತೆಯೇ ಮಧುವರಸನೆಂಬ ಬ್ರಾಹ್ಮಣನ ಮಗಳಿಗೂ ಹರಳಯ್ಯನೆಂಬ ಮೊಚ್ಚಿಗನ ಮಗನಿಗೂ ವಿವಾಹವಾಯಿತು. ಇದರಿಂದ ವರ್ಣಾಶ್ರಮಗಳನ್ನು ಪಾಲಿಸುತ್ತಿದ್ದ ಕರ್ಮಠರು ಉರಿದೆದ್ದು ಬಿಜ್ಜಳನಿಗೆ ಚಾಡಿ ಹೇಳಿ ಬಸವಣ್ಣನ ವಿರುದ್ಧ ಅವನ ಮನಸ್ಸನ್ನು ಕಲುಷಿತ ಮಾಡಿದರು. ಅದರಿಂದ ಹರಳಯ್ಯ ಮಧುವಯ್ಯಗಳ ಕೊಲೆಯಾಯಿತು. ನಿರ್ಮಲಾಂತಃಕರಣದ ಬಸವಣ್ಣನ ವರಿಗೆ ಇದೊಂದು ದೊಡ್ಡ ಪೆಟ್ಟು ತಗಲಿದಂತಾಗಿ ಕಪ್ಪಡಿಸಂಗಮಕ್ಕೆ ತಂದು ಸಂಗಮೇಶ್ವರ ಕ್ಷೇತ್ರದಲ್ಲಿ ಲಿಂಗೈಕ್ಯರಾದರು. ಇದು ಐತಿಹಾಸಿಕ ದೃಷ್ಟಿ. ಇದನ್ನು ಸುಶಿಕ್ಷಿತರಾದವರೆಲ್ಲರೂ ಮನ್ನಿಸುತ್ತಾರೆ. ಕಾಲಕಾಲಕ್ಕೆ ಬಸವನ ಅನುಕರಣವನ್ನೇ ಸಮಾಜ ಸುಧಾರಕರೂ ಧಾರ್ಮಿಕ ಸುಧಾರಕರೂ ಅನುಸರಿಸುತ್ತ ಬಂದಿದ್ದಾರೆ. ಬಸವಣ್ಣನವರು ಹಾಕಿ ಕೊಟ್ಟ ಕೀರ್ತಿಯು ದೇಶ ಕಾಲ ಪರಿಸ್ಥಿತಿಗಳೆಲ್ಲಕ್ಕೂ ಅಬಾಧಿತವಾಗಿ ನಡೆಯುವ ಅನುಕರಣೀಯ ಸಂಗತಿಯೆಂದು ಒಪ್ಪತಕ್ಕ ಮಾತಾಗಿದೆ. ಆದಾಗ್ಯೂ ಬಸವಣ್ಣನ ವ್ಯಕ್ತಿತ್ವವು ಐತಿಹಾಸಿಕ ದೃಷ್ಟಿಗಿಂತಲೂ ಮಿಗಿಲಾಗಿರುತ್ತದೆಂಬ ಮತವನ್ನು ಮರೆಯಲಾಗದು.

## ೩. ಆಧ್ಯಾತ್ಮಿಕ ದೃಷ್ಟಿ

ಆಧ್ಯಾತ್ಮಿಕ ದೃಷ್ಟಿಯಿಂದ ಬಸವಣ್ಣನಿಗೆ ವೀರಶೈವ ಮತದಲ್ಲಿ ಉಚ್ಚ ಮಟ್ಟದ ಸ್ಥಾನವು ದೊರೆತಿದೆ. ಆ ಕಾಲಕ್ಕೆ ಬಸವಣ್ಣನಿಗಿಂತಲೂ ಭಕ್ತಿಯಲ್ಲಿ, ಜ್ಞಾನದಲ್ಲಿ, ವೈರಾಗ್ಯಭಾವದಲ್ಲಿ ಅನೇಕ ಶರಣರು ಮಿಗಿಲಾಗಿರಬಹುದು. ಆದರೆ ಸರ್ವ ಸದ್ಗುಣಗಳನ್ನೊಳಗೊಂಡ ಬಸವಣ್ಣನ ಸಮಾನ ಯಾರಾರೂ ಇರಲಿಲ್ಲ. ಬಸವಣ್ಣನ ಸಮಕಾಲೀನರೇ ಅವನ ಯೋಗ್ಯತೆಯನ್ನು ಮನವಾರೆ ಕೊಂಡಾಡಿ 'ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ' ಎಂದು ಹಾಡಿರುವರು. ಬಸವಣ್ಣನ ನಾಮವು ವೀರಶೈವರಿಗೆಲ್ಲ ತಾರಕ ಮಂತ್ರವಾಗಿದೆ. "ಮಧುರಂ ಪಂಚಾಕ್ಷರಗಿಂ ಮಧುರಂ ಬಸವಾಕ್ಷರತ್ರಯಂ ಬಸವೇಶಾ" ಎಂದು ಪಾಲ್ಕುರಿಕೆ ಸೋಮನಾರಾಧ್ಯರು ಹಾಡಿ ಕೊಂಡಾಡಿದ್ದಾರೆ. ಎಷ್ಟೋ ಸ್ವಾಮಿಗಳೂ ಶಿವಯೋಗಿಗಳೂ ಬಸವ ಮಂತ್ರವನ್ನು ಗೌಪ್ಯವಾಗಿ ಜಪಿಸುತ್ತಿರುವದುಂಟು. ಶ್ರೀಮದಥಣಿ ಶಿವಯೋಗಿಗಳೂ, ಶ್ರೀ ಚಿತ್ತರಗಿ ಮಹಾಂತ ಸ್ವಾಮಿಗಳೂ, ಮಂತ್ರಸ್ವರೂಪರಾದ ಬಸವಣ್ಣನ

ವರ ಹೆಸರನ್ನುಚ್ಚರಿಸದೆ 'ಅಪ್ಪಾ' ಅವರೆಂದೇ ಸಂಬೋಧಿಸುತ್ತಿದ್ದರು. "ಬಸವಣ್ಣ ಮಾಡಿದರೆ ಗುರುವಾಯಿತ್ತು, ಬಸವಣ್ಣ ಮಾಡಲು ಲಿಂಗವಾಯಿತ್ತು, ಬಸವಣ್ಣ ಮಾಡಲು ಜಂಗಮವಾಯಿತ್ತು", ಇತ್ಯಾದಿ ವಚನದಿಂದ ಬಸವಣ್ಣನೇ ಗುರುಲಿಂಗ ಜಂಗಮದ ನಿರ್ಮಾಪಕನೆಂದು ಹಾಡಿಕೊಂಡದ್ದು ಕಂಡು ಬರುತ್ತದೆ. "ಬಸವಾ ಶಿವನೇ ಶಿವನೆ ಬಸವಾ" ಎಂದು ಈಗಲೂ ಜನರು ಭಜನೆ ಮಾಡುತ್ತಿದ್ದಾರೆ. ದ್ವಿತೀಯ ಶಂಭುವೆನಿಸಿಕೊಳ್ಳುವ ಪಾತ್ರತೆಯು ಬಸವಣ್ಣನಿಗೊಬ್ಬನಿಗೇ ಉಂಟಾಯಿತಲ್ಲದೆ ಮಿಕ್ಕುಳಿದ ಶರಣರಿಗಲ್ಲ. "ಶ್ರೀ ಗುರು ಬಸವಲಿಂಗಾಯನಮಃ" ಎಂಬ ಒಕ್ಕಣಿಕೆಯು ಬಸವಣ್ಣನ ಗುರುಸ್ಥಲದ ಮೇಲ್ಮೆಯನ್ನು ವ್ಯಕ್ತಪಡಿಸುತ್ತದೆ. ಅನಾದಿ ವೀರಶೈವ ಸಂಗ್ರಹದಲ್ಲಿ ಹೀಗೆ ಹೇಳಿದೆ— "ಪಂಚಮೋ ಜಗದಾರಾಧ್ಯಃ ಎಂದೆನಿಸಿ ಚತುಃಕಲ ಶಾಚಾರ್ಯರಿಗೆ ಕರ್ತೃವಾಗಿ ಪಂಚಮಸಾಲೆ ಜಗದ್ಗುರು, ದೇಶಾಧೀಶ್ವರ, ಘನಲಿಂಗ ಚಕ್ರವರ್ತಿ, ಧರ್ಮಗುರುಸ್ಥಲ ಈಶ ಶ್ರೀಗುರು ಬಸವಲಿಂಗನೇ ಪ್ರಥಮಾಚಾರ್ಯನೆಂದು ವಂದಿಸಿ ನುತಿಸುವೆಂ ದೇವಿ" ಎಂದು ಹೇಳಿರುವದರಿಂದ ಬಸವಣ್ಣನು ಔಪಚಾರಿಕವಾಗಿ ಗುರುವೆನಿಸಿಕೊಳ್ಳದೆ ಚತುರಾಚಾರ್ಯರಿಗೂ ಮುಖ್ಯ ಗುರುವಾಗಿದ್ದನೆಂದು ತಿಳಿಯುತ್ತದೆ. ಬಸವಣ್ಣನು ವೀರಶೈವ ನಿರ್ಣಯ ಪರಮಾವತಾರನೆಂದೆನಿಸಿಕೊಂಡಿದ್ದರಿಂದ ವೀರಶೈವ ಮತದಲ್ಲಿ ಕಾಲಕಾಲಕ್ಕೆ ಅಂಟಿಕೊಂಡ ದುಷ್ಟ ಸಾಂಪ್ರದಾಯಗಳನ್ನೂ ಲೋಪದೋಷಗಳನ್ನು ತೊಡೆದು ಹಾಕಿ ಶುದ್ಧ ವೀರಶೈವ ಮತದ ತತ್ವಗಳಾವವೆಂಬುದನ್ನು ನಿರ್ಣಯಿಸಿರುವನೆಂಬ ಮಾತು ಸ್ಪಷ್ಟವಾಗುತ್ತದೆ. ಬಸವಣ್ಣನು ಕಲ್ಯಾಣ ಮಂಟಪದಲ್ಲಿ ಶಿವಾನುಭವ ಮಂಟಪವನ್ನು ವಿರಚಿಸಿ ಅದಕ್ಕೆ ಪ್ರಭುದೇವರನ್ನು ಅಧ್ಯಕ್ಷರನ್ನಾಗಿ ಮಾಡಿ ಅನೇಕ ಜಟಿಲವಾದ ಆಧ್ಯಾತ್ಮಿಕ ಸಮಸ್ಯೆಗಳನ್ನು ಸುಲಭವಾಗಿ ಬಿಡಿಸಿದನು. ಷಟ್‌ಸ್ಥಲಗಳಿಗೆ ಸುಸಂಬದ್ಧವಾದ ಶಾಸ್ತ್ರೀಯ ಪದ್ಧತಿಯ ಮೆರಗನ್ನು ನೀಡಿದನು. ಈ ಆಧ್ಯಾತ್ಮಿಕ ದೃಷ್ಟಿಯ ಮೇಲ್ಮಟ್ಟದಿಂದಲೇ ಬಸವಣ್ಣನ ನಿಜವಾದ ನಿಲವನ್ನು ನಾವು ಅಳೆಯಬೇಕಾಗಿದೆ.

ಬಸವಣ್ಣನು ಅಶಿಕ್ಷಿತರಿಗೆ ಪವಾಡಪುರುಷನಾಗಿರನೊಲ್ಲನೇಕೆ ಆದರೆ ಮುಮುಕ್ಷುಗಳಿಗೆ ಆತನು ಅವತಾರಿ ಪುರುಷನಾಗಿದ್ದಾನೆ. ಗುರುವಾಗಿದ್ದಾನೆ. ವೀರಶೈವ ಮತದಲ್ಲಿ ಬಸವಣ್ಣನಿಗೆ ಆಧ್ಯಾತ್ಮಿಕ ದೃಷ್ಟಿಯಿಂದಲೇ ಹೆಚ್ಚು

ಪ್ರಶಸ್ತಿಯುಂಟು. ವೀರಶೈವರೆಲ್ಲರೂ ಸರಿಸಮಾನವಾಗಿದ್ದರೂ ನಾವು ಸಾಮಾನ್ಯ ವಿಶೇಷ ನಿರಾಭಾರಿ ಎಂದು ಗುಣ ಕ್ರಿಯಾ ಭೇದಗಳನ್ನು ತೋರಿಸುವಂತೆ ಬಸವಣ್ಣನು ಒಬ್ಬನೇ ಆಗಿದ್ದರೂ ಸಾಮಾನ್ಯರ ಕಣ್ಣಿಗೆ ಪವಾಡಪುರುಷ ನಾಗಿಯೂ, ಸಂಶೋಧಕರಿಗೆ ಐತಿಹಾಸಿಕ ಪುರುಷನಾಗಿಯೂ, ಆಧ್ಯಾತ್ಮಿಕ ಜೀವಿಗಳಿಗೆ ಅವತಾರಿ ಗುರುವಾಗಿಯೂ ಕಂಡಿದ್ದಾನೆ. ಇದು ಅವನ ವ್ಯಕ್ತಿತ್ವದ ವೈಶಿಷ್ಟ್ಯ. ಈ ಮೂರು ದೃಷ್ಟಿಗಳಲ್ಲಿ ಬಸವಣ್ಣನ ಆಧ್ಯಾತ್ಮಿಕ ವ್ಯಕ್ತಿತ್ವವೇ ಶ್ರೇಷ್ಠವಾದುದು. ಅಂತೆಯೇ ಅವನನ್ನು ನಂದಿಯ ಅವತಾರ ನೆಂದೂ ದ್ವಿತೀಯ ಶಂಭುವೆಂದೂ ಕರೆದಿದ್ದಾರೆ. ಇದಕ್ಕಾಗಿಯೇ ಆತನ ಧ್ಯಾನ, ಪೂಜೆ ಜಯಂತಿಗಳು ನಡೆದಿವೆ. ವೀರಶೈವ ಮತಕ್ಕೆ ಹೆಚ್ಚಿನ ಪ್ರಾಶಸ್ತ್ಯವು ದೊರೆಯುತ್ತಿದ್ದರೆ ಅದು ಬಸವಣ್ಣನವರ ಪೌರಾಣಿಕ ಹಾಗೂ ಐತಿಹಾಸಿಕ ವ್ಯಕ್ತಿತ್ವದಿಂದಲ್ಲ. ಆದರೆ ಅದು ಕೇವಲ ಆಧ್ಯಾತ್ಮಿಕ ವ್ಯಕ್ತಿತ್ವ ದಿಂದಲೇ ಎಂಬುದನ್ನು ಸರ್ವಥಾ ಮರೆಯಲಾಗದು. ಇದರಿಂದ ಆತನ ಐತಿಹಾಸಿಕ ತತ್ವಕ್ಕೆ ಕುಂದುಂಟಾಯಿತೆಂದು ಯಾರೂ ಭಾವಿಸಬಾರದು.

ಜಗತ್ತಿನ ಸುಧಾರಕರು ಈ ವರೆಗೆ ಮಾಡಿದ ಅಥವಾ ಇನ್ನು ಮುಂದೆ ಮಾಡಬಹುದಾದ ಯಾವತ್ತೂ ಸುಧಾರಣೆಗಳು ಬಸವನ ಅನುಕರಣೆಯನ್ನೇ ಪರ್ಯಾಯದಿಂದ ಮಾಡುತ್ತಿವೆ. ಬುದ್ಧನು ತನ್ನ ಭಿಕ್ಷುಗಳನ್ನು ದೇಶಾಂತ ರಕ್ಕೆ ಕಳಿಸಿ ಬೌದ್ಧ ಮತವನ್ನು ಹಬ್ಬಿಸಿದಂತೆ ಬಸವಣ್ಣನು ಜಂಗಮರನ್ನು ಭರತಖಂಡದಲ್ಲೆಲ್ಲ ಕಳಿಸಿ ಮತವನ್ನು ಹಬ್ಬಿಸಿದನು. ಆದರೆ ಆತನು ಬಹು ದಿವಸ ಜೀವಿಸಿರಲಿಲ್ಲವಾದ ಕಾರಣ ಮತ್ತು ಆ ಕಾಲಕ್ಕೆ ವಾಹನಸೌಕರ್ಯ ಗಳ ಅಭಾವವಿದ್ದ ಮೂಲಕ ಮತಪ್ರಸಾರ ಕಾರ್ಯವು ವಿಶಾಲ ಕ್ಷೇತ್ರವನ್ನು ಆವರಿಸದೆ ಕರ್ನಾಟಕ, ಆಂಧ್ರ, ಮಹಾರಾಷ್ಟ್ರದಲ್ಲಿ ಅದು ಹೆಚ್ಚು ಪ್ರಮಾಣ ದಲ್ಲಿದ್ದು ಉಳಿದ ಕಡೆಯಲ್ಲಿ ಅತಿ ವಿರಳವಾಗಿ ಬೇರೆ ಬೇರೆ ಪಂಥ ಪಂಗಡ ಗಳಲ್ಲಿ ವಿಲೀನವಾಗಿಹೋಗಿದೆ. ಮೇಲಾಗಿ ಜಾತ್ಯಂಧತೆಯ ಆಗಿನ ಕಾಲದಲ್ಲಿ ವರ್ಣಾಶ್ರಮಿಗಳು ಇದರ ವಿರುದ್ಧವಾಗಿ ಹೋರಾಡಿದ್ದರಿಂದ ಇದು ಬಹ್ವು ಮಟ್ಟಿಗೆ ಕುಂಠಿತವಾಯಿತು. ದಿವ್ಯ ತತ್ವಗಳು ಅಲ್ಪಕ್ಷೇತ್ರದಲ್ಲಿದ್ದರೇನು ? ವಿಶಾಲ ಕ್ಷೇತ್ರದಲ್ಲಿದ್ದರೇನು ? ಅವುಗಳ ಯೋಗ್ಯತೆಯನ್ನು ಗುಣಗಳಿಂದ ಅಳೆಯಬೇಕಲ್ಲದೆ ಕ್ಷೇತ್ರದಿಂದಲ್ಲ. ಬಸವನು ನೀಡಿದ ಆಧ್ಯಾತ್ಮಿಕ ಬೆಳಕು ಯಾವ ಆಗಮೋಪನಿಷತ್ತುಗಳಿಗಿಂತಲೂ ಕಡಿಮೆಯಾದುದಲ್ಲ. ಆತನ ಆಧ್ಯಾ

ತ್ಮಿಕ ಅಮರ ಜ್ಯೋತಿಯು ಯುಗಯುಗಾಂತರ ಜಾಜ್ವಲ್ಯಮಾನವಾಗಿ ಮಿನುಗುತ್ತದೆ. ಆ ಬೆಳಕು ಮಸಕಾಗದಂತೆ ಜ್ಞಾನ ಪ್ರಣತಿಗೆ ಭಕ್ತಿರಸ ತೈಲವನ್ನೆರೆದು ಪೋಷಿಸುವದು ವೀರಶೈವರೆಲ್ಲರ ಆದ್ಯ ಕರ್ತವ್ಯವಾಗಿದೆ.

# ದೇಶಸೇವೆಯೇ ಈಶಸೇವೆ

[ ಲೇಖಕರು:- ಶ್ರೀ ಸಿ. ನಾ. ಮಹಾಂತಣ್ಣವರ ]

## ಮಹನೀಯರ ಮಹತ್ಕಾರ್ಯ

ಹಿಂದೊಂದು ಕಾಲದೊಳು ಮುಂದರಿದು, ಹಿಂದುಸ್ತಾನ ದೇಶದ ತುಂಬ ಸಂದಿಲ್ಲದೆ ಹಬ್ಬಿದ ವಿಶ್ವಧರ್ಮವಾದ ವೀರಶೈವ ಮತವು ಅನೇಕ ರಾಜ್ಯದಾಡಳಿತೆಗಳ ದವಡಿಗಳಲ್ಲಿ ಸಿಕ್ಕು ಮುಕ್ಕು ಮುರಿಯಾಗಿ ಯಾರೂ ದಿಕ್ಕಿಲ್ಲದೆ ಮನದಲ್ಲಿಯೇ ಮರಗುತ್ತ, ಅಂತರಂಗದಲ್ಲಿಯೇ ಅರಿವು, ಆಚಾರ, ಕ್ರಿಯೆ, ಜ್ಞಾನ ಸಾಧನಗಳಾದ ಶಿವಶರಣರ ಅನುಭಾವದ ಎರಡೆಂಭತ್ತು ವಚನಗಳ ನಿಚಯವು ತಾಡವಾಲಿ ಹಾಗು ಖೋರೀ ಕಾಗದಗಳಲ್ಲಿ ಮುಡಿ ಕೊಂಡು ಗುಪ್ತವಾದ ಪೂಜೆಗೊಳಗಾಗಿ ನುಸಿಗಡಿಸಿಕೊಂಡು ನಸಿಸಿ ಹೋಗು ವಷ್ಟರಲ್ಲಿ ಮಹನೀಯರಾದ ಡಾ॥ ರಾವಬಹಾದ್ದೂರ ಪಿ. ಜಿ. ಹಳಕಟ್ಟಿ ಯವರು ವಚನಗಳ ಆಗರವಾದ ಶ್ರೀ ಬಸವೇಶನ ಜನ್ಮಭೂಮಿಯಾದ ಅನೇಕ ಶರಣರ ಪವಿತ್ರ ಭೂಮಿಯಾದ ವಿಜಯಪುರ ಜಿಲ್ಹೆಯೊಳಗಿನ ಗ್ರಾಮಾಂತರ ಗಳನ್ನು ತಿರುಗಿ ತಿರುಗಿ ಎಷ್ಟೋ ವಚನಗಳನ್ನು ಸಂಗ್ರಹಿಸಿ, ಆಯಾ ವಚನ ಕರ್ತರ ಮುದ್ರಿಕೆಗಳ ಮೇಲಿಂದ ಬೇರೆಬೇರೆಯಾಗಿರಿಸಿ ಮುಲ್ಕೀ ಪರೀಕ್ಷೆ ಯಲ್ಲಿ ತೇರ್ಗಡೆಯಾದ ಇಬ್ಬರು ಕಾರಕೂನರ ಕೈಯಿಂದ ಒಂದೇ ಸವನೆ ಬರೆಯಿಸಿ, ಅವುಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿ ನೋಡಿ, ತಿದ್ದಿ ತಿದ್ದಿ ಅವಿಶ್ರಾಂತ ಶ್ರಮಗೊಂಡು ವಚನಸಾರವೆಂಬ ಮೊದಲನೇ ಭಾಗ ಗ್ರಂಥ ವನ್ನು ಮುದ್ರಿಸಿದ್ದು ಸರ್ವರಿಗೆ ವಿದಿತವಾದದ್ದೇ ಅದೆ. ಇಷ್ಟರಲ್ಲಿ "ಹಿತ ಚಿಂತಕ ಮುದ್ರಣಾಲಯ" ಎಂಬ ಹೆಸರಿನಿಂದ ಅಚ್ಚು ಹಾಕುವ ಯಂತ್ರ

ಸಾಧನದೊಡನೆ ವಚನಸಾರದ ೨ನೇ ೩ನೇ ಭಾಗಗಳನ್ನೂ ಶಿವಾನುಭವ ಮಾಸಪತ್ರಿಕೆಯನ್ನೂ ನವಕರ್ನಾಟಕವೆಂಬ ವಾರಪತ್ರಿಕೆಯನ್ನೂ ತೆಗೆಯುತ್ತ ವೀರಶೈವ ಮತತತ್ವಗಳನ್ನು ಬೈಲಿಗೆಳೆಯುತ್ತ ಸಮಾಜ ಸಂಘಟನೆಯನ್ನು ಸಂಗೊಳಿಸುತ್ತ ಶಿವಶರಣರ ಕೇಂದ್ರಸ್ಥಾನವಾದ ಕಲ್ಯಾಣದ ಶಿವಾನುಭವ ಮಂಟಪದ ಮಹತ್ವವನ್ನು ವಿವರಿಸುತ್ತ ಪ್ರತಿಯೊಂದು ಗ್ರಾಮದಲ್ಲಿ ಶಿವಾನುಭವ ಸಂಸ್ಥೆಗಳಿರುವದು ಅತ್ಯವಶ್ಯವೆಂದು ಅರುಹುತ್ತ ಹಾಗು ಅವುಗಳನ್ನು ಸ್ಥಾಪಿಸುತ್ತ ಮತ್ತು ಅವುಗಳ ಮೇಲ್ವಿಚಾರ ಮಾಡುತ್ತಿರಲು ಅಲ್ಲಲ್ಲಿ ಶಿವಾನುಭವ ಸಂಘಗಳೂ ಅಕ್ಕನ ಬಳಗಗಳೂ ತರುಣಸಂಘಗಳೂ ಪ್ರಾಥಮಿಕ ಶಾಲೆ ಕಾಲೇಜ ವಿಶ್ವವಿದ್ಯಾಲಯಗಳಲ್ಲಿ ಶಿವಶರಣರ ಗ್ರಂಥ ಪ್ರಚಾರಗಳೂ ಬಳಕೆಯಲ್ಲಿ ಬರುವಂತೆ ಮುಂಧೋರಣವಿಟ್ಟು ಅವುಗಳ ಬಗ್ಗೆ ಶಿವಾನುಭವ ಪತ್ರಿಕೆಯಲ್ಲಿ ಎಷ್ಟೋ ಲೇಖಗಳನ್ನು ಬರೆಬರೆದು ಶಿವಾನುಭವ ಸಂಘದ ಉಗಮಗಳೆಂದೂ, ಶರಣ ಸಾಹಿತ್ಯದ ಪಿತಾಮಹರೆಂದೂ ಪ್ರಸಿದ್ಧರಾದದ್ದಲ್ಲದೆ ಈಗೀಗ ಡಾಕ್ಟರರೆಂಬ ಪದವಿಯನ್ನು ಪಡೆದದ್ದು ಸರ್ವಶ್ರುತವಿದೆ.

ಇದಲ್ಲದೆ ಶ್ರೀ ಬಸವನ ಕಾಲದಿಂದ ವಿಜಯನಗರದ ರಾಜ್ಯದಾಡಳಿತೆಯ ವರೆಗೂ ವಿಜಯನಗರ ರಾಜ್ಯದಾಡಳಿತೆಯ ನಂತರ ಆಂಗ್ಲರ ಕಾಲದ ವರೆಗೂ ಕುಂಠಿತವಾದ ಶಿವಾನುಭವವೂ ಜನಸಾಮಾನ್ಯ ಸುಶಿಕ್ಷಣವೂ ಪ್ರಚಾರಿಸಲು ಆಗಗೂ ಸಾಧ್ಯವಾಗಲಿಲ್ಲ. ಈ ಅವಧಿಯಲ್ಲಿ ಬೇರೆ ಬೇರೆ ಕಾಯಕಗಳನ್ನು ಕೈಕೊಂಡ ಪಂಗಡಗಳು ಕ್ರಿಯಾ ಜ್ಞಾನ ಶೂನ್ಯಗಳಾಗಿ ಉಳಿದಿರಲು ಆಶ್ಚರ್ಯವಲ್ಲ. ಹಾಗು ವಿಶ್ವಧರ್ಮವಾದ ವಿಶಾಲ ತತ್ವಗಳನ್ನು ಬೋಧಿಸುವ ಸುವ್ಯವಸ್ಥಿತವಾದ ಸುಪ್ರಸಿದ್ಧವಾದ ಮಠಮಾನ್ಯಗಳು ಪರಚಿಂತೆ, ಪರಬೋಧೆ, ಪರತತ್ವಗಳನ್ನು ಪ್ರಚಾರಿಸದೆ, ಕೇವಲ ಸಮಾಜದಿಂದ ಸಹಾಯ ಪಡೆಯುತ್ತ ತಮ್ಮ ಉತ್ಪನ್ನವನ್ನು ಸ್ವಾರ್ಥಕ್ಕಾಗಿ ವಿನಿಯೋಗ ಮಾಡುತ್ತ ಪೂರ್ವಜರ ವಚನಸಾಹಿತ್ಯ ಭಾಂಡಾರವನ್ನು ಪೆಟ್ಟಿಗೆಯಲ್ಲಿಟ್ಟು ಗಟ್ಟಿಯಾದ ಕೀಲಿ ಹಾಕಿ, ಆ ಪೆಟ್ಟಿಗೆಯನ್ನೇ ಪೂಜೆಗೈಯ್ಯುತ್ತ, ವಿಶ್ವಧರ ಪ್ರಚಾರ ಕಾರ್ಯ ಕಾಯಕವನ್ನೇ ಮರೆತು, ವಿಷಯಾಕಾರ ಪ್ರಪಂಚದಲ್ಲಿ ಧುಮಿಕಿಬಿಟ್ಟರು. ಇಂಥ ಪರಿಸ್ಥಿತಿಯಲ್ಲಿ ೧೮೫೭ನೇ ಇಸ್ವಿಯ ಬಂಡಾಯದಲ್ಲಿ ಇಂಗ್ಲಂಡದ ಮಹಾರಾಜಯರು " ಧರ್ಮದಲ್ಲಿ ಕೈಹಾಕುವದಿಲ್ಲ " ವೆಂದು ಸಾರಿದ್ದರಿಂದ ರಾಜಧರ್ಮ, ಸಮಾಜಧರ್ಮ, ಮತಧರ್ಮಗಳಲ್ಲಿ

ಹಿಂದುಳಿದ ನಮ್ಮ ಸಮಾಜದ ದುಃಸ್ಥಿತಿಯನ್ನರಿತು ನಮ್ಮ ಸಮಾಜದ ಮುಖಂಡರು ಮುಂದರಿಯಲು ಸಂದು ಸಿಕ್ಕಿತು.

ಮಹನೀಯರಾದ ಗಿಲಗಂಚಿ ಗುರುಸಿದ್ದಪ್ಪನವರು ಆಂಗ್ಲ ಭಾಷೆಯನ್ನು ಸ್ವಾವಲಂಬನದಿಂದ ಶಿಕ್ಷಣಪಡೆದು ವೀರಶೈವ ಶಿಕ್ಷಣ ಫಂಡು ಅಖಂಡ ವಾಗಿ ಸಾಗುವಂತೆ ಸ್ಥಾಪನೆಗೈದು ವೀರಶೈವರೆಲ್ಲರೂ ಇಂಗ್ಲೀಷ ಕಲಿಯಲು ಸಹಾಯವನ್ನಿತ್ತರು. ಇವರ ಮುಂಧೋರಣಕ್ಕೆ ಮುಂಬರಿದ ಮೊ॥ ಅರಟಾಳ ಸಾಹೇಬರು ಅನೇಕ ರೀತಿಯಿಂದ ವೀರಶೈವ ಶಿಕ್ಷಣ ಫಂಡಿಗೆ ಸಹಾಯ ವನ್ನಿತ್ತು ತಮ್ಮ ಹೆಸರನ್ನು ಸ್ಥಿರವಾಗಿ ಉಳಿಸಿಕೊಂಡದ್ದಲ್ಲದೆ, ಶಿರಸಂಗಿ ದೇಸಾಯಿಯರಿಗೆ ಸಂಬೋಧಿಸಿ, ಶಿರಸಂಗಿ ಫಂಡವು ಅಜರಾಮರವಾಗಿ ಉಳಿಯುವಂತೆ ಮಹತ್ಕಾರ್ಯವನ್ನೆಸಗಿದರು. ಇದೇ ಕಾಲಕ್ಕೆ ವಿದ್ಯಾರ್ಥಿ ದೆಶೆಯಲ್ಲಿದ್ದುಕೊಂಡು ಪ್ರಾಥಮಿಕ ಮಾಧ್ಯಮಿಕ ಉಚ್ಚ ಶಿಕ್ಷಣ ಪಡೆದು ಕೊಂಡಂಥ ಧಾರವಾಡದ ನಿವಾಸಿಗಳಾದ ಡಾ॥ ಹಳಕಟ್ಟಿಯವರು ಬಿ. ಎ. ಎಲ್. ಎಲ್. ಬಿ. ಪದವಿಯ ಪೊಂದಿದ್ದರು. ತಮ್ಮ ಜಿಲ್ಹೆಯ ಶಿಕ್ಷಣಾಧಿ ಕಾರಿಗಳಾದ ಬಸಲಿಂಗಪ್ಪನವರು ಧಾರವಾಡ ಜಿಲ್ಹಾ ಬಾಲಕರಲ್ಲಿ ಪ್ರಾಥ ಮಿಕ ಶಿಕ್ಷಣದ ಪ್ರಸಾರ ಮಾಡಿದ್ದನ್ನು ಮನಗಂಡು ವಿದ್ಯೆಯಲ್ಲಿ ಹಿಂದು ಳಿದ ವಿಜಾಪುರ ನಗರದಲ್ಲಿ ನೆಲೆಗೊಂಡು ತಮ್ಮ ವಕೀಲಿ ಕಾರ್ಯಕವನ್ನೆಸ ಗುತ್ತ ಸಮಾಜಸೇವೆಗೋಸುಗ ಶೆಫರ್ಡಹಾಲ, ಲಿಂಗಾಯತ ಹಾಯಸ್ಕೂಲ, ವಾಚನಾಲಯ ಮುಂತಾದ ಸಮಾಜಸೇವೆಯನ್ನು ಸಲ್ಲಿಸುತ್ತಿರಲು ಇಂಗ್ಲಿಷ ಸರಕಾರದವರು ರಾವಬಹಾದ್ದೂರ ಪದವಿಯನ್ನಿತ್ತರು. ಹಾಗು ವಚನಸಾಹಿತ್ಯ ವನ್ನು ಕನ್ನಡಿಗರ ಮುಂದಿರಿಸಿ ಕನ್ನಡ ಸಾಹಿತ್ಯದ ಪಿತಾಮಹರೆಂದೆನಿಸಿ ಕೊಂಡದ್ದೂ ಈಗೀಗ ಡಾಕ್ಟರ ಪದವಿ ಪೊಂದಿದ್ದೂ ಸರ್ವ ಮಾನ್ಯವಿದೆ.

ಬಸವಾದಿ ಪ್ರಮಥರ ಕಲ್ಯಾಣದ ಶಿವಾನುಭವ ಮಂಟಪದ ನೆಲೆ ಕಲೆಗಳನ್ನರಿತ ಶಿವಾನುಭಾವ ಸಂಸ್ಥೆಯು ಉಗಮಿಗಳ ಮುಂಧೋರಣವನ್ನ ರಿತ ಶ್ರೀ. ನಿ. ಪ್ರ. ಸ್ವ. ಶ್ರೀ ಹಾವೇರಿಮಠ ಧಾರವಾಡ ಮೃತ್ಯುಂಜಯ ಸ್ವಾಮಿಯವರು "ಅನುಭಾವವೇ ಭಕ್ತಿಗೆ ಆಧಾರ, ಅನುಭಾವವೇ ಭಕ್ತಿಗೆ ನೆಲೆವನೆ" ಎಂದು ನೆಲಗಟ್ಟು ಹಾಕಿದ ಶ್ರೀ ಶಿವಶರಣದಾಸಿಮಾರ್ಯರ ಉಕ್ತಿಯಂತೆ ತಮ್ಮ ಭವ್ಯವಾದ ಮಠಸ್ಥಾನದಲ್ಲಿ ಸದ್ಭಕ್ತಿಪೂರ್ವಕ ನಿರ್ಮಿ ಸಿದ ಶ್ರೀ ನಿ. ಪ್ರ. ಮುರುಘಾರಾಜೇಂದ್ರರ ೬೩ ಪುರಾತನರೊಡಗೊಂಡು

ಮಧ್ಯದಲ್ಲಿ ಮೂಹೂರ್ತಗೊಂಡ ಅಥಣಿ ಶಿವಯೋಗೀಶ್ವರರ ಪ್ರತಿಮೆಯು ಇಷ್ಟಲಿಂಗದ ಪ್ರತಿಷ್ಠೆಯೋ? ಪ್ರಾಣಲಿಂಗದ ಚಿತ್‌ಕಳೆಯೋ? ಭಾವಲಿಂಗದ ಮೂಲಪ್ರಣಮ ಸ್ವರೂಪವೋ? ಬ್ರಹ್ಮಸ್ಥಾನದ ನಿಃಕಲಸ್ವರೂಪವೋ? ಶಿಖಾಸ್ಥಾನದ ನಿಶ್ಶೂನ್ಯವೋ? ಪಶ್ಚಿಮ ಚಕ್ರದ ನಿರಂಜನನಿರವಯವೋ? ಅಖಿಲ ಭಾರತದ ಅಗಮ್ಯತತ್ವವೋ? ವಿಶ್ವಧರ್ಮದ ವಿಶ್ವಾಧಾರವೋ? ಎಂಬಂತೆ ಈ ವರ್ಷದ ಮಹೋತ್ಸವದ ಕಾಲಕ್ಕೆ ಹೋದ ನಮ್ಮೆಲ್ಲರಿಗೆ ಆ ಪ್ರತಿಮೆಯು ದರ್ಶನದಿಂದ ದಿವ್ಯಾನಂದವು ಕಂಗೊಳಿಸಿ,

> ನಿತ್ಯನಿಜಬಾಜ್ಞಾನದ ಬೆಳಗಿನ ಬೆಳಗಿನೊಳಗೆ ।
> ಮುತ್ತು ಮಾಣಿಕ್ಯ ನವರತ್ನದಲ್ಲಿ ॥
> ಸುತ್ತಿರ್ಪ ಅಮರಗಣ ತಿಂಥಿಣಿಯನೇ ಕಂಡು ।
> ನಿಶ್ಚಿಂತವಿಂದ ನಿಬ್ಬೆರಗಾದೆನು ॥

ಈ ಮಂತ್ರಗೋಪ್ಯದ ಪದವನ್ನು ಮುಂದಿರಿಸುತ್ತಿತ್ತು.

ಸತ್ಯ ಶಿವಶರಣರ ನಿತ್ಯಮೂರ್ತಿಯ ದರ್ಶನ ತೆಗೆದುಕೊಂಡು ಶಿವಾನುಭವ ಮಂಟಪಕ್ಕೆ ಬರಲು ಅಲ್ಲಿ ನಡೆದ ಭಜನಾ ಮೇಳಗಳಿಂದ ತತ್ವಪದಗಳನ್ನೂ ಗೀ, ಪದಗಳನ್ನೂ ಆಲಿಸಿದೊಡನೆ, ಅಲ್ಲಿಯ ರಾಗರಂಜನೆ ತಾಳಮೇಳಗಳು ಅಂತರಂಗದ ವಶನಾಪಗಳನ್ನು ವಿಶದೀಕರಿಸುತ್ತಿದ್ದವು. ಆ ಶಿವಾನುಭವ ಮಂಟಪದ ಅಗ್ರಸ್ಥಾನದಲ್ಲಿ ವಿರಾಜಿಸುವ ಚಿತ್ರಕಲ್‌ದುರ್ಗ ಶ್ರೀ. ನಿ. ಪ್ರ. ಜಗದ್ಗುರು ಪೀಠ ಪ್ರತಿಷ್ಠರಾದ ನಿರಾಳ ಸುರಾಳಗಳನ್ನು ಬಳಸಿದ ಬಂಧುರ ಮೂರ್ತಿಯು ಶಿವಗಣ, ನಾಗಗಣ, ಪ್ರಮಥಗಣಗಳಿಂದ ಸಾಕ್ಷಾತ್ ಜಗತ್ಕರ್ತನಾದ ಕೈಲಾಸಾಧಿಪತಿಯ ಸಭೆಯನ್ನು ಅನುಕರಿಸಿ,

> ಮುಖಕಮಲ ಶಿಖರ ಸಿಂಹಾಸನಾಗ್ರದ ಮೇಲೆ ।
> ಮಕರ ತೋರಣವದರ ಕೆಲಬಲದೊಳು ॥
> ಸಕಲಗಣ ತಿಂಥಿಣಿಯು ಜಯತು ಜಯತೆಂದೆನಲು ।
> ಸುಖಿಗುಹೇಶ್ವರ ಶರಣ ಸಿದ್ಧರಾಮ ॥

ಈ ಮಂತ್ರಗೋಪ್ಯದ ರಹಸ್ಯವನ್ನು ವಿಶದಗೊಳಿಸುತ್ತಿತ್ತು.

ಇಂಥ ಶಿವಯೋಗಾನುಭವ ಮಂಟಪವು ವಾಗ್ಮಿಗಳಿಂದಲೂ ಗಾಯನ ಗೀತಗಳಿಂದಲೂ ಶಿವಶರಣರ ವಚನವಾಙ್ಮಯಗಳಿಂದಲೂ ಸದಾಚಾರ

ಸಂಘಾನಗಳಿಂದಲೂ ವಿಶ್ವಧರ್ಮವೆನಿಸುವ ವೀರಶೈವ ಮತತತ್ವಗಳ ಗೋಷ್ಠಿಗಳಿಂದಲೂ ವೀರಶೈವ ಗ್ರಂಥ ಪ್ರಚಾರಗಳ ಪ್ರತ್ಯಕ್ಷ ಸಾಕ್ಷಾತ್ಕರಿಸುವ ಆಚಾರ್ಯರಿಂದಲೂ ಶಾಸ್ತ್ರಗಳ ಶಾಸನಗಳನ್ನು ಬೈಲಿಗೆಳೆಯುವ ಶಾಸ್ತ್ರಿಗಳ ಸಂದೋಹದಿಂದಲೂ ಹಾಗು ಷಟ್‌ಸ್ಥಲದ ಕಡೆಯದಾದ ಶೂನ್ಯ ನಿಶ್ಶೂನ್ಯಸ್ಥಲಾಚರಣೆಗಳನ್ನು ಬಲ್ಲ ಅಷ್ಟ ಸಕೀಲುಗಳಿಂದ ೬೧೬ ಸಕೀಲಗಳ ಅನುಭವದ ಸಂಸ್ಕೃತ ಪಂಡಿತರಿಂದಲೂ ಶಿವಾನುಭವದ ಅನುವನ್ನು ತನುಮನೋಭಾವದೊಳು ಬಿಂಬಿಸುವ ಶರಣರ ವಚನಗಳಿಂದಲೂ ತುಂಬಿ ತುಳುಕಿ "ಸುತ್ತಿ ಸುತ್ತಿ ಬಂದೊಡಿಲ್ಲ, ಲಕ್ಷ ಗಂಗೆ ಮಿಂದೊಡಿಲ್ಲ, ಮೇರು ಗಿರಿಯ ಮೆಟ್ಟಿ ಮೇಲೆ ನಿಂದು ಕೂಗಿದೊಡಿಲ್ಲವಯ್ಯಾ, ನಿಚ್ಚ ನೇಮದಿಂದ ತನುವ ಮುಟ್ಟಿಕೊಂಡರಿಲ್ಲವಯ್ಯ, ನಿಚ್ಚ ನಿಚ್ಚ ನೆನೆವ ಮನವನರಿದಂದಿಂಗೆ ಅತ್ತ ಇತ್ತ ಹರಿಯಲೀಯದೆ ಚಿತ್ತೈಕಾಗ್ರತೆಯಾಗಿ ನಿಲಿಸಬಲ್ಲಡೆ ಬಚ್ಚ ಬರಿಯ ಬೆಳಗು ಕಾಣಾ ಗುಹೇಶ್ವರಾ." ಎಂಬದಾಗಿ ಮುಂಬರಿಸುತ್ತಿತ್ತು. ಒಟ್ಟಿನಲ್ಲಿ "ಕಾಯಕವೇ ಕೈಲಾಸ"ವೆಂಬ ಶ್ರೀ ಬಸವನ ತತ್ವವು ನಿದರ್ಶನಕ್ಕೆ ಬಂದು ಸಂಸಾರ ಭ್ರಾಂತಿಯ ಕ್ರಾಂತಿಯಾಗಿ ಶಾಂತಿ ಕಾಂತಿಯು ಕಣ್ಣೆದುರು ಕಾಣಿಯುತ್ತಿತ್ತು.

ಶಿವಶರಣರ ವಚನಸಾಹಿತ್ಯವನ್ನು ಸಂಗ್ರಹಿಸಿ ವೀರಶೈವ ಮತದ ಶಿವಭಕ್ತಿ, ಶಿವಜ್ಞಾನ, ಶಿವಾಚಾರ, ಶಿವಧ್ಯಾನ, ಶಿವಯೋಗಗಳ ಅರುಹು, ಕ್ರಿಯಾಚಾರಗಳ ಪ್ರಚಾರಪಡಿಸುವ ಧರ್ಮ ಸಂಸ್ಕೃತಿಯ ವಚನ ಭಾಂಡಾರವನ್ನು ಶಿವಾನುಭವ ಪತ್ರಿಕೆಯ ಮುಖಾಂತರ ಪ್ರಚುರಪಡಿಸುತ್ತ ೮೦ ರ ವರೆಗೆ ಗ್ರಂಥ ಪ್ರಕಟನೆಯನ್ನು ಒಬ್ಬರೇ ಸಮಾಜ ಸೇವೆಯನ್ನು ಒಂದೇ ಸವನೆ ಮಾಡಿ ಕರ್ಮಯೋಗಿಯೆನಿಸಿದ ರಾವಬಹಾದ್ದೂರ ಹಳಕಟ್ಟಿ ವಕೀಲರು ವಚನಸಾಹಿತ್ಯದ ಪಿತಾಮಹರೂ ಡಾಕ್ಟರ ಪದವಿಯ ಪೊಂದಿದವರೂ ಶಿವಾನುಭವ ಮಂಟಪದ ಮಹಾ ಶಿವಾನುಭವ ಸಂಸ್ಥೆಗಳ ತಳಹದಿಯನ್ನು ಂಟುಮಾಡಿದವರೂ ಇದೇ ಧಾರವಾಡದ ನಿವಾಸಿಗಳೂ ಆಗಿರುವರೆಂಬ ಅಭಿಮಾನ ವಹಿಸಿ, ಇಲ್ಲಿಯ ಅಖಿಲ ಭಾರತ ಶಿವಾನುಭವ ಸಂಸ್ಥೆಯವರು ತಮ್ಮ ವಾರ್ಷಿಕೋತ್ಸವದಲ್ಲಿ ಮಾನಪತ್ರ ಕೊಟ್ಟದ್ದು ಪ್ರಶಂಸನೀಯವಾದದ್ದು. ಆದರೆ ಎಷ್ಟೋ ಮುಪ್ಪಿನ ಮುಂಚಿನ ಪದವೀಧರರು ರಾವಬಹಾದ್ದೂರರವರಿಗೆ 'ಸಮಾಜಕ್ಕಾಗಿ ದುಡಿದು ಮುಪ್ಪಾದರೂ ಉತ್ಸುಕತೆ, ಸಾಹಸ,

ವಿಶ್ವಧರ್ಮದ ಅಭಿಮಾನ, ಆಕಾಂಕ್ಷೆ, ಸಂಶೋಧನೆ, ಹಳೇ ಗ್ರಂಥಗಳ ಸಂಗ್ರಹದ ಸಾಹಿತ್ಯಗಳ ಮೂಲಭೂತವಾದ ವೀರಶೈವ ಮತದ ಶಿವಸೂತ್ರ, ಶಿವಗೀತೆ, ಶಿವಾಗಮಗಳ ಪ್ರಸ್ಥಾನತ್ರಯಗಳಿಂದೊಡಗೂಡಿದ ಶಿವಶರಣರ ಆದಿ, ಅನಾದಿ ತತ್ವದರ್ಶಕ ಗ್ರಂಥವನ್ನು ಬರೆಯಲು ಸೂಚಿಸಿರುವರು. ಆದರೆ ಅದಕ್ಕೆ ಬೇಕಾದ ನಿಧಿಯನ್ನು ಸಮಾಜವೂ, ಸಮಾಜಸೇವೆಗೈಯ್ಯುವ ಪಂಚಾಚಾರರೂ, ಶಿವಯೋಗಿಗಳೂ, ಜಗದ್ಗುರುಗಳೂ ಕೂಡಿ ಕೀರ್ತಿ ಪಾತ್ರರಾಗಬೇಕೆಂದು ಬಯಸುವೆ.

ನಮ್ಮೀ ಭಾರತ ಭೂಮಿಯಲ್ಲಿ ಇತಿಹಾಸದ ಸಕ್ರಮವಾದ ಸಂಗತಿಗಳು ದೊರೆಯಲು ಶಿಲಾಲೇಖನಗಳೂ, ತಾಮ್ರಪಟಗಳೂ, ಕೊರೆದ ಜೈನ ಮಂದಿರಗಳೂ, ಶಿವಾಲಯಗಳೂ, ವೀರಶೈವ ರಾಜ ಮನೆತನಗಳೂ, ಶಿವಯೋಗಿಗಳ ಸ್ಥಾನಗಳೂ, ಆಯಾ ರಾಜ ಮನೆತನದ ವಂಶಾವಳಿಗಳೂ, ಗ್ರಾಮಾಂತರ ನಾಮಗಳೂ ಸಹಾಯಕಾರಿಯಾಗಿವೆ. ಇಂಥ ಐತಿಹಾಸಿಕ ಸಂಗತಿಗಳನ್ನು ಸಂಶೋಧಿಸಿ ಬರೆಯಲು ನಿಧಿಯು ಬೇಡವೇ? ವಿಶ್ವಧರ್ಮವೆಂದೆನಿಸುವ ವೀರಶೈವ ಮತದ ಸಂಸ್ಕೃತಿಯುಳ್ಳ ವೇದಗಳ ನಾದ, ಆಗಮಗಳ ಆಚಾರ, ಕ್ರಿಯೆಗಳ ಪ್ರಚಾರ, ಪಂಚಾಚಾರ ದ್ವಾದಶಾಚಾರಗಳ ನಡವಳಿಕೆ, ಅಷ್ಟಾವರಣಗಳ ಅರುಹು, ೨೫ ತತ್ವಗಳ ವಂಚನೆಗಳನತಿಗಳೆವ ಹಂಚಿಕೆ, ३६ ತತ್ವಗಳ ಗೊತ್ತು ಗುರಿ, ಷಟ್‌ಸ್ಥಲಗಳ, ಷಟ್‌ಚಕ್ರಗಳ ಅರ್ಥಾತ್ ಷಟ್ಚಕ್ರಗಳ ಅನುಭವ, ನೂರೊಂದು ಸ್ಥಲಗಳ ತಟ್ಟು ಮುಟ್ಟುಗಳ ಸಾಧನ ಸಾಮಗ್ರಿಗಳು ಭಕ್ತಾದಿಗಳಿಗೂ ವೀರ ಮಾಹೇಶ್ವರರಿಗೂ ಆಗಬೇಕಲ್ಲವೇ? ಈಗ ಡಾ॥ ಹಳಕಟ್ಟಿಯವರ ३೦ ವರ್ಷಗಳ ಪ್ರಯತ್ನದಿಂದ ರಗಳೆಗಳೂ, ವಚನಶಾಸ್ತ್ರಗಳೂ, ಸಾಂಗತ್ಯಗಳೂ, ಚರಿತ್ರೆಗಳೂ, ಶೂನ್ಯ ಸಂಪಾದನೆಯ ಕೆಲಭಾಗಗಳೂ ಕೂಡಿ ಅಜಮಾಸು ೮೦ ಗ್ರಂಥಗಳು ಅಚ್ಚು ಹಾಕಲ್ಪಟ್ಟದ್ದು ಅವುಗಳ ಪುನರ್ಮುದ್ರಣಕ್ಕೆ ಹಣ ಬೇಡವೇ? ಇದನ್ನೆಲ್ಲ ನಮ್ಮ ಸಮಾಜ ಬಾಂಧವರು ವಿಚಾರ ವಿನಿಮಯ ಮಾಡಿ ವೀರಶೈವ ಸಂಸ್ಕೃತಿಗೆ ಸಹಾಯವನ್ನೀಯದೆ ಇರಲಾರರೆಂದು ನಂಬಿರುವೆ.

ನಮ್ಮ ವೀರಶೈವ ಮುಖಂಡರಿಂದಲೂ ಶಿವಯೋಗಿಗಳ ಹಸ್ತಪರುಷದಿಂದಲೂ ನಮ್ಮೀ ಕರ್ನಾಟಕದ ಮುಖ್ಯ ಸ್ಥಳಗಳಲ್ಲಿ ಹಾಯಸ್ಕೂಲಗಳೂ, ಕಾಲೇಜಗಳೂ ಸ್ಥಾಪಿಸಲ್ಪಟ್ಟದ್ದು ಅವುಗಳಿಂದ ಎಷ್ಟೋ ವಿದ್ಯಾರ್ಥಿಗಳು

ಸುಶಿಕ್ಷಿತರಾಗಿ ರಾಜಕೀಯ ರಂಗದಲ್ಲಿಯೂ ಸಂಘ ಸಂಸ್ಥೆಗಳಲ್ಲಿಯೂ ಮುಂದಿರಿದು ಕಾರ್ಯಮಾಡುತ್ತಿದ್ದದ್ದು ಸಂತೋಷದ ಸಂಗತಿಯು. ಆದರೆ ಎಷ್ಟೋ ಪದವೀಧರರು ಪ್ರಸಾದನಿಲಯಗಳಲ್ಲಿದ್ದುಕೊಂಡು ವೀರಶೈವ ಫಂಡಿನ ಸಹಾಯವನ್ನು ಪಡೆದಿದ್ದರೂ ದೇವರು ಸಂಪತ್ಸಮೃದ್ಧಿಯನ್ನಿತ್ತರೂ ಇಂಥ ಸಮಾಜ ಕೆಲಸಕ್ಕೆ ತನು ಮನ ಧನಗಳಿಂದ ಸಹಾಯ ಮಾಡಿ, ತಮ್ಮ ಮುಂದಿನ ಪೀಳಿಗೆಯೂ ಸುಸಂಸ್ಕೃತರಾಗಿ ಬಾಳಲು ಮಾರ್ಗದರ್ಶಿಗಳಾಗಬೇಕು. ಹಾಗು "ಆದಿ ಪೋಟೋಬಾ ಮಗ ವಿಠೋಬಾ" ಎಂಬ ಮರಾಠಿ ಗಾದೆಯ ಮಾತಿನಂತೆ ಸದ್ಯದ ಪರಿಸ್ಥಿತಿಗನುಸಾರವಾಗಿ ಮೂರು ಸಾವಿರ ಮಠದ ಶ್ರೀ ನಿ. ಪ್ರ. ಸ್ವಾಮಿಗಳು ಹುಬ್ಬಳ್ಳಿಯಲ್ಲಿ ಅನೇಕ ಕಾಲೇಜಗಳನ್ನೂ ಪ್ರಸಾದ ನಿಲಯಗಳನ್ನೂ ಸ್ಥಾಪಿಸಿದ ಸಂಗತಿಯನ್ನು ಮನದಂದರೆ ಬ್ರಹ್ಮಶಿಖಾ ಪಶ್ಚಿಮ ಚಕ್ರಗಳಲ್ಲಿ ಬೆಳಗುವ ನಿಃಕಲ ನಿಶ್ಶೂನ್ಯ ನಿರಂಜನ ಲಿಂಗಸಂಗ ಸಾಮರಸ್ಯಗಳಿಂದ ಸಕಲ, ಸಕಲ ನಿ:ಕಲ, ನಿಃಕಲ ಸ್ಥಲಗಳ ಮೂರು ಸಹಸ್ರ ಕಿರಣಗಳ ಪ್ರಭಾವವೆಂದೇ ಯಾರು ಅನ್ನರು ? ಇಂಥ ಕೊಡುಗೈ (ಹಸ್ತಪರುಷ) ಮೂರ್ತಿಗಳು ಸಮಾಜದ ಅಂತಃಪುಧಾರಣೆಯ ಮಹತ್ವವನ್ನರಿತು, ಸಮಾಜವು ಚಿದ್ರೂಪ, ಚಿತ್ಪ್ರಕಾಶ, ಚಿನ್ಮಯಿಗಳಾಗಲು ಸಹಾಯಧನವನ್ನಿತ್ತು ಅಖಿಲ ಭಾರತವು ನೀತಿ, ಕ್ರಿಯೆ, ಜ್ಞಾನಗಳಿಂದ ಬೆಳಗಿ ಚಿದಾನಂದರೂಪಾಗಿ ಶ್ರೀ ಬಸವನ ಬೆಳಗು ಪುನಃ ಪ್ರಕಾಶಿಸುವಂತೆ ದಯಪಾಲಿಸದೆ ಇರರೆಂದು ಅನನ್ಯ ಭಕ್ತಿಪೂರ್ವಕ ಹಾರೈಸುತ್ತೇವೆ.

|| ಶ್ರೀ ಗುರು ಬಸವಲಿಂಗಾಯನಮಃ ||

ಧಾರವಾಡ ಹಾವೇರಿ ಪೇಟೆ ಶ್ರೀ ಮುರುಘಾಮಠದಲ್ಲಿ ನೆಲೆಸಿರುವ

ಮಹಾ ತಪಸ್ವಿಗಳಾದ

ಶ್ರೀಮದಘಣಿ ಮುರುಘೇಂದ್ರ ಶಿವಯೋಗಿಗಳವರ ರಥೋತ್ಸವ ಸುಪ್ರಸಂಗದಲ್ಲಿ

ಚಿತ್ರದುರ್ಗ ಶ್ರೀಮಚ್ಚಿನ್ಮೂಲಾದ್ರಿ ಬೃಹನ್ಮಠ ಮಹಾ ಸಂಸ್ಥಾನಾಧಿಪತಿಗಳಾದ

ಶ್ರೀಮನ್ಮಹಾರಾಜ ಜಗದ್ಗುರು

**ಜಯವಿಭವ ಮುರುಘಾರಾಜೇಂದ್ರ ಮಹಾ ಸ್ವಾಮಿಗಳವರ**

ದಿವ್ಯ ಸನ್ನಿಧಿಯ ನೇತೃತ್ವದಲ್ಲಿ

**ಡಾ|| ಫಕೀರಪ್ಪ ಗುರುಬಸಪ್ಪ ಹಳಕಟ್ಟಿ,**

ಬಿ. ಏ. ಎಲ್. ಎಲ್. ಬಿ., ಡಿ.ಲಿಟ್

ಶಿವಾನುಭವ ಮಾಸಪತ್ರಿಕೆ ಹಾಗು ನವಕರ್ನಾಟಕ ವಾರಪತ್ರಿಕೆಗಳ ಸಂಪಾದಕರು, ವಿಜಾಪುರ ಇವರಿಗೆ

# ಸನ್ಮಾನ ಪತ್ರಿಕೆ



**ಮಾನ್ಯರೇ,**

ಪರಮ ಪೂಜ್ಯ ತ್ರಿವಿಧ ದಾಸೋಹ ಮೂರ್ತಿಗಳಾದ ಪ್ರಣವಸ್ವರೂಪಿ ಮೃತ್ಯುಂಜಯ ಮಹಾ ಸ್ವಾಮಿಗಳವರ ಕೃಪಾಪೂರ್ಣ ಅಪ್ಪಣೆಯ ಮೇರೆಗೆ ಈ ಶುಭಸಮಯದಲ್ಲಿ ಧಾರವಾಡದಲ್ಲಿ ಕಳೆದ ಮುಕ್ಕಾಲು ಶತಮಾನದ ಹಿಂದೆ ಜನ್ಮವೆತ್ತಿ, ಸಾಹಸಪೂರ್ಣ ಸಾಧನೆಯಿಂದ ಆಂಗ್ಲವಿದ್ಯಾ ಪದವೀಧರರೆನಿಸಿ ತಮ್ಮ ಮನೆತನಕ್ಕೂ ಜನ್ಮವೆತ್ತಿದ ಊರಿಗೂ ನಾಡಿಗೂ ಚಿರನೂತನ ಕೀರ್ತಿ ತಂದಿರುವ ತಮ್ಮನ್ನು ಬರಮಾಡಿಕೊಂಡು ಗೌರವಿಸುವ ಸುಯೋಗವು ಒದಗಿ ಬಂದುದಕ್ಕಾಗಿ ನಮ್ಮೆಲ್ಲರಿಗೂ ಮಹದಾನಂದವಾಗಿದೆ.

ಶಿಕ್ಷಣ ಪ್ರೇಮಿಗಳೂ, ಸುಸಂಸ್ಕೃತರೂ ಆದ ತಾವು ವಿಜಾಪುರದಲ್ಲಿ ವಕೀಲಿವೃತ್ತಿಯನ್ನು ಅವಲಂಬಿಸಿ, ಸಾಕಷ್ಟು ನಾಮಾಂಕಿತರಾದುದೂ,

ಸಿದ್ಧೇಶ್ವರ ಹಾಯಸ್ಕೂಲಿನಂತಹ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದುದೂ ಶ್ರೀ ಸಿದ್ಧರಾಮೇಶ್ವರ ದೇವಾಲಯ ಜೀರ್ಣೋದ್ಧಾರ ಕಾರ್ಯದಲ್ಲಿ ಮುಖಂಡರೆನಿಸಿ, ಭವ್ಯ ಮಂದಿರ ರಚಿಸಿದುದೂ ವಿಜಾಪೂರ ವೈಭವಕ್ಕೆ ತಕ್ಕಂತೆ ಲಿಂಗಾಯತ ಮಹಾ ಭವನ (ಶಫರ್ಡ ಹಾಲ) ನಿರ್ಮಿಸಿದುದೂ ಜನಜಾಗ್ರತೆಗಾಗಿ ನವಕರ್ನಾಟಕ ವಾರ ಪತ್ರಿಕೆಯನ್ನೂ, ಶರಣ ಸಂಸ್ಕೃತಿಯ ರಕ್ಷಣೆ ಪೋಷಣೆ ಬೆಳವಣಿಗೆಗಾಗಿ ಶಿವಾನುಭವ ಮಾಸ ಪತ್ರಿಕೆಯನ್ನೂ, ತಮ್ಮದೇ ಆದ "ಹಿತಚಿಂತಕ" ಅನ್ವರ್ಥಕ ಮುದ್ರಣಾಲಯದಲ್ಲಿ ಪ್ರಾರಂಭಿಸಿ ಇದುವರೆಗೆ ನಡೆಯಿಸುತ್ತಿರುವದೂ ಇವೇ ಮೊದಲಾದ ತಾವು ಮಾಡಿದ, ಮಾಡುತ್ತಿರುವ ಮಹತ್ಕಾರ್ಯಗಳನ್ನು ನೆನೆದರೆ ವೀರಶೈವ ಸಮಾಜದ ಹಾಗೂ ಕರ್ನಾಟಕ ಅಭ್ಯುದಯಕ್ಕಾಗಿ ಶಾಶ್ವತವಾದ ಜನಹಿತ ಕಾರ್ಯಗೈದ ಮಹಾ ಪುರುಷರ ಮಾಲಿಕೆಯಲ್ಲಿ ಚಿರಸ್ಮರಣೀಯವಾದ ವ್ಯಕ್ತಿತ್ವವನ್ನು ನಿರ್ಮಿಸಿಕೊಂಡವರಲ್ಲಿ ತಾವು ಸುಪ್ರಸಿದ್ಧರಾಗಿದ್ದೀರಿ.

ಕಳೆದ ಐವತ್ತು ವರ್ಷಗಳ ಹಿಂದೆ ಕನ್ನಡ ಭಾಷೆಯು ಹಿರಿಯ ಕಲ್ಪನೆ ಬಾರದೆ ಪ್ರೀತಿಗೌರವಗಳು ಕುಂಠಿತವಾದ ಕಾಲದಲ್ಲಿ ನ್ಯಾಯಶಾಸ್ತ್ರದಲ್ಲಿ ಪರಿಣತೆಯನ್ನು ಪಡೆದ ತಾವು ಕೆಚ್ಚೆದೆಯ ಕಡುಗಲಿಗಳಾಗಿ ಕನ್ನಡ ಭಾಷೆಯಲ್ಲಿರುವ ಸತ್ವಗಾಂಭೀರ್ಯ ಮುಂತಾದ ಗುಣಗಳನ್ನು ಕನ್ನಡಿಗರಿಗೆ ಹಾಗೂ ಕನ್ನಡೇತರರಿಗೆ ತಿಳಿಯಪಡಿಸಲು, ಅಹೋರಾತ್ರಿ ಏಕಾಂಗಿ ವೀರನಂತೆ ಹೋರಾಡಿ ವಿಶ್ವಸಾಹಿತ್ಯಕ್ಕೆ ಕಾಣಿಕೆಯನ್ನು ಸಲ್ಲಿಸಿದ ವಚನಸಾಹಿತ್ಯವನ್ನೂ ಸತತೋತ್ಸಾಹಿಗಳಾಗಿ ಬೆಳಕಿಗೆ ತಂದು ವಚನಸಾಹಿತ್ಯವೆಂದರೆ, "ಹಳಕಟ್ಟಿ"ಯವರನ್ನು ನೆನಸದೆ ಗತ್ಯಂತರವಿಲ್ಲವೆಂಬ ಭಾವನೆಯುಂಟಾಗುವಂತೆ ಮಾಡಿದುದು ಸಾಮಾನ್ಯವಾದ ಮಾತೇ? ತಾವು ವಚನಸಾಹಿತ್ಯ ಪ್ರಕಟನೆ ಕಾರ್ಯವನ್ನು ಕೈಕೊಳ್ಳದೇ ಹೋಗಿದ್ದರೆ, ಭಕ್ತಿಭಾಂಡಾರಿ ಬಸವಣ್ಣನ ವಚನಧರ್ಮಸಾರ, ವಚನಶಾಸ್ತ್ರರಹಸ್ಯ, ಬಸವತತ್ವಪರಿಮಳ ಇವೇ ಮೊದಲಾದ ಗ್ರಂಥಗಳು ಬೆಳಕಿಗೆ ಬರುತ್ತಿದ್ದವೋ ಇಲ್ಲವೋ! ಪರಮತೀಯ ಪಂಡಿತರೂ ಸಹೃದಯರಾದ ವಿಮರ್ಶಕರೂ ಗಮನವೀಯುವಂತೆ ಹಿನ್ನೆಲೆಯನ್ನು ನಿರ್ಮಾಣ ಮಾಡಿದ ಸಮರ್ಥ ವ್ಯಕ್ತಿಗಳೂ, ವಚನಶಾಸ್ತ್ರ ಪಿತಾಮಹರೂ ತಾವು.

ತಾವು ಕರ್ನಾಟಕ ಏಕೀಕರಣ ಸಮ್ಮೇಲನ, ಕನ್ನಡಸಾಹಿತ್ಯ ಸಮ್ಮೇಲನ, ಅಖಿಲಭಾರತ ವೀರಶೈವ ಮಹಾಸಭೆ ಇವುಗಳಿಗೆ ಅಧ್ಯಕ್ಷರಾಗಿಯೂ

ಮುಂಬಯಿ ಶಾಸನ ಸಭೆ ಹಾಗು ಮುಂಬಯಿ ಮೈಸೂರ ಮತ್ತು ಕರ್ನಾಟಕ ವಿಶ್ವವಿದ್ಯಾಲಯದ ಸಭಾಸದರಾಗಿ, ಕನ್ನಡ ಪಠ್ಯಪುಸ್ತಕ ಸಮಿತಿಗಳಿಗೂ ವಿಶ್ವವಿದ್ಯಾಲಯದ ಕನ್ನಡ ಪರೀಕ್ಷಾ ಮಂಡಲಗಳಿಗೂ ಸದಸ್ಯರಾಗಿ ತಾವು ಸಲ್ಲಿಸಿದ ಸಾರ್ವಜನಿಕ ಹಾಗೂ ಸಾಹಿತ್ಯ ಸೇವೆಯು ನಮ್ಮೆಲ್ಲರಿಗೂ ಹೆಮ್ಮೆಯ ಮಾತಾಗಿದೆ. ಸಂಸಾರದೊಡನೆ ಸದ್ಗತಿಯನ್ನೂ ಸಾಧಿಸಿದ ಶಿವ ಶರಣರ ಉದಾತ್ತವಾದ ಸಂಪ್ರದಾಯವು ಇಂದಿನ ಮುಂದುಗಾಣದ ಜಗತ್ತಿಗೆ ಯಾವ ರೀತಿ ಸಂದೇಶವೀಯ ಬಲ್ಲದೆಂಬದನ್ನೂ ತಮ್ಮ ನಡೆನುಡಿಯಿಂದ ಗುರುತಿಸಕೊಳ್ಳಬಹುದಾಗಿದೆ. ವಚನ ವಾಙ್ಮಯದಂತೆ ವೀರಶೈವರ ಹಿರಿಯಭಕ್ತ ಕವಿಯೂ ಕನ್ನಡ ಮಹಾಕವಿಯೂ ರಾಷ್ಟ್ರ ಕವಿಯೂ ಆದ ಹಂಪೆಯ ಹರೀಶ್ವರನ ಕೃತಿಗಳಲ್ಲಿ ಬಹುಭಾಗವನ್ನೂ ಬೆಳಕಿಗೆ ತಂದು ತ್ಯಾಗ ಬುದ್ಧಿಯಿಂದ ಶಿವಾನುಭವ ಸಾಹಿತ್ಯ ಪ್ರಸಾರದ ಮೂಲಕ ಕನ್ನಡ ನಾಡಿನ ಜನಾಂಗದ ಸೇವೆಯನ್ನು ತ್ರಿಕರಣ ಪೂರ್ವಕ ಮಾಡುತ್ತಿರುವ ಆದರ್ಶ ಕರ್ಮಯೋಗಿಗಳಾದ ತಮಗೆ ನಾವು ಎಷ್ಟು ಗೌರವವನ್ನು ಸಲ್ಲಿಸಿದರೂ ಕಡಿಮೆಯೇ ಸರಿ.

ತಾವು ಮಾಡಿದ ಅಳತೆಗೆ ತೂಕಕ್ಕೆ ನಿಲುಕದ ಸಾಹಿತ್ಯ ಸೇವೆಯನ್ನು ಮೆಚ್ಚಿ ಕನ್ನಡನಾಡು ಒಂದಾದ ಕಾಲಕ್ಕೆ ಕರ್ನಾಟಕ ವಿಶ್ವವಿದ್ಯಾಲಯದವರು "ಡಾಕ್ಟರ" ಪದವಿಯನ್ನು ಕೊಟ್ಟದ್ದು ತುಂಬಾ ಸ್ತುತ್ಯವಾಗಿದೆ. ಕರ್ನಾಟಕ ವಿಶ್ವವಿದ್ಯಾಲಯವೇ ಏಕೆ? ಯಾವದೇ ವಿಶ್ವವಿದ್ಯಾಲಯದವರೂ ಈ ಮೊದಲೇ ತಮ್ಮನ್ನು ಇದೇ ವಿಧವಾಗಿ ಗೌರವಿಸಬಹುದಾಗಿತ್ತು. ಆದರೆ ಸ್ವತಂತ್ರ ಕರ್ನಾಟಕ ಪ್ರಾಂತ ನಿರ್ಮಾಣವಾದ ಬಳಿಕ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಆ ಭಾಗ್ಯಬಂದುದು ಇನ್ನೂ ವಿಶೇಷವೆಂದು ಬಗೆಯುತ್ತೇವೆ.

ಈ ಪ್ರಸಂಗದಲ್ಲಿ ಕಳೆದ ನಾಲ್ವತ್ತು ವರ್ಷಗಳಿಂದ ಇಲ್ಲಿ ಮಹಾತಪಸ್ವಿಗಳ ಕೃಪಾಬಲದಿಂದ ತ್ರಿವಿಧದಾಸೋಹ ಮೂರ್ತಿಗಳೂ ಸಮಾಜೋದ್ಧಾರಕರೂ ಆದ ಶ್ರೀ. ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳವರ ನಿರಂತರ ಮಾರ್ಗದರ್ಶನದಿಂದಲೂ ಶ್ರೀ ಜಗದ್ಗುರು ಮುರಘರಾಜೇಂದ್ರ ಪ್ರಸಾದ ನಿಲಯದ ಮೂಲಕ ಸಮಾಜದ ವಿದ್ಯಾಭಿವೃದ್ಧಿಯು ಬಾಲಲೀಲಾ ಮಹಾಂತ ಶಿವಯೋಗಿಗಳವರ ಗ್ರಂಥಮಾಲೆಯ ಮೂಲಕ ಕನ್ನಡ ಸಾಹಿತ್ಯದಲ್ಲಿ ವೃದ್ಧಿಯು ನಡೆದಿರುವದನ್ನು ತಮ್ಮ ಅವಗಾಹನೆಗೆ ತರಬಯಸುತ್ತೇವೆ.

ಕೊನೆಯದಾಗಿ ನಮ್ಮ ಆಮಂತ್ರಣವನ್ನು ಅಂಗೀಕರಿಸಿ ಇಲ್ಲಿಗೆ ಆಗಮಿಸಿ ಇಂದಿನ ಮಹದಾನಂದಕ್ಕೆ ಇಂಬುಗೊಟ್ಟ ತಮಗೆ ನಾವು ಉಪಕೃತರಾಗಿರುವೆವು. ಶ್ರೀ ಶಿವಯೋಗೀಶ್ವರನು ತಮಗೆ ಇನ್ನೂ ಬಹುಕಾಲ ಶರಣ ಸಂಸ್ಕೃತಿಯ ಸೇವೆ ಮಾಡಲು ಉತ್ಸಾಹಶಕ್ತಿಯನ್ನೂ ಆಯುರಾರೋಗ್ಯ ಭಾಗ್ಯಗಳನ್ನೂ ಅನುಗ್ರಹಿಸಲೆಂದು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ಶ್ರೀಮುರುಘಾಮಠ
ಹಾವೇರಿಪೇಟಿ
ಧಾರವಾಡ
೬-೨-೧೯೫೭.

ಶ್ರೀ ಶಿವಯೋಗೀಶ್ವರ
ಜಾತ್ರಾ ವ್ಯವಸ್ಥಾಪಕ ಮಂಡಳಿಯವರು

# ಡಾ. ರಾವಬಹಾದ್ದೂರ ಹಳಕಟ್ಟಿಯವರ

## ಕಾಯಕದ ಕೀರ್ತಿ.

(೧)

### ಕಂದಪದ್ಯಗಳು

ಗುರುಸೇವಾ ಸತ್ಪಥವಂ ।
ಹರಪೂಜಾ ಸತ್ಕ್ರಿಯೆಗಳ ಸಂಧಾನಗಳಂ॥
ಪರಶಿವ ಭಕ್ತಿತ್ರಯವಂ ।
ಪರಮ ಶ್ರೀ ವೀರಶೈವ ಮತ ಬೋಧಿಪೆನೀಂ ॥೧॥

ನಿತ್ಯಾಚಾರದ ನಿಯಮಂ ।
ಸತ್ಯಾಚಾರದ ಸುಲಲಿತ ಸಮಯಾಚಾರಂ ॥
ಭೃತ್ಯಾಚಾರದ ಬಲಮಂ ।
ಶ್ರುತ್ಯಾಚಾರವ ಬಿಡದ ತೆರದೆ ಬೋಧಿಪೆನೀಂ ॥೨॥

ಕರ್ಮಾಕರ್ಮವ ತಿಳಿಸುತ ।
ಧರ್ಮಾಧರ್ಮವನರಿಪುವ ಪತ್ರಿಕೆಯಿಂ ॥
ಮರ್ಮಜ್ಞಾನಾಚಾರವೆ ।
ಚರ್ಮಾಂಬರಧರಸೊಳೈಕ್ಯವಾಗಲು ಪೇಳ್ವೆಂ ॥೩॥

ಭಾವಾಭಾವದ ಗತಿಯಂ ।
ಜೀವಾಜೀವದ ಸ್ಥಿತಿಯ ಶಿವಾನುಭವದಿಂದಂ ॥
ಸೇವಾಸೇವ್ಯದ ಮತಿಯಿಂ ।
ದೇವಾನುಗ್ರಹ ಪಡೆಯುವ ಪರಿಯನರುಹಿದ್ವೈ ॥೪॥

ಗುರುಬಸವಾರ್ಯ ಸುಪುತ್ರಾ ।
ಶರಣರ ಮಾರ್ಗವನರಹುವ ಫಕ್ಕೀರಾರ್ಯಾ ॥
ವರ ಕನ್ನಡ ಸಾಹಿತ್ಯವ ।
ಸರಸದಿ ಪಸರಿಸಿ ಪೆಸರವ ನಾಂತೆಯ್ ನಾಡೊಳ್ ॥೫॥

(೨)

ಭಾವಾಭಾವದ ಗತಿಯಂ ।
ಜೀವಾಜೀವದ ಶಿವಾನುಭಾವಸ್ಥಿತಿಯಂ ॥
ದೇವಾನುಗ್ರಹಮತಿಯಂ ।
ಸೇವಾ ಸತ್ಕ್ರಿಯೆ ಸುಬೋಧಕೃತ ಪತ್ರಿಕೆಯಿಂ ॥೧॥

ಗುರುಕರುಣಾಮೃತದಿಂದಂ ।
ಗುರುಬಸವಾರ್ಯನ ಸುಪುತ್ರ ಫಕ್ಕೀರಾರ್ಯಂ ॥
ಶರಣರ ಸಮ್ಯಜ್ಞಾನವ ।
ನರುಹುವ ವರ ವಚನ ಶಾಸ್ತ್ರಗಳ ಮುದ್ರಿಸಿದಂ ॥೨॥

ಪರತರ ಮುಕ್ತಿಯ ಮೂಲಂ ।
ಪರಮಶ್ರೀ ವೀರಶೈವ ಷಟ್‌ಸ್ಥಲಕೀಲಂ ॥
ನಿರುಪಮ ನಾಳ ಸಕೀಲಂ ।
ಶರಣರ ನುಡಿಯಂ ಪಸರಿಪ ಕೀರ್ತ್ಯನುಕೂಲಂ ॥೩॥

ಪೂರ್ವಾಚಾರರ ಪುಣ್ಯದೆ ।
ಸರ್ವಾಚಾರವ ಪಹಿಸುತ ಧರ್ಮದೆ ನಡೆಯಲ್ ॥
ಕರ್ಮಾಕರ್ಮವ ತಿಳಿಯುತ ।
ಚರ್ಮಾಂಬರಧರನೊಳೈಕ್ಯವಾಗಲು ಸಾಧ್ಯಂ ॥೪॥

ಶರಣರ ಶುದ್ಧಾಚರಣೆಯ ।
ನಿರುಪಾಧಿಕ ನಿಜನಿವಾಸ ನಿಸ್ಸೀಮತೆಯಂ ॥
ಪರಶಿವಯೋಗ ಸಮಾಧಿಯ ।
ಭರದಿಂ ಬೈಲಿಗೆಳೆದಂಗೆಯಾನತನಪ್ಪೆಂ ॥೫॥

ಸದ್ಭಕ್ತ
ಸಿ. ನಾ. ಮಹಾಂತಣ್ಣವರ

# ಅಂದು ಇಂದು ಮುಂದಿನ ವೀರಶೈವ

(ಲೇಖಕರು:- ಶ್ರೀ ಸಾಧು ಶರಣರ ಸೇವಕ)

ಈ ಭೂಗೋಲದಲ್ಲಿ ಉದ್ಭಿಜಾದಿ ನಾಲ್ಕು ಪ್ರಕಾರದಿಂದ ಚರಾಚರ ವಸ್ತು ಪ್ರಪಂಚದ ಉತ್ಪತ್ತಿಯನ್ನು ಅವುಗಳ ಸಂಖ್ಯೆಯನ್ನು ಪ್ರಾಚೀನ ಋಷಿಗಳು ಎಂಭತ್ತುನಾಲ್ಕು ಜೀವರಾಶಿಗಳೆಂದು ಉಲ್ಲೇಖಿಸಿದ್ದಾರೆ. ಅದರಲ್ಲಿ ಪರಮಾತ್ಮನ ಮೂಲ ಸ್ವರೂಪವನ್ನು ಅರಿತು ಬಾಳಿ ಬೆಳಗಲು ಮಾನವ ಪ್ರಾಣಿಯೊಂದೇ ಅಧಿಕಾರಿಯು. ಹೀಗೆಂದ ಮೇಲೆ ಸಕಲರೂ ಏಕ ಕಾಲಕ್ಕೆ ಮುಕ್ತರಾಗುವರೆಂದು ಗ್ರಹಿಸುವದಲ್ಲ. ಅಂಥ ಮುಕ್ತಿ ಸುಖ ಬಯಸುವವರಲ್ಲಿ ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣರೆಂಬ ನಾಣ್ಣುಡಿಯಂತೆ ಸಾಧನ ಮಾಡುವವರು ಕೆಲವರು. ಅವರಲ್ಲಿ ಪೂರ್ಣ ಸಾಧಿಸುವವರು ಬಹು ವಿರಳ. ಸತ್‌ಪಥದಲ್ಲಿರುವವರು ಮುಂದೆ ಹಲಕೆಲವು ಜನ್ಮಾಂತರದಿಯಾದರೂ ಯಥಾರ್ಥ ಸ್ವರೂಪ ಜ್ಞಾನ ಮಾಡಿಕೊಳ್ಳುವವರು ಪುಣ್ಯವಿಶೇಷದಿಂದ ಉತ್ತರ ಲೋಕದಲ್ಲಿಯಾದರೂ ನಿರಧಿಕರಣ ದೀಕ್ಷೆಯಿಂದ ಸತ್ ಚಿತ್ ಸ್ವರೂಪ (ಪರಮಾತ್ಮನಲ್ಲಿ) ಲೀನರಾಗುವರು.

ಸದ್‌ವಸ್ತುವಿನ (ಪರಮಾತ್ಮನ) ಕಾಣಲು ಅನೇಕ ಮಾರ್ಗಗಳಾಗಿವೆ. ಅವಕ್ಕೆ ಧರ್ಮ, ಮತ, ಪಂಥ, ವರ್ಣ, ಜಾತಿ, ಆಶ್ರಮಾದಿ ಇನ್ನೂ ಏನೇನೋ ಪರಿಭಾಷೆಯ ಹೆಸರುಗಳಿವೆ. ಅವು ಮಾನವ ಪ್ರಪಂಚಕ್ಕೆಲ್ಲ ಒಂದೇ ಒಂದು ಮಾರ್ಗವಾಗದೆ ಅನೇಕ ಪ್ರಕಾರದ ಭೇದಾಕಾರವಾಗಲು ದೇಶ ಕಾಲಮಾನಕ್ಕನುಗುಣವಾಗಿ ಅನಂತ ಅವತಾರೀ ಋಷಿ ಮುನಿಗಳು ಅವನ್ನೆಲ್ಲ ರಚಿಸಿರುವರು. ಸಮುದ್ರವು ಎಲ್ಲ ನದಿಗಳಿಗೆ ನಿಲುಗಡೆಯ ಸ್ಥಾನವಿದ್ದ ಹಾಗೆ ಆ ಪರತರ ಸತ್ಯ ವಸ್ತುವೆ ಸಕಲಕ್ಕೂ ಅಧಿಷ್ಠಾನವಾಗಿರುವದು.

ಆದರೆ ಇಂದು ಪ್ರಸ್ತುತ ಸಮಯಕ್ಕೆ ಬೇಕಾದ ವೀರಶೈವ ಧರ್ಮದ ವಿಷಯವಾಗಿ ಪ್ರಸ್ತಾಪಿಸುವದು ಅವಶ್ಯವಿರುವದು. ಈ ಧರ್ಮ ಬಹು ಪ್ರಾಚೀನವಾದದ್ದು. ಇದಕ್ಕೆ ಪುರಾತನರ ವಚನಾಗಮಗಳೇ ಪ್ರಮಾಣ. ಇದು ಒಳ್ಳೇ ಊರ್ಜಿತಾವಸ್ಥೆಗೆ ೧೨ನೇ ಶತಮಾನದ ಶಿವಶರಣರಿಂದ ಎಂದು

ಧಾರಾಳವಾಗಿ ಹೇಳಲು ಏನೂ ಅಭ್ಯಂತರವಿಲ್ಲ. ಇದಕ್ಕೂ ಪ್ರಥಮ ಕ್ರಿ. ಶ. ಪೂರ್ವದಲ್ಲಿ ೫ ೬ ಹಾಗು ೯ನೇ ಶತಮಾನದಲ್ಲಿಯೂ ಈ ಧರ್ಮ ಇತ್ತೆಂದು ಆಧಾರದಿಂದ ಕಂಡು ಹಿಡಿದಿದ್ದಾರೆ. ಅಲ್ಲದೆ ಶೈವೋಪಾಸಕರು ಸ್ಥಾವರಲಿಂಗ ಪೂಜಾನಿಷ್ಠರಿದ್ದರೆಂಬ ಬಗೆಗೆ ಅಂದಿನಿಂದ ಇಂದಿನ ವರೆಗೆ ಇರುವ ಮಹಾ ಮಹಾ ತೀರ್ಥಕ್ಷೇತ್ರ ( ಜ್ಯೋತಿರ್ಲಿಂಗ ) ಗಳೇ ಆಧಾರ ವಾಗಿರುವವು.

## ಪರಮತಗಳ ಪ್ರಾಭಲ್ಯ

ವೈದಿಕ ಮತದ ಹೊರತು ಬೌದ್ಧ, ಜೈನ ಮೊದಲಾದ ಮತಗಳು ನಮ್ಮೀ ಭರತಖಂಡದಲ್ಲಿ ಮತಸಂಸ್ಥಾಪಕರಿಂದ ಸ್ಥಾಪಿಸಲ್ಪಟ್ಟವು. ಇದರಿಂದ ಮುಂದೆ ಎಷ್ಟೋ ಜನ ಸನಾತನ ವೈದಿಕ ( ವೀರಶೈವ ) ಮತದ ಕಟ್ಟು ನಿಟ್ಟಾದ ಕಾನೂನುಗಳಿಗೆ ತಲೆಬಾಗಲು ಮನಸ್ಸಿಲ್ಲದವರಾದರು. ಆ ಕಾಲ ದಲ್ಲಿ ( ೧೨ನೇ ಶತಮಾನದಲ್ಲಿ ) ಒಳ್ಳೇ ಪ್ರಸಿದ್ಧಿ ಹೊಂದಿದ ಲಿಂಗವಂತ (ವೀರಶೈವ) ಧರ್ಮದ ಮೇಲೆ ವರ್ಣಸಂಕರವೆಂಬ ಆರೋಪ ಕ್ರಾಂತಿಯಾ ಯಿತು. ಶಿವಶರಣರ ಮಾರ್ಗಾನುಯಾಯಿಗಳಿಗೆ ಅನೇಕ ಅಡೆತಡೆಗಳು ಬಂದವು. ಆಗ ಈ ಹೊಸ ಮತ ( ಜೈನ ಬೌದ್ಧ ) ಧರ್ಮದ ಪ್ರಭಾವಕ್ಕೆ ಜನರು ಸೇರಲು ಅನುವಾದರು. ಪರಮತೀಯರ ದಬ್ಬಾಳಿಕೆಗೆ ಭೀತಿಗೊಂಡ ಲಿಂಗಾಯತ ( ವೀರಶೈವ ) ಮತದವರು ಗುಪ್ತಾಗಿ, ಗುಟ್ಟಾಗಿ, ಹೆಚ್ಚಿನ ಆಡಂಬರಗೈಯ್ಯದೆ ವೇಷಭೂಷಣಕ್ಕೆ ವಿಶೇಷ ಅವಕಾಶವನ್ನೀಯದೆ, ಕಡಿಮೆ ಪ್ರಮಾಣದಲ್ಲಿಯಾದರೂ ಕೂಡಾ ತಮ್ಮ ಸತ್‌ಕ್ರಿಯಾದಿಗಳನ್ನು ಕಾಪಾಡಿ ಕೊಂಡು ಬಂದರು.

## ಮುಹಮುದೀಯರ ದಾಳಿ

ಭಾರತಕ್ಕೆ ಮುಹಮ್ಮದೀಯರು ರಾಜ್ಯದಾಸೆಯಿಂದ ದಂಡೆತ್ತಿಬಂದಾಗ ಹೊನ್ನು, ಹೆಣ್ಣಿನ ಮೇಲೆಯೂ ಕಣ್ಣಿಟ್ಟು ಮತ್ತು ಇಸ್ಲಾಮಿ ಧರ್ಮ ವನ್ನು ಹಿಂದುಸ್ಥಾನದಲ್ಲಿ ಬೆಳಸಲಿಕ್ಕೆ ಹತ್ತಿದರು. ತಮ್ಮ ಧರ್ಮಕ್ಕೆ ಜನರು ಬಲಿ ಬೀಳುವಂತೆ ಮಾಡಲುಪಕ್ರಮಿಸಿದರು. ಈ ಬಿಕ್ಕಟ್ಟಿನ ಸಮಯ ದಲ್ಲಿ ಲಿಂಗಾಯತ ಧರ್ಮ ಬದುಕಿದ್ದು ನಮ್ಮ ಪೂರ್ವಿಜರಾದ ಶಿವಶರಣರ ಕೃಪೆಯೆಂದೇ ಹೇಳಬೇಕು. ಯಾಕಂದರೆ ಎಲ್ಲ ತರಹದಿಂದಲೂ ತಮ್ಮ

ಸ್ವಾತಂತ್ರ್ಯವನ್ನು ಕಳೆದುಕೊಂಡ ಭಾರತೀಯರು, ಚಿತ್ರಪಟದ ಬೊಂಬೆಯ ಹಾಗೆ ಇರಬೇಕಾಗಿತ್ತು. ಎಂಥ ಬಿಕ್ಕಟ್ಟು ಇಕ್ಕಟ್ಟಿನ ಪ್ರಸಂಗದಲ್ಲಿಯೂ ವೀರಶೈವರು (ಲಿಂಗಾಯತರು) ನಿಜಾಚರಣೆಯನ್ನು ಸಾಗಿಸುತ್ತ ಬಂದದ್ದು ಸುಕೃತ.

## ಮತಸುಧಾರಕರೆನ್ನಿಸಿಕೊಳ್ಳುವವರು ಮಾಡಿದ ಅನ್ಯಾಯಗಳು.

ಬ್ರಿಟಿಷರ ಆಳಿಕೆ ಪ್ರಾರಂಭವಾಗಲು ರಾಣಿ ಸರಕಾರವು ಪ್ರತಿಯೊಂದು ಧರ್ಮಕ್ಕೆ ಕೆಲಮಟ್ಟಿಗಾದರೂ ಸ್ವಾತಂತ್ರ್ಯವೇ ಕೊಟ್ಟಿತು. ವೇದಗಳಲ್ಲಿ ಹೇಳಿದ ಹಾಗೆ ಬ್ರಹ್ಮಚರ್ಯ ಗೃಹಸ್ಥಾದಿ ಆಶ್ರಮಧಾರಿಗಳಾಗಲು ಅವಕಾಶ ದೊರೆತಿತು. ಮತ್ತು ಯುವಕನಾಗಲೀ ಯುವತಿಯಾಗಲೀ ಚನ್ನಾಗಿ ಬ್ರಹ್ಮಚರ್ಯವ್ರತವನ್ನು ಪಾಲಿಸುತ್ತ "ಗುರುಕುಲದಲ್ಲಿ" ಸಹ ವಿದ್ಯಾಭ್ಯಾಸಕ್ಕೆ ವಿಶೇಷ ಪ್ರೋತ್ಸಾಹನವಿತ್ತು. ಹಿಂದಿನ ಹಾಗೆ ವೀರಶೈವ ಧರ್ಮವನ್ನು ಶಿವಶರಣರ ರೀತಿ ನೀತಿಯಲ್ಲಿ ಸ್ತ್ರೀ ಪುರುಷರು ಸಮಾನ ಹಕ್ಕು ಬಾಧ್ಯತೆಯುಳ್ಳವರಾಗಿ ಆಚರಿಸತೊಡಗಿದರು. ಅಂದು ಯಾವರೀತಿ ಗುರುಕುಲ ಅಭ್ಯಾಸವಿತ್ತು ಇಂದು ಅದಿಲ್ಲದೆ ಅನ್ಯ ಸಂಸ್ಕೃತಿ ಆಚಾರ-ವಿಚಾರಗಳತ್ತ ಸಾಗಿ, ಶಾಲೆಕಾಲೇಜ ರೂಪದಿಂದ ಕೊಡುವ ವಿದ್ಯೆಯೇ ಬೇರೆಯಾಗಿದೆ. ಅಂದಿನಹಾಗೆ ಇಂದೂಕೂಡಾ ಸಹ ವಿದ್ಯೆಸಾಗಿಸಲು ಹೊಸ ಸುಧಾರಕರು ಹೊರಡಬಹುದೇ ? ಆಗಿನ ನಮ್ಮ ಸಮಾಜ ನೈತಿಕ ಸ್ಥಿತಿಯಲ್ಲಿ ಒಳ್ಳೇ ಪ್ರಗತಿಯನ್ನು ಪಡೆದಿತ್ತು. ಈ ಹೊತ್ತು ಪರಕೀಯರ ವೇಷಭೂಷಣಾದಿ ರೀತಿನೀತಿಗಳು ನೆಲೆಗೊಂಡಿರುವ ಕೃತಕ ವಾತಾವರಣದಲ್ಲಿ ಅನೈತಿಕ ಸ್ಥಿತಿಯ ಸಮಾಜ. ಅವರಿಂದ ಈಗ ಯಾವದೇ ಪ್ರಕಾರದ ಸಹ ವಿದ್ಯಾಭ್ಯಾಸದಿಂದ ಕೆಡಕುಗಳನ್ನು ಹೆಚ್ಚಾಗಿ ಕಾಣಬಹುದಲ್ಲವೆ ಹೊರತು ಸಫಲತೆ ತೋರಲರಿಯವು. ಮತ್ತು ಆಗ್ಗೆ ಉತ್ತಮ ಮತ ಸುಧಾರಕ ಗುರುಗಳು ಭಕ್ತರ ಕಲ್ಯಾಣಕ್ಕಾಗಿ ಹೆಣಗುತ್ತಿದ್ದರು.

"ಗುರುಸ್ಥಲವೆಂಬುದು ತಾನು ಸ್ವಯಂ ಜ್ಯೋತಿ ಪ್ರಕಾಶವು. ಅಂತಪ್ಪ ಸ್ವಯಂ ಜ್ಯೋತಿ ಪ್ರಕಾಶ 'ಭಾತಿ' ಎಂದು ಅದು ಜ್ಯೋತಿಯ ಹೊತ್ತಿಸಿದರೆ ಆ ಜ್ಯೋತಿ ತನ್ನಂತೆ ಮಾಡಿತ್ತು ಕೂಡಲ ಚನ್ನ ಸಂಗಮದೇವಾ."

ಪರಮತೀಯರ ದಬ್ಬಾಳಿಕೆಯಲ್ಲಿ ಲಿಂಗಾಯತ ಸಮಾಜವು " ಭವಿಗಳನ್ನು ನೋಡಲಾಗದು, ನುಡಿಸಲಾಗದು " ಎಂಬ ಕಟ್ಟುನಿಟ್ಟನ್ನು ರಚಿಸಿ ಗುಪ್ತವಾಗಿ ಹಾಗೆಯೇ ತನ್ನ ನಿಜಧರ್ಮಾಚರಣೆ ಕಾಪಾಡಿಕೊಳ್ಳುತ್ತ ಬಂದಿತು. ಇಂದು ಮತಪ್ರಚಾರಕರೆಂಬ ನಾಮಧಾರಿ ಗುರುವರ್ಗದವರಿಂದ ಅನೇಕ ಒಡಕುಗಳಾಗಿವೆ. ಕನ್ನಡನಾಡು, ಮೈಸೂರು, ಹೈದ್ರಾಬಾದ, ಮುಂಬೈಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಹಂಚಿ ಹರಿದು ಒಡಕಾಗಿದ್ದ ಹರಿಯಂತೆ ಸಮಾಜ ( ವೀರಶೈವ ) ದ ಗತಿಯಾಗಿದೆ. ಇಂದು ಸಕಲ ವೀರಶೈವ (ಲಿಂಗಾಯತ) ಸಮಾಜವು ಐಕ್ಯದಿಂದ ನಡೆದರೆ ಸೌಖ್ಯ. ಆದರೆ ಮತಪ್ರಚಾರಕರೆನ್ನುವವರೂ (ಸಮಾಜ ಸುಧಾರಕರೂ) ಸ್ವಾಮಿಗಳೂ(ಸನ್ಯಾಸಿಗಳೂ ವಿರಕ್ತ ಪಟ್ಟದವರಿಂದೂ, ಹೊಟ್ಟೇ ಪಾಡಿನ ಸ್ವಾರ್ಥ ಜೀವಿಗಳು ಹುಟ್ಟಿ ಅನಂತ ಪಂಗಡಗಳನ್ನು ಕಟ್ಟಿಕೊಂಡು ಶರಣರು " ಕಾಸಿ ಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ " ಎಂಬ ತತ್ವ (ಧರ್ಮತತ್ವ) ಕ್ಕೆ ಅಪಾರ್ಥ ಮಾಡುತ್ತ ಕುಲಛಲವೆಂಬ ಕಲಕು ಮನವಿಕ್ರಮ ಕ್ರಮೇಣ ಇವರಿಂದಲೆ ಅತಿ ಹೀನಾವಸ್ಥೆಗೆ ಸಮಾಜವನ್ನು ಮುಟ್ಟಿರುವರು.

> ಬ್ರಾಹ್ಮಣನಾಗಲಿ, ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ, ಆವ ಜಾತಿಯಲ್ಲಿ ಹುಟ್ಟಿದಾತನಾದರೂ ಆಗಲಿ, ಗುರುಕಾರುಣ್ಯವ ಪಡೆದು, ಅಂಗದ ಮೇಲೆ ಲಿಂಗವ ಧರಿಸಿದವನು ಆಚಾರ ಸಂಪನ್ನ ಸತ್ಕ್ರಿಯನಾದ ಮಹಾತ್ಮನೇ ಮೂರು ಲೋಕಕ್ಕೆ ಅಧಿಕಾರಿಯು ನೋಡಾ ಅಖಂಡೇಶ್ವರಾ."

ನಾನು ಹೆಚ್ಚು, ನೀನು ಕಡಿಮೆ, ನನ್ನದು ಈ ಕಾಯಕ, ನಿನ್ನದು ಆ ಕಾಯಕ, ನಾನು ಕಮ್ಮಾರ, ನೀನು ಕುಂಬಾರ ಹೀಗೆ ಅನಂತ ಜಾತಿಮತ ಉಚ್ಚ ನೀಚ, ಭ್ರಾಂತಿ ಭಾವನೆಗಳನ್ನು ಕಲ್ಪಿಸಿ, ಅಲ್ಪಸಂಖ್ಯಾಕರನ್ನು ಬಹುಸಂಖ್ಯಾಕರರು ತಮ್ಮ ವರ್ಚಸ್ಸು ಅಥವಾ ಪ್ರಭಾವಾದಿಗಳಿಂದ ಹೀನ, ದೀನ ದಲಿತ ವರ್ಗದವರನ್ನು ಗುಲಾಮರನ್ನಾಗಿ ಮಾಡಿಕೊಂಡು ಪಶುಪಕ್ಷಿ ತರು ಮರಗಳಿಗಿಂತಲೂ ನಿಕೃಷ್ಟ ದೃಷ್ಟಿಯಿಂದ ಕಾಣುತ್ತಲೂ ಮತ್ತು ಸೇವೆ ತೆಗೆದುಕೊಳ್ಳುತ್ತಲೂ ತಾವು ಗುರುಚರರೆಂಬ ಹಮ್ಮು ಬಿಮ್ಮುಗಳಿಂದ ಭೋಗಿಗಳಾಗಿ ಲೋಲಾಡುತ್ತ ವೀರಶೈವ ಸಮಾಜವನ್ನೇ ಅಧೋಗತಿಗೆ ತಳ್ಳಿದ (ಅಯ್ಯಗಳು) ವರು ನಿಜವಾದ ಧರ್ಮ ಸುಧಾರಕರೇ ?

ಪರಮತದ ರಾಜ ಸತ್ತೆ ಭಯಭೀತಿಗೊಂಡ ಸದ್ಭಕ್ತ (ಲಿಂಗವಂತ) ವೀರಶೈವ ಬಂಧುಗಳು ತಮ್ಮ ತಮ್ಮೊಳಗೆ ಕ್ರಿಯಾಚಾರಾದಿಗಳನ್ನು ಪರರಿಗೆ ತೋರಿದ ತೆರದಿ ಗುಪ್ತ ರೀತಿ ನೀತಿ, ಗತಿ ಮತಿಗಳ ಮೂಲಕ ಧರ್ಮ ಪಾಲನ ಪೋಷಣ ಮಾಡುತ್ತ ತಮ್ಮ ತಮ್ಮ ಅನುಕೂಲತೆಗಾಗಿ ಸಹಕಾಯ ಕೋದ್ದಿಮೆಗಳವರ ಸಂಗಡ ಶರೀರ (ವಿವಾಹ) ಸಂಬಂಧಾದಿ ಊಟೋಪ ಚಾರ ಪರಸ್ಪರ ಬೆಳಿಸಿದ್ದನ್ನು ಆಧುನಿಕ ಸಮಾಜ ಸುಧಾರಕ ವೇಷಧಾರಿ (ಅಯ್ಯ) ಗಳು ಸ್ವಾರ್ಥ ಸಂಕುಚಿತ ಬುದ್ದಿಯಿಂದ, ಇಲ್ಲದ ಅಲ್ಲ ಸಲ್ಲದ ಜಾತಿವಾದಗಳನ್ನು ಅಜ್ಞ ಜನರಲ್ಲಿ ಹರಡಿಸುವ ತಮ್ಮ ಅನುಕೂಲಪರವಾಗಿ ಬೋಧಮಾಡತೊಡಗಿದರು. ಅಲ್ಲದೆ ಧರ್ಮಗ್ರಂಥಗಳನ್ನು ತಿದ್ದುವೆನೆಂದು ಸದ್ಭಕ್ತರಿಂದ ದುಡ್ಡು ಗಂಗಾ ಪ್ರವಾಹದ ಹಾಗೆ ಸೆಳೆಯುತ್ತ, ಅಂದಿನಿಂದ ಇಂದಿನ ವರೆಗೆ ತಮ್ಮ ಕೈವಾಡ ನಡೆಯಿಸುತ್ತ ಸಾಗುತ್ತಿರುವದು ನಮ್ಮ (ಭಕ್ತರ) ಅಜ್ಞಾನ.

ಈ ದುರವಸ್ಥೆಯನ್ನು, ಧರ್ಮದ ಅವಹೇಳನವನ್ನು ಅರಿತು ೧೯ನೇ ಶತಮಾನದ ಕೊನೆಗೆ ಶ್ರೀ ಅಲ್ಲಮಪ್ರಭುವು ಪ್ರಥಮ ಧಾರವಾಡ ಜಿಲ್ಹಾ ನರಗುಂದ ಪೇಟಾ ಬನಹಟ್ಟಿ ಬೃಹನ್‌ಮಠದಲ್ಲಿ ಶ್ರೀ ಗುರುನಿರಂಜನ ರುದ್ರಸ್ವಾಮಿಗಳ ರೂಪದಿಂದ ಅವತರಿಸಿದನು. ಹಾಗು ಅನಂತ ಶರಣರನ್ನು ಪ್ರಾದುರ್ಭವಿಸಿದನು. ಇತ್ತೀಚೆಗೆ (೧೨ನೇ ಶತಮಾನದ ನಂತರ) ಎಷ್ಟೋ ಜನ ಪಟ್ಟ-ವಿರಕ್ತಸ್ವಾಮಿಗಳಾದರು. ಅವರಲ್ಲಿ ನಿಜವಾದ ವೀರಶೈವ (ಲಿಂಗಾಯತ) ಧರ್ಮತತ್ವ ಬಹುಜನ ಅರಿಯದವರಿದ್ದರೆಂದರೆ ಅತಿಶಯೋಕ್ತಿಯಾಗಲಾರದು. ಅವರು ಯಾರೂ ಉಳಿದ (ಕುರುಬ-ಕುಂಬಾರ) ಮೊದಲಾದ ಕಾಯಕದವರಿಗೆ ಶಿವ (ವೀರಶೈವ) ದೀಕ್ಷೆ ಗೈಯುತ್ತಿದ್ದಿಲ್ಲ. ಭಕ್ತರು ಭಕ್ತರಾಗಿಯೇ ಇರಬೇಕು. ತಾವು ಮಹೇಶ್ವರರು ಮಹೇಶ್ವರರಾಗಿಯೇ ಇರುವೆವೆಂದು ತಪ್ಪು ಕ್ರಿಯೋಪದೇಶವಿತ್ತರು.

"ಭಕ್ತನ ಕಾಯವೇ ಶಿವನಕಾಯ. ಶಿವನ ಕಾಯವೇ ಭಕ್ತನಕಾಯ. ಶಿವಶಿವಾ, ಭಕ್ತ ಬೇರೆ ಶಿವಬೇರೆಯೇ? ಒಂದೇ ಕಾಣಿರಣ್ಣಾ. ಅದೆಂತೆಂದೊಡೆ ಭಕ್ತದೇಹಿಕದೇವ, ದೇಹಿ ಭಕ್ತನೆಂದು ಶ್ರುತಿಹೊಗಳುವ ಕಾರಣ ಭಕ್ತರಿಗೂ ದೇವರಿಗೂ ಕಾಯ ಒಂದೇ, ಪ್ರಾಣ ಒಂದೇ ಎರಡೆಂಬ ಸಂಭಾವಿಯ ನುಡಿಯಲಾಗದು, ನಿಜಭಕ್ತರಾದವರು, ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ"

ಯಥಾರ್ಥ ತತ್ವವೇತ್ತರಾದ ಶ್ರೀ. ನಿ. ರುದ್ರಸ್ವಾಮಿಗಳು, ಶಿಂಪಿಗ, ನೇಕಾರ, ಕುರುಬ ಪಂಚಾಲ ಅನಂತಕಾಯಕದ ಜನರಿಗೆ ಶಿವದೀಕ್ಷೆ ಇತ್ತರು. ಅವರಲ್ಲಿ ಶ್ರೀ ಶಿದ್ಧಸಾಧು ಗುಡಿಸಾಗರ ಶ್ರೀ ಶಿವಪ್ಪನವರು ಗುಳೇದ ಗುಡ್ಡ, ಶ್ರೀ ನರಗುಂದ ಅಜ್ಜಪ್ಪನವರು, ಶ್ರೀ ಶಿವಾವತಾರ ಶಿವಾನಂದ ಸ್ವಾಮಿಗಳು ಗದಗ, ಶ್ರೀ ಮರಿಯಾಲೂರ ಶರಣರು ಹೀಗೆ ಅನಂತ ಶರಣರು ಬೆಳಕಿಗೆ ಬಂದರು.

ಶ್ರೀ ಜ. ಶಿವಾನಂದ ಸ್ವಮಿಗಳು ಅಸ್ವಾತಂತ್ರ ಭಾರತದಿ ನಿಜವಾದ ಶರಣಮಾರ್ಗ ಪ್ರವರ್ತಕರಾಗಿ ಮಹಾಲಿಂಗದ (ಪರಬ್ರಹ್ಮದ) ಅರಿವಿಗೆ ಮುಟ್ಟಿ ತಮ್ಮ ಅನುಭವವನ್ನು ನಾಡುನುಡಿಯಲ್ಲಿ ತಿಳಿಸುತ್ತ ಸಕಲ ಮತೀಯರ ಮನ ಒಲಿಸಿ, ಶಿವದೀಕ್ಷೆ ಇತ್ತರು. ಒತ್ತಾಯ, ಭಿಡೆಮುರುವತ್ತು ಅವರು ತಮ್ಮ ಆಯುಷ್ಯದಲ್ಲಿಯೇ ಯಾರ ಮೇಲೆ ಮಾಡಿಲ್ಲ. ಭಕ್ತಿ, ಜ್ಞಾನ, ವೈರಾಗ್ಯ, ಧ್ಯಾನ ಧಾರಣ, ಸಮಾಧಿ, ಸ್ಥಿತಿಗತಿ, ಮಿತಿಮೀರಿದ ಪರಬ್ರಹ್ಮಸ್ವರೂಪಿಗಳು. ಅವರ ಹಾಗೆ ಪರಿಪೂರ್ಣಸ್ಥಿತಿಯ ಗುರುಗಳು ಇನ್ನು ಹಿಂದುಮುಂದೆ ಕಾಣೆವೆಂದು ಕೈಯೆತ್ತಿ ಹೇಳಬಲ್ಲೆ. ಅವರನ್ನು ವಾದದಲ್ಲಿ ಜಯಿಸಬೇಕೆಂದು ಪರಮತೀಯರಾದ ಜೈನ, ಮುಸಲ್ಮಾನ, ಬ್ರಾಹ್ಮಣಾದಿ ವರ್ಣದವರೂ ಭಕ್ತರಾಗಿ ತಮ್ಮ ಇಷ್ಟಾರ್ಥ ಪಡೆವರು. ಅವರ ಶಿಷ್ಯರು ಭಾರತದ ನಾನಾ ಭಾಗಗಳಲ್ಲಿ ಶಿವತತ್ವ ಹಾಗು ಜ್ಞಾನ ಪ್ರಸಾರ ಮಾಡುತ್ತಿರುವರು.

# ಅಧ್ಯಾತ್ಮವೆಂದರೇನು ?

[ಬರೆದವರುಃ- ಶ್ರೀ ಅನ್ನದಾನೀಶ್ವರ ವಿರಕ್ತಮಠ, ಬಿ. ಎ ಆನರ್ಸ, ಬಿ. ಟಿ]

---

ಅಧ್ಯಾತ್ಮವೆಂದರೇನು ? ಈ ಪ್ರಶ್ನೆಯು ಅತ್ಯಂತ ಮಹತ್ವದ್ದು. ಅಧ್ಯಾತ್ಮ ವೆಂದರೆ ಧರ್ಮವೇ ? ಮತವೇ ? ಜಾತಿಯೋ ? ವರ್ಣವೇ ? ಎಂಬ ದಾಗಿ ಪ್ರಶ್ನೆಗಳನ್ನು ಹಾಕಿಕೊಂಡು ವಿಚಾರಿಸಿದರೆ, ವಿಮರ್ಶೆ ಮಾಡಿದರೆ ಸರಿಯಾದ ಉತ್ತರ ಬರುವದೋ ಹೇಗೆ ವಿಚಾರಿಸುವಾ.

ಅಧ್ಯಾತ್ಮವು ವಿಶ್ವವ್ಯಾಪಕ ಆತ್ಮತತ್ವವಾಗಿದ್ದು, ಅದು ಸಂಕುಚಿತ ವಾದುದಲ್ಲ. ಈ ದೃಷ್ಟಿಯಿಂದ ನೋಡಿದರೆ ಸಂಕುಚಿತವಾದ, ನಾನಾ ವಿಧ ನಿಷೇಧಗಳುಳ್ಳ, ಆತ್ಮಸ್ವಾತಂತ್ರ್ಯಕ್ಕೆ ಬಂಧನಕಾರಕಗಳಾದ ಜಾತಿ, ಕುಲ, ವರ್ಣ, ಗೋತ್ರ ಸೂತ್ರಗಳನ್ನು ಅಧ್ಯಾತ್ಮ ಕ್ಷೇತ್ರದಿಂದ ತಳ್ಳಿಹಾಕಿದಮೇಲೆ ಮತ, ಧರ್ಮಗಳನ್ನು ಕುರಿತು ಆಲೋಚಿಸೋಣ.

ಹಿಂದು ಧರ್ಮ, ಕ್ರಿಸ್ತ ಧರ್ಮ, ಮುಸಲ್ಮಾನ ಧರ್ಮ, ಬೌದ್ಧ ಧರ್ಮ ಮುಂತಾದ ಜಗತ್ತಿನ ಪ್ರಮುಖ ಧರ್ಮಗಳ ಸದ್ಯದ ಸ್ಥಿತಿಯನ್ನು ನೋಡಿದರೆ ಅವು ಚೈತನ್ಯ ಕಳೆಯನ್ನು ಕಳೆದುಕೊಂಡು ಯಾಂತ್ರಿಕ ಜಡವಾದ ಸಾಂಪ್ರ ದಾಯಗಳನ್ನು ಮಾತ್ರ ಪಾಲಿಸುತ್ತಿರುವವೆಂದು ಕಂಡುಬರುವದು. ಅದೇ ಪ್ರಕಾರ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ ಮುಂತಾದ ಮತಗಳನ್ನು ಈಗಿನ ಅವುಗಳ ಅನುಯಾಯಿಗಳ ಶೋಚನೀಯ ಸ್ಥಿತಿಯನ್ನು ತಿಳಿಗಣ್ಣಿನಿಂದ ನೋಡಿದರೆ ಅವು ಕೆಲವು ಅರ್ಥ ಹೀನ ಸಾಂಪ್ರದಾಯಗ ಳನ್ನು ಅನುಸರಿಸುತ್ತಿರುವದು ತಿಳಿದು ಬರುವದು. ಯಾವ ಕಾಲಕ್ಕೆ ಮತ ಧರ್ಮಗಳಲ್ಲಿ ಅಧ್ಯಾತ್ಮವಾದಿಗಳೂ, ಮಹಾನುಭಾವಿಗಳೂ ಹುಟ್ಟಿ ಅಥವಾ ಮತಧರ್ಮಗಳನ್ನು ಸ್ಥಾಪಿಸಿ ಅಧ್ಯಾತ್ಮಭಾವನೆಯಿಂದ, ಚೈತನ್ಯಮಯ ಅರುಹಿ ನಿಂದ, ಶುದ್ಧ ಅರುಹಿನಿಂದ ಜಗತ್ಕಲ್ಯಾಣ ಕಟ್ಟಲು ತನು, ಮನ, ಧನ, ಜೀವಗಳನ್ನು ಅರ್ಪಣ ಮಾಡಲು ಸಿದ್ಧರಾಗಿದ್ದರೋ ಆ ಕಾಲಕ್ಕೆ ಅಧ್ಯಾ ತ್ಮವು ಮತಧರ್ಮಗಳಲ್ಲಿ ಚೈತನ್ಯ ಸ್ವರೂಪವಾಗಿ ಹೊಳೆಯುತ್ತಿತ್ತು. ಮತ ಧರ್ಮಗಳು ಸಜೀವವಾಗಿದ್ದಾಗ ಅವು ಅಧ್ಯಾತ್ಮ ಸ್ವರೂಪವನ್ನು ತಳೆದಿ

ದ್ದವು. ಮತಧರ್ಮಗಳ ಆಚರಣೆಯು ಯಾಂತ್ರಿಕವಾದಾಗ ಅಧ್ಯಾತ್ಮ ಕಳೆಯು ಹೊರಟುಹೋಗಿಬಿಡುವದು. ವಿಶ್ವಶಾಂತಿಗೆ ಅಗತ್ಯವಾದ ಮತ ಧರ್ಮಗಳೇ ಭೇದ, ದ್ವೇಷ, ಯುದ್ಧಗಳಿಗೆ ರಂಗಸ್ಥಳಗಳಾಗಿ ಪರಿಣಮಿಸು ವದು ಅಧ್ಯಾತ್ಮ ಭಾವನೆಯು ಶೂನ್ಯವಾದಾಗ ಮಾತ್ರ.

ಧರ್ಮದ ಹೆಸರಿನಿಂದ ಯುದ್ಧಗಳು ನಡೆಯುವದು ಅಧ್ಯಾತ್ಮ ಭಾವ ನೆಯು ಲೋಪವಾದಾಗ ಮಾತ್ರ. ಧರ್ಮ ಮತ್ತು ಯುದ್ಧ ಇವು ಎಂದೂ ಕೂಡಿ ಇರಲಾರವು.

ಒಂದು ಹೂವಿನ ದೃಷ್ಟಾಂತವನ್ನು ತೆಗೆದುಕೊಳ್ಳೋಣ. ಹೂವಿನಲ್ಲಿ ಗಂಧವಿದೆ. ಆದರೆ ಹೂವೇ ಗಂಧವಲ್ಲ. ಹೂವು ಒಣಗಿದರೆ ಗಂಧವು ಹೊರಡಲಾರದು. ಅದರಂತೆ ಧರ್ಮವು ಮತದ ವಿಧಿನಿಷೇಧಗಳ ಸಂಕೊ ಲೆಗೆ ಒಳಗಾದಾಗ ಆಧ್ಯಾತ್ಮಿಕ ಗಂಧವು ಹೊರಹೊಮ್ಮಲಾರದು. ಅಧ್ಯಾತ್ಮ ವನ್ನೂ ಅಧ್ಯಾತ್ಮಾನುಭವವನ್ನೂ ಕೇವಲ ಶಬ್ದಗಳು ಬಣ್ಣಿಸಲಾರವೆಂದು ವಿಶ್ವಕವಿ ಸರ್ವಜ್ಞನು ಹೇಳಿರುವನು. ಅಧ್ಯಾತ್ಮವನ್ನು ಅನುಭವಿಸಬಹುದು. ಈ ಮಾತಿಗೆ ಮಹಾತ್ಮರು ಸಾಕ್ಷಿ. ಮಹಾನುಭಾವಿಗಳು ಸಾಕ್ಷಿ.

ಆಧ್ಯಾತ್ಮಿಕ ಅವಸ್ಥೆ:— ಆಧ್ಯಾತ್ಮಿಕ ಅವಸ್ಥೆಯೆಂದರೆ ಭಗವದ್ಗೀತೆ ಯಲ್ಲಿ ಹೇಳಿದ ಬ್ರಾಹ್ಮೀ ಸ್ಥಿತಿಯು, ಸ್ಥಿತಪ್ರಜ್ಞಾವಸ್ಥೆಯು, ಸಮಾಧಿ ಸ್ಥಾನದ ಇರವು. ಆತ್ಮನಲ್ಲಿಯೇ ಸಂತುಷ್ಟನಾದವನೂ, ಸಂಯಮಿಯೂ, ಸ್ಥಿರಬುದ್ಧಿಯುಳ್ಳವನೂ ಈ ಆಧ್ಯಾತ್ಮಿಕ ಅವಸ್ಥೆಯನ್ನು ಪಡೆಯುವನು. ಪ್ರಸನ್ನಚಿತ್ತವುಳ್ಳವನೂ, ಧ್ಯಾನಿಯೂ, ಶಾಂತನೂ ಈ ಅವಸ್ಥೆಯನ್ನು ಪಡೆ ಯುವನು. ಆದ ಕಾರಣ ಜ್ಞಾನದ, ಧ್ಯಾನದ, ಶಾಂತಿಯ ಮಹತ್ವವನ್ನು ಬಣ್ಣಿಸಲಳವಲ್ಲ; ಆಧ್ಯಾತ್ಮಿಕ ಅವಸ್ಥೆಯನ್ನು ಪಡೆದವನ ಇರವು ಜಗದ್ವಿ ಭೂತಿ ನಿಜಗುಣ ಶಿವಯೋಗಿಯ ಮಾತುಗಳಲ್ಲಿ ಹೇಳಬೇಕಾದರೆ "ತೆರೆಯ ಡಗಿದ ಸಾಗರದಂತೆಯೂ, ಮಂಜುದೊಲಗಿ ಮಿರುಗುವ ರವಿಯಂತೆಯೂ, ಮೇಘ ತೊಲಗಿದ ನಭದಂತೆಯೂ, ಮಾರುತನಡಗಿದೆಡೆಯ ಸೊಡರಂತೆಯೂ ಕಲ್ಪನಾತೀತವಾದ ಪರಿಪೂರ್ಣ ಶಾಂತಿಯಿಂದ ತುಂಬಿರುವದು. ಎಷ್ಟರ ಮಟ್ಟಿಗೆ ಇಂದ್ರಿಯಗಳ ಪ್ರಕ್ಷುಬ್ಧ ಸ್ಥಿತಿಯು ದೂರಾಗುತ್ತ ಸಾಗುವದೋ ಅಷ್ಟರ ಮಟ್ಟಿಗೆ ಆಧ್ಯಾತ್ಮಿಕ ಬೆಳವಣಿಗೆಯು ಆಗುತ್ತಾ ಸಾಗುವದು. ಆಧ್ಯಾತ್ಮಿಕ ಬೆಳವಣಿಗೆಯ ಪ್ರಮಾಣಕ್ಕನುಸರಿಸಿ ಅಧ್ಯಾತ್ಮಾನುಭಾವವು ಅಳ

ವಡುತ್ತಾ ಬರುವದು. ಆಧ್ಯಾತ್ಮಿಕ ಜೀವನದ ಅನುಭವವುಳ್ಳ ಮಹಾತ್ಮ ನಿಗೆ ಭೇದ ಬುದ್ಧಿಯು ತೊಲಗಿ ಅದ್ವಿತೀಯ ಆನಂದವನ್ನನುಭವಿಸುವನು. ಪರಿಶುದ್ಧವಾದ ಮನಸ್ಸು ದ್ವೈತ ಭಾವನೆಯನ್ನು ಮೀರಿ ನಿಲ್ಲುವದು. ಅದ್ವೈತದ ಅನುಭವವು ವಿಜ್ಞಾನಾವಸ್ಥೆಯ ಆನಂದಾನುಭವವು ಸುಮನ ದಿಂದ ಸಾಧ್ಯ. ಮಲಿನ ಮನವು ಶಾಂತಿಯನ್ನು ಹೊಂದಲಾರದು. ಮಹಾ ಮನವುಳ್ಳವರೇ ಮಹಿಮರು. ಅವರೇ ಮಹತ್ವದ ಕಾರ್ಯಗಳನ್ನು ಮಾಡ ಬಲ್ಲರು. ಜಗದಲ್ಲಿ ಶಾಂತಿಯನ್ನು ಸ್ಥಾಪಿಸಬಲ್ಲರು. ಕಮಲದ ಹೂವಿನ ಬೆಳವಣಿಗೆಯಂತೆ ಆಧ್ಯಾತ್ಮಿಕ ವಿಕಾಸವು ಶಾಂತವಾಗಿಯೂ, ಮೌನವಾ ಗಿಯೂ ಸ್ವಾಭಾವಿಕವಾಗಿಯೂ ಸಾಗುವದು. ಕಮಲದ ಬಳ್ಳಿಯು ಮಣ್ಣಿ ನಲ್ಲಿ ಹುಟ್ಟುವದು. ನೀರು ಮತ್ತು ಸೂರ್ಯ ಪ್ರಕಾಶದಿಂದ ಮೇಲೇಳು ವದು. ಕೊನೆಗೆ ಹೂವಾಗಿ ಅರಳುವದು. ಮಾನಸಿಕ ವಿಕಾಸವಾದಾಗ ನೈತಿಕ ವಿಕಾಸ ಪ್ರಾರಂಭವಾಗಿ ಜೀವ ಭಾವ ತೊಲಗಿ ಅಂತರಂಗವು ಅರ ಳುವದು. ಕೆಸರಿನಲ್ಲಿ ಹುಟ್ಟಿದ ಕಮಲವು ಪಂಚಭೂತಗಳಿಂದ ಪೋಷಿತ ವಾಗಿ ಅರಳುವಂತೆ ಮಾನವರಾದ ನಾವೂ ಪಂಚ ಭೂತಗಳಿಂದ ಅನ್ನ ಮಯ, ಪ್ರಾಣಮಯ ಕೋಶಗಳನ್ನು ಪೋಷಿಸಿಕೊಂಡು ಮನವನ್ನು ಮಹಾ ಮನವನ್ನಾಗಿ ರೂಪಿಸಿಕೊಂಡು ವಿಜ್ಞಾನದ ಸಹಾಯದಿಂದ ಬ್ರಹ್ಮಾನಂದ ವನ್ನನುಭವಿಸಬೇಕು. ಕೆಸರಿನಲ್ಲಿದ್ದರೂ ಕಮಲದ ಹೂವು ಅರಳಿ ಶೋಭಿ ಸುವಂತೆ ಜಗದಲ್ಲಿದ್ದರೂ ಸುಮನವೆಂಬ ಮೊಗ್ಗೆಯನ್ನು ಜ್ಞಾನದಿಂದ, ಧ್ಯಾನ ದಿಂದ ಅರಳಿಸಿಕೊಂಡು ಅವಿರಳಾನಂದವನ್ನು ಪಡೆದು ಜಗತ್ತಿಗೆ ಸುಖ ಶಾಂತಿಗಳನ್ನುಂಟುಮಾಡಬೇಕು.

ಅಧ್ಯಾತ್ಮರ, ಮಹಾಮನದ, ಚಿಚ್ಛಕ್ತಿಯ ಇರವನ್ನು ಅನುಭವಿಸಿದು ಮಾನವ ಸಮಾಜದ ಪ್ರಗತಿಯು ಸುಸಾಧ್ಯ. ಆಧ್ಯಾತ್ಮಿಕ ತಳಹದಿಯು ಭದ್ರವಾಗಿದ್ದರೆ ಅದರ ಮೇಲೆ ವಿಶ್ವಶಾಂತಿಯ ಮಂದಿರವನ್ನು ಸುಲಭವಾಗಿ ಕಟ್ಟಬಹುದು. ಕೇವಲ ಭೌತಿಕ ವಾದದಿಂದ ಸುಖಶಾಂತಿಗಳು ಲಭಿಸ ಲಾರವು.

# ಷಡಕ್ಷರನ ಶಬರಶಂಕರವಿಳಾಸ

( ಲೇಖಕಃ— ಶ್ರೀ ಮಲ್ಲಪ್ಪ ಜ್ಞಾನಮಂದಿರ ಹಲಗೂರು )

—)◦(—

ರಾಜಶೇಖರದಲ್ಲಿ ವರ್ಣನಾವಿಶೇಷವಾಗಿದ್ದು ವೃಷಭೇಂದ್ರ ವಿಜಯದಲ್ಲಿ ಕಥಾಭಾಗ ವಿಶೇಷವಾಗಿದೆ. ಶಬರಶಂಕರ ವಿಳಾಸದಲ್ಲಿ ಉಭಯ ಭಾಗಗಳೂ ಇವೆ. ಈ ಗ್ರಂಥವು ಚಿಕ್ಕದಾಗಿದ್ದರೂ ಶ್ರೇಷ್ಠವಾಗಿಯೂ, ರಸಭರಿತವಾಗಿಯೂ ಇದೆ.—ಕರಿಬಸವಶಾಸ್ತ್ರಿ.

ಷಡಕ್ಷರನ ಕನ್ನಡ ಗ್ರಂಥಗಳಲ್ಲಿ ಕೊನೆಯದು ಶಬರಶಂಕರ ವಿಳಾಸವು. ಪಾರ್ಥನು ಪರಮೇಶ್ವರನನ್ನು ಕುರಿತು ತಪಸ್ಸನ್ನು ಮಾಡಿ ಪಾಶುಪತಾಸ್ತ್ರವನ್ನು ಪಡೆದ ಭಾರತದ ಇಂದ್ರಕೀಲ ಕಥೆಯು ಇದರಲ್ಲಿ ವರ್ಣಿತವಾಗಿದೆ. ಐದು ಆಶ್ವಾಸನಗಳ ಈ ಸಣ್ಣ ಕಾವ್ಯದಲ್ಲಿ ಷಡಕ್ಷರ ದೇವನ ಪ್ರಸಾದ ಗೀತೆಯೂ, ಪಾಂಡಿತ್ಯವೂ ಕಾಣದೆ ಹೋಗಿಲ್ಲ. ಕವಿಯು ತನ್ನ ಪರಿಪಕ್ವ ವಯಸ್ಸಿನಲ್ಲಿ ಕಾವ್ಯ ರಚನೆಗಿಂತ ಶಾಸ್ತ್ರಚಿಂತನೆಯಲ್ಲಿ ಮನಸ್ಸು ನಿಂತ ಸಮಯದಲ್ಲಿ ಈ ಗ್ರಂಥವನ್ನು ರಚಿಸಿರಬೇಕು. ಶಬರಶಂಕರ ವಿಳಾಸ ಅರ್ಥಾತ್ ಕಿರಾತ ರುದ್ರಲೀಲೆಯಲ್ಲಿ ಹಳೆಯ ಕಥಾವಸ್ತುವನ್ನು ಆರಿಸಿಕೊಂಡು ಶಿವಪಾರಮ್ಯವನ್ನು ಸ್ಥಾಪಿಸುವದು ಕವಿಯ ಮುಖ್ಯ ಗುರಿಯು. ಈ ದೃಷ್ಟಿಯ ಮೂಲಕ ಲೋಕಶಿಕ್ಷಣ ಕಾರ್ಯವನ್ನು ಕೈಕೊಂಡನು. ಇದರಲ್ಲಿ ನಾಲ್ಕುನೂರಾ ಅರುವತ್ತೈದು ಪದ್ಯಗಳಿವೆ. ರನ್ನನ ಗದಾಯುದ್ಧ, ಜನ್ನನ ಯಶೋಧರ ಚರಿತ್ರೆ, ಆಂಡಯ್ಯನ ಕಬ್ಬಿಗರ ಕಾವ ಇವುಗಳ ಸಂಗಡ ಕನ್ನಡದಲ್ಲಿ ವಿರಳವಾದ ಲಘುಕಾವ್ಯಗಳ ಮಾಲಿಕೆಯಲ್ಲಿ ಇದೂ ಕೂಡ ಒಂದಾಗಿದೆ. ಇದರಲ್ಲಿನ ಕಥಾವಸ್ತುವು ಸುಪ್ರಸಿದ್ಧವಾಗಿದೆ. ಇದಕ್ಕೆ ಸರಿಯಾದ ರಸವರ್ಣವನ್ನು ಕೊಟ್ಟು ಪುಟ್ಟಿದಾದರೂ ಗಟ್ಟಿ ಮುಟ್ಟಿಯನ್ನು ಈತನು ಅಳವಡಿಸಿದ್ದಾನೆ; ಇಂತು ನುಡಿದಿದ್ದಾನೆಃ—

" ಇದು ಪೊಸರೀತಿ ನೋಡಿದುಃ ನವೀನಮಲಂಕೃತಿ ನವ್ಯ ಭಾವಮಿಂ ।
ಇದು ನವವೃತ್ತಿ ಲೇಸಿದು ರಸಸ್ಥಿತಿ ನೂತ್ನ ಮಿದಲ್ತೆ ನೂತನಂ ।

ಪದರಚನಾ ವಿಲಾಸಮಿದು ಕಬ್ಬಪುಸೂರ್ವಮಿದೆಂದು ಕಬ್ಬಿಗರ್ ।
ಪದೆದೊಲವಿಂದೆ ಕೀರ್ತಿಸೆ ನಿಮಿರ್ಚುವೆನೀ ಸುಭಗ ಪ್ರಬಂಧಮುಂ ॥"

ಸಂಸ್ಕೃತ ಸಾಹಿತ್ಯದಲ್ಲಿ ಅರ್ಥ ಗೌರವಕ್ಕಾಗಿ ಸುಪ್ರಸಿದ್ಧನಾದ ಭಾರವಿ ಕವಿಯು ಇದೇ ವಸ್ತುವಿನ ಆಧಾರದ ಮೇಲೆ ಹದಿನೆಂಟು ಆಶ್ವಾಸಗಳ ಮಹಾ ಕಾವ್ಯವನ್ನು ರಚಿಸಿದ್ದಾನೆ. ಮಹಾ ಭಾರತದ ಅಕ್ಷಯ ಭಾಂಡಾಗಾರದಿಂದ ಈ ವಸ್ತುವನ್ನು ಎತ್ತಿಕೊಂಡಿವೆ. ಶಬರಶಂಕರ ವಿಲಾಸಕ್ಕಿಂತ ಮುಂಚಿತವಾಗಿಯೇ ಕನ್ನಡದಲ್ಲಿ ಈ ಕಥಾ ವಿಷಯವು ಆದಿ ಪಂಪನ ವಿಕ್ರಮಾರ್ಜುನ ವಿಜಯ, ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣ, ಇವುಗಳಲ್ಲಿ ಪ್ರಾಸಂಗಿಕವಾಗಿ ಬಂದಿರುವುದಲ್ಲದೆ ಕುಮಾರವ್ಯಾಸನ ಕರ್ಣಾಟಕ ಮಹಾಭಾರತದಲ್ಲಿ ಸಾಂಗೋಪಾಂಗವಾಗಿ ಬಂದಿದೆ. ಇವುಗಳಿಗೂ ಈ ಕಾವ್ಯಕ್ಕೂ ಹಲವು ಮಹತ್ವದ ವ್ಯತ್ಯಾಸಗಳಿವೆ. ಮೂಲಭಾರತದಲ್ಲಿನ ಕಥಾಭಾಗಕ್ಕೆ ಪಾರ್ಥನೆ ಕಥಾನಾಯಕನು. ಆದರೆ ಷಡಕ್ಷರನ ದೃಷ್ಟಿಯಲ್ಲಿ ಪರಮೇಶ್ವರನೆ ಕಥಾನಾಯಕನು. ಆದಕಾರಣವೇ ಶಿವನಿವಾಸ ರಾಜಧಾನಿ, ಆಸ್ಥಾನ ವೈಭವ ಇವುಗಳ ವರ್ಣನೆಯಿಂದ ತನ್ನ ಕಾವ್ಯವನ್ನು ಆರಂಭಿಸಿದ್ದಾನೆ. ಭಾರವಿಯು ಕಿರಾತಾರ್ಜುನೀಯ ಎಂದು ಇದನ್ನು ಕರೆಯುದೆ ಕಿರಾತರುದ್ರಲೀಲೆ ಎಂದು ಕರೆದಿದ್ದಾನೆ. ಪಾರ್ಥನ ತಪೋಭಂಗಕ್ಕೆ ಮೇನಕಾದಿ ಅಪ್ಸರೆಯರನ್ನು ದೇವೇಂದ್ರನು ಕಳುಹಿಸಿ, ಅವರು ಹಿಡಿದ ಕಾರ್ಯದಲ್ಲಿ ಜಯಶೀಲರಾಗದೆ ಹಿಂತಿರುಗಿದರೆಂಬ ಸನ್ನಿವೇಶದ ಕಿರಾತಾರ್ಜುನೀಯದಲ್ಲಿ ಅನೇಕ ಆಶ್ವಾಸಗಳ ಉದ್ದಕ್ಕೂ ಬರುತ್ತದೆ. ಪಂಪ ಭಾರತದಲ್ಲಿಯೂ ಇದೇ ಸಂಕ್ಷೇಪವಾಗಿ ಬಂದಿದೆ. ಶೃಂಗಾರವನ್ನು ಅನೇಕ ಬಗೆಯಿಂದ ವರ್ಣಿಸಲು ಅನುಕೂಲವಾದ ಸಂಗತಿಯನ್ನು ಷಡಕ್ಷರದೇವನು ತನ್ನ ಕೃತಿಯಲ್ಲಿ ಉಪಯೋಗಿಸಿಕೊಂಡಿಲ್ಲ. ಪೂರ್ವದ ಕೃತಿಗಳನ್ನು ವಿಮರ್ಶಿಸಿ ಅದೇ ಭಾವವನ್ನೇ ತನ್ನ ಶೈಲಿಗೆ ತಂದು ನವೀನತೆಯನ್ನು ನೀಡಿ ತಿದ್ದುಪಡೆ ಮಾಡುವುದರಲ್ಲಿ ಉತ್ಕೃಷ್ಟವಾದ ಕೌಶಲ್ಯವು. ಈತನಿಗೆ ಕಿರಾತವೇಷಧಾರಿಯಾದವನು ಶಿವನೇ ಎಂಬುದರ ಅರಿವು ಅರ್ಜುನನು ಮಳಲು ಲಿಂಗವನ್ನು ಮಾಡಿ ಅತ್ಯಂತ ಭಕ್ತಿಯಿಂದ ಕಾಡಿನ ಪತ್ರೆಗಳಿಂದ ಪೂಜಿಸಿ ಸ್ತುತಿಸಲು ಆರಂಭ. ಆ ವೇಳೆಗೆ ಪಾರ್ಥನು ಪರಮೇಶ್ವರನ ಕ್ಷಮೆಬೇಡಲಾಗಿ ಭಕ್ತನನ್ನು ಭವನು ಸಂತೈಸುತ್ತಾನೆ. ಮಳಲು ಲಿಂಗಪೂಜೆಯ

ವೇಳೆಯಲ್ಲಿ ಸಂದೇಹವಾಗಲಿಲ್ಲವೆಂದು ಭಾರತವೂ, ಸಂದೇಹ ಉಂಟಾಯಿತೆಂದು ಶಬರಶಂಕರ ವಿಲಾಸವೂ ತಿಳಿಸುತ್ತವೆ. ಪರಶಿವನ ಪಂಚವಿಂಶತಿ ಲೀಲೆಗಳಲ್ಲಿ ಕಿರಾತ ರುದ್ರ ಲೀಲೆಯೂ ಒಂದೆಂದು ಶಿವದಿಂದ ಬಹುಕಾಲದಿಂದಲೂ ಅಂಗೀಕೃತವಾಗಿರುವುದರಿಂದ ಇದು ಒಂದು ಸ್ವತಂತ್ರ ಕಾವ್ಯ ಎನ್ನಲು ಯಾವ ಸಂದೇಹವೂ ಇಲ್ಲವು. 'ಕನ್ನಡ ಸಾಹಿತ್ಯ ಚರಿತ್ರೆ' ಕಾರರು ಕವಿಯು ಹಾಗೂ ಶಬರಶಂಕರ ವಿಲಾಸದ ವಿಚಾರದಲ್ಲಿ "ಚಮತ್ಕೃತಿ ಪ್ರಧಾನ" ವಾದ ಸ್ವತಂತ್ರ ಕಲ್ಪನೆಗಳ ಸನ್ನಾಹದಲ್ಲಿ ಷಡಕ್ಷರಿಯದು ಎತ್ತಿದಕೈ ಎಂದು ಹೇಳಿದ್ದಾರೆ. ಆದರಲ್ಲಿ (ಶಬರಶಂಕರ ವಿಲಾಸದಲ್ಲಿ) ಷಡಕ್ಷರಿಯ ಕಲ್ಪನಾ ಶಕ್ತಿ, ರಚನಾಶಕ್ತಿ ಮತ್ತು ಶಬ್ದಶಕ್ತಿಗಳು ತಮ್ಮ ಮೇಲ್ಮೆಯನ್ನು ಸಾರಿ ಬೆರಗುಗೊಳಿಸುತ್ತವೆ ಎಂದು ಹೇಳಿರುವುದು ಸತ್ಯಪರಿಪೂರ್ಣವೇಸರಿ. ಕವಿಯು ಕುಮಾರ ವ್ಯಾಸನನ್ನು ಕಥಾವಸ್ತುವಿನಲ್ಲಿಯೂ, ಶೈಲಿಯಲ್ಲಿಯೂ ಅನುಕರಿಸಿದ್ದಾನೆ ಎಂಬ ಭಾವನೆಯು ಭಾಸವಾಗಬಹುದು. ಭಾರವಿಯ ಕಿರಾತಾರ್ಜುನೀಯವು ಪಂಪಭಾರತದಲ್ಲಿ ಐದು ಪದ್ಯಗಳಿಂದಲೂ, ಕುಮಾರ ವ್ಯಾಸನ ಭಾರತದಲ್ಲಿ ಮೂರು ಸಂಧಿಗಳಿಂದಲೂ, ಷಡಕ್ಷರನ ಶಬರಶಂಕರ ವಿಲಾಸದಲ್ಲಿ ಐದು ಆಶ್ವಾಸಗಳಿಂದಲೂ ಕಥೆಯು ಮುಗಿದಿದೆ. ರಾಜಶೇಖರ ವಿಲಾಸವನ್ನು ರಚಿಸುವಲ್ಲಿ ಭಾವಚಿಂತಾ ರತ್ನವನ್ನೂ, ವೃಷಭೇಂದ್ರ ವಿಜಯದ ರಚನೆಯಲ್ಲಿ ಬಸವಪುರಾಣವನ್ನೂ ಉಪಯೋಗಿಸಿಕೊಂಡ ಬಗೆಯಲ್ಲಿನ ಜಟ್ಟಿಯನ್ನೇ ಶಬರಶಂಕರ ವಿಲಾಸದ ರಚನೆಗೆ ಕವಿಯು ಕುಮಾರವ್ಯಾಸನ ಭಾರತವನ್ನು ಬಗೆಗೊಳಿಸಿದ್ದಾನೆ. ಏನಂಚ ಇಲ್ಲಿ ವರ್ಣಕವನ್ನು ವಸ್ತುಕಕ್ಕೆ ಪರಿವರ್ತಿಸುವಲ್ಲಿ ಕಾಣಬರುವ ಕವಿಯ ಪರುಷಹಸ್ತದ ಪ್ರಭಾವವನ್ನು ಇನ್ನೊಂದರ ವಕ್ಕಿಕಾ ವಕ್ಕಿಯಾಗಿರುವ ಪ್ರತಿಭೆ ಎನ್ನುವುದು ಸಮಂಜಸವಾಗಿ ಕಾಣುವದಿಲ್ಲ. ಷಡಕ್ಷರದೇವನ ಹವನು ಘನಗಂಭೀರ, ಉದಾತ್ತೋನ್ನತ, ಮಧುರೋನ್ಮಾದದ ಹದನು.

ಜಟೆ ಮೃಗಾಜಿನ ಭಸ್ಮದೊಡಲು ।
ಕ್ಕಟದ ಧನುಶರ ಖಡ್ಗದಲಿ ಧೂ ।
ರ್ಜಟಿಯಹನು ನಾವವರ ಶಿಷ್ಯರು ಶಬರ ಕೇಳೆಂದ ॥

—ಕನ್ನಡ ಭಾರತಿ.

ಜಟಾ ಮೃಗಾಜಿನ ।
ಸ್ಫುಟ ಭಸಿತಂಗಳಿಂ ಶರಾಶರಾಸನ ಖಡ್ಗಮನಾಂತು ಶಾಪದೋ ।
ತ್ಕಟ ಮೃಡನಿರ್ಜನಾ ಮೃಡನ ಶಿಷ್ಯತೆಯಾಂತೆನಗೇನಿದೊಪ್ಪುದೇ ॥
—ಶಬರಶಂಕರ ವಿಲಾಸ.

ಅರ್ಜುನನಿಗೆ ಅಂಜನಾಸ್ತ್ರವನ್ನು ಪಾರ್ವತಿಯು ಕೊಡುವ ವೇಳೆಯಲ್ಲಿ ಅದರ ಪ್ರಭಾವದ ವರ್ಣನೆ ಇಂತಿದೆ:—

ಒಂದು ದಶಶತ ಸಾವಿರದ ಹೆಸ ।
ರಿಂದ ಲಕ್ಷವು ಕೋಟಿಯು ಗಣಿತ ।
ದಿಂದ ನಿನಗಾಂತಧಟ ರಿಪುಗಳ ತಿಂದು ತೇಗುವುದು ॥
ಒಂದ ಬೆಸನನು ಬೇಡುವುದು ತಾ ।
ನೊಂದು ಶರ ರೂಪಾಗೆನುತ ಮುದ ।
ದಿಂದ ವರ ಮಂತ್ರೋಪದೇಶವನಿತ್ತಳರ್ಜುನಗೆ ॥
—ಕನ್ನಡ ಭಾರತ.

ದೊಣೆಯಿಂದಂ ತೆಗೆವಾಗಳೊಂದು ತುಡುವಾಗಳ್ ಪತ್ತು ಬಾಣಂ ಧನುರ್।
ಗುಣದಿಂದ ಬಿಡುವಲ್ಲಿ ನೂರು ಪರಿವಾಗಳ್ ಸಾಸಿರಂ ವೈರಿ ಮಾ ।
ರ್ಗಣಮಂ ಭೇದಿಸುವಲ್ಲಿ ಲಕ್ಷ ನಡುವಾಗಳ್ ಕೋಟಿ ಸೇನಾಂಗದೊಳ್।
ಗಣನಾತೀತಮಿದೆಂದೊಡೇಂ ಪೊಗಳ್ವುದೋ ಬಿಲ್ ಬಲ್ಮೆಯಂ ಪಾರ್ಥನಾ॥
—ಗದಾಯುದ್ಧ.

ಮೊದಲೊಳಿದೊಂದು ಪತ್ತು ತುಡುವಲ್ಲಿ ಶತಂ ಬಿಡುವಲ್ಲಿ ಸಾಸಿರಂ ।
ಪದಮುಡುವಲ್ಲಿ ವೈರಿ ಶರ ಸಂಹತಿಯಂತರಿವಲ್ಲಿ ಲಕ್ಷನ ।
ಗ್ಗದ ಗತಿಯಲ್ಲಿ ಕೋಟಿ ಸಮರಾಂಕಣದೋಳ್ ಗಣನಾ ವಿಹೀನಮ ।
ಪ್ಪುದು ರಿಪುವೃಂದಮಂತವಿಸಿ ನಿನ್ನೆಡೆಗೆಯ್ದು ಗುಮಿ ಮಹಾಶರಂ ॥
—ಶಬರಶಂಕರ ವಿಲಾಸ.

ರನ್ನ, ಕುಮಾರವ್ಯಾಸ, ಷಡಕ್ಷರದೇವ ಈ ಮೂವರಲ್ಲಿ ಷಡಕ್ಷರದೇವನು ಅರ್ಥವತ್ತಾಗಿ, ಹೃದಯಂಗಮವಾಗಿ, ತಟ್ಟನೆ ತಿಳಿವಂತಾಗಿ ವರ್ಣಿಸಿರುವುದು ಇದರಿಂದ ತಿಳಿಯುತ್ತದೆ. ಕಿರಾತ ರೂಪಧಾರಣವನ್ನು ಘನಸ್ವತಂತ್ರ ಪರಶಿವನಿಗೊಪ್ಪುವ ಬಗೆಯಲ್ಲಿ ವರ್ಣಿಸಿದ ಷಡಕ್ಷರದೇವನ ಪ್ರತಿಭೆಯು ಅಸಾದೃಶ್ಯವೇ ಸರಿಯು. ಶಿವನಾಮಾಮೃತ ಕೊಡವನ್ನು ಕಾವ್ಯ ಪ್ರಮದೆಯು

ರಿಂದ ವಿದ್ವತ್ಪಕ್ಷಪಾತಿಗಳ ಹೃದಯಕ್ಕೆ ಮೊಗೆಮೊಗೆದು ಹಾಕಿಸಿದ ನವ ನೂತನ ವೈರಾಗ್ಯ ಚಕ್ರ ಷಡಕ್ಷರ ದೇವನು "ರಸಜ್ಞರ ಚಿತ್ತಮಂ ಮನೋಭವನಲರಂಬಿನಂತೆ ನಾಂಟೆ ಕೃತಿವೇಳ್ವುದು." ಇಂದ್ರಕೀಲ ಪರ್ವತದ ವರ್ಣನೆಯು ಸೊಗಸೇ ಈತನ ಚಮತ್ಕಾರ ರಚನೆಯು ಜನಮನವನ್ನು ಸೂಜಿಗಲ್ಲಿನಂತೆ ಆಕರ್ಷಿಸಿಕೊಳ್ಳುವದನ್ನು ವ್ಯಕ್ತಪಡಿಸುತ್ತದೆ.

ಮರಮೆಲ್ಲಂ ಸುರಪಾದಪಂ ಮಿಸುಪ ಕಲ್ಲೆಲ್ಲಂ ಮಣಿಶ್ರೇಣಿ ನಿ।
ರ್ಝರಮೆಲ್ಲಂ ಸುಧೆಯೆಲ್ಲ ಮನಿಶಂ ಸ್ಪರ್ಧೇನುವೃದಂವನೇ ।
ಚರರೆಲ್ಲರ್ ಖಚರರ್ ಲತಾಪ್ರತತಿ ಎಲ್ಲಂ ಕಲ್ಪವಲ್ಲೀ ಕುಲಂ।
ಪಿರಿದಿಂತೊಪ್ಪುಗುಮೆಂದೊಡಾ ಗಿರಿಯ ಪೆಂಪಂ ಬಣ್ಣಿಸಲ್ ಬರ್ಕುಮೇ॥

ಕನಕಗಿರಿಯು ಸಾಗರ ಪರಿವೃತವಾಗಿದೆ. ವಿಶ್ವಕಧೀಶನು ಎಂಬ ಬಿದಿ ಶಾಸನವು ಕನಕಗಂಬವಾಗಿದೆ. ಖೇಚರರ ನಂದನ ವನವು ನಲಿಯುತ್ತಿದೆ. ಈ ನಡುವೆ ಪರಶಿವನ ರಾಜಧಾನಿ. ವಿಶ್ವಕಧೀಶನೋರ್ವನೆನಿಸಿದ ಉಮೇಶನು ಕನಕಗಿರಿಯಲ್ಲಿ ವಿಶಾಲವಾದ ಓಲಗ ಶಾಲೆಯಲ್ಲಿನ ಪದ್ಮಪೀಠದಲ್ಲಿ ಮಹಾಬಿಂದುವೆಂಬ ಮೆಲ್ವಸೆಯಲ್ಲಿನ ಸುಂದರ ಮೂರ್ತಿ.

ಚಿದಚಿತ್ಪ್ರೇರಕನ ದ್ವಿತೀಯನನಘಂ ವೇದಾಂತ ವೇದ್ಯಂ ಕಲಾ।
ಸ್ಪದನಾದ್ಯಂತ ವಿದೂರನಾರ್ಯನ ಜಡಂ ವಿಶ್ವಾಧಿಕಂ ವಿಶ್ವ ಮೂ ।
ರ್ತಿ ದಯಾವಾರ್ಧಿ ಜಗಜ್ಜನಿ ಸ್ಥಿತಿಲಯಾಧಾರಂ ಮಹಾ ಭೋಗ ಮೋ।
ಕ್ಷದನಬ್ಜಾಕ್ಷ ಮುಖಾಮರಾರ್ಚಿತ ಪದಂ ಕಣ್ಗೊಪ್ಪಿದಂ ಶಂಕರಂ ॥

ಬಾಂಬೊಳತಳ್ತ ಕೆಂಜೆಡೆಯ ಬಲ್ಮುಡಿ ತಾಳ್ದ ಶಶಾಂಕ ಲೇಖೆ ಭಾ।
ಳಾಂಬಕ ಮುಲ್ಲ ಸತ್ಫಣಿಪ ಕುಂಡಲ ಮಾಯತ ಬಾಹು ವೃತ್ತಿ ವ।
ಸ್ತ್ರಂ ಬಗೆಗೊಳ್ವ ನುಣ್ಗೊರಿವರಾಭಯ ಶೂಲ ಮೃಗಾಂಕ ಪಾಣಿಯಂ।
ಕಂ ಬಿಡದೊಪ್ಪುವದ್ರಿಜೆ ವಿರಾಜಿಸೆ ರಂಜಿಸಿದಂ ಮಹೇಶ್ವರಂ ॥

ಮಹಾ ವಿದ್ಯಾಪತಿಯಾಗಿ, ಭುಜಗಭೂಷನಾಗಿ, ಭಸ್ಮಲೇಪಿತನಾಗಿ, ಅನುಪಮ ವಿಭವನಾಗಿ ತಾಪತ್ರಯ ಹಾರಿ ವಿರೂಪಾಕ್ಷನು ವಿಜೃಂಭಿತನಾಗಿದ್ದಾನೆ. ಪಂಕದ ಮೇಲೆ ಗಿರಿಜೆಯನ್ನು ಕುಳ್ಳಿರಿಸಿಕೊಂಡು ಸಕಲ ದೇವತೆಗಳೊಡನೆ ನೃತ್ಯ, ವಾದ್ಯ, ಸಂಗೀತಾದಿ ಸುಖವನ್ನು ಪರಶಿವನು ಅನುಭವಿಸುತ್ತಿದ್ದಾನೆ. ಆತನ ಅರ್ಧಾಂಗಿ ಪಾರ್ವತಿಯು ಪರಿಶೋಭಿಸುತ್ತಿರುವಂತೆಯೇ ಉಳಿದ ದೇವಾಧಿದೇವತೆಗಳು ಎಲ್ಲರೂ ಈತನನ್ನು ಸ್ತುತಿ ಆವ

ರಿಸಿಕೊಂಡಿರುವುದು ಶಂಕರನಿಗೊಂದು ಭೂಷಣವು. ಒಮ್ಮೆ ಮಗನನ್ನು ಮುದ್ದಾಡುತ್ತಾ, ಪ್ರಮಥಗಣಗಳನ್ನು ಅಕ್ಕರೆ ಆದರದಿಂದ ನೋಡುತ್ತಾ, ದೇವತಾ ಕನ್ಯೆಯರ ಮನೋಹರ ಮಧುರ ನುಡಿಗಳನ್ನು ಕೇಳುತ್ತಾ, ರಂಭೆಯ ನರ್ತನವನ್ನು ನಿಟ್ಟಿಸುತ್ತಾ, ಮೆಚ್ಚಿ ಮಹದಾನಂದದಿಂದ ಶಂಕರನು ಇದ್ದಾನೆ. ಸುರರಾಜರಾದಿಯಾಗಿ ಎಲ್ಲರಿಂದಲೂ ಕಾಣಿಕೆಯನ್ನು ಕೈಗೊಂಡು, ಕೀರ್ತನ ಗೈಯಿಸಿಕೊಳ್ಳುತ್ತಿರುವ ಪರಶಿವನು ಪ್ರದೀಪ್ತಕರನಾಗಿ ಪ್ರಜ್ವಲಿಸುತ್ತಿದ್ದಾನೆ.

ಶ್ರೀರಾಮಾ ರಮಣಾರವಿಂದ ಭವ ಜಂಭಾರಾತ್ರಿಮುಖ್ಯಾಮರ ।
ಸ್ಫಾರಾಂಚನ್ಮಕುಟ ಪ್ರಬುದ್ಧ ಮಣಿರುಗ್ರಾರಾಜಿತಾಂಘ್ರಿದ್ವಯಂ ।
ಕಾರುಣ್ಯಾಕರನ ಪ್ರಮೇಯ ಮಹಿಮಾಧಾರಂ ಪರಂಜ್ಯೋತಿರಾ ।
ಕಾರಂ ಕಣ್ಗೆಸೆದಿರ್ದನೈಂದವ ಕಲಾ ಶ್ರೀ ಶೇಖರಂ ಶಂಕರಾ ॥

ಪರಶಿವನ ಸಭೆಯು ರಾರಾಜಿಸುತ್ತಿದ್ದಂತೆಯೇ ತಾಪಸಿಗಳ ತಂಡವೊಂದರ ಆಗಮನವು. ಸಭಾಂತರಾಳ ರತ್ನಜ್ಯೋತಿಯೆನಿಸಿ ರಮಣೀಯುಮಾಗಿ ಸಾಲಂಕಾರ ಸಾರತರ ದಿವ್ಯ ಸಿಂಹಾಸನಾಸೀನನಾಗಿರ್ದ ಉಮಾರಮಣನಂ ಕಂಡು ಮೈವೆಚ್ಚಿರ್ದ ಪರಮ ಸಾತ್ವಿಕ ಭಕ್ತಿಯಿಂ ಪದಾಬ್ಜದೊಳ್ಮೆಯಿಕ್ಕಿ ಮಣಿದೆದ್ದು ನುತಿಸುತ್ತಾರೆ.

ಜಯ ಜಯ ಜಾಹ್ನವೀಧರ ಜನಾರ್ಧನ ಪೂಜ್ಯ ಕಪರ್ದಿ ಕರ್ಮನಾಸ ।
ಜಯ ಜಲದ ಪ್ರಭಂಜನ ನಿರಂಜನ ನಿರ್ಮದ ಭಕ್ತಿ ಹೃತ್ಕುಶೇ ।
ಯ ಭುಜಗೇಂದ್ರ ಹಾರ ಭುವನೇಶ್ವರ ಬಾಲ ಶಶಾಂಕ ಶೇಖರಾ ॥

ಪರಮೇಶ್ವರನ ಲೀಲಾ ಮಹತ್ವವನ್ನು ಈ ಋಷಿವರ್ಗದಿಂದಲೇ ಪುನಃ ಪುನಃ ಕವಿಯು ಹೇಳಿಸುತ್ತಾನೆ.

"ಶಂಬರನ ಶತ್ರುವಾದ ಮನ್ಮಥನೆಂಬ ಕಮಲಕ್ಕೆ ಗಜಪ್ರಾಯನೂ, ಷಣ್ಮುಖನ ಜನಕನೂ, ತುಂಬುರಾದಿ ಗಾಯಕರ ಸಂಗೀತ ವಿಲೋಲನೂ, ವಿಷಕಂಠನೂ, ಮನುಮುನಿ ವಂದ್ಯನೂ, ಮೋಕ್ಷ ವನಿತೆಯ ಮನೋಜ ಮೂರ್ತಿಯೂ, ಮೇರು ಪರ್ವತವಾಸಿಯೂ ಆದ ಪರಮೇಶನೆ ಎಲ್ಲವೂ ನೀನೆ ಆಗಿರುವೆ. ಮೂರು ಲೋಕಗಳನ್ನು ಜಯಿಸಿ, ಅಗ್ನಿಯನ್ನು ಆಜ್ಞೆಯಲ್ಲಿಟ್ಟುಕೊಂಡು ಆಳ್ದ ಅರಸನು ನೀನು. ನೈರುತ್ಯನು ಬಳ್ಕಿ, ಇಂದ್ರನು ಅಂಜಿ, ಅಗ್ನಿಯು ಕುಂದಿ, ಯಮನು ನಿಶ್ಶಕ್ತನಾಗೆ, ವಿಷ್ಣುವು ಕುಗ್ಗಿ, ಭೂಮಿಯು ಹೆದರಿ, ಸೂರ್ಯನು ಮೂರ್ಛೆಹೋಗೆ, ಸಕಲ ದೇವತೆಗಳೆಲ್ಲರೂ ಅಂಜಿಕೆ

ಯಿಂದ ಜೀಳಿ, ಇಡೀ ಪ್ರಪಂಚವನ್ನೇ ನುಂಗುತ್ತಿದ್ದ ಕಾಲಕೂಟ ವಿಷವನ್ನು ನೀನು ಕುಡಿದು ಪ್ರಪಂಚವನ್ನೇ ಪಾಲಿಸಿದೆ. ಅಂಧಕಾಸುರನನ್ನು ನೃತ್ಯನಾಟ್ಯದಿಂದ ನಿರ್ಮೂಲಗೊಳಿಸಿ, ಗಳಿಗೆಮಾತ್ರದಲ್ಲಿ ತ್ರಿಪುರಸಂಹಾರ ಮಾಡಿ, ಜಲಂಧರನ ಜನ್ಮವನ್ನು ನೀಡಾಡಿ ಜಗದ ತೊಂದರೆಯನ್ನು ನಿವಾರಿಸಿದೆ."

ಪರಶಿವನ ಲೀಲಾ ವಿಸ್ತಾರವನ್ನು ಹೊರಗೆಡುಹುವುದು ಎಂದರೆ ಕವಿಗೆ ನಾಲಿಗೆಯ ನಾಟ್ಯವಾಡಿಸುವುದಾಗಿದೆ. ಒಡೆಯನ ಪ್ರಕೀರ್ತಿ ಪ್ರಕಾಂಡ ಪ್ರದೀಪ್ತಿ ಪ್ರಸಾರಣೆಯು ಮನೆಯವರಿಗೆ ಸಲ್ಲತಕ್ಕದ್ದಲ್ಲವೇ ? ಒಡೆಯನ ಪಾಡೇ ಮನೆಯವರ ಪಾಡು.

ಅನವದ್ಯಂ ನಿರ್ವಿಕಾರಂ ನಿರುಪಮ ಮಹಿಮಂ ನಿತ್ಯನಾದ್ಯಂತ ಶೂನ್ಯಂ।
ಘನ ತೇಜೋರಾಜಿ ಪೂರ್ಣಂ ಪ್ರಣವ ಪರಿಗತಂ ಸಚ್ಚಿದಾನಂದ ರೂಪಂ।
ವಿನುತಾಜಾಂಡಾದಿ ಬೀಜಂ ಶ್ರುತಿಚಯ ಚಕಿತ ಸ್ತುತ್ಯನೇಕಂ ಪರಂ ಪಾ।
ವನ ಶೀಲಂ ನೀನೆನಲ್ ನಿನ್ನಿರವನರಿವರಾರ್ ವಿಶ್ವದೋಳ್ ಭೋಗಿ ಭೂಷಾ

ಘನನ ಮಹತ್ವವನ್ನು ಅರಿಯಲು ಅಸಾಧ್ಯ ಎಂದುದಲ್ಲದೆ ಪರಶಿವನೇ ದಯಾನಿಧಿಯೆಂದು ಕವಿಯು ಮನವಾರೆ ನುಡಿದಿದ್ದಾನೆ.

ಸಲೆ ಮೂವತ್ತಾರು ತತ್ವಂಗಳ ತುದಿನೆಲೆ ನಿಂದಾತನುಂ ನೀನೆ ನಿತ್ಯೋ।
ಜ್ವಲ ಪಂಚ ಬ್ರಹ್ಮ ಮೂರ್ತಿ ಪ್ರಕಟಿತ ವಿಭವಂ ನೀನೆ ಸರ್ವೇಶ ನಿರ್ವಾ್ಯ।
ಕುಲ ಮಿರ್ಪತ್ತೆಯ್ದು ಸಲ್ಲೀಲೆಗಳನಸದಳಂ ತಾಳ್ದವಂ ।ನೀನೆ ಭಕ್ತಾಂ ।
ವಲಿಗೆಂದುಂ ಭೋಗ ಮೋಕ್ಷ ಪ್ರದನೆನಿಸಿದನುಂ ನೀನೆ ಕಾರುಣ್ಯ ಸಿಂಧು।

ಬಂದ ತಪಸ್ವಿಗಳ ಯೋಗಕ್ಷೇಮವನ್ನು ಪರಶಿವನು ವಿಚಾರಿಸಿದನು. ಇಂದ್ರಕೀಲ ಪರ್ವತದಲ್ಲಿ ನಿರಾಹಾರ ಜೀವಿಯಾಗಿ ಕಠಿಣ ವ್ರತವನ್ನು ಕೈಗೊಂಡು ತಪಸ್ಸು ಮಾಡುತ್ತಿರುವ ತರುಣನ ಉಗ್ರ ತಪಸ್ಸಿನಿಂದ ತಮ್ಮ ಶಾಂತಿಭಂಗವಾಗಿರುವಕಾರಣ ಆ ತಪಸ್ವಿಯನ್ನು ಬೇರೆಕಡೆಗೆ ಕಳುಹಿಸಿ ಇಲ್ಲವೇ ನಮಗೆ ಬೇರೆ ಜಾಗವನ್ನು ಕೊಡಿ ಎಂದು ಆ ಋಷಿ ವರ್ಗವು ಶಂಕರನಲ್ಲಿ ಮೊರೆಯಿಟ್ಟಿತು. ಪರಮೇಶ್ವರನು ಅವರನ್ನು ಸಮಾಧಾನ ಮಾಡಿದನು.

"ಅಂಜಿಕೆ ಬೇಡಿ, ದೇವೇಂದ್ರಸುತನಾದ ಪಾರ್ಥನೇ ಆ ತಪಸ್ವಿಯು. ವೇದವ್ಯಾಸರು ಅರ್ಜುನನಿಗೆ ಇಂದ್ರಕೀಲದಲ್ಲಿ ತಪಸ್ಸು ಮಾಡಿ ಪರಮೇಶ್ವರ

ನನ್ನು ಒಲಿಸಿಕೊಂಡು ಪಾಶುಪತಾಸ್ತ್ರವನ್ನು ಪಡೆದು ವೈರಿ ನಾಶ ಮಾಡು ಎಂದು ಉಪದೇಶಿಸುವದರಿಂದ ಆತನು ತಪಸ್ಸನ್ನು ಕೈಗೊಂಡಿದ್ದಾನೆ. ಆತನ ಅಭೀಷ್ಟವನ್ನು ಸಲ್ಲಿಸಿ ನಿಮ್ಮ ಬೇಡಿಕೆಯನ್ನು ನೆರವೇರಿಸುತ್ತೇನೆ." ಇದನ್ನು ಕೇಳಿದ ಮುನಿಸಮೂಹವು ಪರಶಿವನ ಸ್ಥಾನವನ್ನು ಬಿಟ್ಟಿತು. ಕವಿಗೆ ಪರಶಿವನು ಎಂದರೆ ಪಂಚಪ್ರಾಣ. ಅಣುವಿಗೆ ಅಣುವೂ, ಮಹತ್ತಿಗೆ ಮಹತ್ತೂ ಆದ ಆ ಪರಾಪರ ವಸ್ತುವೇ ಕವಿಯ ಜೀವದ ಜೀವಾಳವು. ಕೈಲಾಸವನ್ನು ಬಿಟ್ಟು ತೆರಳುವಾಗ ಆ ಋಷಿಸಂಕುಲವು ಪರಶಿವನನ್ನು ಪ್ರಾರ್ಥನೆ ಮಾಡಿತು.

ನೆನೆದನನಂತ ತತ್ವಮಯನಂ ಪರಮಾತ್ಮನನ ಪ್ರಮೇಯನಂ ।
ಮುನಿಜನ ಮಾನಸಾ ಮಳ ಸರೋವರ ಹಂಸನನದ್ವಿತೀಯನಂ ।
ಘನ ನಿಗಮಾಂತ ವ್ಯಗ್ಯನನನಾಮಯನಂ ಚಿದಚಿತ್ಪ್ರಪಂಚರಂ।
ಜನನನವಂ ತರೇಯನನಖಂಡ ನಿಜೋನ್ನತ ಚಿತ್ಪ್ರಕಾಶನಂ ॥

ಪರಶಿವನು 'ಭಕ್ತಕಾಯ ಮಮಕಾಯ' ನಾಗಿರುವುದು ಸತ್ಯ ಸಿದ್ಧಾಂತವೇ ಸರಿಯು. ಯಾವಾಗಲೂ ಭವನು ಭಕ್ತರ ಆಧೀನದಲ್ಲಿ ಇರುತ್ತಾನೆ. ಭಕ್ತಿಗೆ ಮಣಿಯುವ ಮಹಾ ಪುರುಷಕೆ ಕರ್ತೃವು ಪರಶಿವನೇ ಆಗಿರುತ್ತಾನೆ.

ನಾದ ಪ್ರಿಯ ಶಿವನೆಂಬರು, ವೇದ ಪ್ರಿಯ ಶಿವನೆಂಬರು.
ನಾದವ ಮಾಡಿದ ರಾವಣಂಗೆ ಅರೆಯಾಯುಷ್ಯವಾಯಿತ್ತು.
ವೇದವನೋದಿದ ಬ್ರಹ್ಮಂಗೆ ಶಿರ ಹೋಯಿತ್ತು.
ನಾದ ಪ್ರಿಯನೂ ಅಲ್ಲ, ವೇದ ಪ್ರಿಯನೂ ಅಲ್ಲ,
ಭಕ್ತಿಪ್ರಿಯ ಕೂಡಲಸಂಗಮದೇವ.

ಶಿವಭಕ್ತ ಶ್ರೇಷ್ಠ ಪಾರ್ಥನ ಹಿತವನ್ನು ಸಲ್ಲಿಸಲು ಸದಾಶಿವನು ಸಿದ್ಧನಾಗುತ್ತಾನೆ. ಬೇಂಟೆಯ ಉಜ್ಜುಗವನ್ನು ಕೈಗೊಂಡು ಅದಕ್ಕೆ ಅನುರೂಪವಾದ ಕಿರಾತವೇಷವನ್ನು ಧರಿಸುತ್ತಾನೆ.

ಜಡೆಗಳ ಬಂಟಲೇ ತಲೆವಳಿರ್ಫಣಿ ಸುತ್ತಿದ ಬಳ್ಳಿ ತಾಳ್ದ ಬಾಂ ।
ಗಡಲದು ಪುಷ್ಪ ಮಾಲೆ ಗರಿವೂಗರಿ ತೆಳ್ವಿರೆ ಬಗ್ಗ ಸಮ್ಮದೊ ।
ಳ್ಪುಡೆ ಪೊಸ ಚಲ್ಲಣಂ ಕರಿಯ ಕುಪ್ಪಸ ಮಾನೆಯ ಕೃತ್ತಿಯಂಗದೊ ।
ಳ್ತೊಡೆದ ವಿಭೂತಿಯುದ್ಧಮ ಪರಾಗ ವಿಶೇಷನನುಗ್ರಲೋಚನಂ॥

ಗೌರಿಕ ಲಲಾನುಮುಹಿಸ ।
ಸ್ವಾ-ಫಣಾ ರತ್ನ ರಾಜಿ ಗುಂಜಾಭರಣಂ ।
ಸಾರಪಿನಾಕಂ ಸನು !
ಲ್ಕಾರಂ ಬೆಸೆವಾತ್ಮ ಶಕ್ತಿತಸುಗೊಪ್ಪುನಿನಿಂ ||

ಪಾರ್ವತಿಯು ಪುಳಿಂದಿಯ ವಿಳಾಸವನ್ನು ತಾಳುತ್ತಾಳೆ. ಆಕೆಯ ಪರಿವಾರದವರಿಂದ ಬಗೆಬಗೆಯ ಶಕ್ತಿಯರೂ, ಅನುರ ಕನ್ಯೆಯರೂ ಬೇಡಿತಿಯರಾಗುತ್ತಾರೆ. ಶಿವನ ಮೇಳದವರಾದ ಗಣಸಮೂಹ, ರುದ್ರತತಿ ಇತ್ಯಾದಿಯು ಪಡೆಯಾಗುತ್ತವೆ. ಇವರೆಲ್ಲರಸಹಿತ ಬೇಟೆಯ ಸಿದ್ಧತೆಯಿಂದ ಶಬರಶಂಕರನು ಇಂದ್ರಕೀಲವನ್ನು ತಲುಪುತ್ತಾನೆ.

ಕರಿಪು ಮತ್ಸರಂ ಮದಮೋದಂತಿ ವಿನೋಹೆ ಮಖಿಗ್ಗಿ ತಾನುಮೋ ।
ಹರಿಣ ಮಾಸೂಯ ಸೂಕರ ಮಾನಲ್ಪ ತರಸುನೆ ರೆಕ್ಷವರಾಸೆಳಾಳ್ ।
ಮರಿ ಘನದಂಭನೇಕರದಿ ಲೋಭಸೀ ಸ್ಯೆಭ ಮನ್ಯುಪುತ ಶೋ ।
ತ್ಕರಮೆ ವಿಹಂಗ ಸಂಘ ಮನಿಸಿದ್ದರ್ಪನು ತದ್ವನದೊಳ್ ಮೃಡಾಜ್ಞೆಯಿಂ ॥

ಅಲ್ಲಿಯ ಕಾಡು ಮೃಗಂಗಳ ಬೇಂಟೆಯನಾಡುತ್ತ ಬೇಡ ಸೇನೆಯು ಮುಂದೆ ಮುಂದೆ ಬರುತ್ತಿರಲು ಮಂದಾರ ವೃಕ್ಷದ ನೆರಳಲ್ಲಿ ಚಂದ್ರಕಾಂತ ಶಿಲೆಯ ಮೇಲೆ ವಿಶ್ರಮಿಸಿಕೊಳ್ಳುತ್ತಿರುವ ಪುಳಿಂದನಿಗೆ ಪುಳಿಂದಿಯು ತಾಳ ವೃಂತದಿಂದ ಗಾಳಿಬೀಸುತ್ತ ಬಳಿಯಲ್ಲಿ ನಿಂತಿರಲು, ಬೇಟೆಯ ಹೊಸ ಬಗೆಯನ್ನು ಶಬರಶಂಕರನು ನೋಡುತ್ತಿದ್ದಾನೆ. ಕವಿಯ ಪಾತ್ರ ಸೃಷ್ಟಿಯ ಚಮತ್ಕಾರವು ಇಲ್ಲಿ ಗೊತ್ತಾಗುತ್ತದೆ.

ಅದೇ ವೇಳೆಯಲ್ಲಿ ಆ ಗಿರಿಯ ಕಂದರದಲ್ಲಿ ವಾಸಿಸುತ್ತಿದ್ದ ಮೂಕ ದಾನವನೆಂಬ ರಾಕ್ಷಸನು ಬೇಟೆಯ ಕಳವಳವನ್ನು ಕೇಳಿ, ಮಹಾ ವರಾಹ ರೂಪದಿಂದ ಹೊರಕ್ಕೆ ಬರಲು, ಭೀಕರ ಸೂಕರವನ್ನು ನೋಡಿದ ಬೇಡರು ಅದನ್ನು ಕೊಲ್ಲಲು ಸುತ್ತುಗಟ್ಟುತ್ತಾರೆ. ಆಗ ಅದು ಮಹಾಕೋಪದಿಂದ ತುಡುಕಿ ಮೇಲ್ವಾಯ್ದು ಅಳವಿನೊಳಗೆ ಸಿಕ್ಕಿದವರನ್ನೆಲ್ಲ ಸೀಳತೊಡಗುತ್ತದೆ. ಅದನ್ನು ಕಂಡು ಶಬರಶಂಕರನು ಅಭಯಹಸ್ತವನ್ನೆತ್ತಿ ಅವರನ್ನು ನಿಲ್ಲಿಸಿ, ಅವರನ್ನು ಅಟ್ಟಿಸಿಕೊಂಡು ಬರುತ್ತಿದ್ದ ಆ ಹಂದಿಯನ್ನು ದಿವ್ಯಬಾಣದಿಂದ ಹೊಡೆಯುತ್ತಾನೆ. ಆ ಪೆಟ್ಟಿಗೆ ಪಕ್ಕಾದ ಆ ಹಂದಿಯು ಮೂರ್ಛೆಗೊಂಡು

ಭೂಮಿಗೆ ಉರಗಿ ಪುನಃ ಚೇತರಿಸಿಕೊಂಡು ಪಾರ್ಥನಿದ್ದಲ್ಲಿಗೆ ಓಡುತ್ತದೆ. ಈ ಶಬ್ದವನ್ನು ಕೇಳಿದ ಅರ್ಜುನನು ಕಣ್ದೆರೆದು ಭಯಂಕರಾಕೃತಿಯ ಹಂದಿಯನ್ನು ನೋಡಿ, ವನದ ಋಷಿಗಳಿಗೆ ಅದು ಈತಿಬಾಧೆಯನ್ನು ಮಾಡ ಬಹುದು ಎಂದು ಯೋಚಿಸಿ, ಗಾಂಡೀವಕ್ಕೆ ಬಾಣವನ್ನು ಹೂಡಿ ಪ್ರಯೋ ಗಿಸಿ ಅದನ್ನು ಭೂಮಿಗೆ ಉರುಳುವಂತೆ ಮಾಡುತ್ತಾನೆ. ಅಷ್ಟರಲ್ಲಿಯೇ ಅದರ ಬೆನ್ನುಹತ್ತಿ ಬರುತ್ತಿದ್ದ ಶಬರಶಂಕರನು "ಈ ಹಂದಿಯು ನಮ್ಮದು ತೆಗೆದುಕೊಳ್ಳಿರಿ." ಎಂದು ಬೇಡಗಡಣದ ರೂಪದಲ್ಲಿದ್ದ ತನ್ನ ಭೂತಗಣಕ್ಕೆ ಹೇಳುತ್ತಾನೆ.

ಮುಂದೆಬರುವ ಸಂವಾದವು ಬಹು ಮನೋಹರವಾಗಿ ಇರುವುದು ಗೊತ್ತಾಗುತ್ತದೆ. ಕೆರಳಿದ ಪಾರ್ಥನು ಉರಿದು ಉಪ್ಪಾಗುತ್ತಾನೆ.

> ಎಲೆ ಶಬರ ಕಾಡ ಬಡ ನರಿ।
> ಮೊಲ ಪುಲ್ಲೆಗಳಲ್ಲಿ ನಿನ್ನ ಸಾಹಸಮುಂದೋ।
> ಬಲವುಂ ಮೆರೆಗುಮದಲ್ಲದೆ।
> ಚಲದಂಕನೊಳೆನ್ನೊಳಿಂತು ಮೇಂಮೆರೆದಿಪುವೇ॥
> ಬೇಡ ನಿನಗೇಕೆ ಸಾಹಸ।
> ದಾಡಂಬರಮೆನ್ನೊಳಾಹವಕ್ಕನುಗುಣನುಂ।
> ಜೋಡಿಸು ನಿನಗುಳ್ಳೊಡೆಯುನ।
> ನಾಡಲದೇಂ ತೋರ್ಪನೆನ್ನ ಸಾಹಸದಿರವಂ॥
> ಕರಿ ಕೇಸರಿಯಂ ಕೆಣಕಿದ।
> ಪರಿಯಂ ಪರುಟವಿಸದಿರ್ ಮದಾಂಧತೆಯಿದ್ದಾಗ।
> ತರಿ ಬಲ ಬಲಾಹಕ ಪ್ರ।
> ಸ್ಫುರಿತ ಮಹಾ ನಿಲನೊಳ ತುಳಬಳಗಾಂಡೀವಿಯೊಳ್॥

ಪಾರ್ಥನ ಧೈರ್ಯ ಶೌರ್ಯಗಳನ್ನು ಪರಮೇಶ್ವರನು ಪಾರ್ವತಿಗೆ ಕಣ್ಸನ್ನೆಯಲ್ಲಿ ತೋರಿಸಿ ನಸುನಗುತ್ತಾನೆ.

"ಎಲೈ ತಪಸ್ವಿಯೇ? ನಿನ್ನ ಶೌರ್ಯ ಹಾಳಾಗಿರಲಿ. ನಿನ್ನ ಖಡ್ಗ, ಧನುಸ್ಸು, ಶರ ಎತ್ತ? ನಿನ್ನ ತಪ ಎತ್ತ? ಇದೀಗ ವಿಚಿತ್ರವಲ್ಲವೇ?"

ಶಬರಶಂಕರನ ಪ್ರಶ್ನೆಗೆ ಅರ್ಜುನನು ಉತ್ತರಿಸುತ್ತಾನೆ:—

"ನನ್ನ ತಪದ ಚಿಂತೆಯು ನಿನಗೇತಕ್ಕೆ? ತಪಸ್ವಿಗಳಲ್ಲಿ ಉತ್ತಮನಾದ ಮೃಡನ ಶಿಷ್ಯನಾದ ನನಗೆ ಇದು ಒಪ್ಪುವದಿಲ್ಲವೇ? ನನ್ನ ಸಂಗಡ ನೀನು ಕಾಳಗ ಮಾಡಲು ಯೋಗ್ಯನಲ್ಲ. ಮತ್ತೆ ಯಾವ ಶೂರನನ್ನಾದರೂ ಕರೆ, ಯುದ್ಧ ಮಾಡುತ್ತೇನೆ."

ಪಾರ್ಥನನ್ನು ಕೆರಳಿಸುತ್ತಾನೆ:—

ಏನಾದೊಡೇನೊ ನಿನ್ನ ತ ।
ಪೋ ನೀತಿಯುದಂತದಿರ್ಕೆ ನಿನ್ನ ಧನುರ್ವಿ ।
ದ್ಯಾ ನಿಪುಣತೆಯೆಂತೆಂತನು ।
ಮಾನವು ದೀಂತೋರ್ಪುದೆನ್ನೊಳಗಿನಿಸಂ ವೆಂ ॥
ಬರಿವೇಕೆಗಳಪಿದೆ ನೀಂ ।
ಪೊಂರಮಡು ಸಮರಕ್ಕೆ ನಿನ್ನ ಭುಜಬಲದಿರವಂ ।
ನೆರೆಕಾಣ್ಬೆನೆನ್ನ ವಾಸಿಯು ।
ತೆರನಂ ಕಡೆಗಣ್ಚಿನಿಂಗಿ ಪೆರಪಾರ್ದಪನೇ ॥

ಇದನ್ನು ಕೇಳಿದ ಪಾರ್ಥನು ಕೆದರಿ ಕೆರಳಿ ಶಬರಶಂಕರನ ಮೇಲೆ ಬಾಣವೃಷ್ಟಿಯನ್ನು ಸುರಿಸಿದನು. ಭೀಕರವಾದ ಶರವೃಷ್ಟಿಯಿಂದ ಶಬರ ಶಂಕರನನ್ನು ಪಾರ್ಥನು ಮುಚ್ಚಿಬಿಟ್ಟರೂ ಶಬರಶಂಕರನು ಮಾತ್ರ ಎದೆ ಗೆಡಲಿಲ್ಲ.

ಮಂಜಿನ ಪುಂಜಮೊತ್ತರಿಸಿ ಮುತ್ತಿ ಮುಸುಂಕೆ ಭಯಾರ್ತಿಗೊಳ್ವನೇ ।
ಕಂಜ ಸಖಂ ಪತಂಗತತಿ ಪಾಯ್ದೊಡೆ ಬೆಚ್ಚುಗುವನೇ ದವಾಗ್ನಿ ವಾ ।
ತಂ ಜವದಿಂ ಸಳಂಚೆ ಗಿರಿ ಕಂಪನವಾಂಪುದೆ ಪಾಂಡುಪುತ್ರನಾ ।
ತಂ ಜಡಿದೊತ್ತೆ ಜಾರಿ ಪೆರಸಾರ್ವನೆ ಧೀರ ಧನಂಜಯಾಂಬಕಂ ॥

ಇದೇ ವಿಷಯವನ್ನು ಕುರಿತು ಕುಮಾರವ್ಯಾಸನ ವರ್ಣನೆಯು ಇರುವದು:—

ಮಂಜು ಮುಸುಕಿದೊಡೇನು ಪರ್ವತ ।
ವಂಜುವುದೆ ಹಾಲಾಹಲವನೊಣ ।
ನೆಂಜಲಿಸುವುದೆ ವಡಬ ಶಿಖಿ ನೆನೆವುದೆ ತುಷಾರದಲಿ ।
ಕಂಜನಾಳದೆ ಕಟ್ಟಿ ಪಡೆವುದೆ ।
ಕುಂಜರನು ನರಶರದ ಜೋಡಿನ ।
ಜುಂಜುಮೊಳೆಯಲಿ ಜಾಹ್ನವೀಧರ ಜಾರುವನೆ ಎಂದ ॥

ಅನೇಕ ಸಂದೇಹಗಳಿಗೆ ಜಾಗ ಕೊಡದೆ ಹೆಚ್ಚು ಹೆಚ್ಚಿಗೆ ಶಕ್ತಿ ಪ್ರದಾಯಕವಾದ ನಿದರ್ಶನಗಳನ್ನು ಕೊಟ್ಟು, ಕುಮಾರವ್ಯಾಸನ ಭಾವನೆಯನ್ನೇ ಬದಲಾವಣೆ ಮಾಡಿ, ತನ್ನದೇ ಆದ ನವಸೃಷ್ಟಿಯನ್ನು ಷಡಕ್ಷರದೇವನು ಸೃಜಿಸಿ, ತನ್ನ ಪ್ರತಿಭಾ ಸಾಮರ್ಥ್ಯವನ್ನು ಸಾಕ್ಷಾತ್ಕರಿಸಿದ್ದಾನೆ.

ಪಾರ್ಥನು ಬಿಟ್ಟ ಬಾಣಗಳೆಲ್ಲವನ್ನೂ ಶಬರಶಂಕರನು ತುಂಡು ತುಂಡು ಮಾಡಿಬಿಡಲು ಕಿರೀಟಿಯು ಆತನನ್ನು ಪ್ರಶಂಶಿಸುತ್ತಾನೆ.

“ಎಲೈ ಶಬರ, ನಿನ್ನ ಬಿಲ್ಲಾಳುತನವು ಹೊಗಳತಕ್ಕದ್ದೇ ?”

ಶಬರಶಂಕರನು ಮತ್ತೆ ಮತ್ತೆ ಬಾಣಗಳನ್ನು ಕಡಿದೊಗೆಯಲು ನರನು ಆಗ ಆತನನ್ನು ಕಂಡು ಅಪ್ರತಿಭನಾಗುತ್ತಾನೆ.

ನರಸುರ ದಾನವಾದಿಗಳೊಳಿನ್ನ ಶರಾಹತಿಗೊಡ್ಡಿ ನಿಲ್ವರಿ ।
ಲ್ಲರಿದರಿದಾಪುರಾಗುಂದದಿದಿರೊಳ್ ನೆರೆನಿಂದೆ ಕಿರಾತಕೇಳ್ ನೀ |
ನುರುತರ ಸಾಹಸಾಂಕನೆನಿಸಿಪರ್ ನಿನಗಾರ್ ಸರಿವರ್ಪರೆಳ್ಕಮೋ ।
ಸರಿಸದೆ ನಿಲ್ವುದಿನ್ನು ಪೆನತಂ ಪೊಗಳ್ದಾತನನೊಲ್ದು ಫಲ್ಗುಣಂ ॥

ಬಿಟ್ಟ ಬಾಣಗಳೆಲ್ಲವೂ ಒತ್ತರಿಕೆಯಿಂದ ಬರಿದಾದುವೇ ಹೊರತು ಫಲ್ಗುಣನಿಗೆ ಪ್ರಯೋಜನವು ಮಾತ್ರ ಫಲಿಸಲಿಲ್ಲ. ಬಾಣಗಳೆಲ್ಲವೂ ಮುಗಿದು ಹೋಗಲು ವಿಜಯನು ಕೋಪೋನ್ಮತ್ತನಾಗಿ ಗಾಂಡೀವದಿಂದಲೇ ಶಬರಶಂಕರನನ್ನು ಹೊಡೆಯಲು ಎತ್ತುವಲ್ಲಿ ಶಬರಶಂಕರನು ಅದನ್ನೇ ಎಳೆದುಕೊಂಡುಬಿಡುತ್ತಾನೆ. ಇದರಿಂದ ತನ್ನ ಕೈ ಬರಿದಾದರೂ ಅರ್ಜುನನು ಅಂಜಿ ಅಳುಕದೆ ಶಬರಶಂಕರನ ಮೇಲೆ ಕಲ್ಲು ಗುಂಡುಗಳಿಂದ ಹೋರಾಡುತ್ತಾನೆ. ಅವುಗಳನ್ನೂ ಕೂಡ ಶಬರಶಂಕರನು ಬಾಣದಿಂದ ಕತ್ತರಿಸಿಬಿಡುತ್ತಾನೆ ಅಷ್ಟೇ ಅಲ್ಲದೆ ಕೆಣಕಿ ಕೆರಳಿಸುತ್ತಾನೆ.

“ಎಲೆ ಗೊರವಾ, ಬಿಲ್ಲು ಬಾಣಗಳನ್ನೆಲ್ಲವನ್ನೂ ಕಳೆದುಕೊಂಡೆ. ನಿನ್ನ ಛಲಬಲವೆಲ್ಲವನ್ನೂ ನಾಶಪಡಿಸಿಕೊಂಡೆ. ಬೇರೆ ಬಾಣಗಳಿದ್ದರೆ ತೆಗೆದುಕೊಂಡು ಬಾ. ಇಲ್ಲದಿದ್ದರೆ ಇಲ್ಲವೆಂದು ಹೇಳು, ನಾವೇ ಕೊಡುತ್ತೇವೆ.”

ಪಾರ್ಥನು ಬೇಡನನ್ನು ಕುಸ್ತಿಗೆ ಕರೆಯುತ್ತಾನೆ.

“ಇಷ್ಟೇತಕ್ಕೆ ಉಬ್ಬಟೆ ? ಪುಳಿಂದ, ಆಯುಧಗಳಿಂದ ಮಾಡುವ ಸಮರವು ನಿಲ್ಲಲಿ. ಮುಷ್ಟಿಕಾಳಗಕ್ಕೆ ಬಾ. ನನ್ನ ಪರಾಕ್ರಮವನ್ನು ತೋರಿಸುತ್ತೇನೆ. ನಿನ್ನ ಬೇಡ ಸೇನೆಯು ನೋಡಲಿ.”

ಶಬರಶಂಕರನು ಗಿರಿಜೆಯ ಮುಂದೆ ಪಾರ್ಥನ ಪರಾಕ್ರಮವನ್ನು ಹೊಗಳಿ, ಮುಷ್ಟಿಯುದ್ಧಕ್ಕೆ ಸಿದ್ಧನಾಗುತಾಗುತ್ತಾನೆ. ಪರಶಿವನ ಭಕ್ತವತ್ಸಲನು ಎಂಬುದಕ್ಕೆ ಈ ಪ್ರಶಂಸೆಯೇ ಸಾಕಾಗಿದೆ. ಇಬ್ಬರೂ ಭುಜಕ್ಕೆ ಭುಜವನ್ನು ತಗುಲಿಸಿ ಪರಸ್ಪರ ಕಡಂಗಿ ತುಡುಕುತ್ತಾರೆ; ಪರಸ್ಪರ ತಿವಿದಾಡುತ್ತಾರೆ. ಹೊಡೆದಾಡುವುದು, ಗುರಿಯಿಟ್ಟ ಏಟನ್ನು ತಪ್ಪಿಸಿಕೊಳ್ಳುವುದು, ಈ ಪರಿಯಾಗಿ ತಮ್ಮ ತಮ್ಮ ಕೈಚಳಕವನ್ನು ತೋರಿಸುತ್ತ, ಕೆಲಹೊತ್ತು ಕಾದಿ ಪರಸ್ಪರ ಪ್ರಶಂಸಿಸಿ, ಕೊನೆಗೆ ಪಾರ್ಥನು ಪರಮೇಶ್ವರನ ಮೇಲೆ ಸಿಡಿಲಿನಂತೆ ಬೀಳುತ್ತಾನೆ. ಅತನ ಅಬ್ಬರವನ್ನು ಶಬರಶಂಕರನು ಸಹಿಸಿ, ಆತನನ್ನು ಮೆಟ್ಟಲು, ಅರ್ಜುನನ ಮೂಗು ಬಾಯಿಯಿಂದ ರಕ್ತ ಸೋರುತ್ತ ಅದನ್ನು ಕಂಡ ಶಬರಶಂಕರನು ಮರುಗಿ ಕೈತೆಗೆದು ನಿಲ್ಲುತ್ತಾನೆ. ಪಾರ್ಥನ ಧೈರ್ಯ ಮತ್ತು ಬಿಂಕವು ಮಂಗಮಾಯ.

ಬೇಡನಿಂದ ಅಪಜಯಶಾಲಿಯಾದೆನೆಂಬ ದುಃಖವು ಅರ್ಜುನನನ್ನು ಆವರಿಸುತ್ತದೆ. ಪುಳಿಂದನೊಬ್ಬನು ತನ್ನಿಂದ ಅಗ್ಗಳಿಸಿದನು ಎಂಬ ಚಿಂತೆಯಿಂದ ಪಾರ್ಥನು ಹಂಬಲಿಸುತ್ತ ಈ ಬಗೆಯ ಅವಮಾನವು ಆವರಿಸಿದುದು ಪರಶಿವನ ಪೂಜಾಲೋಪದಿಂದ ಎಂದು ಬಗೆದು ಪರಮೇಶ್ವರನ ಪರಮ ಕೃಪೆಯನ್ನು ಪಡೆಯಲು ಮಳಲು ಲಿಂಗವನ್ನು ಮಾಡಿ, ಶಿವಾಗಮೋಕ್ತ ವಿಧಿಯ ರೀತಿ ಅನೇಕ ಪುಷ್ಪ ಪತ್ರೆಗಳನ್ನು ಅದಕ್ಕೆ ಧರಿಸಿ, ಅರ್ಚಿಸಿ, ಭಕ್ತನಾದ ತನಗೆ ವೈರಿ ಜಯವನ್ನು ಕೊಟ್ಟು ಕಾಪಾಡೆಂದು ಪ್ರಾರ್ಥಿಸಿ, ಪಾರ್ಥನು ಶಬರನಿಗೆ ಇದಿರಾಗಿ ನಿಲ್ಲುತ್ತಾನೆ.

> ಇನ್ನೀಯಲ್ಲಿ ಬರ್ಪುದೆಲೆ ಧೂರ್ತ ಕಿರಾತ ಭವತ್ಪರಾಕ್ರಮ
> ಪ್ರೋನ್ನತಿಯೇತ್ತರಂ ಪೊರಮಡೆನ್ನಧಿನಾಥ ಮಹೇಶನೊಲ್ಮೆದ ।
> ಲ್ಸನ್ನಿವಾದುದಿಂದೆನಗೆ ಸನ್ನಿಸುತನಂ ನೆರೆಪೀರ್ವೆನಾ [illegible] ।
> ವನಿಗೋತು ಬರ್ಪ ಸವನಂ ಪಡೆದಿಕ್ಕುವೆ ನೀ ಕ್ಷಣಾರ್ಧದೊಳ್ ॥

ಎಂದು ಪಾರ್ಥನು ಭುಜತಟ್ಟುತ್ತಾ ಶಬರಶಂಕರನನ್ನು ನೋಡುವಷ್ಟರಲ್ಲಿ [illegible]ಲಿಂಗದ ಮೇಲೆ ಧರಿಸಿದ್ದ ಹೂ ಆತನ ತಲೆಯ ಮೇಲೆ ಇದ್ದುದನ್ನು [illegible] ನೊ ಮೆ ಇದನ್ನು ಪರೀಕ್ಷಿಸಬೇಕೆಂದು [illegible] ಶಬರಶಂಕರನನ್ನು ನೋಡಲು ಮೊದಲಿನಂತೆ ಇದ್ದುದು

ಕಾಣುತ್ತದೆ. ಆಗ ಶಬರನೇ ಪರಮೇಶ್ವರನು ಎಂದು ನಿರ್ಧರಿಸಿ, ತನ್ನ ಮರುಳುತನಕ್ಕೆ ತನ್ನನ್ನೇ ಬಹುವಾಗಿ ಹಳಿದುಕೊಂಡು ಭಯಭಕ್ತಿ ಪರವಶನಾಗಿ ಪರಶಿವನ ಸಂಗಡ ಕಾದಾಡಲು ಎಳಸಿದ. ತನ್ನ ಉದ್ಧಟ ತನಕ್ಕೆ ಪಾರ್ಥನು ಪಶ್ಚಾತ್ತಾಪ ಪಡುತ್ತಾನೆ.

ಪ್ರಣವಾರ್ಥನೊಳನುಪಮ ಗುಣ |
ಗಣಯುತನೊಳತರ್ಕ್ಯ ವಿಭವನೋಳ್ ಶ್ರುತಿನಿವಹ |
ಪ್ರಣುತನೊಳಖಿಳ ಸುಪರ್ವಾ |
ಗ್ರಣಿಯೋಳ್ ಪೆಣಸಾಂತು ಮೃಡನೊಳೆಚ್ಚಾಡಿದನೇ ||

ತನ್ನ ಅನುಗ್ರಹಾರ್ಥವಾಗಿಯೇ ಪರಮೇಶ್ವರನು ಈ ವೇಷದಲ್ಲಿ ಬಂದಿರುವನೆಂದು ಅರಿತು ಆತನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಕ್ಷಮಿಸಲು ಬೇಡಿಕೊಳ್ಳುತ್ತಾನೆ. ಆತನ ಆಕುಲತೆಯನ್ನು ಆನಂದತುಲ್ಯನಾಗಿ ಹೊಗಳುತ್ತಾನೆ.

ಸರ್ವಾಂತರ್ಯಾಮಿ ಸರ್ವಾತ್ಮಕನಧಿಗತ ಸರ್ವಾರ್ಥನಾದ್ಯಂತ ಶೂನ್ಯಂ |
ಸರ್ವಜ್ಞಂ ಸರ್ವ ತತ್ತ್ವಾಧಿಕನನುಪಮ ಮಿತಾಖಂಡಿತೈಶ್ವರ್ಯಪೂರ್ಣಂ |
ಸರ್ವಾಧಾರಂ ಸ್ವತಂತ್ರಂ ಸ್ವಗುಣನಗುಣನಾತ್ಮೇಶ್ವರಂ ನಿತ್ಯ ತೃಪ್ತಂ |
ಸರ್ವೇಶಂ ದೇವ ನೀನೋರ್ವನೆ ವಿಮಲ ಪರಂಜ್ಯೋತಿ ಸತ್ಯಂ ಕಪರ್ದೀ ||
ಸದ್ಯೋಜಾತಾದಿ ಪಂಚಾನನನೆ ಪಡೆದು ಮಹ್ವಾದಿ ಭೂತಂಗಳಂತ |
ಳ್ತದ್ಯೋಗಂ ಚಿತ್ತು ಪಂಚೀಕರಿಸಿ ಬೆರಸುತಯ್ದಯ್ದು ಭೂತಂಗಳಿಂದಂ |
ಪ್ರದ್ಯೋತಾತ್ಮಾಂಗಮಂ ಮುನ್ನಿರಪಿನೆಗಳ್ದು ತದ್ಯೋಗಮಂ ಚೇತನಾಂತ |
ಶ್ಚಿದ್ವ್ಯಕ್ತಿಂ ಗುಪ್ತಿಯಂ ಪ್ರೇರಕನೆನಿಸಿದ ಪಯ ಸೂಕ್ಷ್ಮರೂಪಂ ಮಹೇಶಾ ||

ಪರಶಿವನ ಪರೀಕ್ಷೆಯು ಮುಗಿಯಿತೋ ಏನೋ! ಆತನ ಉಗ್ರ ಪರೀಕ್ಷೆಯಲ್ಲಿ ಅರ್ಜುನನು ವಿಜಯಿಯಾದನೋ ಏನೋ!! ಆತನನ್ನು ಸಂತೈಸಿ ಶಿವನು ತನ್ನ ನಿಜರೂಪವನ್ನು ತನ್ನ ಪರಮಭಕ್ತನಿಗೆ ತೋರುತ್ತಾನೆ. ಪುನಃ ಭವಭಕ್ತರ ಆನಂದದ ಓಲಾಟ. ಆದಿಯಿಂದ ಅಂತ್ಯದ ವರೆಗೂ ಕವಿಯು ಇವರಿಬ್ಬರ ಚಿತ್ರವನ್ನು ಆಕರ್ಷಣೀಯವಾಗಿ ಚಿತ್ರಿಸಿರುವುದನ್ನು ನೋಡಿದರೆ ಕವಿಗೆ ನಾಟಕೀಯತೆಯು ನಾಟಿತ್ತು ಎಂಬುದು ಗೋಚರವಾಗುತ್ತದೆ. ಅರ್ಜುನನನ್ನು ಪರಶಿವನು ಸಂತೈಸುವ ಬಗೆಯಿದಾಗಿದೆ:

ಘಡಿಘಡ ಮುರ್ದಸ್ಸಿದಂ ಗುಹಗಜಾಸ್ಯರನಪ್ಪುತ ತೋಳ್ಗಳಿಂದೆ ಮಾ।
ಣದೆ ನರನಂ ಮನ್ಮಥಂಪರಸಿದಂ ನಿಗಮಂಗಳ ಪೆತ್ತಬಾಯ್ಗಳಿಂ ।
ಮುದುಮಲರ್ವರ್ತಿ ಮೆಯ್ದಡವಿದಂ ವರವೀವ ಕರಾಬ್ಜದಿಂದೆನೋ ।
ಡಿದನಖಿಳಾಗಮಂತಿಮನರ್ ಕಣ್ಗಳಿನಾನರನೇಂ ಕೃತಾರ್ಥನೋ ॥

ಈ ಸಂಸ್ಮರಣೀಯ ಭಾವವನ್ನು ಕುರಿತು ಕುಮಾರ ವ್ಯಾಸನ ವರ್ಣನೆ.

ಕೂಡೆ ಮೆಯ್ದಡವಿದನು ಮಿಗೆಮುಂ ।
ಡಾಡಿದನು ಮನನೋಯದಿರು ನೀ ।
ಮಾಡಿದುಪಹತಿಯೆಂಬುದೆನಗರ್ಚನೆ ನಮಸ್ಕಾರ ।
ಕೋಡದಿರು ಕೊಂಕದಿರು ಭಕ್ತಿಗೆ ।
ನಾಡೆ ಮೆಚ್ಚಿದನೆನ್ನ ಚಿತ್ತಕೆ ।
ಖೋಡಿಯಿಲ್ಲಲೆ ಮಗನೆ ಈ ಗುಹಗಣಪರಾಣೆ ।

ಇದ್ದರೆ ಇರಬೇಕು ಈ ಬಗೆಯ ತಂದೆಮಕ್ಕಳು. ಶಂಕರನು ಅರ್ಜು ನನ್ನು ಅಪ್ಪಿಕೊಂಡು ಕೇಳುತ್ತಾನೆ.

“ನಿನ್ನ ಕಟೋಕ್ತಿಗಳೇ ಮಂತ್ರ, ನಿನ್ನ ಬಾಣಗಳೇ ಹೂ, ನಿನ್ನ ಮುಷ್ಟಿಕಾಳಗವೇ ನನ್ನ ಪಾದ ಪೂಜೆ. ನಾನು ನಿನ್ನ ಭಕ್ತಿಗೆ ಸಂಪ್ರೀತ ನಾಗಿದ್ದೇನೆ. ಈಗ ನಿನ್ನ ಅಭಿಲಾಷೆ ಏನು?”

ಫಲ್ಗುಣನು ಪ್ರಾರ್ಥಿಸುತ್ತಾನೆ.

“ಸಮಸ್ತ ಶತ್ರುನಿವಹ ನಿರ್ನಾಮಕ್ಕಾಗಿ ಪಾಶುಪತಾಸ್ತ್ರವನ್ನೂ, ಬ್ರಹ್ಮ ಶಿರೋಸ್ತ್ರವನ್ನು ದಯಪಾಲಿಸು.”

ಸರೋವರದಲ್ಲಿ ಸ್ನಾನ ಮುಗಿಸಿ ಪರಮೇಶ್ವರನ ಪಾದಕ್ಕೆ ನಮಸ್ಕರಿಸಿ, ಆತನು ದಯಪಾಲಿಸಿದ ಪಾಶುಪತಾಸ್ತ್ರವನ್ನು ಪಾರ್ಥನು ತೆಗೆದುಕೊಳ್ಳು ತ್ತಾನೆ. ಅನಂತರ ಪಾರ್ವತಿಯೂ ಆತನನ್ನು ಆಶೀರ್ವದಿಸಿ ಅಸಂಖ್ಯಾತ ವಾಗಿ ಬೆಳೆಯುವ ಬಲವುಳ್ಳ ಅಂಜನಾಸ್ತ್ರವನ್ನು ಕೊಟ್ಟು ಗೌರವಿಸುತ್ತಾಳೆ. ಶಂಕರನು ಶಬರಶಂಕರನಾಗಿ ಬಂದು ಭಕ್ತ ಪಾರ್ಥನನ್ನು ಅಲುಗಿಸಿ,

ಅಲ್ಲಾಡಿಸಿ ನೋಡಿ ಅಂತ್ಯದಲ್ಲಿಯೂ ಆತನ ಭಕ್ತಿಯು ಅಣುಮಾತ್ರವೂ ಅರೆಬರೆಯಾಗದೆ, ಬೆಂಬಳಿಯಾಗಿ ಬಂದ ತೊಡರು ತೊಡಕಗಳಿಗೂ ಕುಗ್ಗದೆ ತಗ್ಗದೆ ಹಿಡಿದ ಗುರಿಯತ್ತಲೇ ಏಕೈಕ ದೃಷ್ಟಿಯಿಟ್ಟು ಕಾರ್ಯವನ್ನು ಸಾಗಿಸಿದ ಪಾರ್ಥನನ್ನು ಪರೀಕ್ಷೆ ಮಾಡಿ, ಅಂತ್ಯದಲ್ಲಿ ಅನಿವಾರ್ಯವಾಗಿ ಫಲವನ್ನು ಕೊಡುವ ಗತಿಯು ಬರಲು ಅಂತೆಯೇ ಮಾಡುತ್ತಾನೆ ಶಿವನು.

ಹರ ತನ್ನ ಭಕ್ತರ ತಿರಿವಂತೆ ಮಾಡುವ.
ಒರೆದು ನೋಡುವ ಸುವರ್ಣದ ಚಿನ್ನದಂತೆ.
ಅರೆದು ನೋಡುವ ಕಬ್ಬಿನ ಕೋಲಿನಂತೆ.
ಬೆದರದೆ ಬೆಚ್ಚದೆ ಇದ್ದೊಡೆ ಕರವಿಡಿವೆತ್ತಿಕೊಂಬ .

# ಭ ಕ್ತಿ ಯೋ ಗ.

(ಬರೆದವರು:— ಶ್ರೀ ಶಿವಾನಂದಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ,)

ಹಿಂದಿನ ಲೇಖಗಳಲ್ಲಿ ಭಕ್ತಿಯೋಗದ ಮಹಿಮೆಯನ್ನು ಕುರಿತು ಬರೆದುದಾಯಿತು. ಇನ್ನು ಭಕ್ತರಿಗೆ ಅವಶ್ಯಬೇಕಾಗುವ ಮೊದಲಿನ ನೇವನ್ನು ಕುರಿತು ವಿವರಿಸುವೆನು. ಭಕ್ತರಿಗೆ ಮಾರ್ಗದರ್ಶಕರು ಬೇಕು. ಸಣ್ಣಪುಟ್ಟ ಕೆಲಸಕ್ಕಾಗಲಿ ಚಾರುಚೂರು ಕಲಿಯುವದಕ್ಕಾಗಲಿ ಒಬ್ಬ ಗುರುವು ಬೇಕು. ಮಗುವು ಜನಿಸಿದಂದಿನಿಂದ ಅನ್ಯರಿಂದ ಏನಾದರೊಂದು ಕಲಿತುಕೊಳ್ಳುತ್ತಲೇ ಇರುವದು. ಅಲ್ಲದೆ ಸೃಷ್ಟವಸ್ತುಗಳಿಂದಲೂ ಸಹ ಕಲಿತುಕೊಳ್ಳುವದು. ಅದಕ್ಕಾಗಿಯೇ *"Nature is a teacher itself"* ಎಂದು ಇಂಗ್ಲೀಷಿನಲ್ಲಿ ಗಾದೆಯುಂಟು. ಸರ್ವವೂ ಗುರುಸ್ವರೂಪವೇ ಆಗಿದೆ. ಎಲ್ಲವನ್ನೂ ನಾವು ಗುರುಭಾವದಿಂದಲೇ ನೋಡಬೇಕು. ಗುರು ಎಂದರೆ ದೇವರು ಎಂದು ಅರ್ಥವಾಗುವದು. ಎಲ್ಲದರಲ್ಲಿ ಗುರು (ದೇವರು ಆತ್ಮ) ಇದ್ದೇ ಇರುವನು, ಆದಕ್ಕಾಗಿಯೇ ಪರಸೇವೆಯೇ ಹರಸೇವೆ ಎಂದು ನೀತಿ ಪ್ರಸಿದ್ಧವಾಗಿದೆ.

ಗಳೆ, ಗಾಡಿ, ರೊಟ್ಟಿ, ಪಲ್ಲೆ, ಕಸಗೂಡಿಸುವದು, ಸಾರಿಸುವದು ಮೊದಲಾದ ಚಿಕ್ಕಪುಟ್ಟ ವಿಷಯಗಳನ್ನು ಕಲಿಯಲಿಕ್ಕೆ ಸಹ ಗುರುಬೇಕು. ಅಂದರೆ ಇವುಗಳಲ್ಲಿ ಮುಂದುವರಿದವರಿಂದ ಕಲಿತುಕೊಳ್ಳುವರು. ಅವರೇ ಅವರಿಗೆ ಗುರುಗಳಾಗುವರು. ಅದಕ್ಕಾಗಿಯೇ ಸೋಮೇಶ್ವರನು—

"ಕೆಲವಂ ಬಲ್ಲವರಿಂದ ಕಲ್ತು ಕೆಲವಂ ಶಾಸ್ತ್ರಂಗಳಿಂ ನೋಡುತ। ಕೆಲವಂ ಮಾಳ್ಪವರಿಂದ ಕಂಡು ಕೆಲವಂ ಸುಜ್ಞಾನದಿಂ ನೋಡುತ। ಕೆಲವಂ ಸಜ್ಜನ ಸಂಗದಿಂದಲರಿಯಲ್ ಸರ್ವಜ್ಞನಪ್ಪಂ। ಪಲವುಂಪಳ್ಳ ಸಮುದ್ರವೈಹರ ಹರ ಶ್ರೀಚನ್ನ ಸೋಮೇಶ್ವರ॥

> ಸರ್ವಜ್ಞನೆಂಬವನು ಗರ್ವದಿಂದಾದವನೆ।
> ಸರ್ವರೊಳಗೊಂದೊಂದು ನುಡಿಗಲಿತು ವಿದ್ಯದ।
> ಪರ್ವತವೆ ಆದ ಸರ್ವಜ್ಞ॥

ಈ ಎರಡು ಪದ್ಯಗಳು ಸಾಮಾನ್ಯನು ಜ್ಞಾನಿಗಳಾಗುವ ಬಗೆಯನ್ನೇ ಹೇಳುವವು. ಅದಕ್ಕಾಗಿಯೇ ಸರ್ವವೂ ಗುರುಸ್ವರೂಪವಿದ್ದುದರಿಂದ ಎಲ್ಲದರಕೂಡ ಗುರುಭಾವದಿಂದ ನಿರಹಂಕಾರದಿಂದ ವಿನಯದಿಂದ ನಡೆದುಕೊಂಡು ಜ್ಞಾನಿಯಾಗಬೇಕೆಂದು ಇವೆಲ್ಲ ಸೂಚಿಸುತ್ತವೆ.

ಆಧ್ಯಾತ್ಮವು ಲಿಂಗಾಂಗ ಸಾಮರಸ್ಯವು, ಪಾರಮಾರ್ಥವು ತನ್ನ ತಾನರಿಯುವದು. ಶಿವಾನುಭವವು ಜಗತ್ತಿನ ಎಲ್ಲ ವಿಷಯಗಳಲ್ಲಿ ಅತಿ ಹಿರಿದಾದ ಶ್ರೇಷ್ಠ ವಿಷಯವು. ಅಲ್ಲದೆ ಎಲ್ಲಕ್ಕೂ ಬಹು ಕಠಿಣ ತ್ರಾಸದಾಯಕ ವಿಷಯವು. ಇಂಥದನ್ನು ಕಲಿಯುಲಿಕ್ಕೆ ಗುರು ಅತಿ ಅವಶ್ಯ ಬೇಕೇಬೇಕು. ಗುರು ಅಂದರೆ ಮಾರ್ಗದರ್ಶಕ ಆಧ್ಯಾತ್ಮದಲ್ಲಿ ಗುರು ಇಲ್ಲದೆ ಎಳ್ಳಷ್ಟೂ ದಾರಿ ಸಿಗದು. "ಗುರುವಚನದಿಂದಲ್ಲದೆ ಲಿಂಗವೆಂದೆನಿಸದು, ಗುರುವಚನದಿಂದಲ್ಲದೆ ನಿತ್ಯವೆಂದೆನಿಸದು. ಗುರುವಚನದಿಂದಲ್ಲದೆ ನೇಮವೆಂದೆನಿಸದು. ಕೂಡಲಸಂಗಮದೇವ" ಮಡಿಕೆಯ ಮಾಡುವರೆ ಮಣ್ಣೇ ಮೊದಲು ತೊಡಿಗೆಯ ಮಾಡುವರೆ ಹೊನ್ನೇ ಮೊದಲು. ಶಿವಪಥವನರಿವಡೆ ಗುರುಪಥವೇ ಮೊದಲು. ಕೂಡಲಸಂಗಮದೇವನರಿವುದಕ್ಕೆ ಶರಣರ ಸಂಗವೇ ಮೊದಲು. "ಶ್ರೀಜಗದಣ್ಣ ಬಸವಣ್ಣನವರಂತೆ ಗುರುವಿನ ಅವಶ್ಯಕತೆಯ ಬಗ್ಗೆ ಸರ್ವರೂ ಹಾಡಿದ್ದಾರೆ. ಗುರು ಇಲ್ಲದ ಆಧ್ಯಾತ್ಮ ಸಾಧಿಸಲಾರದೆಂದೇ ಸರ್ವರ ಮತವಾಗಿದೆ.

ಪ್ರತಿಯೊಂದು ಪ್ರಾಣಿಯು ಪೂರ್ಣತ್ವವನ್ನು ಪಡೆಯಲೇಬೇಕು. ಪೂರ್ಣತ್ವವೆಂದರೆ ಪರಮಾತ್ಮನಾಗುವದೇ ಆಗಿದೆ. ಇದರ ಬಗ್ಗೆ ನಮ್ಮಲ್ಲಿ ಆಕಾಂಕ್ಷೆ ಹುಟ್ಟಬೇಕು. ಅದರಂತೆ ಯೋಗ್ಯ ಗುರುವಿನ ನೆರವನ್ನು ಪಡೆಯಬೇಕು. ಹೊರಗಿನಿಂದ ಬಂದ ಯೋಗ್ಯವಾದ ಒಳ್ಳೇ ಸಹಾಯದಿಂದ ನಮ್ಮ ಆತ್ಮ ಜಾಗ್ರತಿಯಾಗುವದು. ನಮ್ಮಲ್ಲಿ ಮೊದಲೇ ಅಡಗಿಕೊಂಡಿರುವ ಶಕ್ತಿಯನ್ನು ಆ ಹೊರಗಿನ ಶಕ್ತಿಯು ಜಾಗ್ರತಗೊಳಿಸಿ ಬೆಳವಣಿಗೆಗೆ ಪ್ರಾರಂಭವಾಗುವದು. ಆಗ ಪಾರಮಾರ್ಥದತ್ತ ಜೀವನ ವಿಕಾಸವಾಗುವದು. ಈ ಸಹಾಯವನ್ನು ಕೆಲವರು ಗ್ರಂಥಗಳಿಂದ ಪಡೆಯಬೇಕೆನ್ನುವರು. ಇದು ಶಕ್ಯವಿಲ್ಲ. "ಆತ್ಮವು ಆತ್ಮದಿಂದಲೇ ಉದ್ಧಾರವಾಗುವದು." ಮತ್ತಾವುದರಿಂದ ಆತ್ಮೋದ್ಧಾರವು ಆಗುವದಿಲ್ಲ. ಈ ಜಗತ್ತಿನಲ್ಲಿಯ ಸಕಲ ಪುಸ್ತಕಗಳನ್ನು ಓದಿ ಪಾಠ ಮಾಡಿದರೂ ಅಧ್ಯಾತ್ಮವು ಸಾಧಿಸುವದಿಲ್ಲ. ಇವರು ಮಾತ್ರ ಪಂಡಿತರಾಗಬಹುದು. ಆದರೆ ಅಧ್ಯಾತ್ಮ ಗುರುಗಳಾಗಲಾರರು. ಬುದ್ಧಿಯ ಬೆಳವಣಿಗೆಯು ಪುಸ್ತಕಗಳಿಂದ ಆಗಬಹುದು. ಆದರೆ ಅಧ್ಯಾತ್ಮದ ಸ್ಥಾನವು ನಿಜವಾಗಿ ಹೃದಯವೇ ಆಗಿದೆ. ಇದೇ ದೇವರ ಮಂದಿರವು. ಇದು ವಿಕಾಸವಾಗಬೇಕಾದರೆ ಆಧ್ಯಾತ್ಮದ ಗುರುವೇಬೇಕು.

ಗುರುಗಳೆಂಬವರು ಶ್ರೋತ್ರಿಯ ಬ್ರಹ್ಮನಿಷ್ಠರಿರಬೇಕು. ಅಂದರೆ ಗುರುಗಳು ಅನುಭವಪಡೆದು ಸಾಕ್ಷಾತ್ಕಾರ ಹೊಂದಿರಬೇಕು. ಅಂದರೆ ಲಿಂಗಾಂಗ ಸಾಮರಸ್ಯ ಪಡೆದವರು, ಅಲ್ಲದೆ ಶಾಸ್ತ್ರಗಳಲ್ಲಿ ಒಳ್ಳೇ ಪಾರಂಗ ತರೂ ಇರಬೇಕು. ಇವುಗಳಲ್ಲಿ ಒಂದಿದ್ದರೆ ನಡೆಯುವದಿಲ್ಲ. ಅನುಭವ ಪಡೆದು ಶಾಸ್ತ್ರ ಬರದಿದ್ದಾರೆ ಮೂಕನಂತಾಗುವನು. ಅದನ್ನು ಹೇಳಲಿಕ್ಕೆ ಬಾರದಿದ್ದರೆ ಪ್ರಯೋಜನವಾಗುವದಿಲ್ಲ. ಬರೇ ಓದಿಕೊಂಡವನಿದ್ದು ಅನು ಭವವಿರದಿದ್ದರೆ ಕುರುಡನಂತಾಗುವದು. ಇವನೂ ದಾರಿತೋರಿಸಲಿಕ್ಕಂತೂ ಬಹಳೇ ನಿರುಪಯೋಗಿಯೇ ಸರಿ. ಲಿಂಗಾಂಗ ಸಾಮರಸ್ಯಪಡೆದ ಶಾಸ್ತ್ರಜ್ಞ ನಿದ್ದರೆ ಶಿಷ್ಯನಲ್ಲಿ ಬಹು ತೀವ್ರ ಪ್ರಗತಿಯಾಗುವದು. ಇವರೇ ಉತ್ತಮ ಗುರುಗಳು.

"ಬಳ್ಳಿ ಗುರುಡರು ಕೂಡಿ ಹಳ್ಳವ ಬಿದ್ದಂತೆ! ಒಳ್ಳೆ ಗುರುವಿನುಪದೇಶ ವಿಲ್ಲದಿರೆ। ಎಲ್ಲಿಹದೊ ಮುಕ್ತಿ ಸರ್ವಜ್ಞ ॥

ಕುರುಡರಿಗೆ ಕುರಡನು ದಾರಿ ತೋರಿದಂತಾಗಿ ಬಹು ಕಷ್ಟದಲ್ಲಿ ಬೀಳುವದರಿಂದ ಯಾವ ಗತಿಯೂ ಕಾಣದೆ ಹೋಗುವರು.

ಪರತತ್ತ್ವ ತನ್ನೊಳಗೆ ಯರವಿಲ್ಲದಿರುತಿರಲು। ಪರದೇಶಿಯಾಗಿಯಿರ ತಿ ರಲಾತನು। ಪರಮಗುರುವೆಂಬೆ ಸರ್ವಜ್ಞ ॥

ಅಧ್ಯಾತ್ಮ ಜ್ಞಾನವು ಗುರುವಿನಲ್ಲಿ ಪರಿಪೂರ್ಣ ಅಳವಡಿಸಿರಬೇಕು. ಅಲ್ಲದೆ ಒಳ್ಳೇ ನಿರಹಂಕಾರಿಯಾಗಿರಬೇಕು. ಅಂದರೆ ಅವನು ಶ್ರೇಷ್ಠಗುರು ವೆನಿಸುವನು. ಇಂಥ ಗುರುಗಳಿಂದ ಭಕ್ತನಿಗೆ ಬಹು ನೆರವಾಗುವದು. ಇಲ್ಲವಾದರೆ ಇಲ್ಲ. ಗುರುಗಳು ಇಂಥವನಾದರೆ ಶಿಷ್ಯಗೂ ಕೂಡ ಅದಕ್ಕೆ ಅದಕ್ಕೂ ಹೆಚ್ಚಿನವರೇ ಇರಬೇಕು. ಬೀಜವು ಒಳ್ಳೇ ಪುಷ್ಟವೂ ಸಜೀ ವವೂ ಇರಬೇಕು. ಅದರಂತೆ ಭೂಮಿಯೂ ಫಲವತ್ತಾದದ್ದೂ ಒಳ್ಳೇಯದೂ ಇರಬೇಕು. ಅಂದರೆ ಮಾತ್ರ ಬೀಜ ಮೊಳೆತು ಸಸಿಯಾಗಿ ಗಿಡವಾಗಿ ಮರವಾಗಿ ಫಲವನ್ನು ಕೊಡುವದು. ಅದಕ್ಕೆ ಗೊಬ್ಬರ ಹಾಕಿ ನೀರುಣಿಸ ಬೇಕು. ಕಳೆ ತೆಗೆಯಬೇಕು. ಅಗತಿಯನ್ನು ಸಹ ಮಾಡುತ್ತ ಇರಬೇಕು. ಅಂದರೆ ಮೇಲೆ ಹೇಳಿದಂತೆ ಎಲ್ಲವೂ ಸಾಧಿಸುವದು. ಗುರುಶಿಷ್ಯರು ಯೋಗ್ಯ ರಿರಬೇಕು. ಅದರಂತೆ ಶಿಷ್ಯನು ನಡೆದು ಭಕ್ತಿ ಮಾಡುತ್ತ ಹೋಗಬೇಕು ದುರಾಚಾರ ದುರ್ವಿಚಾರಗಳಿಂದ ದೂರಿರಬೇಕು. ತಾನು ಸಾಧಿಸಿದ್ದನ್ನು

ವರೆಗೆಹಚ್ಚಿ ಪರೀಕ್ಷಿಸಿಕೊಳ್ಳುತ್ತ ಗುರುವನ್ನು ನಂಬಿ ಮುಂದೆ ಮುಂದೆ ಸಾಗಬೇಕು. ಅಂದರೆ ಮಾತ್ರ ಗುರು ಸೇರುವನು, ಇಲ್ಲವಾದರೆ ಇಲ್ಲ. ಅದಕ್ಕೆ ವಿವೇಕಾನಂದರು ಅನ್ನುವದೇನಂದರೆ "ಗುರುಗಳು ಒಳ್ಳೇ ಅದ್ಭುತ ರಾಗಿಯೇ ಇರಬೇಕು. ಇವರಿಬ್ಬರೂ ಅಸಾಧಾರಣ ಅದ್ಭುತರಾದಾಗ ಮಾತ್ರ ಸುಂದರ ಆಧ್ಯಾತ್ಮಿಕ ಜೀವನ ವಿಕಾಸವಾಗುವದು." ಇಂಥವರೆ ನಿಜವಾದಗುರು ಗಳು, ಇಂಥವರೇ ನಿಜವಾದ ಶಿಷ್ಯರು. ಉಳಿದವರೆಲ್ಲ ಕಾಜಿನ ಶಿಶೆಗಳೇ ಸರಿ.

ಶಿಷ್ಯನು ಗುರುಗಳನ್ನು ಹುಡುಕುತ್ತ ಹೋಗುವ ಕಾರಣವೇ ಇಲ್ಲ ಭೂಮಿ ಸಿದ್ಧವಾದಾಗ ಬೀಜವು ತಾನೇ ಅದರೆಡೆಗೆ ಬರುವದು. ಅದರಂತೆ ಶಿಷ್ಯನು ತನ್ನ ಸಿದ್ಧತೆಯನ್ನು ಮೊದಲು ಮಾಡಿಕೊಂಡಾಗ ಗುರುಗಳು ಅವ ನೆಡೆಗೆ ತಾವಾಗಿಯೇ ಸಾಗಿ ಬರುವರು. ಅನೇಕರು ಇದರಂತೆ ಮಾಡಿ ದ್ದಾರೆ. ಶ್ರೀ ರಾಮಕೃಷ್ಣರ ಕಡೆಗೆ ಬ್ರಾಹ್ಮಣಿ ಎಂಬ ಸ್ತ್ರೀ ಗುರುತಾಯಿಯೂ ತೋತಾಪುರಿ ಎಂಬ ನಿರ್ವಿಕಲ್ಪದ ಗುರುವೂ ಸಾಗಿ ಬಂದು ಅವನಿಗೆ ಸಹಾಯ ಮಾಡಿದರು. ಹೀಗೆ ಅನೇಕ ಉದಾಹರಣೆಗಳು ಆಗಿರುವವು. ಶಿಷ್ಯನ ಹೃದಯದಲ್ಲಿ ಆಕರ್ಷಣ ಶಕ್ತಿ ಚನ್ನಾಗಿ ವಿಕಾಸಹೊಂದಿದಾಗ ಅವನನ್ನು ತೃಪ್ತಿಪಡಿಸುವ ಗುರು ಸಾಗಿ ಬರುವನು. ಕಾರಣ ಶಿಷ್ಯನು ತನ್ನ ಕೆಲಸ ವನ್ನು ಸರಿಯಾಗಿ ಮಾಡಿಕೊಂಡಿರಬೇಕು. ಅಂದರೆ ಇದೆಲ್ಲ ಸಾಧಿಸುವದು. ಇಲ್ಲವಾದರೆ ಇಲ್ಲ. ಅಂದರೆ ಗುರುವಿನ ಬಗ್ಗೆಯೂ ಅಷ್ಟು ಹಂಬಲಕಾತರ ನಾಗಬೇಕು. ಯೋಗ್ಯ ಗುರು ದೊರಕಿದರೆ ದೇವರೇ ಸಿಕ್ಕಂತೆ. ಅವನ ಕೆಲಸವು ಮುಗಿದಂತೆ. ಅವನು ದಂಡೆಯನ್ನು ಕಂಡಂತೆ ಆಗುವದು. ನಿಜ ವಾಗಿ ಗುರುವಿನ ಮಹಿಮೆಯೂ ಕೂಡ ಅತಿಯಾಗಿಯೇ ಇರುವದು. ಗುರುವೇ ಬ್ರಹ್ಮ ವಿಷ್ಣು ಮಹೇಶ್ವರ ಸ್ವರೂಪರು. ಗುರುಗಳು "ಬ್ರಹ್ಮಾನಂದಂ ಪರಮ ಸುಖದಂ ಕೇವಲಂ ಜ್ಞಾನಮೂರ್ತಿಂ । ದ್ವಂದ್ವಾತೀತಂ ಗಗನಸದೃಶ್ಯಂ ತತ್ವಮಸ್ಯಾದಿ ಲಕ್ಷ್ಯಂ ॥ ಏಕಂ ನಿತ್ಯಂ ವಿಮಲ ವಚನಂ ಸರ್ವದಾ ಸಾಕ್ಷಿ ಭೂತಂ । ಭಾವಾತೀತಂ ತ್ರಿಗುಣ ರಹಿತಂ ಸದ್ಗುರುಂ ನಮಾಮಿ" ಎಂದು ಗುರುವಿನ ವರ್ಣನೆ ಇರುವದು. ಇನ್ನು ಗುರುಗಳ ಮಹಿಮೆಯನ್ನು ಬಲ್ಲ ವರು ಅನೇಕ ಬಗೆಯಾಗಿ ಹಾಡಿರುವರು. ಇಂಥ ಗುರುಗಳು ಸಿಕ್ಕರೆ ಯಾರಿಗೆ ಯಾತರ ಚಿಂತೆ ಕೊರತೆ ? ಇಂಥ ಗುರುಗಳನ್ನು ಭಕ್ತನು ಶಿಷ್ಯನು ಪಡೆಯಲಿಕ್ಕೆ ಸದಾ ಸಿದ್ಧನಾಗಿ ಹಂಬಲಿಸುತ್ತಿದ್ದರೆ ಶಕ್ಯವಾಗುವದು. ದೇವರು ನಿಜವಾಗಿ ಬೇಕೆಂದು ಅನಿಸಿದಾಗ ಗುರುಗಳು ಸಾಗಿ ಬರುವರು.

ಒಮ್ಮೆ ಒಬ್ಬನು ಶ್ರೀ ರಾಮಕೃಷ್ಣರಿಗೆ ದೇವರನ್ನು ತೋರಿಸೆಂದು ನಿತ್ಯ ಕೇಳುತ್ತಿದ್ದನು. ಆದರೂ ಅವನ ಕಡೆಗೆ ಅವರು ಲಕ್ಷ ಹಾಕಿರಲಿಲ್ಲ. ಒಂದು ದಿನ ಇದರಂತೆ ಅವನು ಕೇಳಲು ಅವನನ್ನು ಗಂಗಾನದಿಗೆ ಕರೆದು ಕೊಂಡು ಹೋಗಿ ನೀರಲ್ಲಿ ಮುಳುಗಲು ಹೇಳಿದರು. ಅದರಂತೆ ಮಾಡಲು ಗುರುಗಳು ಅವನ ಕುತ್ತಿಗೆಯನ್ನು ಹಿಡಿದು ನೀರಿನಿಂದ ಹೊರಗೆ ಏಳದಂತೆ ಯತ್ನಿಸಿದರು. ಶಿಷ್ಯನು ಒಳಗೇ ಪ್ರಾಣದಾಶೆಗಾಗಿ ಬಹು ಕಸಿವಿಸಿಗೊಂಡು ಹೊರಗೆ ಬರಬೇಕೆಂದು ಯತ್ನಿಸಿದನು. ಕೆಲವು ಹೊತ್ತಿನ ಮೇಲೆ ಗುರು ಗಳು ತಮ್ಮ ಕೈಯ್ಯನ್ನು ಬಿಡಲು ಗಡಬಡಿಸಿ ಗಾಬರಿಯಾಗಿ ಆ ಶಿಷ್ಯನು ಹೊರಗೆ ಬಂದನು. ಆಗ ಗುರುಗಳು ಶಿಷ್ಯನಿಗೆ ಕೇಳಿದರು–"ನೀರಲ್ಲಿ ನಿನಗೆ ಏನು ಬೇಕಾಗಿತ್ತು ?" ಆಗ ಶಿಷ್ಯನು–"ಆಗ ನನಗೆ ಹವೆಯ ಅವಶ್ಯಕತೆ ಬಹಳೇ ಆಗಿತ್ತು. ಪ್ರಾಣ ಹಾರಿಹೋಗುವಂತಾಗಿತ್ತು. ಹವೆಗಾಗಿ ನಾನು ಒದ್ದಾಡಿ ಚಡಪಡಿಸುತ್ತಿದ್ದೆನೆಂದನು." ಅದರಂತೆ ನಿನಗೆ ನಿಜವಾಗಿ ದೇವರು ಬೇಕಾದರೆ ಮಾತ್ರ ಸಿಗುವನು. ತೋರಿಸುವವನೂ ಕೂಡ ನಿನ್ನೆಡೆಗೆ ಧಾವಿ ಸುವನು ಎಂದು ಹೇಳಿದರು. ಇದರಿಂದ ಮೇಲಿನ ಅರ್ಥವೇ ಹೊಳೆಯು ವದು. ನಿಜವಾಗಿ ಶಿಷ್ಯನ ತಯಾರಿಯು ಬಹಳ ಬೇಕಾಗುವದು. ಅಂದರೆ ಕಾರ್ಯ ತೀವ್ರ ಸಾಧಿಸುವದು.

ಇನ್ನೊಮ್ಮೆ ಒಬ್ಬನು ಶ್ರೀ ರಾಮಕೃಷ್ಣದೇವರ ಹತ್ತರ ಬಂದು—"ಗುರು ಹೆಚ್ಚೋ ಅಥವಾ ಶಿಷ್ಯನು ಹೆಚ್ಚೋ ?" ಎಂದು ಪ್ರಶ್ನೆಯನ್ನು ಕೇಳಿದನು. ಅದಕ್ಕೆ ಗುರುಗಳು–"ಗುರುಗಳು ಹೆಚ್ಚೆನ್ನುವದಕ್ಕೆ ಯಾವ ಸಂಶಯವೂ ಇಲ್ಲ." ಆಗ ಶಿಷ್ಯನು–"ಹಾಗಾದರೆ ನನ್ನನ್ನು ಈಗಲೇ ಗುರು ಗಳನ್ನಾಗಿ ಮಾಡಿರಿ. ಶಿಷ್ಯನನ್ನಾಗಿ ಮಾಡುವದು ಅವಶ್ಯವಿಲ್ಲ. ಯಾಕಂದರೆ ಶಿಷ್ಯನು ಕಡಿಮೆಯುವನು, ಗುರುಗಳು ಹೆಚ್ಚಿನವರು" ಎಂದು ಹೇಳಲು, ಗುರುಗಳು ನಕ್ಕುಬಿಟ್ಟರಂತೆ. ಅಂದರೆ ಈಗಿನ ಕಾಲದಲ್ಲಿ ಶಿಷ್ಯರು ಸಿಗು ವದು ಬಹು ವಿರಳ ಆದರೆ ಗುರುಗಳು ಸಾವಿರಗಟ್ಟಲೆ ಸಿಗುವರು. ಅಂದರೆ ಯಾರೂ ಯಾವದನ್ನೂ ಪಡೆಯಲು ಯತ್ನಿಸುವದಿಲ್ಲ, ಶ್ರಮವಹಿಸುವದಿಲ್ಲ. ನಡೆದು ಪಡೆದವನು ಶಿಷ್ಯನು. ಆತನೇ ಅಂತ್ಯದಲ್ಲಿ ಗುರುವಾಗುವನು. ಈಗಿನವರು ಯಾವದನ್ನೂ ಸಾಧಿಸದೆ, ತ್ಯಾಗ ವೈರಾಗ್ಯ ಪಡೆಯದೆ, ತಪ ವನ್ನು ಮಾಡದೆ ಗುರುಗಳಾಗಬೇಕೆನ್ನುವರು. "ಖಂಡಿಸಿದ ಮನವಿಲ್ಲ, ದಂಡಿ

ಸಿದ ತನುವಿಲ್ಲ। ಕಂಡ ಕಂಡವರು ಹಂದರೆ ಕೈಲಾಸ | ರಂಡೆಯರ ಹೊರಗೆ ಸರ್ವಜ್ಞ॥" ಯೋಗ್ಯ ಸಾಧನವಿಲ್ಲದೆ ಯಾವ ಸಿದ್ಧಿಗಳು ಶಿಗುವದೇ ಇಲ್ಲ. ಮೊದಲು ಶಿಷ್ಯನಾಗಿ ಒಳ್ಳೇ ಪರಿಶ್ರಮ ವಹಿಸಿ ಸರ್ವವನ್ನೂ ಪಡಕೊಳ್ಳದ ಹೊರತು ಗತಿ ಇಲ್ಲ. ಅಲ್ಲದೆ, "ಗುರುವಿನ ಗುಲಾಮನಾಗುವತನಕ ದೊರೆಯ ದಣ್ಣಾ ಮುಕ್ತಿ" ಎಂದು ಒಬ್ಬನು ಹಾಡಿದ್ದಾನೆ. ನಿಷ್ಕಾಮ ಸೇವೆಯ ಹೊರತು ಕಾಯ ಶುದ್ಧಿಯಾಗುವದಿಲ್ಲ. ಹೃದಯ ಪವಿತ್ರವಾದ ಮೇಲೆ ಸಿದ್ಧಿಗಳು ಸಾಧಿಸುವವು. ಹಾಗೇ ನಿತ್ಯ ಶಾಸ್ತ್ರಾಧ್ಯಯನವೂ ನಡೆಯಬೇಕು. ಬಹುವಾಗಿ ನಡೆದು ಶಿಷ್ಯನಾಗಬೇಕು. ಸಹಜ ಶಿಷ್ಯನಾದರೆ ಸಾಧಿಸುವದಿಲ್ಲ.

ಹಲವರು ಈಗಿನ ಕಾಲದಲ್ಲಿ ಉಪದೇಶ ತಕ್ಕೊಂಡ ಮರುದಿನವೇ ದೊಡ್ಡ ಗುರುಗಳಾಗಿಯೇಬಿಡುವರು. ಅಲ್ಲದೆ ತಾವೇ ಸರ್ವಜ್ಞ ಮೂರ್ತಿಗಳೆಂದು ಘನಾಡಂಗುರವಾಗಿ ಸಾರುವರು. ಅಲ್ಲದೆ ಉಳಿದ ಅಜ್ಞರನ್ನು ಈ ಸಂಸಾರಸಾಗರದಿಂದ ಸಹಜ ದಾಟಿಸಲು ತಮ್ಮ ಹೆಗಲ ಮೇಲೆ ಹೊರುವ ಹೊಣೆಯನ್ನು ಹೊರುವರು. ತಾನು ಈಸಲಾರದೆ, ಈಸು ಸಹ ಕಲಿಯದೆ ಅನ್ಯರನ್ನು ಹೊತ್ತುಕೊಂಡು ಹೊಳೆಯಲ್ಲಿ ಈಸಿ ಹೊಳೆ ದಾಟಿಸುವೆನೆಂದು ಹೇಳುವವನ ಮಾತು ಎಷ್ಟು ಹಾಸ್ಯಾಸ್ಪದವಾಗಿರುವದೋ ಅದಕ್ಕೂ ಹೆಚ್ಚಿನ ಹಾಸ್ಯಾಸ್ಪದವು ಇಂಥ ಗುರುವಿನ ಪಾಲಿಗೆ ಬರುವದು.

ಅಲ್ಲಿ ಗುರುವಿನ ಮಗ ಗುರು, ಅವನ ಮಗನೂ ಗುರು ಎಂದು ಗುರುವರ್ಗ ಅಥವಾ ಗುರುಜಾತಿಯೊಂದು ಬಹುಕಡೆಗೆ ಇರುವದುಂಟು. ಇದಂತೂ ಬಹು ಕೀಳು ಪದ್ಧತಿಯು. ಇವರಿಗೆ ಭೂಲೋಕದ ರುದ್ರರೆಂದೂ ಭೂಲೋಕದ ದೇವತೆಗಳೆಂದೂ ಅನ್ನುವರು. ಏನೂ ತ್ರಾಸು ಇಲ್ಲದೆ ಗುರುಗಳಾಗಿರುವರು. ಇವರು ಭಕ್ತರನ್ನು ಶಿಷ್ಯರನ್ನು ದುಡಿಸಿಕೊಂಡು ಅವರಿಂದ ಊಟ ದಕ್ಷಿಣೆ ಹೊಡೆಯುವರು. ಈ ಹೇಸಿ ಪದ್ಧತಿಯು ಮೊದಲು ಹೋಗಬೇಕು. ಇದರಿಂದಲೇ ಧರ್ಮವು ಕೀಳಮಟ್ಟಕ್ಕೆ ಇಳಿಯಹತ್ತಿದೆ. ಗುರು ಪದ್ಧತಿಯು ಮಹಾತ್ಮಾ ಬಸವಣ್ಣನವರು ಹೇಳಿದಂತೆ ಇರಬೇಕು. ಪ್ರತಿಯೊಬ್ಬರು ಜಾತಿಯಿಂದ ಹೊಲೆಯರೇ ಸರಿ. ಕ್ರಿಯೆಯು ಹೆಚ್ಚೆಚ್ಚಾಗಿ ನಿಷ್ಕಾಮ ಒಳ್ಳೇ ಶುದ್ಧ ಸಾತ್ವಿಕವಾದಾಗ ಮಾತ್ರ ಎಲ್ಲರೂ ಬ್ರಾಹ್ಮಣರಾಗುವರು. ಬ್ರಹ್ಮಜ್ಞಾನಉಳ್ಳವರೇ ಬ್ರಾಹ್ಮಣರು. ಇವರೇ ಜಂಗಮರು.

ಅವರೇ ಗುರುಗಳು, ಅವರೇ ಶರಣರು. ಈ ಪದ್ಧತಿಯು ಅವುಲಿನಲ್ಲಿ ಬರಬೇಕು. ಗುರುತ್ವವು ಒಂದು ವರ್ಗದ ಕೈಯೂ ಇರುವದು ಎಷ್ಟು ಮಾತ್ರಕ್ಕೂ ಸರಿ ಎನಿಸಲಾರದು. ಹೀಗಾಗುವದರಿಂದ ಯೋಗ್ಯ ಗುರುಗಳು ದೊರೆಯಲಾರದಕ್ಕಾಗಿ ಬೇರೆ ಮತಪಂಗಡದ ಗುರುಗಳಿಗೆ ಶರಣು ಹೋಗಬೇಕಾಗುವದ.

(ಮುಂದೆ ಸಾಗುವದು.)

## ಐ ಕ್ಯ ಧ್ವ ನಿ

॥೧॥

ಶಿವನು ತನ್ನಯ ಲೀಲೆಯಲಿ ।
ಜೀವಕೋಟಿಗಳ ಗಣವನು ।
ನವ್ಯ ವಿಧದಿಂದ ಸೃಷ್ಟಿಯ ಮಾಡುತ ನೆಲಸದೀ ಜಗವಾ ।
ವಿವಿಧೋಪಸೇವೆಯಲಿ ನೆರೆ ।
ತವ ನಾಮ ಸ್ಮರಿಸದ ನರರು ।
ಭವದಲ್ಲಿ ಬೀಳ್ವುದಕೆ ತವನಾಮವೆ ಕಾರಣವು ಶಂಕರಾ ॥

॥೨॥

ಜಂಗಮರ ಜಾತಿಯಲ್ಲಿಯೇ ।
ಜಂಗುಪಿಡಿದು ಪುಟ್ಟಿದವರು ।
ಪುಂಗ ಮಾನವರೆಂದು ಪೂಜಿಸಲು ಶಿವನಪ್ಪರೌ ಮಾನವಾ ॥
ಜಗಕೆವ್ಯಾಪಿತವಾದ ಗುಣ ।
ಸುಗುಣ ಸಂಪನ್ನ ಈಶನ ।
ಸುದ್ಗುಣಗಳಾವನಲಿ ನೆಲಸಿಹವೋ ಆತನೇ ಜಂಗಮಾ ॥

॥೩॥

ಸತ್ಕುಲದಲಿ ಜನಿಸಿದವರು ।
ಸತ್ಕೀರ್ತಿಯನುರೆ ಪೊಂದರು ।
ಸಧ್ಯಾನ ಸದ್ಧರ್ಮ ಸುವಿಚಾರವಿದು ಶಿವನೊಲುಮೆಗೆ ಕಾರಣ ॥

ಜಾತಿಯಲಿ ಕೀಳಾಗಿ ಸಲೆ ।
ನೀತಿಯನು ಬಿಡದಿರ್ಪ ನರ ।
ಯಾತರಿಂದವನು ಕೀಳನೋ ಶಿವನೊಲುಮೆಗೆ ಜಗದೀಶ್ವರಾ ॥

॥೪॥

ಶಿವನಾಮಸ್ಮರಣೆ ಸಕಲಕೆ ।
ಭಾವಭೇದವನರಿಸದಿದೆ ।
ಶಿವಕಲಿಯರಿಯದೆ ಭೇದವಂ ಪುಟ್ಟಿಸಿ ಗಣನೆಯಂ ಮಾಳ್ಪರ್ ॥
ಜಾತಿಭೇದಗಳೆಲ್ಲಿಯೋ ? ।
ಅತಿವೆ ಭವನೀಡಿಲ್ಲ ನೀ !
ಸತ್ ಸಂಪದವ ನೀಡಿರುವೆನುರೆತಿಳಿಯ ದಂದರಾಗಿವೆನಾವ್ ॥

॥೫॥

ಆಶ್ರಮಗಳಧಿಕಲ್ಲ ಕುಲ ।
ರಚನೆ ಪೂಜ್ಯವಲ್ಲ ಸಲೆ ।
ಅರಸಿಕವು ಶಿವನಾಮಸ್ಮರಣೆ ಸಮಯದಲೆಲ್ಲರೊಂದಾಗಿಹೆವ್ ॥
ಜಂಗಮವು ಅಧಿಕವಲ್ಲಂ ।
ಬ್ರಾಹ್ಮಣ ಬ್ರಹ್ಮವಲ್ಲಂ ।
ಶೈವ ಶಿವನಲ್ಲಂ ಆತ್ಮತತ್ವ ಹಿಡಿದಲ್ಲಿ ನಿಜರೂಪೊಂದಂ ॥

॥೬॥

ಸಕಲರು ಒಂದಿಹರು ತಿಳಿ ।
ಸಕಲ ಜೀವ ಒಂದಿದೆಯರಿ ।
ಸಕಲೆಲ್ಲಕೆ ಆತ್ಮ ಒಂದಿವೆ ದೃಢವಾಗಿವಂಬೊ ಮಾನವಾ ॥
ಶಿವಕಲೆಯುಳ್ಳವರೆಲ್ಲರ್ ।
ಶಿವನ ರೂಪವೆಂದರಿಯೊ ।
ಶಿವನಲ್ಲಿ ಭೇದವಂ ಮಾಡದೆ ಜೀವನಂ ಪಾವನವ ಮಾಡು ॥

— ಈಶ್ವರ ಈ. ಕಳಕಣ್ಣವರು (ಸಾ॥ ಭೂಷಣ)
ಬೆಳಗಾವಿ

From
*Shivanubhava*
*Office*
**BIJAPUR**

ಶ್ರೀ. ಎಸ್. ವ್ಹಿ. ಹೆಂಜಿ
ಬಸವೇಶ್ವರ ಹಾಯ್‌ಸ್ಕೂಲ
ಪೊ— ಬಾಗಲಕೋಟ

**R. N. B. 2554**



ಈ ಪತ್ರಿಕೆಯನ್ನು ಇದರ ಸಂಪಾದಕರಾದ ರಾ|| ಬ|| ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪೂರ ವಾರ್ಡ ನಂ. ೨. ಮನೆ ನಂ ೧೩೬೮ ರಲ್ಲಿರುವ ಹಿತಚಿಂತಕ ಪಾವರ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.




ಸಂಪುಟ 31

ಸಂಪಾದಕರು

**ಡಾ|| ರಾ. ಬ. ಫ. ಗು. ಹಳಕಟ್ಟಿ,**

ಬಿ. ಎ. ಎಲ್. ಎಲ್. ಬಿ.

**ವಿಜಾಪುರ.**

[ವಾರ್ಷಿಕ ಚಂದಾ ೫-೧೨-೦ ಅಂಚೆಯ ವೆಚ್ಚ ಬೇರೆ]

**ಜುಲೈ ೧೯೫೭**

# ವಿಷಯಾನುಕ್ರಮಣಿಕೆ



# ವೀರಶೈವವು ಶಕ್ತಿವಿಶಿಷ್ಟಾದ್ವೈತವೇ ಹೌದು.

[ಹಿಂದಿನ ಸಂಚಿಕೆಯಿಂದ ಮುಂದುವರೆದದ್ದು]

[ಲೇಖಕರು:- ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ.]

ವೀರಶೈವ ಸಿದ್ಧಾಂತ (ವಚನಶಾಸ್ತ್ರಸಾರ ಭಾಗ-೨) ಎಂಬ ಗ್ರಂಥದಲ್ಲಿ ನವವಿಧ ಶಕ್ತಿಗಳ ವಿವರವನ್ನು ಬಹು ಸಮಂಜಸವಾಗಿ ಹೇಳಿದ್ದಾರೆ. (೧) ಕ್ರಿಯಾಶಕ್ತಿ, (೨) ಜ್ಞಾನಶಕ್ತಿ, (೩) ಇಚ್ಛಾಶಕ್ತಿ, (೪) ಆದಿಶಕ್ತಿ. (೫) ಪರಾಶಕ್ತಿ, (೬) ಚಿತ್‌ಶಕ್ತಿ, (೭) ನಿರಾಲಂಬಶಕ್ತಿ, (೮) ನಿಭ್ರಾಂತ ಶಕ್ತಿ, (೯) ನಿರವಯಶಕ್ತಿ. ಈ ಪ್ರಕಾರ ಒಂಭತ್ತು ಪ್ರಕಾರದಿಂದ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ, ನಿಷ್ಕಳಂಕ, ನಿಶೂನ್ಯ, ಗಣಂಗಳ ಭಕ್ತಿ ಜ್ಞಾನ ವೈರಾಗ್ಯ ಆಚಾರ ವಿಚಾರ ನಡೆನುಡಿ ಅರ್ಪಿತ ಅವಧಾನಕ್ಕೆ ಅರ್ಧಾಂಗಿಯಾಗಿ ಪರಶಿವಲಿಂಗ ನಾಟ್ಯಕ್ಕೆ ನಿಂದು ಅನಾದಿ ಶರಣ ಪರಾತ್ಪರ ಮೂರ್ತಿಗೆ ನವವಿಧ ಶಕ್ತಿಗಳಾಗಿರ್ಪರು.

ಈ ಗ್ರಂಥದಲ್ಲಿ ಶಕ್ತಿಯ ಬಗ್ಗೆ ಬಹಳೇ ಹೇಳಿದ್ದಾರೆ. ಸ್ಥಾನದ ಅಭಾವದ ಮೂಲಕ ಹೆಚ್ಚಿಗೆ ವಿಮರ್ಶಿಸಲಾಗಿಲ್ಲ. ಬೇಕಾದವರು ಈ ಗ್ರಂಥವನ್ನು ತರಿಸಿ ಓದಿದರೆ ವೀರಶೈವರು ನಿಜವಾಗಿ ಶಕ್ತಿವಿಶಿಷ್ಟಾದ್ವೈತಿಗಳೆಂದೇ ಹೊಳೆಯುವದು. ಈ ಗ್ರಂಥವು ೬೫೦ ಪುಟಗಳಿಂದ ಕೂಡಿದ ವಿಸ್ತಾರ ಗ್ರಂಥವಿರುವದು.

ಉದಕದೊಳಗೆ ಬೈಚಿಟ್ಟ ಬಯಕೆಯ ಕಿಚ್ಚಿನಂತೆ ಇದ್ದಿತ್ತು. ಶಶಿಯೊಳಗಣ ರಸದ ರುಚಿಯಂತೆ ಇದ್ದಿತ್ತು. ನನೆಯೊಳಗಣ ಪರಿಮಳದಂತೆ ಇದ್ದಿತ್ತು. ಕೂಡಲಸಂಗಮದೇವ ಕನ್ನೆಯ ಸ್ನೇಹದಂತಿದ್ದಿತ್ತು

ಎಂದು ಶ್ರೀ ಬಸವಣ್ಣನವರು ಕೂಡ ಜಗತ್ತಿನ ಪೂರ್ವ ಸ್ಥಿತಿಯನ್ನು ವರ್ಣಿಸಿದ್ದು ನೋಡಿದರೆ ಪರಶಿವನಲ್ಲಿ ಶಕ್ತಿ ಇದ್ದಳೆಂದು ಸಹಜ ತೋರು ವದು.

ಶಿವ ಜೀವರೈಕ್ಯ, ಲಿಂಗಾಂಗಸಾಮರಸ್ಯ ಇವೆಲ್ಲ ಶಬ್ದಗಳು ದ್ವೈತದಿಂದ ಅದ್ವೈತಕ್ಕೆ ಹೋಗುವವು. ಅದಕ್ಕೆ ದ್ವೈತಾದ್ವೈತ ಅಥವಾ ಶಕ್ತಿ ವಿಶಿಷ್ಟಾದ್ವೈತವೇ ಸರಿ.

ಸಿದ್ಧಾಂತಶಿಖಾಮಣಿಯಲ್ಲಿ ೧೦ ನೇ ಪರಿಚ್ಛೇದದಲ್ಲಿ ಅಂಗಸ್ಥಲದ ೧೯ ನೇ ಸ್ಥಲವು ಸರ್ವಾದ್ವೈತ ನಿರಸನಸ್ಥಲವನ್ನು ನಿರೂಪಿಸಲಾಗಿದೆ. ಸರ್ವವನ್ನೂ ಅದ್ವೈತಭಾವದಿಂದ ಕಾಣಬಾರದು. ಶಿವ ಬೇರೆ ಜೀವ ಅವನ ಸೇವೆ ಮಾಡಬೇಕು. ಸ್ವಾಮಿಭೃತ್ಯ ಸಂಬಂಧವಿರುಪದು. ಶಿವನು ಪ್ರೇರಕ ಜೀವನು ಪ್ರೇರ್ಯನು. ಹೀಗೆ ಭೇದದಿಂದ ಅಭೇದಕ್ಕೆ ಹೋಗುವದು.

ಲಿಂಗಸ್ಥಲದಲ್ಲಿ ೫೨ ನೇ ಭಾಂಡಸ್ಥಲ ಹಾಗೂ ೫೩ನೇ ಭಾಜನ ಸ್ಥಲಗಳಲ್ಲಿ ಪರಾಶಕ್ತಿಯ ಅಸ್ತಿತ್ವವನ್ನೂ ನಿರ್ದೇಶಿಸಲಾಗಿದೆ. ಹೀಗೆ ಅನೇಕ ಕಡೆಗೆ ಸಿದ್ಧಾಂತಶಿಖಾಮಣಿಯಲ್ಲಿ ಶಕ್ತಿವಿಶಿಷ್ಟಾದ್ವೈತದ ಅಥವಾ ಶಿವಾದ್ವೈತದ ವಿಷಯ ಬಂದಿದ್ದನ್ನು ವಾಚಕರು ಗಮನಿಸಬೇಕು. ಶ್ರೀ ನಾಗಣ್ಣನವರು ನೋಡಿದರೂ ಒಳಿತೇ ಸರಿ.

ಧಾರವಾಡ ನವಕಲ್ಯಾಣ ಮಠದ ಕುಮಾರ ಸ್ವಾಮಿಗಳ ಹೇಳಿಕೆಯ ಕಡೆಗೆ ಹೊರಳುವಾ— ತೋರುವ ತೋರಿಕೆಯಲ್ಲಿ ಸೃಷ್ಟಿಸ್ಥಿತಿಲಯ ಕಾರಣ ಕರ್ತೃವೆನಿಪ ಈ ಚಿತ್‌ಶಕ್ತಿಯ ಒಡಲಿನಿಂದ ಹೊರಹೊಮ್ಮಿದುದು. ಚಿತ್ ಶಕ್ತಿಗೆ ಸೃಷ್ಟಿಯೊಡನೆ ಸಂಬಂಧವಿದ್ದಂತೆ ಪರಶಿವನಿಗಿಲ್ಲ. ಅವನು ಕೇವಲ ನಿರ್ಲಿಪ್ತನು. ಸೃಷ್ಟಿಯ ವ್ಯವಹಾರದ ಆಗುಹೋಗುಗಳೆಲ್ಲ ಚಿತ್‌ಶಕ್ತಿಯ ಅಧೀನಕ್ಕೆ ಒಳಪಟ್ಟವುಗಳು.

ಪರಶಿವ-ಚಿತ್‌ಶಕ್ತಿ-ಸೃಷ್ಟಿಗಳ ಸಂಬಂಧವು "ಮಹಾಕರ್ತಾರನು ತನ್ನ ಶಕ್ತಿಯ ವಿನೋದಕ್ಕೆ ಜಗವ ನಿರ್ಮಿಸಿದ" ಎಂಬಂತೆ ಇದೆ.

ಸತ್-ಚಿತ್-ಆನಂದ ಸ್ವರೂಪಗಳಲ್ಲಿ ಅವನ ಸತ್ ಸ್ವರೂಪವನ್ನು ವ್ಯಕ್ತಗೊಳಿಸುವ ಇರಹು ಬ್ರಹ್ಮಾಂಡ ವ್ಯಾಪಿಯಾಗಿಯೂ ಅವನ ಚಿತ್ ಸ್ವರೂಪವನ್ನು ವ್ಯಕ್ತಗೊಳಿಸುವ ಅರುಹು ಪಿಂಡಾಂಡ ವ್ಯಾಪಿಯಾಗಿಯೂ ಇರುವದು ಪಿಂಡ-ಬ್ರಹ್ಮಾಂಡಗಳ ಐಕ್ಯತೆಯಲ್ಲಿ ಅವನ ಆನಂದ ಸ್ವರೂಪದ ಅರಿವು ಇರುವದು.

ವೀರಶೈವ ತತ್ವಜ್ಞಾನದಲ್ಲಿ ಕೇವಲದ ಸ್ತಬ್ಧಸ್ವರೂಪಕ್ಕೆ ಸ್ಥಿರ ಶಿವ ಲಿಂಗವೆಂದೂ ಸಚೇತನ ಸ್ವರೂಪಕ್ಕೆ ಚರ ಶಕ್ತಿ ಜಂಗಮವೆಂದೂ ಹೆಸರು ಚರ, ಶಕ್ತಿಯು ಕ್ರಿಯಾಪ್ರವೃತ್ತಿಯೊಂದು ದಿವ್ಯನೆನಹೇ ಅಂಗವಾಗಿ ಉಳ್ಳದ್ದು. ಶಿವಶಕ್ತಿಗಳ ಈ ಅವಿನಾಭಾವ ಸಂಬಂಧವು ಶಕ್ತಿವಿಶಿಷ್ಟಾದ್ವೈತದ ಹೃದಯವು ಪರಮಾತ್ಮನಿಗೆ ಪರಿಪೂರ್ಣವೂ ಅಖಂಡವೂ ಆದ ಅರುಹು-ಚಿತ್‌ಶಕ್ತಿಯು ಒಂದಿದೆ. ಈ ವಿಶ್ವವು ಶಿವನ ಅಂಕಿತದಲ್ಲಿ ಶಿವನ ನೆನಹಿನಿಂದ ಶಕ್ತಿಯ ಮುಖಾಂತರ ಹೊರಹೊಮ್ಮುವದು.

ವೀರಶೈವ ತತ್ವಜ್ಞಾನದಲ್ಲಿ ಶಕ್ತಿಗೆ ಶಿವನಲ್ಲಿ ಆಶ್ರಯಸ್ಥಾನವಿರುವದರಿಂದ ಅವನು ಶಿವ-ಶಕ್ತಿ ಲಿಂಗ-ಜಂಗಮ ಸತ್ಯ-ನೆನಹುಗಳ ಅವಿನಾಭಾವ ಸಂಬಂಧವನ್ನು ಎತ್ತಿ ಹಿಡಿದಿರುವನು. ಶಿವನು ವಿಶ್ವಾಧಿಕ ವಿಶ್ವೋತ್ತೀರ್ಣ ಸತ್ಯವಾದರೆ ಶಕ್ತಿಯು ವಿಶ್ವಗತ ನಿತ್ಯವಾಗಿರುವಳು.

ಈ ಶಕ್ತಿಯು ಬ್ರಹ್ಮಾಂಡ ದೃಷ್ಟಿಯಿಂದ ಸೃಷ್ಟಿ-ಸ್ಥಿತಿಲಯ ಕಾರಣ ಕರ್ತೃವೆಂದೂ, ದೇವಜ್ಞಾನದೃಷ್ಟಿಯಿಂದ ಅನುಗ್ರಾಹಕವೆಂದೂ ಮತ್ತು ಸ್ವಾನುಭವ ದೃಷ್ಟಿಯಿಂದ ವಿಷಯಾತೀತವೆಂದೂ ಕರೆಯಿಸಿಕೊಳ್ಳುತ್ತದೆ. ಶಿವನು ಅಂತರ್ಗತವಾದ ಘನವೆತ್ತ ಶಕ್ತಿಯ ಆಚೆಗಿರುವನು.

ಶಕ್ತಿಯು ಈ ಪ್ರಕಾಶಮಯ ಪರಮಶಾಂತಿಯ ಗತಿಯಲ್ಲಿ ಗಮನಗೊಳ್ಳುವುದು. ಅರುಹಿನ ಪರಾಕಾಷ್ಠತೆಯಲ್ಲಿ ಪ್ರಸರಣಗೊಳ್ಳುವದು. ಆದ್ದರಿಂದ ಪರಮನಿಂದ ಹೊರಚೆಲ್ಲಿ ಹರಿಯುವ ಪ್ರವಾಹವು ಶಾಶ್ವತದಿಂದ ಸೂಸುವ ದಿವ್ಯಗತಿಯ ಗಮನವು ಅನಾದ್ಯನಂತದ ಒಡಲಿನಿಂದ ಹೊರಹೊಮ್ಮಿದ ವಿಶ್ವವ್ಯಾಪಕವು ಆದಿಭೌತಿಕ ಶಾಸ್ತ್ರದ ದ್ರವ್ಯ ಮತ್ತು ಗುಣ ಹಾಗು ಆಧ್ಯಾತ್ಮ ಶಾಸ್ತ್ರದ ವಿಷಯ ಮತ್ತು ವಿಷಯ ಇವು ದಿವ್ಯಶಕ್ತಿಯ ದ್ವಿವಿಧ ರೂಪಗಳು.

ಪ್ರಕೃತಿಯು ನಿರಂತರವಾಗಿ ರೂಪುಗೊಳ್ಳುವ ಕ್ರಮಕ್ಕೊಳಗಾಗಿರು ವದು. ಆತ್ಮನ ಸೋಂಕಿನಿಂದ ಅದರ ಒರುಟತನವಡಗಿ ಅದರಲ್ಲಿ ನಯವು ಕಂಗೊಳಿಸುವದು. ಆಧ್ಯಾತ್ಮಿಕ ಪ್ರಕಟನೆಗೆ ಉತ್ತಮ ಉಪಕರಣವಾಗಿದೆ.

ಜೀವನವು ನಿರರ್ಥಕವಾದುದು ಭ್ರಾಂತಿಯಿಂದ ಬೆರೆತುದು ಎಂಬ ವಿಚಾರಕ್ಕೆ ಲಿಂಗವಂತರಲ್ಲಿ ಅವಕಾಶವಿಲ್ಲ. ಅದು ಸತ್ಯವಾದುದು ಸಂಪ ತ್ತಿಯಿಂದ ಕೂಡಿದುದು. ಪ್ರತಿಯೊಂದು ಕ್ಷಣವೂ ಪರಮಾನಂದ ಪರ ಮುಕ್ತಿಯ ಸ್ವರೂಪವನ್ನು ವ್ಯಕ್ತಗೊಳಿಸುವದು ಜೀವನದ ದಿವ್ಯ ಉಪದೇಶ ವನ್ನು ಅರಿಯಲಾಗದವರಿಗೆ ಅದು ಕ್ಷಣಿಕ ದುಃಖಮಯ ಎಂಬ ಭಾವ ನೆಗೆ ಅವಕಾಶವನ್ನಿತ್ತಿದೆ.

ಸರ್ವಾಂಗ ಲಿಂಗಸ್ಥಲವೆಂದು ಕರೆಯುವ ಈ ಪರಮಾದರ್ಶದಲ್ಲಿ ದಿವ್ಯ ಜೀವನದ ಸೌಂದರ್ಯ ಸಮರಸಗಳು ಮಾನವನಿಗೆ ಮುಕ್ತದ್ವಾರವಾಗಿರಿಸ ಲ್ಪಟ್ಟಿವೆ. ಜೀವನದ ವ್ಯವಹಾರವೆಲ್ಲ ಶಿವಪ್ರಪಂಚದ ವ್ಯವಹಾರವೆನಿಸಿ ಜೀವನವೆಲ್ಲ ಶಿವಮಯವಾಗುವುದು. ಮಾನವಕೋಟಿಯಲ್ಲಿ ದೇವವಕೋಟಿ ಯಲ್ಲಿ ಪರಿಣಮಿಸುವದು. ಇದುವೆ ವೀರಶೈವರ ತತ್ವಜ್ಞಾನವು ಪ್ರಪಂಚಕ್ಕೆ ನೀಡಿದ ಭರವಸೆಯು.

ಇದಕ್ಕಾಗಿ ವೀರಶೈವರು ಇಹಪರದಲ್ಲಿ ಭೇದ ಮಾಡುವದಿಲ್ಲ. ಅದ ಕ್ಕಾಗಿ ಬಸವಣ್ಣನವರು—"ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೆ? ಈ ಲೋಕದಲ್ಲಿ ಮತ್ತನಂತಲೋಕ. ಶಿವಲೋಕ ಶಿವಾಚಾರ ವಯ್ಯ. ಶಿವಭಕ್ತನಿದ್ದ ತಾವೇ ದೇವಲೋಕ ಭಕ್ತನಂಗಣವೇ ವಾರಣಾಸಿ. ಕಾಯವೇ ಕೈಲಾಸ. ಇದು ಸತ್ಯ ಶಿವನಾಣೆ ಕೂಡಲಸಂಗಮದೇವ."

"ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ. ಇಲ್ಲಿ ಸಲ್ಲು ವರು ಅಲ್ಲಿಯೂ ಸಲ್ಲುವರು. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು ಕೂಡಲ ಸಂಗಮದೇವಾ.

ಅದಕ್ಕೆ ಇಹಪರಗಳನ್ನು ವಿಂಗಡಿಸುವವನು ಸಂಸಾರದಿಂದ ಪಾರಾಗ ಲಾರನು. ಸಂಸಾರಕ್ಕೆ ಮಿಥ್ಯವೆಂದು ಹೇಳನು. ಎಲ್ಲವನ್ನು ಶಿವಪ್ರಪಂಚ ವನ್ನಾಗಿ ಮಾಡುವನು. ಮಾಯಾವಾದಿಯಾಗಿ ಕಾಯಕ ಮಾಡದೆ ವೀರ ಶೈವನು ಲೋಕವನ್ನು ಹಾಳುಮಾಡುವದಿಲ್ಲ. ಈ ಲೋಕಗಳನ್ನು ಶಿವ

ಲೋಕ ಸ್ವರ್ಗಲೋಕವನ್ನಾಗಿ ಮಾರ್ಪಡಿಸಲು ಸದಾ ಹೆಣಗುವವನು. ಕಾಮ ರಹಿತ ನಿಷ್ಕಾಮ ಪಾರಮಾರ್ಥ ಸಂಸಾರವನ್ನು ಸಾಗಿಸುವವನು. ಅದಕ್ಕಾಗಿ ವೀರಶೈವರು ಶಕ್ತಿವಿಶಿಷ್ಟಾದ್ವೈತಿಗಳಾಗಿದ್ದಾರೆ.

ಮೇಲಿನ ಅನೇಕ ಆಧಾರಗಳ ಮೇಲಿಂದ ವೀರಶೈವ ಸಿದ್ಧಾಂತವು ಶಕ್ತಿವಿಶಿಷ್ಟಾದ್ವೈತವೆಂದು ಸಕಲರಿಗೂ ತಿಳಿಯದೆ ಇರಲಾರದು. ಈಗ ತಿಳಿದರೂ ಮೊದಲು ಹಿಡಿದುದನ್ನೆಂದೂ ಬಿಡಬಾರದೆಂದು ಹಟಹಿಡಿದರೆ ಅವರನ್ನು ದಾರಿಗೆ ತರುವದು ಬಹು ಕಠಿಣ.

ಇನ್ನು ಶ್ರೀ ನಾಗಣ್ಣನವರ ವಿಷಯಗಳನ್ನು ಒಂದೊಂದಾಗಿ ತಕ್ಕೊಂಡು ಉತ್ತರಿಸುತ್ತ ಹೋಗುವೆವು. ಮಹಾ ಸಭೆಯ ಅಧ್ಯಕ್ಷರಿಗೆ ಕೊಟ್ಟ ಬಿನ್ನವತ್ತಳಿಕೆಯಲ್ಲಿಯ ವಿಷಯಗಳ ಚರ್ಚೆ ಮಾಡುವೆವು.

೧. "ನಾನೇ ಖುದ್ದಾಗಿ ಚರ್ಚೆಯಲ್ಲಿ ಭಾಗವಹಿಸಲು ಆಸಕ್ತಿಇದ್ದರೂ ಪರಸ್ಥಳದಲ್ಲಿ ಸಂಚಾರ ಮಾಡುವದಕ್ಕೆ ನನ್ನ ವಯಸ್ಸು ಅವಕಾಶವನ್ನು ಕೊಡದೇ ಇರುವದಕ್ಕಾಗಿ ನಾನು ತುಂಬಾ ವಿಷಾದಿಸುತ್ತೇನೆ" ಎಂದು ಇವರು ಬರೆದುದು ಇವರಲ್ಲಿಯ ಶಕ್ತಿಯ ಅಭಾವವೇ ಕಾರಣ. ಪ್ರತಿಯೊಂದಕ್ಕೂ ಶಕ್ತಿ ಬೇಕೆಂದು ಇವರು ಹೇಳಿದಂತೆ ಆಗುವದಿಲ್ಲವೇ ? ಬರೀ ಬ್ರಹ್ಮನನ್ನುವ ಇವರು ಹೀಗೆ ನರಳುವ ಕಾರಣವಾದರೂ ಏನು ? ಆದಿ ಶಕ್ತಿಯು ಇದರ ಪ್ರಜ್ಞೆಯನ್ನು ನಿಮಗೆ ತೀವ್ರ ಕೊಡಲೆಂದು ಬೇಡಿಕೊಳ್ಳುವೆನು.

೨. ನೀವು ಉದಹರಿಸಿದ ವಚನಗಳಾಗಲಿ, ಸಿದ್ಧಾಂತಶಿಖಾಮಣಿಯ ಪದ್ಯಗಳಾಗಲಿ ಅವು ಕಡೆಯ ಸ್ಥಲಗಳಲ್ಲಿಯವಿರುತ್ತವೆ. ಆದರೆ ಪಿಂಡಸ್ಥಲ ಹಾಗು ಸೃಷ್ಟಿರಚನೆಗಳಲ್ಲಿಯ ವಚನ ಪದ ಪದ್ಯಗಳನ್ನು ನಾವು ಮೇಲೆ ಉದಹರಿಸಿದ್ದೇವೆ. ಅವುಗಳನ್ನು ಆದ್ಯರು, ಪುರಾತನರು, ಶಿವಶರಣರು, ಜ್ಞಾನಿಗಳು ಬರೆದಿದ್ದಾರೆ.

೩. ನೀವು ೧ನೇ ವಚನದಲ್ಲಿ ನಿಷ್ಕಲ ಬ್ರಹ್ಮದಿಂದ ಜ್ಞಾನ, ಚಿತ್ತು ಎಂದು ಹೇಳಿದ್ದರ ಅರ್ಥವನ್ನು ತಿಳಿಸಿದ್ದು ನೋಡಿರಿ. ಅದೇ ಶಕ್ತಿಯಾಗುವದು. ಶಿವನಿಂದ ಬಂದವಳೇ ಇರುವಳು. ಇದರಂತೆ ಮೇಲಿನ ವಚನಗಳಲ್ಲಿ ನೋಡಿಕೊಳ್ಳಿರಿ.

೪. ಪರಶಿವನು ನಿರ್ಗುಣನು ಎಂದು ನೀವು ಹೇಳಿದ ಮೇಲೆ ಅವನ ಪುನಃ ಸರ್ವಜ್ಞ, ಸರ್ವಶಕ್ತ, ಸರ್ವಕರ್ತ ಎಂದು ಹೇಳುವದು ತಪ್ಪಾಗು

ವದು. ಇವು ಒಂದಕ್ಕೊಂದು ವಿರೋಧವಾದವುಗಳು. ಅವನು ಮಾನವ ನಿಗೆ ಕರ್ಮಾನುಸಾರ ಸುಖದು:ಖಗಳನ್ನು ಕೊಡುವವನು ಈಶ್ವರನೇ ಇದ್ದಾನೆಂದು ಸಹ ಪರಶಿವನಿಗೆ ಹೇಳಿದ್ದೀರಿ. ಅವನು ನಿರ್ಗುಣನಾದರೆ ಇವುಗಳನ್ನೆಲ್ಲ ಅವನೆಂತು ಮಾಡುವನು ?

೫. "ಲೋಕದಲ್ಲಿ ಅತ್ಯಂತ ಹೇಯವು ಅಸಹ್ಯವು ಆದ ಮಲಮೂತ್ರ, ರಕ್ತ ಮಾಂಸ ಕೊಬ್ಬು ಮೂಳೆ ಮುಂತಾದ ಪದಾರ್ಥ ಸೇರಿ ನಮ್ಮ ನಿಜ ಶರೀರವಾಗಿದೆ." ಹೀಗೆ ದುರುಳ ವೇದಾಂತಿಗಳು ಹೇಳುವರು. ಹೀಗೆ ಹೇಳುವವರು ನೀವು ಈ ಶರೀರ ಬಿಟ್ಟು ಇನ್ನೂ ಯಾಕೆ ಹೊರಟಿಲ್ಲ? ಈ ಹೊಲಸಿನಲ್ಲಿ ನೀವು ವಾಸಿಸುವ ಕಾರಣವಾದರೂ ಏನು ? ಬರೇ ಬಾಯಿಯಿಂದ ಅಂದರೆ ತೀರಲಿಲ್ಲ. ನೀವು ಬರೇ ಬ್ರಹ್ಮವಾಗಿದ್ದ ಪಕ್ಷದಲ್ಲಿ ಈ ಹೊಲಸು ಶರೀರದ ಮೇಲೆ ಮೋಹವೇಕೆ? ಈ ಶರೀರವನ್ನೇ ಸರ್ವಾಂಗ ಲಿಂಗಿಯನ್ನಾಗಿ ಮಾಡಲಿಕ್ಕೆ ಬರುತ್ತದೆ. ಈ ಜಗತ್ತಿನಲ್ಲಿ ಪರಮಾತ್ಮನಿಂದ ಬಂದುದು ಯಾವದು ಹೊಲಸಲ್ಲಿ ಅದು ಬಂದುದು ನಮ್ಮ ಕಲ್ಯಾಣಕ್ಕಾಗಿ ಹೊರತು ಬೇರೆ ಇಲ್ಲ. ಇದು ಇಲ್ಲದೆ ಒಂದು ನಿಮಿಷ ನಡೆಯದು.

೬. ಅನೇಕ ದು:ಖಗಳನ್ನು ವರ್ಣಿಸಿದ್ದೀರಿ ಅಲ್ಲದೆ ದು:ಖವೆಂದು ಮನಸ್ಸಿಗೆ ಹಚ್ಚಿಕೊಂಡರೆ ದು:ಖ, ಹಚ್ಚಿಕೊಳ್ಳದಿದ್ದರೆ ಏನೂ ಇಲ್ಲ. ಅವಕ್ಕೆ ಶಿವಶರಣರು ಸುಖದು:ಖಗಳನ್ನು ಬಿಸಾಡಿ ಕಾಯಕ ಮಾಡಿ ದೇವನ ಪರಮ ಭಕ್ತರಾಗಿದ್ದರು. ಜಗತ್ತಿನ ಬಗ್ಗೆ ಇಲ್ಲದ ತಕರಾರು ನಿಂದೆಗಳನ್ನು ಮಾಡುವದರಿಂದ ಪರಮಾತ್ಮನ ನಿಂದೆ ಮಾಡಿದಂತೆ ಆಗುವದು. ಅದನ್ನು ಹಿಂದಿನ ಹೇಳಿಕೆಯಲ್ಲಿ ನೋಡಿಕೊಳ್ಳಿರಿ.

೭. 'ಹುಟ್ಟುವದಕ್ಕೆ ಮುಂಚೆ ಏನಾಗಿದ್ದೆವು. ಸತ್ತ ಬಳಿಕ ಏನಾಗುತ್ತೇವೆ ಎಂಬುದನ್ನು ಯಾರೂ ತಿಳಿಯರೆಂದು ಹೇಳುವದು ಸಮಂಜಸವಲ್ಲ.' ಇದನ್ನು ಅನೇಕ ಶಿವಶರಣರು ಅರಿತಿದ್ದರು. ಅದರಂತೆ ಈ ಪ್ರಪಂಚದ ಬಗ್ಗೆ ತಿಳಿದೇ ಅವರು ಅನೇಕ ವಚನಗಳನ್ನು ಹಾಡಿದ್ದಾರೆ. ನೀವು ಹೇಳುವದು ಒಂದೇ ಬಾಯಿ ಬ್ರಹ್ಮವೆಂದಂತೆ ಕಾಣುವದು. ನೀವು ಬ್ರಹ್ಮರಾಗಿದ್ದರೆ ಇವುಗಳನ್ನು ಸಹಜ ತಿಳಿಯುತ್ತಿದ್ದಿರಿ. ಆದಿಶಕ್ತಿಯನ್ನೂ ಕೂಡ ಅರಿಕ್ಕಾಗಿಯೇ ನಿಲವು ಇನ್ನೂ ಅರಿತಿಲ್ಲೆಂದು ತೋರುವದು. "ಈಶ್ವರನ ವಿಷಯವನ್ನು ತಿಳಿಯುವ ಸಂಭವವೇ ಇಲ್ಲೆಂದು ಒಂದು ನಿಕ್ಕಿ ಸಿದ್ಧಾಂತ

ವನ್ನು ಹೇಳಿದ್ದು” ಮಹಾ ಅಪರಾಧ. ಇದೆಲ್ಲ ಗಂಟಾಟೋಪ ಮಾಡುವದು ಅವನನ್ನು ಅರಿಯುವದಕ್ಕಾಗಿಯೇ ಹೊರತು ಬೇರೆ ಏನೂ ಇಲ್ಲ ಅನೇಕರು ಅಂತೇ ಅನೇಕವನ್ನು ಬರೆದಿದ್ದಾರೆ.

೮. “ಪರಬ್ರಹ್ಮ ವಸ್ತು ಒಂದೇ ಸತ್ಯ. ಪ್ರಪಂಚವು ಮಿಥ್ಯ. (ಬರೀ ತೋರಿಕೆ) ಜೀವರು ಪರಬ್ರಹ್ಮ ಸ್ವರೂಪರು. ಅಂದರೆ ಪರಬ್ರಹ್ಮದ ವಿನಹ ನಿಜವಾದ ಜೀವರಾಗಲಿ ಪ್ರಪಂಚವಾಗಲಿ ಇಲ್ಲ. ಇದೇ ಅಭಿಪ್ರಾಯವನ್ನೇ ವೀರಶೈವ ಸಿದ್ಧಾಂತಕಾರರು ಸಿದ್ಧಾಂತ ಶಿಖಾಮಣಿಯಲ್ಲಿ ಹೇಳಿದ್ದಾರೆ. ವೇದಾಂತ ಹಾಗೂ ವೀರಶೈವ ಸಿದ್ಧಾಂತಗಳ ಗುರಿ ಹಾಗು ಫಲ ಒಂದೇ ಆಗಿದೆ.” ಎಂದು ಬರೆದಿದ್ದೀರಿ. ಪ್ರಪಂಚವು ಪ್ರಾರಂಭವಾಗಿ ಅನೇಕ ಯುಗ ಗಳಾದರೂ ಇನ್ನೂ ನಾಶವಾಗಿಲ್ಲ. ಆದರೂ ಮಿಥ್ಯವೆಂದು ಯಾವ ಆಧಾ ರದ ಮೇಲೆ ಹೇಳಬೇಕು ? ಪ್ರಪಂಚವು ಮಾತ್ರ ಬದಲಾವಣೆಯಾಗುವದು, ಅದಕ್ಕೆ ಚರಶಕ್ತಿ ಜಂಗಮವೆಂದು ಅನ್ನುವ ಕಾರಣವು ಇದಕ್ಕಾಗಿಯೇ ಇದೆ. ಆದರೆ ನಾಶವಿಲ್ಲ. ಸುಳ್ಳೂ ಇಲ್ಲ. ಪರಮಾತ್ಮನಿಂದ ಚಿಚ್ಛಕ್ತಿಯು ಸಂಕಲ್ಪಮಾತ್ರದಿಂದ ಹೊರಗೆ ಬಂದು ಇದೆಲ್ಲ ಪ್ರಸಾರವನ್ನು ತೆರೆದುಬಿಟ್ಟಿ ದ್ದಾಳೆ. ಲೀಲೆ ಸಾಕಾಗಲು ತನ್ನ ಪಸಾರವನ್ನು ಸುತ್ತಿಕೊಂಡು ಪುನಃ ಪರಮಾತ್ಮನಲ್ಲಿ ಲೀನವಾಗಿ ಅವಿನಾಭಾವ ಸಂಬಂಧದಿಂದ ಇರುವಳು. ನಮ್ಮ ಮನ ಬುದ್ಧಿ ಹಾಗೂ ಜ್ಞಾನೇಂದ್ರಿಯಗಳಿಗೆ ಸದಾ ಗೋಚರವಾಗುವದು. ಇದಕ್ಕೆ ಮಿಥ್ಯವೆಂದು ಹೇಳಿದರೆ ಅಗೋಚರವಾದದ್ದೂ ಕೂಡ ಮಿಥ್ಯವಾಗಿ ಹೋಗುವದು. ಅಂತೂ ಎಲ್ಲವೂ ಮಿಥ್ಯವಾಗಬಿಡುವದು. ನೀವೂ ಮಿಥ್ಯ ನಿಮ್ಮ ಬರಹವೂ ಮಿಥ್ಯ. ಇದಕ್ಕೆ ಮಿಥ್ಯದ ಹುಚ್ಚೆಂದು ಹೇಳುವರು. ಈ ಮಿಥ್ಯದ ಹುಚ್ಚನ್ನು ಬಿಟ್ಟು ಜಗತ್ತಿನಲ್ಲಿ ಏನು ಮಾಡಿದರೆ ನಿಜಸುಖ ಲಭಿ ಸುವದೆಂದು ವಿಚಾರಿಸಿ ಮಾಡಿದರಾಯಿತು. ಉಳಿದ ಕಾರಭಾರವೇಕೆ ? ಬರೇ ಇಲ್ಲ, ಮಿಥ್ಯ, ಸುಳ್ಳು ಎಂದು ಸದಾ ಧ್ಯಾನಿಸುವದರಿಂದ ಕಡೆಗೆ ಶಿವನೂ ಸುಳ್ಳು ಇಲ್ಲ, ಮಿಥ್ಯ ಎಂದು ಸಹ ಅನ್ನಲಿಕ್ಕೆ ಹೇಸುವದಿಲ್ಲ. ನೀವು ಇದೆಲ್ಲ ಹೇಡಿಗಳ ಕೆಲಸ. ಅದಕ್ಕೆ ಮಿಥ್ಯ ರೂಪ ಕೊಡುವದು ಅಪರಾಧ. ಮೇಲಿನ ಅನೇಕರ ವಾಕ್ಯಗಳನ್ನು ನೋಡಿಕೊಳ್ಳಿರಿ.

೯. “ಮೋಕ್ಷ ಅಂದರೆ ಸರ್ವ ದುಃಖಗಳ ನಿವೃತ್ತಿ, ಪರಮಾನಂದ ಪ್ರಾಪ್ತಿ” ಎಂದು ಮೋಕ್ಷಕ್ಕೆ ಅರ್ಥ ಹಚ್ಚಿದ್ದೀರಿ. ಮೋಹವನ್ನು ಕ್ಷಯ

ಮಾಡುವದೇ ಮೋಕ್ಷವೇದಾಗುವದು. ದುಃಖ ದುಃಖವೆಂದು ವ್ಯರ್ಥ ಆರೋಪ ಮಾಡಿದ್ದೀರಿ. ದುಃಖವ್ಯಾವದು ? ಸುಖವ್ಯಾವದು ? ನಮಗೆ ದುಃಖವೆನಿಸಿದ್ದು ಎರಡನೇಯುವರಿಗೆ ಸುಖವಾಗುವದು. ಇದು ದುಃಖವಲ್ಲ. ಸಕಲರಿಗೂ, ಸಕಲ ದೇಶ, ಕಾಲ, ಪರಿಸ್ಥಿತಿಗಳಲ್ಲಿಯೂ ಕೂಡ ಸದಾ ದುಃಖವಾಗುತ್ತಿದ್ದರೆ ಅದು ದುಃಖ. ಇಲ್ಲವಾದರೆ ಅದು ದುಃಖವಲ್ಲ. ಅದೆಲ್ಲ ಬೇರೆ ಬೇರೆ ಮನಸ್ಸಿನ ವಿಚಾರ ಹೊರತು ಬೇರೆ ಇಲ್ಲ. ನೀವು ಇನ್ನೂ ಹಳೇ ರದ್ದಿಯಲ್ಲಿದ್ದ ವೇದಾಂತವನ್ನೇ ಓದುತ್ತಿದ್ದಂತೆ ತೋರುವದು. ಈಗಿನ ಹೊಸಹೊಸದನ್ನು ಅಧ್ಯಯನ ಮಾಡಿರಿ. ಸರಿಯಾದ ಭಕ್ತಿಯ ಸಾಧನ ಮಾಡಿದರೆ ಹೊಳೆಯುವದು. ತ್ಯಾಗವೂ ಬೇಕು.

೧೦. ಶ್ರೀ ನಿಜಗುಣ ಶಿವಯೋಗಿ, ಸರ್ಪಭೂಷಣ ಶಿವಯೋಗಿ, ಬಸವ, ಅಲ್ಲಮಪ್ರಭು, ಸಿದ್ಧರಾಮ, ಅಕ್ಕಮಹಾದೇವಿ, ಚನ್ನಬಸವ ಇವರು ಉದಾಹರಣೆಗಳನ್ನು ಹೇಳಿ ಅವರೆಲ್ಲರೂ ಅದ್ವೈತಿಗಳೆಂಬ ಸಾರವನ್ನು ತೆಗೆಯಬಾರದು. ಅವರು ನಿರೂಪಿಸಿದ ಮೊದಲಿನ ಸ್ಥಲಗಳಲ್ಲಿಯ ವಚನಗಳನ್ನು ನೋಡಿರಿ. ಅವರು ಮೊದಲಿನಿಂದ ಏರುತ್ತ ಏರುತ್ತ ಹೋಗಿ ಕಟ್ಟ ಕಡೆಯ ಸ್ಥಿತಿಯನ್ನು ವರ್ಣಿಸಿದರೆ ಅದ್ವೈತ ಹೇಳುವರೆಂದು ಅನ್ನಬಾರದು. ಆಯಾಸ್ಥಿತಿಯಲ್ಲಿ ಆಯಾಸ್ಥಲದಲ್ಲಿ ಅವುಗಳನ್ನು ಹೇಳಿದ್ದಾರೆ. ಎಲ್ಲರೂ ಶಕ್ತಿಯನ್ನು ಒಪ್ಪಿಕೊಂಡದ್ದು ಮೇಲೆ ಕೊಟ್ಟ ಉದಾಹಣೆಗಳಿಂದ ಸ್ಪಷ್ಟಗೊತ್ತಾಗುವದು. ಅದಕ್ಕೆ ಎಲ್ಲರು ಶಕ್ತಿ ವಿಶಿಷ್ಟಾದ್ವೈತಿಗಳೇ ಸರಿ. ಇದ ದರೂ ದ್ವೈತದಿಂದ ಅದ್ವೈತಕ್ಕೆ ಹೋಗುವದು. ಆಯಾಯ ಸ್ಥಿತಿಯಲ್ಲಿ ಹೇಳಿದ ವಚನಗಳವಾಗಿರುವವು.

೧೧. ಆಗಮದ ಪದ್ಯವನ್ನು ಹೇಳಿದ್ದೀರಿ. ಸೃಷ್ಟಿಗೆ ಪೂರ್ವ ಪರಬ್ರಹ್ಮವು (ಶಿವನು) ನಿಸ್ತರಂಗವಾದ (ಅಲೆಗಳಿಲ್ಲದೆ) ಸಮುದ್ರದಂತೆ ಪ್ರಶಾಂತವಾದ ಅಖಂಡ ಜ್ಞಾನ ಸ್ವರೂಪನಾಗಿ ತಾನೇ ತಾನಾಗಿತ್ತು. ಈ ಸ್ಥಿತಿಯಲ್ಲಿ ಅಹಂ (ನಾನು) ಎತ್ತು ಇದಂ (ಇದು) ಇರಲಿಲ್ಲ. ಹೀಗಿರುವ ಪರಬ್ರಹ್ಮದಲ್ಲಿ ಅಹಮಸ್ಮಿ (ನಾನಿದ್ದೇನೆ) ಎಂದು ಅರುಹು ತೋರಿತು. ಆ ಅರುಹೇ ಚಿಚ್ಛಕ್ತಿಯು. ಅನಂತರ ಅಹಂ, ಬಹುಸ್ಯಾಂ ಪ್ರಜಾಯೇಯ ( ನಾನು ಬಹುರೂಪನಾಗಬೇಕು) ಇಚ್ಛೆಯು ತೋರಿತು. ಇದೆಲ್ಲ ಸರಿಯಾಗಿಯೇ ಇರುವದು. ಆದರೆ ನಿಮ್ಮ ತಿಳುವಳಿಕೆಯಲ್ಲಿ ಮಾತ್ರ ತಪ್ಪಾಗಿಯೇ ಇರು

ವದು. ನಿಃಕಲ ಪರಬ್ರಹ್ಮನಿಂದ ಚಿಚ್ಛಕ್ತಿ ಹೊರಗೆ ಬಂದು ಕಾರ್ಯ ಮಾಡಿದ್ದಾಳೆಂದು ನೀವು ಬರೆದರೂ ಅದ್ವೈತವನ್ನೇಕೆ ಪ್ರತಿಪಾದಿಸಹೊರಟಿದ್ದೀರಿ? ಯಾರ ಶಕ್ತಿಯಿಂದ ಇದೆಲ್ಲ ಆಯಿತು? ಪರಮಾತ್ಮನಿಂದ ಶಕ್ತಿಯು ಸಂಕಲ್ಪ ಮಾತ್ರದಿಂದ ಹೊರಗೆಬಂದಳು ಎಂದೂ ಹೇಳುವರೋ? ಅವರೆಲ್ಲ ಶಕ್ತಿವಿಶಿಷ್ಟಾದ್ವೈತಿಗಳೇ ಸರಿ. ಇದನ್ನು ಒಪ್ಪಿಕೊಳ್ಳದೆ ಸುಮ್ಮನೆ ಗಡಿಬಿಡಿಗೆ ಬಿದ್ದಿರುವಿರಿ. ನಿಮಗೆ ಇದರಿಂದ ಬಹು ತ್ರಾಸಾಗುವದು.

೧೨. ಸಕಲ ಪ್ರಾಣಿಗಳಿಗೆ ಸ್ಥೂಲ, ಸೂಕ್ಷ್ಮ, ಕಾರಣ, ಮಹಾಕಾರಣ ದೇಹಗಳಿರುವವೆಂದು ನೀವು ಒಪ್ಪುತೀರೆಂದು ನಿಮ್ಮ ಬರೆಹದ ಮೇಲಿಂದ ಅನಿಸಿದೆ. ಆದರೆ ಈ ನಾಲ್ಕರಲ್ಲಿ ಯಾವದು ಸತ್ಯ ಯಾವದು ಮಿಥ್ಯ ಹೇಳಿರಿ ನೋಡುವಾ. ಒಂದು ಸುಳ್ಳಾದರೆ ಎಲ್ಲ ಶರೀರಗಳು ಸುಳ್ಳು. ಒಂದು ಸತ್ಯವಾದರೆ ಎಲ್ಲವೂ ಸತ್ಯವಾಗುವವು. ಮಹಾಕಾರಣವು ಸತ್ಯವಾದರೆ ಸ್ಥೂಲವೂ ಕೂಡ ಸತ್ಯವಾಗಿದೆ. ಆದರೆ ಸ್ಥೂಲವು ಬದಲಾವಣೆ ಹೊಂದುತ್ತಲೇ ಇರುವದು. ವಿಕಾಸ ಆಗುತ್ತಲೇ ಇರುವದು.

೧೩. ಸ್ವಪ್ನದಂತೆ ಜಗವು ಸುಳ್ಳು ಎಂದು ಹೇಳಲು ಕನಸಿನಲ್ಲಿ ಚಕ್ರವರ್ತಿಯು ಭಿಕ್ಷುಕನಾಗಿ ಗೋಳಾಡಿದ್ದನ್ನು ಉದಹರಿಸಿದ್ದೀರಿ. ಸ್ವಪ್ನಗಳು ಸುಳ್ಳು ಹೇಗೆ? ಜಾಗ್ರತದಲ್ಲಿ ಮನ ಬುದ್ಧಿ ಹಾಗೂ ಜ್ಞಾನೇಂದ್ರಿಯಗಳಿಂದ ಅನುಭವಿಸಿದ ವಿಷಯಗಳೇ ಸ್ವಪ್ನದಲ್ಲಿ ಕಾಣುವವು. ಯಾವ ದೃಷ್ಟಿಯಿಂದಲೂ ನೋಡಲಾರದ್ದು ತರ್ಕಿಸಲಾರದ್ದು ಸ್ವಪ್ನದಲ್ಲಿ ಬರುವದಿಲ್ಲ. ಆದರೆ ಅನೇಕ ಪದಾರ್ಥಗಳ ಬೇರೆ ಬೇರೆ ಭಾಗಗಳು ಸೇರಿ ಒಂದೇ ಪದಾರ್ಥವಾಗಿ ಕಾಣುವದು. ಅವನಿಗೆ ಎಂದೂ ಕೇಳದ್ದು ನೋಡದ್ದು ತರ್ಕಿಸದ್ದು ಸ್ವಪ್ನದಲ್ಲಿ ಬರುವದು ಶಕ್ಯವೇ ಇಲ್ಲ. ಅಡವಿಯ ಅಜ್ಞ ಕುರುಬನಿಗೆ ರಶಿಯಾ ದೇಶದ ಬಗ್ಗೆ ಎಂದೂ ಸ್ವಪ್ನ ಬೀಳುವದಿಲ್ಲ. ಸ್ವಪ್ನಗಳು ಸುಳ್ಳಾದರೆ ಜಾಗ್ರದಲ್ಲಿಯಾಗುವ ಕ್ರಿಯಗಳ ಫಲಗಳು ಸ್ವಪ್ನದಲ್ಲಿಯಾಕಾಗುವವು? ಕುಡುಗರು ಬಂದರೆ ಎರಡರಲ್ಲಿಯೂ ನಮಗೆ ಭೀತಿ ಅಂಜಿಕೆಗಳು ಬರುವವು. ಎದೆಬಡಿಕೊಳ್ಳುವದು ಬೆವರು ಸುರಿಯುವದು ಸ್ತ್ರೀ ಬಂದರೆ ವೀರ್ಯಪತನ ಆಗುವದು ಅಳುವದು ಬಡಕೊಳ್ಳುವದು ಎಲ್ಲ ವಿಕಾರಗಳೂ ಆಗುವದನ್ನು ಎಲ್ಲರೂ ಕಾಣುತ್ತಾರೆ. ಇದನ್ನು ವಿಚಾರಿಸಿದರೂ ಸ್ವಪ್ನಗಳು ಸುಳ್ಳು ಆಗುವದಿಲ್ಲ. ಇದೆಲ್ಲ ಒಂದೇ ಮನಸ್ಸು ಹೀಗೆ ಮಾಡಿ ತೋರಿಸುವದು.

ಸ್ವಪ್ನದಲ್ಲಿ ಅವನು ಚಕ್ರವರ್ತಿ ಇರುವದಿಲ್ಲ. ಆಗ ಅವನು ಭಿಕ್ಷುಕ ನಾಗಿದ್ದಾನೆ. ಭಿಕ್ಷುಕರಂತೆ ಇರಲೇಬೇಕು. ಜಾಗ್ರತದಲ್ಲಿ ಚಕ್ರವರ್ತಿಯನ್ನು ರಾಜ್ಯ ಕಸಿದುಕೊಂಡು ಭಿಕ್ಷೆಗೆ ಹಚ್ಚಿದರೆ ಯಾವ ತ್ರಾಸ ಆಗುವದೋ ಹಾಗೆ ಸ್ವಪ್ನದಲ್ಲಿಯ ಭಿಕ್ಷುಕನಿಗೆ ಆಗುವದಿಲ್ಲವೇ ? ಅದಕ್ಕೆ ಜಾಗ್ರತದಂತೆ ಸ್ವಪ್ನವೂ ಕೂಡ ಸತ್ಯವಾದುದೇ ಆಗಿದೆ. ಸೂಕ್ಷ್ಮ ಇಂದ್ರಿಯಗಳ ಕೆಲಸ ಅದಾಗಿದೆ. ಸುಳ್ಳೆಂದು ಎಂದೂ ಹೇಳಲಿಕ್ಕೆ ಬರುವದಿಲ್ಲ.

೧೪. ದೇಹವೇ ಆತ್ಮವೆಂದು ಯಾರೂ ಅನ್ನಲಾರರು. ಜನರು ಅಷ್ಟು ದಡ್ಡರಿಲ್ಲ. ಆದರೆ ಆತ್ಮನಿಗೆ ದೇಹವು ಬೇಕೆಂದು ಅನಿಸದೆ ಇರ ಲಾರದು. ಇವೆರಡೂ ಕೂಡಿದರೆ ಮುಂದೆ ಏನಾದರೂ ಆದೀತು ? ಇವು ಅಗಲಿದರೆ ಕೆಲಸಗಳಿಲ್ಲ. ಮುಕ್ತರಾಗುವತನಕ ದೇಹಬೇಕು. ಮುಕ್ತಾತ್ಮರೂ ಕೂಡ ದೇಹಧಾರಿಗಳಾಗಿ ಬರುವರು.

೧೫. ಅದ್ವೈತ ಸಿದ್ಧಾಂತದವರು ನಸುಗತ್ತಲಲ್ಲಿ ಹಗ್ಗದಲ್ಲಿ ಹಾವಿನ ಭ್ರಾಂತಿ, ಮೃಗಜಲದಲ್ಲಿ ನೀರಿನ ಭಾಸ, ಸಿಂಪಿಯಲ್ಲಿ ಬೆಳ್ಳಿಯ ಭ್ರಾಂತಿ, ಮಿಂಚುಹುಳದಲ್ಲಿ ರತ್ನದ ಭ್ರಾಂತಿ, ಇದ್ದಂತೆ ಈ ಜಗತ್ತಿಗೆ ಭ್ರಾಂತಿ. ಅದೆಲ್ಲ ತೋರುವ ತೋರಿಕೆ ಹೊರತು ಜಗತ್ತಿಗೆ ನಿಜವಾದ ಅಸ್ತಿತ್ವವಿಲ್ಲ ಎಂದು ಈ ಉದಾಹರಣೆಗಳಿಂದ ಹೇಳುವರು. ಈ ಹೇಳುವವರೂ ಹೀಗೆ ಭ್ರಾಂತರಾಗುವವರೂ ಕೂಡ ಮೊದಲು ಹಾವನ್ನೂ ನೀರನ್ನೂ ಬೆಳ್ಳಿಯನ್ನೂ ರತ್ನವನ್ನೂ ನೋಡಿರಬೇಕು. ಕೇಳಿರಬೇಕು ತರ್ಕಿಸಿರಬೇಕು. ಹೀಗಾದದ್ದ ರಿಂದ ಹಗ್ಗದಲ್ಲಿ, ಮೃಗಜಲದಲ್ಲಿ, ಸಿಂಪಿಯಲ್ಲಿ, ಮಿಂಚುಹುಳದಲ್ಲಿ ಅವು ಗಳ ಭಾಸಭ್ರಾಂತಿಯಾಗಿರುವದೇ ಹೊರತು ನೋಡದೆ ಎಂದೂ ಹಾಗೆ ಆಗು ವದು ಶಕ್ಯವಿಲ್ಲ. ಹಗ್ಗ–ಹಾವು, ಮೃಗಜಲ–ನೀರು, ಸಿಂಪಿ–ಬೆಳ್ಳಿ, ಮಿಂಚು ಹುಳ–ರತ್ನ ಹೀಗೆ ಇರುವದು ಹೇಗೆ ಸಿದ್ಧವಾಗುವದೋ ಅದರಂತೆ ಶಿವ-ಶಕ್ತಿ ಪುರುಷ–ಪ್ರಕೃತಿ, ಸತ್–ಚಿತ್ ಇರುವರೆಂದೇ ಸಿದ್ಧವಾಗುವದು. ನಿಮ್ಮ ಈ ತರದ ಉದಾಹರಣೆಗಳು ಸಮಂಜಸವಲ್ಲ, ಸತ್ಯವೂ ಅಲ್ಲ.

೧೬. ಜ್ಞಾನ ಎಂದರೆ ಪರಶಿವ, ಕ್ರಿಯ ಎಂದರೆ ಶಕ್ತಿ ಇವೆರಡೂ ಇದ್ದರೆ ಆನಂದವಾಗುವದು. ನುಡಿದಂತೆ ನಡೆಯುವದು ಮುಕ್ತರಾಗುವತನಕ ಕ್ರಿಯಗಳು ಬೇಕು. ಅಂದರೆ ಶಕ್ತಿಬೇಕೆಂದು ಹೇಳಿದಂತೆ ಆಗುವದು. ಮುಕ್ತರಾದ ಬಳಿಕ ಸಹ ಸೂಕ್ಷ್ಮ, ಕಾರಣ, ಮಹಾಕಾರಣ ಕ್ರಿಯೆಗಳು ನಡೆಯುವವು. ಕಾರಣದಿಂದಲೇ ಕಾರ್ಯ ಹೊರಡುವದು. ಕಾರ್ಯಕಾರಣ

ಗಳನ್ನು ಅಗಲಿಸಲಿಕ್ಕೆ ಬರುವದಿಲ್ಲ. ಅಂತ್ಯಕ್ಕೆ ಒಂದರೊಳಗೊಂದು ಲೀನ ವಾಗಿ ಅಖಂಡವಾಗುವದು. ಈ ಎಲ್ಲವುಗಳ ಆಚೆಮಾತ್ರ ಪರಶಿವನಿರುವನು. ಶಕ್ತಿ, ಮಾಯೆ, ಮನ, ಬುದ್ಧಿ, ಜಗ, ಶರೀರ ಇವು ಇಲ್ಲೆಂದು ಹೇಳು ವದು ಶುದ್ಧ ತಪ್ಪು. ಎಲ್ಲವೂ ಬೇಕು ಅಂದರೆ ನಾವು ದಂಡೆ ಕಾಣುವೆವು. ಸುಳ್ಳಾದ ಇವುಗಳನ್ನು ಒಂದು ನಿಮಿಷ ಬಿಟ್ಟು ನೀವು ಇರ್ರಿ.

೧೭. ಅದ್ವೈತವು ಕಟ್ಟ ಕಡೆಯ ಮಾತು. ಅದನ್ನು ಸಮಾಧಿಯಲ್ಲಿ ಅನುಭವಿಸಬೇಕು. ಅಲ್ಲಿಯೂ ಕೂಡ ಅದನ್ನು ಅನುಭವಿಸಲಿಕ್ಕೆ ಈ ಶರೀರ ಬೇಕು. ಶರೀರ ಬಿಟ್ಟು ನಿರ್ವಿಕಲ್ಪವನ್ನು ಅನಭವಿಸುವದು ಶಕ್ಯವೇ ಇಲ್ಲ. ಶಕ್ತಿಯೂ ಕಟ್ಟಕಡೆಗು ಬೇಕು. "ನ್ಯಾಯಮಾತ್ಮಾ ಬಲಹೀನೇನಲಭ್ಯ" ವಾಕ್ಯದ ಅರ್ಥವಾದರು ಏನನ್ನು ಸೂಚಿಸುತ್ತದೆ. ಬಲಶಕ್ತಿ ಇಲ್ಲದೆ ಆತ್ಮನನ್ನು ಕಾಣಲಿಕ್ಕೆ ಸುಖ ಹೊಂದಲಿಕ್ಕೆ ಶಕ್ಯವಿಲ್ಲೆಂದೇ ಹೇಳಿದ್ದಾರೆ. ಅದಕ್ಕೆ ಜಗವೇ ಶಕ್ತಿ ವಿಶಿಷ್ಟಾದ್ವೈತದಿಂದ ಕೂಡಿದೆ. ಹೀಗಿದ್ದರೂ ಇಲ್ಲೆನ್ನುವವರು ಬರೇ ತಂದೆಗೆ ಹುಟ್ಟಿದ್ದೇವೆ ಹೊರತು ತಾಯಿಗೆ ಹುಟ್ಟಿಲ್ಲೆಂದು ಹೇಳಿದಂತೆ ಆಗುವದು. ಈ ಇಬ್ಬರಿಂಲೇ ಜನನವಲ್ಲವೇ? ಅದರಂತೆ ಶಿವಶಕ್ತಿಯರಿಂದಲೇ ಈ ಜಗತ್ತಿನ ಉತ್ಪತ್ತಿ. ಭಗವದ್ಗೀತೆಯ ೧೩, ೧೪ ನೇ ಅಧ್ಯಾಯಗಳಲ್ಲಿ ಇದನ್ನೇ ಹೇಳಿದ್ದಾರೆ. ಎಲ್ಲ ಗ್ರಂಥಗಳಲ್ಲಿ ಶಿವ ಶಕ್ತಿಯರೇ ಇದ್ದಾರೆಂದು ಹೊರಡುವದು. ಸಮಾಧಿಯಲ್ಲಿಯೂ ಕೂಡ ಅತಿ ಸೂಕ್ಷ್ಮ ಕ್ರಿಯಗಳು ನಡೆದಿ ರುವವೆಂದು ತೋರುವದು. ದೇಹ ಬಿಟ್ಟು ಹೋದ ಬಳಿಕ ಜಗತ್ತಿನ ಕಲ್ಯಾ ಣವನ್ನು ಮುಕ್ತಾತ್ಮರು ಮಾಡುವರೆಂದು ಹೇಳುವದರ ತಾತ್ಪರ್ಯವಾ ದರೂ ಏನು? ಮುಕ್ತಾತ್ಮನಲ್ಲಿ ಸೂಕ್ಷ್ಮ ಶಕ್ತಿಯಿಂದ ಸೂಕ್ಷ್ಮ ಕ್ರಿಯ ಗಳು ನಡೆದಿರುವವು ಎಂದು ಹೊಳೆಯುವದು.

೧೮. ವೇದಾಂತಕ್ಕೂ ವೀರಶೈವ ಸಿದ್ಧಾಂತಕ್ಕೂ ಇವರು ಹೋಲಿ ಸಿರುವರು. ಹೀಗಾದರೆ ವೀರಶೈವರು ಪಂಚಾಚಾರ, ಅಷ್ಟಾವರಣ, ಷಟ್ ಸ್ಥಲ, ೪೪ ಅಂಗಸ್ಥಲ, ೫೭ ಲಿಂಗಸ್ಥಲ, ನವವಿಧ ಭಕ್ತಿ ಶಕ್ತಿ ಮೊದಲಾದ ಭಕ್ತಿಗೆ ಸಂಬಂಧಿಸಿದ ವಿಷಯಗಳನ್ನು ತಕ್ಕೊಂಡು ಒಣ ಗ ದುಮುರಿಗೆಯಲ್ಲಿ ಬೀಳುವ ಕಾರಣವಾದರೂ ಏನು? ಹೀಗೆಲ್ಲ ನಮ್ಮವರು ಮಾಡಿದ್ದು ನಾವು ಶಕ್ತಿವಿಶಿಷ್ಟಾದ್ವೈತಿಗಳೆಂದೇ ಹೊರತು ಬೇರೆ ಯಾವ ಕಾರಣವೂ ಇಲ್ಲ. ಎಲ್ಲಾ ಸುಳ್ಳು. ಎಲ್ಲಾ ಇಲ್ಲ, ಎನ್ನುತ್ತ ಮಾಯಾವಾದಿ ವೇದಾಂತಿಯಂತೆ ನಿರಾಶೆಯ ನಿರ್ಜೀವರಾಗಿ ಬಿಡುತ್ತಿದ್ದರು. ಹೀಗಾಗಿ ಸಮಾಜವು ವಿನಾಶಕ್ಕೆ

ಹೋಗಬಾರದೆಂದೇ ತಿಳಿದು ಇದನ್ನು ಒಪ್ಪಿಕೊಂಡು ಈ ಪ್ರಕಾರ ಮಾಡಿದ್ದಾರೆ ನಮಗೆ ಭಕ್ತಿಯೇ ಪ್ರಾಧಾನ್ಯ. ಅದರಿಂದ ಜ್ಞಾನ ಕ್ರಿಯಾಗಳು ಮಾತ್ರ ನೆಲಗೊಳ್ಳುವವು. ಪಕ್ಷಿಗೆ ಎರಡು ರೆಕ್ಕೆ ಒಂದು ಬಾಲವಿರುವಂತೆ ಇರುವದು. ಭಕ್ತಿ ಜ್ಞಾನಗಳು ಎರಡು ರೆಕ್ಕೆ. ಕ್ರಿಯೆ ಸಮತೋಲ ಹಿಡಿಯುವ ಯೋಗ್ಯ ದಿಕ್ಕಿಗೆ ಹೊರಳಿಸುವ ಬಾಲದಂತೆ ಇರುವದು. ನಮ್ಮಲ್ಲಿ ಇವು ಮೂರೂ ಇದ್ದರೆ ಮಾತ್ರ ನಡೆಯುವದು. ಇದೆಲ್ಲ ಆಗಬೇಕಾದರೆ ಶಿವಶಕ್ತಿಯರಿಬ್ಬರು ಸತ್ಯವೆಂದುಕೊಳ್ಳಲೇಬೇಕು. ಇದಿದ್ದರೆ ನುಡಿಗೆ ತಕ್ಕಂತೆ ನಡೆ ಹೊರಡುವದಿಲ್ಲ.

೧೯ ಸಂಸಾರ ಹೇಯ ಸ್ಥಲದಲ್ಲಿ ಮಾತ್ರ ಈ ಪ್ರಪಂಚಕ್ಕೆ ಹೇಯಾಳಿಸಿದರೆ ಅದರ ಬಗ್ಗೆ ವ್ಯಾಮೋಹ ಹೋಗುವದೆಂದು ಹೀಗೆ ಅನೇಕರು ಹೇಳಿದ್ದೂ ಉಂಟು. ಹೆಣ್ಣನ್ನು ಹಳಿದಿದ್ದಾರೆ. ಇದರ ನಿಜಕಾರಣವು ಅದರಲ್ಲಿ ಮುಳುಗಿ ಹಾಳಾಗಬಾರದೆಂಬ ಉದ್ದೇಶದಿಂದ ಹಾಗೆ ಮಾಡಿದ್ದಾರೆ. ಜಗತ್ತು ಮಿಥ್ಯ, ಜಗವಿದು ಹುಸಿ, ತೋರ್ಕೆ, ಕಾಣುವೀವಿಶ್ವವೆಲ್ಲ ಹುಸಿ ಎಂದು ಹೇಳಿರುವ ಉದ್ದೇಶವಾದರೂ ಇದೇ ಆಗಿದೆ. ದೇವರ ಮೇಲೆ ಭಕ್ತಿ ಜ್ಞಾನ ನಿಷ್ಕಾಮ ಪರಸೇವೆ ನೆಲೆಗೊಳಿಸಲು ಹಾಗೆ ಮಾಡಿದ್ದಾರೆಂದು ಮೇಲೆ ಉದಹರಿಸಿದ ಅವರ ಉದಾಹರಣೆಗಳಿಂದ ಸಹಜ ತಿಳಿಯುವದು. ಹುಸಿ ಎಂದು ಬರೆದ ಕೆಲ ಮಾತುಗಳನ್ನು ತಕ್ಕೊಂಡು ಶಕ್ತಿ ಇಲ್ಲೆಂದು ಸಿದ್ಧ ಮಾಡುವದು ಯಾವ ಕಾಲಕ್ಕೂ ಸಮಂಜಸವಲ್ಲ. ಇಡೀ ಪುಸ್ತಕದ ಆದ್ಯಂತಗಳನ್ನು ಪರಿಕಿಸಬೇಕೆ ಹೊರತು ಕಟ್ಟ ಕಡೆಯ ಮಾತುಗಳಿಂದ ಎಲ್ಲವನ್ನೂ ಸಿದ್ಧಮಾಡಲಿಕ್ಕೆ ಹೋದರೆ ಬಾಯ ಬ್ರಹ್ಮದ ಆರೋಪ ಬರುವದು. ಹಾಗೆ ಮಾಡಬಾರದು.

೨೦. ಶ್ರೀ ಕಾಶೀನಾಥ ಶಾಸ್ತ್ರಿಗಳಾಗಲಿ ಶ್ರೀ ಗುರುಶಾಂತ ಶಾಸ್ತ್ರಿಗಳಾಗಲಿ, ಶ್ರೀಪತಿ ಪಂಡಿತರಾಗಲಿ, ರೇಣುಕಾಚಾರ್ಯರಾಗಲಿ, ಶ್ರೀ ಕಂಬಸವ ಶಾಸ್ತ್ರಿಗಳಾಗಲಿ, ಶ್ರೀ ಶಿವಯೋಗಿ ಶಿವಾಚಾರ್ಯರಾಗಲಿ, ಸಾವಧಾನ ಪತ್ರಿಕೆಯ ಸಂಪಾದಕರಾದ ಪಂ. ನಾಗಭೂಷಣ ಶಾಸ್ತ್ರಿಗಳಾಗಲಿ ಇನ್ನೂ ಅನೇಕ ಅನುಭವಿಗಳು ವೀರಶೈವವು ಶಕ್ತಿವಿಶಿಷ್ಟವೆಂದು ಬರೆದುದು ನೋಡಿ ಇಲ್ಲದ ಹುಯ್ಯಲವನ್ನು ನೀವೊಬ್ಬರೇ ಏಕೆ ಎಬ್ಬಿಸಬೇಕು ? ನೀವು ಡಾ. ಸಂದೀಮಠರನ್ನು ಎತ್ತಿ ಹಿಡಿದಿದ್ದೀರಿ. ಹೀಗಾದರೆ ಇವರಿಗೂ ಇನ್ನೂ ವೀರಶೈವವು ಚನ್ನಾಗಿ ತಿಳಿದಿಲ್ಲೆಂದು ಅನಿಸುವದು. ಅನೇಕರ ಗ್ರಂಥಗಳನ್ನು

ಸರಿಯಾಗಿ ಓದಿದರೆ ಮಾತ್ರ ತಿಳಿಯುವದು. ಅದರ ಜೊತೆಗೆ ತ್ಯಾಗ ವೈರಾಗ್ಯ ಬೇಕು. ಯೋಗ್ಯ ಸಾಧನ ಬೇಕು. ಅಂದರೆ ಸಾಧಿಸುವದು. ಆದರೆ ನನ್ನದೇ ಸರಿ ಎಂಬ ದುರಭಿಮಾನ ಮಾತ್ರ ಬಿಟ್ಟು ವಿಚಾರಿಸಬೇಕು. ಜಗತ್ತೇ ಶಕ್ತಿ ವಿಶಿಷ್ಟಾದ್ವೈತವೆಂದು ಹೇಳುವಕಾಲಕ್ಕೆ ವೀರಶೈವರು ಏನಾಗುವರು ವಿಚಾರಿಸಿರಿ. ಜಗತ್ತಿನಲ್ಲೇ ವೀರಶೈವರು ಮೊದಲಿಗೆ ಸತ್ಯನುಡಿದವರೆಂದು ಹೇಳಲಿಕ್ಕೆ ಅಡ್ಡಿ ಇಲ್ಲ.

೨೧. ಶಂಕರಾಚಾರ್ಯರ ಅದ್ವೈತಕ್ಕೂ ವೀರಶೈವ ಸಿಧ್ಧಾಂತಕ್ಕೂ ಶ್ರೀ ನಾಗಣ್ಣನವರು ಹೋಲಿಕೆಯನ್ನು ಯಾವ ಆಧಾರಗಳ ಮೇಲೆ ಕೊಡುವರೋ ತಿಳಿಯದಾಗಿದೆ. ಎರಡಕ್ಕೂ ಮಹದಂತರವಿದೆ. ಇವುಗಳ ತತ್ವದಲ್ಲಿ ಮಹದಂತರವಿದೆ. ವೀರಶೈವರಲ್ಲಿ ವರ್ಣಾಶ್ರಮಗಳಿಲ್ಲ, ಪಂಚಸೂತಕವಿಲ್ಲ, ಸಹಭೋಜನವುಂಟು. ಪರಜಾತಿಯವರನ್ನು ವೀರಶೈವರನ್ನಾಗಿ ಮಾಡಿಕೊಳ್ಳಲು ಬರುವದು. ಲಿಂಗಧಾರಣ, ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ೩೬ ತತ್ವ, ೧೦೧ ಸ್ಥಲಗಳು, ಕಾಯಕವೇ ಕೈಲಾಸ, ಗುರು ಜಂಗಮರಿಗೂ ಕಾಯಕಬೇಕು. ಬೇಡಿಕೊಳ್ಳಬಾರದು. ಬಳಸಿ ಬ್ರಹ್ಮಚಾರಿ, ಉಂಡು ಉಪವಾಸಿ, ಸ್ತ್ರೀಯರಿಗೆ ಸಮಾನತೆ, ತ್ರಿವಿಧ ದಾಸೋಹ, ಲಿಂಗಾಂಗ ಸಾಮರಸ್ಯ, ಶಿವಜೀವರ ಐಕ್ಯ, ಲಿಂಗಭೋಗೋಪಭೋಗ, ಸಮಾಜಸತ್ತೆ, ಯಜ್ಞಯಾಗ ಹೋಮ ಹವನ ಮಾಡಬಾರದು, ಜಾತಿಭೇದವಿಲ್ಲ, ಮೊದಲಾದ ಎಲ್ಲ ತತ್ವಗಳೂ, ವೇದಾಂತದ ಅದ್ವೈತ ಸಮಾಜದ ತತ್ವಕ್ಕೂ ಮಹದಂತರವಿದೆ. ಅದಕ್ಕೆ ಇವುಗಳಲ್ಲಿ ಹೋಲಿಕೆ ಇಲ್ಲ. ನಾವು ಹೋಲಿಸುವದು ಎಷ್ಟುಮಾತ್ರಕ್ಕೂ ಸರಿಯಲ್ಲ.

೨೨. ಈ ಕಾರಣದಿಂದಲೇ ವೇದಾಂತ ( ಶುದ್ಧಾದ್ವೈತ ) ಹಾಗೂ ವೀರಶೈವ ಸಿದ್ಧಾಂತಗಳನ್ನು ಚನ್ನಾಗಿ ತಿಳಿದ ಶ್ರೀ ನಿಜಗುಣ ಶಿವಯೋಗಿಗಳು ವಿವೇಕ ಚಿಂತಾಮಣಿಯಲ್ಲಿ ಷಟ್‌ಸ್ಥಲಜ್ಞಾನಿಯಾದ ವೀರಶೈವನೇ ಎಲ್ಲರಲ್ಲಿ ಶ್ರೇಷ್ಠನೆಂದು ಹೇಳಿದ್ದಾರೆ. ಆದಕ್ಕೆ ವೇದಾಂತ (ಅದ್ವೈತ)ಕ್ಕೂ ವೀರಶೈವ ಸಿದ್ಧಾಂತಕ್ಕೂ ಯಾವ ರೀತಿಯಿಂದ ಹೋಲಿಕೆಯಾಗುವದೇ ಇಲ್ಲ. ಇದನ್ನು ವಾಚಕರು ಮೇಲಿನ ಲೇಖನದಿಂದ ಅರಿತಿರಲಿಕ್ಕೆ ಸಾಕು.

೨೩. ಶಿವ-ಜೀವರಲ್ಲಿ ಭೇದವಿಲ್ಲವೆನ್ನುವರಿವರು. ಜೀವನು ಬೇಕಾದಷ್ಟು ಸ್ಥಿತಿಗೆ ಹೋದರೂ ಶಿವನಲ್ಲಿ ಬೆರೆಯಬಹುದು. ಆದರೆ ಹೊಸ

ದೊಂದು ಜಗತ್ತನ್ನು ಮಾಡುವದು ಜೀವನಿಂದ ಶಕ್ಯವಿಲ್ಲ. ಕೆಲವು ಸಿದ್ಧಿಗಳನ್ನು ಮಾತ್ರ ಮಾಡಿ ತೋರಿಸಬಹುದು. ಅದಕ್ಕೆ ಶಿವಜೀವರ ಶಕ್ತಿ, ಸಾಮರ್ಥ್ಯಗಳು ಎಂದೂ ಅಷ್ಟೇ ಎಂದು ಹೋಲಿಸಬಾರದು. ಮಹಾ ಅಪರಾಧ. ಇದು ಸರಿಯಲ್ಲ.

೨೪. ಶಕ್ತಿ ಸುಳ್ಳು, ಜಗತ್ತು ಸುಳ್ಳು, ಶರೀರ ಸುಳ್ಳು, ಪಂಚಭೂತಗಳು ಸುಳ್ಳು, ಎಲ್ಲಾ ಸುಳ್ಳು ಎಂದು ಹೇಳುವದರಿಂದ ಜನರು ತಾವೇ ಬ್ರಹ್ಮವೆಂದು ತಿಳಿದುಕೊಂಡು ಶರೀರ ಸುಳ್ಳೆಂದ ಬಳಿಕ ಶರೀರದ ಕ್ರಿಯಾದಿಗಳು ಕೂಡ ಸುಳ್ಳೇ ಇರುವವೆಂದು ಭಾವಿಸಿ ಸಿಕ್ಕ ಅನಾಚಾರ, ಸಿಕ್ಕ ಮೋಸ ಕೊಲೆ, ಹಾದರ ಮುಂತಾದ ಕೃತ್ಯಗಳಿಗೆ ವೇದಾಂತದ ಅರ್ಥವನ್ನು ಹಚ್ಚಿ ಪಾಪವಿಲ್ಲೆಂದು ಹೇಳಿ ದುರಾಚಾರಕ್ಕೆ ಪಟ್ಟಗಟ್ಟಿದಂತೆಯಾಗುವದರಲ್ಲಿ ಸಂದೇಹವಿಲ್ಲ. ಅದಕ್ಕೆ ನಾಗಣ್ಣನವರು ಈ ಪಾಪವನ್ನು ಪದರಲ್ಲಿ ಕಟ್ಟಿಕೊಂಡು ಎಲ್ಲಿಗೆ ಹೋಗುವರು ತಿಳಿಯದಾಗಿದೆ. ಈ ಮಾಯಾವಾದದ ವೇದಾಂತದಿಂದಲೇ ಹಳ್ಳಿಗಳಲ್ಲಿ ಜನರು ಅನೀತಿಗೆ ಇಳಿದಿದ್ದಾರೆ. ಇದನ್ನು ಅನುಭವದಿಂದ ಹೇಳುವೆನು.

ಲೇಖವು ಇನ್ನೂ ದೊಡ್ಡದಾಗುವುದೆಂದು ತಿಳಿದು ಮುಗಿಸುವೆನು. ಶ್ರೀ ನಾಗಣ್ಣನವರ ಎಲ್ಲ ತಪ್ಪುಗಳಿಗೆ ಈ ಲೇಖದಲ್ಲಿ ಬೇಕಾದಷ್ಟು ಉತ್ತರಗಳಿರುವವು ಅವರು ಅನೇಕರಿಗೆ ಬಿನ್ನವತ್ತಳಿಕೆಗಳನ್ನು ಕೊಟ್ಟರೆ ಅವರೇನು ಶಕ್ತಿಯನ್ನು ಜಗದಿಂದ ನಾಶ ಮಾಡುವದಿಲ್ಲ. ಆಕೆಯೇನು ಕೊಟ್ಟವರನ್ನು ಬಿಡುವದಿಲ್ಲ. ಈ ಪ್ರಕಾರ ಇವರು ಮಾಡಿ ತಮ್ಮ ಶ್ರಮಕಾಲಧನ ಮನವನ್ನು ಹಾನಿಗೊಳಿಸಿಕೊಳ್ಳಬಾರದೆಂದು ಸೂಚಿಸದೆ ಇರಲಾರೆವು. ಅದನ್ನೆಲ್ಲ ಯೋಗ್ಯಸಾಧನೆಗೆ ಉಪಯೋಗಿಸಿ ಮುಪ್ಪಿನ ಕಾಲಕ್ಕೆ ಶ್ರೀ ಆದಿಶಕ್ತಿ ಪಾರ್ವತಿಯ ಅನುಗ್ರಹಪಡೆದು ಶಾಂತಿಯನ್ನೂ ಜ್ಞಾನವನ್ನೂ ಪಡೆಯಲೆಂದು ನಾವು ಹಾರೈಸಿ ಈ ಲೇಖನನ್ನು ಮುಗಿಸುವೆವು.

# ವಿಚಿತ್ರ ಪ್ರಪಂಚ

[ಲೇಖಕರು:— ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ.]

ಕಾಲಚಕ್ರವು ತಿರುಗುತ್ತಿರುವಂತೆ ವಿಶ್ವದಲ್ಲಿ ಅನೇಕ ಬದಲಾವಣೆಗಳು ಯಥಾಪ್ರಕಾರವಾಗಿ ಸಾಗುತ್ತಲೇ ಬಂದಿವೆ ಎಂಬುದಕ್ಕೆ ಹಿಂದಣ ನಿದರ್ಶನಗಳು ನಮಗೆ ಸಾಕಷ್ಟು ದೊರೆಯುಬಹುದಾಗಿವೆ. ಈ ನಿದರ್ಶನಗಳಿಂದಲೇ ನಾವು ಅನೇಕ ಸಮಸ್ಯಗಳನ್ನು ಪರಿಹಾರಮಾಡಿಕೊಳ್ಳಲು ಸಾಧ್ಯವಾಗಬಹುದಾಗಿದೆ. ವಿಶ್ವ ಹಾಗು ಪರಮಾತ್ಮರ ವಿಷಯದಲ್ಲಿ ಆದಿಯಿಂದಲೂ ಅನೇಕ ಮಹರ್ಷಿಗಳು ಹಾಗು ತಜ್ಞರು ಅನೇಕ ಪ್ರಕಾರವಾಗಿ ಪ್ರಶಂಸಿಸಿ ತಮ್ಮ ತಮ್ಮ ಅನುಭವವನ್ನು ಜನತೆಗೆ ಬೀರಿದ್ದಾರೆ. ನಾವು ಇಂದಿನ ಕಾಲದಲ್ಲಿ ಲೇಖನದಿಂದ ಪ್ರಚುರಪಡಿಸುವಂತೆ ಹಿಂದಣ ಜನತೆ ಗೀತೆಗಳಿಂದ ಬೋಧೆ ಬೀರಿದ್ದಾರೆಂಬುದು ಸಹ ಅನೇಕ ಕವಿಗಳ ಕಾವ್ಯಗಳೂ ಸಹ ನಮಗೆ ನಿದರ್ಶನಗಳಾಗಿವೆ. ಕಾವ್ಯಕ್ಕೆ ಕಳೆಯು ಬರಬೇಕಾದರೆ ಆ ಕಾವ್ಯವು ಬಹು ಗೂಢವಾದ ಅರ್ಥತುಂಬಿದುದಾಗಿರಬೇಕು. ಅಗ್ಗೆ ಮಾತ್ರ ಆ ಕಾವ್ಯಕ್ಕೆ ಹಾಗು ಆ ಕಾವ್ಯಕರ್ತಗೆ ಮನ್ನಣೆ ದೊರೆಯುವದು. ಹೀಗೆ ಪರಮಾತ್ಮನ ವಿಷಯದಲ್ಲಿ ಭೋಧೆ ನೀಡುವಾಗ್ಗೆ ಕವಿಗಳು ಆತನನ್ನು ಅನೇಕ ತೆರನಾಗಿ ಬಣ್ಣಿಸಿ ಬರೆದಿದ್ದಾರೆ ಹಾಗು ಹಾಡಿದ್ದಾರೆ. ಇದರಿಂದಲೇ ಮುಂದೆ ಹಲವು ಅಲ್ಪ ಮತಿಯರು ಆತನನ್ನು ಕಲೆಯ ಕೈಯಿಂದ ಚಿತ್ರಿಸಿಯೂ, ಪ್ರತಿಮೆಯ ರೂಪುಕೊಟ್ಟು ಪೂಜಿಸಿಯೂ, ಮುಂದಣ ಜನಗಳ ಮೂಢ ಭಕ್ತಿಗೆ ಗುರಿಯಾಗಿದ್ದಾರೆ. ಇಂದಿನ ಕಾಲಕ್ಕಂತೂ ಕಲಾಕಾರರು ಆಯಾ ದೇವರುಗಳಿಗೆ ಇಂದಿನ ಕಾಲಕ್ಕನುಸರಿಸಿದ ಉಡಪುತೊಡಪು, ವಯ್ಯಾರ ಭಾವವನ್ನು ಒಡಮೂಡಿಸುತ್ತಿರುವದನ್ನು ನೋಡಿದರೆ ಹಿಂದಣ ಜನತೆಯು ಪರಮೇಶ್ವರನಿಗೆ ಮೃಗಚರ್ಮಧಾರಣನೆಂದು ಉಲ್ಲೇಖಿಸಿದುದೇನು ತಪ್ಪಲ್ಲ. ಏಕೆಂದರೆ ಅಂದಿನ ಕಾಲದ ಜನತೆಯ ಉಡಪು ತೊಡಪು ಕೇವಲ ಚರ್ಮದಿಂದಾದವುಗಳೇ ಇದ್ದಿರಬಹುದು; ಹಾಗು ಇದ್ದವೆಂದು ಸಹ ಇತಿಹಾಸದಿಂದ ತಿಳಿದು ಬರುತ್ತದೆ. ಹೀಗೆಯೇ ಅನುಕ್ರಮವಾಗಿ ನಾವು ಹಾಗು ನಮ್ಮ ಸಾಂಸ್ಕೃತಿ ಬದಲುತ್ತ ಸಾಗಿದಂತೆ ಪರಮಾತ್ಮನೆಂಬ ರೂಪು ಕೊಟ್ಟ ಆ ರೂಪು ಸಹ

ಬದಲಾಗುತ್ತ ಬಂದಿದೆ ಎಂಬುದನ್ನು ಇಂದಿನ ಕಾಲಕ್ಕೆ ಮನೆಮನೆಗಳಲ್ಲಿ ನೇತಾಡುವ ಕ್ಯಾಲೆಂಡರುಗಳ ಚಿತ್ರಣಗಳಿಂದಾದರೂ ಊಹಿಸಬಹುದು. ಇದರ ಮೇಲಿಂದ ತಿಳಿದುಬರುವದೇನಂದರೆ, ಪರಮಾತ್ಮನು ನಿರಾಕಾರನು. ನಿರಾಕಾರಿಯಾದ ಆತನನ್ನು ಅಂದಿನ ಕವಿಗಳು ಬ್ರಹ್ಮನೆಂದೂ, ಇನ್ನೋರ್ವನು ಶಿವನೆಂದೂ, ವಿಷ್ಣುವೆಂದೂ ಮುಂತಾಗಿ ಬಣ್ಣಿಸಿರಬಹುದು. ಮುಂದೆ ಬರಬರುತ್ತ ಕವಿಗಳ ಕವನಸೃಷ್ಟಿಯು ಬೆಳೆಯುತ್ತಿದ್ದಂತೆ ಆಯಾ ಕವಿಗಳ ಕಾವ್ಯಕ್ಕೆ ಜನತೆ ಮನಸೋತು, ಅವುಗಳನ್ನು ವಿಮರ್ಶಿಸಿ, ಆಯಾ ಕವಿಗಳಿಗೆ ಹಾಗು ಕಾವ್ಯಗಳಿಗೆ ಮನ್ನಣೆಕೊಟ್ಟಿರಬಹುದು. ಅವರನ್ನು ಮಹರ್ಷಿಗಳೆಂದೂ ಮತ್ತೆ ಇನ್ನೇನನ್ನೋ ಬಿರುದಾವಳಿಗಳನ್ನು ಕೊಟ್ಟಿರಬಹುದು. ಆಯಾ ಕವಿಗಳ ಕವನಗಳಿಗೆ ಮನಸೋತ ಜನರು ಅವರಲ್ಲಿಯೇ ವಾಸಿಸಿ ಅವರನ್ನು ಗುರುಗಳನ್ನಾಗಿ ಮಾಡಿಕೊಂಡಿರಬಹುದು. ಹೀಗೆಯೇ ಅನೇಕ ಪಂಗಡಗಳುಂಟಾಗಿ ಅವರವರಲ್ಲಿ ಚರ್ಚೆಗಳುದ್ಭವಿಸಿ, ಆಯಾ ಸಾಹಿತ್ಯಕ್ಕೆ ಇನ್ನಷ್ಟು ರೂಪು ಹೆಚ್ಚುತ್ತಬಂದು ಅಂದಿನಿಂದ ಇಂದಿನ ವರೆಗೆ ಅನೇಕ ಜ್ಞಾನಿಗಳ ಮೇದುಳಿನಲ್ಲಿ ಅಲೆದಲೆದು ಬಂದ ಗ್ರಂಥಗಳಿಗೆ ಮನ್ನಣೆಕೊಡದಿರುವವರಾರು ? ಹೀಗೆ ತಮ್ಮ ತಮ್ಮ ಗ್ರಂಥದೊಂದಿಗೆ ತಮ್ಮ ತಮ್ಮ ಪಂಗಡಗಳನ್ನು ಜನತೆ ಸದಾಕಾಲ ಪ್ರೀತಿಸುತ್ತಲೇ ಬಂದಿದೆ. ಹೀಗಾಗಿ ಆಯಾ ಜನತೆ ತಮ್ಮತಮ್ಮಲ್ಲಿ ವಿರೋಧ ಭಾವವನ್ನು ತಾಳಿದಾಗ ಆ ಭಾವನೆಯನ್ನು ಹೋಗಲಾಡಿಸಲು ಮತ್ತೋರ್ವ ಮಹರ್ಷಿಯು ಬ್ರಹ್ಮ, ವಿಷ್ಣು, ಮಹೇಶ್ವರರು ಬೇರೆಬೇರೆಯಲ್ಲ, ಅವರೆಲ್ಲರ ಧ್ಯೇಯ ಹಾಗು ದೇಹ ಒಂದೇ ಎಂಬುದೊಂದು ಕಥೆಯಿಂದ ತಿಳಿಸಿರಬಹುದು ಹೀಗಾಗಿ ತ್ರಿಮುಖ ದತ್ತಾತ್ರೇಯ, ಚತುರ್ಮುಖ ಬ್ರಹ್ಮ ಹೀಗೆ ಕಾಲಕ್ರಮೇಣ ಅನೇಕ ದೇವರುಗಳ ಗಣನೆಯಾಗುತ್ತಬಂದಿರಬಹುದೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ.

ಮಾನವನ ಮನಸ್ಸು ಸದಾಕಾಲ ವಿಚಾರಮಂಥನದಲ್ಲಿಯೇ ಸಿಲುಕಿರುತ್ತದೆ. ಯಾರಾದರೊಬ್ಬರು ಕಥೆಯೊಂದನ್ನು ಹೇಳುತ್ತಿದ್ದರೆ ಹೇಳುವವರು ಆ ಕಥೆಯಲ್ಲಿಯ ದೃಶ್ಯವನ್ನು ಕಾಲ್ಪನಿಕವಾಗಿಯೇ ಹೀಗಿದ್ದರಬಹುದೆಂದು ದೃಶ್ಯವನ್ನು ತನ್ನಲ್ಲಿ ತಾನೇ ಕಾಣುತ್ತಿರುವಂತೆ ಕೇಳುವವನಾದರೂ ಕಲ್ಪನಾಚಿತ್ರವನ್ನು ಕಾಣುತ್ತಲೇ ಇರುತ್ತಾನೆ. ಇದೊಂದು ಮಾನವನ ಕಲ್ಪನಾ ಕಟ್ಟಿತ. ಹೀಗೆ ಮಾನವನು ಅಕ್ಷುಗಳಿಂದ ಕಟ್ಟಿಡ ಕಟ್ಟಿಯೇ ಮುಂದೆ ಹಸ್ತದಿಂದ ಕಟ್ಟುವವನಾದನು. ಇಂದಿನ ಕಾಲಕ್ಕೆ ಅನೇಕ ಜನ

ಮಂತ್ರಿಗಳು, ಇನ್ನಿತರ ಮಹಾಜನರು ಆಯಾ ಗ್ರಾಮಗಳಲ್ಲಿ ಸಂಚಾರ ಕೈಕೊಂಡ ಕಾಲಕ್ಕೆ ಅಲ್ಲಿ ಅನೇಕ ಜನ ಕಲಾಕಾರರು ತಮ್ಮ ತಮ್ಮ ಕಲೆಯನ್ನು ಪ್ರದರ್ಶಿಸುವಂತೆ ಆ ಕಾಲಕ್ಕೆ ಬಂದ ಅತಿಥಿಗಳೆದುರು ಆಯಾ ದೇವದೇವತೆಗಳ ರೂಪನ್ನು ಧಾರಣ ಮಾಡಿಕೊಂಡು ನಟನೆ ಹಾಗು ನೃತ್ಯಗಳನ್ನು ತೋರ್ಪಡಿಸುತ್ತಿರಬೇಕು. ಆದುದರಿಂದಲೇ ಭರತನಾಟ್ಯವೆಂಬ ನಾಟ್ಯವು ನಮ್ಮ ಮೂಲ ಸಾಂಸ್ಕೃತಿಯ ಕುರುಹಾಗಿ ಇನ್ನೂ ಅಳಿದುಳಿದು ಬಂದು ಬಳಲುತ್ತಿದೆ. ಶಾಲೆಯಲ್ಲಿ ಶಿಕ್ಷಕರು ಬಾಲಕರಿಗೆ ಯಾವದೊಂದು ಆಕೃತಿಯನ್ನು ಹಲಗೆಯ ಮೇಲೆ ಚಿತ್ರಿಸಿ ತಿಳಿಸಿದಾಗಲೇ ಬಾಲಕನು ಶೀಘ್ರವಾಗಿ ತಿಳಿದುಕೊಳ್ಳುವದುಂಟು. ಇದರಂತೆ ಹಿಂದಣಜನತೆಯೂ ಸಹ ನಿರಾಕಾರ ಪೂಜೆಯಿಂದ ಆ ಪರಮಾತ್ಮನ ಮೇಲೆ ಪೂರ್ಣ ನಂಬಿಗೆ, ಭಕ್ತಿಗಳು ಉಳಿಯವೆಂದು ಬಗೆದಿದ್ದಾಗ ಕಲಾಕಾರನು ತನ್ನ ಕಲೆಯ ಕೃತಿಯನ್ನು ಕವಿಯ ವರ್ಣನೆಯ ಪ್ರಕಾರ ತ್ರಿಮುಖ, ಚತುರ್ಮುಖ, ಗಜಮುಖ ಮುಂತಾದ ಮುಖಗಳಿಂದ ನಿರ್ಮಿಸಿ ತನ್ನ ಉಪಜೀವನವನ್ನು ಸಾಗಿಸಿರಬಹುದು. ಕಲಾಕಾರನು ಕಲೆಯಲ್ಲಿ ಚಾಣಾಕ್ಷನಿದ್ದಂತೆ ಈ ಘನತರವಾದ ವಿಚಾರಪ್ರಣಾಲಿಯನ್ನು ಅದೆಂತು ಬಲ್ಲನು ? ಕವಿಯು ಪರಮಾತ್ಮನನ್ನು ದಿವ್ಯ ಜ್ಞಾನಿಯೆಂದೂ, ವಿಶ್ವವನ್ನು ಸಮದೃಷ್ಟಿಯಿಂದ ನೋಡುವವನೆಂದೂ ಬಣ್ಣಿಸಿದುದಕ್ಕೆ ಕಲಾಕಾರನು ಚತುರ್ಮುಖ ಬ್ರಹ್ಮನನ್ನು ಹೀಗೆಯೇ ಇನ್ನಿತರ ದೇವದೇವತೆಗಳನ್ನು ಅನಂತ ರೂಪದಿಂದ ಚಿತ್ರಿಸುತ್ತ ಬಂದಿರಬಹುದು. ಇದಕ್ಕೆ ಮಹರ್ಷಿಗಳಾದರೂ ಮನ್ನಣೆ ಕೊಟ್ಟಿರಬಹುದು. ಮುಂದೆ ದಿನದಿನಗಳುರುಳಿ ಯುಗಯುಗಗಳಾರಂಭಿಸಿದಂತೆ ಆಯಾ ಮಹಾತ್ಮರು, ಮಹಾಪುರುಷರು ಸಹ ತಮ್ಮ ತಮ್ಮ ಮೂಲ ಗುರುಗಳು ಆರಾಧಿಸುತ್ತಿದ್ದ ಇಷ್ಟದೇವತೆಗಳನ್ನೇ ಆರಾಧಿಸುತ್ತ ಬಂದಿರುವದರಿಂದ ಹಾಗು ಆರ್ಯರ ಕಾಲದ ನಾಲ್ಕು ವರ್ಣಗಳಿಂದಲೂ ಮತ್ತು ಮುಂದೆ ಅನೇಕ ಉದ್ಯೋಗಗಳು ಉತ್ಪತ್ತಿಯಾಗಿ ಆಯಾ ಉದ್ಯೋಗಗಳ ಮೇಲಿಂದಲೂ ಇಂದಿನ ಕಾಲಕ್ಕೆ ಅಸಂಖ್ಯ ಜಾತಿಮತಗಳುದ್ಭವಿಸಿವೆ. ಈ ಜಾತಿ ಎಂಬ ಜ್ಯೋತಿಯು ನಂದುವದು ದುಸ್ತರವಾಗಿದೆ. ಈ ಜ್ಯೋತಿಯನ್ನು ನಂದಿಸಿ ನವೋದಯವನ್ನುಂಟುಮಾಡಲು ಎನಿತು ಸತ್ಪುರುಷರು ಕಷ್ಟಪಟ್ಟು ಜೀವ ಸವಿಸಿದರೆಂಬುದಕ್ಕೆ ಎಣಿಕೆಯೇ ಇಲ್ಲ. ಇಂಥ ಕಾರ್ಯಕ್ಕೆ ಕೈಹಾಕಿದ ಜನರು ಬಹು ಕಷ್ಟಸಹಿಷ್ಣುಗಳೂ, ಧೈರ್ಯಶಾಲಿಗಳೂ, ತತ್ವನಿಷ್ಠರೂ ಇದ್ದರೇ ಮಾತ್ರ ಅದರಲ್ಲಿ ಕೈಹಾಕು

ವಂಥ ಸಮಸ್ಯೆಯಾಗಿದೆ. ಹೀಗಾಗಿ ಇದು ಎಲ್ಲರಿಗೂ ಸಾಧ್ಯವಿಲ್ಲ. ಇದ್ದ ಒಬ್ಬಿಬ್ಬರಿಂದ ಅದು ಹೇಗೆ ಸಾಧ್ಯ? ಪ್ರತಿ ಧರ್ಮಗಳೂ ತಮ್ಮ ತಮ್ಮ ಮೂಲ ಸಾಹಿತ್ಯದಿಂದ ಬಡಿದಾಡುವವೇ ವಿನಹ ಅನ್ಯಧರ್ಮದ ತತ್ವಗಳನ್ನು ತಿಳಿದುಕೊಳ್ಳಬಹುದಾದವುಗಳನ್ನೂ ತಿಳಿದುಕೊಳ್ಳದೆ ಅನ್ಯ ಧರ್ಮಗಳನ್ನು ಹೀಯಾಳಿಸುವದು ಇದೊಂದು ನಮ್ಮ ವಿದ್ವತ್ತತೆಯಲ್ಲಿ ಕುಂದು.

ಪ್ರತಿಯೊಬ್ಬರ ಮನವು ಮಲ್ಲಿಗೆಯ ಪುಷ್ಪದಂತೆ ಶುದ್ಧ ಹಾಗು ಸುವಾಸನೆ ಅಂದರೆ, ವಿದ್ವತ್ತತೆಯಿಂದ ತುಂಬಿ ತುಳುಕುತ್ತಿರಬೇಕು. ಸರ್ವರೂ ಸರ್ವ ಧರ್ಮಗಳನ್ನು ಸಮದೃಷ್ಟಿಯಿಂದ ಕಾಣುವವರಾಗಬೇಕು, ಸರ್ವ ಗ್ರಂಥಗಳ ಜ್ಞಾನವು ಸರ್ವರಿಗೂ ದೊರೆಯುವಂತಾಗಬೇಕು, ಆತ್ಮ ಪರ ಮಾತ್ಮರ ಅರಿವು ಸರ್ವತೋಮುಖದಿಂದ ಒಂದೇ ನಾಡಿಯಾಗಿ ಹೊಂದೊಮ್ಮ ಬೇಕು. ಆಗ್ಗೆ ಮಾತ್ರ ಸರ್ವರ ರಕ್ತ ಒಂದಾಗಬಹುದೇ ವಿನಹ ಜ್ಞಾನಿ ಗಳೆಂದೆನಿಸಿಕೊಳ್ಳುವವರ ಈ ಕಲಹ ಎಂಥ ವೈಚಿತ್ರ್ಯ!

ಪಶುಪಕ್ಷಿ ಮೊದಲ್ಗೊಂಡು ಇಡೀ ಜೀವಕೋಟಿಯೇ ಮಾಯೆ, ಮೋಹ, ಲೋಭಗಳ ಆಧಾರದಿಂದಲೇ ಜೀವಿಸಿವೆ. ಹೊಟ್ಟೆಯ ಪಾಡಿಗಾಗಿ ಹಗಲಿ ರುಳು ಶ್ರಮಿಸುವ ಪಶುಪಕ್ಷಿ ಹಾಗು ಮಾನವರನ್ನು ನಾವು ಸದಾಕಾಲ ನೋಡುತ್ತೇವೆ. ತನ್ನ ಹೊಟ್ಟೆಯ ಪಾಡಿಗೋಸುಗ ಇನ್ನಿತರ ಜೀವಿಗಳನ್ನು ಕಷ್ಟಕ್ಕೆ ಗುರಿಪಡಿಸುವದು ಪ್ರತಿಜೀವಿಯ ಸ್ವಾಭಾವಿಕ ಸ್ವಭಾವವಾಗಿದೆ. ಹೊಲಗಳಲ್ಲಿ ಬೆಳೆಯು ಬೆಳೆದು ನಿಂತಾಗ ಇದರ ಅರಿವಾಗದೇ ಇರದು. ಹಕ್ಕಿಗಳ ಹಿಂಡು ತಮ್ಮ ಹೊಟ್ಟೆಯಪಾಡಿಗಾಗಿ ದೂರದೂರದಿಂದ ಬರು ತ್ತಿರುತ್ತವೆ. ಹೊಲದೊಡೆಯನು ಕಲ್ಲು ಕವಣೆಗಳಿಂದ ಅವುಗಳನ್ನು ದೂರೀ ಕರಿಸುತ್ತಿರುತ್ತಾನೆ. ಪ್ರಾಣದ ಅರಿವಿಲ್ಲದೇ ಆ ಹಕ್ಕಿಗಳು ಹಾಹಾಕಾರ ಪಡುತ್ತ ಸಾಗುತ್ತಿರುತ್ತವೆ. ಎತ್ತ ಸಾಗಿದರೂ ಯಥಾಪ್ರಕಾರವಾಗಿಯೇ. ಹೀಗೆ ಚಿಕ್ಕ ಪಕ್ಷಿಗಳನ್ನು ಮಾನವನು ದಯಾದೃಷ್ಟಿಯಿಂದ ನೋಡದ ಮೇಲೆ ನಾನು, ನನ್ನದು, ನನ್ನವರೆಂದು ಹಗಲಿರುಳೂ ಬಡಿದಾಡುವ ಮಾನವನನ್ನು ಮಾನವನು ಎಂತು ದಯಾದೃಷ್ಟಿಯಿಂದ ಕಾಣಲು ಸಾಧ್ಯ? ಮಾನವನು ಇನ್ನೊಬ್ಬ ಮಾನವನನ್ನು ನಂಬಿ ನಡೆಯಬಹುದು. ಆದರೆ ತನ್ನ ನಂಬುಗೆ ತನಗಿಲ್ಲದಮೇಲೆ ಇನ್ನೊರ್ವನನ್ನು ನಂಬುಗೆಯಿಂದ ಕಾಣುವದು ಕೇವಲ ನಟನೆಮಾತ್ರವೆಂದು ಹೇಳಬಹುದು.

ವಿಶ್ವ ಜೀವಿಗಳಲ್ಲಿ ಶ್ರೇಷ್ಠ ಜೀವಿಯೆಂದೆನಿಸುವ ಮಾನವನು ಅರಿವಿದ್ದೂ ಅರಿವಿಲ್ಲದವರಂತೆ ವರ್ತಿಸುವನು. ನಿಜವಾದ ಅರಿವು ಮಾನವನಿಗೆ ವೃದ್ಧಾಪ್ಯ ದಲ್ಲಿ ದೊರೆಯುವದು. ಏಕೆಂದರೆ, ಬೆಟ್ಟದ ಮೇಲಿನ ಒಂದು ಕಲ್ಲು ಬಂಡೆಯು ಪ್ರವಾಹದ ಶೆಳೆತಕ್ಕೆ ಅನೇಕ ಇನ್ನಿತರ ಬಂಡೆಗಳಿಗೆ ಒಡೆಬಡೆದು ತನ್ನ ಚೂಚೂದ ಅಂಕುಡೊಂಕಾದ ಕೊಂಚೆಗಳನ್ನು ನಾಶಪಡಿಸಿಕೊಂಡು ಉರು ಳುತ್ತುರುಳುತ್ತ ಗೋಲಾಕಾರವಾಗುವಂತೆ ಪ್ರಪಂಚದಲ್ಲಿ ಮಾನವನೂ ಅನೇಕ ತೊಂದರೆಗಳಿಂದ ತನ್ನ ಆ ತೊಂದರೆಗೆ ಕಾರಣವಾದ ಆಯಾ ಗುಣಗಳನ್ನು ನಾಶಪಡಿಸಿಕೊಳ್ಳುತ್ತಾನೆ. ಆದುದರಿಂದಲೇ ಹಿರಿಯರಿಗೆ ಹಾಗು ಹಿರಿಯರ ನುಡಿಗೆ ಎಂದಿನಿಂದಲೂ ಮನ್ನಣೆಯಿದೆ. ಹಿಂದಿನ ಜನತೆ ಗೋಲಾಕಾರ ಕಲ್ಲುಗಳನ್ನು ಪೂಜಿಸುವದು ನನ್ನ ಹೀನ ಗುಣಗಳನ್ನಳಿಸಿ, ನಿನ್ನಂತೆ ನನ್ನನ್ನು ಮಾರ್ಪಡಿಸು ಎಂಬ ಭಾವನೆಯಿಂದಲೇ ಪೂಜಿಸುತ್ತಬಂದಿದ್ದಾರೆ. ಆದರೆ ಇಂದಿನವರು ಅವುಗಳನ್ನು ಪೂಜಿಸುವದು ಕೇವಲ ಹಿರಿಯರು ಪೂಜಿಸುತ್ತಿದ್ದರೆಂಬ ಭಾವನೆಯು ತಳಹದಿಯ ಮೇಲೆಯೇ ಪೂಜಿಸುತ್ತಾರೆ ಹೊರತು ನಿಜವಾದ ಅರಿವು ಎಷ್ಟೋ ಜನರಿಗೆ ತಿಳಿದಿಲ್ಲ.

ಮನದ ಮರೆಯಲ್ಲಿ ಮರಣವು ಅಡಗಿದೆ. ಆ ಮನದಲ್ಲಿ ಮಾಯೆ, ಮೋಹ, ಲೋಭಗಳೆಂಬ ಗೋಡೆಗಳು ಒಂದರ ಹಿಂದೊಂದು ನಿಂತಿವೆ. ಈ ಎಲ್ಲ ಗೋಡೆಗಳ ಹಿಂಬದಿ ಮರಣವಡಗಿದೆ. ಆ ಮರಣವನ್ನು ಕಾಣಲು ಅಂಜನವು ಬೇಕಲ್ಲವೇ ? ಆ ಅಂಜನವು ಭೂತ ಪಿಶಾಚಿಗಳನ್ನು ಬಿಡಿಸು ವವರಲ್ಲಿ, ಮಾಟಮಾಡುವವರಲ್ಲಿ ಕೇಳಿದರೆ ದೊರೆಯದು. ನಿಮ್ಮ ಅಕ್ಷು ಜ್ಯೋತಿಯನ್ನು ಅನೇಕ ಮಹಾತ್ಮರು ಪ್ರಕಟಿಸಿದ ಪ್ರಕಟನೆಗಳತ್ತ ಹೊರ ಳಲಿ. ಆ ಮುತ್ತಿನಂತಹ ಅಕ್ಷರಗಳನ್ನು ಮನದಲ್ಲಿ ಸರವನ್ನಾಗಿ ಮಾಪ ಡಿಸಿಕೊಂಡರೆ ಮಾತ್ರ ಮರೆಯಲ್ಲಿದ್ದ ಮರಣವು ನಿಮ್ಮ ಮನೋಮಂದಿರ ವನ್ನು ಸದಾಕಾಲ ಸುತ್ತುವದು. ಆದರಿಂದಲೇ ಮಾನವನು ಮೋಕ್ಷ ಹೊಂದುವನು.

ಪ್ರತಿ ನಿಮಿಷವು ನಮ್ಮ ಮರಣದ ಸಾಮೀಪ್ಯವನ್ನು ಸೂಚಿಸುವ ಸೂಚಿಕೆ ಯಾಗಿದೆ. ಇದನ್ನರಿಯದಂತೆ ಮಾಡಿದ ಮಾಯೆ, ಮೋಹ, ಲೋಭಗಳು ಮಾನವನ ಕಾಲ್ಪನಿಕ ಘಾತುಕಗಳಾಗಿವೆ. ಆದರೂ ಇವು ಘಾತುಕಗ ಳೆಂದೇ ಹಲವರ ಅಭಿಪ್ರಾಯ. ಈ ಘಾತುಕಗಳನ್ನು ನಾಶಪಡಿಸಲು ಅದೆಷ್ಟು ಮಹಾಪುರುಷರು ಜನಿಸಿದರೆಂಬುದಕ್ಕೆ ಎಣಿಕೆಯೇ ಇಲ್ಲ. ಇಂಥ

ಮಹಾಪುರುಷರು ತಾವೂ ಸಹ ಇಂಥ ಜಾಲಕ್ಕೆ ಸಿಲುಕಿಯೇ ಮುಕ್ತ ರಾದವರುಂಟು. ಇಡೀ ಪ್ರಪಂಚವೇ ಮಾಯಾಜಲದಲ್ಲಿ ಮುಳುಗಿರುವಾಗ ಆ ಜಲದ ಮೇಲೆ ತೇಲುವದೆಂದರೆ, ಬಾವಿಯಲ್ಲಿ ಬಿದ್ದು ಮರಣಹೊಂದಿದ ಶರೀರವು ಮೂರು ದಿನಗಳ ನಂತರ ಮೇಲೆ ತೇಲಿ, ಅಂತ್ಯಸಂಸ್ಕಾರಕ್ಕೆ ಸಿದ್ಧ ವಾಗುವಂತೆ ಮಾಯಾಜಲದಲ್ಲಿ ಚಿಕ್ಕಂದಿನಿಂದಲೂ ಮುಳುಗಿದ ದೇಹವು ಕೊನೆಯ ವೃದ್ಧಾಪ್ಯದಲ್ಲಿ ಆ ಜಲದಿಂದ ಮುಕ್ತವಾದರೆ ಪ್ರಯೋಜನವೇನು ?

ಮಾನವನು ಸದಾ ಕಾಲ ತನ್ನ ಮನವನ್ನು ಮಥನಮಾಡುತ್ತಿರುವದು ಕೇವಲ ಮಾಯೆ, ಮೋಹ, ಲೋಭಗಳಿಂದಲೇ. ಇಂದಿನ ಕಾಲದಲ್ಲಿ ನಾವು ಇಷ್ಟೊಂದು ಸುಧಾರಣೆಗೆ ಬಂದುದು ನಮ್ಮ ನಾಮಾಂಕಿತವು ವಿಶ್ವ ದಲ್ಲಿ ಹರಡಲೆಂಬ ಲೋಭದಿಂದಲೂ, ಇನ್ನು ಹಲವರು ಧನ ಲೋಭ ದಿಂದಲೂ ಮಾನವನಿಗೆ ಮೀರುವಂಥ ಕಾರ್ಯದಲ್ಲಿ ಕೂಡ ಜಯಶೀಲ ರಾಗಿದ್ದಾರೆ. ಹೀಗೆಯೇ ಚಿಕ್ಕ ಚಿಕ್ಕ ವ್ಯವಹಾರಗಳಲ್ಲಿಯೂ ಕೂಡ ಹೀಗೆ ತನಗಾಗಿ ತನ್ನ ಮಡದಿಮಕ್ಕಳಿಗಾಗಿ ಹಗಲಿರುಳು ದುಡಿದು ಹಣಸಂಪಾದಿಸಿ, ಕಾಗೆಯು ಮಗ್ಗುಲಲ್ಲಿರುವ ಕೆರೆಯ ನೀರನ್ನು ಕುಡಿಯದೆ ಮಡಿಕೆಯಲ್ಲಿಯ ಮಲಿನ ಜಲವನ್ನು ಕುಡಿಯುವಂತೆ ಸಂಪಾದಿಸಿದ ಹಣವನ್ನು ಮಡದಿಮಕ್ಕ ಳಿಗೆಂದು ಮೀಸಲಿಟ್ಟು, ದೈವವಿದ್ದೂ ದರಿದ್ರರಾಗಿ ಬಾಳುಸಾಗಿಸಿ ಈ ಜೀವನ ವನ್ನು ಹಾಳುಮಾಡಿಕೊಳ್ಳುವದುಂಟು. ಹೀಗೆ ಮಾಯೆ ಮೋಹ ಲೋಭ ಗಳು ಹಿತ ಹಾಗು ಅಹಿತಗಳ ಬಂಧನದಲ್ಲಿ ಬಿಗಿಯಲ್ಪಟ್ಟಿದೆ. ಇದರ ಸಾಧ್ಯಾಸಾಧ್ಯತೆಯು ಮಾನವನಿಗೆ ಮಿಕ್ಕಿದರೂ ಕೂಡ ಅದರ ಬಗ್ಗೆ ವಿಚಾ ರಿಸುವದೊಂದು ವೈಚಿತ್ರ್ಯವೇ ಸರಿ.

ಮಾನವನು ತನ್ನ ನಡೆಯನ್ನು ಹೇಗೆ ಸಾಗಿಸಿದರೂ ವಿಶ್ವವು ಒಂದಿ ಲ್ಲೊಂದು ಬಗೆಯಾಗಿ ನುಡಿಯುವದು. ಬಾಗಿ ನಡೆದರೆ ಡೊಗನೆಂದೂ, ಸೆಟೆದು ನಡೆದರೆ ಸೊಕ್ಕಿನವನೆಂದೂ ನುಡಿಯುವದು. ಒಟ್ಟಿನಲ್ಲಿ ಹೇಗೆ ನಡಿದರೂ, ಹೇಗೆ ನುಡಿದರೂ ಅದರ ವಿರುದ್ಧ ನಡೆ ನುಡಿಗಳು ಉತ್ಪತ್ತಿ ಯಾಗಿಯೇ ಇರುತ್ತವೆ. ಇಂಥ ನಡೆನುಡಿಗಳ ಕೂಟವಾದ ಮರುಳರ ಮಂದಿರವೇ ಈ ವಿಶ್ವ.

ವಿಶ್ವದಲ್ಲಿ ಮಹಾತ್ಮರಿಗೆ ಹಾಗು ಮಹಾಪುರುಷರಿಗಿರುವಷ್ಟು ಮಾನ ಮನ್ನಣೆ ಇನ್ನಾರಿಗೂ ಇಲ್ಲ. ಅವರ ಮುಖ್ಯ ಉದ್ದೇಶ ಮಾನವರ ದುಃಖ ವನ್ನು ದೂರೀಕರಿಸುವದು. ದುಃಖವು ದೂರಾಗಬೇಕಾದರೆ ಮಾಯೆ,

ಮೋಹ, ಲೋಭಗಳಿಂದ ಮಾನವನು ದೂರಾದಲ್ಲಿ ದುಃಖವು ದೂರಾಗುವದೆಂಬುದೊಂದು ಅವರ ಕಾಲ್ಪನಿಕ ಅಭಿಪ್ರಾಯ. ದುಃಖವು ಯಾರನ್ನೂ ಬಿಟ್ಟಿಲ್ಲ. ದುಃಖದಿಂದ ದೂರಾಗಲು ಶಕ್ಯವೇ ಇಲ್ಲ. ಈ ಮಾಯೆ, ಮೋಹ, ಲೋಭಗಳನ್ನು ದೂರೀಕರಿಸಿದವರು ಕಷ್ಟಕ್ಕೀಡಾಗದವರಾರಿದ್ದಾರೆ ? ಚಿಂತೆಯೇ ಮುಪ್ಪು. ಸಂತೋಷವೇ ಯೌವ್ವನ. ಅಂದ ಮೇಲೆ ಚಿಂತೆ ಇಲ್ಲದವರು ಮುಪ್ಪಿಗೀಡಾಗಲು ಕಾರಣವೇನು ? ಸರ್ವರಿಗೂ ಚಿಂತೆ (ದುಃಖ) ಬಿಟ್ಟಿಲ್ಲ. ಸರ್ವರೂ ಒಂದಿಲ್ಲೊಂದು ಬಗೆಯಾದ ದುಃಖಕ್ಕೆ ಆಹುತಿಯಾಗಿಯೇ ಇಹ ಲೋಕವನ್ನು ತ್ಯಜಿಸಬೇಕಾಗುತ್ತದೆ. ಅಂದಮೇಲೆ ಯಾವ ದುಃಖವಾದರೇನು ದುಃಖವೆಂಬುದರ ಮೂಲ ಸ್ವರೂಪ ಒಂದೇ ಅದಮೇಲೆ ? ಸುಖ ದುಃಖಗಳ ಸಂಗಮವಾದ ಈ ವಿಶ್ವದಲ್ಲಿ ನಾನು ಕೇವಲ ಸುಖಜಲದಲ್ಲಿ ಮಿಂದು ತೆರಳುವೆನೆಂಬುದು ಎಷ್ಟು ಹಾಸ್ಯಾಸ್ಪದದ ಮಾತು !

ವಿಶ್ವದಲ್ಲಿ ಅನೇಕ ಮತ ಪಂಥಗಳು ಉದಯಿಸಿದುದು ಕೇವಲ ತರ್ಕ ವಿತರ್ಕಗಳ ಮಥನದಿಂದ. ತಿಳಿದು ನೋಡಿದಲ್ಲಿ ಮೂಲ ಒಂದೇ. ಆದರೂ ಕಣ್ಣಿಗೆ ಕಾಣದ ಜಾಲವಾದ ವಾಕ್ಯಜಾಲದಲ್ಲಿ ಒದ್ದಾಡಿ ಆ ಜಾಲದಲ್ಲಿಯೇ ಅನಂತ ಉಸಿರುಗಳು ಹಾರುತ್ತಿರುವವು.

ಪ್ರತಿಯೊಬ್ಬ ಮಾನವನು ಪ್ರತಿಕ್ಷಣಕ್ಕೂ ಅನುಭವ ತಕ್ಕೊಳ್ಳುವಂಥ ಅನಂತ ಏರ್ಪಾಡುಗಳನ್ನು ಸೃಷ್ಟಿಕರ್ತನು ನಿರ್ಮಿಸಿದ್ದಾನೆ. ಮಾನವನು ಅವುಗಳ ಆಧಾರದಿಂದಲೇ ಮಹಾಜ್ಞಾನವನ್ನು ಪಡೆಯಬಹುದು. ಮಾನವನಿಂದಲೂ ಅನುಭವ ಪಡೆಯಬಹುದು. ಆದರೆ ಒಂದಕ್ಕೆ ಎರಡು ಹೇಳುತ್ತ ಬಂದ ಆ ಅನುಭವ ಹಾಗು ಚಾರಿತ್ರ್ಯ ನಮ್ಮನ್ನು ಮರುಳರನ್ನಾಗಿ ಮಾಡುವದು. ಹೀಗಾಗಿ ಸತ್ಯವು ಅಸತ್ಯವಾಗಿಯೂ, ಅಸತ್ಯವು ಸತ್ಯವಾಗಿಯೂ ಕಾಣುವದು. ಅದಕ್ಕಾಗಿ ಕೈಗನ್ನಡಿಯಾದ ವಿಶ್ವವನ್ನು ಮನದೆದುರು ಹಿಡಿದುಕೊಂಡು ನೋಡಿದಲ್ಲಿ ಸ್ವಾನುಭಾವ ಸ್ವರೂಪವು ನಮಗೆ ಸತ್ಯ ಮಿಥ್ಯಗಳನ್ನು ಬೇರ್ಪಡಿಸಿ ತೋರಿಸುತ್ತದೆ.

ಮಾನವನು ನಿರಾಕಾರಿಯನ್ನು ಆಕಾರಿಯನ್ನಾಗಿ ಭಾವನೆಯಿಂದಲೇ ತಿಳಿದುಕೊಂಡಂತೆ ಆತನ ವಾಸಸ್ಥಾನವನ್ನಾದರೂ ಕಾಲ್ಪನಿಕವಾಗಿಯೇ ಕಂಡು ಹಿಡಿದಿದ್ದನೆ. ಆದರೆ ಇಂದಿನ ಕಾಲದಲ್ಲಿ ಅಂಥದೊಂದು ಮೂಢನಂಬಿಗೆ ಪರ್ವತಾರೋಹಿ ಶ್ರೀ ತೇನಸಿಂಗರ ಸಾಹಸದಿಂದ ದೂರಾಯಿತು. ಹಿಂದಿನ

ಕಾಲದಲ್ಲಿ ಹಿಮಾಚ್ಛಾದಿತ ಅತ್ಯುನ್ನತ ಪರ್ವತದ ಶಿಖರನ್ನು ಮುಟ್ಟಲು ಸಾಧ್ಯವಿಲ್ಲದ್ದರಿಂದಲೂ ಕವಿಯು ಈ ದಿವ್ಯ ಭವ್ಯ ಪರ್ವತಕ್ಕೆ ಪರಮಾತ್ಮನ ಸ್ವರೂಪನ್ನು ರೂಪಿಸಿದುದಕ್ಕೆ ಜನರು ಪರಮಾತ್ಮನ ವಾಸಸ್ಥಾನವೇ ಹಿಮಾಲಯ ಹಾಗು ಆ ಪರಮಾತ್ಮನ ಶಿರದಿಂದ ಗಂಗೆಯು ಧಾರಾಕಾರವಾಗಿ ಹರಿದು ಈ ಭೂಜನರ ಹಾಗು ಭೂಮಿಯ ಪಾವಿತ್ರ್ಯಕ್ಕಾಗಿ ಭೂಲೋಕಕ್ಕೆ ಬಂದಿರುವಳೆಂಬ ಊಹೆಯಿಂದ ಆ ನದಿಯು ಹರಿದ ಸ್ಥಳಗಳು ಪವಿತ್ರ ಸ್ಥಳಗಳೆಂದು ಆಯಾ ಸ್ಥಳಗಳಲ್ಲಿಯ ದೇವಸ್ಥಾನಗಳಿಗೆ ಮಹತ್ವಕೊಡುತ್ತ ಬಂದಿರುವದರಿಂದ ಇಂದಿಗೂ ಸಹ ಮೂಢನಂಬಿಗೆಯ ಜನ ಆಯಾ ಕ್ಷೇತ್ರಗಳಿಗೆ ಹೋಗುತ್ತಿರುವದು ಗ್ರಂಥಗಳ ಮೇಲಿನ ದಿವ್ಯ ಶ್ರದ್ಧೆಯಿಂದ ಮಾತ್ರ. ಇಂತು ಅಪಾರ ಶ್ರದ್ಧೆಯಿಂದೊಡಗೂಡಿದ ಗ್ರಂಥಗಳಿಂದ ಒಂದಾನೊಂದು ಕಾಲದಲ್ಲಿ ಜನತೆ ಶಾಂತಿಸಾಗರದಲ್ಲಿ ಮುಳುಗಿ ನಿದ್ರಿಸುತ್ತಿತ್ತು. ಮುಂದೆ ಪಾಶ್ಚಿಮಾತ್ಯದಿಂದ ಬೀಸುವ ಗಾಳಿಗೆ ಶಾಂತಿಸಾಗರವು ಕ್ರಾಂತಿಸಾಗರವಾಗಿ ಎರಡುನೂರು ವರುಷ ಹೋರಾಡಿ ತನ್ನ ಅಲೆಗಳಿಂದ ಆ ಗಾಳಿಯನ್ನು ಮುನ್ನುಗ್ಗಿ ಸ್ವಾತಂತ್ರ್ಯವನ್ನು ಪಡೆದಿದೆ.

ಮಾನವನು ಆತ್ಮ ಪರಮಾತ್ಮರ ಅರಿವಿಲ್ಲದೆ ಏನನ್ನು ಯೋಚಿಸಿದರೂ ಕಡಿಮೆಯೇ ಸರಿ. ಮಾನವನು ಇಂದು ಅನೇಕ ಅಚ್ಚರಿಯ ಕೃತಿಗಳನ್ನು ಬೆಳಕಿಗೆ ತಂದು ಇದಕ್ಕೂ ಅಚ್ಚರಿಯ ಕೃತಿಯನ್ನು ಅಂದರೆ ಜನನಮರಣವನ್ನು ತನ್ನ ಸಾನ್ನಿಧ್ಯದಲ್ಲಿ ತೆಗೆದುಕೊಳ್ಳಬಯಸಿ, ಆ ದಿಶೆಯಲ್ಲಿ ಸೋಲನ್ನನುಭವಿಸಿದ್ದಾನೆ. ವಿಶ್ವದಲ್ಲಿ ಮಾನವನು ಒಂದನ್ನು ಹುಟ್ಟಿಸಲಾರ. ಒಂದನ್ನು ಬದುಕಿಸಲಾರ. ಇದೇ ರೀತಿ ಸರ್ವವೂ ಪರಮಾತ್ಮನ ಅನುಗ್ರಹದಿಂದಲೇ ನಡೆದಿವೆ ಎಂಬುದನ್ನರಿತು ಅರ್ಚಿಸಿದರೆ ದೇವನೊಲಿವ. ಅರ್ಚನೆಯೆಂದೊಡನೆ ಬೊಂಬೆಯೊಡನಾಟವಾಡುವ ಬಾಲಕರಂತೆ ಪರಮಾತ್ಮನೆಂಬ ವಿಗ್ರಹದ ಮೇಲೆ ಉದಕವನ್ನೆರೆದರೆ ಅರ್ಚನೆಯಲ್ಲ. ತನ್ನ ಮನೋಮಂದಿರದಲ್ಲಿ ಆತನನ್ನು ಪೂಜಿಸಬೇಕು. ಆತನ ಬಗ್ಗೆ ವಿಚಾರವಿನಿಮಯ ಮಾಡುವದೇ ಮಂತ್ರ. ತನ್ನ ಹೀನ ಗುಣಗಳನ್ನು ಹೃದಯಾಗ್ನಿಯಲ್ಲಿ ತಳ್ಳಿ ಜಲಿಸುವದೇ ಹೋಮಹವನ. ಇದನ್ನೆಲ್ಲ ತ್ಯಜಿಸಿ ಹಿರಿಯರ ಕಿತ್ತಿಯನ್ನು ತೀಡುವದು ಸುಶಿಕ್ಷಿತರಾದ ನಮ್ಮ ಲಕ್ಷಣವಲ್ಲ. ಹೀಗೆ ಅನಂತ ದಿಶೆಯಲ್ಲಿ ವೈಚಿತ್ರ್ಯವನ್ನು ಕಾಣುವ ನಾವು ವೈಚಿತ್ರ್ಯರಲ್ಲ. ಈ ಪ್ರಪಂಚವೇ ಒಂದು ವೈಚಿತ್ರ್ಯದ ನೆಲೆವೀಡಾಗಿದೆ.

# ವಚನಕಾರರು ಸಮಾಜದ ಆದರ್ಶ ಪುರುಷರು

ಬರೆದವರು:— ಶ್ರೀಮತಿ ರತ್ನಾ ಶಾಸ್ತ್ರಿ.



ಇಂದಿನ ಸುಧಾರಣೆಹೊಂದಿದ ಪ್ರಪಂಚದಲ್ಲಿ ಎಲ್ಲಿಡೆಗೆ ಕಂಡುಬರುವುದು ಸತ್ಯದ ಕೊಲೆ! ಮಿಥ್ಯದ ಜಯಜಯಕಾರ..... ! ಯಾವುದೇ ಸಮಾಜದಲ್ಲಿಯ ಅಸ್ಥಿರತೆ, ಅಸ್ವಾಸ್ಥ್ಯ ಕಂಡುಬರುವುದಿಷ್ಟೇ ಅಲ್ಲದೆ ಒಂದು ಸಮಾಜ, ಇನ್ನೊಂದು ಸಮಾಜವನ್ನು ಸಮೂಲವಾಗಿ ನಾಶಮಾಡಿಬಿಡಬೇಕೆಂದು ಅನೇಕ ಹೊಂಚು, ಕುಹಕ ತಂತ್ರಗಳನ್ನು ಹಾಕುತ್ತಿರುವುದು ಅಡಿಗಡಿಗೆ ಕಂಡುಬರುತ್ತಿರುವುದು. ಸಮಾಜದಲ್ಲಿ ಶಾಂತಿ, ಸ್ಥಿರತೆ, ಸ್ತ್ರಿಮಿತೆಗಳು ಅವಶ್ಯವಾಗಿ ಬೇಕು! ಅಂದರೇನೆ ಅದು ಸಮಾಜವೆಂಬ ಸಂಜ್ಞೆಯನ್ನು ಪಡೆಯುವುದು. ಈ ಸಮಾಜದಲ್ಲಿರುವವರಿಗೆ ವಚನಕಾರರು ಅನೇಕ ಬಂಧನಗಳನ್ನು ಹಾಕಿರುವರು. ಆ ಬಂಧನಗಳನ್ನು ಸ್ವತಃಹಕ್ಕೊ ಅನ್ವಯಿಸಿಕೊಂಡು, ಅವನ್ನು ತಮ್ಮ ನಿತ್ಯದ ಜೀವನದಲ್ಲಿ ಅಳವಡಿಸಿಕೊಂಡು ಅದರಂತೆ ವಚನಕಾರರು ನಡೆದು ತೋರಿಸಿದುದರಿಂದಲೆ ಅವರಿಗೆ ಸಮಾಜದ ಆದರ್ಶ ಪುರುಷರೆಂಬ ಸಂಜ್ಞೆಯು ಪ್ರಾಪ್ತವಾಗಿರುವದು. ಮಾನವನ ಇಲ್ಲವೆ ಯಾವುದೇ ಜನಾಂಗದ ಇಲ್ಲವೆ ರಾಷ್ಟ್ರದ ಪ್ರಗತಿಯು ಅಥವಾ ಆಯಾ ರಾಷ್ಟ್ರದಲ್ಲಿ ನೆಲಸಿದ ಶಾಂತಿಯು ಅಲ್ಲಿ ರೂಢಿತವಾದ ನಿಯಮ ನಿರ್ಬಂಧಗಳನ್ನೆ ಹೆಚ್ಚಾಗಿ ಅವಲಂಬಿಸಿರುವದೆಂದು ವಚನಕಾರರು ಸಮಾಜದ ನಾಡಿಯುಂತಿದ್ದ ಇದನ್ನು ತತ್‌ಕ್ಷಣ ಕಂಡುಹಿಡಿದು ಅದಕ್ಕನುಗುಣವಾದ ಅನೇಕ ಬಂಧನಗಳನ್ನು ಇರಿಸಿದರು. ಈ ಬಂಧನಗಳಿಲ್ಲದಿದ್ದರೆ ಮಾನವನು ಪಶುವಿನಂತೆ ವರ್ತಿಸುವನೆಂದು—ಅವರ ಅಭಿಪ್ರಾಯ! ಪಶುವಾಗಿ ಮಾನವ ನಡೆಯುವುದಕ್ಕೆ ಆರಂಭಿಸಿದನೆಂದರೆ— ಸಮಾಜವು ಅಶಾಂತಿ, ಹಿಂಸೆ ಮತ್ತು ಅವ್ಯವಸ್ಥೆಯ ಆಗರವಾಗಿ ಪರಿಣಮಿಸುವದು. ಸಮಾಜದಲ್ಲಿಯ ಅನೀತಿಯು ಆಯಾ ಜನರಲ್ಲಿದ್ದ ಅಹಂಕಾರ, ಆಸೆಗಳಲ್ಲಿಂದ ಹುಟ್ಟಿರುವದು. ಆದ್ದರಿಂದ ಅಹಂಕಾರವು ಮಾನವನ ಹೃದಯದಲ್ಲಿಂದ ಸಮೂಲವಾಗಿ ನಷ್ಟವಾಗಬೇಕು! ಅಹಂಕಾರದಿಂದ ಜ್ಞಾನವು

ಕೆಡುವುದು! ಅದು ಕೆಟ್ಟಿತೆಂದರೆ ತಾಮಸಪ್ರವೃತ್ತಿಗೆ ಭರತಿಯುಂಟಾಗಿ ಎಲ್ಲೆಡೆಗೆ ಜಗಳದ ಪ್ರಳಯ ಕಾಂಡವು ಆರಂಭವಾಗುವದು. ಅಹಂಕಾರದ ವಿಷಯದಲ್ಲಿ ವಚನಕಾರರು ಈ ರೀತಿ ಹೇಳಿದ್ದಾರೆ.

> ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತೆನ್ನ ಭಕ್ತಿ.
> ಉಪ್ಪು ಅಪ್ಪುವಿನಲ್ಲಿ ಅದ್ದಿ ಮೆಲದಂತಾಯಿತೆನ್ನ ಭಕ್ತಿ.
> ಕೂಡಲಸಂಗಮದೇವಾ. ನಾನು ಮಾಡಿದೆನೆಂಬ ಕಿಚ್ಚು
> ಎನ್ನನೆ ಸುಟ್ಟಿತು. ಇನ್ನುಸಾಲದೆ ಹೇಳಾ, ಪ್ರಭುವೇ.

ಅಹಂಕಾರದ ವಿಷಯದಲ್ಲಿ ಇದಕ್ಕಿಂತಲೂ ವಿಸ್ತೃತವಾಗಿ ವಚನಕಾರರು ಹೇಳಿದ್ದಾರೆ.

> ತೇಣಿಯ ಹುಳವು ತನ್ನ ಸ್ನೇಹದಿಂದ ಮನೆ ಮಾಡಿ,
> ತನ್ನ ನೂಲು ತನ್ನನ್ನೆ ಸುತ್ತಿ ಸಾವ ತೆರನಂತೆ, ಮನಬಂದುದ
> ಬಯಸಿ ಬೇವುತ್ತಿರುವೆನಯ್ಯಾ. ಎನ್ನ ಮನದ ದುರಾಶೆಯ
> ಬಿಡಿಸಿ ನಿಮ್ಮತ್ತ ತೋರಾ ಚೆನ್ನಮಲ್ಲಿಕಾರ್ಜುನ.

ಸಹನ ಶೀಲತೆಯು ಮಾನವನಲ್ಲಿ ಇರಲೇಬೇಕಾದ ಸದ್ಗುಣಗಳಲ್ಲಿಯ ಒಂದು ಸದ್ಗುಣವಾದ್ದರಿಂದ ಮತ್ತು ಅದು ಸಮಾಜಕ್ಕೂ ಹೆಚ್ಚು ಪೋಷಕವಾಗಿರುವದರಿಂದ--ಅದರ ವಿಷಯದಲ್ಲಿ ಅವರು ಈ ರೀತಿಯಲ್ಲಿ ಹೇಳಿದ್ದಾರೆ-

> ಚಂದನವ ಕಡಿದು, ಕೊರೆದು, ತೇದಡೆ ನೊಂದೆನೆಂದು
> ಕಂಪಬಿಟ್ಟಿತ್ತೇ? ತಂದು ಸುವರ್ಣವ ಕಡಿದೊರೆದಡೆ
> ಬೆಂದು ಕಳಂಕ ಹಿಡಿದಿತ್ತೇ. ಸಂದು ಸಂದು ಕಬ್ಬನು ಕಡಿದು
> ಕಬ್ಬನು ತಂದು ಗಾಣದಲಿಕ್ಕಿ ಬೆಂದ ಪಾಕಗಳು ಸಕ್ಕರೆಯಾಗಿ
> ನೊಂದೆನೆಂದು ಸವಿಯ ಬಿಟ್ಟಿತ್ತೇ? ನಾ ಹಿಂದೆ ಮಾಡಿದ
> ಹೀನಂಗಳೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿಯೇ?
> ಎನ್ನ ತಂದೆ ಚನ್ನಮಲ್ಲಿಕಾರ್ಜುನ ದೇವಯ್ಯಾ, ಕೊಂದಡೆ
> ಶರಣೆಂಬುದ ಮಾಣೆ.

ಸಹನ ಶೀಲಕ್ಕೆ ನಿಶ್ಚಲ ಮನಸ್ಸುಬೇಕು! ಅದಿಲ್ಲದಿದ್ದರೆ ಸಹನ ಶೀಲಕ್ಕೆ ಬೆಲೆಯಿಲ್ಲವೆಂದು ವಚನಕಾರರ ಖಂಡಿತ ಮತ! ಸಮಾಜದ ಸ್ಥಿರತೆಗೆ ಸ್ಥಿರಮನಸ್ಸಿನ ಸಮಾಜದ ಘಟಕಗಳಿರುವದು ಅತ್ಯಾವಶ್ಯಕವೆಂದು ಅವರಿಗನಿಸಿತು.

ಮನೆ ನೋಡಾ ಬಡವರು, ಮನ ನೋಡಾ ಸಂಪನ್ನರು,
ಧನ ನೋಡಾ ಬಡವರು, ಘನವಾನ ಸಂಪನ್ನರು.
ಕೂಡಲಸಂಗನ ಶರಣರು ಕರುಳಿಲ್ಲದ ಕಲಿಗಳು.
ಆರಿಗೂಪಮಿಸಬಾರದು.

ಇದೂಅಲ್ಲದೆ—

ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನವುಂಟೆ ?
ಬೆಟ್ಟ ಬಲ್ಲಿತ್ತೆಂದರೆ ಉಳಿಯ ಮೊನೆಯಲ್ಲಿ
ಬಡತನವುಳ್ಳರೆ ಒಡೆಯದೆ ? ಘನ ಶಿವಭಕ್ತರಿಗೆ
ಬಡತನವಿಲ್ಲ. ಸತ್ಯರಿಗೆ ದುಷ್ಕರ್ಮವಿಲ್ಲ. ಎನಗೆ
ಮಾರಯ್ಯ ಪ್ರಿಯ ಅಮರೇಶ್ವರ ಲಿಂಗವುಳ್ಳನ್ನಕ್ಕರ
ನನಗಾರ ಹಂಗಿಲ್ಲ, ಮಾರಯ್ಯ.

ಪ್ರಪಂಚದಲ್ಲಿ ಎಲ್ಲ ಧರ್ಮದಲ್ಲಿ ಅಹಿಂಸೆಯು ಒಂದಿಲ್ಲೊಂದು ಪರಿಯಿಂದ ತನ್ನ ಸ್ಥಾನವನ್ನು ಇದು ಪರ್ಯಂತರವಾಗಿ ಉಳಿಸಿಕೊಂಡು ಬಂದಿರುವದು. ಮುಂದೆಯಾದರೂ ಉಳಿಸಿಕೊಂಡು ಹೋಗುವದೆಂಬುದನ್ನು ವಚನಕಾರರು ಎಂದೋ ಕಂಡುಹಿಡಿದು ಅದರ ವಿಷಯದಲ್ಲಿ ಸಮಾಜದ ಅಂತಃಕರಣಕ್ಕೆ ತಗುಲುವಂತೆ ಬೋಧನೆಯನ್ನು ಮಾಡಿದ್ದಾರೆ. ದೇವರು ಈ ಪ್ರಪಂಚದಲ್ಲಿ ಎಲ್ಲೆಡೆಗೆ ತುಂಬಿರುವದರಿಂದ ಯಾವುದೇ ಹಿಂಸೆಯು ದೇವರಿಗೆ ತಗುಲುವದಿಲ್ಲ. ಆದ್ದರಿಂದ ಅಹಿಂಸೆಯ ಬೋಧನೆಯನ್ನು ಮಾಡುವವರ ಜೊತೆಯಲ್ಲಿಯು ವಚನಕಾರರು ಅದನ್ನು ತಮ್ಮ ಆಚರಣೆಯಲ್ಲಿ ತಂದುತೋರಿಸಿದರು. ಆದ್ದರಿಂದಲೆ ವಚನಕಾರರು ಸಮಾಜದ ಆದರ್ಶ ಪುರುಷರೆಂದು ಅನ್ನುವುದಕ್ಕೆ ಯಾವುದೇ ವಾದವಿಲ್ಲ. ದಯೆ, ಸತ್ಯದ ವಿಷಯದಲ್ಲಿ ಈ ರೀತಿಯಲ್ಲಿ ಬೋಧಿಸಿದ್ದಾರೆ.

ದಯವಿಲ್ಲದ ಧರ್ಮವಾವುದಯ್ಯಾ ?
ದಯವೆ ಬೇಕು ಸಕಲ ಪ್ರಾಣಿಗಳಲ್ಲಿ
ದಯವೇ ಧರ್ಮದ ಮೂಲವಯ್ಯ.

ಮತ್ತೊಂದೆಡೆಯಲ್ಲಿ ಹೀಗೆಯೂ ಉಸುರಿದ್ದಾರೆ:—

> ಸತ್ಯವಿಲ್ಲದವರೊಡನೆ ಸಹಸ್ರಕ್ಕೊಮ್ಮೆ ನುಡಿಯಲಾಗದು,
> ಲಕ್ಷಕ್ಕೊಮ್ಮೆ ನುಡಿಯಲಾಗದು, ಕೋಟಿಗೊಮ್ಮೆ ನುಡಿಯ
> ಲಾಗದು, ಸುಡಲಿ ಅವರ ಸಿರೊಡತನ! ಮಾರಿ ಹೊರಲಿ
>
> ಗುಹೇಶ್ವರಾ, ನಿಮ್ಮ ಶರಣರಲ್ಲದವರೊಡನೆ ಬಾಯ್ದೆರೆಯಲಾಗದು.

ಇದೂ ಅಲ್ಲದೆ—

> ಸತ್ಯದಲ್ಲಿ ನಡೆವುದು ಶೀಲ, ಸತ್ಯದಲ್ಲಿ ನುಡಿವುದು ಶೀಲ,
> ಸದಾಚಾರದಲ್ಲಿ ವರ್ತಿಸಿ ಸತ್ಯವನರಿವುದೇ ಶೀಲ ಕಾಣಿರೋ.
> ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೆ.

ಇನ್ನೊಂದೆಡೆಯಲ್ಲಿ ಮತ್ತೊಬ್ಬ ವಚನಕಾರರು ಈ ರೀತಿ ಸತ್ಯದ ವಿಷಯ ದಲ್ಲಿ ಹೇಳಿದ್ದಾರೆ—

> ದೇವಲೋಕ ಮರ್ತ್ಯಲೋಕ ಬೇರಿಲ್ಲ ಕಾಣಿರೋ.
> ಸತ್ಯವ ನುಡಿವುದೇ ದೇವಲೋಕ. ಅಸತ್ಯವ ನುಡಿವುದೇ
> ಮರ್ತ್ಯಲೋಕ. ಆಚಾರವೇ ಸ್ವರ್ಗ, ಅನಾಚಾರವೇ ನರಕ.
> ಇದಕ್ಕೆ ನೀವೇ ಪ್ರಮಾಣ ಕೂಡಲಸಂಗಮದೇವಾ.

ಆದಿಕಾಲದಿಂದ ನಾವು ನೋಡಿದರೆ ಎಂತಹ ಸತ್ಪುರುಷರ ಅಧಃಪತನವು ಹೆಣ್ಣು, ಹೊನ್ನು ಇವುಗಳ ಮೂಲಕವಾಗಿ ಆದುದು ಕಂಡುಬರುವುದು. ಇದು ವಚನಕಾರರ ದೃಷ್ಟಿಯಲ್ಲಿಂದ ದೂರಾಗಿಲ್ಲ. ಅವರು ಸ್ತ್ರೀಯ ವಿಷಯದಲ್ಲಿ ಬಹಳ ಆದರದ ಭಾವನೆಯನ್ನಿಟ್ಟುಕೊಂಡಿದ್ದಾರೆ. ನಾರಿಯೆಂದರೆ ವಿಷಯಭಾಂಡವೆಂದು ಭಾವಿಸದೆ ನಾರಿಯು ಪ್ರತ್ಯಕ್ಷ ದೇವತೆಯೆಂಬ ಉಚ್ಚತಮ ಮನೋ ಮೆಟ್ಟಲನ್ನು ತಾವು ಸ್ವತಃ ಇಟ್ಟುಕೊಂಡುದುದಲ್ಲದೆ ಅವರಂತೆ ನಡೆದು ಜನರಿಗೆ ಆ ರೀತಿಯಲ್ಲಿ ಬೋಧಿಸಿದ್ದಾರೆ.

ಸದಾಚರಣೆಗೆ ವಚನಕಾರರು ವಚನಶಾಸ್ತ್ರದಲ್ಲಿ ಉಚ್ಚತಮವಾದ ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದಾರೆಂದೇ ಹೇಳಬೇಕು. ನಡೆನುಡಿಗಳಲ್ಲಿ ಮೇಳ

ವಿರಬೇಕೆಂದು ಅವರ ಹೇಳಿಕೆ. ನುಡಿದಂತೆ ನಡೆಯುವದೇ ಸತ್ಯಧರ್ಮ ಸದಾಚಾರವೆಂದು ವಚನಶಾಸ್ತ್ರಕಾರರು ಪ್ರತಿಪಾದಿಸಿದ್ದಾರೆ. ಆಚಾರ ಭ್ರಷ್ಟ ಗುರುಹಿರಿಯರನ್ನು ನಿಂದಿಸುವ ಪ್ರಸಂಗ ಬಂದಾಗ ಅವರು ಕೈಮುಚ್ಚಿ ಕೊಂಡು ಕುಳಿತುಕೊಂಡಿಲ್ಲ.

> ಸದಾಚಾರ, ಸದ್ಭಕ್ತಿ ಇಲ್ಲದವರ ನಾನೊಲ್ಲೆನಯ್ಯ.
> ಅವರಾರಾಧನೆ ದಂಡ, ನಿಚ್ಚ ನಿಚ್ಚ ಪ್ರಾಯಶ್ಚಿತ್ತರ
> ನೊಲ್ಲೆನಯ್ಯ, ಕೂಡಲಸಂಗಮದೇವ.

ಇದಕ್ಕೂ ಸ್ಪಷ್ಟವಾಗಿ ಇನ್ನೊರ್ವ ವಚನಕಾರರು ಇದನ್ನೇ ಈ ರೀತಿ ಯಲ್ಲಿ ಮಂಡಿಸಿದ್ದಾರೆ—

> ಆಚಾರವಿಲ್ಲದ ಗುರು ಭೂತ ಪ್ರಾಣಿ, ಆಚಾರವಿಲ್ಲದ ಲಿಂಗ
> ಶಿಲೆ, ಆಚಾರವಿಲ್ಲದ ಜಂಗಮ ಮಾನವ, ಆಚಾರವಿಲ್ಲದ
> ಪಾದೋದಕ ನೀರು, ಆಚಾರವಿಲ್ಲದ ಪ್ರಸಾದ ಎಂಜಲು,
> ಆಚಾರವಿಲ್ಲದ ಭಕ್ತ ದುಷ್ಕರ್ಮಿ. ಇದು ಕಾರಣ ಅಟ್ಟವ
> ನೇರುವದಕ್ಕೆ ನಿಚ್ಚಣಿಕೆಯೆ ಸೋಪಾನವಯ್ಯ. ಹರಪದವ
> ನೇರುವದಕ್ಕೆ ಶ್ರೀಗುರು ಹೇಳಿದ ಸದಾಚಾರವೇ ಸೋಪಾನವಯ್ಯ.

ಇದಲ್ಲದೆ ವಚನಕಾರರು ಪರಧನದ ವಿಷಯದಲ್ಲಿ ಬಹು ಮಾರ್ಮಿಕ ವಾದ ಅಭಿಪ್ರಾಯಪಟ್ಟಿದ್ದಾರೆ. ಪರಧನವನ್ನು ಮುಟ್ಟದವನೆ ಶೀಲವಂತನು ಎಂದು ಅವರ ಮತ. ಇದರ ಜೊತೆಯಲ್ಲಿಯೆ ಪರಧನ ಸ್ವೀಕಾರವನ್ನೂ ವಚನಕಾರರು ಮನಸಾ ಜರೆದಿರುವರು. ದುಡಿದು ಹಣವನ್ನು ಗಳಿಸಬೇಕು. 'ಕಾಯಕವೆ ಕೈಲಾಸ' ಎಂದು ಸಾರಿ ಹೇಳಿದರಷ್ಟೆ ಅಲ್ಲದೆ ಭಿಕ್ಷಾವೃತ್ತಿಯೂ ನಿಷೇಧವೆಂದು ಸ್ಪಷ್ಟವಾಗಿ ಹೇಳಿರುವರು. ಆದ್ದರಿಂದ ಅವರು ದಾಸರಂತೆ ಕೈಬೋರಗವನ್ನು ಕೈಯ್ಯಲ್ಲಿ ಹಿಡಿಯದೆ ಒಂದು ಕಾಯಕವನ್ನು ಕೈಕೊಂಡರು. ಕಂಡಕಂಡವರೆದುರಿನಲ್ಲಿ ಕೈಚಾಚಿ ಭಿಕ್ಷೆಬೇಡುವ ಭಂಡರನು ದೇವರು ಮೆಚ್ಚುವದಿಲ್ಲವೆಂದು ಸ್ಪಷ್ಟವಾಗಿ ಅವರು ಹೇಳಿದ್ದಾರೆ. ಕಾಯಕ ದಿಂದ ಸಂಪಾದಿಸಿದ ಹಣ ಅಮೃತಕ್ಕೆ ಸಮಾನ. ದಿನಗೂಲಿ ಬಿಟ್ಟು

ಹೇಮದಾಸೆಗೆ ಮಾನವ ದುಡುಕಿದರೆ ದೇವರ ಸೇವೆಗೆ ಕುಂದನ್ನು ತಂದೊಡ್ಡಿ ದಂತಾಗುವದೆಂದು ವಚನಕಾರರ ಅಭಿಪ್ರಾಯ. ಇದನ್ನವರು ಬಾಯಿಂದ ಆಡಿತೋರಿಸಿದಂತೆಯೇ ಕೃತಿಯಲ್ಲಿಳಿಸಿ ತೋರಿಸಿರುವರು. ಸಮಾಜದಲಿ ಕೀಳೆಂದು ಭಾವಿಸಿದ ಅನೇಕ ಉದ್ಯೋಗಗಳನ್ನು ಕೆಲವರು ತಮ್ಮ ಪ್ರತಿ ನಿತ್ಯದ ಕಾಯಕವನ್ನಾಗಿ ಮಾಡಿಕೊಂಡರಷ್ಟೇ ಅಲ್ಲದೆ ಇಹಪರದಲ್ಲಿಯು ಸುಖಕ್ಕೆ ಪಾಲುಗಾರರಾದರು. ಉದಾಹರಣೆಗೆಂದು—ಮೋಳಿಗೆಯ ಮಾರಯ್ಯ, ನುಲಿಯ ಚಂದಯ್ಯ, ಡೋಹರ ಕಕ್ಕಯ್ಯ ಇವರನ್ನು ಉದಹರಿಸಬಹುದು. ಮೋಳಿಗೆಯ ಮಾರಯ್ಯ ಕಟ್ಟಿಗೆ ಹೊರೆ ಮಾರುವ ಕಾಯಕ, ನುಲಿಯ ಚಂದಯ್ಯ ಹಗ್ಗ ಹೊಸೆಯುವ ಕಾಯಕ, ಸಮಗಾರ ಕೆಲಸವನ್ನು ಡೋಹರ ಕಕ್ಕಯ್ಯ ಇವರು ಕೈಕೊಂಡಿದ್ದರು.

ಇದೂ ಅಲ್ಲದೆ ಸಿರಿವಂತ ಜೀವನವು ಶ್ರೇಷ್ಠತಮ ಜೀವನವಲ್ಲ, ಭಕ್ತ ಮನದಿಂದ ಬಡವನಲ್ಲ, ಧನದಿಂದ ಬಡವನಿರಬಹುದು. ಧನವಿಲ್ಲದಿದ್ದರೂ ಭಕ್ತನಿಗೆ ಧನ್ಯತೆ ಕಡಿಮೆಯಿಲ್ಲ. ಇವುಗಳ ಹೊರತಾಗಿ ಪ್ರತಿಯೊಂದು ಸಂಗತಿಯ ವಿಷಯ ಕುರಿತು ವಚನಶಾಸ್ತ್ರದಲ್ಲಿ ಸ್ಪಷ್ಟವಾದ ಉಲ್ಲೇಖವು ದೊರೆಯುವದು. ಸದಾಚಾರ ಸಂಪನ್ನ, ಸದ್ವರ್ತನ ಪೂರ್ಣ ಅತಿಮಾನವತೆ ಯಿಂದ ಕೂಡಿದ ವಚನಕಾರರು ಈ ವಚನಗಳನ್ನು ಬರೆದಿರುವದರಿಂದ ತ್ರಿಕಾಲ ದಲ್ಲಿಯೂ ಅವರು ಆದರ್ಶ ಪುರುಷರಾಗಿಯೇ ಉಳಿಯತಕ್ಕವರು.

# ಅಯ್ಯಾಚಾರದ ಬಗ್ಗೆ ಸೂಚನೆ.

(ಲೇಖಕಃ—ಶ್ರೀ ಎಸ್. ದೊಡ್ಡಯ್ಯನಪರು, ಮು—ನಾಗರಹಾಳ.)



ಶಿವಾನುಭವ ಸಂಚಿಕೆ ೪-೫ ಎಪ್ರೀಲ್ ಮೇ ೧೯೫೭ನೇ ಇಸ್ವಿಯಲ್ಲಿ "ಅಯ್ಯಾಚಾರ" ಈ ಬಗ್ಗೆ ಲೇಖಕ ಸತ್ಯವಾದಿ. ಇವರ ಅಭಿಪ್ರಾಯವು ಬ್ರಾಹ್ಮಣರು ಮಾಡುತ್ತಿರುವ "ಉಪನಯನ"ದ ಅಂಧಾನುಕರಣವೆಂದು ಪ್ರತಿಪಾದಿಸಿರುತ್ತಾರೆ.

ಉಪನಯನಕ್ಕೂ ಅಯ್ಯಾಚಾರ (ದೀಕ್ಷೆ)ಕ್ಕೂ ಅಜಗಜಾಂತರ ಭೇದ ವೆಂಬುದು ಸಾಮಾನ್ಯ ಪಂಡಿತ ಪಾಮರರಿಗೂ ತಿಳಿದ ವಿಷಯವಷ್ಟೆ? ಹೀಗಿದ್ದರೂ ಅಂಧ ನುಕರಣವೆನ್ನುವುದು ತಜ್ಞರಿಗೆ ಸರಿಯಾದುದಲ್ಲ. ಏಕೆಂದರೆ ಬ್ರಾಹ್ಮಣ ವಟುಗಳಿಗೆ ವೇದಾಧ್ಯಯನ ಮತ್ತು ಯಜ್ಞೋಪವೀತ ಇವುಗ ಳಿಂದ ತಮ್ಮ ಬ್ರಾಹ್ಮಣಿಕೆ ವೇದಾಧ್ಯಯನಕ್ಕೆ ತಕ್ಕ ಅಧಿಕಾರವು ಬರುವ ನಿಮಿತ್ಯ ಸ್ಮೃತಿಗಳಲ್ಲಿ ರುಷಿಪ್ರಣೀತ ಗ್ರಂಥಾಧಾರದಂತೆ ವರ್ಣಿಸುತ್ತಾರೆ. ಹಾಗೆ ಮಾಹೇಶ್ವರ ವಟುಗಳೀಕೆ ಇಡೀ ವೀರಶೈವ (ಲಿಂಗಾಯಿತರೆಲ್ಲರಿಗೂ) ದೀಕ್ಷಾವಿಧಿಯು ಅವಶ್ಯವಾಗಿ ನಡೆಯಬೇಕೆಂದು ವಚನವಾಙ್ಮಯ ಮತ್ತು ಆಗಮಾದಿಗಳಲ್ಲಿ ಸುಪ್ರಸಿದ್ಧವಾಗಿ ಬರೆಯಲ್ಪಟ್ಟಿದೆ.

> "ಯಥಾಮೃಗ ಪತಿಂ ದೃಷ್ಟ್ವಾ, ತಥಾಭೀ ತೋವನೇ
> ಗಜಃ ಅದೀಕ್ಷ ಸ್ವರ್ಚ ಯೋಲ್ಲಿಂಗಂ
> ತಥಾಭೀ ತೋ ಮಹೇಶ್ವರೀ"

ಅಂದರೆ ಸಿಂಹವನ್ನು ಕಂಡ ಆನೆಯು ಹ್ಯಾಗೆ ಭಯಗ್ರಸ್ತವಾಗು ವುದೋ ಹಾಗೆ ದೀಕ್ಷೆಯಿಲ್ಲದೆ ಶಿವಪೂಜೆ ಮಾಡುವವನನ್ನು ಕಂಡರೆ ನನಗೆ ಅಷ್ಟ ಭಯವಾಗುವುದೆಂದು ಶಿವನು ಪಾರ್ವತಿಗೆ ಆಗಮದಲ್ಲಿ ಬೋಧಿಸಿರು ವುದರಿಂದ, ಮಾಹೇಶ್ವರ ವಟುಗಳಿಗೆ ಮಾತ್ರ ಅಯ್ಯಾಚಾರವೆಂದು ಸ್ವಾರ್ಥಿ ಗಳು ತಿಳಿದುಕೊಂಡಿದ್ದರೆ ಸತ್ಯವಾದಿಗಳಾದ ನೀವು ಅದನ್ನು ವಿರೋಧಿಸಿ ಲಿಂಗಾಯಿತರೆಲ್ಲರಿಗೂ ಬರುವುದೆಂದು ಆ ರೀತಿ ಜಾರಿಯಲ್ಲಿ ತರಬೇಕಲ್ಲದೆ,

ಅಯ್ಯನವರ ಮೇಲೇಕೆ ಈ ಅಪವಾದ. ಮತ್ತು ಆರ್ಯ ಶಬ್ದವು ಅಯ್ಯಾ ಎಂದು ಬರೆದಿರುವುದಲ್ಲದೆ "ಆರ್ಯ" ನೆಂದರೆ ಪೂಜ್ಯ ಅಯ್ಯ ಅಥವಾ ತಂದೆ ಎಂಬರ್ಥಲ್ಲವೇ? ಹೀಗೆ ಹೇಳುವುದು ಬಿಟ್ಟು ಜಂಗಮರೆಂದರೆ ಪೂರ್ವದಲ್ಲಿ ಆರ್ಯಸಮಾಜದ ಬ್ರಾಹ್ಮಣರು ಕೆಟ್ಟು ವೀರಶೈವ ಮತ ಧರ್ಮಗಳನ್ನು ಅನುಸರಿಸಿರುವರೆಂದು ಬರೆಯುವುದೇನು? ಹಾಗಿದ್ದರೆ ಒಬ್ಬನು ಮತ್ತೊಂದು ಮತದಲ್ಲಿ ಪ್ರವೇಶ ಮಾಡಿದ ಕೂಡಲೇ ಆ ಮತ ದವರು ಗುರುಪೀಠಾಧಿಕಾರವನ್ನು ಆಗಲೇ ಕೊಡುವರೋ? ಇದು ಅಸಂಭವ. ನೂತನವಾಗಿ ಪ್ರವೇಶಿಸಿದವರನ್ನು ಸಾಮಾನ್ಯವಾಗಿ ನೋಡುವರೇ ಹೊರತು ಗುರುತ್ವ ಕೊಡಲಿಕ್ಕಾಗುವುದಿಲ್ಲ.

"ಭಕ್ತೋಹಿ ಮಾಹೇಶ್ವರ ತಾ ಮುಪೈತಿ" ಎಂಬ ಸಿ. ಶಿಖಾಮಣಿ ವಚ ನದಂತೆ ಭಕ್ತನು ಮಹೇಶ್ವರನಾಗುತ್ತಾನೆಂಬುದು ಸಹಜವಲ್ಲವೇ? ಹೀಗಿ ದ್ದರೂ ಈ ವಿಷಯದಲ್ಲಿ ಆಕ್ಷೇಪಣೆಯೇನು? ಮಹೇಶ್ವರರು ತಾವು ಮಾತ್ರ ಮಹೇಶ್ವರರೇ ಎಂದು ತಿಳಿದಿರುವುದು ಅಂಧಾನುಕರಣವೆಂಬುದು ಸರಿಯಷ್ಟೆ? ಭಕ್ತರು ತಿಳಿದವರಾದ್ದರಿಂದ ಮಾಹೇಶ್ವರರಾಗಲಿಕ್ಕೆ ತೊಂದರೆ ಯಾವುದು? ಅಂದಬಳಿಕ ಭಕ್ತಾದಿ ಷಟ್ಸ್ಥಲಗಳು ಪ್ರಗತಿಹೊಂದಿ ಕೊನೆಗೆ ಐಕ್ಯನಾಗು ವುದೇ ಗುರಿಯಲ್ಲವೇ? ಹೀಗಿದ್ದರೂ ಭಕ್ತಮಾಹೇಶ್ವರರಲ್ಲಿ ವಿಚಾರ ಮಾಡಿ ದರೆ ಇಬ್ಬರ ತಪ್ಪುಗಳು ಬೆಟ್ಟದಷ್ಟು ಕಾಣಿಸುತ್ತವೆ. ಆದರೆ ಅಯ್ಯಗ ಳನ್ನೇ ಕುರಿತು ಚುಚ್ಚು ಮಾತುಗಳ ಬರಹವೇಕೆ? ತಳಹದಿ ಚೆನ್ನಾಗಿಲ್ಲ ದಿದ್ದರೆ ಮಹಡಿಯು ಶೋಭೆಯು ಬಹುದಿನ ಬಾಳುವುದಿಲ್ಲ. ಹಾಗೆಯೆ ಭಕ್ತಸ್ಥಲದ ಆಚರಣೆಯು ಭದ್ರವಾಗಿದ್ದರೆ ಮಹೇಶ್ವರಸ್ಥಲವು ಕೈಗೂಡು ವುದು. ಮಹೇಶ್ವರರ ಸ್ವಾರ್ಥಪರ ಅಂಧಾನುಕರಣಕ್ಕೆ ಅಸ್ತಿವಾರ ಭಕ್ತ ರಿಂದ ಕೈಗಡ ತಂದುದಲ್ಲದೆ ಸ್ವತಂತ್ರವಿಲ್ಲ.

ಭಗವಾನ್ ಬಸವೇಶ್ವರರ ದ್ವಿತೀಯ ಶಂಭುವೆಂದು ಕೀರ್ತಿ ಇದ್ದರೂ "ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂಬ ವಿಚಾರ ದಾಸೋಹಂಭಾವವು ಎಷ್ಟು ಪ್ರಕಾಶಿತವಾಗಿದೆ ಎಂಬುದು ಸೂರ್ಯಪ್ರಕಾ ಶದಷ್ಟು ಸ್ಪಷ್ಟವಾಗಿದೆ. "ಲೋಕದ ಡೊಂಕ ನೀವೇಕೆ ತಿದ್ದುವಿರಿ, ನಿಮ್ಮ ತನುವ ಸಂತೈಸಿಕೊಳ್ಳಿ ಮನವ ಸಂತೈಸಿಕೊಳ್ಳಿ ಎಂಬ ವಿಚಾರವು ವಿಶಾಲ ವಾದುದು ಎಂಬುದನ್ನು ಮರೆಯಬಾರದು. ಇನ್ನೊಬ್ಬರ ತಪ್ಪುಗಳನ್ನು ತಿದ್ದು

ವುದೇನೋ ಒಳ್ಳೆಯದೇ. ಆದರೆ ತನ್ನ ತಪ್ಪುಗಳು ಎಷ್ಟಿವೆ ಎಂಬ ವಿಷಯ
ವನ್ನು ಕುರಿತು ಆಲೋಚಿಸಬೇಕು. ಹೀಗೆ ವೀರಶೈವರಲ್ಲಿ ಇಂತಹ ಒಳ
ಪಂಗಡಗಳು ಅನೇಕವಿವೆ. ಒಬ್ಬೊಬ್ಬರು ಒಂದೊಂದು ಉದ್ದೇಶವನ್ನಿಟ್ಟು
ಕೊಂಡು ಮತ್ತೊಬ್ಬರನ್ನು ಟೀಕಿಸುವುದು ಸತ್ಯವಾದಿಗಳಿಗೆ ಸಲ್ಲುವುದಿಲ್ಲ.
ಅಂದಬಳಿಕ ಇವುಗಳಿಂದ ಸಮಾಜದಲ್ಲಿ ನೆಮ್ಮದಿ ಇಲ್ಲದೆ ಯಾವುದೋ
ಒಂದು ನೆವನಗಳಿಂದ ಬರೆಯುವುದೆಂದರೆ ಈ ವಿಷಯವು ಸಿದ್ಧಾಂತವಾ
ಗಲು ಅವಕಾಶವಿಲ್ಲ. ಆದ್ದರಿಂದ ಭಕ್ತಮಹೇಶ್ವರ ಗುರುವಿರಕ್ತ ಇತ್ಯಾದಿ
ಗಳ ಅಂತಃಕಲಹದಿಂದ ಶಾಂತಿಸಮಾಧಾನಗಳು ಸಮಾಜದಲ್ಲಿ ನೆಲೆಯಾಗಿ
ನಿಲ್ಲುವುದಿಲ್ಲ.

ಸೌಮ್ಯಭಾವದಿಂದ ಅವರವರು ಷಟ್‌ಸ್ಥಲ, ಪಂಚಾಚಾರ, ಅಷ್ಟಾ
ವರಣಾದಿಗಳನ್ನು ಆದಷ್ಟುಮಟ್ಟಿಗೆ ಅರಿತು ಆಚರಿಸಿ ಅನುಭವಿಸಿದರೆ ಇಷ್ಟೆಲ್ಲ
ಕಲಹ ಮತ್ತು ಟೀಕೆಗಳಿಗೆ ಅವಕಾಶವಿರುವುದಿಲ್ಲ. ಹೀಗಲ್ಲದೆ ಬಹಿರಂಗದಲ್ಲಿ
ಒಣ ಡೌಲಿಗೆ ಹೋರಾಟ ಮಾಡುವುದರಿಂದ ಆಗುವ ಲಾಭವಾದರೂ
ಏನು ? ಆದ್ದರಿಂದ ವಿಚಾರ ವಿಮರ್ಶೆಗಳಿಂದ ಮುಂದುವರಿಯಬೇಕು.

ಜಗತ್ತಿನಲ್ಲಿ ಪೂಜ್ಯತೆ ಯಾರಿಗೆ ? ಸದ್ಗುಣವುಳ್ಳವರಿಗಲ್ಲದೆ ಕುಲ
ದಿಂದ ಪೂಜ್ಯತೆ ಬರುವುದಿಲ್ಲವೆಂಬುದು ಶತಃಸಿದ್ಧ. ಇದು ಜಾಗತಿಕ ಯುಗ
ದಲ್ಲಿ ಮೇಲ್ಕಂಡ ವಿಷಯಗಳು ಯಾರೂ ಹೇಳಬೇಕಾಗಿಲ್ಲ. ನಾವು ಪ್ರಗತಿ
ಹೊಂದಬೇಕಾದಾಗ ಯಾರ ಅಂಧಾನುಕರಣ, ಸ್ವಾರ್ಥಗಳು ಪ್ರತಿಬಂಧಿ
ಸುವುದಿಲ್ಲ. ಒಂದು ವೇಳೆ ಹಾಗಾದರೆ ಪ್ರಯೋಜನವೆನಿಸದು. ಜಗತ್ತಿ
ನಲ್ಲಿ ಪಾತಕ, ಪ್ರತಿಭೆ, ಪ್ರಕಾಶ ಯಾರು ಮುಚ್ಚಿದರೂ ಮುಚ್ಚುವುದಿಲ್ಲ.
ಹೀಗೆ ವೀರಶೈವವು ವಿಶ್ವಧರ್ಮವೆಂಬುದು ಗಮನಕ್ಕೆ ತಂದು ಆ ರೀತಿ
ತಿಳಿದುಕೊಂಡಿರುವವರು ಈ ಕಾಲದಲ್ಲಿ ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿದೆ.
ಯಾರಾದರೂ ಪೂರ್ವ ಗ್ರಹ ದೋಷದಿಂದ ಮಾತನಾಡಿದರೆ ಅವರಿಗೆ ಎದು
ರಾಗಿ ಮತ್ತೊಬ್ಬರು ಮಾತನಾಡಿದರೆ ತತ್ಪೂರ್ವ ಗ್ರಹದೋಷವೆಂದು ತಿಳಿ
ಯುತ್ತದೆ. ಮಹಾಹೇಶ್ವರ ಎಂಬ ಪ್ರತಿಷ್ಠಿತ ವರ್ಗವೊಂದನ್ನು ದುಡಿಯಲು
ಹಚ್ಚದೆ ತಿರುವೆಯಿಂದ ಜೀವಿಸಲು ಉಪನಯನ ಮಾಡುತ್ತಿರಬಹುದೇ ?
ಎಂದು ಶಂಕೆಯನ್ನೂ ಆರಂಭಿಸಿದ್ದಾರೆ. ಇದು ಸ್ವಾರ್ಥಪರರಾದ ಸೋಮಾ
ರಿಗಳ ಪದ್ಧತಿ. ಇರಲಿ, ಆದರೆ ಈ ರೀತಿ ಟೀಕಿಸುವದರಿಂದ ಅಯ್ಯಗಳು

ಈಗ ಸ್ವಾತಂತ್ರ್ಯದಿಂದ ಜೀವಿಸಲು, ವ್ಯಾಪಾರ ಉದ್ಯೋಗ, ಒಕ್ಕಲತನ ಮಾಡಲಿಕ್ಕೆ ಆರಂಭಿಸಿದ್ದಾರೆ ಮತ್ತು ಆರಂಭ ಮಾಡುತ್ತಾರೆ. ಆದರೆ ಭಕ್ತ ವರ್ಗದವರಲ್ಲಿ ಕೆಲವರು ತಿರುಪೆಯಿಂದ ಜೀವಿಸುವ ಸುಲಭೋಪಾಯದ ಜನರು ಎಷ್ಟು ಮಂದಿ ಹೊರಟಿದ್ದಾರೆಂಬುದು ಕಾಣುವುದಿಲ್ಲವೇ? ಅವರು ಮಾತ್ರ ದೊಡ್ಡವರ ಸನ್ನಿಧಿಯಲ್ಲಿ ನಿಂತು ಇನ್ನು ಮೇಲೆ ದುಡಿಯುವದ್ದು ಆಗುವುದಿಲ್ಲ. ನೀವು ಕೊಡುವ ಕಾರ್ಯ ಮಾಡಿದರೆ ನಾವು ಜೀವಿಸುತ್ತೇವೆಂದು ಯಥಾರ್ಥವಾಗಿ ಜೋಳಿಗೆಯನ್ನು ಕಂಕಣಕ್ಕೆ ಕಟ್ಟಿಕೊಂಡದ್ದಾರೆ. ಇತರರು ಹೇಳದೆ ಕೇಳದೆ ವೇಷಲಾಂಛನೆಗಳಿಂದ ಭಕ್ತರಾಗಿ ಬೇಡುವ ಕೈಗಾರಿಕೆ ಸುಧಾರಿಸಿದವರ ಸಂಸ್ಕೃತಿ ಬಲ್ಲವರು ಯೋಚಿಸಲಿ.

ಹೀಗೆಲ್ಲಾ ಬರೆಯುವುದರಿಂದ ಇಬ್ಬರಿಗೂ ಲಾಭವಿಲ್ಲ. ದೀಕ್ಷೆಯ ಕಾಲದಲ್ಲಿ ತಿರುಪೆಯಿಂದ ಜೀವಿಸಲಿಕ್ಕಲ್ಲವೆಂಬುದು ಶಿವಾನುಭವಿಗಳಿಗೆ ಗೊತ್ತಿದೆ. ಇತ್ತ ಮತ್ತೊಂದು ರೀತಿಯಾಗಿ ಸ್ವಾರ್ಥವು ಬೆಳೆದು ಸಂಕುಚಿತವಾಗಿದೆಯೇ ಹೊರತು ತಾತ್ವಿಕವಾದುದಲ್ಲವೆಂಬುದು ಸಹಜ.

"ಬೇಡುವಾತ ಜಂಗಮನಲ್ಲ, ಬೇಡಿಸಿಕೊಳ್ಳುವಾತ ಭಕ್ತನಲ್ಲ" ಅಂದಾಗ ಈ ತಪ್ಪುಗಳು ಭಕ್ತ ಮಹೇಶ್ವರರಲ್ಲಿ ಬೇಕಾದಷ್ಟಿವೆ. ಆದ್ದರಿಂದ ವಿಚಾರ ಆಚಾರಗಳಿಂದ ಸಮಾಜದಲ್ಲಿ ಪೂಜ್ಯ ಸ್ಥಾನ ಪಡೆಯುವವರಲ್ಲದೆ ಕೇವಲ ಆಸುರೀ ಕೃತ್ಯದಿಂದ ಸಾಧ್ಯವಾಗುವದಿಲ್ಲ. ಸಾಮಾನ್ಯವಾಗಿ ಈ ಕಾಲದಲ್ಲಿ ಸಹ ಒಬ್ಬ ವ್ಯಕ್ತಿಯು ಕೀಳು ಕುಲದಲ್ಲಿ ಹುಟ್ಟಿದವನಾದರೂ ಆತನ ಗುಣಕ್ರಿಯೆಗಳಿಂದ ಸರ್ವ ಜನರು ಉಚ್ಚ ಸ್ಥಾನವನ್ನೂ ತಾವಾಗಿ ಕೊಡುವುದು ಸಹಜವಾಗಿದೆ. ಆತನೆ ನಾನು ಸದ್ಗುಣ ಸತ್ಕ್ರಿಯೆಗಳಿಂದ ಪೂಜ್ಯನಾಗಿದ್ದೇನೆ. ನನಗೆ ಉಚ್ಚ ಸ್ಥಾನ ಮಾನ ಮರ್ಯಾದೆಗಳನ್ನು ಕೊಡಿರೆಂದು ಒತ್ತಾಯಪಡಿಸಿದರೆ ಯಾರೂ ಕೊಡುವುದಿಲ್ಲ. ಅದಕ್ಕೆ ಬದಲಾಗಿ ತೊಂದರೆ ಕೊಡುತ್ತಾರೆ. ಅಂತಹ ಸದ್ಗುಣಿಗಳು ಹಾಗೆ ಕೇಳುವುದಿಲ್ಲವಾದರೂ ತಾನಾಗಿ ಲಭ್ಯವಾಗುತ್ತದೆ. ಇದು ಅವರ ನೈಜ ಗುಣ.

ಈಗ ಇದುವರೆಗೆ ಮಾಹೇಶ್ವರ ವರ್ಗ ಸ್ವಾರ್ಥಪರರಾಗಿ ಪೂಜ್ಯತೆ ಪಡೆದಿದ್ದಾರೆ. ಇನ್ನು ಮೇಲೆ ಭಕ್ತರು ತಾವೊಂದು ವಿಧವಾದ ಸ್ವಾರ್ಥ ಪಡೆದು ಪೂಜ್ಯರಾಗಬೇಕೆಂದು ಸಂಕಲ್ಪಿಸಿದ್ದರೆ ಮಾಡುವುದೇನು? ಅವರಿಗಾದದ್ದು ಇವರಿಗೂ ತಪ್ಪಿದ್ದಲ್ಲ. ಆದ್ದರಿಂದ ಸಮಾಜದ ಸಕಲ ವೀರ

ಶೈವರೆಲ್ಲ ಒಂದೆಂದು ನಮ್ಮಲ್ಲಿದ್ದ ಪಂಗಡಗಳೆಲ್ಲಾ ಬಿಟ್ಟು ಕೇವಲ ವಿಚಾರ ಆಚಾರ ಅನುಭವ ಇತ್ಯಾದಿಗಳಿಗೆ ಸಂಪೂರ್ಣ ಬೆಲೆಕೊಟ್ಟು ಪರಸ್ಪರ ವಿಶ್ವಾಸ, ಪ್ರೇಮ, ಸಹನೆ ಮುಂತಾದ ಸದ್ಗುಣಗಳನ್ನೂ ವೃದ್ಧಿಪಡಿಸಿ ಕೊಂಡು ಸಮಾಜದಲ್ಲಿ ಶಿಸ್ತು, ಶಾಂತಿ, ಸಮಾಧಾನಗಳೇ ತಮ್ಮ ಗಮ್ಯ ವೆಂದು ಭಾವಿಸಿ, ಆತ್ಮೋನ್ನತಿಗೆ ಸಾಧನವಾದ ಸಮಾಜೋನ್ನತಿಗಳ ಏಳ್ಗೆ ಯನ್ನು ಬಯಸಿ ಕೃತಾರ್ಥರಾಗಲು ಎಲ್ಲರಿಗೂ ಸದ್ಬುದ್ಧಿಯನ್ನು ಪರಶಿವನು ಕೊಡಲೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸಿ ಈ ವಿಷಯವನ್ನು ವಿರಮಿ ಸುತ್ತೇನೆ.

ವಾಚಕರು ಇದನ್ನು ನೋಡಿ ಯಾವ ವಿಧವಾದ ಅನ್ಯಥಾ ಭಾವನೆ ಮಾಡಲಾರರೆಂದು ನಂಬಿರುವೆನು.

# ಸಾಧುವರ್ಯ ಟಾಲ್‌ಸ್ಟಾಯ್

( ಲೇಖಕರು:- ಶ್ರೀಯುತ ಮ. ಮಲ್ಲಪ್ಪ ಜ್ಞಾನಮಂದಿರ, ಹಲಗೂರು. )



ಜಗದ್ವಿಖ್ಯಾತರಾದ ಮಹಾತ್ಮಾ ಗಾಂಧೀಜಿಯವರು ರಷ್ಯಾದೇಶದ ಮಹಾ ವಿಭೂತಿಯೊಬ್ಬರನ್ನು ತಮ್ಮ ಗುರುವೆಂದು ಹಲವು ಬಾರಿ ನುಡಿದಿದ್ದಾರೆ. ಗಾಂಧೀಜಿಯವರ ಹಲಕೆಲವು ಸಂಗತಿಗಳು ಆ ಗುರುವಿನ ಸಂಗತಿಯ ಪ್ರತೀಕಗಳಾಗಿವೆ. ಆ ಗುರುಗಳು ಜನತೆಯ ಮನಸ್ಸನ್ನೇ ಪರಿವರ್ತಿಸಿ, ಅವರ ಮುಂದೆ ತಾವು ಕಂಡು ಹಿಡಿದ ನವನವೀನ ಸತ್ಯವನ್ನು ಇಡುತ್ತಾರೆ. ಜನತೆಯು ತಮ್ಮ ಕಡೆಗೆ ಒಲಿಯದಿದ್ದರೆ ತಾವೇ ಜನರ ಜೀವನದಿಂದ ಹೊರಗಾಗಿ ತಮ್ಮ ಗುರಿಗೆ ಅನುಗುಣವಾದ ಬಾಳನ್ನು ಬಾಳತೊಡಗುತ್ತಾರೆ. ಆದರೂ ಯಾವ ಮಟ್ಟದಲ್ಲಿ ತಾವು ಸತ್ಯವನ್ನು ಕಂಡರೋ ಅದೇ ಮಟ್ಟಕ್ಕೆ ಉಳಿದವರನ್ನೂ ತೆಗೆದುಕೊಂಡು ಹೋಗುವುದೇ ಅವರ ಧ್ಯೇಯವಾಗಿರುತ್ತದೆ. ಈ ಮಹಾ ವಿಭೂತಿಯೇ ರಷ್ಯಾ ದೇಶದ ಸಾಹಿತ್ಯ ರತ್ನ, ನವೀನ ಯುಗದ ಮಹರ್ಷಿಯಾದ ಕೌಂಟ್ ಲಿಯೋ ಟಾಲ್‌ಸ್ಟಾಯ್.

೧೮೨೮ ರ ಸಪ್ಟೆಂಬರ ೯ ರಲ್ಲಿ ಶ್ರೀಮಂತ ಕುಟುಂಬದಲ್ಲಿ ಇವರ ಜನನವಾಯಿತು. ಇವರ ತಂದೆಯ ಹೆಸರು ಕೌಂಟ ನಿಕೊಲೈ. ಟಾಲ್‌ಸ್ಟಾಯು ಮೂರು ವರ್ಷ ಮುಗಿಯುವುದರೊಳಗಾಗಿಯೇ ಇವರಿಗೆ ತಾಯಿಯ ವಿಯೋಗ. ಆ ದೇಶದ ಚಕ್ರವರ್ತಿಯು ಝಾರನ ಗೆಳೆಯನಾಗಿದ್ದ ಇವರ ತಂದೆಯು ಇವರಿಗೆ ಸೊಗಸಿನ ಬಾಳು ಸಿಗುವಂತೆ ಮಾಡಬೇಕೆಂದಿದ್ದನು. ಇವರ ದುರದೃಷ್ಟದಿಂದ ಇವರನ್ನು ಕೇವಲ ಅವ್ಯವಸ್ಥೆಯ ಆಡಳಿತ ಗೃಹದಲ್ಲಿಯೇ ಬಿಟ್ಟು ಇವರ ತಂದೆಯು ಪರಲೋಕಕ್ಕೆ ತೆರಳಿದನು. ಚಿಕ್ಕಂದಿನಿಂದಲೂ ಕಾಲದ ಬೆಲೆಯನ್ನರಿತು, ಕಾಲವನ್ನು ಇವರು ಸದುಪಯೋಗಪಡಿಸಿಕೊಳ್ಳುತ್ತಿದ್ದರು. ಬಾಲ್ಯದಿಂದಲೂ ಸೃಷ್ಟಿಸೌಂದರ್ಯೋಪಾಸಕರಾಗಿ ತಂದೆಯ ತೋಟದಲ್ಲಿಯೇ ಅಡ್ಡಾಡುತ್ತಿದ್ದರು. ತಮ್ಮ ಮನೆಯ ಮಹಲಿನ ಮೇಲೆ ಹೋಗಿ ಹಗ್ಗವೊಂದನ್ನು ತೆಗೆದು ತಮ್ಮ ನಡುವಿಗೆ ಬಿಗಿದುಕೊಂಡು ನೇತಾ

ಡುತ್ತಿದ್ದು, ಅತಿ ನೋವಾದಾಗ ಅದರಿಂದ ಬಿಡುಗಡೆಯಾಗಿ ಪರ ನೋವಿನ ಬೆಲೆಯನ್ನು ಇವರು ಅರಿತರು.

"ಮಾನವನಾಗಿ ಜನಿಸಿದ್ದಕ್ಕೆ ಪರರಿಗಾಗಿ ಮಾಡತಕ್ಕ ಕರ್ತವ್ಯವು ಏನಿದೆ ?"

ಎಂಬುದನ್ನು ಆಗಾಗ್ಗೆ ಯೋಚಿಸಿ ಹಗಲಿರುಳು ಹಾತೊರೆಯುತ್ತಾ ಅನುಷ್ಠಾನಕ್ಕೆ ತರಬೇಕೆಂದಿದ್ದ ತತ್ತ್ವವು ಇದೇ ಆಗಿದ್ದಿತು. ಮೊಳೆಯ ಲ್ಲಿಯೇ ಬೆಳೆಯು ಕಾಣುತ್ತದೆ ಎಂಬಂತೆ ಇವರ ಬಾಲ್ಯದ ಕ್ರಿಯೆಗಳೇ ಭಾವೀ ಜೀವನದ ಕಾರ್ಯಗಳಿಗೆ ಮೂಲವಾದವು.

ಹಲವು ದಿನಗಳು ಕಳೆದ ಮೇಲೆ ಇವರು ಮಾಸ್ಕೋ ನಗರಕ್ಕೆ ಕಳು ಹಿಸಲ್ಪಟ್ಟರು. ತದನಂತರ ಅಲ್ಲಿಂದ ಹಳ್ಳಿಗೆ ಒಯ್ಯಲ್ಪಟ್ಟರು. ಜರ್ಮನ್ ಶಿಕ್ಷಕರೂ ರಷ್ಯನ್ ಉಪಾಧ್ಯಾಯರೂ ಇಲ್ಲಿ ಇವರಿಗೆ ಮೇಲ್ವಿಚಾರಕರಾ ಗಿದ್ದರು. ಇವರೆಲ್ಲರು ಇವರ ವಿಚಾರದಲ್ಲಿ ಬೇಕಾಬಿಟ್ಟಿಯಾಗಿ ವರ್ತಿಸು ತ್ತಿದ್ದುದು ಇವರ ಪೋಷಕರಿಗೆ ಗೊತ್ತಾಯಿತು. ತತ್ಫಲವಾಗಿ ೧೮೪೪ ರಲ್ಲಿ ಕಾಝಾನ್ ನಗರಕ್ಕೆ ಇವರು ಕಳುಹಿಸಲ್ಪಟ್ಟರು. ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರು. ಪದವೀಧರರಾದರು. 'ಶೈಶವಾವಸ್ಥೆ'ಯ ಹಸ್ತ ಪ್ರತಿ ಯನ್ನು ಆ ವೇಳೆಯಲ್ಲಿ ಹೆಸರುವಾಸಿಯಾಗಿದ್ದ 'ಸ್ಕೊನೆರ ಮೆನಿಕ' ಪತ್ರಿಕೆಗೆ ಕಳುಹಿಸಿದನು. ಸುಪ್ರಸಿದ್ಧ ಕವಿ ನೆಕ್ರಾಸೊವ್ ಈ ಪತ್ರಿಕೆಯ ಸಂಪಾದಕ ನಾಗಿದ್ದನು. ಈತನು ಈ ಕಾದಂಬರಿಯ ಹಸ್ತ ಪ್ರತಿಯನ್ನು ಓದಿ ಬಹಳ ವಾಗಿ ಮೆಚ್ಚಿದನು. ಈ ತರುಣ ಕಾದಂಬರಿಕಾರನು ಮುಂದೆ ದೊಡ್ಡ ಸಾಹಿತಿಯಾಗಲು ಬೇಕಾದ ಸರ್ವ ಲಕ್ಷಣಗಳಿಂದ ಕೂಡಿದ್ದಾನೆಂದು ತನ್ನ ಪತ್ರಿಕೆಯಲ್ಲಿ ಬರೆದಿದ್ದನು. ೧೮೫೦ ರಲ್ಲಿ ರಷ್ಯನ್ ಸೇನೆಗೆ ಸೇರಿದರು ಒಂದು ವರ್ಷದ ಪರ್ಯಂತ ಇಲ್ಲಿ ನಡೆದ ಪ್ರಚಂಡ ಕದನದಲ್ಲಿ ಈತನು ವಹಿಸಿದ ಪಾತ್ರ ಬಹು ಹಿರಿದು. ವ್ಯಕ್ತಪಡಿಸಿದ ಸಾಹಸವು ಚಿರಸ್ಮರ ಣೀಯ. ಕಾಕಸಸ್ ಪರ್ವತ ಪ್ರಾಂತ್ಯದ ಪ್ರಕೃತಿದೇವಿಯು ಇವರ ಚಿತ್ತ ವನ್ನು ಸೂರೆಗೊಂಡಿತು. ಸತ್ಯವಲ್ಲದ, ಸಹಜವಲ್ಲದ ವಿಚಾರಗಳಲ್ಲಿ ಇವರು ಸಹನೆಯನ್ನು ವ್ಯಕ್ತಗೊಳಿಸಿದರು. ರಷ್ಯಾದೇಶದ ಜನರಲ್ಲಿ ಹುದುಗಿರುವ ಅಗಾಧ ದೇಶ ಪ್ರೇಮ, ನೈತಿಕಬಲ ಇವುಗಳಿಂದ ಇವರು ಸ್ಫೂರ್ತಿಪಡೆದು "ಸೆವೆಸ್ಟೋಪಲ್ ಕತೆಗಳು" ಕೃತಿಯನ್ನು ರಚಿಸಿದರು. ರಷ್ಯನ್ನರ ಪ್ರಚಂಡ

ಪರಾಕ್ರಮಗಳನ್ನು ಮೂರ್ತಿಮತ್ತಾಗಿ ಚಿತ್ರಿಸಿರುವುದರ ಸಂಗಡ ಸಾಮಾನ್ಯ ಸೈನಿಕನ ನಿಕೃಷ್ಟ ಜೀವನವನ್ನೂ, ಸಮಾಜದಲ್ಲಿ ಇರುವ ಹೀನ ಮನೋವೃತ್ತಿಯ ಗುಲಾಮ ಸಂಪ್ರದಾಯ ಮೊದಲಾದವುಗಳನ್ನು ಕಟುವಾಗಿ ಟೀಕಿಸಿದ್ದಾರೆ. 'ಭೂಮಿ ಸ್ವಾಸ್ಥ್ಯಗಳ ಒಡೆಯನ ಬಾಳಿನಲ್ಲಿ ಒಂದು ಪ್ರಾತಃಕಾಲ' ಎಂಬ ಗ್ರಂಥವನ್ನು ಬರೆದ ವೇಳೆಯಲ್ಲಿಯೇ ಇವರಲ್ಲಿ ಸಹಜ ದೈವ ಭಕ್ತಿಯು ಒಡಮೂಡಿತು. *Playing the Card* ಇದರ ಕಷ್ಟನಷ್ಟಗಳು ಗೋಚರವಾಗಿ ಆದರಿಂದ ದೊಡ್ಡ ಸಾಲಗಾರರಾಗಿ ಬಂದಿದ್ದ ಆಪತ್ತು ವಿಪತ್ತು ದೈವೀ ಪ್ರಭಾವದಿಂದ ಪರಿಹಾರವಾಯಿತು. ಅಗೋಚರವಾದ ಪರಲೋಕದ ಶಕ್ತಿಯೊಂದು ಇದೆಯೆಂಬ ಅಚಲ ಭಾವನೆಯು ಇವರಲ್ಲಿ ಬೇರೂರಿತು. ೧೮೫೩ ರಲ್ಲಿ ಇವರು ಸಬ್‌ಲೆಫ್ಟಿನೆಂಟ್ ಆಗಿ ನಿಯಮಿತವಾಗಿ ಕ್ರಿಮಿಯನ್ ಯುದ್ಧಕ್ಕೆ ಕಳುಹಿಸಲ್ಪಟ್ಟರು. ಇದರಿಂದ 'ಸಾಮಾನ್ಯ ಜನರೂ ಸಹ ಗಣ್ಯರಾಗಿರುತ್ತಾರೆ' ಎಂಬ ಅನುಭವವು ಇವರಿಗೆ ಲಭಿಸಿತು. ಇವರ ಸಾಹಿತ್ಯ ಪ್ರತಿಭೆಯನ್ನು ರಷ್ಯವು ಅರಿತುಕೊಂಡಿತು. ಯುದ್ಧವು ಮುಗಿದನಂತರ ವಿದೇಶಗಳಲ್ಲಿ ಇವರು ಪ್ರಯಾಣ ಮಾಡುತ್ತಿರಲು ಅಲ್ಲಿ ಇವರ ಗುಣ ಪ್ರಶಂಸನೆಯು ಜರುಗಿ ಮಹೋತ್ಸವಗಳನ್ನು ನಡೆಯಿಸಿದರು. ರಷ್ಯಕ್ಕೆ ಹಿಂದಿರುಗಿದ ಮೇಲೆ ಯಾಸ್ನಯಾಪಾಲ್ಯನದಲ್ಲಿ ತಮ್ಮ ಭೂಮಿ ಕಾಣಿಯನ್ನು ನೋಡಿಕೊಂಡು ಚಳಿಗಾಲದಲ್ಲಿ ಮಾತ್ರ ಮಾಸ್ಕೋದಲ್ಲಿ ಕಾಲ ಕಳೆಯುತ್ತಿದ್ದರು. ೧೮೫೭ರಲ್ಲಿಯೂ ಮತ್ತು ೧೮೬೧ ರಲ್ಲಿಯೂ ಜರ್ಮನಿಯ ಸ್ಥಿತಿಗತಿಯನ್ನು ಅರಿತುಕೊಂಡರು. ಬಡವರ ವಿಚಾರದಲ್ಲಿ ಇವರಿಗೆ ಕರುಣೆಯಿದ್ದಿತು. ಆದರೂ ತಮ್ಮ ತಾರುಣ್ಯದ ಲೀಲಾವಿನೋದಗಳಲ್ಲಿ ಕಾಲಕಳೆಯುತ್ತಿದ್ದರು. ೧೮೬೦ ರಲ್ಲಿ 'ಯುದ್ಧ ಮತ್ತು ಶಾಂತಿ' ಎಂಬ ಕಾದಂಬರಿಯನ್ನು ಬರೆದರು. ಇದು ವಿಶ್ವಸಾಹಿತ್ಯದಲ್ಲಿಯೇ ಶ್ರೇಷ್ಠ ಕೃತಿಯು. ಇದನ್ನು ಇವರು ಬರೆಯುತ್ತಿದ್ದಾಗ "ನಾನು ರಷ್ಯಾದೇಶದ ಜನತೆಯ ಇತಿಹಾಸವನ್ನು ಬರೆಯಲು ಯತ್ನಿಸುತ್ತಿದ್ದೇನೆ." ಎಂದು ಹೇಳಿದರು. ಈ ಕಾದಂಬರಿಯು ಕಥಾನಾಯಕನಾದ ರಷ್ಯದ ಜನತೆಯ ವಿಚಾರದಲ್ಲಿ ಇಂತು ಇವರು ಹೇಳಿದ್ದಾರೆ. "ನನ್ನ ಕಥಾನಾಯಕನನ್ನು ನಾನು ಆತ್ಮಸಾಕ್ಷಿಯಾಗಿ ಅಭಿಮಾನದಿಂದ ಪ್ರೀತಿಸುತ್ತೇನೆ. ಈತನನ್ನು ಸರ್ವಸುಂದರನನ್ನಾಗಿ ಚಿತ್ರಿಸುವಲ್ಲಿ ನನ್ನ ಸರ್ವ ಸಾಮರ್ಥ್ಯ ಬುದ್ಧಿ

ಯನ್ನು ನಾನು ಉಪಯೋಗಿಸಿದ್ದೇನೆ. ಈ ಸೌಂದರ್ಯವು ಎಂದೆಂದಿಗೂ ಚಿರಸ್ಥಾಯಿಯು; ಅದೇ ಸತ್ಯ."

ಶ್ರೇಷ್ಠ ಸೇನಾಪತಿ ಕುಟುಝೋವನ್ನು ನವ್ಯಭವ್ಯತೆಯಿಂದ ಚಿತ್ರಿಸಿದ್ದಾರೆ. ಪೀಲಿ ಪ್ರಕರಣದಲ್ಲಿ ರಷ್ಯಾ ದೇಶದ ಸೇನೆಯ ಮುಂದಾಳುತನವನ್ನು ವಹಿಸಿದ ಇವರು ಸ್ಫೂರ್ತಿ, ಸೌಂದರ್ಯ, ನೈಜತೆಯ ಸಂಗಮದಲ್ಲಿ ಕಲಾಕುಶಲತೆಯನ್ನು ಅಡಗಿಸಿರುವುದು ವ್ಯಕ್ತವಾಗುತ್ತದೆ. ಸಾಮಾನ್ಯ ಜನತೆಯಲ್ಲಿರುವ ಮಧುರ ಬಾಂಧವ್ಯ ಮತ್ತು ಶ್ರೀಮಂತಿಕೆ ಮದೋನ್ಮತ್ತತೆಯ ಪಾತ್ರಗಳನ್ನು ಸುರಮ್ಯವಾಗಿ ಚಿತ್ರಿಸಿದ್ದಾರೆ. ಎಂಡ್ರಿಬೊಲ್ಕೊನಸ್ಕಿ, ನಟಾಶಾರೊಸ್ಟೊವಾ, ಪಿಯರಿಬಿಝುಕೋವ್ — ಈ ಪಾತ್ರಗಳು ಎಂದೆಂದೂ ಮರೆಯದಂತಿವೆ. ಗಾರ್ಕಿಯು "ಹತ್ತೊಂಬತ್ತನೆ ಶತಮಾನದ ವಿಶ್ವಸಾಹಿತ್ಯದಲ್ಲಿಯೇ ಈ 'ಯುದ್ಧ ಮತ್ತು ಶಾಂತಿ' ನಿಜವಾಗಿಯು ಉತ್ತಮೋತ್ತಮ ಕೃತಿಯು." ಎಂದಿರುವುದೇ ಇದರ ಉತ್ಕೃಷ್ಟತೆಯನ್ನು ತೋರಿಸುತ್ತದೆ. ಜಗತ್ತಿನ ಎಲ್ಲ ಪ್ರಧಾನ ಭಾಷೆಗಳಲ್ಲಿ ಇದು ಭಾಷಾಂತರಿಸಲ್ಪಟ್ಟು ಲಕ್ಷಾಂತರ ಪ್ರತಿಗಳು ಮಾರಲ್ಪಟ್ಟಿವೆ.

೧೮೬೧ ರಲ್ಲಿ ಜೀತಗಾರರ ನಿರ್ಬಂಧವು ರಷ್ಯಾ ಚಕ್ರವರ್ತಿಯಿಂದ ಕಿತ್ತು ಹಾಕಲ್ಪಟ್ಟಿತು. ಭೂಮಿಯನ್ನು ಸರಿಯಾಗಿ ಹಂಚುವುದರ ಮೇಲ್ವಿಚಾರಣೆಯ ಸಭೆಯೊಂದು ಏರ್ಪಟ್ಟಿತು. ಇವರು ಆ ಸಮಿತಿಯವರಲ್ಲಿ ಒಬ್ಬರು. ಬಡವರ ಪ್ರೀತಿಯು ಮಿಗಿಲಾಗಿ ಭಾಗ್ಯವಂತರ ದ್ವೇಷವು ಹೆಚ್ಚಾಯಿತು. ಒಕ್ಕಲ ಮಕ್ಕಳ ಪ್ರಗತಿಗೆ ಶಿಕ್ಷಣವೇ ರಾಜಮಾರ್ಗವೆಂದು ಇವರ ನಂಬಿಕೆಯಿದ್ದಿತು. ಇವರು ಇದಕ್ಕಾಗಿ ಸ್ನಯಾನಗರದಲ್ಲಿ ಪಾಠಶಾಲೆಯೊಂದನ್ನು ಸ್ಥಾಪಿಸಿದರು. ವಿದ್ಯಾರ್ಥಿಗಳ ಹಿತವೇ ಹೆಚ್ಚಾಗಿದ್ದುದರ ಸಲುವಾಗಿ ಈ ಶಾಲೆಯು ಪ್ರಗತಿ ಪಥಕ್ಕೆ ಹೆಜ್ಜೆಹಾಕಿತು. ಕಥೆಗಳನ್ನು ಹೇಳಿ, ಅವುಗಳ ಮೂಲಕ ತಮ್ಮ ಧ್ಯೇಯಸಾಧನೆಯನ್ನು ಪಡೆಯುತ್ತಿದ್ದರು. ಮಂತಿಗೆ ಹಣವನ್ನು ಮಕ್ಕಳಿಂದ ತೆಗೆದುಕೊಳ್ಳುತ್ತಿರಲಿಲ್ಲ. ಇವರ ಕ್ರಮಬದ್ಧತೆಯ ಕಾರ್ಯದಿಂದ ಜನರ ಆದರ ಅಕ್ಕರವು ಶಾಲೆಯ ಮೇಲೆ ಹೆಚ್ಚಾಯಿತು. ಇದು ರಾಜಕೀಯ ವಿರೋಧದ ಏರ್ಪಾಟು ಎಂಬ ಕಳವಳವು ಸರ್ಕಾರಕ್ಕೆ ಉಂಟಾಯಿತು. ಅನಾರೋಗ್ಯ ಪ್ರಯುಕ್ತ ಬೆಟ್ಟ ಪ್ರದೇಶಕ್ಕೆ ಇವರು ತೆರಳಿದರು. ಉಪಾಧ್ಯಾಯರನ್ನು ಹಿಡಿದು ಸರ್ಕಾರದವರು ಬಂಧಿಸಿದ್ದಾರೆ

ಎಂಬ ಸಂಗತಿಯು ಹಬ್ಬಿತು. ಇವರ ಮನೆ ಮತ್ತು ಜಮೀನನ್ನು ಜಪ್ತಿ ಮಾಡಿಸಿ, ಇವರನ್ನು ಅಪರಾಧಿಯೆಂದು ಗಣಿಸಿ, ಜನರಿಗೆ ಹಿಂದಿನ ಭಯವು ಬರುವಂತೆ ಮಾಡಿದರು. ಕೊನೆಗೆ ಚಕ್ರವರ್ತಿಯು ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಇವರಿಗೆ ಪತ್ರವನ್ನು ಬರೆದನು. ಇದರಿಂದ ಟಾಲ್‌ಸ್ಟಾಯಿಯವರಿಗೆ ಕೋಪಬಂದು, ರಷ್ಯಾದೇಶವನ್ನೇ ಬಿಡಬೇಕೆಂದು ಯೋಚಿಸಿದರು. ೧೮೬೨ ರಲ್ಲಿ ಸೋಫಿಯಾ ಬಿಹ್ರಾ ಎಂಬಾಕೆಯನ್ನು ಇವರು ಮದುವೆಯಾದರು. ವೈದ್ಯರ ಮಗಳಾದ ಈಕೆಯ ಒತಗೂಡಿದ ಸಂಸಾರವು ಸುಗಮವಾಗಿ ಸಾಗುತ್ತಲಿತ್ತು. ದಿ ಕೊಸಾಕ್ಸ ಗ್ರಂಥವು ಪ್ರಕಾಶಿತವಾಯಿತು. ಶಿಕ್ಷಣ ವಿಚಾರವೇ ಇವರ ಚಿತ್ರವನ್ನು ಸೂರೆಗೊಂಡ ವಿಚಾರವಾಯಿತು. ಇವರು ಹೊರಡಿಸಿದ 'ಯಾಸ್ನಯಾ ಪಾಲ್ಯನ' ಪತ್ರಿಕೆಯು ಶಿಕ್ಷಕರಲ್ಲಿ ಅತ್ಯಂತ ಉತ್ಸಾಹಾಸಕ್ತಿಗಳನ್ನು ಜನಿಸುವಂತೆ ಮಾಡಿತು. ಪ್ರಥಮಶಾಲೆಗಳಿಗೆ ವರ್ಣಮಾಲೆಗಳನ್ನೂ ಪಠ್ಯಪುಸ್ತಕಗಳನ್ನೂ ಬರೆವುದರಲ್ಲಿ ಇವರು ಆಸಕ್ತರಾದರು ಸತತವೂ ಜನರಿಗೆ ಮನಮುಟ್ಟುವಂತೆ ವಿಚಾರಗಳನ್ನು ತಿಳಿಸಲು ನವನವೀನ ಹಾದಿಗಳನ್ನು ಹುಡುಕುವುದರಲ್ಲಿಯೇ ಹಾತೊರೆಯುತ್ತಿದ್ದರು. ಅನಕ್ಷರಸ್ಥರಿಗೆ ಮನಮುಟ್ಟುವಂತೆ ಕತೆಗಳನ್ನು ಹೇಳಿ ಅವರು ದುಶ್ಚಾಳಿಗಳಿಂದ ವಿದೂರರಾಗುವಂತೆ ಮಾಡಿದರು. ಇವಾರ್ ದಿ ಫೂಲ್ ಕತೆಯು ಉತ್ತಮತರದ್ದೇ ಸರಿಯು. ರೈತರಲ್ಲಿ ಬಹುಮಟ್ಟಿನ ಸೋಮಾರಿತನವನ್ನು ನೀತಿಪ್ರಬಂಧ ವಿಷಯಗಳು ಅಳಿಸಿದವು. ಇವರ ವಿಚಾರ ಪರೀಕ್ಷಣಾ ಶಕ್ತಿಯೂ, ಕಲ್ಪನಾ ಬಲವೂ ಬರುಬರುತ್ತ ವಿಕಾಸವಾದವು. ೧೮೭೩ ರಲ್ಲಿ ಸಮಾರ ಪ್ರಾಂತದಲ್ಲಿ ಬರಗಾಲವು ಬಾಯಿಹಾಕಲು ಇವರ ಕಲಾಕೃತಿ ಸೃಷ್ಟಿಗೆ ಧಕ್ಕೆಯು ಬಂದಿತು. ಆ ಜಾಗಕ್ಕೆ ಇವರೇ ಹೋಗಿ, ಅಲ್ಲಿನ ವಿಚಾರಗಳನ್ನು ಮಾಸ್ಕೊಗೆ ಜೆಟ್ಟಿನಲ್ಲಿ ಬರೆದರು. ಇವರು ಬರೆದ ವಿಚಾರ ವಿವರಣೆಯಿಂದ ಜನರ ಅಭಿಪ್ರಾಯವು ಹಿರಿದಾಗಿ, ಸರ್ಕಾರದವರು ಬರಗಾಲದ ಪರಿಹಾರಕ್ಕೆ ಉಚಿತ ಏರ್ಪಾಡುಗಳನ್ನ ಮಾಡಬೇಕಾಯಿತು. ೧೮೭೫ ರಲ್ಲಿ ಅನ್ನಾ ಕೆರೆಟಿನಾ ಬೃಹತ್ ಕಾದಂಬರಿಯನ್ನು ಬರೆದರು. ಅಂದಿನ ರಷ್ಯಾದೇಶದ ಜನಜೀವನವನ್ನು ಇದು ಪ್ರತಿಬಿಂಬಿಸುತ್ತದೆ. ಗುಲಾಮಗಿರಿ ಪರಿಹಾರದ ಸುಧಾರಣೆಯ ಅನಂತರ ಸಮಾಜದ ಬಗೆಬಗೆಯ ಪದರಗಳಲ್ಲಿರುವ ಲೋಪದೋಷಗಳನ್ನು ಎತ್ತಿಹಿಡಿದು ದೇಶದ ಪ್ರಗತಿಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ಇಲ್ಲಿ ಚರ್ಚಿಸಲಾಗಿದೆ. ಅಂದು ದೇಶವನ್ನು ಆಳುತ್ತಿದ್ದ ನಿರಂಕುಶ ಪ್ರಭುತ್ವದಿಂದ

ಆಗುತ್ತಿದ್ದ ಅನ್ಯಾಯಗಳನ್ನೂ ಅವರ ಮೇಲಿರುವ ದೋಷಾರೋಪಣೆಯನ್ನು ಚೆನ್ನಾಗಿ ಇದರಲ್ಲಿ ವಿವೇಚಿಸಲಾಗಿದೆ. ಅನ್ನಾಕೆರೆನಿನಾಳ ದುರಂತವು ಚಿತ್ರಿಸಲ್ಪಟ್ಟದೆ. ತಾನು ಪ್ರೀತಿಸದ ಒಬ್ಬ ಪುರುಷನ ಸಂಗಡ ಬಲಾತ್ಕಾರದ ದಾಂಪತ್ಯ ಜೀವನವನ್ನು ನಡೆಯಿಸಲಾರದೆ ಇದನ್ನು ವಿರೋಧಿಸುವ ಗುರಿಯಿಂದ ಆಕೆಯ ನೈಜಪ್ರೇಮವು ವರೋನಾಸ್ಕಿ ಎಂಬಾತನಲ್ಲಿ ಬೆಳೆಯುತ್ತದೆ. ಆ ಸಂದರ್ಭದ ಸಮಾಜದಲ್ಲಿನ ಉಚ್ಚವುಟ್ಟದ ಮನೆತನದವರ ಠಕ್ಕುತಾಳಿ, ಮೋಸವುರೆ ಮಾತು, ವಂಚನೆ ವೇಷಧಾರಿತನ— ಇವುಗಳನು ಇಲ್ಲಿ ತೀವ್ರವಾಗಿ ಪ್ರತಿಭಟಿಸಲಾಗಿದೆ. ಈ ಬಗೆಯ ಜನರ ಹತೋಟಿಯಲ್ಲಿರುವ ಸಮಾಜದ ವಿಷಯದಲ್ಲಿ ಅನ್ನಾಕೆರೆನಿನಾಳಿಗೆ ಜಿಗುಪ್ಸೆಯುಂಟಾಗುತ್ತದೆ. ಇವರ ಸಕಲ ಕಾರ್ಯಗಳೂ ಮೋಸ, ಕಪಟ, ಸುಳ್ಳು ಎಂದು ಆಕೆಯು ಅರಿತುಕೊಳ್ಳುತ್ತಾಳೆ. ಸುಖಜೀವನವನ್ನು ಬಹುವಾಗಿ ಪ್ರೀತಿಸುತ್ತಿದ್ದ ಈ ಹೆಣ್ಣು ಅನಿಷ್ಟ ಸಮಾಜದಿಂದ ಪಾರಾಗುತ್ತಾಳೆ.

ಐವತ್ತು ವರ್ಷ ವಯಸ್ಸಾಗುವವರೆಗೂ ಬಡ ರೈತನ ಆಹಾರದ ಸೇವನೆಯನ್ನೇ ರೂಢಿಯಲ್ಲಿ ತಂದರು. ಸಂಸಾರದ ಇತರೆಯವರು ಸುಖಭೋಜನ ಮಾಡುತ್ತಿದ್ದರೂ, ಇವರು ಮಾತ್ರ ಬೇರೆ ಬಡತನದ ಆಹಾರವನ್ನೇ ತೆಗೆದುಕೊಳ್ಳುತ್ತಿದ್ದರು. ಅನಾಥೆಯರಿಗೂ ವಿಧವೆಯರಿಗೂ ಹೊಲಗದ್ದೆಗಳ ಕೆಲಸದಲ್ಲಿ ನೆರವಾಗುತ್ತಿದ್ದರು. ನಾಗರೀಕತೆಯಿಂದ ಸುಖಾಪೇಕ್ಷೆಯೂ, ಐಶ್ವರ್ಯದಿಂದ ದುಷ್ಫಲವೂ ಒದಗುತ್ತಿದೆ ಎಂಬ ಭಾವನೆಯು ಇವರಲ್ಲಿ ಬೇರೂರಿತು. ಯಾವ ವಿಷಯವಾಗಲೀ ಅದರ ನಿಜತತ್ವವು ಮನಗಂಡರೆ ಸಾಕು, ಅದನ್ನು ಅನುಷ್ಠಾನಕ್ಕೆ ತರುವವರೆಗೂ ಇವರು ಸುಮ್ಮನಿರುತ್ತಿರಲಿಲ್ಲ. ಇವರ ದಿನಚರಿಯ ಕ್ರಿಯೆಗಳಲ್ಲಿ ಧೀರತೆಯೂ, ಪ್ರತಿಭೆಯೂ ಏಕೀಕೃತವಾಗಿದ್ದವು. ವಿನಯ ದೀನತೆಯು ಕ್ರಮಕ್ರಮವಾಗಿ ಮಿಲಿತವಾಯಿತು. ಪರರ ಅನುಭವಗಳನ್ನೂ, ಇನ್ನೂ ಹೆಚ್ಚಿಗೆ ಸ್ವಾನುಭವನನ್ನೂ ಪಡೆಯಲು ಸರ್ವತೋಮುಖವಾಗಿಯೂ ಇವರು ಶ್ರಮಿಸಿದರು. ಜೀವನದ ವಿಚಾರವನ್ನು ವಿವೇಕ ಮಾರ್ಗದಿಂದ ಸಂಪೂರ್ಣವಾಗಿ ತಿಳಿದುಕೊಳ್ಳುವ ಅವಶ್ಯಕತೆಯು ಬೇಕಾಯಿತು. ೧೮೬೬ ರಲ್ಲಿ ಮದ್ಯದ ಹುಟ್ಟು *the First Distiller*" ಮೋಹಾಂಧಕಾರ "*the Power of Darkness*" ಈ ನಾಟಕಗಳೂ, ೧೮೬೯ ರಲ್ಲಿ ಮತಿಯ ಭ್ರಮೆ "*the Fruits of*

*Enlightenment*" ನಾಟಕವೂ ಇವರಿಂದ ಬರೆಯಲ್ಪಟ್ಟಿತು. ಪಾದರಕ್ಷೆಗಳನ್ನು ಮಾಡುವುದನ್ನೂ ಕಲಿತುಕೊಂಡು ಜೀವನವನ್ನು ಪರಿಶುದ್ಧ ಮಾಡಲು ಹೆಣಗಾಡಿ ಬಡವರಿಗಾಗಿಯೇ ಕಷ್ಟನಷ್ಟದಿಂದ ನೊಂದು ಬೆಂದವರಿಗಾಗಿಯೇ ಇಡೀ ತಮ್ಮ ಬಾಳನ್ನೇ ಧಾರೆಯೆರೆದ ಪುಣ್ಯಪುರುಷನ ಇರವು ಇಹಲೋಕದಲ್ಲಿ ಇರಲು ವಿಧಿಗೆ ಬೇಕಾಗಿರಲಿಲ್ಲ. ಇಡೀ ಜನತೆಯ ಉಪಕಾರಿಯನ್ನು ೧೯೧೧ ನವ್ಹಂಬರ ೭ ರಂದು ಮೃತ್ಯುದೇವತೆಯು ತನ್ನ ಕರಾಳದವಡೆಗೆ ಬಲಿತೆಗೆದುಕೊಂಡಿತು. ಎಂಬತ್ತುಮೂರು ವರ್ಷಗಳು ಬದುಕಿ ಬಾಳಿ ಸಕಲರಿಂದಲೂ ಮಹಾತ್ಮರೆಂದು ಕರೆಯಿಸಿಕೊಂಡು ನೆರೆಹೊರೆಯನ್ನು ಸುಧಾರಿಸಿ ಜಗತ್ತಿನ ಗೆಳೆಯನಾಗಿ ಜೀವಿಸಿ ರಷ್ಯಾದೇಶದಲ್ಲಿ ನವಜಾಗ್ರತಿಯನ್ನುಂಟುಮಾಡಿದ ಮಹಾ ವಿಭೂತಿಯು ಸಾಧುವರ್ಯ ಟಾಲ್‌ಸ್ಟಾಯ್.

ಇಂದಿನ ಸಮಾಜ ಜೀವನದ ಚಟುವಟಿಕೆ, ನಂಬಿಕೆ, ವೇದಾಂತದ ವ್ಯಾಸಂಗಾದರ್ಶ, ಸಾಮಾಜಿಕ ಹಾಗೂ ರಾಜಕೀಯ ಪ್ರವೃತ್ತಿಕ್ರಿಯೆ, ಪ್ರತಿಕ್ರಿಯೆ ಇವುಗಳೆಲ್ಲ ಇವರ ವ್ಯಾಸಂಗದ ಪರಿಶೋಧನೆಗೆ ಸಂಬಂಧಿಸಿದ ವಿಚಾರಗಳಾಗಿವೆ. ಜಗತ್ತಿನ ಭಾವೀ ಬೌದ್ಧಿಕ ಹಾಗೂ ನೈತಿಕ ಬೆಳವಣಿಗೆಗೆ ಈತನು ಸೂಚನೆ ಮಾಡಿರುವ ಹಾದಿಯೇ ಮಾದರಿಯಾಗಿ ಕಾಣುತ್ತಿದೆ. ಸರಿಯಾದ ಗುರುವು ದೊರಕದ ಕಾರಣ ಮನುಜನು ಎಂತಹ ಮಹನೀಯನಾದರೂ ಆತನಿಗೆ ಬಾಳಿನ ನಿಜವಾದ ಧ್ಯೇಯವು ಗೊತ್ತಾಗದಂತೆ ಈತನ ದೃಷ್ಟಿಯಲ್ಲಿ ವಿವೇಕವುಳ್ಳ ಪ್ರಾಣಿಯಾದ ಮನುಷ್ಯನಿಗೆ ಸ್ವಾರ್ಥದ ಪ್ರೇಮವು ವಿಶ್ವಪ್ರೇಮಕ್ಕೆ ಅಡ್ಡಿ ಆಗುತ್ತದೆಯಂತೆ. ಧರ್ಮದ ನಿರೂಪಣೆಯನ್ನು ಇವರು ಇಂತು ಕೊಟ್ಟಿದ್ದಾರೆ.

" ಧರ್ಮವು ಕೇವಲ ವಚನ ಧರ್ಮವಾಗಿರಬಾರದು. ಆಚರಣೆ ಹಾಗೂ ಪ್ರೇಮದ ಧರ್ಮವಾಗಿರಬೇಕು. "

ಜಗತ್ತಿನಲ್ಲಿ ಸ್ಥಿರವಾಗಿ ಧರ್ಮಸ್ಥಾಪನೆಯಾಗಲು ಇದು ಅಂಕುರಾರ್ಪಣವಾಗಬೇಕು. ಹೆಚ್ಚು ಹೆಚ್ಚಾಗಿ ಪ್ರೀತಿಸುತ್ತ ಹೋದರೆ ಜೀವನಝುರಿಯಲ್ಲಿ ಧರ್ಮವು ಸೇರಿಹೋಗುವುದು ಸತ್ಯವೇ ಸರಿಯು. ಇವರ ವಿನಯದ ಕುರುಹು ಈ ಕೆಳಗಿನ ಇವರ ಧ್ಯೆಯಸಾಧನೆಯ ನುಡಿಯಲ್ಲಿ ಎದ್ದು ಕಾಣುತ್ತದೆ.

"ನಮ್ಮ ಗುರಿಯನ್ನು ನಾವು ಸಾಧಿಸಿದೆವು ಎಂದು ನಮಗೆ ನಂಬಿಕೆಯಾದಕೂಡಲೇ ನಮ್ಮ ಬೆಳವಣಿಗೆಯು ನಿಂತು ಹೋಗುತ್ತದೆ. ಅಲ್ಲಿಂದ ಮುಂದೆ ನಮ್ಮ ಅಧೋಗತಿಯು ಆರಂಭವಾಗುತ್ತದೆ. ನಾವು ಅದರ ಹತ್ತಿರ ಹತ್ತಿರಕ್ಕೆ ಹೋದಂತೆಲ್ಲಾ ನಮ್ಮ ಗುರಿಯು ಇನ್ನೂ ದೂರದೂರಕ್ಕೆ ಸರಿಯಬೇಕಾಗಿದೆ. ಅದೇ ಸಹಜವಾದ ಗುರಿ" ಅನ್ನಕ್ಕಾಗಿ ಪ್ರತಿಯೊಬ್ಬರೂ ದುಡಿಯಬೇಕೆಂದು ಹೇಳುತ್ತಿದ್ದು ತಾವು ಅಂತೆಯೇ ಆಚರಿಸುತ್ತಿದ್ದರು. ನಂಬಿದ್ದನ್ನು ತಕ್ಷಣವೇ ಇವರು ಆಚರಿಸುತ್ತಿದ್ದರು. ನಂಬಿದ್ದನ್ನು ತಕ್ಷಣವೇ ಇವರು ಆಚರಿಸುತ್ತಿರಲಿಲ್ಲ. ವಿಮರ್ಶೆ ಮಾಡಿ ನೋಡಿ ಅನುಷ್ಠಾನಕ್ಕೆ ಇವರು ತರುತ್ತಿದ್ದರು. ಆತ್ಮಪರಿಶುದ್ಧತೆಗಾಗಿ ಆತುರಪಡುತ್ತಿದ್ದ ವ್ಯಕ್ತಿಯೇ ಕೌಂಟ್ ಲಿಯೋ ಟಾಲ್‌ಸ್ಟಾಯ್ ಬಡವರ ಹಕ್ಕುಬಾಧ್ಯತೆಗಳಿಗಾಗಿಯೂ ಪ್ರಜೆಯ ಎಲ್ಲ ಬಗೆಯ ಸ್ವಾತಂತ್ರ್ಯಕ್ಕಾಗಿಯೂ ಜೀವಮಾನವನ್ನೇ ಮೀಸಲಾಗಿರಿಸಿದ ರೂಸೋ ಮೊದಲಾದವರ ಲೇಖನಗಳು ಟಾಲ್‌ಸ್ಟಾಯರವರ ಮೇಲೆ ಬಹಳ ಪರಿಣಾಮವನ್ನುಂಟುಮಾಡಿದ ಕಾರಣದಿಂದಲೇ ದುಡಿಮೆಯ ಬೆಲೆಯು ಇವರಿಗೆ ಗೊತ್ತಾಯಿತು. ಗ್ರೀಸದೇಶದ ಮಹಾ ಮೇಧಾವಿಯೂ, ತತ್ವಶಾಸ್ತ್ರಜ್ಞನೂ ಆದ ಸಾಕ್ರಟೀಸನಿಂದ ಹಿಡಿದು ನವೀನ ಕಾಲದ ಷೋಪೆನ್ಹೋರ್ ಎಂಬ ತತ್ವಶಾಸ್ತ್ರಜ್ಞನ ವರೆಗೆ ಬೆಳೆದು ಬಂದಿದ್ದ ಸಿದ್ಧಾಂತಗಳನ್ನು ಮನನ ಮಾಡಿಕೊಂಡ ಕಾರಣವೇ ಇವರಿಗೆ ಅಧ್ಯಾತ್ಮಜ್ಞಾನವು ಅರಳಿತು. ಇಂದು ರಷ್ಯವು ಸ್ಫೂರ್ತಿಗೊಳ್ಳಲು ಇವರ ಕಲಾಕೃತಿಗಳೇ ಮೂಲ ಕಾರಣವಾಗಿವೆ. ಸಾಹಿತ್ಯಕ್ಕೆ ಗಾಢ ತಿಮಿರವು ಆವರಿಸಿಕೊಂಡಿದ್ದ ವೇಳೆಯಲ್ಲಿ ಇವರ ಜನನ. ಇವರ ನಾಟಕಗಳು ಜನತೆಯನ್ನು ಸುಧಾರಿಸುವ ಅಸ್ತ್ರಗಳು. ಬಾಳನ್ನು ಇದ್ದ ಹಾಗೆಯೇ ಚ ಚೂ ತಪ್ಪದೆ ಚಿತ್ರಿಸಿ 'ಸಾಹಿತ್ಯವು ಜನಜೀವನದ ಪ್ರತಿಬಿಂಬ' ಎಂಬುದನ್ನು ಸತ್ಯ ಪರಿಪೂರ್ಣ ಮಾಡಿವೆ. ಇವರ ಯಾವ ನಾಟಕಗಳನ್ನು ನೋಡಿದರೂ ಅವುಗಳಲ್ಲಿ ನೀತಿಪರವಾಗಿ ಕಟ್ಟಿದ ಕತೆಯೇ ಕಣ್ಣಿಗೆ ಕಾಣಬರುತ್ತದೆ. ಸನ್ನಿವೇಶಗಳ ರಚನಾಚಾತುರ್ಯವೂ ಸ್ವಭಾವ ಚಿತ್ರಿತ ಶಕ್ತಿಯೂ ಪಾತ್ರಗಳ ಚಿತ್ರವನ್ನು ನಮ್ಮ ಕಣ್ಣಮುಂದೆ ತಂದು ನಿಲ್ಲಿಸುವ ಚಾಕಚಕ್ಯತೆಯೂ ಇವರ ನಾಟಕಗಳಿಂದ ಅರಿವಾಗುತ್ತದೆ. ಜೀವನದ ವಿಕಾಸವೇ ಕಲೆಯು. ಬಾಳಿನ ಒಂದು ಅಂಗವು ಸಾಹಿತ್ಯ. ಸಾಹಿತ್ಯದ ಗುರಿಯು ಬಾಳಿನ ಶ್ರೇಯವನ್ನು ಸಾಧಿಸಿ ಬೋಧಿಸುವುದಾಗಿರುತ್ತದೆ. ಈ ತತ್ವದ ನೆನಪಿನಿಂ

ದಲೇ ಕತೆಯನ್ನೂ ಕಾದಂಬರಿಯನ್ನೂ ಇವರು ಬರೆದಿದ್ದಾರೆ. ನೀರಸ ವಿಷಯಗಳ ತಂಟೆಗೆ ಹೋಗದೆ, ಧಾರ್ಮಿಕ ವಿಷಯಗಳ ಗುಟ್ಟನ್ನು ಸರ್ವ ರೂಢಿಯ ಮನುಷ್ಯನಿಗೂ ತಿಳಿಯುವ ಬಗೆಯಲ್ಲಿ ಕಥೆಯನ್ನು ಬರೆದಿದ್ದಾರೆ. ಟಾಲ್‌ಸ್ಟಾಯ್ ತನ್ನ ಪಾಂಡಿತ್ಯ ಸೃಷ್ಟಿಗೆ ಬೇಕಾದ ಸನ್ನಿವೇಶ, ಹಿನ್ನೆಲೆ ಇವುಗಳನ್ನು ಜನಜೀವನದಿಂದ ತೆಗೆದುಕೊಂಡಿದ್ದಾರೆ. ಇವರು ಕೊನೆಯ ದಾಗಿ ಬರೆದ 'ಜೀವಂತ ಶವ' ನಾಟಕವು ಬಹು ಮಾರ್ಮಿಕವಾಗಿದೆ. ತನ್ನ ಜೀವನಯಾತ್ರೆಯ ಕೊನೆಯ ಕ್ಷಣದ ವರೆಗೂ ಅವಿಶ್ರಾಂತವಾಗಿ ದುಡಿದು ಸಮಾಜದ ಕುಂದುಕೊರತೆಗಳನ್ನೂ, ದುರಾಡಳಿತ ಮತ್ತು ಅನ್ಯಾಯಗ ಳನ್ನೂ ತಮ್ಮ ಬರಹಗಳ ಮೂಲಕ ಎತ್ತಿ ತೋರಿಸಿ, ಜನಜಾಗೃತಿ ಉಂಟಾ ಗುವಂತೆ ನಿರಂತರ ಯತ್ನ ಮಾಡಿದ್ದಾರೆ. ಸಾಮಾನ್ಯರ ಮತ್ತು ಶ್ರೀಮಂತರ ಕೂಲಿಕಾರರ ಮತ್ತು ಬಂಡವಾಳಗಾರರ ಜೀವನಸಮಸ್ಯೆಗಳ ಸಂಘರ್ಷಣೆಯೇ ಕೊನೆಯ ವರೆಗೂ ಇವರ ಮನಸ್ಸಿನಲ್ಲಿ ಮಿನುಗುಟ್ಟುತ್ತಿದ್ದುದು ಇವರ ಸಾಹಿತ್ಯದಿಂದ ತಿಳಿಯುತ್ತದೆ. ಇವರು ತಮ್ಮ ಜೀವಮಾನವೆಲ್ಲವನ್ನೂ ಕಷ್ಟ ಪಟ್ಟು ಪರಿಶೋಧಿಸಿ ಅಂತುಕೊಳ್ಳಲು ಯತ್ನಿಸಿದ ಸಹಜ ಸತ್ಯವಾದ ಮತ್ತು ಅಗಾಧ ಸುಖವನ್ನು ಹುಡುಕುವ ಹಾದಿಯನ್ನು ವಿಸ್ತಾರವಾಗಿ ತೋರಿಸುವ ಗ್ರಂಥವಾದ ದಿ. ಕೊಸಾಕ ಪ್ರತಿಯೊಬ್ಬ ಕಲಾಕೋವಿದನ ಕೈಯ್ಯಲ್ಲಿ ಇರ ಬೇಕಾದದ್ದಾಗಿದೆ. ಪಾತ್ರವ್ಯಕ್ತಿಗಳು ಕೇವಲ ಸಹಜ ಬಗೆಯಿಂದ ಚಿತ್ರಿಸ ಲ್ಪಟ್ಟಿರುವ ವಾರ್ ಆಂಡ್ ಪೀಸ್ ಕೃತಿಯೂ ಸಂದರ್ಭಗಳನ್ನು ಸ್ವಾಭಾವಿ ಕವಾಗಿಯೂ ಹೃದಯಕ್ಕೆ ನಾಟುವಂತೆಯೂ ಪ್ರತ್ಯಕ್ಷವಾಗಿ ವರ್ಣಿಸಲ್ಪ ಟ್ಟಿರುವ ಅನ್ನಾಕೆರೆನಿನಾ ಕೃತಿಯೂ, ವಿಶ್ವವಿಖ್ಯಾತವಾದ ರಿಸರೆಕ್ಷನ್ ಕಾದಂ ಬರಿಯೂ ಅತಿಶಯವಾಗಿ ಜನಪ್ರಿಯವಾಗಿವೆ. ಎ ಕನ್ಫೆಸನ್ ಗ್ರಂಥವು ಇವರ ಜೀವನಚರಿತ್ರೆಯನ್ನು ಸಹಜ ಸತ್ಯವಾಗಿ ನಿರೂಪಿಸಿವೆ. ಇವರ ಉಪ ದೇಶದ ಸಾರಾಂಶವು ಸಂಸ್ಮರಣೀಯವಾಗಿದೆ.

"ಧನ ಎಂದರೆ ಬಡವರಿಂದ ಕೆಲಸ ತೆಗೆಯುವ ಸಾಧನ. ಹಣವು ದುಃಖಕಾರಿ. ಮಾನವನು ಒಳ್ಳೆಯವನಾಗಬೇಕಾದರೆ ಆತನಿಗೆ ಬೇಕಾದ ವಿಚಾರಗಳು ಬಹಳ ಕಡಿಮೆಯಾಗಿರಬೇಕು. ಪ್ರೇಮವೂ, ಪರಿಶ್ರಮವೂ ಬಾಳಿಗೆ ಅಗತ್ಯ. ಸೇವೆಯಲ್ಲಿ ಆನಂದಿಸಿ, ಅಹಂಕಾರವನ್ನು ಅಳಿಸಬೇಕು.

ನಿಜವಾದ ಶ್ರೇಷ್ಠತ್ವವು ದೇವನ ಮತ್ತು ಭಕ್ತನ ದೃಷ್ಟಿಯಿಂದ ಉತ್ತಮ ನಾಗುವದು. ಬಾಳನ್ನು ಅರಿತುಕೊಂಡು ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಿ. "

ದರಿದ್ರನಾರಾಯಣನ ಸೇವೆಯೇ ದೇವರ ಸೇವೆ ಎಂದು ಆಚರಿಸಿದ ಟಾಲ್‌ಸ್ಟಾಯ್‌ಯನ್ನು ಕುರಿತು ಲೆನಿನ್ ಇಂತು ನುಡಿದಿದ್ದಾನೆ.–" ತಮ್ಮ ಕೃತಿಗಳಲ್ಲಿ ತಮ್ಮ ತಮ್ಮ ಕಾಲದ ಚಾರಿತ್ರಿಕ ವೈಷಮ್ಯಗಳನ್ನು ಅದ್ಭುತ ವಾಗಿ ಬಿಡಿಬಿಡಿಯಾಗಿ ತೋರಿದ ಜಗತ್ತಿನ ಸಾಹಿತ್ಯದ ಮಣಿಮುಕುಟಗ ಳಾದ ಸಹಜ ಕಲಾಕೃತಿಗಳಲ್ಲಿ ಸತ್ಯಶೋಧನೆಯ ಚಿತ್ರವನ್ನು ಸೊಬಗಿನ ರೇಖೆಗಳಲ್ಲಿ ಚಿತ್ರಿಸಿದ ಕಲಾವಿದ ಟಾಲ್‌ಸ್ಟಾಯ್"

# ಮನುಷ್ಯನಿಗೆ ಭೂಷಣವಾವುದು ?

(ಲೇಖಕ:—ಶ್ರೀ ಎಸ್. ಎಸ್. ಶಾಬಾದಿ (ನಾಗರಹಳ್ಳಿ) ಟ್ರೆ. ಕಾ. ಲಚ್ಯಾಣ.)

೧

ಗುಣದಲ್ಲಿ ಭೂಷಣವೋ? ಭೂಷಣದಲ್ಲಿ ಗುಣವೋ? ಇದು ಬಹು ಕಾಲದಿಂದ ಒಡೆಯಲಾರದ ಒಗಟಾಗಿದ್ದರೂ ಉತ್ತರ ಮಾತ್ರ ಬಹುಸರಲ. ಎಲ್ಲಿ ಗುಣವಿದೆಯೋ ಅಲ್ಲಿ ಭೂಷಣವಿರಲೇಬೇಕು ಎಂದು ಕೆಲವರು ವಾದಿ ಸಿದರೆ ಮತ್ತೆ ಕೆಲವರು ಎಲ್ಲಿ ಭೂಷಣವಿದೆಯೋ ಅಲ್ಲಿ ಗುಣವಿರಲೇಬೇಕು ಎಂದು ಎದುರಿಸುತ್ತಿರುವರು. ಇದು ಎಲ್ಲರೂ ಕೇಳುತ್ತಿರಲಿಕ್ಕೆ ಸಾಕು. ಸದ್ಗುಣಗಳೇ ಸಾಯುಜ್ಯದ ಸೋಪಾನಗಳು. ಅರ್ಥಾತ್, ಭೂಷಣದ ಮೆಟ್ಟಿಲುಗಳಾಗಿರುವವು.

ಇಲ್ಲಿ ನಾವು ಪ್ರತಿಪಾದಿಸುವದು ಗುಣವೆಂದರೇನು ? ಭೂಷಣವೆಂದ ರೇನು ? ಇದರ ವಿವೇಚನೆಯನ್ನು ಮಾಡುವಾ.

(ಗುಣ = ಭೂಷಣ) (ಭೂಷಣ = ಗುಣ) ಗುಣಭೂಷಣಗಳು ಬೇರೆ ಇರದೆ ಗುಣವೇ ಭೂಷಣವಾಗಿರುವದು, ಭೂಷಣವೇ ಗುಣವಾಗಿರುವದು.

ಇವು ಏಕಮಾತ್ರ ಅರ್ಥಗರ್ಭಿತ ಪದಗಳು. ಇದನ್ನೇ ಜಗಜನರಲ್ಲಿ ಸರ್ಪ ಭೂಷಣ ಶಿವಯೋಗಿಗಳು ತಿಳಿಯಪಡಿಸಲೋಸುಗ ಕೈವಲ್ಯ ಕಲ್ಪವಲ್ಲರಿ ಯಲ್ಲಿ ಹೀಗೆ ಹೇಳಿಕೊಂಡಿದ್ದಾರೆ.

"ಗುಣವೇ ಭೂಷಣವಲ್ಲವೇ? ಸರ್ವಕ್ಯೂ ಮಣಿಹೇಮಾದಿಗಳು ಭೂಷಣ ವಲ್ಲವು. "—ಎಂಬಂತೆ.

ಗುಣವೇ ಭೂಷಣವೆಂದು ಪ್ರತಿಪಾದಿಸಿದ್ದಾರೆ. ನಾವು ತಿಳಕೊಂಡಂತೆ ಮುತ್ತು ರತ್ನ ಬಂಗಾರ ಇತ್ಯಾದಿ ವಸ್ತುಗಳು ಭೂಷಣವಲ್ಲ.

ಗುಣವೆಂದರೇನು? ಈ ಶಬ್ದದ ಅರ್ಥವನ್ನು ಒಂದೇ ಮಾತಿನಲ್ಲಿ ಹೇಳುವದಾದರೆ "ಜಗತ್ತಿನ ಆಗುಹೋಗುಗಳನ್ನು ಒಳ್ಳೇ ಚಿಕಿತ್ಸಕ ಬುದ್ಧಿ ಯಿಂದ ಪರಿಶೀಲಿಸಿ ತನ್ನ ಹೃದಯ ಸಂಸ್ಕಾರವನ್ನು ಬೆಳೆಸುತ್ತ ಹೋಗು ವದೇ ಗುಣವೆಂದೂ ಹಾಗೂ ಭೂಷಣವೆಂದೂ ಹೇಳಬಹುದು. ಈ ಗುಣ ಅಥವಾ ಭೂಷಣವು ರೂಪಿಲ್ಲದೆ ಕಾಣಿಸಿಕೊಳ್ಳುವದು. ಗಂಧಿಲ್ಲದೆ ವಾಸಿಸು ವದು, ಶಬ್ದವಿಲ್ಲದೆ ಕೇಳಿಸಿಕೊಳ್ಳುವದು ಮೂಕನು ಸಕ್ಕರೆ ಮೆದ್ದಂತಿಹುದೀ ಗುಣವು. ಅದು ಮನುಷ್ಯನ ಯೋಗ್ಯತೆಯನ್ನು ಅಳೆಯುವ ಅಳತೆ ಗೋಲಿ ನಂತಿಹುದು.

ಹಿಂದಣ ಪುಣ್ಯದಿಂ ಅಂದಣವನೇರುವತೆರದಿ ಹಿಂದಣಪುಣ್ಯದಿಂದೀ ಗುಣ ಅಂಕುರಿಸಿ ಇಂದಣಂ ಮರವಾಗಿ ಮುಂದಣಂ ಫಲವಾಗುತಿಹುದೆಂದಾ ಣಿಪುದೇ ಇಂದಣ ಮಾನವನ ಕರ್ತವ್ಯ. ಗುಣವು ಮಾನವನ ವಿಕಾಸದ ತಳಹದಿ, ಅಷ್ಟೇಕೆ? ಜೀವನ ಪರ್ಯವಸಾನದ ಅವಧಿಯಲ್ಲಿ ನಿವೃತ್ತಿ ಮಾರ್ಗಮಂ ಪಿಡಿದು ದೇವತ್ವದೆಡೆಯೊಳು ಸೇರಲು ಎಡಬಿಡದೆ ನಡೆದಿರುವ ಶರೀರವೇ ತೇರಾಗಿ ಇಂದ್ರಿಯಾದಿಗಳೇ ಕುದುರೆಯಾಗಿ ಗುಣವೇ ಸಾರಥಿಯಾಗಿ ಜೀವ ನನ್ನೇ ಶಿವನಲ್ಲಿ ಲಯಿಸುವ ಕಾರ್ಯಕ್ಕೈಕೊಂಡಿರುವ ಗುಣಸಾರಥಿ ಭಾಪು, ಭಾಪು ನೀನೇ ಧನ್ಯ. ನಿನ್ನ ನಿಜಸ್ಥಿತಿಯನ್ನರಿದವರಾರು? ಇದಕ್ಕಾಗಿಯೇ ಸರ್ಪಭೂಷಣರು " ತೇರು ಸಾಗಿತಮ್ಮ ನೋಡಿರೇ " ಎಂದು ಸಾರಿದ್ದರೆ ಕುರುಹು ಇದೇ ಇರಬಹುದಲ್ಲವೇ ? ಇದಕ್ಕಾಗಿಯೇ ಸುಭಾಷಿತರು "ಗುಣಾಃ ಪೂಜ್ಯ ಸ್ಥಾನೇ । ಗುಣೇಷು ನಚಲಿಂಗ ನಚವಯಃ " ಎಂದೂ ಹೇಳಿರ ಬಹುದು.

ಒಂದೆಡೆಯಲ್ಲಿ ಗುಣವೇ ಅನ್ವಯವಾಗಿ ಸಂಸ್ಕೃತಿಯೇ ಅರ್ಥವಾಗಿ ಗೋಚರವಾಗುತಿಹುದು. ಅದೆಂತೆನೆ ಸಂಸ್ಕೃತಿಯಲ್ಲಿ ಕರಸಂಸ್ಕೃತಿ, ಉರು

ಸಂಸ್ಕೃತಿ ಶಿರಸಂಸ್ಕೃತಿ ಎಂದೂ ಹೇಳುವದರ ಅರ್ಥವೂ ಇದೆ. ತನ್ನ ಕಲೆಯ ನಾನಾ ಚಮತ್ಕಾರದ ಮೂಲವನ್ನು ಜಗತ್ತಿಗೆ ತೋರ್ಪಡಿಸುವದು. ಕರ ಸಂಸ್ಕೃತಿ । ಕಷ್ಟನಷ್ಟ ಸುಖದುಃಖ ಆನಂದ ಅಪ್ರೇಮಗಳೆಲ್ಲದರಲ್ಲಿ ಬೆರೆತು ಸಾಗರದ ತೆರೆಯಂತೆ ಸಾಗಿಹೋಗುವದೇ ಉರುಸಂಸ್ಕೃತಿ । ಭೂಗರ್ಭದಲ್ಲ ಡಗಿದ ಸುವರ್ಣದ ತೆರದಿ ಪ್ರಪಂಚದಲ್ಲಡಗಿದ ಪ್ರಾಮಾಣಿಕತನವನ್ನು ಪರಿ ಶೀಲಿಸಿ ಅದರಿಂದಾದ ತನ್ನ ಆನಂದಾನುಭವವನ್ನೇ ಪರರಿಗೆ ಶ್ರುತಿಪಡಿಸಿ ಅವರನ್ನೂ ಸಹ ಆನಂದಸಾಗರದಲ್ಲಿ ಲೋಲಾಡಿಸುವದೇ. ಶಿರಸಂಸ್ಕೃತಿ. ಅನುಕ್ರಮವಾಗಿ ಒಂದರಲ್ಲಿ ಸೌಂದರ್ಯ, ಮತ್ತೊಂದರಲ್ಲಿ ಭಾವ, ಇನ್ನೊಂ ದರಲ್ಲಿ ಸತ್ಯ ಹೀಗೆ ಸೌಂದರ್ಯ, ಭಾವ, ಸತ್ಯ ಇವುಗಳೇ ಸಗುಣ ತ್ರಿಮುಖ ಗಳಾಗಿರುವವು. ಅಂತೆಯೇ ಸತ್ಯಂ, ಶಿವಂ, ಸುಂದರಂ, ಎಂಬ ತ್ರಿಪದಗ ಳಾಗಿ ನಿರ್ಗುಣದಲ್ಲಿ ಕೂಟಸ್ಥ ಶಿವನಲ್ಲಿ ಐಕ್ಯವಾಗುತಿಹವು.

## ಸುಗುಣ

ಇನ್ನು ಸುಗುಣದಲ್ಲಿ ಮುಖ್ಯವಾಗಿ ಎರಡು ಭಾಗಗಳನ್ನು ಕಲ್ಪಿಸಿ ಕೊಳ್ಳಬಹುದು. ಒಂದು ಸುಗುಣವಾದರೆ ಮತ್ತೊಂದು ದುರ್ಗುಣ, ಕನ್ನ ಡಿಯ ಕಟ್ಟಿನಂತೆ ಸುಗುಣವು ಕನ್ನಡಿಯ ಹರಳಾಗಿ ದುರ್ಗುಣವು ಕನ್ನ ಡಿಯ ವಿರುದ್ಧ ದೆಶೆಯು ರಟ್ಟಾಗಿಹುದು. ಒಂದು ಸುಗಮಮಾರ್ಗ ಒಂದು ದುರ್ಗಮಯು. ಅಂಧಕಾರಮಾರ್ಗ ಒಂದು ದೇವನ ಮಾರ್ಗ ಒಂದು ಜೀವನ ಮಾರ್ಗ. ಆಯಾಯ ಪ್ರವಾಸಿಗಳು ಆಯಾಯ ಮಾರ್ಗಕ್ರಮಿಸುತ್ತಿರುವರು. ಇರಲಿ ಸಗುಣದಲ್ಲಿ ಸುಗುಣವೆಂದರೇನು ? ಇದನ್ನು ವಿಚಾರಿಸುವಾ. ಸಗು ಣದಲ್ಲಿ ಸುಗುಣವೆಂದೊಡೆ ಅರಿಷಡ್ವರ್ಗಗಳ ನಿಶ್ಚಲತೆ. ಸುಗುಣವೆಂಬ ಮರ ವನ್ನು ಕಲ್ಪಿಸಿಕೊಂಡರೆ ಅಹಿಂಸೆ, ಪರೋಪಕಾರ, ತಪಸ್ಸು, ಸತ್ಯ, ಶಾಂತಿ ದಾಂತಿ, ತಿತಿಕ್ಷೆ, ದಯೆ, ದಾಕ್ಷಿಣ್ಯ, ವಿರಕ್ತಿವೆಂಬ ಕೊಂಬೆಗಳಾಗಿ ಶ್ರವಣ, ಸಾಧನ, ದೈವಭಕ್ತಿಗಳು ಪುಷ್ಪಗಳಾಗಿ ವಿವೇಕವೆಂಬ ಫಲ ಉತ್ಪತ್ತಿಯಾಗಿ ಜೀವನು ಆ ಸಿಹಿ ಫಲಂ ಭುಂಜಿಸಿ ಸುಖಶಾಂತಿ ಹೊಂದುವದು. ಅರಿಷ ಡ್ವರ್ಗಗಳ ನಿಶ್ಚಲತೆಯೆಂದೊಡೆ ಅರಿಷಡ್ವರ್ಗಗಳ ನಾಶವೆಂತಲ್ಲ. ಚಲನೆ ರಹಿತ ಸಾಗರದಂತೆ ಹುರಿದ ಚಣಗಿಯ ಬೀಜದಂತೆ ನಟನೆ ಮಾತ್ರ. ಅದೆಂತೆಂದೊಡೆ ಪರರಿಗೆ ಉಪಕೃತಿ ಮಾಡಬೇಕೆಂಬ ಲೋಭ ದುಃಖಗಳಿಗೆ ದಮತೋರಬೇಕೆಂಬ ಮೋಹ ಇಂದ್ರಿಯಾದಿಗಳನ್ನು ಪರಿಗ್ರಹಿಸದೆ ಶಿಷ್ಟನಾ

ಗಿರುವೆನೆಂಬ ಮದ ಇಂದ್ರಿಯಾದಿಗಳನ್ನು ಗೆಲಿಯುವೆನೆಂಬ ಕಾಮ. ಇಂದ್ರಿಯಗಳ ಮೇಲೆ ಕ್ರೋಧ ಮತ್ಸರ ನಟನೆ ಮಾತ್ರಕ್ಕೆ ಸಗುಣ ಸುಗುಣಿಯಲ್ಲಿ ಸುಮಾರ್ಗಾವಲಂಬಿಯಾಗಿರುವವು. ಸುಗುಣಿಯ ಸಂಸಾರವಿಂತಿಹುದು. ಸಾತ್ವಿಕವೇ ಸಂಪತ್ತು ಸರ್ವಭೂತ ಸಮತ್ವ ವೈರಾಗ್ಯ ನಿತ್ಯಸಂತುಷ್ಟಿ. ಶಮೆ, ದಮೆ ಶಾಂತಿಗಳೇ ಬಂಧುಬಳಗಗಳಾಗಿ ಮುಕ್ತಿ ಕಾಂತೆಯೇ ಸತಿಯಾಗಿ ಶಿವಭಕ್ತಿಯೇ ಹೃದಯದ ಆಹಾರವಾಗಿ ಪರಿಣಮಿಸಿ ಶಿವಭಕ್ತಿಯಲ್ಲಿಯೇ ನಿರತನಾಗಿ ಹೃದಯದಲ್ಲಿ ಶಿವನನ್ನಗಲದೆ ಇರುವ ಆಧ್ಯಾತ್ಮಿಕ ಸುಗುಣಿಯ ಸಂಸಾರವು ಆದರ್ಶ ಪ್ರಾಯವಾಗಿಹುದು. ಅಂತೆಯೇ ನಿಜಗುಣರು: ಮುಕ್ತಿಕಾಂತೆಯ ರತಿ। ಸುಮ್ಮನಾಗುವದೇ ಪರ ! ಯುಕ್ತಿಯರಿದು ಕೂಡುವರಿಗಲ್ಲದಿಂತು ॥ ಎಂದು ಹೇಳಿಕೊಂಡಿದ್ದಾರೆ. ಇಂತಪ್ಪ ಸಗುಣ ಸುಗುಣಿಯು ನಿರ್ಗುಣಿಯಾಗಿ ಸುಖಸಾಮ್ರಾಜ್ಯದಲ್ಲಿ ಲೋಲಾಡುವನು. ಆ ಸುಖವೇ ಪರಮ ಸುಖ; ನಿಜಸುಖ. ಏನೊಂದರಿಯದೆ ನಾನೆಂದರಿದು ಅರುವಿನ ಕುರುಹ ತೋರದಿರುವ ಸುಖಪಡುವ ಆ ಭಾಗ್ಯ ಅದೆಂದಿಗೆ ? ಇದು ಅಲೌಕಿಕ ಮಾತಾಯಿತು.

ಇನ್ನು ಲೌಕಿಕದಲ್ಲಿ ಸಗುಣದಿಂ ಪ್ರಯೋಜನವುಪ್ಪುದೆಂಬಂತೆನೆ ಶಾರೀರಕ, ಬೌದ್ಧಿಕ, ಧಾರ್ಮಿಕ ಗುಣಗಳು. ಸಗುಣಿಯಲ್ಲಳವಡಿಸಿ ದೇಶೋನ್ನತಿಗೆ ಹೆಣಗಾಡುವನೆಂಬುದು ಕಂಡರಿದ ಮಾತಾಗಿಹುದು. ಎಂತೆನೆ, ಸ್ವಾರ್ಥಮಯ ಜೀವನವು ಮಾನವನ ಸೃಷ್ಟಿಯ ವಿಘಾತವೆಂದೂ ಶಾರೀರಿಕ ಸಂಪತ್ತು ಪಡೆದು ಕೋಣನಂತೆ ಕೊಬ್ಬಿದರೆ ತೀರದೆಂದೂ, ಗೂಬೆಯಂತೆ ಬಹುದಿನ ಬಾಳಿ ಪ್ರಯೋಜನವಿಲ್ಲವೆಂದೂ ಅರಿತು ತನ್ನ ಶಕ್ತಿ ಪರಹಿತಕ್ಕಾಗಿ ವಿನಿಯೋಗಿಸುವನು. ತನ್ನಷ್ಟಕ್ಕೆ ತಾನು ಸದಾಚಾರಿಯಾಗಿ ಸದ್ಗುಣಿಯಾಗಿ ಬಾಳುವನಲ್ಲದೆ ತನ್ನ ಕುಟುಂಬವನ್ನೂ ಸಮಾಜವನ್ನೂ ದೇಶವನ್ನೂ ನೈತಿಕಮಟ್ಟಕ್ಕೇರಿಸಲು ಅಹೋರಾತ್ರಿ ಹೆಣಗಾಡುವನು. ಇಂಥ ಸುಗುಣಿಗಳ ಬೀಡಾದ ಭರತಭೂಮಿಯಲ್ಲಿ ಕಾಲ ಕಾಲಕ್ಕೆ ಧಾರ್ಮಿಕ ವಿಭೂತಿಗಳು ಅವತರಿಸಿ ಜಗತ್ತಿನ ಕಲ್ಯಾಣಕ್ಕೆ ಹೆಣಗಾಡಿರುವರು. ಹೆಣಗಾಡುತ್ತಿರುವರು. ಈ ಸಂಪತ್ತಿನಿಂದಲೇ ನಮ್ಮೀ ದೇಶವು ಉನ್ನತ ಪಥದಲ್ಲಿರುವದೆಂದು ಗುಪ್ತವಾಗಿದ್ದು ದೇಶಕ್ಕಾಗಿ ಹೆಣಗಾಡುತ್ತಿರುವ ಮಹಾವಿಭೂತಿಗಳು ವಾಚಕ ವೃಂದಕ್ಕೆ ಗೊತ್ತಿದ್ದು ತಿಳಿಸುವ ಹವ್ಯಾಸ ಮಾಡುವದು ಅನವಶ್ಯಕ.

## ದುರ್ಗುಣ

ಸಗುಣದಲ್ಲಿ ದುರ್ಗುಣವೆಂತೆಂದೊಡೆ, ಅರಿಷಡ್ವರ್ಗಗಳ ಚಲನೆಯೆಂದು ಹೇಳಬಹುದು. ಹಾಗೂ ದುರ್ಗುಣದಲ್ಲಿ ತಾಮಸಗುಣ, ರಾಜಸಗುಣ ಎಂಬ ಎರಡು ಪ್ರಕಾರಗಳು ಎಂತೆನೆ,

ತಾಮಸ ಗುಣಃ— ಮಂದಮತಿ, ಮೋಸ, ಜಡಭಾವ, ಮರುವಿನ ನಿದ್ರೆ, ಆಲಸ್ಯ ಇವೆಲ್ಲ ಭಾವಗಳನ್ನು ತಾಳಿ ತನ್ನ ತಾನರಿಯದಿರ್ಪುದೇ ತಾಮಸ ಗುಣ.

ರಾಜಸ ಗುಣಃ— ಮದ, ಮೋಹ, ಲೋಭ, ಮಾತ್ಸರ್ಯ, ಯುವತಿಯರಾಶೆ, ಕಪಟರೀತಿ, ಜಗಳ, ನಿಷ್ಠುರ, ಕರ್ಕಶವೃತ್ತಿ, ನಿರ್ದಯ ಇವೆಲ್ಲವುಗಳಿಂದೊಡಗೂಡಿ ತನ್ನ ತಾನರಿಯದಿರ್ಪುದೇ ರಾಜಸಗುಣ.

ಇಂತಪ್ಪ ದುರ್ಗುಣದಿಂದೊಡಗೂಡಿ ತಾನಾರು? ತನ್ನ ನಿಜ ಸ್ಥಿತಿ ಏನು? ತನಗೀ ಜನ್ಮ ಬರಲು ಕಾರಣವೇನು? ಎಂಬ ಸ್ಥಿತಿಗತಿಗಳನ್ನು ವಿಚಾರಿಸದೆ ಅನೇಕ ಭೇದಾಭಿಪ್ರಾಯವನ್ನು ತಾಳಿ ನಾನು ಬೇರೆ ನೀನು ಬೇರೆ. ಇವಳು ಸ್ತ್ರೀ, ಅವನು ಪುರುಷ. ನಾನು ಶ್ರೇಷ್ಠ, ಅವನು ಕನಿಷ್ಠ. ನಾನು ಧನಿ, ಅವನು ದರಿದ್ರ ಎಂದು ತೋಳಲುತ್ತ ಅಹಂಕಾರವೆಂಬ ಹುಚ್ಚು ಮದ್ದು ತಲೆಗೇರಿ ಪುಣ್ಯ ಪಾಪಂಗಳೆಂಬ ಸಂಕೋಲೆಯೊಳಗೆ ಸಿಲುಕಿ ನಾನಾ ಕಲ್ಪನೆಗಳನ್ನು ಕಲ್ಪಿಸಿಕೊಂಡು ಅಶುಚಿ, ಅನಿತ್ಯ, ಅನಾತ್ಮ, ಅಸುಖ ಜಾಲದೊಳಗೆ ಸಿಕ್ಕು ಪಂಚ ಕ್ಲೇಶಗಳಿಂ ಘಾಸಿಯಾಗಿ ಈಷಣತ್ರಯದಿಂದ ಬಿಗಿಯಲ್ಪಟ್ಟು ಜಾತಿ ಕುಲ ಇತ್ಯಾದಿ ಭ್ರಮೆಯಿಂದ ಭ್ರಾಂತಿಸಿ ದಶವ್ಯಸನದಿಂ ಹಸಗೆಟ್ಟು ಅಷ್ಟಮದದಿಂದ ಮದಿಸಿ ಮರುಳಗೊಂಡು ಉಃಹತಿಗಳಿಗೊಳಗಾಗಿ ಅನನುಭೂತದಿಂದ ಯಾತನಾಶರೀರವಂ ಪಿಡಿದು ಕೆಂಗಣ್ಣು ಕೋರದಾಡೆಯಿಂದುಕ್ತರಾದ ರಕ್ತ ವಸ್ತ್ರಾಭರಣದಿಂದಾಚ್ಛಾದಿತರಾದ ರಕ್ತ ಚಂದನಾಪೂಷಿತರಾದ ಉಗ್ರ ಕಂಟಕ, ಅತ್ಯುಗ್ರ ಕಂಟಕ, ಉಗ್ರ ಚಂಡ ಇತ್ಯಾದಿ ಯಮದೂತರ ಅತಿ ಭಯಂಕರವಾದ ಕರದೊಳಗೆ ಸಿಲುಕಿ ಯಮಧರ್ಮನ ಸನ್ನಿಧಿಯಲ್ಲಿ ಚಿತ್ರಗುಪ್ತರಾಣತಿಯಂತೆ ನರಕಾರ್ಣವದಲ್ಲಿ ಬಿದ್ದು ರಾಟಾಳದ ಭಾಂಡದಂತೆ ಮದ್ದಲಿಯೊಳಗಿನ ಇಲಿಯಂತೆ ಇಹಪರಕ್ಕೆ ತಿರಗಾಡುತ್ತ ೮೪ ಲಕ್ಷ ಜೀವರಾಶಿಯಲ್ಲಿ ಜನ್ಮ ಹೊಂದುತ್ತ ರಾಹು ಮುಸುಕಿದ ಚಂದ್ರಮಂಡಲದಂತೆ ತೋರುತ್ತಿರುವದು.

ಇದು ಅಲೌಕಿಕ ಮಾತಾಯಿತು. ಇನ್ನು ಲೌಕಿಕದಲ್ಲಿಯೂ ಜಂಬದ ಕೋಳಿಯಂತೆ ಜಾತ್ಯಾಂಧರಾಗಿ ತಿರುಗುವ ದುರ್ಗುಣಿಗಳಿಂದ ತನ್ನ ಕುಟುಂಬಕ್ಕೂ, ತನ್ನ ದೇಶಕ್ಕೂ ಯಾವ ಹಿತವೂ ಆಗದು. ಎಲ್ಲಿಯ ವರೆಗೆ ಸಂಕುಚಿತ ದೃಷ್ಟಿಯು ಮಾನವನಲ್ಲಿರುವದೋ ಅಲ್ಲಿಯ ವರೆಗೆ ದೇಶಕ್ಕೆ ಸುಖವಾಗದು. ಲೋಭಿಯಾಗಿ ಎಲ್ಲಿಯ ವರೆಗೆ ತನ್ನಲ್ಲಿದ್ದುದನ್ನು ಎರಡನೆಯವರಿಗೆ ಕೈಚಾಚಿ ನೀಡುವ ಪ್ರವೃತ್ತಿ ಎಲ್ಲಿಯ ತನಕ ವ್ಯಕ್ತಿಯಲ್ಲಿ ಸಮಾಜದಲ್ಲಿ ರಾಷ್ಟ್ರದಲ್ಲಿ ನೆಲೆಗೊಳ್ಳುವದಿಲ್ಲವೋ ಅಲ್ಲಿಯ ವರೆಗೆ ದೇಶಕ್ಕೆ ಹಿತವಾಗದು. ಮಾತ್ಸರ್ಯದಿಂದ ಪರರಿಗೆ ಅಹಿತ ಬಯಸುವ ಪರರ ಸೊತ್ತು ಅಪೇಕ್ಷಿಸುವ ನಿರ್ದಯನಿಂದ ರಾಷ್ಟ್ರೋದ್ಧಾರವೆಂದಿಗೂ ಆಗದು. ಇದರಂತೆ ದುರ್ಗುಣದಿಂದವನರತನಾದ ಮಾನವನಿಂದ ಅವನ ಕುಟುಂಬವು ಅದೆಂತು ಸುಖಶಾಂತಿ ಹೊಂದುವದು ? ರಾಜಸ ತಾಮಸ ಗುಣಿಗಳು ಊರೂರಿಗೆ ಸಮಾಜ ಸಮಾಜಕ್ಕೆ ಕುಟುಂಬ ಕುಟುಂಬಕ್ಕೆ ದುರ್ಗುಣ ಜಾಡ್ಯವು ಅಂಟಿಕೊಂಡು ಅಸುಖ ಅಶಾಂತಿ ವಾತಾವರಣವು ತಾಂಡವವಾಡುತ್ತಿರುವದು ಇದು ಕಡಿಮೆಯಾಗಿ ಎಂದು ನಾವು ನಮ್ಮ ದೇಶ, ನಮ್ಮ ಸಮಾಜದ ಹಿತಚಿಂತನೆ ಮಾಡುವೆವೋ ಅಂದೇ ನಮ್ಮ ನಾಡಿನೇಳಿಗೆಯಾಗುವದರಲ್ಲಿ ಸಂದೇಹವಿಲ್ಲ. ಪರಹಿತ, ಪರಚಿಂತೆ, ಸಮಾಜಸೇವಾ ಗುಣಗಳಿಂದಳವಟ್ಟು ಆರ್ಥಿಕ, ಶಾರೀರಿಕ, ಬೌದ್ಧಿಕ, ನೈತಿಕ ಹಾಗೂ ಧಾರ್ಮಿಕ ಉನ್ನತಿಗೆ ಹೆಣಗಾಡತಕ್ಕಂಥ ವಿಶಾಲ ಭಾವನೆಯ ದಿವ್ಯ ಜ್ಯೋತಿಯ ಬೆಳಗಿನಲ್ಲಿ ನಲಿಯುವ ನಾಡೇ ನಿಜವಾದ ನಾಡು. ಅದುವೇ ಸುಖದ ನೆಲೆವೀಡು. ಅದುವೇ ಪಾವನ ಕ್ಷೇತ್ರ; ತೀರ್ಥ. ಜಗತ್ತೇ ಒಂದು ಕುಟುಂಬದಂತೆ ವಿಶಾಲಭಾವನೆ ತಾಳ್ದ ನಾಡಿಗೆ ಡೊಂಕು ಎಲ್ಲಿಂದ ಬಂದೀತು ? ಭೂಷಣಪ್ರಾಯವಾಗಿದ್ದ ಗುಣದಿಂದ ಮಾನವರ ಭೂಷಣ. ಮಾನವರ ಭೂಷಣವೇ ಸಮಾಜದ ಭೂಷಣ. ಸಮಾಜ ಭೂಷಣವೇ ದೇಶದ ಭೂಷಣ. ದೇಶದ ಭೂಷಣವೇ ಆದರ್ಶಪ್ರಾಯವಾಗಿ ಜಗಜ್ಯೋತಿಯಾಗಿ ಆ ಜ್ಯೋತಿಯಲ್ಲಿ ನಮ್ಮೀ ಭಾರತ ಪುಂಜವು ಜಗತ್ತಿನಲ್ಲಿ ಬೆಳಗಲಿ.

# ಘನವಿಚಾರಗಳು

(ಲೇ:- ಶ್ರೀ ರು. ಷ. ಮಟ್ಟೀಕಲ್ಲಿ, ಬಿ. ಏ., ರಿಟಾಯರ್ಡ ಸಬ್‌ರಜಿಸ್ಟ್ರಾರ, ಬೆಳಗಾವಿ)

---

೧. ಮಾನವನು ಅಪವಿತ್ರ ಹೃದಯದೊಂದಿಗೆ ದೇವನ ಪವಿತ್ರ ಸಿಂಹಾಸನದ ಎದುರಿಗೆ ನಿಲ್ಲಲಾರ, ಎಂದು ಜಗತ್ತಿನಲ್ಲಿಯ ಎಲ್ಲ ಧಾರ್ಮಿಕ ಪಂಥಗಳು ಸಾರಿ ಹೇಳುತ್ತವೆ.

೨. ಮಾನವನ ಅಸಹಾಯತೆಯನ್ನು ಸಂಪೂರ್ಣವಾಗಿ ಅರಿತು, ದೇವನನ್ನು ನಂಬಿ ನೆನೆಯುವದೇ ಪ್ರಾರ್ಥನೆ.

೩. ಮಾನವನಿಗೆ ಯಾವದೂ ಸಾಧ್ಯವಿಲ್ಲ; ದೇವನಿಗೆ ಯಾವದೂ ಅಸಾಧ್ಯವಿಲ್ಲ.

೪. ಮಾನವನು ದೇವರ ಕೈಯ್ಯಲ್ಲಿಯ ಬೊಂಬೆ; ಒಂದು ಹುಲ್ಲು ಕಡ್ಡಿ. ಅವನು ತನ್ನ ಮನಬಂದಂತೆ ಊದಿ ಹಾರಿಸಬಲ್ಲ. ಕುಣಿಸಬಲ್ಲ. ನಾವು ಅವನ ಇಚ್ಛೆಯನ್ನು ವಿರೋಧಿಸಲಾರೆವು.

೫. ದೇವರು ತನ್ನ ಭಕ್ತನನ್ನು ಪರಿಪರಿಯಿಂದ ಪರೀಕ್ಷಿಸುವನು. ಆದರೆ ತಾಳ್ಮೆ ಮೀರುವ ವರೆಗೆ ಮಾತ್ರ ಪರೀಕ್ಷಿಸುವದಿಲ್ಲ.

೬. ದೇವರು ತಾನು ಆಶೀರ್ವದಿಸಬೇಕೆಂಬ ಮಾನವನನ್ನು, ಚೆನ್ನಾಗಿ ವರೆಗೆ ಹಚ್ಚಿ ಪರೀಕ್ಷಿಸುವನು.

೭. ದೇವರು ಅನಾಥರ ನಾಥನು. ತನ್ನ ಮಾನವ ಶಕ್ತಿಯಿಂದ ಸಹಾಯ ಹೊಂದಲು ಹೆಮ್ಮೆಪಡುವ ಮಾನವರಿಗೆ, ಅವನು ತನ್ನ ಸಹಾಯ ವನ್ನು ನೀಡಲಾರನು.

೮. ಪರಿಶುದ್ಧವಾದ ಭಕ್ತಿಯಿಂದೊಡಗೂಡಿದ, ಹೃದಯದಿಂದ ಹೊರ ಹೊಮ್ಮುವ ದೇವರ ನಾಮದಲ್ಲಿ ಅದ್ಭುತ ಶಕ್ತಿ ಇರುತ್ತದೆ.

೯. ಅರ್ಥವನ್ನರಿಯದೇ ಪಠಿಸಿದ ಮಂತ್ರವು ವ್ಯರ್ಥವಾದುದು.

೧೦. ಚಪ್ಪರವಿಲ್ಲದ ಮನೆಯಲ್ಲಿ ಮಳೆ ನುಗ್ಗುವಂತೆ, ಬಿಗಿಹಿಡಿಯದ ಮನಸ್ಸಿನಲ್ಲಿ ಕಾಮವು ನುಗ್ಗುವದು.

೧೧. ಆಶೆಯೇ ದಾಸತ್ವ; ನಿರಾಶೆಯೇ ಈಶತ್ವ.

೧೨. ನಿಸರ್ಗದೇವಿಯು ಪರಮಾತ್ಮನ ಅನಂತ ಶಕ್ತಿಯ ಆನಂದದ ಪಡಿನೆಳಲು.

೧೩. ಹಿಗ್ಗು ಹಿಗ್ಗು ಎಂದು ಹಿಗ್ಗಿತು ಜೀವ; ಹಿಗ್ಗು ಹಿಗ್ಗು ಎಂದು ಹಿಗ್ಗಿದನು ದೇವ. ಹಿಗ್ಗಿನ ನೆಲೆಯೇ ಶಿವಜೀವರ ಐಕ್ಯ? ಈ ಹಿಗ್ಗಿನ ಶೆಲೆಯೇ ಬ್ರಹ್ಮಾನಂದ. ಈ ಆನಂದವು ಹಸುಗೂಸಿನ ಹುಸಿನಗೆಯಂತೆ, ವಸಂತ ಮಾಸದ ಅರೆಬಿರಿದ ಮಲ್ಲಿಗೆ ಮೊಗ್ಗುಗಳ ಇನಿದಾದ ಕಂಪನಂತಿದೆ. ಆದುದರಿಂದಲೇ ನಮ್ಮ ಶರಣರು—

'ಕೂಡಲಸಂಗನ ನಿಲವು ನನೆಯೊಳಗಣ
ಕಂಪಿನಂತಿದೆ' ಎಂದು ಉಸುರಿದ್ದಾರೆ.

೧೪. ಬಳಸಿದಂತೆ ಅಳಿಯದೇ ಬೆಳೆಯುವದೆಂದರೆ ಪ್ರೀತಿಯೊಂದೇ. ಪ್ರೀತಿ ಸಾಕ್ಷಾತ್ ಅಮೃತ. ಸಾವಿಲ್ಲದುದು. ಪ್ರೀತಿಯ ಬಿತ್ತಿ ಬೆಳೆಕೊಳ್ಳುವ ಹೊಲವಾಗಬೇಕು ಬಳಗ.

# ಆತ್ಮಶಾಂತಿ !

೧

ದೇಹಮಂದಿರದಿ ಸತತ ಬೆಳಗುತಿದೆ
ಪ್ರಖರ ಪ್ರಾಣಲಿಂಗ,
ಶಿವನ ಕಾಣುವೊಡೆ, ನಮಗೆ ಬೇಕಯ್ಯ
ಶುದ್ಧ ಅಂತರಂಗ !

೨

ಎಲ್ಲ ಮರೆತವರು ಅಲ್ಲಿ ಕಾಣುವರು
ಲಿಂಗ-ರೂಪ-ರಂಗ ;
ಜನ್ಮಚಕ್ರವನು ತಡೆದು ಹಿಡಿಯುವರು
ಪಡೆದು ಶಿವನಸಂಗ !

೩

ಅಲ್ಲಿ ಬೆಳಗುತ್ತಿದೆ ಮೂರುಲೋಕಗಳ
ಶಕ್ತಿಯಾಂತ ಕಾಂತಿ ;
ಅಲ್ಲಿ ನೆಲಸಿಹುದು ಚಂದ್ರ-ಚಿಕ್ಕೆಗಳ
ಪರಮ-ಆತ್ಮ-ಶಾಂತಿ !

೪

ದೇಹಮಂದಿರದಿ ಸತತ ಬೆಳಗುತಿದೆ
ಪ್ರಖರ ಪ್ರಾಣಲಿಂಗ ;
ಶಿವನ ಕಾಣುವೊಡೆ ನಮಗೆ ಬೇಕಯ್ಯ
ಶುದ್ಧ ಅಂತರಂಗ !

—ಶ್ರೀ ಬಿ. ಬಿ. ಹಿಂಗಮಿರೆ,
ರಾಜಾಪೂರ (ಕೃಷ್ಣಾತೀರ)

# ಶಿವಾನುಭವ ಪತ್ರಿಕೆಯು ಕನ್ನಡನಾಡಿಗೂ ವೀರಶೈವ ಸಮಾಜಕ್ಕೂ ಸಲ್ಲಿಸಿದ ಅಮೋಘ ಸೇವೆಯು.

(ಲೇ.:— ಚಂದ್ರಶೇಖರಯ್ಯ ಶಿವರುದ್ರಯ್ಯ ಶಿವಪ್ಪಯ್ಯನಮಠ ಸಾ॥ ಚೊಳಚಗುಡ್ಡ)

---

ಶಿವಾನುಭವ ಪತ್ರಿಕೆಯು ಸನ್ನ ೨೬ನೇ ಇಸ್ವಿಯಲ್ಲಿ ಜನನವಾಗಿ ಇಲ್ಲಿಯ ವರೆಗೂ ಸುಮಾರು ೩೦-೩೧ ವರ್ಷಗಳ ಲಾಗಾಯತು ನಾಡ ಸೇವೆಯನ್ನು ಮಾಡುತ್ತ ಬಂದಿದೆ. ಇದು ವಿಜಾಪುರದ ಡಾ. ರಾ॥ ಬ॥ ಹಳಕಟ್ಟಿಯವರ ಸಂಪಾದಕತ್ವದಲ್ಲಿ ತನ್ನ ಸೌರಭವನ್ನು ಸರ್ವ ಕಡೆಗೂ ಪಸರಿಸಿ ಶಿವಶರಣರ ವಚನ ವಾಙ್ಮಯವನ್ನು ಬಿತ್ತರಿಸಿ ಎತ್ತರಿಸಿದೆ. ಶಿವ ಶರಣರು ವೀರಶೈವ ಸಮಾಜದ ಉತ್ಕರ್ಷ ಉನ್ನತಿಯ ಸಲುವಾಗಿ ತಮ್ಮ ಪ್ರಾಣವನ್ನು ಸಹ ಪಣಕ್ಕೆ ಹಚ್ಚಿ ನಮಗೆಲ್ಲ ಆದರ್ಶರಾಗಿ ಬಾಳಿ ಬಯಲಾದರೆಂಬುದನ್ನು ಈ ಪತ್ರಿಕೆಯು ಅರುಹಿದೆ. ೩೦-೩೧ ವರ್ಷಗಳಲ್ಲಿ ಈ ಪತ್ರಿಕೆಯಿಂದ ಅನೇಕ ಮಹತ್ವದ ಕಾರ್ಯಗಳಾಗಿದ್ದರೂ ಅವುಗಳನ್ನೆಲ್ಲ ಸ್ಥಳ ಸಂಕೋಚದ ಮೂಲಕ ವಿವರಿಸದೆ ಮಹತ್ವದ ಕೆಲವುಗಳನ್ನು ಮಾತ್ರ ಇಲ್ಲಿ ವಿವರಿಸಿದೆ.

ಶಿವಾನುಭವ ಪತ್ರಿಕೆಯು ೧೯೨೬ ರಲ್ಲಿ ಜನನವಾದುದೇನೋ ನಿಜ. ಆದರೆ ಅದರ ಹಿನ್ನೆಲೆಯು ಬಹುದೂರ ಹೋಗುವದು. ೧೯೨೬ ರಕ್ಕಿಂತ ಹಿಂದೆ ಅಂದರೆ ಸುಮಾರು ೩೦ ವರ್ಷ ಸಂಪಾದಕರ ದುಡಿಮೆಯು ಒಬ್ಬಳಿಕೆಯೋ ಈ ಪತ್ರಿಕೆಯ ಉದಯಕ್ಕೆ ಕಾರಣವೆಂದರೆ ಅತಿಶಯೋಕ್ತಿಯೆನಿಸದು. ಹಿಂದೂ ಧರ್ಮದ ಅನೇಕ ಮತಪಂಥಗಳ ಸ್ವತಂತ್ರ ಧರ್ಮ ಗ್ರಂಥಗಳು ಪ್ರಚಲಿತವಿದ್ದು ಅವುಗಳ ತತ್ವಗಳನ್ನು ತಿಳಿಯಲು ಸಾಧ್ಯವಿರುವಂತೆ ನಮ್ಮ ವೀರಶೈವ ಧರ್ಮತತ್ವಗಳನ್ನು ತಿಳಿಯಲು ಪ್ರಚಲಿತ ಗ್ರಂಥಗಳು ಅವೆಯೋ? ಇದ್ದರೆ ಅವು ಯಾವು? ಇರದಿದ್ದರೆ ಸಂಶೋಧನೆಯಿಂದ ದೊರೆಯಬಹುದೋ ಹ್ಯಾಗೆ, ಎಂಬ ಭಾವಾಭಾವಗಳ ವಿಚಾರ

ತರಂಗಗಳು ಯಾವಾಗಲೂ ಮಾಧ್ಯಮಿಕ ವಿದ್ಯಾರ್ಥಿದೆಶೆಯಲ್ಲಿದ್ದಾಗ್ಗಿಯೇ ಸಂಪಾದಕರ ತಲೆಯಲ್ಲಿ ಸುಳಿದಾಟವು ನಡದೇ ಇರುತ್ತಿತ್ತು. ಸುಪ್ತಾವಸ್ಥೆಯಲ್ಲಿದ್ದ ಅವರ ಧಾರ್ಮಿಕ ಜಿಜ್ಞಾಸೆ, ಉಚ್ಚಶಿಕ್ಷಣ ಪಡೆಯುತ್ತಿರುವಾಗ್ಗಿ ಹೆಚ್ಚಾಗಿ ಅಂಕುರಿಸಿ ಗ್ರಂಥಗಳ ಸಂಶೋಧನಕ್ಕೆ ಕಾರ್ಯೋನ್ಮುಖ ಮಾಡಿತು. ಅಂದಿನಿಂದಲೇ ಇವರ ಗ್ರಂಥ ಸಂಶೋಧನೆಗೆ ಆರಂಭವಾಯಿತು. ಮೊಟ್ಟ ಮೊದಲು ಇವರಿಗೆ ದೊರೆದ ಗ್ರಂಥಗಳೆಂದರೆ ಪ್ರಭುಲಿಂಗಲೀಲೆ ಮತ್ತು ಗಣಭಾಷ್ಯ ರತ್ನಮಾಲಾ ಇವೆರಡು ಗ್ರಂಥಗಳನ್ನು ಅವರು ಆಮೂಲಾಗ್ರ ನೋಡಿದನಂತರ ವೀರಶೈವ ಧರ್ಮತತ್ವಗಳ ಬಗ್ಗೆ ಮಂದಪ್ರಕಾಶವು ಇವರಿಗೆ ಮುಂದೆ ಕಾಣಹತ್ತಿತು. ಅಂದಿನಿಂದಲೇ ಇವರ ವೀರಶೈವ ಧರ್ಮ ಗ್ರಂಥಗಳ ಸಂಶೋಧನೆಯು ಭರದಿಂದ ಸಾಗಿತು.

೧೯೦೪ ರಲ್ಲಿ ಸಂಪಾದಕರು ವಕೀಲಿ ವೃತ್ತಿಯನ್ನು ಕೈಕೊಂಡಮೇಲೆ ತೀವ್ರಗತಿಯಿಂದ ಗ್ರಂಥಗಳ ಸಂಶೋಧನೆಯಲ್ಲಿ ಮಗ್ನರಾದರು. ಹಲಕೆಲವು ಕೋರಿ ಕಾಗದದ ಮತ್ತು ತಾಡವಾಲೆಗಳ ಗ್ರಂಥಗಳನ್ನು ವಿಜಾಪುರ ಜಿಲ್ಹೆಯಲ್ಲಿ ಮತ್ತು ಜಿಲ್ಹೆಯ ಹೊರತಾಗಿ ಬೇರೆಬೇರೆ ಭಾಗಗಳಲ್ಲಿ ಶೋಧ ಮಾಡಿ ದೊರೆದ ಗ್ರಂಥಗಳನ್ನು ಸಂಗ್ರಹಿಸಲು ಪ್ರಯತ್ನಪಡಹತ್ತಿದರು. ಇವರ ಸಂಶೋಧನೆಯು ೧೯೨೦ ರ ವರೆಗೆ ನಡೆದು ಸುಮಾರು ಒಂದು ಸಾವಿರ ಗ್ರಂಥಗಳು ಸಂಗ್ರಹಿಸಲ್ಪಟ್ಟವು. ಇವುಗಳಲ್ಲಿ ಕೆಲವು ಹಣಕೊಟ್ಟು ಸಹ ಕೊಳ್ಳಲ್ಪಟ್ಟವು. ಇವುಗಳ ಪರಿಶೀಲನೆಯಿಂದ ಶ್ರೀಮದ್ಬಸವಾದಿ ಪ್ರಮಥರು ಆಚರಿಸಿದ ಷಟ್‌ಸ್ಥಲಾಚರಣೆಗಳೇ ಮಹತ್ವವಾದವುಗಳೆಂಬದು ಕಂಡುಬಂದಿತು. ಆದ್ದರಿಂದ ದೊರೆದ ವಚನಗ್ರಂಥಗಳಲ್ಲಿಯ ವಿಷಯಗಳನ್ನು ಸರಿಯಾಗಿ ಕ್ರಮಗೊಳಿಸುವದರಲ್ಲಿ ಇವರಿಗೆ ಬಹಳಕಾಲ ಹಿಡಿಯಿತು. ಇವರ ಸಂಶೋಧನೆಯ ಫಲವಾಗಿಯೇ ಮೊಟ್ಟಮೊದಲು ವಚನಶಾಸ್ತ್ರಸಾರ ಭಾಗ ೧ ಎಂಬ ಗ್ರಂಥ ಕುಸುಮವು ಅರಳಿ ಸರ್ವಕಡೆಗೂ ತನ್ನ ಸದ್ವಾಸನೆಯನ್ನು ಬೀರಿತು. ಈ ಪ್ರಕಾರದ ಹಿನ್ನೆಲೆಯೇ ಇಂದು ನಮ್ಮೆಲ್ಲರ ಕಣ್ಮುಂದೆ ಕಾಣುತ್ತಿರುವ ಮತ್ತು ನಲ್ಮೆಯಿಂದ ನಲಿಯುತ್ತಿರುವ ಶಿವಾನುಭವ ಪತ್ರಿಕೆಯ ಉದಯದ ಆರಂಭಕ್ಕೆ ಕಾರಣ.

## ಶಿವಾನುಭವ ಪತ್ರಿಕೆಯ ಪ್ರಾರಂಭ

ಶಿವಾನುಭವ ಎಂಬ ಹೆಸರಿನ ಮಾಸಪತ್ರಿಕೆಯು ತಾ. ೧-೨-೧೯೨೬ ನೇ ದಿವಸ ಪ್ರಕಟವಾಯಿತು. ಇದು ಮೊದಲು ೨-೩ ವರ್ಷಗಳ ವರೆಗೆ

ತ್ರೈಮಾಸಿಕವಾಗಿ ಹೊರಟಿತು. ಮುಂದೆ ಮಾಸಪತ್ರಿಕೆಯಾಗಿ ಹೊರಡಲ್ಪಟ್ಟಿದ್ದು ಇಲ್ಲಿಯವರೆಗೂ ಮಾಸಪತ್ರಿಕೆಯಾಗಿಯೇ ಉಳಿದಿದೆ.

## ವಚನಗ್ರಂಥಗಳು

ಈ ಪತ್ರಿಕೆಯ ದ್ವಾರಾ ಶ್ರೀ ಬಸವಣ್ಣ ಚನ್ನಬಸವಣ್ಣ, ಪ್ರಭುದೇವರು, ಸಿದ್ಧರಾಮೇಶ್ವರ, ಗಣದಾಸಿ ವೀರಣ್ಣ, ಘನಲಿಂಗ ಮೊದಲಾದ ಅನೇಕ ಶರಣರ ವಚನಗ್ರಂಥಗಳು ಶುದ್ಧಪಡಿಸಿ ಪ್ರಕಟಿಸಲ್ಪಟ್ಟವೆ.

ಶೂನ್ಯ ಸಂಪಾದನೆ, ಮಹಾನುಭಾವ ಪ್ರಕಾಶಿಕೆ ಮತ್ತು ಪ್ರಾಣಲಿಂಗ ಜ್ಞಾನದರ್ಪಣ ಇವು ಸ್ವತಂತ್ರ ಗ್ರಂಥಗಳಾಗಿ ಅಚ್ಚುಹಾಕಲ್ಪಟ್ಟವೆ.

ಮಹದೇವಿಯಕ್ಕ, ಅಂಬಿಗರ ಚೌಡಯ್ಯ, ದೇವರದಾಸಿಮಯ್ಯ, ಸಕಳೇಶ ಮಾದರಸ, ಉರಿಲಿಂಗಪೆದ್ದಿ ಮತ್ತು ಮಡಿವಾಳ ಮಾಚಿದೇವ ಇವರೆಲ್ಲರ ವಚನಗಳು ಸ್ವತಂತ್ರ ಗ್ರಂಥಗಳಾಗಿ ಉಪಲಬ್ಧವಿದ್ದಿಲ್ಲ. ಅಲ್ಲಲ್ಲಿ ಹಲಕೆಲವು ದೊರೆತ ವಚನಗಳನ್ನು ಒಟ್ಟಿಗೆ ಕೂಡಿಸಿ ಸ್ವತಂತ್ರ ಗ್ರಂಥಗಳಂತೆ ಅವು ಅಚ್ಚುಹಾಕಲ್ಪಟ್ಟಿರುತ್ತವೆ.

## ವಚನಗ್ರಂಥಗಳಿಗೆ ಅರ್ಥ ಬರೆದದ್ದು.

೧. ದೇವರ ದಾಸಿಮಯ್ಯ, ೨. ಅಂಬಿಗರ ಚೌಡಯ್ಯ ಮತ್ತು ೩. ಉರಿಲಿಂಗಪೆದ್ದಿ ಇವುಗಳಿಗೆ ಅರ್ಥ ಬರಿಯಲ್ಪಟ್ಟವೆ.

## ಶಿವಾನುಭವ ಪಠ್ಯ ಪುಸ್ತಕಗಳು

ಇತ್ತಿತ್ತಲಾಗಿ ಕರ್ನಾಟಕದ ಅನೇಕ ಊರುಗಳಲ್ಲಿ ಶಿವಾನುಭವ ಸಂಘಗಳು ಮತ್ತು ಅಕ್ಕನ ಬಳಗಗಳು ಸ್ಥಾಪಿಸಲ್ಪಟ್ಟಿರುವದರಿಂದ ಅವುಗಳಲ್ಲಿ ಓದಲು ಮತ್ತು ಜನರಿಗೆ ಸುಲಭವಾಗಿ ಬೋಧಮಾಡಲು ಅನುಕೂಲವಾಗುವಂತೆ, ೧. ಪರಮಾತ್ಮನ ವಚನಗಳು, ೨. ಭಕ್ತಿಯ ವಚನಗಳು, ೩. ದೇವರದಾಸಿಮಯ್ಯನ ವಚನಗಳು, ೪. ಗಾಯನ ವಚನಗಳು, ೫. ಹೊಸಪದ್ಧತಿಯ ಬಸವಣ್ಣನವರ ವಚನಗಳು ಪಠ್ಯಪುಸ್ತಕಗಳಾಗಿ ರಚಿಸಲ್ಪಟ್ಟವೆ.

ಹೊಸಪದ್ಧತಿಯ ಬಸವಣ್ಣನವರ ವಚನ ಗ್ರಂಥದಲ್ಲಿ ಮನಸ್ಸಿನ ಮೇಲೆ ಒಳ್ಳೇ ಪರಿಣಾಮವಾಗುವಂತೆ ಹೊಸ ಮಾದರಿಯಲ್ಲಿ ಶೀರ್ಷಿಕೆಗಳು ಹಾಕಲ್ಪಟ್ಟು ೧೦೭ ಪಾಠಗಳಲ್ಲಿ ಕ್ರಮಗೊಳಿಸಲಾಗಿದೆ.

## ಗದ್ಯಗ್ರಂಥಗಳು

೧. ಬಸವೇಶ್ವರನ ತತ್ವಗಳು, ೨. ಶಿವಾನುಭವ ಸತ್ಯಮಾರ್ಗ, ೩. ಶಿವಯೋಗಿ ಘನಮಠಾರ್ಯರು ರಚಿಸಿದ ಕೃಷಿಜ್ಞಾನ ಪ್ರದೀಪಿಕೆ, ೪. ಲಿಂಗಪೂಜೆಯ ತತ್ವಗಳು ಮೊದಲಾದ ಗದ್ಯಗ್ರಂಥಗಳು ಪ್ರಕಟಿಸಲ್ಪಟ್ಟವೆ.

## ಐತಿಹಾಸಿಕ ಗ್ರಂಥಗಳು.

ವೀರಶೈವರಲ್ಲಿ ಅನೇಕ ರಾಜರು ಮತ್ತು ರಾಜಕಾರಣ ಧುರಂಧರರು ಆಗಿಹೋಗಿದ್ದು ಅವರ ಜೀವನ ಚರಿತ್ರೆಗಳು ಮತ್ತು ಅವರ ಕಾಲದ ಉಜ್ವಲ ಇತಿಹಾಸವು ಉಪಲಬ್ಧವಿದ್ದಿಲ್ಲ. ಈ ಕೊರತೆಯನ್ನು ದೂರಮಾಡಲು ಅನೇಕ ಗ್ರಂಥಗಳ ಸಹಾಯದಿಂದ ಚರಿತ್ರೆಗಳು ಸಂಗ್ರಹಿಸಿ ಬರಿಯಲ್ಪಟ್ಟವೆ. ಇವುಗಳಲ್ಲಿ ೧. ಬೀಳಗಿ ಅರಸುಗಳ ವಂಶಾವಳಿ ಎಂಬ ಉತ್ತಮ ಕಾವ್ಯ ಗ್ರಂಥವು, ೨. ರಾಜೇಂದ್ರನಾಮೆ (ಕೊಡಗು ಅರಸನು ಸಂಗ್ರಹಿಸಿದ ಕೊಡಗಿನ ಅರಸರ ಚರಿತ್ರೆ) ೩. ಕೆಳದಿರಾಯರ ವಂಶಾವಳಿ ಇವು ಮುಖ್ಯವಾದವುಗಳಾಗಿವೆ.

## ಧಾರ್ಮಿಕ ಪುರುಷರ ಚರಿತ್ರೆಗಳು

ಶಿವಶರಣರ ಚರಿತ್ರೆಗಳು ಭಾಗ ೧, ೨ ಮತ್ತು ೩, ಹೀಗೆ ಮೂರು ಭಾಗಗಳಾಗಿ ಮಾಡಲ್ಪಟ್ಟಿದ್ದು ಇವುಗಳಲ್ಲಿ ೧೫೦ ಜನ ಶಿವಶರಣರ ಚರಿತ್ರೆಗಳು, ಆಧುನಿಕ ಪದ್ಧತಿಯ ಮೇರೆಗೆ ಕ್ರಮಗೊಳಿಸಿ ಬರಿಯಲ್ಪಟ್ಟವೆ. ಮತ್ತು ಬಸವೇಶ್ವರನಿಂದ ೧೭ನೇ ಶತಮಾನದ ವರೆಗೆ ಆಗಿ ಹೋದ ಶ್ರೀಮನ್ನಿರಂಜನಾಧೀಶ್ವರರ ಚರಿತ್ರೆಗಳುಳ್ಳ ನಿರಂಜನವಂಶ ರತ್ನಾಕರವೆಂಬ ಗ್ರಂಥವು ಸಹ ಪ್ರಕಟಿಸಲ್ಪಟ್ಟಿದೆ.

## ಸ್ವತಂತ್ರ ಗ್ರಂಥಗಳು

ಮೊಗ್ಗೆ ಮಾಯಿದೇವರಿಂದ ಸಂಸ್ಕೃತದಲ್ಲಿ ರಚಿಸಲ್ಪಟ್ಟ ಶಿವಾನುಭವ ಸೂತ್ರ ಸಾರವೆಂಬ ಗ್ರಂಥವೆಂಬ ಗ್ರಂಥವು ಕನ್ನಡ ಟೀಕೆಯೊಂದಿಗೆ ಪ್ರಕಟಿಸಲ್ಪಟ್ಟಿದೆ. ಇಡೀ ವಚನಶಾಸ್ತ್ರದ ಸಂಕ್ಷಿಪ್ತ ವಿವರಣೆಯನ್ನೊಳಗೊಂಡಿರುವ ಶಿವಾನುಭವ ಶಬ್ದಕೋಶವೆಂಬ ಗ್ರಂಥವು ಪ್ರಕಟವಾಗಿದೆ. ಶಿವಾನುಭವ ಅಭ್ಯಾಸಿಗಳಿಗೆ ಇದು ಕೈದೀಪದಂತಿದೆ. ನೂರೊಂದು ಸ್ಥಲಗಳನ್ನೊಳಕೊಂಡ ಟೀಕಾತ್ಮಕವಾದ ಸಿದ್ಧಲಿಂಗ ಏಕೋತ್ತರ ಶತಸ್ಥಲವೆಂಬ ಗ್ರಂಥವು ಪ್ರಕಟಿಸಲ್ಪಟ್ಟಿದೆ.

ಮೇಲ್ಕಂಡ ಗ್ರಂಥಗಳಲ್ಲದೆ ಲಕ್ಕಣ್ಣದಂಡೇಶನು ರಚಿಸಿದ ಶಿವತತ್ವ ಚಿಂತಾಮಣಿ ಎಂಬ ಗ್ರಂಥದ ಭಾಗವಾಗಿರುವ ವರದಾನಿ ಗುಡ್ಡವ್ವೆಯ ಚರಿತ್ರೆ, ಅವಧೂತಗೀತೆ, ಹರಳಯ್ಯನ ತ್ರಿಪದಿ, ಆದಿಶೆಟ್ಟಿ ಪುರಾಣ, ನೇಮಯ್ಯನ ಜ್ಞಾನಯೋಗದ ಪದಗಳು, ಹರಿಹರಾಚಾರ್ಯರ ರಗಳೆಗಳು ಮುಂತಾದ ಅನೇಕ ಉಪಲಬ್ಧವಿಲ್ಲದ ಗ್ರಂಥಗಳು ಪ್ರಕಟವಾಗಿವೆ.

ವಚನಶಾಸ್ತ್ರಸಾರ ಭಾಗ ೧. ಪೂರ್ವಾರ್ಧ ಮತ್ತು ಉತ್ತರಾರ್ಧ ಭಾಗ೨, ಮತ್ತು ಭಾಗ ೩ ಪೂರ್ವಾರ್ಧ ಮತ್ತು ಉತ್ತರಾರ್ಧವೆಂಬ ಮೂರು ಗ್ರಂಥಗಳು ರಚಿಸಲ್ಪಟ್ಟು ಪ್ರಕಟವಾಗಿದ್ದು, ಇವು ವೀರಶೈವ ತತ್ವಜ್ಞಾನದ ಭಾಂಡಾರಗಳಾಗಿವೆ. ಇವುಗಳಲ್ಲಿ ಧರ್ಮದ ಸ್ವರೂಪ ಮತ್ತು ವೈಶಿಷ್ಟ್ಯವು ಎದ್ದು ಕಾಣುವದು. ಇವುಗಳನ್ನು ಸರಿಯಾಗಿ ಅಭ್ಯಾಸ ಮಾಡಿದರೆ ವೀರಶೈವ ಧರ್ಮದ ಜ್ಞಾನವು ಸಹಜವಾಗಿ ಆಗುವದರಲ್ಲಿ ಸಂದೇಹವಿಲ್ಲ. ಈ ಮೂರು ಭಾಗಗಳಲ್ಲಿ ಎಲ್ಲ ಶರಣರ ವಚನಗಳನ್ನು ಕ್ರೋಢೀಕರಿಸಿ ಸರಿಯಾದ ರೀತಿಯಿಂದ ಷಟ್‌ಸ್ಥಲಗಳಿಗೆ ಹೊಂದಿಕೆಯಾಗುವಂತೆ ಉತ್ತುಮೋತ್ತಮ ಶೀರ್ಷಿಕೆಗಳನ್ನು ಹಾಕಿ ಎಲ್ಲ ವಿಷಯಗಳನ್ನೊಳಗೊಳ್ಳುವಂತೆ ಕ್ರಮಗೊಳಿಸಲಾಗಿದೆ. ವಿಷಯಗಳಿಗನುಸರಿಸಿ ಶರಣರ ವಚನಗಳು ಸುಸಂಬಂಧ್ಧವಾಗಿ ಕ್ರಮಗೊಳಿಸಲ್ಪಟ್ಟಿದ್ದು ನೋಡಿದರೆ ಸಂಪಾದಕರಿಗಿರುವ ಅಗಾಧ ಬುದ್ಧಿಮತ್ತೆ ಎದ್ದು ಕಾಣುವದು. ಶಿವಾನುಭವದ, ಷಟ್‌ಸ್ಥಲಗಳ, ನೂರೊಂದು ಸ್ಥಲಗಳ, ಸಕೀಲ ಉದ್ಧರಣೆ ಮೊದಲಾದವುಗಳ ಆಳವಾದ ಜ್ಞಾನವು ಅವರಿಗೆಷ್ಟಿರುವದೆಂಬುದನ್ನು ಒಪ್ಪಲೇಬೇಕು. ಇವರಿಂದ ವೀರಶೈವ ಸಮಾಜಕ್ಕೆ ಕಾಣಿಕೆಯಾಗಿ ಅರ್ಪಿಸಲ್ಪಟ್ಟ ಅನರ್ಘ್ಯವಾದ ಮೂರು ರತ್ನಗಳಿವು. ವೀರಶೈವ ನಭೋಮಂಡಲದಲ್ಲಿ ಇವು ( ವಚನಶಾಸ್ತ್ರಸಾರದ ಮೂರು ಭಾಗಗಳು ) ಸುಸ್ಥಿರವಾದ ಧೃವತಾರೆಯಂತೆ ಬೆಳಗುತ್ತಿರುವವು. ಇಷ್ಟೇ ಅಲ್ಲ, ಇವು ವೀರಶೈವ ಸಿದ್ಧಾಂತದ ಜ್ಞಾನಾಮೃತವನ್ನೊಳಗೊಂಡ ಅವಿನಾಶಿಯಾದ ಭವ್ಯ ಮಂದಿರಗಳು. ಧರ್ಮಜಿಜ್ಞಾಸುಗಳು ಈ ಮಂದಿರಗಳಲ್ಲಿ ಪ್ರವೇಶಿಸಿ ತಮ್ಮ ಜ್ಞಾನ ದಾಹ ಹಿಂಗಿಸಿಕೊಂಡು ಧನ್ಯರಾಗಬಹುದು. ಇವು ವೀರಶೈವ ತತ್ವಗಳ ಬಗ್ಗೆ ಮಹತ್ವವಾದ ಬೆಳಕನ್ನು ಕೆಡವಿರುವವು.

ಇನ್ನೂ ಅನೇಕ ಗ್ರಂಥಗಳು ಪ್ರಕಟವಾಗಿದ್ದು ಅವುಗಳನ್ನೆಲ್ಲ ಸಾದ್ಯಂತವಾಗಿ ಕೊಡುವದು ಸಾಧ್ಯವಿಲ್ಲ.

ಡಾ. ಹಳಕಟ್ಟಿಯವರ ಸಂಗ್ರಹಾಲಯದಲ್ಲಿ ಮಹತ್ವವಾದ ಎಷ್ಟೋ ಕೈಬರಹದ ಮತ್ತು ತಾಡವಾಲೆಯ ಗ್ರಂಥಗಳು ಅಚ್ಚಾಗದೇ ಇರುವವು. ಅವುಗಳೆಲ್ಲ ಅಚ್ಚಾಗಿ ಪ್ರಕಾಶಕ್ಕೆ ಬರಬೇಕಾದರೆ ಸಮಾಜದ ಉದಾರಾಶ್ರಯುವು ಅತ್ಯವಶ್ಯವಾಗಿದೆ.

ಶಿವಾನುಭವ ಪತ್ರಿಕೆಯು ಜನ್ಮವೆತ್ತಿ ಇಂದಿಗೆ ೩೦–೩೧ ವರ್ಷಗಳಾಗುತ್ತ ಬಂತು. ಈ ಅವಧಿಯೊಳಗಾಗಿ ಸುಮಾರು ನೂರಾರಕ್ಕಿಂತ ಹೆಚ್ಚಿಗೆ ಗ್ರಂಥಗಳು ಪ್ರಕಟವಾಗಿವೆ. ಯಾವ ಸಂಘ ಸಂಸ್ಥೆಗಳಾಗಲೀ ಅಥವಾ ಮಠಮಾನ್ಯಗಳಾಗಲೀ ಮಾಡದೇ ಇರುವ ಮಹತ್ವದ ಕಾರ್ಯವನ್ನು ಈ ಪತ್ರಿಕೆಯ ದ್ವಾರಾ ಡಾ. ಹಳಕಟ್ಟಿಯವರು ಮಾಡಿರುವರೆಂದರೆ ಅತಿಶಯೋಕ್ತಿಯೆನಿಸದು. ಇಂಥ ಮಹತ್ವದ ಸೇವೆ ಮಾಡಿರುವ ಮತ್ತು ಮಾಡುತ್ತಿರುವ ಈ ಪತ್ರಿಕೆಗೆ ಈಗಲಾದರೂ ನಿದಾನ ಸಾವಿರಾರು ಚಂದಾದಾರರಿಲ್ಲದಿರುವದು ತುಂಬಾ ಶೋಚನೀಯ. ಸಮಾಜದಲ್ಲಿ ಧಾರ್ಮಿಕ ವಾಙ್ಮಯ ಅಭಿರುಚಿ ಸಾಕಷ್ಟಿಲ್ಲದಿರುವದೇ ಕಾರಣ.

## ಸಂಪಾದಕರು ಆಧುನಿಕ ಶಿವಶರಣರು.

ಸಂಪಾದಕರ ಬಗ್ಗೆ ಇಲ್ಲಿ ಒಂದೆರಡು ಮಾತುಗಳನ್ನು ಹೇಳುವದು ಸೂಕ್ತವೆನಿಸುವದು. ಸಂಪಾದಕರಾದ ಡಾ. ಹಳಕಟ್ಟಿಯವರು ನಿಜಕ್ಕೂ ಆಧುನಿಕ ಶಿವಶರಣರು. ಯಾಕೆಂದರೆ ಇವರೇ ವಚನವಾಙ್ಮಯವನ್ನು ಬೆಳಕಿಗೆ ತಂದವರು. ಸುಮಾರು ೩೦ ವರ್ಷಗಳ ಹಿಂದೆ ಹಲಕೆಲವರಲ್ಲಿ ಶರಣರ ಬಗ್ಗೆ ಇದ್ದ ತಪ್ಪು ಗ್ರಹಿಕೆಗಳನ್ನು ವಚನಗಳ ಪ್ರಸಾರದಿಂದ ದೂರಮಾಡಿದವರು, ಶರಣರ ಚರಿತ್ರೆಗಳನ್ನು ಪ್ರಕಟಿಸಿ ಅವರ ಬಗ್ಗೆ ಭಕ್ತಿ ವಿಶ್ವಾಸ ಹೆಚ್ಚಾಗುವಂತೆ ಮಾಡಿದವರು. ನಾಡಿನಲ್ಲೆಲ್ಲ ವಚನವಾಙ್ಮಯ ಪ್ರಸಾರವಾಗಲು ಇವರೇ ಕಾರಣರು. ಆಧುನಿಕ ವಿದ್ಯಾವಂತರಲ್ಲಿ ಸಹ ವಚನಗಳ ಬಗ್ಗೆ ಪ್ರಗಾಢವಾದ ಪ್ರೇಮಾದರಗಳನ್ನು ಹುಟ್ಟಿಸಲು ವಿಶ್ವವಿದ್ಯಾಲಯಗಳ ಅಭ್ಯಾಸ ಪತ್ರಿಕೆಗಳಲ್ಲಿ ವಚನಗಳ ಪಠ್ಯಪುಸ್ತಕಗಳನ್ನು ಸೇರಿಸಲು ಪ್ರಯತ್ನಿಸಿದವರು. ತಮ್ಮ ನಿತ್ಯದ ಜೀವನವನ್ನೇ ಇದಕ್ಕೆ ಮುಡಪಾಗಿಟ್ಟವರು. ಹೆಚ್ಚೇನು ಇವರ ರಕ್ತನಾಳಗಳಲ್ಲಿ ವಚನಗಳ ಪ್ರಸಾರ ಚಿಂತನೆಯೇ ತುಂಬಿ ತುಳಕುವದು. ಅದರೇನು ದೈವೀ ಸಂಪತ್ತಿದ್ದರೂ ಲೌಕಿಕ ಸಂಪತ್ತಿನ ಕೊರತೆ ತರುಣರಿಗಿಂತ ಹೆಚ್ಚಿನ ಶಕ್ತಿ ಉತ್ಸಾಹವಿದ್ದರೂ ಅವರ ಇಚ್ಛೆಯ ಪ್ರಕಾರ

ಕಾರ್ಯಗಳಾಗಿರುವದಿಲ್ಲ. ೮—೧೦ ವರ್ಷಗಳವಧಿಯಲ್ಲಿ ಅನೇಕ ಕಷ್ಟನಷ್ಟಗಳಿಗೆ ತುತ್ತಾದರು. ಇವರ ಕಾಲ ಸಂದುತಪ್ಪಿ ನೋವಾದ್ದರಿಂದ ೧—೨ ವರ್ಷ ಮನಿಹಿಡಿದು ಕೂಡ್ರುವ ಪ್ರಸಂಗಬಂದದ್ದರಿಂದ ಇವರ ಛಾಪಖಾನಿಗೆ ಹಾನಿಯಾಯಿತು. ಅದೇಕಾಲಕ್ಕೆ ಇವರ ಪ್ರೇಮದ ಜೇಷ್ಠಪುತ್ರ ಚಂದ್ರಶೇಖರ ಇವರು ಅಕಾಲವಾಗಿ ಶಿವಾಧೀನರಾದರು. ಇವರ ಧರ್ಮಪತ್ನಿಯು ಇಂದಿಗೂ ರೋಗರುಜಿಯಿಂದ ಹಾಸಿಗೆ ಹಿಡಿದಿರುವರು. ಇನ್ನು ಅನೇಕಾನೇಕ ಕಷ್ಟನಷ್ಟಗಳೊದಗಿದರೂ ಅವುಗಳನ್ನೆಲ್ಲ ಗಂಡುಗಲಿಯಂತೆ ತಾಳ್ಮೆಯಿಂದ ಸಹನಮಾಡಿಕೊಂಡು ಎದೆಗುಂದದೆ ಧೀರರಾಗಿ ಶೂರರಾಗಿ ತಮ್ಮ ಕಾರ್ಯದಲ್ಲಿಯೇ ಮುಂದೆ ಮುಂದೆ ಸಾಗುತ್ತಿರುವರು. ಯಾವ ಕಾಲಕ್ಕಾದರೂ ಶರಣರೆಂಬವರಿಗೆ ಲೌಕಿಕ ತೊಂದರೆಗಳು ಅವರ ಪರೀಕ್ಷೆಗೋಸ್ಕರ ಬರುವವೆಂಬ ದೇವ ವಾಣಿಯು ಸದಾ ಸತ್ಯವಾಗಿದೆ. ಇದಕ್ಕೆ ಶ್ರೀ ಬಸವಣ್ಣನವರ ವಚನಗಳೇ ಪ್ರಮಾಣವು. "ಶಿವಭಕ್ತನಾಗಿ ತನ್ನ ಹಿಡಿದಿಹೆನೆಂದು ಹೋದರೆ ನುಗ್ಗು ಹೂಡುವ, ನುಸಿಯು ಮಾಡುವ, ಮಣ್ಣುಮಾಡುವ, ಮುಸಿಯು ಮಾಡುವ. ಕೂಡಲಸಂಗಮದೇವರ ನೆರೆನಂಬಿದನಾದರೆ ಕಡಿಗೆ ತನ್ನಂತೆ ಮಾಡುವ.

ನೆಚ್ಚಿದನೆಂದರೆ, ಮೆಚ್ಚಿದೆನೆಂದರೆ ಸಲೆ ಮಾರುವೋದನೆಂದರೆ ತನುವನಲ್ಲಾಡಿಸಿ ನೋಡುವೆ ನೀನು, ಮನವನಲ್ಲಾಡಿಸಿ ನೋಡುವೆ ನೀನು, ಧನವನಲ್ಲಾಡಿಸಿ ನೋಡುವೆ ನೀನು. ಇವೆಲ್ಲಕ್ಕಂಜದಿದ್ದರೆ ಭಕ್ತಿಕಂಪಿತ ನಮ್ಮ ಕೂಡಲಸಂಗಮದೇವ."

ಮೇಲ್ಕಂಡ ವಚನಗಳ ಸಮನ್ವಯವು ಇವರ ಜೀವನದಲ್ಲಿ ಹಾಸುಹೊಕ್ಕಾಗಿದೆ. ಇವರ ದಿನಚರಿಯು ಒಳ್ಳೇ ಸಾದಾ ತರದ್ದಿದೆ. ಆಶ್ರಮರಹಿತ ನಿರಾಭಾರಿ ವೀರಶೈವರೆಂದರೆ ಅತಿಶಯೋಕ್ತಿಯೆನಿಸದು. ಇವರಲ್ಲಿ ಇನ್ನೇನು ಬೇಕು ? ವೀರಶೈವ ಮಹಾಮನೆಯಲ್ಲಿ ಆಗಿ ಹೋದ ಮತ್ತು ಆಗಿ ಹೋಗುತ್ತಿರುವವರ ಶರಣರ ಮಾಲಿಕೆಯಲ್ಲಿ ಸೇರಲು ಇವರಿಗೆ ಸ್ಥಾನವಿದೆ; ಮಾನವಿದೆ. ಕಾರಣ ಇವರು ಆಧುನಿಕ ಶಿವಶರಣರಲ್ಲವೇ ?

ಶಿವಾನುಭವ ಪತ್ರಿಕೆಯ ದ್ವಾರಾ ಇವರು ಸಲ್ಲಿಸಿದ ಅಮೋಘ ಸೇವೆಗೆ ಸಮಾಜವೇ ಚಿರಖುಣಿಯಾಗಿದೆ. ಆದ್ದರಿಂದ ಇವರಿಗೆ ಕೃತಜ್ಞತೆಯನ್ನು

ರ್ಪಿಸುವದು ಪ್ರತಿಯೊಬ್ಬನ ಕರ್ತವ್ಯವಲ್ಲವೇ ? ಈ ಪತ್ರಿಕೆಗೆ ಎಲ್ಲ ಕಡೆಗೂ ಸಾಕಷ್ಟು ಚಂದಾದಾರರ ಸಂಖ್ಯೆ ಬೆಳೆಸಬೇಕಾಗಿದೆ. ಕಾರಣ ತಾವೊಬ್ಬರೇ ಚಂದಾದಾರರಾದರೆ ತಮ್ಮ ಕರ್ತವ್ಯ ತೀರಲಿಲ್ಲ. ಆದ್ದರಿಂದ ಚಂದಾದಾರರ ಸಂಖ್ಯೆ ಹೆಚ್ಚಿಗೆ ಬೆಳೆಯಲು ಒಬ್ಬರಿಗೊಬ್ಬರು ಪ್ರೋತ್ಸಾಹಿಸಬೇಕು. ಈಗಿರುವ ಚಂದಾದಾರರು ತಮಗೆ ಶಕ್ಯವಾದ ಷ್ಟುಗೆ ಹೊಸ ಚಂದಾದಾರರನ್ನು ಮಾಡಿ ಕೊಡಲು ಯತ್ನಿಸಬೇಕು. ನಿದಾನ ಒಬ್ಬಿಬ್ಬರನ್ನಾದರೂ ಹೊಸ ಚಂದಾದಾರರನ್ನು ಮಾಡಲು ಮರಿಯಬಾರದು; ತಪ್ಪಬಾರದು. ಈ ಪ್ರಕಾರವಾಗಿ ಈ ಪತ್ರಿಕೆಯ ಲಾಲನೆ ಪಾಲನೆ ಮಾಡಿ ಪೋಷಿಸಬೇಕಾಗಿ ಬಲವಾದ ಕೋರಿಕೆ.

# ಸದಾಶಿವ ನೀತಿಯು

[ ಸ್ವಾದಿಸಂಸ್ಥಾನದಧಿಪತಿಯಾದ ಸದಾಶಿವರಾಜನಿಂದ ವಿರಚಿತವಾದುದು ]

---

ಶಿಂಕರ ಶಿವ ಪರಮೇಶ್ವರ ।
ಹರಿಯಜ ಸುರ ಧನುಜ ಮನುಜ ಗಣನುತ ಚರಣಾ ॥
ಅರಿದಂತೆ ಕೃತಿಯ ಪೇಳಲು ।
ಕರುಣಿಸು ಮತಿಗಳನು ಒಲಿದು ಗುರು ನಂದೀಶಾ ॥೧॥

ಮುದದಿ ಸದಾಶಿವ ನೀತಿಯು ।
ಮೃದುನುಡಿಯುತವಾದ ಪಂಚ ಶತ ಪದ್ಯಂಗಳ್ ।
ಬಿದಿಗೆಯ ಚಂದ್ರಮನಂದದಿ ।
ಚದುರತ್ವವ ನೀವುದಯ್ಯಾ ಗುರುನಂದೀಶಾ ॥೨॥

ಎಲ್ಲರನು ಮೆಚ್ಚಿಸಲಳವಲ್ಲವು ।
ಹರಿಯಜ ಸಹಿತರ್ಗೆ ಮತ್ತೆ ನರರಿಂಗಳವೇ ॥
ಬಲ್ಲರ್ ಈ ಕೃತಿಯನು ತ ।
ಪ್ಪಿಲ್ಲವು ಯೆಂಬಂತೆ ಮಾಡೊ ಗುರುನಂದೀಶಾ ॥೩॥

ಕವಿಗಮಕಿ ವಾದಿ ವಾಗ್ಮಿಗೆ ।
ಶಿವಿಗಾನಂದವನು ಮಾಳ್ಪ ಭಾರವು ನಿಮ್ಮದು ॥
ರವಿಚಂದ್ರರುಳ್ಳತನಕ ।
ಭುವಿಯೋಳ್ ಪ್ರಕಟಿಸುವದಯ್ಯಾ ಗುರು ನಂದೀಶಾ ॥೪॥

ಅತಿಶೋಭಿತ ಕೃತಿಯಾರದು ।
ಹಿತವರಿಯದ ನರರ ಮುಂದೆ ಪೇಳ್ವುದನುಚಿತಂ ॥
ಕ್ಷಿತಿಯೊಳು ಸಿತ ಪರ್ವತದಲಿ ।
ಸತತಂ ಮಳೆಯಾದ ರೀತಿ ಗುರು ನಂದೀಶಾ ॥೫॥

ತನಿವಾಲೊಳ್ ಕೆನೆಯಂದದಿ ।
ಇನಿಗೋಲಲಿ ಪುಟ್ಟಿದಂಥ ಸಕ್ಕರೆಯಂತೆ ॥
ಮನವುಟ್ಟಿ ಕೃತಿಯ ಪೇಳಲು ।
ಜನಿಸುವ ದಿಷ್ಟಾರ್ಥ ಸಿದ್ಧಿ ಗುರು ನಂದೀಶಾ ॥೬॥

ಬೆಡಗು—

ಕೋಳಿಯ ಕಂದನ ತನುಜನ ।
ಕಾಳಗದೊಳ್ ಕಪಟದಿಂದ ಗೆಲಿದಾನನು ಜನಾ ॥
ವ್ಯಾಳದಲಿರುತಿಹ ಧಾವನ ।
ಕೇಳಿಯ ಮಾಡ್ದವನೆ ಕಾಯೊ ಗುರು ನಂದೀಶಾ ॥೭॥

ತನು ಮೂಱಿಪ್ಪೊತ್ತೊಂದಂ ।
ಕುನಯನ ಮುಖ ಯೇಳು ಚಲ್ವಾಕರ ಹದಿನೆಂಟಂ ॥
ಇನುತಿಪ ಚರಣಗಳಾರಂ ।
ಮನಸಿಲಿ ನೆನಸಿರಲಿ ನಿತ್ಯಾ ಗುರು ನಂದೀಶಾ ॥೮॥

ಪಾಲಿಸು ಗಿರಿಜಾ ನಾಥನೆ ।
ಪಾಲಿಸು ರುತುಮುಖನೆ ನಾದನನಂ ಜಯಿಸಿದನೇ ॥
ಪಾಲಿಸು ಉಭಯಾನಂದನೇ ।
ಪಾಲಿಸಲಿ ಅನುದಿನಲೆನ್ನ ಗುರು ನಂದೀಶಾ ॥೯॥

ದಿವಿ ಭುವಿ ರವಿ ಕವಿ ಪವಿ ಭವಿ ।
ಭವ ಸವಿ ಭವ ಭವನದಸುವಾ ಭುವನದ ಸೀವಾ ॥
ಅವ ಶಿವ ಭವ ರವ ಸವರುವಾ ।
ಯುವಲವ ಜೀವನವ ಕಾವ ದೇವನೆ ವಲಿವಾ ॥೧೦॥

ಹೊಡೆನಡೆ ಕೊಡುವೆಡೆ ಕಡಲೊಡೆ ।
ಪಡಿಹಿಡಿ ಕುಡಿಯೋಡು ಬ್ಯಾಡಾ ಮುಡಿಶಿಡಿಯಾಡು ॥
ನುಡುಯುಡು ತಡಿಯುಡಿ ಕಡಿಮುಡೀ ।
ಹಡೆಪಡೆ ನಂದೀಶಾ ಕೇಳೋ ಉಭಯಾರ್ಥ ಪದಂ ॥೧೧॥

## ಗುರುಮಹಿಮೆ

ಶ್ರೀ ಗುರುವಂ ನೆನೆಯಲ್ಕೆಡ ।
ರಾಗದು ಕಂಡೆಡೆ ಭವಂಗಳೋಡುಗು ಮತ್ತಾ ॥
ರಾಗವಿ ಶ್ರೀ ಚರಣಾಂಭುವಾ ಕಂ ।
ಡಾಗಲೆ ಇಹಪರವ ನೀವಾ ನಂದೀಶ್ವರನೇ ॥೧೨॥

ಹರಣಾಕರ್ಷಣ ಮಂತ್ರಂ ।
ವರ ಮುಕ್ತ್ಯಾಂಗನಿಗೆ ಮೋಹ ಮಾಡುವ ತಂತ್ರ ॥
ಧುರಿತೋಚ್ಚಾಟಣ ಯಂತ್ರಂ ।
ಗುರು ನಂದೀಶ್ವರನ ಪಾದ ಪಡಿಸುವ ಮಿತ್ರಂ ॥೧೩॥

ಹರನುರದೊಳಗಿಂದೊಪ್ಪುವ ।
ಶಿರದೋಳ್ಗುರು ಎಷ್ಟುದೆಂಬುದಾಗಮ ಶಿದ್ಧಂ ॥
ಹರ ಮುನಿದರೆ ಗುರು ಕಾಯ್ವನು ।
ಗುರು ಮುನಿದರೆ ಹರನು ಕಾಯಲರಿಯನು ಗುರುವೇ ॥೧೪॥

ಬೇಡಲು ಅರಿಯದ ಶಿಷ್ಯನ ।
ಮಾಡನೆ ತನ್ನಂತೆ ಗುರುವು ನೆಲೆಗೊಂಡವನಂ ॥
ಕ್ರೀಡಾ ಭ್ರಮರ ನ್ಯಾಯದಿ ।
ನೋಡಲು ಗುರು ಕರುಣ ಕಿರಿದೇ ನಂದೀಶಾ ॥೧೫॥

ಹಲವೋದಿದ ನೋಡಿ ಮನಮಂ ।
ಫಲಗೆಡಿಸಲದೇಕೆ ಕಿರಿದಿನಿಂ ಗುರುಮಂತ್ರದ ॥
ನೆಲೆಯನು ಅರಿದರೆ ಸಾಲದೆ ।
ಸಲೆ ಬೆಳಗುವ ಗಗನದಹಲವೆ ರವಿಬಿಂಬಂ ॥೧೬॥

ಗುರುದೈವಂ ವಿದ್ಯಾರ್ಥಿಗೆ ।
ತರುಣಿಗೆ ಪತಿದೈವ ಮುಳಿದಾಮನುಜರ್ಗೆಲ್ಲಂ ॥
ಪೊರೆವನೆ ದೈವಂ ಧರೆಯೊಳ್ ।
ಅರಸುಗಳಿಗೆ ಧರ್ಮ ದೈವಾ ಗುರು ನಂದೀಶಾ ॥೧೭॥

ನೆಲವನು ಮಾಳ್ದನೆ ।
ಜಲವನು ಶಿರದಲ್ಲಿ ನೇತ್ರದೊಳಗ್ನಿಯನು ॥
ಸಲೆ ದೇಹದಿ ವಾಯು ಕೇಶದಿ ।
ನೆಲೆಗೊಳಿಸಿದೆ ಗಗನವನ್ನು ಗುರು ನಂದೀಶಾ ॥೧೮॥

ಗುರು ಲಘು ಗಣವರ್ಣ ಯತಿಗಳ ।
ಹರಿಕರ ಮೊದಲಾದ ಪ್ರಾಸೊವಡಿ ಸಂಧಿಗಳ ॥
ಬಿರುನುಡಿಗಳರಿಸ ಮಾಸದ ।
ಲ್ಲಿರುತಿಹ ಬಹುದೋಷ ಕೆಡಿಸೋ ಮಳೆ ನಂದೀಶಾ ॥೧೯॥

ಮಕ್ಕಳು ಅರಿಯದೆ ನುಡಿದರೆ ।
ಸಕ್ಕರಿ ಸವಿದಂತೆ ತಾಯಿ ತಂದೆಗೆಯಾಹುದು ॥
ಕಕ್ಕುಲತೆ ಕವಿತೆ ಪೇಳಲು ।
ಅಕ್ಕರದಿಂದೊಪ್ಪುಗೊಳ್ಳೋ ಗುರು ನಂದೀಶಾ ॥೨೦॥

## ಅಷ್ಟಾವರಣ ಪದ್ಧತಿ

ಗುರುವು ಲಿಂಗವು ಜಂಗಮ ।
ವರ ಪಾದೋದಕ ಪ್ರಸಾದ ರುದ್ರಾಕ್ಷಿಗಳು ॥
ಶ್ರೀ ವಿಭೂತಿಯು ಮಂತ್ರವು ।
ವರ ಮುಖ್ಯಾತ ಅಷ್ಟಾವರಣ ಕೇಳ್ನಂದೀಶಾ ॥೨೧॥

ತೀರ್ಥವೇ ತಾತ್ರಾಯ ಹರ ।
ತೀರ್ಥವ ಕರಿಸಂಖ್ಯಾಮದವಂ ಪರಿಹರಿಸುವದು ॥
ತೀರ್ಥವೇ ಮುಕ್ತಿಯ ಗುರುಪದ ।
ತೀರ್ಥಕಿಂದಧಿಕವಿಲ್ಲ ಗುರುನಂದಿಶಾ ॥೨೨॥

ಲಿಂಗವೆ ಸಕಲಕ್ಕಾದಿಯು ।
ಲಿಂಗದರಿಧ್ಯಾಂತರವನ್ನೂ ಹರಿಯಜ ವರಿಯರೂ ॥
ಲಿಂಗವು ಅತಿ ಸರ್ವವು ಪುಟ್ಟಿತು ।
ಲಿಂಗಾಂಗದಲಿ ಲೋಕವಿರುವದೂ ಗುರು ನಂದೀಶಾ ॥೨೩॥

ಲಿಂಗದ ಪೀಠವು ಬ್ರಹ್ಮನು ।
ಲಿಂಗದ ಗೋಮುಖವೇ ವಿಷ್ಣುವೆಂದಾಗಹುವು ॥
ಲಿಂಗದ ಗೋಳಾಕಾರ ರುದ್ರನು ।
ಲಿಂಗವೇ ಪರದೈವ ಕೇಳಾ ಗುರು ನಂದೀಶಾ ॥೨೪॥

ಜಂಗಮವೆ ಜಗಕೆ ಪೂಜ್ಯವು ।
ಜಂಗಮವೆ ಜನ್ಮರಹಿತಾವೆಂದಾಗಮವು ॥
ಜಂಗಮವೇ ಜಾತಿವೂರ್ಜಿತ ।
ಜಂಗಮಕ್ಕಿನ್ನಧಿಕವಿಲ್ಲಾ ಗುರು ನಂದೀಶಾ ॥೨೫॥

ಧರೆಯೊಳು ಕ್ಷೇತ್ರಗಳುತ್ತಮು ।
ಗಿರಿಯೊಳ್ ರಜತಾದ್ರಿಯಧಿಕ ಪಶುಗಳೊಳಾವು ॥
ಹರ ಗುರುವೆಂದತಿ ಶ್ರೇಷ್ಠವು ।
ವರ ಜಂಗಮ ಮುಕ್ತಿದಾತಂ ಕೇಳ್ನಂದೀಶಾ ॥೨೬॥

ಪಾದೋದಕ ಪಾಪ ನಾಶನ ।
ಪಾದೋದಕ ಪಾನದಿಂದಂ ಪಾವನನಾಹ ॥
ಪಾದೋದಕ ಪುಣ್ಯವರ್ಧ ।
ಪಾದೋದಕ್ಕಧಿಕವಿಲ್ಲಾ ಗುರು ನಂದೀಶಾ ॥೨೭॥

ಗಂಗೆಯು ಯಮುನೆಯು ಸರಸ್ವತಿ ।
ತುಂಗೆಯು ಕಾವೇರಿ ಸಿಂಧೂ ಗೋದಾವರಿಯೂ ॥
ಮಂಗಳ ನರ್ಮದಿಗಿಂತಲೂ ।
ಜಂಗಮ ಪಾದೋದಕಧಿಕಾ ಶ್ರೇಷ್ಠವು ಗುರುವೇ ॥೨೮॥

ಜಗದೊಳು ಪ್ರಸಾದ ಮಹಿಮೆಯು ।
ಪೊಗಳಲು ಫಣಿ ಪತಿಗೆ ಸಕ್ತ್ಯೈ ಬರಿಯಲ್ಕೆ ॥
ಅಗಣಿತ ಸಾಶಿರ ಶಿರಸಿಗೆ ।
ಮಿಗಿಲಾದವರೇನ ಪೇಳಾ ಬಲ್ಲರು ಗುರುವೇ ॥೨೯॥




ಸಂಪಾದಕರು

ಡಾ|| ರಾ. ಬ. ಫ. ಗು. ಹಳಕಟ್ಟಿ,
ಬಿ. ಏ. ಎಲ್., ಎಲ್. ಬಿ.
ವಿಜಾಪುರ.

[ವಾರ್ಷಿಕ ಚಂದಾ ೫-೧೨-೦ ಅಂಚೆಯ ವೆಚ್ಚ ಬೇರೆ]

ಅಗಸ್ಟ ೧೯೫೭

# ವಿಷಯಾನುಕ್ರಮಣಿಕೆ



# ಪರಬ್ರಹ್ಮರ ಇರವು.

(ಬರೆದವರು:- ಶ್ರೀ ಅನ್ನದಾನೀಶ್ವರ ವಿರಕ್ತಮಠ, ಬಿ. ಎ. ಆನರ್ಸ್ ಸೆಕೆಂಡ್ ಕ್ಲಾಸ್,
ಬಿ. ಟಿ. ಸೆಕೆಂಡ್ ಕ್ಲಾಸ್.)



ಪರಬ್ರಹ್ಮವು ಇದೆ, ಪರಶಿವನಿದ್ದಾನೆ, ಪರಶಿವನು ಶಕ್ತಿಸಹಿತನಾಗಿರುತ್ತಾನೆ. ಶಕ್ತಿಯಿಲ್ಲದೆ ಬ್ರಹ್ಮವಿಲ್ಲ. ಬ್ರಹ್ಮನಿಲ್ಲದೆ ಶಕ್ತಿಯಿಲ್ಲ. ಶಕ್ತಿ ಮತ್ತು ಶಿವ ಭಿನ್ನವಲ್ಲ. ಶಿವಶಕ್ತಿಯೆಂದರೆ ಪರಶಿವ, ಪರಶಿವನೆಂದರೆ ಶಿವಶಕ್ತಿ. ಶಕ್ತಿಯಿಲ್ಲದ ಬ್ರಹ್ಮಾಂಡವಿಲ್ಲ, ಶಕ್ತಿಯಿಲ್ಲದ ಪಿಂಡಾಂಡವಿಲ್ಲ. ಅಣುವಿನಲ್ಲಿ ಶಕ್ತಿಯಿದೆಯೆಂಬುದನ್ನು ವಿಜ್ಞಾನವು ಸಿದ್ಧಪಡಿಸಿದೆ. ಆ ಪರಶಕ್ತಿಯು ಶ್ರೀ ನಿಜಗುಣಶಿವಯೋಗಿಗಳಿಂದ ನೂರೆಂಟು ರೀತಿಯಾಗಿ ಬಣ್ಣಿಸಲ್ಪಟ್ಟಿದೆ; ಪರಶಿವನನ್ನು ಶ್ರೀ ನಿಜಗುಣರು ಎದೆದುಂಬಿ ಹಾಡಿರುವರು. ಪರಶಿವ-ಪರಶಕ್ತಿಗಳಲ್ಲಿ ಅವಿನಾಭಾವ ಸಾಮರಸ್ಯವಿದೆ. ಅಣುರೇಣುತೃಣಕಾಷ್ಠಗಳಲ್ಲಿ ಪರಶಿವನ ಶಕ್ತಿಯಿದೆ. ಆ ಪರಶಕ್ತಿಯು ವಿವಿಧ ಸ್ವರೂಪಗಳನ್ನು ಧರಿಸಬಲ್ಲದು. ಚಿನ್ನದೊಳಗಣ ಬಣ್ಣದಂತೆ, ಪಟದೊಳಗಣ ತಂತುವಿನಂತೆ ಭಿನ್ನವಿಲ್ಲದೆ ಮಾನವನ ಪಿಂಡಾಂಡದಲ್ಲಿ ಅಂಗ, ಮನ, ಪ್ರಾಣಗಳಲ್ಲಿ ಇರಬಲ್ಲುದು. ಜಗದ ಸ್ಥಿತಿಗತಿಯನ್ನು ಲೇಪಿಸಿಕೊಳ್ಳದೆ ಜಲದೊಳಗಣ ಸೂರ್ಯನ ಪ್ರತಿಬಿಂಬದಂತೆ ಈ ಜಗತ್ತಿನಲ್ಲಿ, ಬ್ರಹ್ಮಾಂಡದಲ್ಲಿ ಇರಬಲ್ಲದು. ಇದೆ. ಜಲ

ದೊಳಗಿರುವ ಸೂರ್ಯನ ಪ್ರತಿಬಿಂಬವು ವಿಕಾರಹೊಂದುವಂತೆ ತೋರಿತು. ಆ ವಿಕಾರವು ಜಲಕ್ಕಲ್ಲದೆ ಸೂರ್ಯನಿಗಲ್ಲ. ಅದರಂತೆ ಪರಶಕ್ತಿಯು ಏಕಮೇವಾದ್ವಿತೀಯವಾಗಿದ್ದರೂ ಜಲದೊಳಗಣ ಸೂರ್ಯನಂತೆ ಬಹುವಾಗಿ ತೋರುತ್ತಿಹುದು. ಪರಶಿವನ ಸ್ವವಿಮರ್ಶ ಶಕ್ತಿಯಿಂದ ಈ ಬ್ರಹ್ಮಾಂಡ, ಪಿಂಡಾಂಡಗಳುದ್ಭವಿಸಿವೆ. ತನ್ನ ಸ್ವೇಚ್ಛೆಯ ನೆನಹೆಂಬ ಚಿತ್‌ಶಕ್ತಿಯ ಆವಿರ್ಭಾವವೇ ಈ ಜಗತ್ತು. ಜಗತ್ತು ಶಿವಶಕ್ತಿಮಯವಾಗಿದೆ. ಪಿಂಡ ಬ್ರಹ್ಮಾಂಡಗಳ ಕೂಡಿಪ್ಪ ಪರಶಿವಶಕ್ತಿಯನ್ನು ಒಪ್ಪದ ತತ್ವಜ್ಞಾನವು ವೈಜ್ಞಾನಿಕ ವಿಚಾರದ ಒರೆಗಲ್ಲಿಗೆ ನಿಲ್ಲಲಾರದು. ವಿಜ್ಞಾನದ ವಿಮರ್ಶಾಶಕ್ತಿಗೆ ನಿಲುಕದ ತತ್ವಜ್ಞಾನವು ಜಗತ್ತಿನ ವಿಚಾರವಂತರ ಮನ್ನಣೆಯನ್ನು ಪಡೆಯಲಾರದು.

ಈ ಜಗತ್ತು ಸದಾತ್ಮನ ಸ್ವರೂಪವಾಗಿದೆ. ಸದಾತ್ಮನ ಹಿಂದೆ ಶೂನ್ಯ, ಮೌನ, ನಿಶ್ಶಬ್ದ, ಶಾಂತಿಯಿದೆ. ಅದು ನಿರ್ವಾಣ, ಅದರ ಹಿಂದೆ ಪರಶಿವಶಕ್ತಿಯಿದೆ. ತನ್ನ ಲೀಲಾ ವಿನೋದಕ್ಕಾಗಿ ಶಿವಶಕ್ತಿಯು ಒಂದು ಹೋಗಿ ವಿವಿಧಾಕಾರ ತಾಳಿತು. ಸ್ವತಂತ್ರ ಶಕ್ತಿಯಿಂದ, ಲೀಲಾವಿನೋದದಿಂದ, ಭಕ್ತೋದ್ಧಾರಕ್ಕಾಗಿ ಈ ಬ್ರಹ್ಮಾಂಡದ ರಚನೆಯಾಗಿದೆ. ಶಕ್ತಿಗೂ ಭಕ್ತಿಗೂ, ಭಿನ್ನತೆಯಿಲ್ಲ. ಶಿವದೃಷ್ಟಿಯಿಂದ ನೋಡಲಾಗಿ ಶಕ್ತಿ ಎಂದೂ, ಜೀವದೃಷ್ಟಿಯಿಂದ ನೋಡಲಾಗಿ ಭಕ್ತಿ ಎಂದೂ ಕರೆಯುತ್ತಾರೆ. ವಸ್ತುತಃ ಶಕ್ತಿಭಕ್ತಿಗಳಲ್ಲಿ ಭಿನ್ನತೆಯಿಲ್ಲ. ಶಿವ-ಶಕ್ತಿಯು ಜಗತ್ಪ್ರಪಂಚನ ಮಾಡಿ ಆ ಜಗದಲ್ಲಿ ಜೀವರೂಪಿಂದ ಬಳಿಸಂದರೆಂದು ಜ್ಞಾನಿಗಳು ಹೇಳುವರು. ಮಲ, ಮಾಯಾ, ಕರ್ಮ ಪಾಶಬದ್ಧತೆಯು ಜೀವನಿಗೆ ಶೋಕ ಮೋಹ, ರೋಗ ದುಃಖಗಳನ್ನು ಕೊಡುತ್ತದೆ. ಭಕ್ತಿಶಕ್ತಿಯಿಂದ, ನಿಜದ ಅರುಹಿನಿಂದ, ಜೀವಾತ್ಮನೇ ಶಿವಸ್ವರೂಪವಾಗಿ ಪ್ರಕಾಶಿಸುವನು. ಜೀವಭಾವ ಅರತಾಗ ತ್ರಿಗುಣಗಳ ಉಪಟಳ ನಿಲ್ಲುವದು. ತ್ರಿಗುಣರಹಿತವಾದ ಅವಸ್ಥೆಯೇ ಸಚ್ಚಿದಾನಂದಾವಸ್ಥೆಯು. ಸಚ್ಚಿದಾನಂದ ನಿತ್ಯಪರಿಪೂರ್ಣ ಪರಬ್ರಹ್ಮದ ಇರವೇ ಜೀವಿಗಳಿಗೆ ಪರಮಗಮ್ಯವು.

ಶರಣರು ಪರಶಿವಶಕ್ತಿಗೆ ಸರ್ವಾರ್ಪಣ ಮಾಡಿ ಶಿವಶಕ್ತಿಸ್ವರೂಪವಾಗಿದ್ದ ದಿವ್ಯರತವಾತ್ಮಕ ಶಕ್ತಿಸಂಪನ್ನರಾದ ಪೂರ್ಣ ಮಾನವರು ಅವರ ಅಂಗ, ಪ್ರಾಣ, ಮನಗಳಲ್ಲಿ ಭಾಷಾಜ್ಞಾನದಲ್ಲಿ ಆಧ್ಯಾತ್ಮಿಕ ವಿದ್ಯುಚ್ಛಕ್ತಿಯು ಪ್ರವಹಿಸುತ್ತಿರುವರು. ಅವರು ಪರಬ್ರಹ್ಮನಿಗೆ, ಪರಶಿವಶಕ್ತಿಗೆ ಲಿಂಗವೆಂದು

ಸಂಬೋಧಿಸಿರುವರು. ಲಿಂಗವೆಂದರೆ ಪರಶಿವಶಕ್ತಿಯು, ಪರಬ್ರಹ್ಮವು. ಸಚ ರಾಚರಗಳಿಲ್ಲದಾಗ ನಾನು ನೀನೆಂಬ ಶಬ್ದ ತಲೆದೋರದಾಗ ಲಿಂಗವು ಅಂದು, ಇಂದು, ಮುಂದು ಇದೆ ಎಂದು ಅನುಭವ ಜ್ಞಾನದಿಂದ ನಮ್ಮ ಉದ್ಧಾರಕ್ಕಾಗಿ ಹೇಳಿದರು, ಶರಣರು ತಮ್ಮ ಅವರ ವಚನಗಳಲ್ಲಿ. ಲಿಂಗವು ತಿಥಿ, ವಾರ, ನಕ್ಷತ್ರಗಳಿಗೆ ಲಗ್ನಕರಣಂಗಳಿಗೆ ಮೀರಿ ಆಚೆಗೆ ಇರುತ್ತಿ ವುದು. ಜಗದ ಒಳಗೂ, ಹೊರಗೂ ತುಂಬಾ ತುಂಬಿರುವ ತುಂಬಿಯೇ ಲಿಂಗವು. ಅದು ಅನುಪಮ, ಅಭೇದ್ಯ, ಅಸಾಧ್ಯವಾಗಿದೆ ಎಂದು ವರ್ಣಿಸಿ ರುವರು. ಹರಿ, ಬ್ರಹ್ಮ, ರುದ್ರ ಎಂಬ ತ್ರಿಮೂರ್ತಿಗಳಿಗೆ ಲಿಂಗದ ನಿಜದ ನಿಲವು ಸಿಲುಕಿಲ್ಲವೆಂದು ಹೇಳಿರುವರು. ಲಿಂಗವು ವೇದಾತೀತವಿರುವದು. ವೇದವು ತ್ರಿಗುಣಾತ್ಮಕವು. ಲಿಂಗವನ್ನು ಹೊಗಳುವ ಭಕ್ತನು ವೇದಾತೀತ ಭಾವಸನ್ನಿಹಿತನಾಗಲೇಬೇಕು. ಲಿಂಗವು ವರ್ಣಾತೀತವಿಹುದು. ಲಿಂಗವ ನಂಬಿದ ಭಕ್ತನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳನ್ನು ಕುಲಜಾತಿಗಳನ್ನೂ ಬಿಟ್ಟಿರಲೇಬೇಕು.

ಲಿಂಗಕ್ಕೆ ಚೈತನ್ಯ ಜಂಗಮವೆಂದು ಶರಣರು ಹಾಡಿರುವರು. ಆತ್ಮ ಸ್ವರುಪ ಜ್ಞಾನಸಂಪನ್ನರಿಗೂ ಜಂಗಮರೆನ್ನುತ್ತಾರೆ. ಅವರಿಗೆ ಚೈತನ್ಯ ಜಂಗಮ ಎಂದು ಕರೆಯಬಹುದು. ಲಿಂಗಕ್ಕೂ ಚೆತನ್ಯ ಜಂಗಮಕ್ಕು ಭೇದವಿಲ್ಲ. ಲಿಂಗಕ್ಕು ಪರಶಿವ ಶಕ್ತಿಗು ಭೇದವಿಲ್ಲ. ಇಂತಪ್ಪ ಲಿಂಗವನ್ನು ನಂಬುವದೇ ಲೇಸು. ಬೀಜದೊಳಗಣ ವೃಕ್ಷದಂತೆ, ಕಾಷ್ಠದೊಳಗಣ ಉಷ್ಣದಂತೆ, ಪಿಂಡ ಬ್ರಹ್ಮಾಂಡಗಳಲ್ಲಿ ಲಿಂಗವಿರ್ಪುದು. ಲಿಂಗವು ಒಂದು. ಪರಮಾತ್ಮನು ಒಬ್ಬನೇ ಇದ್ದಾನೆ. ಲಿಂಗವು ಸತ್ಯಸ್ವರೂಪವು. ಜಗತ್ತು ಸತ್ಯವು. ಪಂಚ ಭೂತಗಳು ರೂಪಾಂತರ ಹೊಂದುತ್ತವೆ. ನಾಶವಾಗುವದಿಲ್ಲ; ಏಕೆಂದರೆ ಪರಶಕ್ತಿಯು ಅಲ್ಲಿ ತುಂಬಿರುವದು. ಆದಕಾರಣ ಜಗತ್ತು ಮಿಥ್ಯವಲ್ಲ. ಪರಶಿವಶಕ್ತಿಯನ್ನು ಮಾತ್ರ ಲಕ್ಷಿಸುವ ಮನಸ್ಸಿಗೂ ಜಗತ್ತು ಮಿಥ್ಯವೆಂದು ತೋರುವ ಅವಶ್ಯಕತೆಯಿಲ್ಲ. ಜಗತ್ತನ್ನು ಬಿಡುವ. ಸನ್ಯಾಸ ಸ್ವೀಕರಿಸುವ ಅಗತ್ಯವೂ ಇಲ್ಲ. ಲಿಂಗದ ಇರವಿನಂತೆ ನಾವು ಇರುವದೇ ಲಿಂಗಕ್ಕಾಗಿ, ಲಿಂಗದಲ್ಲಿ ಇರುವದೇ ಪರಮ ಗುರಿಯು. ಲಿಂಗವು ವಿಶ್ವಾತೀತವು. ಬ್ರಹ್ಮಾಂಡ ಮಯವು, ಪಿಂಡಾಂಡಮಯವು. ಪುಟಕ್ಕೆ ಹಾಕಿದ ಚಿನ್ನವು ಅಪರಂಜಿ ಯಾಗಿ ಹೊಳೆಯುವಂತೆ, ಅದ್ವೈತ ಭಕ್ತಿ ಪುಟಕ್ಕೆ ಹಾಕಿದ ಜೀವನು

ಶಿವಸ್ವರೂಪನೇ ಆಗಿ ಪ್ರಕಾಶಿಸುವನು. ಸಂದೇಹವೇ ಇಲ್ಲ. ಇದು ಲಿಂಗಾಂಗ ಸಾಮರಸ್ಯ ಸಮರಸವೇ ಜೀವನ. ಲಿಂಗಾಂಗ ಸಾಮರಸ್ಯವೇ ದಿವ್ಯ ಜೀವನವು. ಅಮರ ಜೀವನವು ಇಂಥ ಲಿಂಗಾಂಗ ಸಾಮರಸ್ಯದ ಕಡೆಗೆ ಮಾನವನು ಹೊರಳಿ ನಿತ್ಯಾನಂದ ಪಡೆಯಲಿ.

ಟ್‌ಸ್ಥ ಶಾಸ್ತ್ರದಲ್ಲಿ ಅನೇಕ ವಿಶಿಷ್ಟ ಶಬ್ದಗಳು ಬರುವದುಂಟು. ಅವುಗಳ ಪರಸ್ಪರ ಸಂಬಂಧ ಅವುಗಳ ಅರ್ಥ ಲಕ್ಷಣ ಇವುಗಳ ತಿಳುವಳಿಕೆಯು ಅತ್ಯಾವಶ್ಯಕವು. ಈ ಶಬ್ದಗಳು ವಚನ ಶಾಸ್ತ್ರದಲ್ಲಿ ಮೇಲಿಂದ ಮೇಲೆ ಬರುತ್ತವೆ ಅದ್ವೈತ ಮತ್ತು ವೇದಾಂತ ಗ್ರಂಥಗಳಲ್ಲಿ ಬರುವದಿಲ್ಲ ಆದರೆ ವಚನಶಾಸ್ತ್ರದಲ್ಲಿ ಇವುಗಳ ವಿವರಣೆಯು ಚನ್ನಾಗಿ ಆಗಿರುತ್ತದೆ. ವಾಚಕರು ಇವುಗಳನ್ನು ಮನನ ಮಾಡಿಕೊಳ್ಳ ಬೇಕೆಂದು ನಮ್ಮ ನಮ್ರ ಸುಚನೆಯು.

# ಸಂತ ಕಬೀರ

( ಲೇಖಕರು:- ಶ್ರೀ ಜ್ಞಾನೋಪಾಸಕ ರಾಜೇಂದ್ರನಗರ, ಮೈಸೂರು. )

ಭಾರತವು ಅಧ್ಯಾತ್ಮಿಗಳ ಬೀಡು; ಧಾರ್ಮಿಕ ವಿಭೂತಿಗಳ ವಿಹಾರವು; ವೇದಾಂತಿಗಳ ವನವು. ಶಿವಶರಣರೂ, ಹರಿದಾಸರೂ, ಭಾಗವತರೂ, ಸಂತರೂ ಭಾರತದಲ್ಲಿ ಪರಂಪರೆಯಾಗಿ ಪ್ರವಹಿಸಿದ್ದಾರೆ. ಭಾರತದ ಸಂತ ಪರಂಪರೆಯಲ್ಲಿ ಕೊಹಿನೂರ್ ರತ್ನ ಸಮಾನವಾಗಿ ಬೆಳಗಿ, ಸರ್ವೋಚ್ಚ ಸ್ಥಾನವನ್ನು ಅಲಂಕರಿಸಿರುವ ಅದಟುಶಾಲಿ ಸಂತ ಕಬೀರ. ದೇವಸ್ಥಾನಗಳ ಹಾಗೂ ವಿಗ್ರಹಗಳ ನಾಶವು ಉತ್ತರ ಇಂಡಿಯದಲ್ಲಿ ಮುಸಲ್ಮಾನರಿಗೆ ರೂಢಿಯಾಗಿದ್ದ ಕಾಲವೊಂದು. ಅಂದು ಹಿಂದೂಗಳಿಗೆ ಮುಸಲ್ಮಾನರಿಂದ ತೊಂದರೆಯು ಆಗುವಂತಾಯಿತು.

" During the period of the Sultanate of Delhi, the Hindu religion had been exposed to constant danger. the more ruthless sovereigns, or governors of provinces, often carried out wholesale massacres and destroyed Hindu shrines, while even milder rulers often used force to bring about their people's conversion the jiriya, a tax on Nonmohamedans, was generally enforced, yet, in spite of persecution, Hinduism flowrished. "

- F. E. KEANT.

ಈ ಅಮಾನುಷ ದೌರ್ಜನ್ಯ ವಿನಾಶಕಾರ್ಯವು ಹಿಂದೂಗಳ ಧಾರ್ಮಿಕಾಭಿಮಾನವನ್ನು ಮಾತ್ರ ಅಸ್ಥಿಷ್ಟಾದರೂ ಅಲುಗಿಸಲಿಲ್ಲ. ಭಕ್ತಿಯು ಶ್ರದ್ಧಾಸಕ್ತಿಯೇ ಇದಕ್ಕೆ ರೂಢ ಮೂಲವಾಗಿತ್ತು. ಭಾರತೀಯರ ರಕ್ತ ನಾಡಿಗಳಲ್ಲಿ ಭಕ್ತಿಯು ಪ್ರಸಾರವಾಗಿರುವುದು. ಸಂಸ್ಕೃತಿಯು ಆರ್ಷೇಯದ ಆದರ್ಶವಾಗಿದೆ ಎಂದರೆ ತಪ್ಪೇನಾಗಲಾರದು. ಧರ್ಮದ ಯಥಾರ್ಥ ಅರಿವು ಅಳವಡದೆ ಜನತೆಯಲ್ಲಿ ಪರಸ್ಪರ ಪ್ರೀತಿಯು ಅಂಕುರಿಸದೆ ಇರುವ ವೇಳೆಯಲ್ಲಿ ಈ ದೋಷ ಪರಿಹಾರಕ್ಕೆ ಧಾರ್ಮಿಕ ವಿಭೂತಿಯು ಅವಶ್ಯಕವಿತ್ತು. ಈ

ಅವಶ್ಯಕತೆಯು ಪರಿಪೂರ್ಣತೆಯೇ ಕ್ರಿ. ಶ. ಹದಿನಾಲ್ಕನೆ ಶತಾಬ್ದದಲ್ಲಿ ಕಬೀರನ ಜನನವಾಯಿತು. ಬ್ರಾಹ್ಮಣ ವಿತಂತು ಓರ್ವಳಿಗೆ ಮಗುವೊಂದು ಜನಿಸಲು ಕುಲಾಕ್ಷೇಪಣೆಯು ಅಂಜಿಕೆಯಿಂದ ವನಮಾರ್ಗದಲ್ಲಿಯೇ ಅದನ್ನು ಆಕೆಯು ಬಿಟ್ಟುಹೋದಳು. ಅದೇ ಹಾದಿಯಲ್ಲಿ ನೂರಿ ಎಂಬ ನೆಯ್ಗೆಯವನೂ, ಆತನ ಪತ್ನಿಯೂ ಬರುತ್ತಿರಲು ಆ ಮಗುವನ್ನು ನೋಡಿದ ಅವರು ಅದನ್ನು ಎತ್ತಿಕೊಂಡು ತಮ್ಮ ಮನೆಗೆ ಬಂದರು. ಭಗವಂತನು ಅನುಗ್ರಹ ಮಾಡಿಕೊಟ್ಟನೆಂದು ಮಕ್ಕಳಿಲ್ಲದ ಆ ದಂಪತಿಗಳು ಸಂತೋಷಭರಿತರಾಗಿ ಆ ಮಗುವಿಗೆ ಕಬೀರನೆಂದು ನಾಮಕರಣ ಮಾಡಿದರು.

ಕಬೀರನ ಜನ್ಮದ ವಿಚಾರವಾಗಿ ಮತ್ತೊಂದು ಕಥೆ. ಶುಕಋಷಿಯ ಅಂಶದಿಂದ ಮುತ್ತಿನ ಚಿಪ್ಪಿನಲ್ಲಿ ಜನಿಸಿ, ರೇಷ್ಮೆಯ ಬಟ್ಟೆಗಳನ್ನು ನೆಯ್ದು ಜೀವನ ಮಾಡುತ್ತಿದ್ದ ಕಮಾಲ್ ಎಂಬ ಮಹಮ್ಮದೀಯನಿಗೆ ಸಿಕ್ಕ, ಜೀಜಾಬೀಬಿ ಎಂಬಾಕೆಯ ಪಾಲನೆಗೆ ಒಳಪಟ್ಟು ರಾಮಾನಂದರ ಶಿಷ್ಯರಾಗಿ ರಾಮಭಕ್ತರಾದರು. ಮಹಾ ವಿಭೂತಿಗಳ ಜನ್ಮದ ವಿಚಾರವು ಅನಿರ್ಧಾರ, ಅಸ್ಪಷ್ಟವೇ ಸರಿಯು. ಕಾರಣಿಕರಾಗಿ ಜನಿಸಿದ ಮಹಾತ್ಮರ ಹುಟ್ಟು ಸಾವು ಮನುಷ್ಯರಾದ ಕರ್ಮಜೀವಿಗಳ ದೃಗ್ಗೋಚರಕ್ಕೆ ಯಥಾವತ್ ಬೀಳದಿರುವುದು ರೂಢಿಬದ್ಧವಾಗಿರುವುದು.

ಬಾಲ್ಯದಿಂದಲೂ ಕಬೀರನಿಗೆ ಧರ್ಮದಲ್ಲಿ ಅತ್ಯಾಸಕ್ತಿಯು. ಅದು ಕಾರಣವೇ ಹಿಂದಿಯಲ್ಲಿ ಈತನ ಕೀರ್ತನೆಗಳ ಉದಾತ್ತವಾಗಿ, ಉನ್ನತವಾಗಿ ರಚಿಸಲ್ಪಟ್ಟಿವೆ. ತನ್ನ ತತ್ವಸಿದ್ಧಾಂತಗಳನ್ನು ಕೀರ್ತನೆಯ ರೂಪದಲ್ಲಿ ಈತನು ಹಾಡುತ್ತಿದ್ದನು. ತನ್ನ ಮತಕ್ಕೆ ಸೇರುವಂತೆ ಇತರರನ್ನು ಈತನು ಎಂದೆಂದೂ ಕೂಡ ಬಲಾತ್ಕಾರ ಮಾಡುತ್ತಿರಲಿಲ್ಲ. ಈತನು ನವೀನ ಮತಸ್ಥಾಪಕನಾದರೂ ಹಿಂದುಗಳೂ, ಮಹಮ್ಮದೀಯರು ಈತನನ್ನು ಒಂದೇ ಸಮನಾದ ಪ್ರೀತಿಯಿಂದ ಕಾಣುತ್ತಿದ್ದರು. ಈತನು ನಿರ್ವಾಣ ಹೊಂದಿದ್ದು 'ಮಾಗರ' ಗ್ರಾಮದಲ್ಲಿ. ಈ ಶರೀರದ ಸಂಸ್ಕಾರದ ವೇಳೆಯಲ್ಲಿ ಹಿಂದೂಗಳ ಸಂಗಡ ಕಾಶೀ ರಾಜನೂ, ನೂರಾರು ಮಂದಿ ಮಹಮ್ಮದೀಯರ ಜೊತೆಯಲ್ಲಿ ಬಿಜಲೀಖಾನನೆಂಬ ತುರುಷ್ಕ ರಾಜನೂ ತಮ್ಮ ತಮ್ಮ ಮತವಿಧಿಗೆ ಅನುಸಾರವಾಗಿ ಸಂಸ್ಕಾರ ಸಾಗಬೇಕೆಂಬ ಚರ್ಚೆಯು ನಡೆಯುತ್ತಲಿತ್ತು. ಅಷ್ಟರಲ್ಲಿಯೇ ಅಶರೀರವಾಣಿಯಾಯಿತು. "ಕಬೀರನ

ಮೃತದೇಹದ ಮೇಲಿನ ಮುಸುಕನ್ನು ತೆಗೆದು ನೋಡಿರಿ” ಅವರೆಲ್ಲರೂ ಅದೇ ಮಾತಿನಂತೆ ಮಾಡಲು, ಅಲ್ಲಿ ಶರೀರದ ಬದಲು ಬರೀ ಪುಷ್ಪರಾಶಿಯಿದ್ದಿತು. ಅನಂತರ ಸಂತೋಷಭರಿತರಾಗಿ ಇಬ್ಬರೂ ಅಲ್ಲಿನ ಪುಷ್ಪಗಳನ್ನು ಹಂಚಿಕೊಂಡರು. ಆ ಊರಿನಲ್ಲಿ ಮಠವೊಂದೂ, ಮಸೀದಿಯೊಂದೂ ನಿರ್ಮಾಣವಾಗಿ ಈಗಲೂ ನೋಡತಕ್ಕವಾಗಿವೆ.

ಎಪ್ಪತ್ತೆಂಟು ವರ್ಷಗಳ ದೀರ್ಘಾಯುಷಿಯಾದ ಈತನು ಕೀರ್ತಿಶೇಷನಾಗಿ ಸುಮಾರು ನಾಲ್ಕೂವರೆ ಶತಮಾನಗಳಾಗಿವೆ. ೧೪೮೯—೧೫೧೭ರ ವರೆಗೆ ಆಳಿದ ಚಕ್ರವರ್ತಿ ಸಿಕಂದರ ಲೋದಿಯ ಮುಂದೆ ಕಬೀರನನ್ನು ಕರೆತಂದಾಗ ಚಕ್ರವರ್ತಿಗೆ ತಲೆಬಗ್ಗಿಸಬೇಕೆಂದು ರಾಜಭಟರನು ಹೇಳಿದಾಗ ತನ್ನ ತಲೆಯು ಜಗದೀಶ್ವರನಿಗೆ ಅಲ್ಲದೆ ಮತ್ತೆ ಇನ್ನಾರಿಗೂ ತಗ್ಗದೆಂದು ಉತ್ತರವಿತ್ತುದುದು ಕೆಚ್ಚಿನ ಕುರುಹಾಗಿದೆ. ಈತನ ಉದ್ಧಟತನಕ್ಕೆ ರೇಗಿದ ಚಕ್ರವರ್ತಿಯು ಕಬೀರನನ್ನು ಆತನ ಜನ್ಮಸ್ಥಳವಾದ ಕಾಶಿಯಿಂದ ಹೊರದೂಡಲು, ಅಂದಿನಿಂದ ಸನ್ಯಾಸಿಯಾಗಿ ಊರಿಂದೂರಿಗೆ ಪ್ರಯಾಣ ಬೆಳೆಸುತ್ತ, ತಾನು ನಂಬಿದ ಭಕ್ತಿಪಂಥವನ್ನು ಪ್ರಶಂಸುತ್ತ, ಘೋರಕಪುರದ ಹತ್ತಿರದಲ್ಲಿ ನಿರ್ವಾಣಹೊಂದಿದನು. ಈ ಕಥೆಯ ವಿಚಾರದಲ್ಲಿ ಪಂಡಿತ ಉಪಾಧ್ಯ ಎಂಬುವರು ಹೇಳಿದ್ದಾರೆ. “ಈ ಕಥೆಯನ್ನು ನಾವು ನಂಬಬೇಕಾಗಿಲ್ಲ; ಆದರೆ ಈ ಕಥೆಯ ಮೂಲ ಭಾವವು ಅಮೂಲ್ಯವಾದದ್ದು.”

ಕಬೀರನ ದೃಷ್ಟಿಯಲ್ಲಿ ಜಾತಿ, ಪಾಂಡಿತ್ಯ, ಐಶ್ವರ್ಯ ಇವುಗಳಿಗೆ ಬೆಲೆಯಿಲ್ಲ. ಮನುಷ್ಯ ಜನ್ಮಕ್ಕೆ ಮಾನ್ಯತೆಯು ಹರಿಭಕ್ತಿ ಒಂದರಿಂದಲೇ ದೊರಕುತ್ತದೆ ಎಂದು ಈತನ ಅಭಿಪ್ರಾಯ. ಈತನನ್ನು ಪರೀಕ್ಷೆ ಮಾಡುವ ಉದ್ದೇಶದಿಂದ ಪಂಡಿತರೊಬ್ಬರು ‘ಏನನ್ನು ಓದಿರುವೆ!’ ಎಂದು ಕೇಳಿದಾಗ ಕಬೀರನು ಉತ್ತರವಿತ್ತನು.

“ಓದುವುದು ನಾನು ತಿಳಿಯೆ, ವಾದಿಸಲು ನನಗೆ ಗೊತ್ತಾಗದು. ಹರಿಯ ಗುಣ ಕೀರ್ತನೆಯನ್ನು ಹೇಳಿಕೊಂಡು ಕೇಳಿಕೊಂಡು ಸಂಚರಿಸುತ್ತಿರುವೆ” ಈತನು ಸರ್ವರಿಗೂ ಭಕ್ತಿಯ ಬಾಗಿಲನ್ನು ತೆರೆದಿಟ್ಟನು. ಹೆಂಗಸು ಗಂಡಸು, ಸವರ್ಣ ಅವರ್ಣ, ಹಿಂದೂ ಮುಸಲ್ಮಾನ, ಬಡವ ಬಲ್ಲಿದ, ಪಂಡಿತ ಪಾಮರ ಎಂಬ ಯಾವ ಅಂತರವೂ ಭಕ್ತ ಪಂಥಕ್ಕೆ ಅಡ್ಡಬರುವಂತಹುದಲ್ಲ ಎಂಬುದೇ ಈತನ ಮತ. ಅನುಭಾವಿಯ ಸಾಧನೆಯಲ್ಲಿ ಜ್ಞಾನ, ದರ್ಶನ, ಪ್ರಾಪ್ತಿ ಎಂಬ ಅವಸ್ಥಾತ್ರಯಗಳು ಉಂಟು.

ಅನುಭಾವಿಯಾದವನು ಮೊದಲು ಭಗವತ್ಸ್ವರೂಪ ಗುಣ ವಿಭೂತಿ ಗುಣ ಉಪದೇಶದಿಂದ ಅರಿಯುತ್ತಾನೆ. ಇವುಗಳ ಶ್ರವಣ, ಮನನ, ನಿಧಿಧ್ಯಾಸಗಳ ಫಲವಾಗಿ ಪರಮಾತ್ಮನ ದರ್ಶನವು ಲಭಿಸುತ್ತದೆ. ಭಗವತ್ ಸಾಕ್ಷಾತ್ಕಾರ ಮಾಡಿಕೊಂಡಾತನಿಗೆ ಆತನು ಮಾಡುವ ಸಕಲ ಕರ್ಮಗಳೂ ಭಗವಂತನ ಅರ್ಚನೆ ಆರಾಧನೆ ಎಂಬ ಭಾವವನ್ನು ಈತನು ವ್ಯಕ್ತಗೊಳಿಸಿದ್ದಾನೆ. ಅನುಭಾವಿಯ ಅವಸ್ಥಾತ್ರಯವನ್ನು ಈತನ ಜೀವನದಲ್ಲಿ ಕಾಣುತ್ತೇವೆ.

ಈತನ ಉಪದೇಶ ಸಾರವು ನಮ್ಮೆಲ್ಲರ ಮೈಯಿಗೆ ಮಣಿಹಾರವೇ ಆಗಿವೆ; ಧಾರಣೆ ಪಾರಾಯಣೆಯಿಂದ ಧನ್ಯತೆಯು.

“ಮತಗಳು ಮತ್ತು ಹೊರಗಿನ ಮತಾಚಾರಗಳು ಅಂತರಂಗ ಧರ್ಮದ ಹೊರಮೈ. ಪ್ರತಿಯೊಬ್ಬನೂ ಇತರ ಜೀವಿಗಳನ್ನು ತನ್ನಂತೆಯೇ ನೋಡಬೇಕು. ಪರಮಾತ್ಮನಿಂದ ಸೃಜಿಸಲ್ಪಟ್ಟ ಸರ್ವವನ್ನೂ ಪ್ರೀತಿಸುತ್ತಿರಬೇಕು. ದೈವನಿರ್ಮಿತವಾದ ವಸ್ತುಗಳಲ್ಲಿ ಯಾವ ಜಾತಿಭೇದವೂ ಇಲ್ಲ. ವಿಗ್ರಹಾರಾಧನೆಯನ್ನು ಯಾವ ಸಮಯದಲ್ಲಿಯೂ ಮಾಡಬೇಕಾದುದಿಲ್ಲ. ಸಾಧುವಿನ ಆಧೀನನು ಪರಮಾತ್ಮನು. ಪ್ರತಿಯೊಬ್ಬರೂ ಪರಮಾತ್ಮನ ಆಜ್ಞಾಪ್ತನು ಮತ್ತು ಸೇವಕನು. ಭಗವಂತನ ದಾರಿ ತೋರಿಸಿ ಕೊಡುವ ಗುರುವೇ ದೊಡ್ಡವನು. ಗುರುವಿನ ಗುಣವು ಅನಂತವಾಗಿರುತ್ತದೆ. ಮಾನವ ಜೀವನವು ನೀರಿನ ಗುಳ್ಳೆಯೆಂದು ತಿಳಿದು ಆಯಾಯ ಕಾರ್ಯಗಳನ್ನು ಆಯಾಯ ವೇಳೆಯಲ್ಲಿಯೇ ತಪ್ಪದೆ ಮಾಡಿ ಮುಗಿಸಿರಿ.”

ಕಬೀರನ ಪ್ರಭಾವವು ಭಾರತದ ಹಲವೆಡೆಗಳಲ್ಲಿ ಹರಡಿದೆ. ಪಂಜಾಬಿನ ಶೀಖರು, ಗುರು ನಾನಕನ ಅನುಯಾಯಿಗಳು ಕಬೀರನನ್ನು ಗುರುವೆಂದು ಗಣಿಸಿ ಆತನ ಕೀರ್ತನೆಗಳನ್ನು ದಿನವೂ ಹಾಡುತ್ತಾರೆ. ಕಬೀರನ ಕೀರ್ತನೆಗಳು ಜನಪ್ರಿಯವಾಗಿವೆ. ಸೂಫಿಗಳು, ಯೋಗಿಗಳು ಈತನನ್ನು ಮಹಾನುಭಾವನೆಂದು ಪರಿಗಣಿಸಿ ಈತನ ಸಂಕೇತವನ್ನು ಬಹು ಪವಿತ್ರವಾಗಿ ನೋಡುತ್ತಾರೆ.

“Men like Kabir are not in favour of orders and are alive to the future contradictions and inconstancies that such orders are likely to create”

-INDIAN INHERITANCE·

ಭಕ್ತಿ ವಿಶ್ವಾಸಗಳಿಂದ ಜಗದೀಶ್ವರನನ್ನು ಧ್ಯಾನಿಸಬೇಕು.

ಸುಮೀರನಸೋ ಮನ ಲಾಯಿ ಜೈಸೇ ನಾದ ಕುರಂಗ।
ಕಹೈ ಕಬೀರ ಬಿಸರೈ ನಹೀಂ ಪ್ರಾಣತ ಜೈತೇಹಿ ಸಂಗ॥

ಹುಲ್ಲೆ ಕರುವು ಯಾವ ರೀತಿ ಬಿಡುವದಿಲ್ಲವೋ ಹಾಗೆಯೇ ಪ್ರಾಣ ಹೋಗುವ ವರೆಗೂ ಸರಿಯೆ. ಪರಮಾತ್ಮನ ನಾಮಸ್ಮರಣೆಯನ್ನು ಬಿಡದಂತಹ ಉತ್ಕಟ ದೈವ ಭಕ್ತಿಯು ಅಂತರಂಗದಲ್ಲಿ ಉದ್ಭವವಾಗಬೇಕು. ಜೀವನದ ಶ್ರೇಷ್ಠತೆಯು ಮಂಜುಳ ಮಾಣಿಕ್ಯವಾಗಿದೆ.

ರಾತ ಗಂವಾಯಿ ಸೋಯಕರ ದಿವಸ ಗಂವಾಯ।
ಖಾಯಹೀ ರಾಜನಮ ಅಮೋಲಥಾ ಕೌಡೀ ಬದಲೇ ಜಾಯ॥

ನಿದ್ರೆಯಿಂದ ರಾತ್ರಿಯೂ, ಭೋಜನ ಪಾನೀಯದಿಂದ ಹಗಲೂ ಕಳೆಯಿತು. ಇಂತಹುದನ್ನು ತುಚ್ಛ ವಿಷಯ ವಾಸನೆಯಿಂದ ರತ್ನವನ್ನು ತೆಗೆಯುವುದಕ್ಕೆ ಹೋಗುತ್ತಿದೆ.

ಹರಿದಾಸರ– "ಮಾನವಜನ್ಮವಿದು ಶ್ರೇಷ್ಠ" ಎಂಬುದೂ, ವ್ಯಾಸಮಹರ್ಷಿಗಳ "ನರಜನ್ಮವತ್ಯಧಿಕಂ" ಎಂಬುದೂ ಇದಕ್ಕೆ ಸಮಂಜಸವಾಗುತ್ತದೆ.

ಭಗವಂತನ ಪ್ರಾರ್ಥನೆಗೆ, ತಾನು ಮಾಡುವ ಕೆಲಸಕ್ಕೆ ಇಂದು ನಾಳೆ ಎಂದು ಮುಂದೆ ಹಾಕುವದು ಮಾನವ ಸ್ವಭಾವವಲ್ಲವೇ? ಈ ಬಗೆಯ ಲೋಕ ರೂಢಿಯ ಮನುಜರನ್ನು ಕಬೀರರು ಬಿಡದೆ ಎಚ್ಚರಿಸಿದ್ದಾರೆ. "ಕಾಲ ಕಳೆಯುವ ಮೊದಲೇ ರಾಮ ನಾಮ ಹಾಡು. ಹಗಲು ಹರಿಯುವ ಮುಂಚೆಯೇ ನಿನ್ನ ಕರ್ಮ ಮಾಡು." ಇದನ್ನೇ ಮಹಾತ್ಮಾ ಬಸವೇಶ್ವರರು ಹೊತ್ತುಹೋಗದ ಮುನ್ನ ಕಾಲ ಕರೆಯುವ ಮುನ್ನ ಗಲ್ಲಕ್ಕೆ ಕೈಕೊಡುವ ಮುನ್ನ ಪರಮೇಶ್ವರನನ್ನು ಅರ್ಚಿಸಿ, ಆರಾಧಿಸಿ ನಿನ್ನ ಕರ್ತವ್ಯವನ್ನು ಮಾಡು ಎಂದಿದ್ದಾರೆ.

ಗುರುವಿನ ಕೃಪೆಯಿಲ್ಲದೆ ಪರಮೇಶ್ವರನ ಜ್ಞಾನವು ದೊರಕುವುದಿಲ್ಲ ಎಂದ ಕಬೀರ ವಾಣಿಯ ಜೊತೆಗೆ ಶಿವಶರಣರು ಸಾರಿದ 'ಹರನ ಹಾದಿಯ ತೋರಿಸಿದ ಶ್ರೀಗುರುವಿಗೆ ನಾನೇನ ಕೊಡಲಿ' ಎಂಬುದನ್ನೂ ಸೇರಿಸಿಕೊಂಡು ಪರಮ ನಿರಂಜನ ಗುರುವಿನ ಸಾನ್ನಿಧ್ಯವನ್ನು ಸಮೀಪಿಸಲು ಅಧ್ಯಾತ್ಮಿಕ ಜೀವಿಗಳಾಗಿ ಸಾಗುವುದು ಆದ್ಯ ಕರ್ತವ್ಯವಾಗಿರುತ್ತದೆ. ಜಗತ್ತಿನಲ್ಲಿ ಸಾಧುಗಳು ಹವಳದ ಹೊಳೆಯಲ್ಲಿ ಹತ್ತಿಕೊಂಡಿರುವ ಮಣಿಮಯ ರತ್ನಗಳಂತೆ ಇವರ ದೃಷ್ಟಿಯಲ್ಲಿ ಪತಿವ್ರತೆಯು ಪತಿಯನ್ನು ಏಕಾಗ್ರತೆಯಿಂದ ಧ್ಯಾನಿಸಿ

ಮಾನಿಸುವಂತೆಯೇ ಭಕ್ತನು ಎಲ್ಲವನ್ನೂ ಪರಮಾತ್ಮನಿಗೆ ಸಮರ್ಪಿಸಿ ಸಕಲ ಕಾಲದಲ್ಲಿಯೂ ಏನೇ ಕಷ್ಟನಷ್ಟಗಳಿದ್ದರೂ ಬಿಟ್ಟು ಒಂದೇ ಸಮನೆ ಭಗವಂತನನ್ನು ನೆನೆ ಎಂದ ಕಬೀರರು ಭಾರತೀಯ ಅಧ್ಯಾತ್ಮಿಕ ಅರವಟ್ಟಿಗೆಯಲ್ಲಿ ಅರವಿಂದರಾಗಿದ್ದಾರೆ.

ಕಬೀರರ ವಾಣಿಯು ಸ್ವಚ್ಛ ಜಲವನೊತ್ತ ಝರಿಯಂತೆ ಧಾರಾವಾಹಿನಿಯಾಗಿ ಹರಿಯುತ್ತಿದೆ. ಗಿರಿಯಿಂದ ಪ್ರವಹಿಸಿ ಬರುವ ಝರಿಯ ಕಲಕಲ ನಿನಾದದ ಮಾಧುರ್ಯವು ಕಬೀರರ ವಾಣಿಯಲ್ಲಿ ಅಡಗಿದೆ. ಇದರಿಂದಲೇ ಇವರ ಅನಂತರ ಬಂದ ಪಂತ, ನಿರಾಲಾ, ಪ್ರಸಾದ, ಮಹಾದೇವಿ ವರ್ಮ ಇವರ ಮೇಲೆ ಕಬೀರರ ಪ್ರಭಾವವು ಬೀರಲ್ಪಟ್ಟಿದೆ. ಹಲವು ವಿಧದ ಅನ್ಯೋಕ್ತಿಗಳ ಮೂಲಕ ಜ್ಞಾನದ ವಿಚಾರಗಳನ್ನು ಪ್ರಶಂಸಿದ್ದಾರೆ. ನವೀನವಲ್ಲವಾದರೂ ವೈವಿಧ್ಯತೆಯ ಕಾರಣ ಜನರನ್ನು ಆಶ್ಚರ್ಯಪೂರಿತರನ್ನಾಗಿ ಮಾಡಿದೆ. ಅತ್ಯಮೂಲ್ಯ ತತ್ವರತ್ನಗಳನ್ನು ಇವರು ಕೂಡಿಸಿ ಪೋಣಿಸಿದ್ದಾರೆ. ಸರಳತೆ, ಸಹಜ ಭಾವಗಳ ಹೃದಯ ಗ್ರಾಹತೆಯು ಇವರ ನುಡಿಗಳಲ್ಲಿ ಸರ್ವ ಕಡೆಯಲ್ಲಿಯೂ ಕಂಡು ಬರುತ್ತದೆ. ಇವರ ರಚನೆಯಲ್ಲಿ ಖಡಿಬೋಲಿ, ಅವಧಿ, ಬನಾರಸಿ, ಅಂತೆ, ಬಿಹಾರಿ ಪ್ರಾದೇಶಿಕ ಭಾಷೆಯ ಪ್ರಯೋಗಗಳು ಕಂಡುಬರುತ್ತವೆ. ತಮ್ಮ ಹೃದಯದಿಂದ ಉಕ್ಕಿ ಬಂದ ಭಾವವನ್ನು ಪರಿಶುದ್ಧವಾದ ಮಾತಿನಲ್ಲಿಯೇ ಕಬೀರರು ವ್ಯಕ್ತಪಡಿಸಿದ್ದಾರೆ. ಶಿವಶರಣರ ಮತ್ತು ಹರಿದಾಸರ ವಾಣಿಯಲ್ಲಿ ಇದನ್ನು ಕಾಣುತ್ತೇವೆ. ಕಬೀರರು ಯಾರಿಗೂ ಅಂಜದೆ, ಆತ್ಮವಂಚನೆ ಗೈಯ್ಯದೆ ಮುಂದೆ ಹಾಯ್ದ ಕಾರಣವೇ ಅಚ್ಚ ನೇರ ನುಡಿಗಳು ಬರುವಂತಾಗಿವೆ. ಅನಕ್ಷರಸ್ಥರ ರಹಸ್ಯವಾದಿಗಳಾದ ಇವರ ಪ್ರತಿಭೆಯು ಅದ್ವಿತೀಯವಾಗಿದೆ. ಬಹು ಗಹನವಾದ ಗಾಢ ತತ್ವಗಳನ್ನು ಬಹಳ ಸರಳ ರೀತಿಯಲ್ಲಿ ವ್ಯಕ್ತಪಡಿಸಿದ್ದಾರೆ. ಇವರ ಉಪದೇಶ ಕೃತಿಯಲ್ಲಿ ಪಾಂಡಿತ್ಯತೆಯು ಹೆಚ್ಚಾಗಿಲ್ಲದಿದ್ದರೂ ಇವರ ಅನುಭವ ಸಾರ ಸ್ಪಷ್ಟ ಮತ್ತು ಪವಿತ್ರ. ಅನುಷ್ಠಾನವು ಉತ್ತಮ ಶ್ರೇಣಿಗೆ ಸೇರಿದುದಾಗಿದೆ. ಇವರ ಕವಿತೆಗಳಲ್ಲಿ ಸಾಹಿತ್ಯದ ಸರಸತೆ, ಅಂತರ್ವೇದನೆ, ಆಳವಾದ ಅನುಭವ ಮತ್ತು ಸಂತನೊಬ್ಬನ ಅದ್ಭುತ ವ್ಯಕ್ತಿತ್ವವು ಎದ್ದು ಕಾಣಬರುತ್ತದೆ. ತಮ್ಮ ಕಾವ್ಯ ರಚನೆಯಲ್ಲಿ ಇವರು ಮಾನವ ಜೀವನವನ್ನು ಎಷ್ಟು ಸುಂದರತಮವಾಗಿ ಅಭಿವ್ಯಕ್ತಗೊಳಿಸಿದ್ದಾರೆ ಎಂಬುದು ಸ್ಪಷ್ಟ

ವಾಗುತ್ತದೆ. ತಮ್ಮ ರುಚಿ ವೈಚಿತ್ರ್ಯವನ್ನು ಕಬೀರರು ಎಲ್ಲೆಡೆಯಲ್ಲಿಯೂ ವ್ಯಕ್ತಪಡಿಸಿದ್ದಾರೆ.

ಕಬೀರರು ನಿರ್ಗುಣ ಮತದ ಮೂಲ ಅಧಿಷ್ಠಾಪರು. ಪರಮೇಶ್ವರನು ಜಗದಗಲಕ್ಕೂ ವ್ಯಾಪ್ತಿಹೊಂದಿದ್ದಾನೆ. ಆತನು ಅನುಭವ ಸಾಧ್ಯವೇ ಹೊರತು ಈ ಚರ್ಮ ಚಕ್ಷುಗಳಿಂದ ಆತನನ್ನು ನೋಡಲು ಸಾಧ್ಯವಾಗು ವುದಿಲ್ಲ. ಅವರು ಉದ್ದಾಮ ಕವಿಗಳೂ ಅಲ್ಲದೆ ಕವಿ ಗುರುವೂ, ಕವಿಪ್ರೇರ ಕರೂ, ಆಗಿದ್ದಾರೆ. ಕಾಲದ ಕಲಹವನ್ನೂ, ನಾಡಿನ ಧರ್ಮಾಂಧತೆ ಯನ್ನೂ, ಹಿಂದೂ ಮುಸ್ಲಿಮ ವೈಮನಸ್ಸನ್ನೂ ತೊಡೆದುಹಾಕಿದರು. ತಮ್ಮ ಪರಿಶುದ್ಧಾತ್ಮಕ ಸಂದೇಶಾಮೃತವನ್ನು ಸಕಲರಿಗೂ ಸಾರಿದರು. ಎಲ್ಲ ಧರ್ಮಾವಲಂಬಿಗಳನ್ನೂ ಒಂದೇ ಸಮದೃಷ್ಟಿಯಲ್ಲಿ ಕಂಡರು. ಸಂಸಾರದ ಭೀಕರ ಕಾಠಿಣ್ಯತೆಗೆ ಅಂಜಿ ಮನುಷ್ಯನು ಭಗವಂತನನ್ನು ನೆನೆಯಿಸಿಕೊ ಳ್ಳುತ್ತಾನೆ. ಆತನನ್ನು ವಿವೇಕವು ವಾಸ್ತವಿಕತೆಯ ಕಡೆಗೆ ತಿರುಗಿಸಿ, ಅದು ಮಿಥ್ಯೆಯ ಸಂಗಡದ ಸಂಬಂಧವನ್ನು ಕಿತ್ತುಹಾಕುತ್ತದೆ. ಸತ್ಯ ಜ್ಞಾನದ ಹಾದಿಯನ್ನು ಆ ವೇಳೆಯಲ್ಲಿ ಕಬೀರರು ತೋರಿಸಿ ಸಂತೃಪ್ತಿ ಮನುಜನಿಗೆ ಚೇತನಾಬಲವನ್ನು ನೀಡಿದೆ. ದೀನದಲಿತರ ಮೇಲೆ ಎಸಗು ತ್ತಿದ್ದ ಅನಾಚಾರ ಮತ್ತು ಅವರ ಶೋಷಣೆಯನ್ನು ಕಂಡ ಕಬೀರರಿಗೆ ಅಸಹ್ಯವಾಗುತ್ತಿತ್ತು. ಇವರ ಸೂಕ್ಷ್ಮ ದೃಷ್ಟಿಯು ಕೇವಲ ಧಾರ್ಮಿಕ ಕ್ಷೇತ್ರದಲ್ಲಿಯೇ ಕೊನೆಗೊಳ್ಳದೆ ಸಮಾಜದ ಕಡೆಗೂ ಹರಡಿತ್ತು. ಸತ್ಯದ ವಿವೇಮಾಂಸೆಯನ್ನು ತಿಳಿಸಿ, ಮಾಯಾ ಜಗತ್ತನ್ನು ಮರೆತು ಆತ್ಮೋನ್ನತಿ ಯನ್ನು ಪಡೆಯುವದನ್ನು ಜನತೆಗೆ ಸಾರಿದ ಭಾಗವತ ಕಬೀರ. ಯೋಗ ಮತ್ತು ಶಿಕ್ಷೆಗೆ ಉಚ್ಚ ಸ್ಥಾನವನ್ನಿತ್ತ ಏಕೇಶ್ವರವಾದಿಯು ಕಬೀರ.

# ಗುಡಿ



೧

ದೇವನ ಗುಡಿಗೆ ।
ಕಂಬಗಳೆರಡು ।
ಕಳಸವುದೊಂದೆ ।
ಒಂಭತು ಬಾಗಿಲು ।
ಕೋಟೆಗಳೇಳು ।
ಏನಿದು ಅಂದ? ।
ಎನಿತಿದು ಚಂದ? ।

೨

ದೇವರೆ ಕಾಣನು ।
ಪೂಜೆಯುದೆಂತು? ।
ಎನಿತಿದು ಹೊಲಸು? ।
ಎಷ್ಟಿದೆ ಕಸವು? ।
ಬಾಗಿಲ ತೆರೆದು ।
ನೋಡಲೆ ಇಲ್ಲ ।
ಗುಡಿಯಲಿ ಹೊಲಸು ।
ಯುಗಯುಗದಿಂದ ।

೩

ಹೊರಗಿನ ಸಿಂಗರ ।
ಹೊರಗೇ ಬಣ್ಣ ।
ಹೊರಗೇ ಸುಣ್ಣ ।
ಒಳಗೇನಾಯಿತು? ।
ತಿಳಿಯಲೆ ಇಲ್ಲ ।
ಕತ್ತಲೆ ಕಾಳು ।
ಮುತ್ತಿದೆ ಹಾಳು ।

೪

ದೇವನ ಪೂಜೆಗೆ ।
ಆಯಿತು ಸೊನ್ನೆ ।
ಗಂಟೆಯು ಕಾಳೆಯು ।
ಸಪ್ಪಳ ಎಲ್ಲಿ ।
ದೀಪದ ಧೂಪದ ।
ಸುಳುವೇ ಇಲ್ಲ ।
ಬೋನದ ಎಡೆಯುನು ।
ಹಿಡಿಯಲಿ ಇಲ್ಲ ।

೫

ಗುಡಿಯಲಿ ಹುಳಗಳು
ಗುಂಗಾಡಿ ಬಹಳ ।
ಹಾವು ಚೇಳಿಗೆ ।
ಲೆಕ್ಕವೆ ಇಲ್ಲ ।
ಗುಡಿಯನು ಹಾಳು ।
ಮಾಡಿದಿ ಬಹಳ ।
ಗುಡಿಯಲಿ ಒಳಗೆ ।
ಹಸನಾಗಿ ತೊಳೆಯೊ ।
ಕಸವನು ಗೂಡಿಸಿ ।
ಪೂಜೆಯ ಮಾಡು ।
ಗುಡಿಯಲಿ ದೇವನು ।
ಕಾಣುವನಾಗ ।
ಕತ್ತಲೆ ಕಾಳು ।
ಹೋಗುವದಾಗ ॥

# ಗಿಳಿ

## ೦

೧

ಅರಗಿಳಿಯಾಗು ।
ನರವನದೊಳಗೆ ।
ಹರನನು ಜಪಿಸು।
ಶಿರಿಯನು ಕಾಣು।

೨

ಕಹಿಫಲ ಬೇಡ ।
ಸವಿಫಲ ಸವಿಯೊ ।
ಮಹಿಯಲಿ ಬಾಳು।
ಭವವನು ನೀಗು ।

೩

ಬಕುತಿಯ ಪಂಜರದಿ ।
ಯುಕುತಿಯಲಿ ಬಾಳು ।
ಶಕುತಿಯು ಬರುವದು ।
ಮುಕುತಿಯು ದೊರೆವುದು ।

೪

ಮಂಜರೆ ಬಹಳ ।
ಸಂಜೆಯ ಕಾಳು ।
ಹಂಜರ ಹಾಳು ।
ಅಂಜದೆ ಬಾಳು ।

೫

ಹೆಣ್ಣಿನ ರಂಜನೆ ।
ವಿಷಯದ ನಂಜವು ।
ದೋಷದ ಗುಂಜಿದೆ ।
ಸೌಖ್ಯದ ಮಂಜಿದೆ ।

೬

ಮಾಯದ ಮದವು ।
ಗಾಯದ ನಿಧಿಯು ।
ವಿಷಯದ ವಿಷಕೆ ।
ಔಷಧ ಕಸವು ।

೭

ಸವಿನುಡಿ ನುಡಿದು ।
ಶಿವನನು ಪಾಡು ।
ಕೇಳುತ ಜಗವು ।
ಬಾಳಲಿ ಸುಖದಿ ।

೮

ಧರೆಗಿಳಿಯೊಳಗೆ ।
ಅರಗಿಳಿಯಾಗು ।
ಹಿರಿ ಗಿಳಿ ಎನಿಸು।
ಹರನೊಳು ಬೆರೆದು ।

# ಜೋಗುಳ ಪದ



ಸ್ಥಿರವಾದ ಆಸನದಿ ಕುಳಿತುಕೊಂಡವನು ।
ಅಸ್ಥಿರ ವ್ಯವಹಾರ ತೊರೆದು ಬಿಟ್ಟವನು ।
ಸುಸ್ಥಿರದಿ ಇಂದ್ರಿಯ ಕಟ್ಟಿಬಿಟ್ಟವನು । ಸಿದ್ಧಲಿಂಗಾ ।
ಕೋಟಿಚಂದ್ರರು ಹೊಳೆವ ಪರಶಿವನ ಕಂಡವನು ।ಜೊ।ಜೊ ॥೧॥

ಆಸನಹಾಕಿ ಕುಳಿತುಬಿಟ್ಟವನು ।
ನಾಶಿಕಾಗ್ರದಿ ದೃಷ್ಟಿನಿಲ್ಲಿಸಿದವನು ।
ಬೀಸುವ ಗಾಳಿಯು ಕಟ್ಟಿಸಿದವನು । ಸಿದ್ಧಲಿಂಗಾ ।
ದೆಶೆದೆಶೆಗೆ ಮುತ್ತಿನ ಮಳೆಗರಿಸಿದವನು । ಜೊ । ಜೊ ॥೨॥

ಮೂಲಚಕ್ರದ ಮುಖ ಮೇಲೆ ಮಾಡಿದನು ।
ಸುಷುಮ್ನ ನಾಳವನು ತೆರೆದು ಬಿಟ್ಟವನು ।
ಆರು ಚಕ್ರವನೇರಿ ಮೇಲೆ ಬಂದವನು । ಸಿದ್ಧಲಿಂಗಾ ।
ಬ್ರಹ್ಮರಂಧ್ರದಿ ಕೋಟಿ ರವಿಯ ಕಂಡವನು ।ಜೊ।ಜೊ ॥೩॥

ಉನ್ಮನಿಸ್ಥಲವನು ದಾಟಿಬಂದವನು ।
ಚಿನ್ಮಯ ಆನಂದ ಬೆಳಗನುಂಡವನು ।
ತನ್ಮಯನಾಗಿ ಪರಿವೆ ಬಿಟ್ಟವನು । ಸಿದ್ಧಲಿಂಗಾ ।
ಜನ್ಮ ಮರಣಗಳನ್ನು ಗೆದ್ದುಬಂದವನು । ಜೊ । ಜೊ ॥೪॥

ಮನವನ್ನು ಮಹದಲ್ಲಿ ನಿಲ್ಲಿಸಿದವನು ।
ಅಹಂಬ್ರಹ್ಮ ಜಪದಲ್ಲಿ ಸ್ನಾನಗೈದವನು ।
ಕುಂಡಲಿಯ ಸರ್ಪವ ಸಹಸ್ರಕೆ ತಂದವನು । ಸಿದಲಿಂಗಾ ।
ಬೆಂಕಿಯ ಕಾರಿಸಿ ಮುಕ್ತನಾದವನು । ಜೊ । ಜೊ ॥೫॥

ವಿರತಿ ವೈರಾಗ್ಯ ಬಲಿಸಿಕೊಂಡವನು ।
ಮೌನ ಏಕಾಂತ ತಪವಗೈದವನು ।
ಆಶೆಪಾಸನೆಗಳು ತೊರೆದು ಬಿಟ್ಟವನು । ಸಿದ್ಧಲಿಂಗಾ ।
ಜೀವನ್ಮುಕ್ತನಾಗಿ ಜಗದಿ ಮೆರೆದವನು । ಜೊ । ಜೋ ॥೬॥

ಈ ರೂಢಿಗಳನೆಲ್ಲ ಬಿಟ್ಟುಕೊಟ್ಟವನು ।
ಆರೂಢ ಮಾರ್ಗದಿ ಚರಿಸಿ ಹೋದವನು ।
ಆರು ಮೂರನ್ನೆಲ್ಲ ತುಳಿದು ನಿಂತವನು । ಸಿದಲಿಂಗಾ ।
ಸಚ್ಚಿದಾನಂದ ರೂಪ ತೋರಿ ಮೆರೆದವನು ॥ ಜೊ । ಜೊ ॥೭॥
ಕಾಮಕ್ರೋಧಾದಿ ಮದವ ಸುಟ್ಟವನು ।
ಶಮೆದಮೆ ಶಾಂತಿ ಬೆಳಕ ಕಂಡವನು ।
ಸಪ್ತಭೂಮಿಕೆ ಧಾಟಿಹೋಗಿ ನಿಂತವನು । ಸಿದಲಿಂಗಾ ।
ಪೂರ್ಣ ಭೋಗಿಯೆಂದೆನಿಸಿಕೊಂಡವನು ॥ ಜೊ । ಜೊ ॥೮॥
ಅಷ್ಟಾಂಗಯೋಗ ಸಾಧಿಸಿದವನು ।
ರೇಚಕ ಪೂರಕ ಕುಂಭಕವ ಮಾಡಿ ।
ಇಡಾ ಪಿಂಗಳದಿ ಸುಷಮ್ನ ಹರಿಸಿ । ಸಿದಲಿಂಗಾ ।
ರಾಜಹಟಯೋಗಗಳ ಸಾಧಿಸಿದವನು ॥ ಜೊ । ಜೊ ॥೯॥
ಯೋಗ ಮುದ್ರೆಯ ನಿಲಿಸಿ ಜಪವಗೈದವನು ।
ಆತ್ಮನಲ್ಲಿಯೆ ದೃಷ್ಟಿ ಇಟ್ಟು ಬಿಟ್ಟವನು ।
ನಾದಬಿಂದು ಕಲಾತೀತನಾದವನು । ಸಿದಲಿಂಗಾ ॥
ಪರಬ್ರಹ್ಮ ನಿನಾಗಿ ಬೆಳಗುತಿರುವವನು ॥ ಜೊ । ಜೊ ॥೧೦॥
ವಿಧಿನಿಷೇಧವ ತೊರೆದು ಬಿಟ್ಟವನು।
ದೇಹ ಸ್ಮರಣೆಲ್ಲದಲೆ ಬಿದ್ದು ಬಿಡುವವನು ।
ಉಣಿಸಿದರೆ ಊಟ ಮಾಡುತಿರುವವನು । ಸಿದಲಿಂಗಾ ।
ಬಾಲೋನ್ಮತ್ತ ಪಿಶಾಚಿಯಾಗಿ ಚರಿಸುವನು ॥ ಜೊ । ಜೊ ॥೧೧॥
ಜೀವಭ್ರಾಂತಿಯ ನಾಶಗೈದುಬಿಟ್ಟವನು ।
ಪರಬ್ರಹ್ಮ ತಾನೇ ತಾನೇ ಇರುವವನು ।
ವಿಷಯ ವ್ಯಸನಗಳೆಲ್ಲ ತೊರೆದುಬಿಟ್ಟವನು । ಸಿದಲಿಂಗಾ ।
ಬಧಿರ ಅಂಧನು ಮೂಕನಾಗಿ ಮೆರೆದವನು ॥ ಜೊ । ಜೊ ॥೧೨॥
ಕುಂಡಲಿ ಶಕ್ತಿಯ ಮೇಲೇರಿಸಿದನು ।
ಪರಶಿವನ ಸಹಸ್ರಾರದಿ ಕೂಡಿಸಿದವನು ।
ಶಿವಯೋಗಿ ಎನಿಸುತ ಜಗದಿ ಮೆರೆದಿಹನು । ಸಿದಲಿಂಗಾ ।
ಯೋಗದ ಮರ್ಮವ ನರಿತವನು ನೀನು ॥ ಜೊ । ಜೊ ॥೧೩॥

—ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ.

# ಅಮರ ಗಾನ !



೧

ಹರಿದು ಬರುತಲಿಹುದು ಗಾನ
ತರತರಂಗವಾಗಿ;
ಪ್ರಕೃತಿಯನ್ನೆ ಕುಣಿಸುತಿಹುದು
ರಾಗ ತೂಗಿ-ತೂಗಿ !

೨

ಕಾಲ-ಕಾಲದಿಂದಲಾರೊ
ಹಾಡುತಿಹರೊ ಏನೊ;
ಯಾರೊ ಹೃದಯ ವೀಣೆಯನ್ನೆ
ಮಿಡಿಯುತಿಹರೊ ಏನೊ !

೩

ಗಾನ ಲೀಲೆಯಿಂದಲೇನೊ
ಇಳಿಯುತಿಹುದೆ ಮೌನ ?
ಯಾರೊ ಇರುಳ ಗವಿಯೊಳಿದು
ಗೈಯ್ಯುತಿಹರೆ ಧ್ಯಾನ ?

೪

ಎಂದೊ ಮುಗಿವುದೇನೊ ಇಲ್ಲೊ
ಈ ಗುಪ್ತ ಸಾಧನ;
ಲೋಕಕೆಂದು ದೊರೆವುದಯ್ಯೊ
ಮಹತ್ತರ ದರ್ಶನ !

೫

ಹರಿದು ಬರುತಲಿಹುದು ರಾಗ
ತರ-ತರಂಗವಾಗಿ,
ಪ್ರಕೃತಿಯನ್ನೆ ಕುಣಿಸುತಿಹುದು
ರಾಗ ತೂಗಿ-ತೂಗಿ !

# ಪರ್ವತ ಶಕ್ತಿ !



೧

ಕಷ್ಟಗಳು ಬರಲಯ್ಯ
ಸಿಡಿಲ್ ಬೀಳುವಂತೆ
ನಷ್ಟಗಳೂ ಬರಲಯ್ಯ
ಗುಡುಗು ಮಿಂಚಿನಂತೆ
ನಾನಿರುವೆ ಪರ್ವತದ ಶಕ್ತಿಯಂತೆ;
ಬಾಳುವೆನು ಬಾಳುವೆನು ಶಿವಭಕ್ತನಂತೆ !

೨

ಸೋಲುಗಳು ಬರಲಯ್ಯ
ಕಲ್ಮಳೆಗಳಂತೆ
ಗೋಳುಗಳ್ ಬರಲಯ್ಯ
ಬಿರುಗಾಳಿಯಂತೆ
ನಾನಿರುವೆ ಪರ್ವತದ ಶಕ್ತಿಯಂತೆ;
ಬಾಳುವೆನು ಬಾಳುವೆನು ಶಿವಭಕ್ತನಂತೆ !

೩

ದುಃಖವದು ಬರಲಯ್ಯ
ಅಗ್ನಿ ಪ್ರಳಯದಂತೆ
ಅವಮಾನ ಬರಲಯ್ಯ
ಭೂಜ್ವಾಲೆಯಂತೆ
ನಾನಿರುವೆ ಪರ್ವತದ ಶಕ್ತಿಯಂತೆ;
ಬಾಳುವೆನು ಬಾಳುವೆನು ಶಿವಭಕ್ತನಂತೆ !

—ಶ್ರೀ ಬಿ. ಬಿ. ಹಿಂಗಮಿರೆ, ರಾಜಾಪುರ [ಕೃಷ್ಣಾತೀರ]

# ಆಟ



ಯಾವ ಹಾವ-ಭಾವದಲಿಯೇನೋ
ಮೋಡಿಕಾರ ಹೂಡಿಹನು ಆಟ ಆಟವೇನೋ
ಮಾಯೆಯಿಂದಲಿ ಸೃಜಿಸಿಹನು ಸಕಲವನು
ಮಮತೆಯಿಂದಲಿ ತುಂಬಿಹನು ಜೀವಕಳೆಯನು ॥೧॥

ಅಸ್ತಿತ್ವದಲ್ಲಿ ಬರುತಿಹವು ವಸ್ತುಗಳೊಮ್ಮೆ
ಅಸ್ತವಾಗುತಿಹವು ವಿಶ್ವಗರ್ಭದಲಿನ್ನೊಮ್ಮೆ
ಈ ರಂಗದಲಿ ವಿಧವಿಧದ ವೇಷದಲಿ ನಟಿಸಿ
ಬಾಳ ಬಾಳಿ ಅಳಿಯುತಿಹವು ಜಗವ ಜಯಿಸಿ ॥೨॥

ಗಂಡು ಹೆಣ್ಣು ಪ್ರಾಣಿ ವಸ್ತುಗಳೆಲ್ಲ ಕೂಡಿ
ಮುನ್ನೋಡಿಸುತಿಹವು ಜೀವನ ಬಂಡಿಯನು ಹೂಡಿ
ಜಗದ ಮುನ್ನೋಟಕೆ ಜೋಡಿಯಾಗಿಹವು ಈ ಗಂಡು ಹೆಣ್ಣು
ಮಾಯಾಛಾಯೆ ಹರಿದು ಪ್ರೇಮಭಾವ ಬಗೆದು ॥೩॥

ಸಾಕು ಬೇಕುಗಳನು ನೀಗಿಸುತ
ಸಿಹಿ ಕಹಿಗಳನು ಸವಿಯುತ
ಪ್ರೇಮ ಫಲದ ರಸವ ಈಂಟುತ
ಸಾಗಿಹವು ಸಕಲವು ಸಂತತದಿ ಮಿಣುಕುತ ॥೪॥

ಹುಳಗಳೊಡನೆ ಆಟವಾಡುವ ಹುಡುಗರಂದದಿ
ಮೋಡಿಕಾರನಾಡುತಿಹನು ತನ್ನೊಂದು ವಿಧದಿ
ತನ್ನ ಮನದ ಬಲವು ಹಿಂಗಿ ಬೇಸರಾದಾಗ
ತನ್ನೊಳಗೆ ತಿರುಗಿ ಎಳೆಯುತಿಹನು ಮೋಡಿಕಾರನಾಗ ॥೫॥

ತನ್ನಾಟಕಾಗಿ ಹೂಡಿದ ಈ ಆಟ
ತನಗಾಗಿಹದದು ಬಲು ಮಾಟ
ಮೋಡಿಕಾರ ಹೂಡಿದ ಈ ಆಟ
ಮಾಡಿಹುದು ನಮಗದು ಬಲು ಮೋಜಿನ ನೋಟ ॥೬॥

— ಶ್ರೀ ಎನ್. ಎಮ್. ಮೃತ್ಯುಂಜಯ, B. A. (Hon)
ಬೆಳಗಾವಿ.

# ಜ್ಞಾನದೇವಿಗೆ

೧

ಧ್ಯಾನಗೈವೆ ಜ್ಞಾನದೇವಿ
ಇಳಿದು ಬಾ
ಹರಸು ಹಾಡು ಹರುಷ ನೀಡು
ಬಳಿಗೆ ಬಾ !
ಕರುಣೆದೋರು ಕೃಪೆಯ ಬೀರು
ಬಾರೆ ಬಾ;
ಬಾಲಕರಿಗೆ ಮೆಚ್ಚಿ ಓ !
ಇಳಿದು ಬಾ !

೨

ನಿತ್ಯ ನಿನಗೆ ನಮನ ಗೈವೆ
ತಾಯೆ ಬಾ;
ಸತ್ಯ ಶೀಲ ಶಾಂತ ದೇವಿ
ಒಲಿದು ಬಾ !
ಮನದ ಮಬ್ಬು ಮುಸುಕಿನಲ್ಲಿ
ಬೆಳಗು ಬಾ !
ನಿತ್ಯ ನವ್ಯ ರೂಪ ತಳೆದು
ಹೊಳೆದು ಬಾ !

೩

ದೇವ ದಿವ್ಯ ನಮ್ಮ ದೇವಿ
ಬಾರೆ ಬಾ;
ಉದಿಸಿ ಬಂದು ಸೊದೆಯ ತಂದು
ಸುರಿಸು ಬಾ !
ಸ್ವರ್ಗ ಲೋಕ ಸುರರ ಕಥೆಯ
ಹೇಳು ಬಾ;
ಅಳಲು ಅಳಕುಗಳನು ಅಳಿಸಿ
ನಗಿಸು ಬಾ!

೪

ಹಾಲು ಜೇನು ಉಣಿಸಿ ಎನ್ನ
ತಣಿಸು ಬಾ
ನಿತ್ಯ ನಿನ್ನ ಸೇವೆಯಲ್ಲಿ
ಕುಣಿಸು ಬಾ !
ಉಷಾದೇವಿ, ನಿಶಾರಾಣಿ
ಯಾಗಿ ಬಾ;
ಶಾಂತ ಸೌಮ್ಯಗಳನು ಮನಕೆ
ಬಳಿಯ ಬಾ !

೫

ಸೊಗದ ಸುಗ್ಗಿಯಂತೆ ಹಿಗ್ಗಿ
ಉದಿಸಿ ಬಾ;
ಮುದ್ದನಿತ್ತು ಅಧರ ತುತ್ತ
ನುಣಿಸು ಬಾ !
ಬುದ್ಧಿಬಲವೆ ! ಸಿದ್ಧಿಯೊಲವೆ !
ಒಲಿದು ಬಾ;
ಕಂದ ಕುವರರಲ್ಲಿ ಬಂದು
ನೆಲಸು ಬಾ !

೬

ಧ್ಯಾನ ಗೈವೆ ಜ್ಞಾನದೇವಿ
ಇಳಿದು ಬಾ;
ಬಾಲ ಕರೆಗೆ ಮೆಚ್ಚಿ ಓ !
ತಾಯೆ ಬಾ !

—ಹಿಂಗಮಿರೆ ಬಿ. ಬಿ. ರಾಜಾಪುರ
(ಕೃಷ್ಣಾತೀರ)

# ಬಸವ



ಬಸವನೆಂದರೆನ್ನ ಮನಕೆ ಉಷೆಯು
ರೂಪ ಹೊಳೆವದು
ಬಸವರನ್ನು ನೆನೆವ ಜನಕೆ ದಿಶೆಯು
ರೂಪ ತಿಳಿವುದು
ಬಸವ ರೂಪ ರಸದ ಕೂಪ, ಜಗದ
ಜೇಣುವಾಗಲಿ
ಬಸವ ರೂಪ ಯಶದ ಧೂಪ ಸೊಗದ
ರೇಣುವಾಗಲಿ
ಬಸವ ಹೃದಯ ಹೆಸರಿನುದಯು, ರವಿಯು
ತೇಜ ತೀಡಲಿ
ಬಸವರೆದೆಯು ಹೊಸವ ಸೊದೆಯು, ಕವಿಯು
ಓಜೆ ಮೂಡಲಿ
ಬಸವ ಭಾವ ಹೊಸವು ಜೀವ, ಲೋಕ
ರಾಶಿಯಾಗಲಿ
ಬಸವ ದೇವರೆಸೆವ ಹೇವ, ಶೋಕ
ನಾಶವಾಗಲಿ
ಬಸವ ರಂಗ ಹೊಸತರಂಗ, ಭಾವ-
ದಲ್ಲಿ ಏಳಲಿ
ಬಸವ ತುಂಗ ಋಷಿಯ ಸಂಗ, ಜೀವ-
ನಲ್ಲಿ ಬಾಳಲಿ.

—ಬಿ. ಬಿ. ಹಿಂಗಮಿರೆ, ರಾಜಾಪೂರ.
[ಕೃಷ್ಣಾತೀರ]

# ಕಳ್ಳಿ

೦

ಕಣ್ಣು ಮುಚ್ಚಣಿ ಆಟ ಆಡುತ ।
ಎಷ್ಟು ಕಾಲನು ಕಳೆಯುವಿ ? ।
ಆಟ ಮುಗಿಯದೆ ಕಾಟ ತಪ್ಪದು ।
ಎಷ್ಟು ಕಷ್ಟವ ಬಡುವದು ? ॥೧॥

ಫಾಜೆ ಮುಟ್ಟದೆ ಆಟ ಮುಗಿಯದು ।
ಕಳ್ಳಿ ಕಿರಿ ಕಿರಿ ಬಹಳಿದೆ ।
ಜಗದ ಅಗಲವು ಮುಗಿಲ ಉದ್ದವು ।
ಇರುವದೀ ಕ್ರೀಡಾಂಗಣ ॥೨॥

ಕಳ್ಳಿ ಚಪಲಳು ಬಹಳ ಚಂಚಲ ।
ಹೊಂಚುಹಾಕುತಲಿರುವಳು ।
ಹಂಚಿಕಿಂದಲಿ ಫಾಜೆ ಮುಟ್ಟಲು ।
ಯತ್ನ ಮಾಡಲು ಆಗದು ॥೩॥

ಹೋದ ಹೋದಲಿ ಕಳ್ಳಿ ಎದುರಿಗೆ ।
ದುಕ್ಕನೆಂದೇ ಬರುವಳು ।
ಆಟ ಆಡುತ ಎಷ್ಟು ದಣಿದರು ।
ನಿಲ್ಲಗೊಡದಲೆ ತುಡುಕುತ ॥೪॥

ದಣಿದು ಮೂರ್ಛೆಯು ಹೋಗಿಬಿದ್ದರು ।
ಕೆಣಕಿ ಎಬ್ಬಿಸಿ ತುಡುಕುತ ।
ಬಳಲಿ ಸತ್ತರು ಎಲ್ಲಿ ಹೋದರು ।
ಬೆನ್ನು ಬಿಡಳೀ ಕಳ್ಳಿಯು ॥೫॥

ಕಳ್ಳಿ ಅಂಜಿಕೆ ಬಹಳ ಇರುವದು ।
ತಳ್ಳಿ ಕಾಡುತಲಿರುವಳು ।
ಸುಮ್ಮನಿದ್ದರು ಬೆನ್ನುಬಿಡಳು ।
ಅಡಗಿ ಕುಳಿತರೆ ಬಿಡುವಳೆ ॥೬॥

ಹಲವು ರೂಪದಿ ಕಳ್ಳಿ ಇರುವಳು ।
ಕೊಲುತಲಿರುವಳು ಸಕಲರ ।
ಕಳ್ಳಿ ಕಣ್ಣನು ತಪ್ಪಿಸಿರುವದು ।
ಮೂರು ಕಣ್ಣನಿಗಾಗದು ॥೭॥

ಹರಿಗೆ ಹುಚ್ಚನು ಹಿಡಿಸಿಬಿಟ್ಟಳು ।
ಬ್ರಹ್ಮ ಮಣ್ಣನು ಮುಕ್ಕಿದ ।
ಸಕಲ ಲೋಕಕೆ ಮರುಳ ಹಿಡಿಸಿತು ।
ಬಳಲಿ ಹೋದರು ಎಲ್ಲರು ॥೮॥

ಜಾರಿ ಹೋದರೆ ಹಾರಿ ಬರುವಳು ।
ತೂರಿ ಕೆಂಡವ ಕಾರುತ ।
ಸಾರಿ ಕಳ್ಳಿಗೆ ಶರಣು ಹೋದರೆ ।
ದಾರಿಕೊಡುವಳು ಫಾಜೆಗೆ ॥೯॥

ಬೈದು ಕಳ್ಳಿಯ ಕೆಣಕಿ ಬಿಟ್ಟರೆ ।
ಕರುಣೆ ಎಂದಿಗು ತೋರಳು ।
ನೆನೆದು ನಿತ್ಯದಿ ಧ್ಯಾನಗೈದರೆ ।
ತಣಿಸಿಬಿಡುವಳು ಮೋದದಿ ॥೧೦॥

ಕಳ್ಳಿ ಕೊಡುವಳು ಶಕ್ತಿಯುಕ್ತಿಯ ।
ಫಾಜೆ ಮುಟ್ಟಲು ಸಹಜದಿ ।
ತಂದೆ ತಾಯಿಯ ಪಾದ ಮುಟ್ಟಲು ।
ಕಣ್ಣು ಮುಚ್ಚಣಿ ಮುಗಿಯಿತು ॥೧೧॥

ಹೀಗೆ ಫಾಜೆಯ ಮುಟ್ಟಿ ಆಟವ ।
ಮುಗಿಸಿ ಹೋದರು ಹಲಬರು ॥
ಕಳ್ಳಿ ಅವರಿಗೆ ನೆರವು ಕೊಟ್ಟಳು ।
ಗುರಿಯ ಸೇರಲು ಶೀಘ್ರದಿ ॥೧೨॥

ಬಸವ ಅಲ್ಲಮ ಸಿದ್ಧರಾಮರು ।
ಚನ್ನಬಸವನು ಅಕ್ಕನು ।
ರಾಮಕೃಷ್ಣನು ಬುದ್ಧ ಕ್ರಿಸ್ತರು ।
ಫಾಜೆ ಮುಟ್ಟಿದ ಮಹಿಮರು ॥೧೩॥

ಇವರ ತೆರದಲಿ ಆಟ ಆಡಲು ।
ಘಾಜಿ ಮುಟ್ಟಲು ಬರುವದು ।
ಆಟ ಆಡುವ ರೀತಿ ಅರಿಯಲು ।
ಕಳ್ಳಿ ಅಂಜಿಕೆ ಪೋಪುದು ॥೧೪॥

—ಶ್ರೀ ಶಿವಾನಂದಸ್ವಾಮಿ ಗವಿಮಠ, ತೆಗ್ಗಿಹಳ್ಳಿ

# ಮೋಹ

○

ಜಗದಾದಿ ಮೂಲವದು ।
ಜಗದಾದಿ ಅಂತ್ಯವದು ॥
ಜೀವದಾಧಾರವದು ।
ಜೀವನದ ಬೇಗೆಯುದು ॥೧॥

ಮಣ್ಣಿನಂದದಲಿ ।
ಚಿರವಾಗಿ ತೋರಿ ।
ಹೆಣ್ಣಿನಂದದಲಿ ।
ಸೊಬಗಾಗಿ ಸಾರಿ ॥೨॥

ಸಂತಸದ ಸಾಲ ಮನೆ ।
ತೂಗಾಡುತಿಹುದು ॥
ಛಾಯ ಕನಸಿನೊಳು ।
ಓಡೋಡುತಿಹುದು ॥೩॥

ಲಯಾದಿ ಲೀನದಲಿ ।
ಲಯವಾಗುತಿಹುದು ॥
ಅಂತ್ಯ ಮೊದಲೆನಿಸಿ ।
ನರ್ತಿಸುತಲಿಹುದು ॥೪॥

ನಾಚಿಕೆಯ ಮುಸುಕಲ್ಲಿ ।
ನಚ್ಚಿಗೆಯ ಮುಸುಕಲ್ಲಿ ॥
ಸೂತ್ರದಾರವ ಪಿಡಿದು ।
ಮಂಗಲನೊಲಾಡಿಪುದು ॥೫॥

ಮೋಹ ಜಾಲದ ಬಲೆಗೆ ।
ಸಿಲುಕದವರಪರೂಪ ॥
ನೇಹ ತಾಳ್ದವರೊಳಗೆ ।
ಸಿಲುಕದವರಪರೂಪ ॥೬॥

ಮೋಹ ತಿಳಿದವರಿಂಗೆ ।
ಹೇಳಲಳವಲ್ಲ ॥
ಇದುವೆನರಿಯದವಂಗೆ ।
ತಿಳಿಯಲಳವಲ್ಲ ॥೭॥

—ಆರ್. ಮೃತ್ಯುಂಜಯ.

# ಕೂಡಲಸಂಗ



ನೀನೆ ತಂದೆ ನೀನೆ ತಾಯಿ
ನೀನೆಯಮ್ಮ ಜೀವನ !
ದೇವ ನಿನ್ನ ಜೋಕೆಯಿಂದ
ನಮ್ಮ ಭಾವ ಬಂಧನ ।

ನಿನ್ನ ಪ್ರೀತಿ ನಿನ್ನ ಶಾಂತಿ,
ಎಲ್ಲಿ ನಿನ್ನ ಲೀಲೆಯು !
ನಿನ್ನ ನುಡಿಯು ನಮ್ಮ ನಡೆಯು
ಎಲ್ಲ ಕಾವ್ಯ ಧಾರೆಯು !

ನೀನೆ ಶಾಂತಿ ನೀನೆ ಭ್ರಾಂತಿ
ನೀನೆ ಸಗ್ಗದೀಶನು !
ನರನ ನಿನ್ನ ಭಾವ ಒಂದೆ
ನೀನೆ ಕೂಡ್ಲ ಸಂಗನು ।

ಶಾಂತಿಯಿರಲಿ ಭ್ರಾಂತಿಯಿರಲಿ
ಎಲ್ಲ ನಿನ್ನ ಕ್ರಾಂತಿಯು !
ಪ್ರೀತಿ ಇರಲಿ ಜ್ಯೋತಿಯಿರಲಿ
ನೀನೆ ಪರಂಜ್ಯೋತಿಯು !

ತಾಯಿ ತಂದೆ ನೀನು ಸ್ಕಂದ
ಎಂದು ನಮ್ಮ ಭಾವನೆ !
ಮಾಯಾ ಮಮತೆ ದೇವ ಕೊರತೆ
ಎಂಬುದೊಂದೆ ವೇದನೆ !

ನಿನೇ ತಾಯಿ ನೀನೆ ತಂದೆ
ನೀನೆಯಮ್ಮ ಜೀವನ !
ನಿನ್ನ ಸಂಗ ಬಂಧುಬಳಗ,
ಪಡೆದ ನಾವು ಪಾವನ !

— ಪ್ರೇಮಾನಂದ ಅಕ್ಕಿವಾಟ (ಕೊಲ್ಹಾಪುರ)

# ಕವಿಚರಿತೆಕಾರರು.

(ಲೇಖಕರು:— ಶ್ರೀ ಮ. ಮಲ್ಲಪ್ಪ ಜ್ಞಾನಮಂದಿರ, ಹಲಗೂರು.)

ಕವಿಯು ಜನತೆಯ ಪಾರಮಾರ್ಥಿಕ ಪ್ರತಿನಿಧಿಯು. ಕವಿಗಳ ಕೃತಿಯು ಶ್ರೇಷ್ಠತೆಯೇ ನಾಡಿನ ಉಚ್ಚತೆಯು. ಕರ್ನಾಟಕವೂ ಸಹ ತನ್ನ ಹೆಚ್ಚಳವನ್ನು ಜಗತ್ತಿಗೆ ಎತ್ತಿತೋರಿಸಿರುವುದು ತನ್ನ ಸಾಹಿತ್ಯದಿಂದಲೇ ಆಗಿದೆ ಎನ್ನಬಹುದು. ಪರಿಸ್ಥಿತಿಯು ಈ ತೆರನಿರುವಲ್ಲಿ ಜನತೆಗೆ ತನ್ನ ನಾಡಿನ ಕವಿಗಳ ವಿಚಾರದ ಅರಿವಿರಬೇಕಾದದ್ದು ಅತ್ಯವಶ್ಯವೇ ಸರಿಯು. ಈ ಅರಿವನ್ನು ಜನತೆಗೆ ನೀಡಲು ಯೋಗ್ಯ ಸಾಹಿತ್ಯ ಸಂಶೋಧಕನ ಸಾಹಸ ಕಾರ್ಯವು ಅವಶ್ಯಕವು. ಸಾಹಿತ್ಯವು ಸಾರೋದ್ಧಾರವಾಗಿ ಬಹು ಹಿಂದಿನಿಂದಲೂ ಬೆಳೆದುಬಂದಿರಬಹುದು. ಅದರ ಉಪಯೋಗವನ್ನು ಜನತೆಗೆ ದೊರಕಿಸಿಕೊಡುವುದು ಬಹುಕಷ್ಟ. ಅಮೇರಿಕವನ್ನು ಕಂಡುಹಿಡಿದವನು ಕೋಲಂಬಸನೇ ಹೊರತು, ಅದರ ನಿರ್ಮಾಣಕಾರನಲ್ಲ. ಕೋಲಂಬಸನಿಂದ ಹಿಂದಕ್ಕೆ ನೂರಾರು ವರ್ಷಗಳಲ್ಲಿಯೇ ಅಮೇರಿಕವು ಇದ್ದಿತು. ಆದರೆ ಅದನ್ನು ಪತ್ತೆಹಚ್ಚಿ ಇಡೀ ಜಗತ್ತಿಗೆ ಕೋಲಂಬಸನು ತೋರಿಸಿದನು. ಅಂತೆಯೇ ನೂರಾರು ವರ್ಷಗಳ ಹಿಂದಿನಿಂದ ಬಂದ ಕನ್ನಡ ಸಾಹಿತ್ಯ ಸೊಗಸನ್ನು ಜನರಿಗೆ ನೀಡಲು ಬಹು ಪರಿಶ್ರಮದಿಂದಲೂ, ಸತತ ಸಹನೆಯಿಂದಲೂ, ವಿಪುಲವೈದುಷ್ಯದಿಂದಲೂ, ಪ್ರಶಸ್ತ ಹಾಗೂ ಮನೋಜ್ಞ ಸಾಹಿತ್ಯದೋಟದ ಪರಿಚಯಕ್ಕಾಗಿ, ಕನ್ನಡಿಗರ ತಿಳಿವಳಿಕೆಗಾಗಿ 'ಕರ್ಣಾಟಕ ಕವಿಚರಿತೆ'ಗಳನ್ನು ನೀಡಿದ ವಿದ್ಯಾವೃದ್ಧರು ಕೀರ್ತಿಶೇಷ ರಾ. ನರಸಿಂಹಾಚಾರ್ಯರು 'ಕರ್ನಾಟಕ ಕವಿಚರಿತೆ' ಮೂರು ಸಂಪುಟಗಳನ್ನು ಇವರು ಕನ್ನಡಿಗರಿಗೆ ಕೊಟ್ಟು 'ಕವಿಚರಿತ್ರೆ' ಕಾರರು ಆಗಿ ಹೊಳೆದಿದ್ದಾರೆ.

ಇವರು ಜನ್ಮತಃ ಅಚ್ಚಕನ್ನಡಿಗರಲ್ಲವು; ವಂಶವು ಉನ್ನತ ಪ್ರಾಚೀನರ ತತ್ತ್ವವನ್ನು ಬಿಡದೆ, ಅರ್ವಾಚೀನವನ್ನು ಅಂಟಿಸಿಕೊಳ್ಳದೆ ಎರಡರ ಸಮಸಂಮಿಶ್ರಣದಿಂದ ವಿದ್ಯಾರ್ಥಿಯ ಬಾಳನ್ನು ಮುಗಿಸಿದರು. ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಿ ಎಂ. ಎ. ಪದವಿಯನ್ನು ಪಡೆದರು. ತಮ್ಮ ಇಡೀ

ಬಾಳನ್ನೇ ಸಾಹಿತ್ಯ ಸೇವೆಗೆ ಮುಡಿಪಿಟ್ಟರು. ಮೈಸೂರಿನ ಪ್ರಾಚ್ಯವಸ್ತು ಇಲಾಖೆಯ ಮುಖ್ಯ ಅಧಿಕಾರಿಗಳಾಗಿ ಕನ್ನಡ ಜನತೆಗೆ ತಮ್ಮ ಸೇವೆಯನ್ನು ಸಲ್ಲಿಸಿದರು. ವಿದ್ಯಾಂ ದದಾತಿ ವಿನಯಂ ಎಂಬುದನ್ನು ಇವರಲ್ಲಿ ಪ್ರತಿಯೊಬ್ಬರೂ ನೋಡಬಹುದಾಗಿತ್ತು. ಬರಿ ಕರ್ನಾಟಕದ ವಿದ್ಯಾವಂತ ವರ್ಗದಲ್ಲಿಯಲ್ಲದೆ ಇಡೀ ಜಗತ್ತಿನಲ್ಲಿಯೇ ಸ್ಥಾನವನ್ನು ಪಡೆಯುವ ಅಂತರರಾಷ್ಟ್ರೀಯ ಜ್ಞಾನಿಗಳಾಗಿದ್ದರು. ಎಂ, ಆರ್. ಎ. ಎಸ್. ಎಂಬ ಸ್ಥಾನವು ಇವರಿಗೆ ದೊರಕಿದ್ದೇ ಇದಕ್ಕೆ ಸಾಕ್ಷಿಯು. ಕರ್ನಾಟಕ ಕೀರ್ತಿಯನ್ನು ಭರತಖಂಡದ ಮೂಲಕ ಇಡೀ ಜಗತ್ತಿಗೇ ಪಸರಿಸಿದ ಪ್ರತಿಭಾಶಾಲಿಗಳು ರಾ. ನರಸಿಂಹಾಚಾರ್ಯರು ಎಂದರೆ ತಪ್ಪೇನಾಗಲಾರದು. ಸಂಸ್ಕೃತದಲ್ಲಿ ಅಗಾಧ ಪಾಂಡಿತ್ಯವು ಇವರಿಗೆ ಇದ್ದಿತು. ಭಾಷಾ ಪ್ರಕಾರಣಕ್ಕೆ ಪರ ಭಾಷೆಯು ಅತ್ಯವಶ್ಯಕವೆಂದು ಅರಿತು ತೆಲುಗು ಮುಂತಾದ ದ್ರಾವಿಡ ಭಾಷೆಗಳಲ್ಲಿ ಅಸೀಮ ತಿಳಿವನ್ನು ಪಡೆದಿದ್ದರು. ಪರಿಶೋಧನೆ ಬುದ್ಧಿಯಿಂದಲೂ, ವಿದ್ಯಾಪ್ರೌಢಿಯಿಂದಲೂ ಇಡೀ ಕನ್ನಡಿಗರಿಗೆ ಮೆಚ್ಚಿಗೆಯಾಗಿದ್ದಂತೆ ಇವರ ಸಹನೆಯೂ ಸಹ ಪ್ರಶಂಸನೀಯವಾಗಿದೆ. ಅಕಸ್ಮಾತ್ ಇವರ ಸಂದರ್ಶನವನ್ನು ಪಡೆದಾಗ ಇವರ ಪರಿಪೂರ್ಣ ಶಾಂತಿಯು ಪರಿಸ್ಫುಟವಾಗದೆ ಇರುತ್ತಿರಲಿಲ್ಲ. ಸರಿ ಸುಮಾರು ಅರ್ಧ ಶತಮಾನದಲ್ಲಿನ ಸಾಹಿತ್ಯ ಸೇವೆಯು 'ಕರ್ಣಾಟಕ ಕವಿಚರಿತೆ' 'ಶಾಸನಪದ್ಯ ಮಂಜರಿ,' 'ನೀತಿ ಮಂಜರಿ,' 'ನೀತಿಕಾವ್ಯಮಂಜರಿ,' 'ಕನ್ನಡ ಸಾಹಿತ್ಯ ಚರಿತ್ರೆ,' 'ಕನ್ನಡ ಭಾಷೆಯ ಚರಿತ್ರೆ' ಈ ಸಾಹಿತ್ಯ ರತ್ನಗಳು ಕನ್ನಡಿಗರಿಗೆ ಕರಗತವಾಗಿವೆ. ಕನ್ನಡಕ್ಕೆ ಸಹಜವಾದ ನವಕಳೆಯನ್ನು ಇವರು ತುಂಬಿದ್ದಾರೆ.

ಸಾಹಿತ್ಯ ಪರಿಷತ್ತಿನ ಪ್ರತಿಷ್ಠಾಪಕರಲ್ಲಿ ಇವರೂ ಒಬ್ಬರಾಗಿ ನಿಂತು, ತಮ್ಮ ಜೀವ ಪರ್ಯಂತ ಇದರ ಅಭಿಮಾನಿಗಳಾಗಿ ದೀಕ್ಷೆ ವಹಿಸಿ ಇದಕ್ಕೆ ಬೆಂಬಲವನ್ನು ನೀಡಿದ್ದಾರೆ. ಕರ್ಣಾಟಕ ಕುಲಭೂಷತಿಯಿಂದ ಪ್ರಾಕ್ತನ ವಿಮರ್ಶ ವಿಚಕ್ಷಣ, ಪ್ರಾಚ್ಯ ವಿದ್ಯಾವೈಭವ ಎಂಬ ಸನ್ಮಾನ ಪ್ರಶಸ್ತಿಗಳೂ, ಕಡಲರಾಣಿಯ ಅಧಿಪತಿಯಿಂದ ಮಹಾಮಹೋಪಾಧ್ಯಾಯ ರಾವಬಹಾದ್ದೂರ ಎಂಬ ಗೌರವ ಪ್ರವೀಣತೆಗಳೂ ಇವರಿಗೆ ಲಭ್ಯವಾಗಿ ಧನ್ಯ ವಿಬುಧರಾಗಿದ್ದಾರೆ. 'ಕೈ ಕೆಸರಾದರೆ ಬಾಯಿ ಮೊಸರು' ಎಂಬಂತೆ ಇವರು ತಮ್ಮ ಜೀವನವನ್ನು ಪ್ರಾಚ್ಯ ಕಲೆಗೂ, ಸಾಹಿತ್ಯ ಪರಿಶೋಧನೆಗೂ ಮುಡಿಪಾಗಿಟ್ಟ ಕಾರಣವೇ ಅಭೂತಪೂರ್ವ ಮನ್ನಣೆಯೇ ಇವರಿಗೆ ಲಭ್ಯವಾದದ್ದು. ಬರಿ

ಕೀರ್ತಿಕಿರೀಟಕ್ಕೆ ಹೊಡೆದಾಡದೆ, ಸೇವಾ ಕುಸುಮ ಸೌರಭವನ್ನು ಸೂಸಿ, ಅದರ ಮೂಲಕ ಜನತೆಯು ತನ್ನ ಸಾಹಿತ್ಯ ಮತ್ತು ಇತಿಹಾಸದ ಬೆಲೆಯನ್ನು ಅರಿತುಕೊಂಡು ಆಚರಿಸುವಂತೆ ಮಾಡಿದರು. ಗಾನಪ್ರಿಯರಾದ ಇವರು ವಿಶ್ರಾಂತಿ ಸುಖವನ್ನು ಅನುಭವಿಸುತ್ತಿದ್ದರೂ ಪರಿಶೋಧನೆಯ ಹುಚ್ಚು ಮಾತ್ರ ಇವರನ್ನು ಸುಮ್ಮನೆ ಕೂರಿಸುತ್ತಿರಲಿಲ್ಲ. ಹಲವು ಬಾರಿ ಇವರು ಅಖಿಲಭಾರತ ಪ್ರಾಚ್ಯ ವಿದ್ಯಾಸಮ್ಮೇಳನದ ಭಾಷಾ ಭಾಗಗಳ ಅಧ್ಯಕ್ಷರಾಗಿದ್ದರು. ಉದಾರ ಪಂಡಿತರಾಗಿದ್ದಂತೆಯೇ ಉದಾರ ದಾನಿಗಳೂ ಆಗಿದ್ದರು. ಇವರ ಮುಂದಾಳುತನದಲ್ಲಿ ಹಲವಾರು ಸಂಸ್ಥೆಗಳು ನಡೆಯುತ್ತಿದ್ದವು. "ಬಾಳಿನ ತಪಸ್ಸು ಕನ್ನಡದ ಸೇವೆ" ಎಂಬುದೇ ಇವರ ಗಾಯತ್ರಿ ಮಂತ್ರವಾಗಿತ್ತು. ಇವರನ್ನು ಉಚ್ಚ ಜಾಗಕ್ಕೆ ತಂದಿರಿಸಿದ್ದುದು ಪಾಂಡಿತ್ಯಕ್ಕೆ ಪ್ರಖರವಾಗಿದ್ದ ವಿಮರ್ಶಾ ಶಕ್ತಿ, ಲಲಿತ ಹಾಸ್ಯ, ರಸದೃಷ್ಟಿಯ ಸಂಯೋಗವು ವೀರಶೈವ ಸಾಹಿತ್ಯದ ಬುಡವನ್ನು ಕೆದಕಿ ಕೆಲಸ ಮಾಡಿದರು. ವೀರಶೈವ ಸಾಹಿತ್ಯಕ್ಕೆ ಬಹುವಾಗಿ ತಮ್ಮ ಸ್ವಂತ ಖರ್ಚಿನಿಂದಲೇ ಕೆಲಸ ಮಾಡಿದ್ದಾರೆ. ಜೀರಗೆ ಬಸವಲಿಂಗಪ್ಪನವರ 'ನರಸಿಂಹಾಚಾರ್ಯ ಸ್ತವನ' ಎಂಬ ಕೃತಿಯು ಇವರನ್ನು ಕುರಿತು ಜನಿಸಿದುದಾಗಿದೆ. ಡಾ. ನಂದೀಮಠ, ಡಾ. ಹಳಕಟ್ಟಿ, ಆಸ್ಥಾನ ವಿದ್ವಾನ್ ಬ. ಶಿವಮೂರ್ತಿಶಾಸ್ತ್ರಿ, ಕೈಲಾಸವಾಸಿ ಎಂ. ಎಸ್. ಬಸವಲಿಂಗಯ್ಯ ಇತ್ಯಾದಿ ವೀರಶೈವ ಮಹನೀಯರು ಇವರು ಹಾಕಿದ ಹಾದಿಯಲ್ಲಿ ಹಾಯ್ದು ಪರಿಶೋಧನಾ ಕಾರ್ಯವನ್ನು ಮುಂದುವರಿಸಿದ್ದಾರೆ. ಇವರು ಪರಿಶೋಧಿಸಿದ ವೀರಶೈವ ಕವಿಗಳ ಸಂಖ್ಯೆಯು ೪೫೩, ವಚನಕಾರರ ಸಂಖ್ಯೆಯು ೨೫೦. "ಅನ್ಯ ಮತ ವಿಷಕಾರುವುದು ಎಂಬ ನುಡಿಗಳು ನನಗೆ ಬಹಳ ಖೇದಕರಗಳಾಗಿವೆ. ಸಾಹಿತ್ಯ ಸಾಮ್ರಾಜ್ಯದಲ್ಲಿ ಮತ, ವರ್ಣ, ಬಡತನ, ಸಿರಿ ಮುಂತಾದ ಭಾವನೆಗಳಿಗೆ ಎಡೆಯೇ ಇಲ್ಲ." ಎಂದು ಒಮ್ಮೆ ಇವರು ಹೇಳಿದ್ದಾರೆ. ಇವರ ಜೀವ ಜ್ಯೋತಿಯು ದಿನಾಂಕ ೬-೧೨-೧೯೩೬ರಲ್ಲಿ ಇಹಲೋಕವನ್ನು ಬಿಟ್ಟು ಹೋದರೂ ಕನ್ನಡ ಜನತೆಯು ಇವರ ಕೃತಿ ಸಂಪರ್ಕದ ಮೂಲಕ ಇವರನ್ನು ಇಲ್ಲಿಯೇ ಇರಿಸಿಕೊಂಡಿದೆ.

'ಕರ್ಣಾಟಕ ಕವಿಚರಿತೆ'ಯು ವಿಶ್ವವಿದ್ಯಾನಿಲಯಗಳಲ್ಲಿ ಪಠ್ಯ ಪುಸ್ತಕವಾಗಿ ನಿಯಮಿತವಾಗಿರುವುದೇ ಇವರ ಹಿರಿಮೆಗೆ ಹಿರಿ ಸಾಕ್ಷಿಯು ಆಗಿರುತ್ತದೆ. ಈ ಕೃತಿಯು ಕನ್ನಡಿಗರ ಅಮೌಲ್ಯ ಸಾಹಿತ್ಯ ಸಂಪತ್ತು. ಇದು

ಇವರ ಜೀವನ ಕಾಲದ ಅವಿನಾಶಕ ಸ್ಮಾರಕವು. ಗೆದ್ದಲು ಹುಳುವಿಗೆ ಆಹಾರವಾಗಿ ಪರಿಣಮಿಸುತ್ತಿದ್ದ ಸಾವಿರಾರು ಓಲೆಯ ಗರಿಗಳನ್ನೂ ಪುಸ್ತಕ ಗಳನ್ನೂ ಪರಿಶ್ರಮದಿಂದ ಪರಿಶೋಧಿಸಿ ಇವರು 'ಕರ್ಣಾಟಕ ಕವಿಚರಿತೆ' ಯನ್ನಾಗಿ ಮಾರ್ಪಡಿಸಿದರು. ಇದು ಕರ್ಣಾಟಕ ಸಾಹಿತ್ಯೇತಿಹಾಸದಲ್ಲಿ ಒಂದು ಧೃವತಾರೆಯು. ದೇಶಾಭಿಮಾನವೂ, ಕರ್ಣಾಟಕ ಭಾಷಾರುಚಿಯೂ ಇದರಲ್ಲಿ ಸ್ಫುರಿಸುತ್ತವೆ. ಅತಿಶ್ರಮ ಸಾಧನೆಯಿಂದ ಬಹು ಅಧ್ಯಯನ ವ್ಯಸನದಿಂದ ಫಲಿಸಿದ ಈ ಕೃತಿಯು ವಿಚಾರವಾಗಿ ಮದ್ರಾಸ ಮೆಯಿಲ್ ಪತ್ರಿಕೆಯು ಇಂತು ಅಭಿಪ್ರಾಯ ಕೊಟ್ಟಿದೆ. *The Publication of the Lives of Kannada poets isan eveht in the history of briental researeh in India.*

'ಶಾಸನ ಪದ್ಯ ಮಂಜರಿ' ಕೃತಿಯಿಂದ ಕರ್ಣಾಟಕದಲ್ಲಿನ ಹಿಂದಿನ ಜೀವನದ ಸಾಹಿತ್ಯ ವೈಭವವೂ, ಭಾಷಾ ಪ್ರಚಾರವೂ ಎಂತು ಇದ್ದಿತು ಎಂಬುದು ತಿಳಿಯಬರುತ್ತದೆ. ಶಾಸನಗಳ ಪ್ರಕಟಣೆಯನ್ನು ಈ ಮೂಲಕ ಹೊರಗೆಡವಿದುದರಿಂದ ಕನ್ನಡ ಸಾಹಿತ್ಯದ ಬೇರು ಮತ್ತು ಕೊಂಬೆಯ ಬುನಾದಿಯನ್ನು ಕಂಡು ಹಿಡಿದು ಇಡೀ ಜಗತ್ತಿಗೆ ನಮ್ಮ ಸಾಹಿತ್ಯದ ಇತಿ ಹಾಸವು ಗೋಚರವಾಗುವಂತಾಯಿತು. ಪ್ರಾಚೀನ ಪರಿಶೋಧಕರಾದ ಕಾಲ್ಡವೆಲ್, ಕಿಟ್ಟೆಲ್, ರೈಸ್, ಪಾಠಕ ಇತ್ಯಾದಿ ಮಹನೀಯರ ಮಾರ್ಗ ವನ್ನು ದೊಡ್ಡದು ಮಾಡಿ, ಅದನ್ನೇ ಇನ್ನಷ್ಟು ಚನ್ನಾಗುವಂತಿರಿಸಿ, ಮಾನ್ಯ ರಾದ ಗೋವಿಂದಪೈ, ಪಂಚಮುಖಿ, ದೇಸಾಯಿ, ಕುಂದಣಗಾರ, ರಾಜ ಪುರೋಹಿತಾದಿಯವರು ಮತ್ತು ಕೀರ್ತಿಶೇಷರಾದ ಕೃಷ್ಣ, ಸಾಲೆತೊರೆ ಇತ್ಯಾದಿಯವರು ಇವರ ಹಾದಿಯನ್ನು ಹಿಡಿಯುವಂತೆ ಕಾರ್ಯಗೈದು, ಕನ್ನಡಿ ಗರಿಗೆ ನವಚೈತನ್ಯವನ್ನೂ, ನೂತನ ಜಾಗೃತಿಯನ್ನೂ, ನವ್ಯ ಉತ್ಸಾಹವನ್ನೂ ತುಂಬಿದ್ದಾರೆ. ಇದು ಸಾಹಿತ್ಯ ಕೃತಿಯಾಗಿದ್ದಂತೆಯೇ ಐತಿಹಾಸಿಕ ಕೃತಿ ಯಾಗಿದೆ. ಕನ್ನಡ ಸಾಹಿತ್ಯಾಭ್ಯಾಸಿಗಳಿಗೆ ಲೆಕ್ಕ ಮಾನಗಳ ಕೋಶವಾಗಿದೆ. *It is a happy idea to have an antholcry of verses from inscriptions, as it givesus an index of the general level of eulture and literature taste in the best period.*

—Dr. Barnet

ಶಾಸನ ಪದ್ಯ ಮಂಜರಿಯ ಕರ್ತರನ್ನು ಕುರಿತು ನಾವು ಪರಿಚಯ ವನ್ನು ಹೇಳಿಕೊಡವುದೆಂದರೆ, ಸೂರ್ಯ ನಾರಾಯಣನನ್ನು ತೋರಿಸಲಿಕ್ಕೆ ದೀವಟಿಗೆಯನ್ನು ಅಪೇಕ್ಷಿಸಬೇಕಾಗುತ್ತದೆ ಎಂದು 'ನವೀನ ಭಾರತ' ವು ನುಡಿದಿರಬೇಕಾದರೆ ಇವರ ವೈಶಿಷ್ಟ್ಯವು ಯಾರಿಗೆ ತಾನೇ ತಿಳಿಯದು! 'ಕರ್ಣಾಟಕ ಭಾಷಾ ಸಂಸ್ಕೃತಿ ಹಾಗೂ ಸಾಹಿತ್ಯವನ್ನು ವಿಶ್ವವ್ಯಾಪಕ ಮಾಡಿವೆ. ಉಳಿದ ಗ್ರಂಥಗಳಿಂದ ಇವರ ಸಾಹಿತ್ಯ ಶೈಲಿ ಸಾಂಖ್ಯವೂ, ಹಾಸ್ಯ ಪ್ರವೃತ್ತಿಯೂ ದ್ರಾವಿಡ ಭಾಷಾ ಜ್ಞಾನವೂ, ನೀತಿಯ ಆಸಕ್ತಿಯೂ ವಿದಿತಗೋಚರವಾಗುತ್ತದೆ. ಇವರ ಸೇವಾ ಭಾವನೆಯನ್ನು ಇವರ ಈ ನುಡಿಗಳು ಸ್ಪಷ್ಟಪಡಿಸುತ್ತವೆ. "ಸಂಪತ್ತು ಒಂದು ಸಮುದ್ರದಂತೆ. ಅದರಲ್ಲಿ ನಾನು ಒಂದು ಅಲೆ. ನನ್ನಿಂದ ನಡೆದಿರುವ ಈ ಕೆಲಸಗಳನ್ನು ತಳಹದಿಯಾಗಿಟ್ಟುಕೊಂಡು ಮುಂದೆ ದಿವ್ಯ ಭವನವನ್ನು ನಿರ್ಮಿಸುವ ಕೆಲಸವು ನಡೆಯಬೇಕೆಂದು ಪ್ರಾರ್ಥಿಸುತ್ತೇನೆ."

ದೇಶಾಭಿಮಾನ ಹಾಗೂ ಭಾಷಾಭಿರುಚಿ ಇವುಗಳಿಂದ ಸಾಹಸಪಟ್ಟು ಸೇವೆಯನ್ನು ಸಲ್ಲಿಸಿದ ಇವರು ಸರ್ವಮಾನ್ಯರು ಎಂಬುದನ್ನು ಆಸ್ಥಾನ ವಿದ್ವಾನ್ ಬಿ. ಶಿವಮೂರ್ತಿಶಾಸ್ತ್ರಿಯವರ ವಾಣಿಯು ಮನದಟ್ಟು ಮಾಡದೆ ಇರದು!

"ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಪಂಪ, ಹರಿಹರ, ಕುಮಾರವ್ಯಾಸರಿಗೆ ನಾವು ಸಲ್ಲಿಸುವಷ್ಟೇ ಗೌರವವನ್ನು ಕನ್ನಡ ಕವಿಚರಿತ್ರಕಾರರಿಗೂ ಸಲ್ಲಬೇಕಾಗುತ್ತದೆಂಬ ವಿಚಾರದಲ್ಲಿ ಅನುಮಾನವಿಲ್ಲ.........ಕನ್ನಡ ನೆಲ, ಜಲ, ಕುಲ ಇರುವ ವರೆಗೆ ನರಸಿಂಹಾಚಾರ್ಯರ ಪುಣ್ಯನಾಮವು ಕನ್ನಡಿಗರ ನಾಲಿಗೆಯಲ್ಲಿ ನೆಲಸಿರುವುದರಲ್ಲಿ ಅನುಮಾನವಿಲ್ಲ." ಇವರು ಸಂಸ್ಕೃತ, ತಮಿಳು ಸಾಹಿತ್ಯಗಳಲ್ಲಿ ವಿಶೇಷ ಪಾಂಡಿತ್ಯವುಳ್ಳವರು. ಗಾಯನ ಕಲೆಯಲ್ಲಿ ಪ್ರವೇಶವುಳ್ಳವರು. ಶಾಸನ ಇಲಾಖೆಯ ವಾರ್ಷಿಕ ವರದಿಗಳು, ಶ್ರವಣಬೆಳುಗೊಳದ ಶಾಸನಗಳು, ವಾಸ್ತು ಶಿಲ್ಪದ ಕೈಪಿಡಿಗಳು ಇವರ ಪಾಂಡಿತ್ಯದ ಕುರುಹಾಗಿವೆ."

ಕನ್ನಡ ದೇಶದ ಚರಿತ್ರೆ, ಭಾಷೆ, ಸಾಹಿತ್ಯ, ಸಂಶೋಧನೆಯಾದಿ ಕ್ಷೇತ್ರಗಳಲ್ಲಿ ಸುಮಾರು ಅರ್ಧಶತಮಾನ ಕಾಲ ಸೇವೆಸಲ್ಲಿಸಿದ್ದಾರೆ. ಪಾಶ್ಚಾತ್ಯ ಸಾಹಿತ್ಯದಿಂದ ಸಂಪಾದಿಸಲಾಗುವ ವಿಮರ್ಶನ ಕ್ರಮವನ್ನೂ, ಉದಾರ ಚಿತ್ರತೆಯನ್ನೂ ಇವರು ಪರಿಪೂರ್ಣವಾಗಿ ಪಡೆದಿದ್ದರು. ಇವರ ಪ್ರಜ್ಞೆಯು

ವಿಶ್ವತೋ ಮುಖವಾದದ್ದು. ಇವರ ಪಾಂಡಿತ್ಯವು ಎಂತು ಅಗಾಧವೂ, ವಿಸ್ತಾರವೂ ಆಗಿತ್ತೋ ಅಂತೆಯೇ ಇವರ ಸೌಜನ್ಯವು ಬಗೆ ಬಗೆಯಲ್ಲಿ ಜಗದ್ರಂಜಕವಾಗಿತ್ತು. ಸಕಲರಲ್ಲಿಯೂ ಮರ್ಯಾದೆ, ಸರ್ವ ಸಂದರ್ಭಗಳಲ್ಲಿಯೂ ಸಹನ ಎಲ್ಲ ದೂನನ ವಿಚಾರಗಳಲ್ಲಿಯೂ ಕುತೂಹಲ ಮತ್ತು ಸಹಾನುಭೂತಿ ರಸಿಕತೆ, ಲಘುಹಾಸ್ಯ ಪರತೆ ಇತ್ಯಾದಿ ಇವರ ಸದ್ಗುಣಗಳು ಆದರ್ಶಪ್ರಾಯವಾಗಿದ್ದವು. ಅಪಾರವಾದ ಸಾಹಿತ್ಯಜ್ಞಾನದ ಜೊತೆಗೆ ಇವರಲ್ಲಿ ಸಹಜವಾದ ಧರ್ಮ ಶ್ರದ್ಧೆಯೂ ಸೇರಿತ್ತು. ಯಾವ ಬಗೆಯ ಉದ್ವೇಗಾವೇಶವಿಲ್ಲದೆ ಪಕ್ಷ ನ್ಯಾಯ ಹಾಗೂ ಸಮರಸ ದೃಷ್ಟಿಗಳಿಂದ ಹೇಳುವುದು ಇವರ ಪದ್ಧತಿ ಸಾಹಿತ್ಯ ರಚನೆಯಲ್ಲಿ ಇವರು ಬಹುಮಟ್ಟಿಗೆ ಪುರಾತನ ಸಂಪ್ರದಾಯವನ್ನು ಅನುಸರಿಸಿದ್ದವರಾದರೂ, ನವೀನ ಮಾರ್ಗದವರ ವಿಷಯದಲ್ಲಿ ಮೈತ್ರಿಯನ್ನೂ, ಸಹಾನುಭೂತಿಯನ್ನೂ ಇವರು ತೋರಿಸುತ್ತಿದ್ದರು. ಸಾಹಿತ್ಯಪರಿಷತ್ತಿಗೂ. ಕನ್ನಡ ಸಮಾರಂಭಕ್ಕೂ ಆಧಾರ ಸ್ತಂಭದಂತೆ ಇದ್ದ ಇವರ ವಿಚಾರದಲ್ಲಿ ಶ್ರೀ ಡಿ. ವಿ. ಗುಂಡಪ್ಪನವರು ಇಂತು ಹೇಳಿದ್ದಾರೆ.

" ಕನ್ನಡವು ಅಪ್ರಸಿದ್ಧವಾಗಿ ಪ್ರೋತ್ಸಾಹವಿಲ್ಲದಾಗಿ ಅವಿತುಕೊಂಡಿದ್ದ ಕಾಲದಲ್ಲಿ ಮುಂದೆ ಬಂದು ಅದನ್ನು ಕೈಹಿಡಿದು ಮೇಲಕ್ಕೆ ಎತ್ತಿದ ನಾಲ್ವರಲ್ಲಿ ಶ್ರೀ ನರಸಿಂಹಾಚಾರ್ಯರವರು ಒಬ್ಬರು. ಅವರು ಕನ್ನಡಕ್ಕಾಗಿ ಪಟ್ಟ ಶ್ರಮವೂ, ಕನ್ನಡದಲ್ಲಿ ಅವರು ಇಟ್ಟಿದ್ದ ಶ್ರದ್ಧೆ ನಂಬಿಕೆಗಳೂ ನಮ್ಮಗಳ ಮನಸ್ಸಿನಲ್ಲಿ ಉಳಿದು ನಮ್ಮ ಜೀವನದಲ್ಲಿ ಹೊರಪಡುವುದಾದರೆ ನಾವು ಆ ಮಹನೀಯರನ್ನು ನಮ್ಮವರೆಂದು ಹೆಮ್ಮೆಪಟ್ಟುಕೊಳ್ಳುವುದು ಸಾರ್ಥಕವಾಗುವುದು. "

# ಜಗನ್ಮಾತೆ ಪಾರ್ವತಿಯ ಅವತರಣ

( ಬರೆದವರು— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ )

ಮೊದಲು ಸಚ್ಚಿದಾನಂದನಿದ್ದನು. ಇದರೊಳಗಿಂದ ಚಿತ್‌ಶಕ್ತಿಯು ಹೊರಗೆ ಪ್ರಕಟವಾಗಿ ಕಾರ್ಯಪ್ರವೃತ್ತಳಾದಳು. ಇವಳು ಸಮಸ್ತ ಸೃಷ್ಟಿಗಳನ್ನೂ ಚರ-ಅಚರ, ಜಡ-ಅಜಡ, ಚೇತನ-ಅಚೇತನ ಮೊದಲಾದವುಗಳನ್ನು ಸೃಷ್ಟಿಸಿದಳು. ಈ ಚಿತ್‌ಶಕ್ತಿಯು ತನ್ನ ಸಮಸ್ತ ಸೃಷ್ಟಿಗಳಲ್ಲಿ ಗುಪ್ತವಾಗಿದ್ದುಕೊಂಡು ಕಾರ್ಯ ನಡಿಸಿದ್ದಾಳೆ. ಈಕೆಯು ಅಣು ರೇಣು ಕಲ್ಲು, ಮಣ್ಣು, ಹೆಂಟೆ, ಬೆಳ್ಳಿ ಬಂಗಾರ ಮೊದಲಾದ ಜಡ ಪದಾರ್ಥಗಳಲ್ಲಿ ಲುಪ್ತವಾಗಿದ್ದಾಳೆ. ಇದಕ್ಕೆಲ್ಲ ಕೂಡಿ ಖನಿಜ ವರ್ಗದ ಒಡವೆಗಳೆಂದು ಹೇಳಬಹುದು. ಈ ಶಕ್ತಿಯು ಇವುಗಳಲ್ಲಿದ್ದುಕೊಂಡು ಗುಪ್ತವಾಗಿಯೇ ಕಾರ್ಯ ಮಾಡುತ್ತಿರುವದು ಅನುಭವಕ್ಕೆ ಬರುವದು. ಈ ಶಕ್ತಿಯು ಬಹಳೇ ಕಡಿಮೆ ತರಗತಿಯಲ್ಲಿಯೇ ಇರುವದರಿಂದ ಇವುಗಳಲ್ಲಿ ಯಾವ ವಿಕಾಸವೂ ಆಗುವದು ಬಹು ಕಡಿಮೆ. ಇವುಗಳನ್ನು ಪೂಜಿಸುವದರಿಂದ ಪ್ರಗತಿಯು ಸಾವಧಾನವಾಗಿ ಸಾಗುವದು. ಆದರೂ ಸಾಧಕನಿಗೆ ಮೊದಲಲ್ಲಿ ಇವುಗಳ ಪೂಜೆಯು ಬೆಳಸುವದು. ಮೂರ್ತಿ ಪೂಜೆಯು ಇವುಗಳಿಂದಲೇ ಪ್ರಾರಂಭವಾಗುವದು. ಆದುದರಿಂದ ಜಗನ್ಮಾತೆ ಇವುಗಳಲ್ಲಿ ಬಹುಕಡಿಮೆ ಪ್ರಮಾಣದಲ್ಲಿ ಅವತರಣವಾದಳೆಂದು ಹೇಳಲು ಯಾವ ಅಡ್ಡಿ ಆತಂಕಗಳಿಲ್ಲ.

ಎರಡನೇದಾಗಿ ಗಿಡಗಂಟಿ ಮರ ಮೊದಲಾದ ವನಸ್ಪತಿ ವರ್ಗಗಳಲ್ಲಿ ಮೇಲಿನವುಗಳಿಗಿಂತ ಹೆಚ್ಚು ಪ್ರಮಾಣದಲ್ಲಿ ಚಿತ್‌ಶಕ್ತಿಯು ಹುದುಗಿಕೊಂಡಿರುವಳು. ಅದ್ದರಿಂದ ಅವುಗಳಿಗಿಂತ ಇವು ಹೆಚ್ಚು ಕಾರ್ಯಮಾಡುವದು. ಕಂಡುಬರುವದು. ಖನಿಜ ವರ್ಗಕ್ಕಿಂತ ಇವು ಹೆಚ್ಚಿಗೆ ವಿಕಾಸವಾಗುವವು. ಇವುಗಳನ್ನು ಪೂಜಿಸುವದರಿಂದ ಸಾಧಕನು ಸ್ವಲ್ಪ ತೀವ್ರ ಪ್ರಗತಿಯಾಗುವದು ಸಹಜವಿದೆ. ಇದು ಎರಡನೇ ತರಗತಿಯ ಮೂರ್ತಿಪೂಜೆಯಾಗುವದು. ಆದರೆ ಕಟ್ಟಿಗೆಗಳನ್ನು ಪೂಜೆ ಮಾಡುವದು ಕಲ್ಲು ಮಣ್ಣನ್ನು ಪೂಜಿಸುವದಕ್ಕಿಂತ ಕಡಿಮೆತರಗತಿಯದಾಗುವದು ಯಾಕಂದರೆ ಅದಕ್ಕೆ

ಹುಳಹತ್ತುವದು, ಕೊಳೆಯುವದು, ಮುರಿಯುವದು, ಸುಡುವದು, ಇದರಲ್ಲಿ ವಿಕಾಸದ ಶಕ್ತಿಯು ಬಹು ಕಡಿಮೆ ಇರುವದು. ಯಾಕಂದರೆ ಮರಗಳನ್ನು ಕಡಿದು ತಂದಿರುವದರಿಂದ ಇದರಲ್ಲಿ ಚಿತ್‌ಶಕ್ತಿಯು ಬಹು ಕಡಿಮೆ ಪ್ರಮಾಣದಲ್ಲಿಯೇ ಇರುವದು. ಇವೆಲ್ಲವುಗಳಿಗಿಂತ ವನಸ್ಪತಿಗಳಲ್ಲಿ ಈ ಚಿತ್‌ಶಕ್ತಿಯು ಹೆಚ್ಚು ಅವತರಣವಾಗಿರುವಳು.

ಮೂರನೇದಾಗಿ ಮೊಬಿಲ್ಸ ಪಿಪೀಲಿಕ ಕ್ರಿಮಿಕೀಟಕ ಪಶುಪಕ್ಷಿ ಮೃಗ ಗೋರಿಲ್ಲ ಮೊದಲಾದ ಪ್ರಾಣಿ ವರ್ಗದಲ್ಲಿ ಮೊದಲಾದವುಗಳಿಗಿಂತ ಬರಬರುತ್ತ ಕ್ರಮಕ್ರಮವಾಗಿ ಹೆಚ್ಚೆಚ್ಚು ಜಾಗ್ರತವಾಗಿ ಈ ಶಕ್ತಿಯು ಪ್ರಕಟವಾಗಿರುವದು. ಇವುಗಳಲ್ಲಿ ಇವಳಿದ್ದುಕೊಂಡು ಹೆಚ್ಚಿನ ಕಾರ್ಯಗಳನ್ನು ಮಾಡುತ್ತಿರುವಳು. ಹೀಗಾದುದರಿಂದ ಇವುಗಳು ಹೆಚ್ಚು ವಿಕಾಸವನ್ನು ಹೊಂದಿದ್ದು ಕಂಡುಬರುವದು. ನನ್ನ ಮನೋಭಾವಗಳ ಪ್ರಜ್ಞೆ ಇವುಗಳಿಗಿರುವದು. ಸುಖದುಃಖಗಳ ಅರಿವೆ ಹೆಚ್ಚಾಗಿ ಇವುಗಳಲ್ಲಿ ಪ್ರಕಟವಾಗಿರುವದು ಕಂಡಬರುವದು. ಇಲ್ಲಿ ತಾಯಿಯ ಅವತರಣವು ಇವುಗಳಲ್ಲಿ ಹೆಚ್ಚೆಚ್ಚಾಗಿ ಪ್ರಕಟವಾಗುವದು. ಮೇಲಿನ ಪೂಜೆಗಳಿಗಿಂತ ಇವುಗಳ ಪೂಜೆಯು ಹೆಚ್ಚಿನದು. ಯಾವ ತಾಯಿಯ ಚಿತ್‌ಶಕ್ತಿಯು ಇವುಗಳಲ್ಲಿ ಹೆಚ್ಚಾಗಿರುವದು. ಇದು ಮೂರ್ತಿ ಪೂಜೆಯು ಮೂರನೇ ಮೆಟ್ಟಲೆಂದು ಹೇಳಬಹುದು. ಸೇವೆಯೇ ಪೂಜೆ ಎಂದು ಯಾರೂ ಮರೆಯಕೂಡದು ಆಹಾರ, ನೀರು ಆಶ್ರಯ ಆರೋಗ್ಯಗಳನ್ನು ಒದಗಿಸುವದು. ಇನ್ನು ನಾಲ್ಕನೇದು ಮನುಷ್ಯ ವರ್ಗದಲ್ಲಿ ಅತಿ ಹೆಚ್ಚೆಚ್ಚು ಜಾಗ್ರತವಾಗಿ ಸರ್ವಾಂತರ್ಯಾಮಿತ್ವವನ್ನು ಹೆಚ್ಚೆಚ್ಚು ಪ್ರಕಟೀಕರಿಸುತ್ತ ಪ್ರಸ್ಫುಟಗೊಳಿಸುತ್ತ ಮಾನವ ಕೋಟಿಯು ಕೆಳತರಗತಿಯಿಂದ ದೇವಮಾನವನತನಕ ಕ್ರಮ ಕ್ರಮವಾಗಿ ಹೆಚ್ಚೆಚ್ಚು ಅವತರಣ ಆಗುತ್ತ ಕಾರ್ಯ ನಡಿಸಿದ್ದಾಳೆ. ಈ ಮನುಷ್ಯ ವರ್ಗದಲ್ಲಿಯೂ ಬೇರೆ ಬೇರೆ ಪ್ರಮಾಣದಿಂದಲೇ ಅವತರಣವಾಗಿದ್ದಾಳೆ. ಖನಿಜ ವರ್ಗದ ಮನುಷ್ಯ ವನಸ್ಪತಿ ವರ್ಗದ ಮನುಷ್ಯ, ಪ್ರಾಣಿ ವರ್ಗದ ಮನುಷ್ಯ, ಮನುಷ್ಯ ವರ್ಗದ ಮನುಷ್ಯ, ದೇವ ವರ್ಗದ ಮನುಷ್ಯ ಹೀಗೆ ಐದು ವರ್ಗಗಳ ಮನುಷ್ಯರಲ್ಲಿ ಅವತರಣದ ಪ್ರಮಾಣವು ಕ್ರಮವಾಗಿ ಹೆಚ್ಚೆಚ್ಚಾಗಿ ಅವತರಣವಾಗಿದ್ದಾಳೆ. ಆದರಲ್ಲಿ ಎಲ್ಲಕ್ಕೂ ಹೆಚ್ಚು ಒಳ್ಳೇ ಪರಿಪೂರ್ಣ ಅವತರಣವು ದೇವಮಾನವನಲ್ಲೆಂದು ಹೇಳಬಹುದು. ಮಾನವನಲ್ಲಿ ಕ್ರಮಕ್ರಮವಾಗಿ ತಮಂಧವನ್ನು

ಕಳೆಯುತ್ತ ತನ್ನ ಅರಿವೆಯನ್ನು ಪ್ರಜ್ಞೆಯನ್ನು ಹೆಚ್ಚೆಚ್ಚಾಗಿ ಅರಳಿಸುತ್ತ ಹೆಚ್ಚೆಚ್ಚಾಗಿ ಪ್ರಕಾಶಿಸುತ್ತ ತನ್ನ ಸ್ವಾಮಿತ್ವವನ್ನು ಹೆಚ್ಚಾಗಿ ದೇವಮಾನವನಲ್ಲಿ ತಳೆದಿರುವಳು. ಮಾನವನಲ್ಲಿ ಅಣಿಗೊಳಿಸಿದ ಸಂಕಲ್ಪ ಶಕ್ತಿ, ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ, ಬುದ್ಧಿಶಕ್ತಿಗಳನ್ನೂ ಮತ್ತು ಇವುಗಳ ಕಾರ್ಯಕ್ಷೇತ್ರಗಳಾದ ಅವನ ಇಡೀ ಜೀವನವನ್ನೂ ಪರಮಾತ್ಮನ ಕಡೆಗೆ ಹೊರಳಿಸಿ ಲಿಂಗಮಯ ಅಂಗವನ್ನು ಲಿಂಗಮಯ ಮನವನ್ನು ಲಿಂಗಮಯ ಬುದ್ಧಿಯನ್ನು ಮಾಡಿ ಅವನಲ್ಲಿ ಬೆರೆಯಲು ನೆರವಾಗುವ ಅನೇಕ ಮಹಾ ಮಹಿಮಾಮಯ ಲೀಲೆಗಳನ್ನಾಡುವಳು. ಇದರಲ್ಲಿ ಜಗನ್ಮಾತೆಯು ಆದದ್ದನ್ನು, ಆಗುವದನ್ನು, ಬಂದುದನ್ನು, ಬರುವದನ್ನು ಸ್ವಸಂತೋಷದಿಂದ ಸಹಿಸಲು ತಾಳ್ಮೆಯಿಂದ ತಾಳಿಕೊಳ್ಳಲು ಶಾಂತಿಯಿಂದ ಇರಲು ಒಪ್ಪಿಕೊಂಡು ಎಲ್ಲತರದ ತ್ಯಾಗ ಬಲಿದಾನಕ್ಕೆ ಸಿದ್ಧಳಾಗ ಅವತರಣಳಾಗಿದ್ದಾಳೆ. ಆದಕ್ಕಾಗಿ ಮಾನವ ಪೂಜೆಯು ಎಲ್ಲಕ್ಕೂ ಹೆಚ್ಚಿನ ಶ್ರೇಷ್ಠ ಪೂಜೆಯೇ ಸರಿ. ಆದರಲ್ಲಿ ದೇವಮಾನವನ ಪೂಜೆಯು ಬಹು ಶ್ರೇಷ್ಠ ಉಚ್ಚತರಗತಿಯ ತೀವ್ರ ಫಲಕಾರಿಯಾದ ಪೂಜೆಯೇ ಸರಿ. ಯಾಕಂದರೆ ಅಲ್ಲಿ ತಾಯಿಯ ಅಸ್ತಿತ್ವ ಅವತರಣ ಪರಿಪೂರ್ಣವಾಗಿರುವದು. ಇಂಥ ದೇವಮಾನವನ ಪೂಜೆಯು ಬಹು ಶ್ರೇಷ್ಠ ಉಚ್ಚತರಗತಿಯ ತೀವ್ರ ಫಲಕಾರಿಯಾದ ಪೂಜೆಯೇ ಸರಿ. ಯಾಕಂದರೆ ಅಲ್ಲಿ ತಾಯಿಯ ಅಸ್ತಿತ್ವ ಅವತರಣ ಪರಿಪೂರ್ಣವಾಗಿರುವದು. ಇಂಥ ದೇವಮಾನವರೇ ಶರಣರು. ಜಂಗಮರು ಇವರೇ ಗುರುಗಳು. ಈಪ್ರಕಾರ ಅವತರಣವಾದ ಜಗನ್ಮಾತೆಯು ಚಿತ್‌ಶಕ್ತಿಯನ್ನು ಇವರ ಪಾದುಗಳ ಹೆಬ್ಬೆರಳುಗಳಿಂದ ಭಕ್ತರು ಕರಣಪ್ರಸಾದ, ಪಾದೋದಕ, ಕರಣತೀರ್ಥ ಮೊದಲಾದವುಗಳ ಮುಖಾಂತರ ದೊರಕಿಸಿ ಧನ್ಯರಾಗುತ್ತಿರುವರು. ಮೂಲಾಧಾರದ ಅತಿ ತಳದಲ್ಲಿ ಕುಂಡಲಿನಿ ಶಕ್ತಿಯು ಹಾವಿನೋಪಾದಿಯಲ್ಲಿ ಬಿದ್ದಿರುವಳು. ಭಕ್ತಿ, ಜ್ಞಾನ, ಕಾರ್ಯ ಮೊದಲಾದ ಸರಿಯಾದ ಯೋಗ್ಯ ಸಾಧನಗಳ ಮೂಲಕ ಅವಳು ತನ್ನ ಅಧೋಮುಖವನ್ನು ಮೇಲೆ ಮಾಡಿ ಆರು ಚಕ್ರಗಳನ್ನು ಏರಿ ಸಹಸ್ರಾರದಲ್ಲಿ ವಿಕಾಶಿಸಿ ಶಿಖಾ, ಅನು, ಪಾಶ್ಚಿಮ ಚಕ್ರಗಳಲ್ಲಿ ಹಾಯ್ದು ಎರಡು ಟಿಸಿಲುಗಳಾಗಿ ಸುಷುಮ್ನೆಯ ಎಡಬಲಕ್ಕಿರುವ ಈಡಾ ಪಿಂಗಳೆಗಳ ಮೂಲಕ ಕೆಳಗೆ ಹರಿದು ಪಾದಗಳತನಕ ಬಂದು ಹೆಬ್ಬೆರಳುಗಳಲ್ಲಿ ಈ

ಚಿತ್ ಶಕ್ತಿಯು ಪ್ರವಹಿಸುತ್ತಿರುವದು. ಇಂಥ ದೇವಮಾನವ ಜಂಗಮರ ಸೇವೆಯಿಂದ ಎಲ್ಲರೂ ಪುನೀತರಾಗುವರು. ಇಲ್ಲಿ ಮಹಾತಾಯಿಯು ಹೆಚ್ಚುಹೆಚ್ಚಾಗಿ ಅವಿರ್ಭಾವಹೊಂದಿ ಹೆಚ್ಚಾಗಿ ಇಲ್ಲಿ ಪ್ರಕಟವಾಗಿರುವಳು. ಅದರಿಂದ ಇಂಥವರು ಸೇವೆಗೆ ತಕ್ಕವರು. ತಾಯಿಯ ಅತಿ ಹೆಚ್ಚಿನ ಅವತರಣವೆಂದರೆ ಇಂಥ ದೇವಮಾನವ ಜಂಗಮರಲ್ಲಿ ಹೊರತು ಬೇರೆ ಯಾರಲ್ಲಿಯೂ ಇಷ್ಟು ಹೆಚ್ಚಾಗಿ ಅವತರಣವಾಗುವದು ಶಕ್ಯವಿಲ್ಲ. ಅದಕ್ಕೇ ಇವರು ಇವಳ ಭವ್ಯ ದಿವ್ಯ ಸೃಷ್ಟಿಯಲ್ಲಿ ಹೆಚ್ಚಿನವರು ಅವತಾರಿಕರೆಂದರೆ ಇವರೇ ಸರಿ ಬೇರೆ ಇಲ್ಲ. ಯಾರಲ್ಲಿ ಮಹಾತಾಯಿಯು ಹೆಚ್ಚಾಗಿ ಅವತರಣ ಹೊಂದಿರುವಳೋ ಅವರೇ ಹೆಚ್ಚಿನ ಅವತಾರಿಗಳು. ಇಂಥವರಿಂದ ಜಗದಲ್ಲಿ ಒಳ್ಳೇ ಮಹತ್ವದ ಹೆಚ್ಚಿನ ಕಾರ್ಯಗಳಾಗಿರುವದು ಕಂಡುಬರುವದು. ಅದಕ್ಕಾಗಿಯೇ ಭಗವಂತನು ಧರ್ಮವಳಿದು ಅಧರ್ಮ ಹೆಚ್ಚಾಲು ಅವತರಣವಾಗಿ ಬಂದು ಅಧರ್ಮವನ್ನು ಮುರಿಬಡೆದು ಧರ್ಮವನ್ನು ಸ್ಥಾಪಿಸುವನೆಂದು ಹೇಳಿದ್ದಾನೆ." ಪರಶಿವ ಪರಬ್ರಹ್ಮನು ಅವತರಣವಾಗುವದಿಲ್ಲ. ಅವನು ಅವ್ಯಯ ಅವ್ಯಕ್ತ ನಿರಂಜನನು. ಆದರೆ ಗಂಡಾಗಲಿ ಹೆಣ್ಣಾಗಲಿ ಯಾವದೇ ರೂಪದಲ್ಲಿ ಅವತಾರತಾಳಿ ಬಂದವಳು. ಈ ಮಹಾಮಾತೆ ಚಿತ್ ಶಕ್ತಿ ಪಾರ್ವತಿಯೇ ಹೊರತು ಬೇರೆ ಯಾರೂ ಇಲ್ಲ. ರಾಮ, ಕೃಷ್ಣ, ಬಸವ, ಗಾಂಧಿ, ಅಕ್ಕಮಹಾದೇವಿ, ಮೀರಾ, ಸೀತೆ, ಅಲ್ಲಮಪ್ರಭು, ಸಾಯಿಬಾಬಾ, ಸಾವಿತ್ರಿ ಮೊದಲಾದವರೆಲ್ಲ ಜಗನ್ಮಾತೆ ಪಾರ್ವತಿಯ ಅವತಾರವೇ ಸರಿ. ಇವಳೇ ಅವತರಣವಾಗಿ ಬಂದಿರುವಳು. ಬರುತ್ತಿರುವಳೆಂದ ಮೇಲೆ ವಿವರಣೆಗಳು ಬಂದಿವೆ ಇಷ್ಟರಿಂದ ಅವತಾರ ಅವತರಣಗಳ ಕಲ್ಪನೆ ಬಂದಿರಲಿಕ್ಕೆ ಸಾಕು.

ಇವರು ಅವತಾರಿಕ ಗುರುಗಳು, ಅವತಾರಿಕ ಜಂಗಮರು, ಅವತಾರಿಕ ಶರಣರು ಹಿಂದೂ ಧರ್ಮದಲ್ಲಿ ಅದೇಕೆ ಬಹುತರ ಎಲ್ಲ ಧರ್ಮಗಳಲ್ಲಿ ಇಂಥವರ ಪೂಜೆಗೆ ಬಹು ಮಹತ್ವ ಕೊಟ್ಟದ್ದು ಕಂಡುಬರುವದು. ಹಿಂದೂ ಧರ್ಮದಲ್ಲಿ ವಿಶೇಷವಾಗಿ ವೀರಶೈವರಲ್ಲಿ ಇಂಥವರ ಪೂಜೆಯೇ ಮಹಾಪೂಜೆ ಎಂದು ವಿಶೇಷವಾಗಿ ಬಗೆದಿದ್ದಾರೆ. ಇದಕ್ಕೆ ಅಗ್ರಸ್ಥಾನವನ್ನೂ ಕೊಟ್ಟು ಪೂಜಿಸುವರು. ಇದ್ದಾಗ ಪೂಜಿಸುವದು ಅಷ್ಟು ಮಹತ್ವವಾದುದಲ್ಲ. ಸತ್ತಬಳಿಕ ಸಹ ಸಮಿಮಾಡಿ ಅವರ ಲಿಂಗಮಯ ಶರೀರವನ್ನು ಇಟ್ಟು

ಅದರಲ್ಲಿ ಉಪ್ಪು, ಸುಗಂಧದ್ರವ್ಯ, ಭಸ್ಮ ಮೊದಲಾದವುಗಳನ್ನು ಹಾಕಿ ಬಾಗಿಲ ಹಾಕಿ ಸಮಾಧಿ ಕಟ್ಟಿಸಿ ಲಿಂಗಮುದ್ರೆಯನ್ನು ಇರಿಸಿ ಗುಡಿ ಕಟ್ಟಿ ಶಿಖರ ಕಟ್ಟಿ ಷೋಡಶೋಪಚಾರಗಳಿಂದ ಪೂಜಿಸುವರು. ಅವುಗಳ ಜಯಂತಿ ಪುಣ್ಯತಿಥಿ ಜಾತ್ರೆ ವರ್ಷೆರೆಗಳನ್ನು ಸಹ ಮಾಡಿ ಕೃತಾರ್ಥರಾಗುತ್ತಿರುವದು ಸಹ ಕಂಡುಬರುವದು. ಇಂಥ ದೇವಮಾನವನ ಶರೀರದಲ್ಲಿ ಸಂಪೂರ್ಣ ವಾಗಿ ಆ ಚಿತ್‌ಶಕ್ತಿಯು ಅವತರಣವಾಗಿರುವದರಿಂದಲೇ ಹೀಗೆಲ್ಲ ನಡೆಯು ವದಿಲ್ಲವೆ? ಆ ಸಮಾಧಿಗಳಿಗೆ ನಡಕೊಂಡವರು ಅನೇಕ ರೀತಿಯಿಂದ ಪಡ ಕೊಳ್ಳುವರು. ರೋಗ, ಭೂತ, ದರಿದ್ರತನ, ನಿಸ್ಸಂತಾನ ಮೊದಲಾದವು ಗಳನ್ನು ಹೋಗಲಾಡಿಸಿಕೊಂಡು ಸುಖದ ಕಡೆಗೆ ಮುನ್ನಡೆಯುತ್ತಿರುವದು ಕಂಡುಬರುವದು ಇದೆಲ್ಲ ಮಹಾತಾಯಿಯು ಅವತರಣದ ಪರಿಣಾಮವಲ್ಲದೆ ಮತ್ತೇನು.

ಈ ಮಹಾತಾಯಿಯು ಮೇಲೆ ಬರದಂತೆ ಅವತರಣವಾಗಿ ನಿರ್ಮಾಣ ಮಾಡಿದ ಸೃಷ್ಟಿಗಳಾದರೂ ಒಳ್ಳೆ ಪರಿಪೂರ್ಣವಾಗಿವೆ. ಅಲ್ಲದೆ ಅಸಂಖ್ಯವಾದ ಅದೃಶ್ಯ ಸೃಷ್ಟಿಗಳನ್ನೂ ಅದೃಶ್ಯ ಶಕ್ತಿಗಳನ್ನೂ ಆ ಅದೃಷ್ಟ ಶಕ್ತಿಗಳ ಆಘಾತ ಪ್ರತ್ಯಾಘಾತಗಳಿಂದ ಅಲ್ಲೋಲ ಕಲ್ಲೋಲವಾದ ಅನಂತ ಲೀಲೆಗಳನ್ನು ಬಿಟ್ಟು ನಮ್ಮ ಕಣ್ಣಿಗೆ ಕಾಣುವ ಸ್ಥೂಲ ಜಗತ್ತನ್ನೇ ತೆಗೆದುಕೊಂಡು ನೋಡಿದರೆ ಅದೆಷ್ಟು ಪರಿಪೂರ್ಣ ? ಅದೆಷ್ಟು ವಿಚಿತ್ರ ? ಅದೆಷ್ಟು ಅಗಾಧ ? ಅದೆಷ್ಟು ಆಚ್ಚರಿ ? ಅದೆಷ್ಟು ಅಂದ ಚಂದ ? ಅದೆಷ್ಟು ನಿಯಮಬದ್ಧ ? ಅದೆಷ್ಟು ಗಂಭೀರತೆ ಸೌಷ್ಟವತೆ ? ಎಂದ ಅತಿ ವಿಚಾರವಂತರಿಗೆ ಸಹ ಅನಿಸದೆ ಇರುವದಿಲ್ಲ. ಒಂದು ಉಸುಕಿನ ಕಣ, ಹುಲ್ಲು ಕಡ್ಡಿ, ಹೂ, ಗಿಡಗಂಟೆ, ಮರ, ಹೊಳೆ, ಹಳ್ಳ, ಅರಣ್ಯ, ಧರೆ, ಕಂದರ, ಪರ್ವತ, ಪಶು, ಪಕ್ಷಿ, ತಾರೆ, ಹುಳ, ಹುಪ್ಪಡಿ, ಹಾವು, ನವಿಲು, ಕಾಡಮೃಗ, ಹುಲಿ, ಸಿಂಹ, ಚಿರ್ಚ, ಹಗಲು, ರಾತ್ರಿ, ಋತುಗಳು, ಕಾಲಗಳು, ಮಳೆ, ಛಳಿ, ಗಾಳಿ, ಬಿಸಿಲು, ಮೋಡ, ಸಮುದ್ರ, ಬೆಳೆಗಳು, ಧಾನ್ಯಗಳು, ತರತರದ ಜಲ ಚರಗಳು ಅಂತು ೨೧ ಲಕ್ಷ ಜಲಜ, ೨೧ ಲಕ್ಷ ಉದ್ಭಿಜ, ೨೧ ಲಕ್ಷ ಅಂಡಜ ೨೧ ಪಿಂಡಜ ಮೊದಲಾದ ಯಾವದನ್ನು ನೋಡಿದರೂ ಬಹು ಅಂದ ಚಂದ ವಾಗಿ ಕಾಣುವವು. ಅವುಗಳ ಆಕಾರ, ಅವುಗಳ ಬಣ್ಣ, ರೂಪು, ರಚನೆ, ಹೊಳಪು, ಕ್ರಿಯೆ, ನಡಿ ನಡೆ, ಗಂಭೀರತೆ, ಉದಾತ್ತತೆ, ಏಕತೆ, ಸರಳತೆ, ತಾಲಬದ್ಧತೆ, ನಿಯಮಕ್ಕೆ ಆಧೀನತೆ, ಶಾಂತತೆಗಳೆಲ್ಲ ಸ್ಮರಣಕ್ಕೆ ಸೃಷ್ಟಿಸಿ

ಅವತರಣವಾದವಳ ಶಕ್ತಿ, ಸಾಮರ್ಥ್ಯ, ವಿಶಾಲತೆ, ಪರಿಪೂರ್ಣತೆ, ವ್ಯಾಪಕತೆ, ಅಂತರ್ಯಾಮಿತ್ವ, ಸಂಕಲ್ಪಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಕ್ರಿಯಾಶಕ್ತಿ ಬುದ್ಧಿಶಕ್ತಿಗಳ ಸಮಗ್ರತೆಗಳನ್ನು ಕುರಿತು ವಿಚಾರಿಸುತ್ತ ಮಾನವನು ದಿಙ್ಮೂಢನಾಗಿ ಮೂಕನಾಗುವನು. ಇವುಗಳಲ್ಲಿ ಮಾನವನೇ ನಿಸರ್ಗದ ಶಿಖಾಮಣಿ- ಇವನು ಸರ್ವೇಶನ ಹಾಗೂ ಸರ್ವಶಕ್ತಳ ಶಿಶುವು. ಇವೆಲ್ಲವುಗಳ ಗರ್ಭ ಜನನ, ಬಾಲ್ಯ, ಕೌಮಾರ್ಯ, ಯೌವ್ವನ, ವಾರ್ಧಿಕ್ಯ, ಮುಪ್ಪು, ರೋಗ, ಜರಾಮರಣಗಳನ್ನು ವಿಚಾರಿಸಿದರೆ ದಂಗು ಬಡಿದ್ಹುಚ್ಚನಂತಾಗಿ ನಿಂತುಬಿಡುವನು. ಒಂದು ಜಲದಲ್ಲಿಯೇ ಹುಟ್ಟಿ ಬೆಳೆದ ಬಾಳ ಹಾಳಾಗುವದು. ಜಲದಲ್ಲಿ ಪ್ರವಾಹದ ವಿರುದ್ಧ ಬೇಕಾದಲ್ಲಿ ಹೋಗುವದು. ಒಂದು ಭೂಮಿಯ ಮೇಲೆ ನಡೆದಾಡಿ ಬಾಳಿ ಬೆಳೆದು ಉಳಿದು ಹಾಳಾಗುವದು. ಒಂದು ಆಕಾಶದಲ್ಲಿ ಹಾರುವದು- ಅಲ್ಲೇ ಬಾಳಿ ಹಾಳಾಗುವದು. ವಿಜ್ಞಾನದ ಬಲದಿಂದ ಮಾನವನು ಜಲ ತಲ ಆಕಾಶದಲ್ಲಿ ವಿಹರಿಸಬಲ್ಲನು. ಅದರಂತೆ ತಾಯಿಯ ಅವತರಣವು ಬಹಳೇ ಆದರೆ ಅವನೂ ಜಲ, ತಲ, ಆಕಾಶಗಳಲ್ಲಿ ಹೇಗೆ ಬೇಕಾದ ಹಾಗೆ ವಿಜ್ಞಾನಗಳ ಸಹಾಯವಿಲ್ಲದೆ ಏಕಾಕಿಯಾಗಿ ವಿಹರಿಸಿ ಇರಬಲ್ಲ. ಬಾಳಬಲ್ಲ ಕೇಳಬಲ್ಲ. ಬೇಕಾದುದನ್ನು ಮಾಡಬಲ್ಲ. ಇದೆಲ್ಲ ಮಹಾತಾಯಿಯ ಅವತರಣದ ಪರಿಣಾಮವೇ ಸರಿ. ಕಾರಣ ಮಾನವನು ಆ ಚಿತ್‌ಶಕ್ತಿಯನ್ನು ತನ್ನಲ್ಲಿ ಹೆಚ್ಚೆಚ್ಚಾಗಿ ಅವತರಣಗೊಳಿಸಿ ಪ್ರಕಟೀಕರಿಸಿ ಪ್ರಕಾಶಗೊಳಿಸುವದೇ ಮಾನವನ ಹೆಗ್ಗುರಿಯಾಗಿದೆ. ಇದೇ ಲಿಂಗಾಂಗ ಸಾಮರಸ್ಯದ ಗೊತ್ತು ಗುರಿ ಎನಿಸುವದು. ಇಂಥದರಲ್ಲಿ ಬಹು ಆನಂದವಿದೆ; ಸುಖವಿದೆ; ಶಾಂತಿ ಇದೆ. ಏನು ಬೇಕೋ ಅದೆಲ್ಲ ಇದರಲ್ಲಿಯೇ ಇದೆ.

ಅದಕ್ಕಾಗಿ ದೇವತೆಗಳೂ ಕೂಡ ಮಾನವನ ಜನನವನ್ನು ಕಂಡು ಅಚ್ಚರಿಗೊಳ್ಳುತ್ತಿರುವದು ಸಹಜವಿದೆ. ಅವರೂ ಕೂಡ ಹೆಚ್ಚಿನ ಅತೀವ ಇಂದ್ರಿಯ ಸುಖಕ್ಕಿಂತ ಮುಂದೆ ಹೋಗಿರುವದಿಲ್ಲ. ಈ ನಿಜನಿತ್ಯ ಸುಖ ಆನಂದಗಳನ್ನು ಕಂಡು ಅವರೂ ಮಾನವರಾಗಿ ಅವತರಿಸಿ ದೇವತೆಗಳಿದ್ದಾಗ ಆಗದೆಹೋದ ಲೀಲಾ ಕಾರ್ಯಗಳನ್ನು ಮಾಡಿ ಸ್ವಾತಂತ್ರ್ಯ ಸುಖಭೋಗಿಸಿ ಲಿಂಗಾಂಗ ಸಾಮರಸ್ಯವನ್ನು ಪಡೆದು ಮುಕ್ತರಾಗಬೇಕೆಂದು ಸಹ ಬಯಸುವರು. ಮಾನವನಿಂದ ಆಗಬಾರದ್ದು ಆಗದ್ದು ಈ ಸೃಷ್ಟಿಯಲ್ಲಿ ಒಂದೂ ಇಲ್ಲೆಂದು ಅನಿಸುವದು. ಯಾಕಂದರೆ ಅತಿ ಇಂದ್ರಿಯ ಸುಖವನ್ನು

ಪಡೆಯುವ ದೇವತೆಗಳೂ ಕೂಡ ಮಾನವರಾಗಿ ಈ ಮೃತ್ಯುಲೋಕದಲ್ಲಿ ಜನಿಸಬೇಕೆಂದು ಬಯಸುವದರ ಗುಟ್ಟು ಇದೇ ನಿರೀಂದ್ರಿಯ ಸುಖವನ್ನು ಪಡೆಯುವದೇ ಆಗಿದೆ. ಹಾಗು ಇದ್ದರೂ ಅದರಿಂದ ವಾಸನೆ ತಕ್ಕೊಳ್ಳದೆ ಸುಗಂಧವನ್ನು ಸೇವಿಸುವದು ಕಣ್ಣಿದ್ದರೂ ಆದನ್ನು ಉಪಯೋಗಿಸದೆ ತಾನೇ ನಡೆದುಹೋಗುವದು ಇದೆಲ್ಲ ಇಂದ್ರಿಯಾತೀತ ಸುಖ ಆನಂದ ಮನದಲ್ಲಿ, ಸ್ಥೂಲ ಶರೀರಕ್ಕೆ ಇರುವ ಯಾವತ್ತೂ ಇಂದ್ರಿಯಗಳ ಸೂಕ್ಷ್ಮ ರೂಪದಲ್ಲಿ ಇರುವವು. ಆದರೆ ಅವುಗಳನ್ನು ಮಾನವನು ಪ್ರಕಟ ಮಾಡಿದರೆ ಮಾತ್ರ ಆ ಇಂದ್ರಿಯಾತೀತ ಸುಖ ಆನಂದಗಳು ಲಭಿಸುವವು. ಇದೆಲ್ಲ ಆಗಬೇಕಾದರೆ ಆ ಚಿತ್‌ಶಕ್ತಿಯು ಮೇಲೆ ವಿವರಿಸದಂತೆ ಅವತರಣ ಆಗಿರಲಿಕ್ಕೆಬೇಕು. ಅಂದರೆ ಇದೆಲ್ಲ ಸಾಧಿಸುವದು, ಇಲ್ಲವಾದರೆ ಇಲ್ಲ. ವಿಷಯ ಸುಖದಿಂದ ಹೊರಗೆ ಬರುವದು ಶಕ್ಯವಿಲ್ಲ. ಇದೆಲ್ಲ ಈ ಮಾನವನಿಗೆ ಈ ಲೋಕದಲ್ಲಿ ಶಕ್ಯವಿಲ್ಲ. ಇದೆಲ್ಲ ಈ ಮಾನವನಿಗೆ ಈ ಲೋಕದಲ್ಲಿ ಶಕ್ಯವಿದೆ. ಆದಕ್ಕಂತೇ ದೇವತೆಗಳೂ ಕೂಡ ಮಾನವರಾಗಿ ಜನಿಸಬೇಕೆಂದು ಬಯಸುವದರಲ್ಲಿ ಏನೂ ಆಶ್ಚರ್ಯವಿಲ್ಲ.

ಈ ಮಹಾಮಾಯಿಯು ಈಪ್ರಕಾರ ತನ್ನ ಸೃಷ್ಟಿಯ ಅಣುರೇಣು ತೃಣ ಕಾಷ್ಟ ಮೊದಲ್ಗೊಂಡು ಪರಿಪೂರ್ಣ ಮಾನವನತನಕ ಸೃಷ್ಟಿಸಿ ಅವುಗಳಲ್ಲಿ ಒಳಸೇರಿ ಅವತರಣವಾಗಿ ಪ್ರಕಾಶಿಸುತ್ತಿರುವಳು. ಇದೆಲ್ಲ ಆಕೆಯ ವಿರಾಟ ಸ್ವರೂಪದ ರಂಗಮಂಟಪದಲ್ಲಿಯ ವಿಧವಿಧದ ನಟನೆಗಳು. ಈಪ್ರಕಾರ ಅನೇಕ ಬಗೆ, ಯುಕ್ತಿ, ಶಕ್ತಿ, ರೀತಿನೀತಿಗಳಿಂದ ಅವತರಣವಾಗಿ ನಡಿಸಿರುವ ಮಹಾ ಆಟವೇ ಸರಿ. ಇದುವೆ ಪರಮಾತ್ಮನಿಗಾಗಿ ಆಕೆಯು ಮಾಡಿದ ಮಹಾ ಹಿರಿದಾದ ಹಿರೇ ತ್ಯಾಗ ಬಲಿದಾನದ ಅವತರಣವಾಗಿವೆ. ಆಕೆಯ ಅವತರಣದ ಕಾರ್ಯಕಾರಿತೆಯನ್ನೂ ಆಕೆಯ ಹಿರಿದಾದ ಭೋಗ ಯೋಗಗಳನ್ನೂ ಪೂರ್ಣ ಯೋಗಿಗಳಾದಾಗ ಮಾತ್ರ ಶಕ್ಯವಿದೆ ಹೊರತು ಸಾಮಾನ್ಯರಿಗೆ ಪಂಡಿತರಿಗೆ ಹೊಳೆಯುವದು ಶಕ್ಯವಿಲ್ಲ. ನಮ್ಮಲ್ಲಿ ಆಕೆಯು ಪರಿಪೂರ್ಣ ಅವತರಣವಾದಾಗ ಮಾತ್ರ ಆಕೆಯ ಅವತರಣದ ಲೀಲೆಯನ್ನು ಅರಿಯುವದು ಶಕ್ಯವಾಗಿರುವದು. ಕಾರಣ ಪ್ರತಿಮಾನವನು ತಾಯಿಯನ್ನೂ ಹೆಚ್ಚು ಹೆಚ್ಚಾಗಿ ತನ್ನ ಅಂಗೋಪಾಂಗಗಳಲ್ಲಿ ಅವತರಣಗೊಳಿಸಿಕೊಂಡು ಪೂರ್ಣ ಮಾನವನಾಗಲಿಕ್ಕೆ ಹೆಣಗುವದು ಶ್ರೇಯಸ್ಕರವಾಗಿರುವದು. ಇದುವೆ ಮಹಾಮಾಯಿಯ ಅವತರಣದ ಗುಟ್ಟು ಮತ್ತು ಅವತರಣದ ಮಹತ್ವವೂ ಕೂಡ ಆಗಿದೆ ಹೊರತು ಬೇರೆ ಉಳಿದಾದ ಅವತರಣದ ಅವಶ್ಯಕತೆ ಇಲ್ಲ.

# ಪರಾಭಕ್ತಿಯ ಸವಿನುಡಿಗಳು

( ಲೇಖಕರು:— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ. )

---

೧. ಒಳ್ಳೇ ಭಕ್ತಿಭಾವಗಳಿಂದ ಭಗವಂತನ ಧ್ಯಾನ ಪೂಜೆ ಜಪ ಭಜನೆ ಮಾಡುವದರಿಂದ ದೇವರ ರೂಪವು ಅಂತರಂಗ ಬಹಿರಂಗಗಳಲ್ಲಿ ಸ್ಥಿರವಾಗಿ ನಿಲ್ಲುವದು. ಆ ಮೇಲೆ ಬೇರೆ ಯಾತರ ಹಸಿವೆ ಭಕ್ತನಿಗೆ ಉಳಿಯುವದಿಲ್ಲ.

೨. ದಿವ್ಯ ಪರಾಭಕ್ತಿ ಮಾಡುವದರಿಂದ ಎಂದೂ ತೀರದ ಅರವ ಸುಖಶಾಂತಿ ಸಮಾಧಾನ ಆನಂದಗಳು ಲಭಿಸುವವು. ಬಸವ ಸಿದ್ಧರಾಮ, ಬೊಂತಾದೇವಿ, ಅಕ್ಕಮಹಾದೇವಿ, ಚನ್ನಬಸವ, ಮೊದಲಾದ ಶಿವಶರಣರು ಶ್ರೀ ರಾಮಕೃಷ್ಣ ಪರಮಹಂಸ, ನಾರದ, ಧೃವ ಮೊದಲಾದವರು ದಿವ್ಯ ಭಕ್ತಿ ಮಾಡಿದ್ದರಿಂದಲೇ ಎಲ್ಲ ಕಡೆಗೂ ಭಗವಂತನು ಹೃಗ್ಗೋಚರನಾದನು. ಇದರಿಂದ ಅಕ್ಷಯ ಸುಖಹೊಂದಿದರು.

೩. ಸಕಲ ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡು ದಿವ್ಯ ಭಕ್ತಿ ಮಾಡಿ ತನ್ನ ತಾನರಿದ ಬಳಿಕ ಓದುವದೂ ಕೇಳುವದೂ ಉಳಿಯುವದಿಲ್ಲ. ಆಗ ಶಿವೋಹಂ ಎಂದು ಜ್ಞಾನವಾಗುವದು.

೪. ಪ್ರಪಂಚದ ವ್ಯಾಪಾರಗಳೆಲ್ಲ ದೇವರ ಲೀಲೆಗಳೆಂದು ತಿಳಿದು ಅಹಂಕಾರ ಮಮಕಾರ [ ನಾನು, ನನ್ನದು ] ಬಿಟ್ಟು ಪರಮಾತ್ಮನ ಭಕ್ತಿ ಮಾಡಿದರೆ ಅವನಿಂದ ಆಗಲಾರದ್ದು ಯಾವದೂ ಇಲ್ಲೆಂದು ತಿಳಿದು, ಸರ್ವ ವಿಚಾರ, ತರ್ಕ, ಭ್ರಮೆಗಳನ್ನು ತ್ಯಾಗ ಮಾಡಿ ಅವನನ್ನೇ ಹೊಂದಬೇಕು.

೫. ಭಕ್ತನಾಗಲಿಚ್ಛಿಸುವವನು ಸ್ತ್ರೀ, ಧನ, ನಾಸ್ತಿಕರು, ವೈರಿಗಳು ಇವರ ಚರಿತೆಗಳನ್ನು ಕೇಳಕೂಡದು; ಓದಕೂಡದು.

೬. ಭಕ್ತನಾಗಲಿಚ್ಛಿಸುವನು ಡಂಭ, ದುರಭಿಮಾನ, ಮಹತ್ವಾಕಾಂಕ್ಷೆ, ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ಸರಗಳನ್ನು ಬಿಡಬೇಕು.

೭. ಭಕ್ತರು ಎಂದೂ ಯಾವ ವಾದದಲ್ಲಿಯೂ ಬೀಳಕೂಡದು. ವಾದದಿಂದ ಭಕ್ತಿ ಕೆಡುವದು. ಮನಸ್ಸು ಚಂಚಲವಾಗುವದು. ನಂಬಿಗೆ ವಿಶ್ವಾಸಗಳು ಹಾರಿ ಹೋಗುವವು. ಅಹಂಕಾರ ಕ್ರೋಧಗಳು ಪ್ರಾಪ್ತ ವಾಗುವವು.

೮. ಭಗವಂತನ ಮೇಲೆ ಮಾಡುವ ನಿರ್ಭರ ಪರಮ ಪ್ರೇಮವೇ ಭಕ್ತಿಯು. ಅದು ಅಮೃತದಂತೆ ಸವಿ ಇರುವದು. ಅದು ಒಳ್ಳೇ ಶಕ್ತಿದಾಯಕವೂ ಬಲಉಳ್ಳದ್ದು, ಒಳ್ಳೇ ಆನಂದದಾಯಕವೂ ಸುಖಪ್ರದವೂ ಶಾಂತಿದಾಯಕವೂ ಆಗಿರುವದು.

೯. ಪರಿಪೂರ್ಣ ಭಕ್ತಿಯಿಂದ ಸಕಲ ಸಿದ್ಧಿಗಳು ಅಮರತ್ವ ಸಂತೃಪ್ತಿ ಶಾಂತಿ ದೊರೆಯುವವು. ಆಶೆ ವಾಸನೆ ದ್ವೇಷಗಳಿಂದ ಭಕ್ತನು ಬಿಡುಗಡೆ ಹೊಂದುವನು.

೧೦. ನಿಷ್ಕಾಮ ಭಕ್ತಿಯಿಂದ ಸಕಲವೂ ಸಾಧ್ಯವಾಗುವದು.

೧೧. ಅನನ್ಯ ಭಕ್ತಿಯಿಂದ ಭಗವಂತನ ಭಕ್ತಿ ಮಾಡಿದರೆ ಯಾತರದೂ ಕೊರತೆಯಾಗದು.

೧೨. ಭಕ್ತನು ಸಾಯುವತನಕ ಆಹಾರ ವಿಹಾರ ಮೊದಲಾದ ಕೆಲ ಲೋಕ ವ್ಯವಹಾರಗಳನ್ನು ತಕ್ಕರೀತಿಯಲ್ಲಿ ಮಾಡಲೇಬೇಕಾಗುವದು.

೧೩. ಭಗವಂತನ ಸ್ಥೂಲಪೂಜೆ ಭಜನೆ, ನಾಮಜಪ, ಸ್ತೋತ್ರ, ಧ್ಯಾನ, ಸಮಾಧಿಗಳು ಒಂದಕ್ಕಿಂತ ಒಂದು ಹೆಚ್ಚಿನವೇ ಸರಿ.

೧೪ ಭಗವಂತನ ಪೂಜೆ, ಭಗವಂತನ ಕಥಾಮಹಿಮೆ, ಕೊಂಡಾಡುವದು ಮೊದಲಾದ ಕ್ರಿಯೆಗಳೆಲ್ಲವೂ ಭಕ್ತಿಯಲ್ಲಿ ಬರುವವು.

೧೫. ಐಹಿಕ ವಿಷಯಾದಿಗಳಲ್ಲಿ ರತನಾಗದೆ ಸದಾ ಪರಮಾತ್ಮನಲ್ಲಿಯೇ ರತನಾಗುವದು ಭಕ್ತಿ ಎನಿಸುವದು.

೧೬. ವಿಹಿತ ಕರ್ಮಗಳನ್ನು ಒಳ್ಳೇ ನಿಷ್ಕಾಮವಾಗಿ ಮಾಡಿ ಅವರ ಫಲಗಳನ್ನು ಭಗವಂತನಿಗೆ ಅರ್ಪಿಸಿ ಅವನ ವಿರಹದಿಂದ ಅತ್ಯಂತ ವಿರಳನಾಗುವದೇ ಪರಮಭಕ್ತಿ.

೧೭. ಭಕ್ತಿಯು ಸಹಜವಾಗಿ ಕರ್ಮ ಜ್ಞಾನ ಯೋಗ (ಅಷ್ಟಾಂಗ ಯೋಗ) ಈ ಮೂರಕ್ಕಿಂತಲೂ ಹೆಚ್ಚಿನದು. ಇದೇ ಸ್ವಂ ಫಲರೂಪವಿರು

ವದು. ಭಕ್ತಿಯಿಂದ ನಿರಭಿಮಾನ, ನಿರಹಂಕಾರ ಬರುವದರಿಂದಲೂ, ವ್ಯ ತ್ವದ ನಾಶವಾಗುವದರಿಂದಲೂ, ಆಶೆ ವ್ಯಾಸನಗಳು ಕ್ಷಯವಾಗುವದರಿಂದಲೂ ಭಗವಂತನ ಕೃಪೆ ಬಹು ಬೇಗ ಆಗುವದು.

೧೮. ದಿವ್ಯ ಭಕ್ತಿಯಿಂದ ತಾನೇ ಜ್ಞಾನ ಲಭಿಸುವದು. ಆದರೆ ಜ್ಞಾನದಿಂದ ಭಕ್ತಿ ಲಭಿಸುವದಿಲ್ಲ. ಅದಕ್ಕೆ ಭಕ್ತಿಯು ಸ್ವಂ ಫಲರೂಪವು ಜ್ಞಾನವು ಸ್ವಂ ಫಲರೂಪದಲ್ಲೆಂದು ತಿಳಿ.

೧೯. ಭಕ್ತನಾಗುವವನಿಗೆ ಸಜ್ಜನರ ಸಹವಾಸ ಅವಶ್ಯ. ಭಗವಂತನ ಕೃಪೆಯೂ ಅವಶ್ಯ.

೨೦. ಸದ್ಭಕ್ತ ಶರಣ, ಜಂಗಮ, ಭಗವಂತ, ಗುರು ಇವರಲ್ಲಿ ಭೇದವಿಲ್ಲ.

೨೧. ಭಕ್ತನಾಗುವವನು ದುಸಂಗವನ್ನೆಂದೂ ಮಾಡಕೂಡದು ಅವಿಚ್ಛಿನ್ನವಾದ ಭಕ್ತಿಯಿಂದ ಮಹಾಮಾಯೆಯ ಕಾಟದಿಂದ ಸಹ ಪಾರಾಗಬಲ್ಲನು.

೨೨. ಸ್ವತಃ ಭಕ್ತಿಯೇ ಬಣ್ಣಿಸಲಾರದಷ್ಟು ಆನಂದದಾಯಕವಿರುವದು. ಇದರಿಂದ ಸಕಲ ಚರಾಚರವೂ ಭಗವಂತನೆಂಬ ಪ್ರತೀತಿಯಾಗುವದು.

೨೩. ಎಲ್ಲ ಮಾರ್ಗಗಳಿಗಿಂತ ಭಕ್ತಿಮಾರ್ಗವು ಬಲು ಸುಲಭ ಸರಳು. ಯಾಕಂದರೆ ಅದು ಸ್ವತಃ ಶಾಂತಿರೂಪವೂ ಪ್ರತ್ಯಕ್ಷ ಪರಮಾನಂದರೂಪವೂ ಇರುವದರಿಂದ ಸಕಲರೂ ಸಾಮಾನ್ಯರೂ ಕೂಡ ಇದನ್ನು ಸಾಧಿಸಬಲ್ಲರು.

೨೪. ಭಕ್ತನು ಭಗವಂತನ ಬಗ್ಗೆ ಮಾತ್ರ ಕಾಮ, ಕ್ರೋಧ ಮೊದಲಾದವುಗಳನ್ನು ತಾಳಬೇಕು. ಉಳಿದ ಪ್ರಾಪಂಚಿಕ ವಿಷಯಾದಿಗಳ ಬಗ್ಗೆ ಎಂದೂ ತಾಳಕೂಡದು.

೨೫. ಭಕ್ತನು ಭಕ್ತಿಶಾಸ್ತ್ರದ ಅಭ್ಯಾಸ ಮಾಡಬೇಕು. ಹಾಗೂ ಭಕ್ತಿಗೆ ಸಾಧಕವಾಗುವ ಕರ್ಮಗಳನ್ನೇ ಮಾಡುತ್ತಿರಬೇಕು. ಒಂದು ಕ್ಷಣ ಸಹ ವ್ಯರ್ಥ ಕಳೆಯಬಾರದು.

೨೬. ಭಕ್ತರು ಭಗವಂತನ ಭಕ್ತಿ ಮಾಡುವಾಗ ಅಹಿಂಸೆ, ಸತ್ಯ, ಶುಚಿತ್ವ, ದಯ, ಆಸ್ತಿಕ್ಯ ಬುದ್ಧಿಗಳನ್ನು ಆಚರಿಸಬೇಕು.

೨೭. ಪ್ರೇಮರೂಪ ಭಕ್ತಿ ಒಂದೇ ಇದ್ದರೂ ಅದು ಹನ್ನೊಂದು ತೆರವಾಗಿ ವ್ಯಕ್ತವಾಗುವದು. ಭಗವಂತನ ಗುಣ ರೂಪ, ಪೂಜೆ, ಸ್ಮರಣ, ದಾಸ್ಯ, ಸಖ್ಯ, ವಾತ್ಸಲ್ಯ, ಕಾಂತಾ, ಆತ್ಮನಿವೇದನ, ತನ್ಮಯತಾ, ಪರಮ ವಿರಹಗಳಲ್ಲಿ ಆಸಕ್ತನಾಗುವನು.

೨೮. ಭಗವಂತನನ್ನು ಕುರಿತು ಅತ್ಯಂತ ಅನುರಕ್ತಿ ಪ್ರೇಮಗಳೇ ಭಕ್ತಿ. ಭಗವಂತನಲ್ಲಿ ಏಕಚಿತ್ತನಾದವನು ಅಮೃತತ್ವವನ್ನು ಹೊಂದುವನು.

೨೯. ಭಕ್ತಿ ಎಂದರೆ ಜ್ಞಾನವಲ್ಲ. ದ್ವೇಷಿಗಳಿಗೂ ಬೌದ್ಧಿಕ ಜ್ಞಾನ ವಿರಬಲ್ಲದು. ಆದಕ್ಕಾಗಿಯೇ ಭಕ್ತಿಯು ಜ್ಞಾನಕ್ಕಿಂತ ಹೆಚ್ಚಿನದೆಂದು ಹೇಳುವರು.

೩೦. ಭಕ್ತಿಯು ರಾಗ, ಭಾವ, ರಸ ಎಂದು ಹೇಳಬಹುದು. ದ್ವೇಷಾಭಾವದ ಪ್ರತಿರೋಧಿಯಾಗಿರುವದು.

೩೧. ಭಕ್ತಿಯು ಎಲ್ಲಕ್ಕಿಂತ ಹೆಚ್ಚಿನದು. ಜ್ಞಾನ ಕ್ರಿಯಾದಿಗಳು ಅದಕ್ಕೆ ಮಾತ್ರ ಒಳ್ಳೇ ಪೋಷಕವಾಗಿರುವವು.

೩೨. ಭಕ್ತಿಯೆಂದರೆ ಕ್ರಿಯೆಯಲ್ಲ. ಭಕ್ತಿಯ ಫಲ ಅನಂತವಿರುವದು.

೩೩ ದರ್ಶನಾದಿಗಳಿಂದ ಅಮೃತತ್ವವು ದೊರೆಯದು. ಆದರೆ ದರ್ಶನವು ಭಕ್ತಿಗೆ ಮಾತ್ರ ಸಹಾಯಕವಾಗಿರುವದು. ಅದು ಸ್ವತಂತ್ರ ಸಾಧನೆಯಲ್ಲಿ ಮಾತ್ರ ಭಕ್ತಿಯು ಸ್ವತಂತ್ರ ಸಾಧನವಾಗಿರುವದು.

೩೪. ಭಗವಂತನನ್ನು ಕಾಣಲಿಕ್ಕೆ ಮೊದಲು ಮಾಯೆಯನ್ನು ನಿನ್ನಿಂದ ದೂರ ಸರಿಸು. ಅಂದರೆ ಆಕೆಯನ್ನು ಬ್ರಹ್ಮಮುಖವಾಗಿ ತಿರುಗಿಸೆಂದು ತಿಳಿಯಬೇಕು.

೩೫. ಭಕ್ತಿಯು ಎಲ್ಲಕ್ಕೂ ಮುಖ್ಯವೆಂಬದು ಗೋಪಿಯರ ಉದಾಹರಣೆಯಿಂದ ಸಿದ್ಧವಾಗುವದು. ಅವರು ಕೇವಲ ಶುದ್ಧ ಪರಭಕ್ತಿಯಿಂದ ಮುಕ್ತರಾದರು. ಯೋಗ ಎಂಬುವದು ಭಕ್ತಿಜ್ಞಾನಗಳಿಗೆ ಸಹಾಯವು.

೩೬. ಕರ್ಮ ಜ್ಞಾನ ಯೋಗಗಳಿಗಿಂತ ಭಕ್ತಿಯೇ ಹೆಚ್ಚಿನದೆಂದು ಗೀತೆಯಲ್ಲಿ ಸಿದ್ಧವಾಗಿದೆ.

೩೭. ಭಕ್ತಿಯು ಶ್ರದ್ಧೆಯಲ್ಲ. ಅನೇಕ ವಿಷಯಗಳಲ್ಲಿ ಶ್ರದ್ಧೆಯು ಇರಬಲ್ಲದು. ಭಕ್ತಿಯು ಬರೀ ಭಗವಂತನನ್ನು ಕುರಿತು ಮಾತ್ರ ಇರುವದು.

೩೮. ಎಲ್ಲ ಪ್ರಸಿದ್ಧ ಅವತಾರಗಳನ್ನು ಭಗವಂತನಂತೆಯೇ ಭಕ್ತಿಯಿಂದ ಪೂಜಿಸಬೇಕು.

೩೯. ನಿಃಸಂಗ ಹಾಗೂ ನಿರಾಸಕ್ತರಾಗುವದೇ ಸರ್ವಾರ್ಪಣದ ಮುಖ್ಯ ಸಾಧನ.

೪೦. ಭಕ್ತನು ಏಕಾಗ್ರತೆ ಸಾಧಿಸಲು ಧ್ಯಾನವೇ ಮುಖ್ಯವದುದು.

೪೧. ಭಕ್ತಿಯಿಂದ ಭಗವಂತನಿಗೆ ಬರೇ ಪತ್ರಿ, ಪುಷ್ಪ, ಫಲ, ನೀರುಗಳನ್ನು ಅರ್ಪಿಸಬೇಕೆಂದರೂ ಸರ್ವವನ್ನೆಲ್ಲ ಅರ್ಪಿಸಬೇಕೆಂದು ಅದರ ಸಾರ ಭಾವವಾಗಿದೆ.

೪೨. ಭಕ್ತಿಯು ಮೂಲಕ ಮಾಡಿದ ಕ್ರಿಯೆಗಳೆಲ್ಲ ಅತಿ ಶ್ರೇಷ್ಠವಾದವುಗಳು.

೪೩. ಆರ್ತ ಭಕ್ತಿಯಲ್ಲಿ ಪಾಪಗಳನ್ನು ತೊಳೆಯುವ ಸಾಮರ್ಥ್ಯ ಇರುವದು.

೪೪. ಎಲ್ಲ ಜಾತಿ ಮತಪಂಗಡಗಳಿಗೂ ಭಕ್ತಿಮಾರ್ಗ ಮುಕ್ತದ್ವಾರವಿರುವದು.

೪೫. ಏಕಾಂತಿಕ ಭಕ್ತಿಯು ಎಲ್ಲಕ್ಕೂ ಶ್ರೇಷ್ಠವಾದುದು.

೪೬. ಪರಾಭಕ್ತಿಯಿಂದ ಮುಕ್ತಿ ಲಭಿಸುವದು.

೪೭. ಫಲವೆಂಬುದೆಲ್ಲ ಪರಮಾತ್ಮನಿಂದಲೇ ಪ್ರಾಪ್ತವಾಗುವದು.

೪೮. ಈ ಸಂಸಾರಕ್ಕೆ ಅಭಕ್ತಿಯೇ ಕಾರಣವು ಹೊರತು, ಕೇವಲ ಅಜ್ಞಾನವು ಅದರ ಕಾರಣವಲ್ಲ.

೪೯. ಭಗವಂತನ ಮೇಲೆ ಸತ್ಯ ನಿಷ್ಕಪಟವಾದ ಪ್ರೇಮವೇ ಭಕ್ತಿ. ಪ್ರೇಮದಿಂದ ಮೊದಲಾಗಿ ಪ್ರೇಮದಲ್ಲಿ ಸಾಗಿ ಪ್ರೇಮದಲ್ಲಿ ಕೊನೆಗಾಣುವದು.

೫೦. ಭಕ್ತಿಯು ನಿಜವಾಗಿ ಸಿದ್ಧಿಸಿದರೆ ಎಲ್ಲವನ್ನು ಪ್ರೀತಿಸುವನು. ನಿತ್ಯ ತೃಪ್ತನಾಗುವನು. ಅಲ್ಲದೆ ಅವನ ಹೃದಯದಲ್ಲಿ ಪ್ರಾಪಂಚಿಕ ಆಶೆ ಆಕಾಂಕ್ಷೆಗಳು ಮಾಯವಾಗುವವು.

೫೧. ಸ್ವಾಭಾವಿಕ ಸುಲಭ ಮಾರ್ಗವೇ ಭಕ್ತಿಯೋಗ. ಆದರೆ ಭಕ್ತಿ ಭಯಾನಕ ಮತಭ್ರಾಂತಿಯ ವಿಕಾರ ರೂಪವನ್ನು ಧರಿಸಕೂಡದು.

೫೨. ಕಾಮ ಕಾಂಚನಗಳು ಭಕ್ತಿಯನ್ನು ಆವರಿಸಿ ಮುಚ್ಚಿಕೊಂಡಿವೆ. ಅವುಗಳನ್ನು ದೂರು ಮಾಡಿದರೆ ಭಕ್ತಿಯು ತಾನೇ ಪ್ರಕಟವಾಗುವದು.

೫೩. ಭಗವಂತನ ಮತ್ತು ಆತನ ಮಕ್ಕಳಾದ ಪರಮ ಭಕ್ತರೇ ಈಶ್ವರ ಲಾಭಕ್ಕೆ ಮುಖ್ಯ ಸಾಧನಗಳಾಗಿವೆ. ಇವರ ಸಂಗ ಬಹು ದುರ್ಲಭ, ಭಕ್ತರೇ ದೇವರ .

೫೪. ತ್ಯಜಿಸಿ ಎಂದು ಭಕ್ತಿಯೋಗ ಸಾರುವದಿಲ್ಲ. ಪ್ರೀತಿಸು ಅತ್ಯ್ರ ತ್ರಮವನ್ನು ಪ್ರೀತಿಸು ಎನ್ನುವದು. ಪರಮ ಪ್ರೀತಿಯುವರ ಮನಸ್ಸಿನಿಂದ ಹೀನ ಭಾವನೆಗಳನ್ನೆಲ್ಲ ಸ್ವಾಭಾವಿಕವಾಗಿಯೇ ಮಾಯವಾಗುವವು.

೫೫. ಈ ಪ್ರಪಂಚದಲ್ಲಿ ನಮಗೆ ಅನೇಕ ಬಗೆಯ ಪೆಟ್ಟುಗಳು ಬಿದ್ದಾಗ ಮಾತ್ರ ದೇವರ ನೆನಪಾಗುವದು. ಆಗ ಭಕ್ತಿಗೆ ಪ್ರಾರಂಭ ವಾಗುವದು.

೫೬. ನಿಜವಾದ ಪ್ರೇಮದಲ್ಲಿ ಅಂಜಿಕೆಯಿಲ್ಲ. ಅಂಜಿಕೆ ಸುಳಿಯು ವವರೆಗೆ ಭಕ್ತಿ ಎಂದೂ ಹುಟ್ಟುವದಿಲ್ಲ.

೫೭. ಭಕ್ತನು ಭಗವಂತನ ಹತ್ತರ ಏನಾದರೂ ಕೇಳಬೇಕೆಂಬ ವಿಚಾರವಿದ್ದರೂ ಕೂಡ ದೈವ ದ್ರೋಹ ಮಾಡಿದಂತೆ ಆಗಿ ಭಕ್ತನಾಗ ಲಾರನು.

೫೮. ಭಕ್ತನು ಸ್ವರ್ಗವನ್ನಾಗಲಿ ಕೈಲಾಸವನ್ನಾಗಲಿ ಮುಕ್ತಿಯನ್ನಾ ಗಲಿ ಬೇಡುವದು ಕೂಡ ತಪ್ಪಾಗುವದು. ಅವನು ಬರೇ ದೇವರ ಭಕ್ತಿ ಯೊಂದನ್ನೇ ಮಾಡುವನು.

೫೯. ಭಗವಂತನ ಮೇಲೆ ಇರುವ ಅಚಲ ಪ್ರೇಮವೇ ನಮ್ಮನ್ನು ಪರಿಶುದ್ಧರನ್ನಾಗಿ ಮಾಡುವದು. ಪ್ರಾಪಂಚಿಕ ದಾರುಣಯಾತನೆ ಎಷ್ಟು ಬಂದರೂ ಭಕ್ತನಿಗೆ ಅತಿ ಆನಂದವೇ ಇರುವದು. ಆಹಾರ ಇಲ್ಲದೆ ಇರ ಬಹುದು. ಭಕ್ತಿ ಇಲ್ಲದೆ ಆತ ಬಾಳಲಾರನು.

೬೦. ಪೂರ್ಣ ಭಕ್ತ ಎಲ್ಲರಲ್ಲಿಯೂ ಎಲ್ಲದರಲ್ಲಿಯೂ ದೇವನನ್ನು ನೋಡುವನು. ಅವನು ದೇವಸ್ಥಾನಕ್ಕೆ ಹೋಗುವ ಕಾರಣವಿಲ್ಲ.

೬೧ ಪ್ರಪಂಚವೇ ಹುಚ್ಚರ ಆಸ್ಪತ್ರೆ. ಆದರೆ ಯಾರು ದೇವನಿಗಾಗಿ ಹುಚ್ಚರಾಗಿರುವರೋ ಅವರೇ ನಿಜವಾದ ಹುಚ್ಚರು, ಅವರೇ ಮೇಲಾದ ರು. ಪರಮಭಕ್ತಿ ಎಂಬ ದೇವೋನ್ಮಾದವೇ ನಮ್ಮ ಭವರೋಗವನ್ನು ನಾಶ ಮಾಡಬಲ್ಲದು.

೬೨. ಭಕ್ತಿ ಹೃದಯದಲ್ಲಿ ಜ್ಞಾನಬುದ್ಧಿಯಲ್ಲಿ ಇದರೆ ಹೃದಯುವವರಿಗೆ ಬೆಣ್ಣೆ ಸಿಗುವದು, ಬುದ್ಧಿಯುವರಿಗೆ ಮಜ್ಜಿಗೆ ಸಿಗುವುದು.

೬೩. ಭಾವಿಕನಲ್ಲಿ ಹೃದಯ ಸೂತ್ರನಾಡುವದು. ಜ್ಞಾನಿಯಲ್ಲಿ ಬುದ್ಧಿ ಮಾರ್ಪಡುವದು. ಹೃದಯುವಿದ್ದ ಭಕ್ತನು ನೀಚನಾಗಲಾರನು. ಬುದ್ಧಿ ಇದ್ದ ಜ್ಞಾನಿ ವಿದ್ವಾಂಸ ಪಂಡಿತನೂ ನೀಚನೂ ಏಕಕಾಲಕ್ಕೆ ಆಗಿರಬಹುದು.

೬೪. ಭಕ್ತಿಯಿಂದ ನಮ್ಮ ಹೃದಯ ಜಾಗೃತವಾದರೆ ಸತ್ಯಗಳು ತೋರುವವು. ಬುದ್ಧಿಯಿಂದ ಇವು ಸರಿಯಾಗಿ ತೋರಲಾರವು.

೬೫. ಪ್ರಪಂಚದ ದುಃಖ ದುಮ್ಮಾನಗಳು ತೊಲಗಬೇಕಾದರೆ ಬುದ್ಧಿಯ ಪರಿವರ್ತನೆಯಿಂದ ಶಕ್ಯವಿಲ್ಲ. ಆದರೆ ಹೃದಯುವ ಪರಿವರ್ತನೆಯಿಂದ ಶಕ್ಯವಿದೆ.

೬೬. ಜಗತ್ತಿನ ಸರ್ವ ಶಾಸ್ತ್ರಗಳು ಪುಸ್ತಕಗಳನ್ನು ಓದಿದರೂ ಭಕ್ತನಾಗಿ ಧಾರ್ಮಿಕನಾಗಲಾರ. ಇವುಗಳಿಂದ ದೇವರು ಧರ್ಮದ ಒಂದು ಪರವೂ ಕೂಡ ತಿಳಿಯದು.

೬೭. ಹೃದಯಕ್ಕೆ ಮೆದುಳಿಗೆ ಘರ್ಷಣೆ ನಡೆದಾಗ ಹೃದಯುವನ್ನು ಅನುಸರಿಸು.

೬೮. ಹೃದಯ ಒಬ್ಬನನ್ನು ಅತ್ಯುನ್ನತ ಶಿಖರಕ್ಕೆ ಕರೆದೊಯ್ಯಬಲ್ಲದು. ಬುದ್ಧಿ ಅಲ್ಲಿಗೆ ತಲುಪಿಸಲಾರದು ಹೃದಯ ಬುದ್ಧಿಯನ್ನು ಮೀರಿದ ದೈವ ಪ್ರೇರಣೆಯನ್ನು ಹುಟ್ಟಬಲ್ಲದು ಬುದ್ಧಿ ಎಂದಿಗೂ ಸ್ಫೂರ್ತಿಯಾಗಲಾರದು.

೬೯. ದೇವರಿಗೆ ನಿನ್ನ ಸರ್ವವನ್ನು ಕೊಡು. ಆದರೆ ಅವನಿಂದ ತಿರುಗಿ ಏನೂ ಬೇಡಬೇಡ. ದೇವರನ್ನೂ ಪ್ರೀತಿಗಾಗಿ ಪ್ರೀತಿಸಬೇಕು. ಅವನಿಂದ ಯಾವ ಉಪಕಾರವು ಬೇಡ.

೭೦. ಭಕ್ತನು ಶಿಕ್ಷ ಬಹುಮಾನಗಳನ್ನು ಮೀರಿಹೋಗಿರುವನು.

೭೧. ಪ್ರೇಮ ಅಥವಾ ಭಕ್ತಿ ಪರಮಾತ್ಮನನ್ನು ಆಕರ್ಷಿಸಿ ಅವನ ಕೇಂದ್ರದ ಕಡೆಗೆ ಎಳೆಯುವಂತೆ ಮಾಡುತ್ತವೆ.

೭೨. ಪ್ರೇಮವು ಸರ್ವ ಶಕ್ತಿಮಾನ್ ಸರ್ವವ್ಯಾಪಿಯಾಗಿರುವದು.

೭೩. ಪ್ರಪಂಚದಲ್ಲಿ ಪರಸ್ಪರ ಆಕರ್ಷಣೆಯನ್ನು ಮಾಡಲು ಪ್ರಚೋದಿಸುವದೇ ಈ ಪ್ರೇಮ ಶಕ್ತಿಯು. ಆದಕ್ಕಾಗಿ ಅನ್ಯರಿಗಾಗಿ ದೇಶಕ್ಕಾಗಿ ಭಕ್ತರನೇಕರು ಪ್ರಾಣಕೊಟ್ಟಿರುವರು.

೭೪. ಪ್ರೇಮವೇ ವಿಶ್ವದ ಚಾಲಕ ಶಕ್ತಿ. ಅದಕ್ಕೆ ಪ್ರೇಮವೇ ಈಶ್ವರ.

೭೫. ಪ್ರೇಮವನ್ನು ವಿಕಾಸಗೊಳಿಸಬೇಕು. ಮಾನವನು ಪೃಥ್ವಿಯೆಲ್ಲ ತನ್ನದಾಗುವವರೆಗೆ ವಿಶಾಲವಾಗುತ್ತ ಹೋಗಬೇಕು; ಅಂದರೆ ವಿಶ್ವಪ್ರೇಮದ ಖನಿಯಾಗುವನು. ಈ ಪ್ರೇಮ ಈಶ್ವರನು.

೭೬. ಪರಾಭಕ್ತಿಗೆ ಆಕಾರ ಚಿನ್ಹೆಗಳು ಇರುವದಿಲ್ಲ. ಎಲ್ಲ ಆಶೆ ಆಕಾಂಕ್ಷೆಗಳು ಮಾಯವಾದ ಮೇಲೆ ಉಳಿದುದೇ ಪ್ರೇಮೋನ್ಮಾದ.

೭೭. ಈಶ್ವರನ ಬಗ್ಗೆ ದಿವ್ಯ ಭಕ್ತಿ ಇದ್ದವನು ಮುಕ್ತಿ ಬೇಡುವದಿಲ್ಲ. ಇಲ್ಲಿಂದ ಪಾರಾಗಲಿಕ್ಕೆ ಯತ್ನಿಸುವದಿಲ್ಲ. ಪೂರ್ಣನಾಗಲೂ ಇಚ್ಛಿಸುವದಿಲ್ಲ ಸ್ವಾತಂತ್ರ್ಯ ಬೇಡುವದಿಲ್ಲ.

೭೮. ಪ್ರಪಂಚದಲ್ಲಿಯ ಹಲವು ಪಾಪಗಳ ಮಧ್ಯದಲ್ಲಿ ಪದೇಪದೇ ಜನಿಸಿದರೂ ಗೊಣಗಾಡುವದಿಲ್ಲ ಆದರೂ ಭಕ್ತನೂ ನಿನ್ನನ್ನು ಪ್ರೀತಿಗಾಗಿ ಪ್ರೀತಿಸುವೆನೆನ್ನುವನು.

# ಅಕ್ಕ ಮಹಾದೇವಿಯನ್ನು ಕುರಿತು

(ಲೇಖಕರು:— ಶ್ರೀಯುತ ಶಿಂಪೀ ಲಿಂಗಣ್ಣ, ಚಡಚಣ.)

## ೧. ಯೋಗಭ್ರಷ್ಟ ಜೀವಿ.

ಯೋಗ ಮಾರ್ಗಾವಲಂಬಿಯು ಅಕಸ್ಮಾತ್ತಾಗಿ ದೇಹವಿಟ್ಟರೆ ಅವನ ಗತಿಯೇನು ಎಂದು ಪ್ರಶ್ನಿಸಿದ ಅರ್ಜುನನಿಗೆ ಶ್ರೀಕೃಷ್ಣ ಪರಮಾತ್ಮನು ಏನು ಹೇಳಿದನು ಗೊತ್ತೇ? "ಅಂಥವರಿಗೆ ಎಂದೂ ಕಲ್ಯಾಣವಾಗದು. ನನ್ನ ಭಕ್ತರಿಗೆ ನಾಶವೇ ಇಲ್ಲ. ಅವರು ಯೋಗ ಮಾರ್ಗಕ್ಕೆ ಅನುಕೂಲ ವಾಗಬಹುದಾದ ಮನೆತನದಲ್ಲಿ ಜನ್ಮವೆತ್ತಿ ಬರುವರು. ಚಿಕ್ಕಂದಿನಲ್ಲಿಯೇ ಅವರು ನೇರವಾಗಿ ಯೋಗಮಾರ್ಗವನ್ನೇ ಭರದಿಂದ ಮುಂದುವರಿಯು ವರು. ಹಿಂದಿನ ಜನ್ಮದಲ್ಲಿ ಸಾಧಿಸಲಿಕ್ಕಾಗದ ಸಿದ್ಧಿಯನ್ನು ಹೊಸಜನ್ಮ ದಲ್ಲಿ ಅಗಾಧವಾಗಿ ಸಂಪಾದಿಸುತ್ತ ಸಾರ್ಥಕಜೀವಿಗಳಾಗುವರು. ಇದರಲ್ಲೇನೂ ಸಂಶಯವಿಲ್ಲ."

ಅಕ್ಕ ಮಹಾದೇವಿ ಅಂಥ ಯೋಗಭ್ರಷ್ಟ ಜೀವಿ. ಅವಳು ಶಾಪಗ್ರಸ್ತ ದೇವತೆಯೆಂದು ಕೆಲವರು ಹೇಳುವರು. ಆದರೆ ಶಾಪಗ್ರಸ್ತ ದೇವತೆಯ ಜೀವನಕ್ಕಿಂತ ಯೋಗಭ್ರಷ್ಟ ಜೀವಿಯ ಜೀವನವನ್ನು ನಾವು ಸುಲಭವಾಗಿ ಗ್ರಹಿಸಬಲ್ಲೆವು; ಆದರ್ಶವಾಗಿ ಇಟ್ಟುಕೊಳ್ಳಬಲ್ಲೆವು. ಈ ಭೂಮಿಯೆಂದರೆ ದೇವತೆಯು ಶಾಪವನ್ನು ಹಿಂಗಿಸುವದಕ್ಕೆ ಕಠೋರವಾಗಿ ಪ್ರಾಯಶ್ಚಿತ್ತ ಭೋಗಿಸಹಚ್ಚುವ ಸೆರೆಮನೆಯಲ್ಲ. ಹತ್ತು ಸಾರೆ ಬಿದ್ದು, ನೂರು ಸಾರೆ ಎಡಹಿ, ಸಾವಿರ ಸಾರೆ ತಪ್ಪುಹೆಜ್ಜೆಯಿಡುತ್ತ ನಡೆಯಲು ಕಲಿಸುವ ಶಿಕ್ಷಣ ಮಂದಿರವಾಗಿದೆ ಈ ಭೂಮಿ. ಇಲ್ಲಿ ಯೋಗಭ್ರಷ್ಟ ಜೀವಿಗಳಿಗೆ ಸ್ಥಳವಿದೆ ಯಲ್ಲದೆ ಶಾಪಗ್ರಸ್ತರಿಗೆ ನೆಲೆಯಿಲ್ಲ. ಇನ್ನೊಂದು ಅರ್ಥದಲ್ಲಿ ಯೋಗ ಭ್ರಷ್ಟ ಜೀವಿ, ಶಾಪಗ್ರಸ್ತ ದೇವತೆ ಇಬ್ಬರೂ ಒಂದೇ. ಬೇರೆ ಬೇರೆ ಅಲ್ಲ. ಯೋಗಭ್ರಷ್ಟ ಜೀವಿಯ ಮುಖವು ದಿವ್ಯದ ಕಡೆಗಿದ್ದರೆ ಶಾಪಗ್ರಸ್ತ ದೇವ ತೆಯ ಮುಖವು ಇಳಾತಲದ ಕಡೆಗಿರುತ್ತದೆ. ಒಂದರದು ಪ್ರಗತಿಯ ಸಾಗಾಟ, ಇನ್ನೊಂದರದು ವಿಗತಿಯ ಹೊಳಲಾಟ.

ಯೋಗಭ್ರಷ್ಟ ಜೀವಿಯ ಬರವಿಗೆ ಪುಣ್ಯವಂತರ ಮನೆತನ, ಭಕ್ತಿ ಪೂರ್ಣ ಹೃದಯರಾದ ತಾಯಿ-ತಂದೆ, ಸಂತಾನಾಪೇಕ್ಷೆಯಿಂದ ದಂಪತಿಗಳು ನಡೆಸಿದ ದೈವೋಪಾಸನೆ ಇವುಗಳ ಪೂರ್ವಸಿದ್ಧತೆ ನಡೆದಿರುತ್ತದೆ. ಅದು ಅನಿವಾರ್ಯವೂ ಆಗಿದೆ. ತಂದೆ ನಿರ್ಮಲ, ತಾಯಿ ಸುಮತಿ ಆಗಿರುವಲ್ಲಿ ಮಗಳು ಮಹಾದೇವಿಯಾಗದೆ ಅನ್ಯ ಮಾರ್ಗವಿಲ್ಲ. ಸದಾ ಶಿವಭಕ್ತಿಯಲ್ಲಿ ನಿರತವಾಗಿರುವದಕ್ಕೆ ದಂಪತಿಗಳಿಗೆ ಸಂಸಾರದ ಅನುಕೂಲತೆ ಸಾಕಷ್ಟು ಇರಲೇ ಬೇಕಲ್ಲವೇ ? ಗಂಡ ಹೆಂಡಿರು ಶಿವಭಕ್ತ-ಶಿವಭಕ್ತೆಯರೆಂದಮೇಲೆ ಅವರ ಒಗೆತನವು ಐಕ್ಯಜೀವದ್ದಾಗಿರಬಹುದಲ್ಲವೇ ? ಸಂತಾನ ಪ್ರಾಪ್ತಿಗೆ ಕಾಮಕಾದೇತೆಯ ಮಾರ್ಗವನ್ನು ಅವಲಂಬಿಸದೆ, ದೈವೋಪಾಸನೆಯ ಭಕ್ತಿ ಮಾರ್ಗವನ್ನು ಆಶ್ರಯಿಸಿದ್ದರಿಂದ ಅವರಲ್ಲಿ ಸತ್ವ ಗುಣವು ಪ್ರಬಲವಾಗಿತ್ತೆನ್ನುವುದು ಸಹಜವಲ್ಲವೇ ? ಹುಟ್ಟುಮನೆ ಅತ್ತೆಮನೆ ಎರಡನ್ನೂ ಬೆಳಗಿಸಬಲ್ಲ ಹೆಣ್ಣು ಹುಟ್ಟಿದರೆ ಬಂಜೆತನವೂ ಹಿಂಗುವದೆಂಬ ಎಚ್ಚರಿಕೆಯಿಂದ ಹೆಣ್ಣು ಹಡೆಯುವ ಹಂಬಲ ಮಾತ್ರ ಇರಿಸಿಕೊಂಡಿದ್ದು ಅವರ ತೀವ್ರ ಅನಾಸಕ್ತಿಯ ಲಕ್ಷಣವಲ್ಲವೇ ? ಯೋಗಭ್ರಷ್ಟ ಜೀವಿಯು ಅಲಕ್ಕನೆ ಯೋಗ ಮಾರ್ಗಾವಲಂಬಿಯಾಗುವದಕ್ಕೆ ಇವೆಲ್ಲ ಯೋಗ್ಯ ಹಿನ್ನೆಲೆಗಳೆಂದು ಹೇಳಬಹುದು.

ಮಹಾದೇವಿಯು ಹಿಂದಿನ ಜನ್ಮದಲ್ಲಿ ಭಕ್ತಿಮಾರ್ಗವನ್ನವಲಂಬಿಸಿ, ಸಂಸಾರ ಜೀವನದಲ್ಲಿ ಬರುವ ಅಡೆತಡೆಗಳನ್ನು ತಾಳ್ಮೆಯಿಂದ ಈಲು ಮಾಡಿಕೊಳ್ಳದೆ ಸಂಕಟ ಪರಿಹಾರಕ್ಕೆ ಆತ್ಮಹತ್ಯೆಯ ದಾರಿಯನ್ನು ಹಿಡಿದಿರಬೇಕು. ಅಂತೆಯೇ ಈ ಸಾರೆ ಅವಳು ಹಿಂದಿನ ಜನ್ಮದಲ್ಲಿ ಪ್ರಾಪ್ತವಾದ ಸಂಸಾರಿಕ ಬಿಕ್ಕಟ್ಟಿಗಿಂತಲೂ ಕಠಿಣತರವಾದ ಪರಿಸ್ಥಿತಿಯನ್ನು ಎದುರಿಸುವ ಪ್ರಸಂಗ ಬಂದಿತೆನ್ನಬೇಕು. ಇಲ್ಲಿ ಶ್ರೀ ಅರವಿಂದರ ವಿಚಾರಗಳನ್ನು ಅವಲೋಕಿಸಬಹುದಾಗಿದೆ.

" ಆತ್ಮಹತ್ಯೆ ಮಾಡಿಕೊಳ್ಳುವದರಿಂದ ತೊಡಕು ಬಿಡುವದಿಲ್ಲ. ಅದು ತುಂಬ ತಪ್ಪು ದಾರಿ. ಅದರಿಂದ ತನಗೆ ಶಾಂತಿ ದೊರೆಯುವದೆಂದು ಬಗೆದು ತನ್ನ ಸಂಕಟಗಳನ್ನು ಅದಕ್ಕೂ ಕೆಡುಕಾದ ಮರಣೋತ್ತರ ಸ್ಥಿತಿಯ ಅವಸ್ಥೆಯಲ್ಲಿ ತನ್ನೊಡನೆ ಕೊಂಡೊಯ್ಯುತ್ತಾನೆ. ಅಲ್ಲದೆ ಅವನು ಅವುಗಳನ್ನು ತಿರುಗಿ ಬೇರೊಂದು ಜೀವನದಲ್ಲಿ ಪೃಥ್ವಿಯ ಮೇಲೆ ಸಂಗಡ ತರುತ್ತಾನೆ. ದೇಹವಿಟ್ಟಾಗ ಅಂತರಾತ್ಮನು ಅನ್ಯ ಲೋಕದಲ್ಲಿ ಪರಿಭ್ರಮಣ ಮಾಡುವ

ದಕ್ಕೆ ಹೊರಟು ಹೋಗಿ ಕೊನೆಯಲ್ಲಿ ಇನ್ನೊಂದು ಜೀವನವನ್ನೂ, ಇನ್ನೊಂದು ಶರೀರವನ್ನೂ ಧಾರಣ ಮಾಡಿ ಮತ್ತೆ ಮರಳಿ ಬರುತ್ತಾನೆ. ಆಗ ಆತನಿಂದ ಮೊದಲು ನಿವಾರಿಸಿಕೊಳ್ಳಲಿಕ್ಕಾಗದ ಎಲ್ಲ ಸಂಕಟಗಳು ನವೀನ ಜನ್ಮದಲ್ಲಿ ಬಂದು ಸಂಭವಿಸುತ್ತವೆ. ಅಲ್ಲದೆ ಬುದ್ಧಿಪೂರ್ವಕವಾಗಿ ತನ್ನ ಶರೀರವನ್ನು ಬಿಟ್ಟವನು ಅನ್ಯ ಲೋಕಗಳಲ್ಲಿ ಅತ್ಯಧಿಕ ಕಷ್ಟ ಭೋಗಿಸುತ್ತಾನೆ. ಪುನರ್ಜನ್ಮದ ಕಾಲಕ್ಕೆ ಅವು ಮೊದಲಿಗಿಂತ ಕೆಡಕಾಗಿರುತ್ತವೆ. ಇದೇ ಜನ್ಮದಲ್ಲಿ ಇದೇ ಶರೀರದಲ್ಲಿ ಸಂಕಟಗಳನ್ನೆದುರಿಸಿ ಅವುಗಳನ್ನು ಗೆಲ್ಲಬೇಕು."

ಸುಮತಿ–ನಿರ್ಮಲರಲ್ಲಿ ಜನ್ಮತೊಟ್ಟ ಮಹಾದೇವಿಯು ತೀರ ಬಾಲ್ಯದಲ್ಲಿಯೇ ಭಕ್ತಿಮಾರ್ಗದಲ್ಲಿ ಹೆಜ್ಜೆಹಾಕತೊಡಗಿದಳು. ಪೂಜೆ, ಪ್ರಾರ್ಥನೆ, ಧ್ಯಾನ, ಸತ್ಸಂಗ, ಸದಾಚಾರಗಳು ದೇವನು ಒಲಿದಿತ್ತ ವರಗಳೇ ಅಹುದು; ಅವು ದೇವದೇವನು ತನ್ನ ವರ್ಗದಲ್ಲಿ ಸೇರಿಸಿಕೊಂಡುದರ ಕುರುಹುಗಳೆನ್ನಬಹುದು. ಅದೇ ಕಾಲಕ್ಕೆ ವಿರೋಧಿ ಶಕ್ತಿಗಳು ರೋಷಗೊಂಡು, ಕೈಬಿಟ್ಟು ಹೋದ ವ್ಯಕ್ತಿಯನ್ನು ಪುನಃ ತಮ್ಮ ಅಧೀನಗೊಳಿಸಿಕೊಳ್ಳುವುದಕ್ಕೆ ಅನೇಕ ತೊಡಕುಗಳನ್ನು ಬೀಸಲು ಆರಂಭಿಸುತ್ತವಂತೆ. ಆರಂಭದಲ್ಲಿ ತನ್ನನ್ನು ಮುತ್ತಿ ಮುಸುಕುವ ಸಂಕಟಗಳಿಗೆ ಹೆದರಿ ಬೆದರಿ, ಕಕ್ಕಾವಿಕ್ಕಿಯಾಗಿ ಸಾಧಕನು ವಿರೋಧಿಗಳ ಕೈವಶವಾಗಬೇಕು. ಇಲ್ಲವೆ ಬದುಕಿಸೆಂದು ದಿವ್ಯ ಶಕ್ತಿಯನ್ನು ಆಹ್ವಾನಿಸಬೇಕು. ಆದ್ದರಿಂದ ಸಂಕಟಗಳು, ದೈವಸಂಘಕ್ಕೆ ಸೇರಿದವನಿಗೆ ಜರಿದಿತ್ತ ಓಲೆ-ಪತ್ರವೆಂದೇ ಹೇಳಬೇಕಾಗುವದು. ಅದೂ ಯೋಗ್ಯತಾಪತ್ರವೇ ದೇವನಿತ್ತ ಪ್ರಮಾಣ ಪತ್ರದಂತೆ ಧ್ಯಾನ ಪೂಜಾದಿ ಸದಾಚಾರಗಳು ; ಆದಿವ್ಯಶಕ್ತಿಗಳಿತ್ತ ಓಲೆಪತ್ರದಂತೆ ಸುತ್ತಿಮುತ್ತುವ ಸಂಕಟಾದಿ ಗಂಡಾಂತರಗಳು. ಇವೆರಡೂ ಪತ್ರಗಳಿಂದ ವ್ಯಕ್ತಿಯು ದೇವನ ಕಡೆಯವನೆಂದು ಸಿದ್ಧವಾಗುತ್ತದೆ.

ಅಕ್ಕನು ಜೀವನದ ಆರಂಭದಲ್ಲಿಯೇ ಅವೆರಡೂ ಪತ್ರಿಕೆಗಳನ್ನು ಸಂಪಾದಿಸಿದಳೆಂದು ಹೇಳಬಹುದು. ಇಲ್ಲದಿದ್ದರೆ ಸದಾಚಾರಸಂಪನ್ನರಾದ ತಾಯಿತಂದೆಗಳಿಗೆ ಸುಶೀಲವೇ ಮೈವೆತ್ತಿ ಬಂದ ಮುದ್ದುಮಗಳಿಗೆ ಹಾದಿಗೆ ಹೋಗುವ ಕೌಶಿಕನ ಹದ್ದಿನಕಣ್ಣು ಸೋಂಕಿ, ಯಾರಿಗೂ ಬಿಡಿಸಲಿಕ್ಕಾಗದ ತೊಡಕಿನಲ್ಲಿ ಬಿಗಿದು ಕೆಡಹುತ್ತಿತ್ತೇ ?

o o o o

# ಶರಣಸತಿಯರ ನೂರೆಂಟು ನಾಮಗಳು.

ಭಾ.- ಷಟ್ಪದಿ

ಸೂಚನೆ॥ ಪ್ರೀತಿಯಲಿ ನೂತನ ಪುರಾತನ ।
ರಾತಿಶಯ ಶರಣೆಯರ ನಾಮಗ ।
ಳೋತು ಪಠಿಸುವವರ್ಗೆ ಮಹವಿಷ್ಟಾರ್ಥ ಸಿದ್ಧಿಗಳೂ ॥ಪ॥

ಶ್ರೀ ಲಲಿತೆ ನೀಲಾಂಬೆಗಳ ಸು ವಿ ।
ಶಾಲಮತಿ ಗಂಗಾಂಬೆಗಳ ಶಿವ ।
ಲೋಲೆಯಹ ನಾಗಾಂಬೆಗಳ ಸೂರಾಂಬೆಗಳ ಮತ್ತೆ ॥
ಶೀಲಯುತೆ ಗೌರಾಂಬೆಗಳ ಹಿತ ।
ಬಾಲೆಯಹ ಕೋಲಾಂಬೆಗಳ ಗುಣ ।
ಜಾಲೆ ವಿಮಲಾಂಬೆಗಳನಾ ವರದೇವಲಾಂಬೆಗಳ ॥೧॥

ಬಾಲೆ ವೀರಮ್ಮಗಳ ಪರಮ ಸು ।
ಶೀಲೆ ಮಸಣಮ್ಮಗಳ ಭವನಿ ।
ರ್ಮೂಲೆ ಲಕ್ಕಮ್ಮಗಳ ನೆರೆ ಮಾಯಮ್ಮಗಳ ಮತ್ತೆ ॥
ಕಾಲಜೆ ರೆಮ್ಮವ್ವೆಗಳ ಸದ ।
ಯಾಳೆ ರಾಯಮ್ಮಗಳ ಸುಜನರ ।
ಪಾಲೆ ಗುಡಿಸಿಲಪಾದ ನಾಗಾಯಮ್ಮಗಳ ಮತ್ತೆ ॥೨॥

ಕಾರಿಕಾಲಮ್ಮೆಗಳ ಕರುಣಾ ।
ಕಾರೆ ಗೌರಮ್ಮೆಗಳ ಜಗದುಪ ।
ಕಾರೆ ಕಾಳಿಯದ ಪುರದ ವೀರಮ್ಮಗಳನನು ಮತ್ತೆ ॥

ಸಾರ ಮತಿ ಕಾಯಮ್ಮಗಳ ಸುವಿ ।
ಚಾರ ಮಹಾದೇವಮ್ಮಗಳ ಪಾ ।
ಪಾರಿಯಕ್ಕಮ್ಮಗಳ ಕಲ್ಯಾಣಮ್ಮಗಳ ಮತ್ತೆ ॥೩॥

ಅವ್ವೆಯಹ ಯುರುತರ ಕದಿರ ರೆ ।
ಮ್ಮವ್ವೆಯ ಕೊಟ್ಟಣದ ವರ ಸೋ ।
ಮವ್ವೆಗಳ ರೆಬ್ಬವ್ವೆಗಳ ರೇಕವ್ವೆಗಳ ಮತ್ತೆ ॥
ಅವ್ವೆ ಸೋಹಳಿಪುರದ ಸೋ ।
ಮವ್ವೆಗಳ ನಿಂಗಳಿಯ ವೈಜ ।
ಕ್ಕವ್ವೆಗಳ ವೈಜಾಂಬವ್ವೆಗಳ ಮತ್ತೆ ॥೪॥

ಅವ್ವೆ ಶಿವದಾಸವ್ವೆಗಳ ತಿಲ ।
ಕವ್ವೆಗಳ ಕಾಳವ್ವೆಗಳ ಗೊ ।
ಗ್ಗವ್ವೆಗಳ ಗುಡ್ಡವ್ವೆಗಳ ಮತ್ತೆ ॥
ಅವ್ವೆ ದುಗ್ಗಳವ್ವೆಗಳ ಪಿ ।
ಟ್ಟವ್ವೆಗಳ ಸಂಕವ್ವೆಗಳ ಸ ।
ಪ್ಪವ್ವೆಗಳ ಜೊಮ್ಮವ್ವೆಗಳ ಮುದ್ದವ್ವೆಗಳ ಮತ್ತೆ ॥೫॥

ಅವ್ವೆ ಪರತರ ನೀಲಲನನುರ್ನಿಂ ।
ಬೆವ್ವಗಳನಾ ವೀರ ಸಂಗಾ ।
ಯವ್ವೆಗಳನಾ ವೀರ ತಿಲಕವ್ವೆಗಳನನವರತ ॥
ಅವ್ವೆ ಮಾಚಲ ಅವ್ವೆ ಚಂಗಳೆ ।
ಅವ್ವೆಗಳ ಕನ್ನಡಿಯಕರ ರೆ ।
ಮ್ಮವ್ವೆಗಳನಾ ವೀರ ಚೋಳಾಯವ್ವೆಗಳ ಮತ್ತೆ ॥೬॥

ಅಕ್ಕ ಮುಕ್ತಾಯಕ್ಕಗಳ ಸ ।
ತ್ಯಕ್ಕಗಳ ಮಾಯಕ್ಕಗಳ ನೆ ।
ಲ್ಲಕ್ಕಗಳ ಮಲ್ಲಕ್ಕಗಳ ಚನ್ನಕ್ಕಗಳ ಮತ್ತೆ ॥

ಅಕ್ಕನುಡುತಡಿಯ ಮಹಾದೇ ।
ವಕ್ಕನೊಬ್ಬಳೆಯಕ್ಕದಾ ನಿಂ ।
ಬೆಕ್ಕಗಳನುರುತರದ ಮಂಗಾಯಕ್ಕರಸಿಯರನು ॥೭॥

ದೇವಿ ಬೊಂತಲದೇವಿಯಲ್ಲಮ ।
ದೇವಿ ವಿಮಲಾದೇವಿ ಸುಗ್ಗಲ ।
ದೇವಿ ಚಾಕಲದೇವಿ ಕೇತಲದೇವಿಗಳ ಮತ್ತೆ ॥
ದೇವಿ ಮಾಚಲದೇವಿ ಬಾಚಲ ।
ದೇವಿ ಕಾಚಲದೇವಿ ಯೈಚಲ ।
ದೇವಿಯಳನಾ ಕೇಳಿಕೆಯಹ ಮಹಾದೇವಿಗಳ ಮತ್ತೆ ॥೮॥

ದೇವಿ ಗಂಗಾದೇವಿಯಾ ಮಾ ।
ಯ್ದೇವಿಯಾ ಶಿವದೇವಿ ಸಿದ್ಧಾ ।
ದೇವಿಯಾ ಸಾಯ್ದೇವಿಯಾ ಶಚಿದೇವಿಗಳ ಮತ್ತೆ ॥
ದೇವಿಯಾಮಳದೇವಿ ಯಣ್ಣಲ ।
ದೇವಿ ಲಲನದೇವಿ ಚಿಕ್ಕಾ ।
ಡೇವಿ ರುದ್ರಸುವೀಣೆ ಗಂಗಾದೇವಿಗಳ ಮತ್ತೆ ॥೯॥

ದೇವಿ ಯಸ್ಯಜ್ಞಾನಿಚಂದ್ರಾಣಿ ।
ದೇವಿ ಜ್ಞಾನಾನಂದದೇವಿಯ ।
ದೇವಿ ರತ್ನಾವತಿಯ ಪರಮ ಸುದೇವಿಗಳ ಮತ್ತೆ॥
ದೇವಿ ಸೋಮ ಪ್ರಭಾಂಕ ದೇವಿಯ ।
ದೇವಿಯು ಶೃಂಗರ ದೇವಿಯ ।
ದೇವಿಯರ್ ಶರ್ವಾಣಿಯಾ ಶಿವಜ್ಞಾನದೇವಿಗಳ ॥೧೦॥

ನಾಚಿ ಪಾವನನಾಚಿಯಳನುರಿ ।
ನಾಚಿ ಚೊಲ್ಲಡನಾಚಿಯಳ ಸಲೆ ।
ನಾಚಿ ಪರ್ವತನಾಚಿಯಳನಾ ಪರವೆ ನಾಚಿಗಳ ॥

ನಾಚಿ ಶಿವಪ್ರಿಯ ನಾಚಿಯಳನಾ ।
ನಾಚಿ ತಿಲವಲಿ ನಾಚಿಯಳ ನೆರೆ ।
ನಾಚಿ ಶಂಖಿಲಿ ನಾಚಿ ಸೌಂದರ ನಾಚಿಯಳ ಮತ್ತೆ ॥೧೧॥

ದಾರುಕಿಯ ವರದಾನಿಯಮ್ಮನ ।
ಸಾರ ಚರಿತೆ ಸುನೀತಿಯರ್ಸುಗವಿ ।
ಚಾರ ಪದ್ಮಾವತಿಯ ಕನಕಮಾಲಿನಿಯ ಮತ್ತೆ ॥
ಮಾರಜಿತ ಕಾಮಾಲತಿಯ ಸುಖ ।
ಸಾರೆ ದೇವರದಾಸಿಯಳ ಮಹಾ ।
ಧೀರ ಸೋಮರಸಿಯಳ ನಿರುಪಮ ಮಂಗಳಾಂಗಿಯಳ ॥೧೨॥

ಹರನ ಸತಿ ಮತಿ ಕೋಟಿಯಿಂ ಶಿವ ।
ಶರಣ ಸತಿಯರನುತಿಮಿಗಿಲು ಮನ ।
ಉರುತರದ ಭೃಂಗೀಶ ಮುಖ್ಯ ಪ್ರಮಥರೋಳ್ಪೂಜೆಯುಳ್ಳವರು॥
ಶರಣ ಸತಿಯರು ಪ್ರಮಥರೊಳು ಪೂ ।
ಜ್ಯರುಮದಾಗಿರೆ ಶ್ರೀ ಘನಮಠೇ ।
ಶ್ವರನ ನಿಜಭಕ್ತಿಯಲಿ ಪೊಗಳುತ ಪಡೆವೆ ನಿಜಸುಖವ ॥೧೩॥

# ಗಣಾಷ್ಟೋತ್ತರ.



ಭಾ॥ ಷಟ್ಪದಿ

ಸೂಚನೆ:— ಲೀಲೆಯಲಿ ನೂತನ ಪುರಾತನ ।
ರಾಳಿ ನಾಮವ ಬಿಡದೆಯುದಯದ ।
ಕಾಲದೊಳು ಪಠಿಸಿದರಿಗಿಹವಿಷ್ಟಾರ್ಥ ಸಿದ್ಧಿಗಳು ॥ಪಲ್ಲ॥

ಬಸವರಾಜನ ಚನ್ನಬಸವನ ।
ಅಸಮಪ್ರಭುವನು ಸಿದ್ಧರಾಮನ।
ಕುಶಲಮತಿ ಮಡಿವಳನನಜಗಣ್ಣ ಸೊಡ್ಡಳನ ॥
ಮುಸುಡಿಚೌಡಯ್ಯನ ಗಜೇಶ್ವರ ।
ಮುಸಣಿತಂದೆಯನ ।
ದಸರಿದೇವನ ಹಡಪದಪ್ಪಣ್ಣಗಳ ಕಲಿಗಣನ ॥೧॥

ಹೊನ್ನತಂದೆಯನನಘಮಾದರ ।
ಚನ್ನನುರೆ ಚಾರಮನ ನಂಬಿಯ ।
ಕನ್ನಪಾಖ್ಯನ ಭೋಗಿದೇವನ ಕಾಚಿರಾಜನನ ॥
ಧನ್ಯ ದೇವರದಾಸಿಮಯ್ಯನ ।
ಮಾನ್ಯನಹ ಹೊಡೆಹುಲ್ಲಬಂಕನ ।
ಉನ್ನತದ ರೇಚಣ್ಣನಿರಿಭಕ್ತನಲಾಯುಧನ ॥೨॥

ಬೊಮ್ಮಿದೇವನನ್ನೈದೆ ಕಿನ್ನರ ।
ಬೊಮ್ಮಿದೇವನ ಸಾರ ಕನ್ನದ ।
ಬೊಮ್ಮಿದೇವನ ಪರಮುಸಗರದ ಬೊಮ್ಮಿ ಕಲಕೇತನ॥

ಬೊಮ್ಮಿದೇವನ ವಿನುತ ಹಾದರ ।
ಬೊಮ್ಮಿದೇವನನಾದಿರಕ್ಕಸ ।
ಬೊಮ್ಮಿದೇವನ ನಿತ್ಯಬಾಹುರ ಬ್ರಹ್ಮಿತಂದೆಗಳ ॥೩॥

ಮಾರನಿಡಗುಡಿ ಮಾರನರವಿನ ।
ಮಾರನಾ ನಗೆಮಾರಮೋಳಿಗೆ ।
ಮಾರನಿಳಿಯಾಂಡ ಗುಡಿಮಾರನ ಧೀರನಾಯ್ದುಕ್ಕಿ ॥
ಮಾರ ನಾಡಕ್ಕಿಯ ಸುಮಾರನ ।
ಮಾರಭೂಪನ ಶೂರಸಾನಿಡು ।
ಮಾರಿದೇವನ ಸೋಮಾಸಿಮಾರರ ಕಾಳಿಮುನ ॥೪॥

ವೇಮನಾರಾಧ್ಯಪ್ರಮ್ಯೆದುನ ।
ರಾಮನುರೆ ತುರುಗಾಯಿರಾಮನ ।
ಕ್ಷೇಮಿಯಾ ತಳವಾರಕಾಯ್ಕದ ರಾಮನೇಕಾಂತ॥
ರಾಮನುದರದ ರಾಮನಸದೃಶ ।
ಕಾಮುವಟ್ಟದ ಭೀಮನಾ ಕಲಿ ।
ಕಾಮರಾಯನ ಪ್ರ ಹರಿಸೋಮಣ್ಣಗಳನನವರತ ॥೫॥

ಪಂಡಿತಯ್ಯನನಧಿಕ ಶ್ರೀಪತಿ ।
ಪಂಡಿತನ ಶಿವಲೆಂಕಮಂಚಣ ।
ಪಂಡಿತನು ತಿರುಜ್ಞಾನಸಂಬಂಧಿಗಳ ಚಿದ್ವಿದ್ಯಾ ॥
ಪಂಡಿತನು ಅಹದಾಸಿದೇವನ ।
ದಂಡಿತಘಕುಲ ಸೇದಿರಾಜನ ।
ಕೊಂಡಗೂಳಿಯ ಕೇಶಿರಾಜನ ಚಂಡಧೀಶ್ವರನ ॥೬॥

ಪಾಲಗುರ್ಜರನೋಹಲನ ಸಲೆ ।
ಕೋಲಶಾಂತಯ್ಯಗಳನಾ ತಿರು ।
ನೀಲಕಂಠಯ್ಯಗಳ ವಿನುತ ತಿರುಮೂಲದೇವರನ॥
ಚೋಳರಾಯನ ವಿಹಿತಮಾದರ ।
ಧೂಳನಾ ಹರಳಯ್ಯಗಳ ಸಿರಿ ।
ಯಾಳನಾ ಗೊಲ್ಲಾಳನುತ್ತಮನ ಚೀಲಾಳನನ ॥೭॥

ಉರರಾಯಣ್ಣಗಳ ನೆರೆ ಮಧು ।
ವರಸನಾ ಶಿವನಾಗಮಯ್ಯನ ।
ಮುರಘರಾ ನೈನಾರರಾ ಉರಿಲಿಂಗಪೆದ್ದಿಗಳ ॥
ಚೆರುಪುಲಿಯುನಣು ಮೂರ್ತಿಯಂ ।
ತಿರುಕುರುಪಿತೊಂಡರ ಸುರಿಯ ಚೌಡಯ್ಯನ ।
ಮರುಳಶಂಕರದೇವನನತಿಭಕ್ತನ ವೊನೆಧರನ ॥೮॥

ಮೊರನವೇಮಯ್ಯಗಳ ನೇಲೇ ।
ಶ್ವರದ ಕೇತಯ್ಯಗಳನಾ ಜೋ ।
ಧರದ ಮಾಯಣ್ಣಗಳ ಕಕ್ಕಯ್ಯಗಳ ನೈಸರನಾ ॥
ಕರಳುಶಾಂತಯ್ಯಗಳ ಮೆರೆಮಿಂ ।
ಡರನನಾಮಿಕನಾಚಿದೇವನ ।
ಸರಳಪೇಳ್ಕುತ್ತರ ಸುಗುರುಭಕ್ತಯ್ಯಗಳ ಮತ್ತೆ ॥೯॥

ಅರಿವಳನನಿಮಿಷ ಗೊಗ್ಗೇ ।
ಶ್ವರನ ಪಾಂಡ್ಯರ ಬಾಚಿದೇವನ ।
ಪುರದ ನಾಗಣ್ಣಗಳ ಶ್ವಪಚಯ್ಯಗಳನನವರತ॥
ವರ ಕರಸ್ಥಲನಾಗಲಿಂಗನ ।
ತರಗೆಲೆಯ ಶಾಂತಯ್ಯಗಳ ಪಾ ।
ಲ್ಕುರಿಕೆ ಸೋಮೇಶ್ವರನ ತೋಂಟದ ಸಿದ್ಧಗುರುವರನ ॥೧೦॥

ಹರಗಣಾಯನುತಳಿದವಗೆ ಶಿವ ।
ಪುರವನಾಮುದೆನಲ್ಕೆಬಸವೇ ।
ಶ್ವರನು ಮೊದಲಾದಖಿಲ ಗಣವರರಾಭಿಧಾನವನು ॥
ಪಠನು ಭಕ್ತಿಯೊಳುಂಪಠಿಸಲವ।
ರ್ಗರಿದಾವದು ಘನಮುತೇಶನ ।
ಕರುಣದಿಂ ನಿಜವಡೆದು ಸುಖಸಂಪದದಿ ಬಾಳುವರು ॥೧೧॥

---


ಸಂಪುಟ ೩೧
ಸಂಚಿಕೆ ೧೦


ಸಂಪಾದಕರು
ಡಾ॥ ರಾ. ಬ.
ಫ. ಗು. ಹಳಕಟ್ಟಿ,
ಬಿ. ಎ. ಎಲ್. ಎಲ್. ಬಿ.
ವಿಜಾಪುರ.


ಅಕ್ಟೋಬರ ೧೯೫೭

# ವಿಷಯಾನುಕ್ರಮಣಿಕೆ

ಶಿವಾನುಭವ  Duplicate

ಸಂಪುಟ 31 | 1957 ಅಕ್ಟೋಬರ | ಸಂಚಿಕೆ 10

ವಿಷಯಾನುಕ್ರಮಣಿಕೆ.

ಶಿವಾನುಭವ
ಸಂಪುಟ ೩೧ ಸಂಚಿಕೆ ೧೦
1957




# ವೈದಿಕ ಧರ್ಮಕ್ಕೂ ವೀರಶೈವ ಧರ್ಮಕ್ಕೂ ಬಹಳೇ ವ್ಯತ್ಯಾಸ

( ಬರೆದವರುಃ– ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ. )

---

ಅನೇಕರು ವೇದಾಂತಕ್ಕೂ ವೀರಶೈವ ಶಿದ್ಧಾಂತಕ್ಕೂ ಹೋಲಿಸುವರು. ವೈದಿಕ ಧರ್ಮವು ವೀರಶೈವ ಧರ್ಮಕ್ಕಿಂತ ಹಿಂದಿನಿಂದ ಬಂದುದೆಂದು ಈಗಸಹಜ ಎಲ್ಲರಿಗೂ ತಿಳಿಯುವಂತೆ ಆಧಾರಗಳು ಕೆಲವು ದೊರೆತಿವೆ. ಮೋಹೆಂಜೆದಾರ ಹರಪ್ಪಾ ಮೊದಲಾದ ಕಡೆಗಳಲ್ಲಿ ವೀರಶೈವ ಅಂದರೆ ಅಂಗದ ಮೇಲೆ ಲಿಂಗ ಧರಿಸುವ ಧರ್ಮದವರ ಕುರುಹುಗಳು ದೊರೆತಿವೆ. ಇವು ದ್ರಾವಿಡ ಸಂಸ್ಕೃತಿಯ ತುಟ್ಟ ತುದಿಯ ಶ್ರೇಷ್ಠತೆಯ ಕುರುಹುಗಳಾಗಿವೆ. ದ್ರಾವಿಡರಿಂದಲೇ ವೈದಿಕ ಧರ್ಮದವರು ಅನೇಕವನ್ನು ಕಡ ತಕ್ಕೊಂಡಿದ್ದಾರೆ. ಹೀಗೆ ದ್ರಾವಿಡ ಸಂಸ್ಕೃತಿಯು ಸ್ವತಂತ್ರವಾದುದು ಪುರಾತನವಾದುದು ಆಗಿದೆ. ಆದರೂ ವೈದಿಕರ ತುಳಿತಕ್ಕೆ ನುಚ್ಚು ನುಗ್ಗಾಗಿ ಕೆಲವು ಕಡೆ ಬಾಳಿ ಬದುಕಿಕೊಂಡಿದೆ. ನಮ್ಮಲ್ಲಿ ಕೆಲವರು ವೈದಿಕ ಧರ್ಮಕ್ಕೆ ವೀರಶೈವವನ್ನು ಹೋಲಿಸಿದರೆ ತಾವು ಶ್ರೇಷ್ಠರೆನಿಸಿಕೊಳ್ಳುವೆವೆಂಬ ಭ್ರಮೆಯಿಂದ ಹೀಗೆ ಮಾಡುತ್ತಿರುವಂತೆ ತೋರುವದು. ಆಗಮಗಳು ಎಲ್ಲಕ್ಕೂ ಮೊದಲು ವೀರಶೈವರ

ಗ್ರಂಥಗಳಾಗಿರುವವು. ಅವುಗಳನ್ನು ವೇದಕ್ಕೂ ಪೂರ್ವದಲ್ಲಿ ಬರೆದರು. ಹಿಂದಿನಿಂದ ಅನೇಕ ಗ್ರಂಥಗಳು ಆಗಮಗಳ ಆಧಾರದಿಂದ ಬರೆಯಲ್ಪಟ್ಟವು. ಸಿದ್ಧಾಂತ ಶಿಖಾಮಣಿ, ವಚನಸಾಹಿತ್ಯ ಮೊದಲಾದ ಅನೇಕ ಗ್ರಂಥಗಳೆಲ್ಲ ಆಗಮ ತತ್ವಗಳ ಆಧಾರದ ಮೇಲೆ ಬರೆಯಲ್ಪಟ್ಟಿರುವವು. ವೀರಶೈವ ಸಾಹಿತ್ಯವು ಸಂಸ್ಕೃತ ಕನ್ನಡ ತೆಲಗುಗಳಲ್ಲಿ ಅಪಾರವಾಗಿ ಬೆಳೆದು ಬಂದಿದೆ. ಆ ಗ್ರಂಥಗಳ ಹೆಸರನ್ನು ಕೊಟ್ಟರೆ ದೊಡ್ಡದೊಂದು ಪಟ್ಟಿಯೇ ಆಗುವದು. ಆದಕ್ಕೆ ಇಲ್ಲಿ ಅವುಗಳ ಹೆಸರುಗಳನ್ನು ಬರೆದಿಲ್ಲ. ಆ ಎಲ್ಲ ಗ್ರಂಥಗಳನ್ನು ನೋಡಿದರೆ ವೈದಿಕ ಧರ್ಮಕ್ಕೂ ವೀರಶೈವ ಧರ್ಮಕ್ಕೂ ಬಹಳವಾಗಿ ವ್ಯತ್ಯಾಸ ಇರುವದು ಸಹಜ ಕಂಡು ಬರುವದು. ಆ ವ್ಯತ್ಯಾಸಗಳನ್ನು ಒಂದೊಂದಾಗಿ ಕೆಳಗೆ ವಿವರಿಸಲಾಗುವದು.

(೧) ವೀರಶೈವ ಸ್ತ್ರೀಯು ಗರ್ಭಿಣಿಯಾದ ಆನೇ ತಿಂಗಳಲ್ಲಿ ಶಾಸ್ತ್ರೋಕ್ತ ವಿಧಿವತ್ತಾಗಿ ಹೊಟ್ಟೆಯ ಮೇಲೆ ಲಿಂಗಧಾರಣ ಮಾಡುವರು. ಯಾಕಂದರೆ ಆಗ ಹೊಟ್ಟೆಯೊಳಗಿನ ಕೂಸಿಗೆ ಜೀವಕಳೆಯು ಬಂದಿರುವದು. ಕೂಸಿಗೆ ಆಗಿನಿಂದಲೇ ವೀರಶೈವ ಸಂಸ್ಕಾರಗಳು ಪ್ರಾರಂಭವಾಗುವವು. ಆದರೆ ವೈದಿಕರಿಗೆ ಈ ಸಂಸ್ಕಾವೇ ಇಲ್ಲ. ಆ ಕೂಸು ಆ ಸ್ತ್ರೀ ಶೂದ್ರರಾಗಿಯೇ ಇರುವರು.

(೨) ವೈದಿಕರನ್ನು ಕಂಡು ಹುಡುಗನಿಗೆ ಮಾತ್ರ ಎಂಟು ವರ್ಷಕ್ಕೆ ಉಪನಯನ (ಮುಂಜಿವೆ) ಎಂಬ ಕ್ರಿಯೆಯನ್ನು ಮಾಡಿ ಚಂಡಿಕೆಯನ್ನು ಬಿಡುವರು ಅಲ್ಲದೆ ಜನಿವಾರವನ್ನು ಹಾಕುವರು.

ವೀರಶೈವರಲ್ಲಿ ಎಂಟು ವರ್ಷಕ್ಕೆ ಶಿವದೀಕ್ಷೆಯನ್ನು ಕೊಟ್ಟು ಮಂತ್ರೋಪದೇಶ ಮಾಡುವರು. ಇದಕ್ಕೆ ಗಂಡು ಹೆಣ್ಣೆಂಬ ಭೇದವನ್ನು ವೀರಶೈವರು ಮಾಡುವದಿಲ್ಲ.

(೩) ವೀರಶೈವರ ಸ್ತ್ರೀಯರಿಗೂ ಕೂಡ ಅಷ್ಟಾವರಣಗಳುಂಟು. ಅವು ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ ರುದ್ರಾಕ್ಷಿ ಮಂತ್ರ ಇವುಗಳು. ವೈದಿಕ ಸ್ರೀಯರಿಗೆ ಯಾವ ಸಂಸ್ಕಾರವೂ ಇಲ್ಲ. ಇವರು ಹುಟ್ಟಿದಂದಿನಿಂದ ಸಾಯುವ ತನಕ ಶೂದ್ರರಾಗಿಯೇ ಇರುವರು. ಇವರಿಗೆ ಜ್ಞಾನ ಮೋಕ್ಷಕ್ಕೆ ಅಧಿಕಾರವೇ ಇಲ್ಲ. ಸಂಸಾರ ತ್ಯಾಗ ಮಾಡುವ ಅಧಿ

ಕಾರ ಇವರಿಗಿಲ್ಲ. ಆದರೆ ವೀರಶೈವ ಸ್ತ್ರೀಯು ಜ್ಞಾನ ಮೋಕ್ಷಕ್ಕೆ ಅಧಿಕಾರಿಗಳಿರುವರು. ಬೇಕಾದಾಗ ಸಂಸಾರ ತ್ಯಾಗ ಮಾಡುವ ಅಧಿಕಾರವಿರುವದು.

(೪) ಮಡಿ, ಮೈಲಿಗಿ ಜನನ ಸೂತಕ, ಮರಣ ಸೂತಕ, ಮುಟ್ಟಾಗುವ ದೋಷ ಮೊದಲಾದ ಮಡಿ ಮೈಲಿಗೆಗಳು ವೀರಶೈವ ಸ್ತ್ರೀಯರಿಗೆ ಇಲ್ಲ. ಯಾಕಂದರೆ ಅವರ ಅಂಗದ ಮೇಲೆ ಸದಾ ಲಿಂಗದೇವರು ಇರುವದರಿಂದ ದೋಷಗಳು ತಗಲುವದಿಲ್ಲ. ಸದಾ ಪರಿಶುದ್ಧರಾಗಿಯೇ ಇರುವರು.

ವೈದಿಕ ಸ್ತ್ರೀಯರಿಗೆ ಯಾವ ಸಂಸ್ಕಾರ ಇರಲಾರದಕ್ಕಾಗಿ ಅವರಿಗೆ ಮಡಿ ಮೈಲಿಗೆ ಸೂತಕ ಮುಡಚಟ್ಟುಗಳು ಇರುವವು.

(೫) ವೀರಶೈವ ಸ್ತ್ರೀಪುರುಷರು ಅಂಗದ ಮೇಲೆ ಲಿಂಗ ಧರಿಸುವರು. ವಿಭೂತಿ, ರುದ್ರಾಕ್ಷಿ ಧರಿಸುವರು. ಪಾದೋದಕ ಪ್ರಸಾದ ಸೇವಿಸುವರು. ಆದರೆ ವೈದಿಕ ಸ್ತ್ರೀಯರು ಇವುಗಳನ್ನು ಎಂದೂ ಧರಿಸಿಲ್ಲ. ಜನಿವಾರವೂ ಕೂಡ ಇವರಿಗೆ ಇರುವದಿಲ್ಲ. ಲಗ್ನವಾದ ಬಳಿಕ ವೈದಿಕ ಸ್ತ್ರೀಯರ ಜನಿವಾರವನ್ನು ಗಂಡನೇ ಧರಿಸಿ ಎರಡು ಜನಿವಾರಗಳನ್ನು ಮಾಡಿಕೊಳ್ಳುವನು. ಇವರ ಸ್ತ್ರೀಯರು ಸದಾ ಸೇವಾ ಧಾರಿಗಳೇ ಇರುವರು. ಸ್ಥಾನ ಬದಲಾಯಿಸುವದಿಲ್ಲ. ಆದರೆ ವೀರಶೈವ ಸ್ತ್ರೀಯರು, ಭಕ್ತ, ಮಹೇಶ, ಪ್ರಸಾದಿ ಪ್ರಾಣಲಿಂಗಿ, ಶರಣೆ, ಐಕ್ಯ ಹೀಗೆ ಸ್ಥಾನಗಳನ್ನು ಪಡೆದು ಮುಕ್ತಳಾಗುವಳು.

(೬) ವೀರಶೈವ ಸ್ತ್ರೀಪುರುಷರು ಸತ್ತರೆ ಅವರ ಶರೀರವು ಲಿಂಗಮಯವಾಗಿ ಪವಿತ್ರವಾಗಿರುವ ಕಾರಣ ಅವರ ಹೆಣವನ್ನು ಸಿಂಗರಿಸಿ ವಿಮಾನದಲ್ಲಿ ಕೂಡ್ರಿಸಿ ಮಸಣಕ್ಕೆ ಒಯ್ದು ಕುಣಿಯಲ್ಲಿ ಕೂಡ್ರಿಸಿ ಕೈಯಲ್ಲಿ ಲಿಂಗ ಕೊಟ್ಟು ಕೂಡ್ರಿಸಿ ಹುಗಿಯುವರು. ದೇಹ ಬಿಡುವದಕ್ಕಿಂತ ಮೊದಲು ಇಲ್ಲವೆ ದೇಹ ಬಿಟ್ಟಬಳಿಕ ಬೇಕಾದಷ್ಟು ಧಾನಧರ್ಮಗಳನ್ನು ಬಡಬಗ್ಗರಿಗೆ ಮಾಡುವರು. ಸಕಲ ವಾದ್ಯ ವೈಭವಗಳೊಂದಿಗೆ ಹೆಣವನ್ನು ಮೆರಿಸುವರು. ಆದರೆ ವೈದಿಕ ಸ್ತ್ರೀಪುರುಷರು ಸತ್ತರೆ ಸದಗಿಯ ಮೇಲೆ ಮಲಗಿಸಿ ಮಸಣಕ್ಕೆ ಒಯ್ದು ಸುಡುವರು. ಹೆಣದ ಮುಂದೆ ಹೊಸ ಗಡಿಗೆಯಲ್ಲಿ ಬೆಂಕಿಯನ್ನು ಹಿಡಿದುಕೊಂಡು ಹೋಗುವರು. ದಾನಧರ್ಮಗಳನ್ನು ಮಾಡುವರು. ಸುಟ್ಟ ಬಳಿಕ ಎಲುಬುಗಳನ್ನು ಆರಿಸಿ ಹೊಳೆ ಹಳ್ಳಗಳಲ್ಲಿ ಚಲ್ಲುವರು. ಇವರು

ಹತ್ತುದಿನಕ್ಕೆ ಸೂತಕ ಹೋದಬಳಿಕ ದಿನವನ್ನು ಮಾಡುವರು. ವೀರಶೈವರು ಮೂರು ದಿನಕ್ಕೆ ದಿನವನ್ನು ಮಾಡುವರು. ಹೆಣವನ್ನು ಸಿಂಗರಿಸುವದಿಲ್ಲ ವಾದ್ಯವಿಲ್ಲ, ಮೆರಿಸುವದಿಲ್ಲ.

(೭) ವೀರಶೈವರು ಯಜ್ಞ, ಯಾಗ, ಹೋಮಹವನಗಳನ್ನೂ ಮಾಡುವದಿಲ್ಲ. ವೈದಿಕರು ಇವುಗಳನ್ನು ಮಾಡುವರು. ಇಂಥ ಸುಧಾರಣೆಯ ಕಾಲದಲ್ಲಿಯೂ ಕೂಡ ಯಜ್ಞಮಾಡುವರು. ಇದಕ್ಕಾಗಿಯೇ ವಚನಕಾರರು ಇವುಗಳನ್ನು ಬಹುವಾಗಿ ಖಂಡಿಸಿದ್ದಾರೆ. ಕಿಚ್ಚು ದೈವವೆಂದು ಹವಿಯ ನಿಕ್ಕುವ ಹಾರುವರ ಮನೆಯಲಿ ಕಿಚ್ಚೆದ್ದು ಸುಡುವಾಗ ಬಚ್ಚಲ ನೀರು ಬೀದಿಯ ಧೂಳವ ಹೊಪ್ದು ಬೊಬ್ಬಿಟ್ಟೆಲ್ಲರ ಕರೆವರಯ್ಯ? ಕೂಡಲಸಂಗಮ ದೇವ ವಂದನೆಯ ಮರೆದು ನಿಂದಿಸುವರಯ್ಯ.

ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು ಎಲೆ ಹೋತೆ, ಅಳು ಕಂಡಾ. ವೇದವನೋದಿದವರ ಮುಂದೆ ಅಳು ಕಂಡಾ. ನೀನತ್ತುದಕ್ಕೆ ತಕ್ಕುದ ಮಾಡುವನು ಕೂಡಲಸಂಗಮದೇವಾ.

ಈ ಪ್ರಕಾರ ಹೋಮಹವನ ಯಜ್ಞಯಾಗಗಳನ್ನು ಬಲವಾಗಿ ಅನೇಕ ರೀತಿಯಾಗಿ ಖಂಡಿಸಿದ್ದಾರೆ.

(೮) ವೀರಶೈವರಲ್ಲಿ ಜಾತಿಭೇದಗಳಿಲ್ಲ, ಶಿವಭಕ್ತರನೆಲ್ಲ ಒಂದೇ ಎಂಬೆ. ಅಂಗದ ಮೇಲೆ ಲಿಂಗವಿದ್ದಡೆ ಸಂಗಯ್ಯನೆಂಬೆ. ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಲಿಂಗಧಾರಿಗಳಾಗಿ ಶಿವಭಕ್ತರಾದವರೆಲ್ಲ ಒಂದೇ ಎಂಬೆ. ಭಕ್ತ-ಭವ ಎಂದು ಎರಡೇ ಜಾತಿ. ಲಿಂಗದೇವನ ಪೂಜಿಸಿ ಕುಲವನರಸದಿರು. ಶಿವಭಕ್ತರೆಲ್ಲ ಶಿವಕುಲದವರು. ಲಿಂಗ ಮುಟ್ಟದವನೇ ಕೀಳು ಜಾತಿ. ಶಿವ ಭಕ್ತನೇ ಕುಲಜ. ವೀರಶೈವರಲ್ಲಿ ವೈದಕದವಶಲ್ಲಿ ಇದಂತೆ ಜಾತಿಗಳಲ್ಲಿ ಒಂದೇ ಜಾತಿ, ಒಂದೇ ಕುಲ, ಉದ್ಯೋಗದಿಂದ ಜಾತಿ ಕುಲಗಳಾಗುವದಿಲ್ಲ ಎಂದು ವೀರಶೈವರಲ್ಲಿ ಇರುವದು.

ವೈದಿಕರಲ್ಲಿ ಅನೇಕ ಜಾತಿಗಳು ಮೇಲು ಕೀಳು ಭೇದ ಮುಟ್ಟ ಬೇಡ. ಮಡಿವೈಲಿಗೆ ಹೆಚ್ಚು ಕಡಿಮೆ ಇವುಗಳಿಗೆ ಲೆಕ್ಕವಿಲ್ಲ. ಅಲ್ಲಿ ಉದ್ಯೋಗದಿಂದಲೇ ಕುಲಜಾತಿಗಳು ಬಂದಿರುವವು.

(೯) ಉದ್ಯೋಗಗಳೆಲ್ಲ ಒಂದೇ ಎಂದು ವೀರಶೈವರು ನಂಬಿದ್ದಾರೆ. ಯಾವ ಉದ್ಯೋಗವು ಹೆಚ್ಚಲ್ಲ ಕಡಿಮೆಯಲ್ಲ. ಎಲ್ಲರೂ ಸಮಾಜಕ್ಕೆ

ಪೋಷಕರು. ಒಂದಿಲ್ಲದೆ ನಡೆಯುವದಿಲ್ಲೆಂದು ನಂಬಿದ್ದಾರೆ. ಶರೀರದಲ್ಲಿ ಸಕಲ ಇಂದ್ರಿಯಗಳು ಅಷ್ಟೆ. ಹೆಚ್ಚಿಲ್ಲ ಕಡಿಮೆ ಇಲ್ಲ. ಇವೆಲ್ಲ ಶರೀರಕ್ಕೆ ಪೋಷಕವಾಗಿರುವವು ಎಂದು ನಂಬಿದ್ದಾರೆ.

ಶಿವ ಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸ ಗೊಳ್ಳೆನು. ಭಕ್ತರಲ್ಲಿ ಕಾಯಕದ ಭೇದವ ಮಾಡೆನು. ಸೆಟ್ಟಿ ಎಂಬೆನೆ ಸಿರಿಯಾಳನ ? ಮಡಿವಳನೆಂಬೆನೆ ಮಾಚಯ್ಯನ ? ಡೋಹರನೆಂಬೆನೆ ಕಕ್ಕಯ್ಯನ? ಮಾದರನೆಂಬೆನೆ ಚನ್ನಯ್ಯನ ? ಸಮಗಾರನೆಂಬೆನೆ ಹರಳಯ್ಯನ ? ಕುರುಬನೆಂಬೆನೆ ಗೊಲ್ಲಾಳನ ? ಬೇಡನೆಂಬೆನೆ ಕನ್ನಯ್ಯನ ? ಕುಂಬಾರನೆಂಬೆನೆ ಗುಂಡಯ್ಯನ ? ಜಾಡನೆಂಬೆನೆ ದೇವರದಾಸಿಮಯ್ಯನ ? ಕೊರವೇರನೆಂಬೆನೆ ನುಲಿಯ ಚಂದಯ್ಯನ ? ಎಂದು ಪ್ರಶ್ನೆ ಹಾಕಿದ್ದಾರೆ. ಅಂದರೆ ಇವರ ಉದ್ಯೋಗದ ಮೇಲಿಂದ ಜಾತಿ ಕುಲಗಳನ್ನು ಎಣಿಸುವದಿಲ್ಲ. ಉದ್ಯೋಗವೆಲ್ಲ ಅಷ್ಟೇ. ಉದ್ಯೋಗದಿಂದ ಹೊಟ್ಟೆ ಬಟ್ಟೆಗೆ ಮಾತ್ರ ಸಿಗುವದೆಂದಬಳಿಕ ಅವುಗಳಲ್ಲಿ ಭೇದವಿಲ್ಲವೆಂದು ವೀರಶೈವರು ತಿಳಿದಿದ್ದಾರೆ. ಆದರೆ ವೈದಿಕರು ಉದ್ಯೋಗಗಳಲ್ಲಿ ಭೇದ ಮಾಡಿದ್ದಾರೆ. ಅವುಗಳ ಮೇಲಿಂದಲೇ ಉಚ್ಚ ನೀಚ ಎಂಬ ಜಾತಿ ಕುಲಗಳನ್ನು ಕಲ್ಪಿಸಿದ್ದಾರೆ. ಈ ಜಾತಿಗಳಿಗೆ ಲೆಕ್ಕಗಳಿಲ್ಲದಾಗಿದೆ. ಇದಕ್ಕಾಗಿಯೇ ಅನೇಕ ಮಹಾತ್ಮರು ಅವುಗಳನ್ನು ಹೊಡೆದು ಹಾಕಲು ಯತ್ನಿಸುವರು.

(೧೦) ವೀರಶೈವರಲ್ಲಿ ಪರಸ್ಪರ ಅನ್ನೋದಕ ಲಗ್ನಗಳ ವ್ಯಾವಹಾರ ಮಾಡಬೇಕೆಂದು ವಿಧಿಸಿದರು

ಉಂಬಲ್ಲಿ ಉಡುವಲ್ಲಿ ಕ್ರಿಯುಳಿಯಿತ್ತೆಂಬರು. ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರೇನಯ್ಯ ? ಆವ ಕುಲದವನಾದರೇನು ? ಶಿವಲಿಂಗವಿದ್ದವನೇ ಕುಲಜನು. ಕುಲವನರಸುವರೇ ಶರಣರಲ್ಲಿ ಜಾತಿಸಂಕರನಾದಬಳಿಕ ? ಶಿವೇ ಜಾತಃ ಕುಲೇ ಧರ್ಮಃ । ಪೂರ್ವ ಜನ್ಮ ವಿವರ್ಜಿತಃ । ಉಮಾ ಮಾತಾ ಪಿತಾ ರುದ್ರಃ ಈಶ್ವರಃ ಕುಲಮೇವಚ ॥ ಎಂದುದಾಗಿ ಒಕ್ಕುದ ಕೊಂಬೆನವರಲ್ಲಿ. ಕೂಸ ಕೊಡುವೆ. ಎಂದು ಅನ್ನೋದಕ ಲಗ್ನಗಳ ಸಂಬಂಧ ಭೇದ ಮಾಡುವದು ಒಳ್ಳೆಯದಲ್ಲ ಎಂದು ಹೇಳಿದ್ದಾರೆ.

ಆದರೆ ವೈದಿಕರಲ್ಲಿ ಇವುಗಳ ವ್ಯವಹಾರ ನಡೆಯುವದಿಲ್ಲ. ಎಲ್ಲರ ಅಡಿಗೆಗಳು ಬೇರೆ ಬೇರೆ ಆಗುವವು. ಬೇರೆ ಬೇರೆ ಊಟ ಮಾಡುವರು.

ಒಂದು ಜಾತಿಯವರು ಇನ್ನೊಂದು ಜಾತಿಗೆ ಹೆಣ್ಣನ್ನು ಕೊಡುವದನ್ನು ವೈದಿಕ ಧರ್ಮವು ಒಪ್ಪುವದಿಲ್ಲ.

(೧೧) ವೀರಶೈವರು ವರ್ಣಗಳನ್ನು ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರರೆಂಬ ಜಾತಿಭೇದವನ್ನು ಒಪ್ಪುವದಿಲ್ಲ. ಇವುಗಳನ್ನು ವೈದಿಕ ಧರ್ಮವು ಒಪ್ಪುವದು. ಈಗ ನಾಲ್ಕೇ ಜಾತಿಗಳಿಲ್ಲ ಈ ಪ್ರತಿಯೊಂದರಲ್ಲಿ ನೂರಿನ್ನೂರು ಜಾತಿಗಳಾಗಿ ಹೋಗಿ ಈ ನಾಲ್ಕರಿಂದಲೇ ಅಸಂಖ್ಯ ಜಾತಿಗಳಾಗಿವೆ. ಬ್ರಾಹ್ಮಣರಲ್ಲಿ ಅಸಂಖ್ಯ ಜಾತಿಗಳಾಗಿವೆ ಒಬ್ಬರಿಗೊಬ್ಬರು ಅನ್ನೋದಕ ಲಗ್ನಗಳ ವ್ಯವಹಾರಗಳನ್ನು ಮಾಡುವದಿಲ್ಲ. ಅಲ್ಲದೆ ಅವರಲ್ಲಿ ಒಬ್ಬರನ್ನೊಬ್ಬರು ಮುಟ್ಟುವದೂ ಇಲ್ಲ. ಇನ್ನು ಉಳಿದ ಮೂರು ವರ್ಣಗಳ ಗತಿಯನ್ನು ವಿಚಾರಿಸಿರಿ. ಇದರಿಂದಲೇ ದೇಶ ಹಾಳಾಗಿ ಹೋಗಿದೆ. ಏನೋ ಈಗ ಜಾಗ್ರತವಾಗಹತ್ತಿದೆ. ಮುಂದೆ ಏನಾಗುತ್ತದೋ ನೋಡಬೇಕು.

(೧೨) ವೀರಶೈವರು, ಹೊಲೆಯನಾದರೂ ಸದಾಚಾರಿಯಾದವನೇ ಕುಲಜನೆಂದು ಮನ್ನಿಸುವರು. ಆದರಂತೆ ವಚನಕಾರರು ಸಹ ಹೇಳಿದ್ದಾರೆ.

> ಕೊಲ್ಲುವವನೇ ಮಾದಿಗ. ಹೊಲಸು ತಿಂಬುವವನೇ ಹೊಲೆಯ. ಹೊಲಸು ಕೆಲಸ ಮಾಡುವವನೇ ಹೊಲೆಯ, ಸಕಲ ಜೀವಾತ್ಮರಿಗೆ ಲೇಸನೇ ಬಯಸುವವನೇ ಕುಲಜನು. ಹೊಲೆಯುಂಟೇ ಲಿಂಗವಿದ್ದೆಡೆಯಲ್ಲಿ? ಕುಲಉಂಟೆ ಜಂಗಮವಿದ್ದೆಡೆಯಲ್ಲಿ? ಹೊಲೆಯೊಳಗೆ ಹುಟ್ಟಿ ಕುಲವನರಸದಿರು. ಸತ್ತುದನೆಳೆವ ನೆತ್ತಣದ ಹೊಲೆಯ ? ಕೂಡಲ ಸಂಗನ ನಂಬದವನೇ ಹೊಲೆಯ.

ಆದರೆ ವೈದಿಕ ಧರ್ಮದಲ್ಲಿ ಸದಾಚಾರ ಮಹತ್ವಕೊಡದೆ ಜಾತಿಗೆ ಹೆಚ್ಚಾಗಿ ಮಹತ್ವಕೊಡುತ್ತಿರುವರು. ಅನೇಕ ಮಹಾತ್ಮರು ಈ ಅನ್ಯಾಯಗಳ ವಿರುದ್ಧ ಹೋರಾಡಿ ಹೋದರು. ಆದರೆ ವೈದಿಕ ಧರ್ಮದ ಕಟ್ಟಳೆಗಳು ಇನ್ನೂ ಸಡಿಲಾಗಿಲ್ಲ.

(೧೩) ವೀರಶೈವರಲ್ಲಿ ಕಾಯಕಕ್ಕೆ ಮಹತ್ವ ಕೊಟ್ಟಷ್ಟು ಮತ್ತಾರೂ ಕೊಟ್ಟಿಲ್ಲ. ಗುರುನಾದಡೂ ಕಾಯಕದಿಂದ ಮುಕ್ತ. ಜಂಗಮಕ್ಕಾದಡೂ ಕಾಯಕಬೇಕು. ಕಾಯಕದಿಂದ ಲಿಂಗದ ಕುಲ ಹರಿವುದು. ಕಾಯಕವೇ ಕೈಲಾಸ, ಕಾಯಕದಲ್ಲಿ ನಿರತನಾದರೆ ಗುರುದರುಶನ ಹುರೆಯಬೇಕು. ಲಿಂಗ

ಪೂಜೆಯು ಮರೆತುಬಿಡಬೇಕು. ಜಂಗಮ ಮುಂದಿದ್ದರೂ ಹಂಗು ಹರಿಯ ಬೇಕು, ಎಂದು ಹೇಳಿದ್ದಾರೆ. ಕಾಯಕದಿಂದ ಸುಖ ಶಾಂತಿಗಳು ಸಮಾಜ ದಲ್ಲಿ ನೆಲಿಸುವವು. ಆದರೆ ವೈದಿಕ ಧರ್ಮದಲ್ಲಿ ಕಾಯಕಕ್ಕೆ ಮಹತ್ವಕೊಡದೆ ವೇದಾಂತಕ್ಕೆ ಜ್ಞಾನಕ್ಕೆ ಮಹತ್ವ ಕೊಟ್ಟಿದ್ದಾರೆ. ವೇದ ಓದಿದವನು ಕಾಯಕ ಮಾಡುವದಿಲ್ಲ. ವೇದವನ್ನು ಬ್ರಾಹ್ಮಣರೇ ಓದಬೇಕು. ಅವರು ಬರೇ ಪೂಜೆ ವೈದಿಕ ಕ್ರಿಯೆಗಳನ್ನು ಮಾಡುವರು. ಉಳಿದ ಉದ್ಯೋಗಗಳನ್ನು ಮಾಡು ವದು ಕೀಳೆಂದು ಬಗೆಯುವರು. ಅದಕ್ಕೆ ಬ್ರಾಹ್ಮಣರ ಮನೆಯಲ್ಲಿ ಇನ್ನೂ ಹೊಲದಲ್ಲಿ ಕಳೆತೆಗೆಯುವದು, ಮುಸುರೇ ತೊಳೆಯುವದು, ಬೀಸುವದು, ದನಗಾಯುವದು, ಒಕ್ಕಲತನ, ಕುಟ್ಟುವದು, ಕಟ್ಟಿಗೆ ಕುಳ್ಳುಗಳನ್ನು ಆರಿಸು ವದು, ಇಂಥ ಉದ್ಯೋಗಗಳು ಕೀಳೆಂದು ಬಗೆದು ಮಾಡುವದಿಲ್ಲ. ಅವರು ಪ್ರತಿಯೊಂದಕ್ಕೆ ಕೂಲಿಯವರನ್ನೇ ಹಚ್ಚುವ ಪದ್ಧತಿ ಇರುವದು. ಈಗೀಗ ಮಹಾತ್ಮರ ಉಪದೇಶದಿಂದ ಕಾಯ್ದೆ ಕಾನೂನುಗಳ ಮೂಲಕ ಇದರಲ್ಲಿ ಸ್ವಲ್ಪ ಸುಧಾರಣೆ ನಡೆದಿದೆ.

(೧೪) ಜ್ಯೋತಿಷ್ಯ, ಹೊತ್ತಿಗೆ, ಮೂಡಣ ಮೊದಲಾದವುಗಳನ್ನು ವೀರಶೈವರು ಕೇಳಬಾರದೆಂದು ವಿಧಿಸಿದ್ದಾರೆ. ಇದರಿಂದ ಮಾನವನು ಹೇಡಿ ಯಾಗಿ ಕಾಯಕ ಮಾಡದೆ ಪ್ರಯತ್ನ ಮಾಡದೆ ಹಣೆಗೆ ಕೈಹಚಿ ಕೂಡ್ರುವ ನೆಂದು ವಿಚಾರಿಸಿ ಹೀಗೆ ವಿಧಿಸಿದ್ದಾರೆ. ಒಂದು ದಿನ ಒಂದೇ ಶಿವಶರಣನೆಂ ಬುವಂಗೆ. ಲಗ್ನವೆಲ್ಲಿಯದೊ ವಿಘ್ನವೆಲ್ಲಿಯದೊ ಸಂಗಯ್ಯ ? ದೋಷವೆಲ್ಲಿ ಯದೊ ದುರಿತವೆಲ್ಲಿಯದೊ ಸಂಗಯ್ಯ ? ನಿಮ್ಮ ಮಾಣದೆ ನೆನೆವಂಗೆ ಭವ ಕರ್ಮವೆಲ್ಲಿಯದೊ ? ಶುಭಲಗ್ನವೆನ್ನಿರಯ್ಯ. ರಾಶಿ ಕೂಟ ಋಣ ಸಂಬಂಧ ಉಂಟೆಂದು ಹೇಳಿರಯ್ಯ. ಚಂದ್ರಬಲ ತಾರಾಬಲ ಉಂಟೆಂದು ಹೇಳಿರಯ್ಯ. ನಾಳಿನದಿನಕ್ಕಿಂತ ಇಂದಿನ ದಿನವೇ ಲೇಸೆಂದು ಹೇಳಿರಯ್ಯ. ಆದರೆ ವೈದಿಕ ಧರ್ಮದವರು ಇವುಗಳನ್ನು ಮನ್ನಿಸುವರು. ಇವುಗಳ ನೆರವು ಇಲ್ಲದೆ ಮುಂದೆ ಸಾಗುವದಿಲ್ಲ. ಅವುಗಳನ್ನು ಕೇಳಬಾರದು, ನಂಬಬಾರದು ಎಂದು ಎಲ್ಲಿಯೂ ಹೇಳಿಲ್ಲ. ಪ್ರತಿಯೊಂದಕ್ಕೂ ಮುಹೂರ್ತ ಕೇಳುವದು ಹೆಚ್ಚಾದದ್ದರಿಂದ ಜೋಯಿಸರು ಭಟ್ಟರು ಎಂದು ಜಾತಿಯಾಗಿಬಿಟ್ಟಿದೆ.

(೧೫) ವೀರಶೈವವು ಶಕ್ತಿವಿಶಿಷ್ಟಾದ್ವೈತವಾಗಿರುವದು. ಶಿವಶಕ್ತಿಯರು ಇದ್ದಾರೆ. ಅವರು ಅವಿನಾಭಾವ ಸಂಬಂಧದಿಂದ ಇದ್ದಾರೆ. ಶಿವನ ನೆನಹು

ಸಂಕಲ್ಪದಿಂದ ಈ ಶಕ್ತಿ ಶಿವನಿಂದ ಹೊರಹೋಟು ಇದೆಲ್ಲ ಸೃಷ್ಟಿಯನ್ನು ನಿರ್ಮಿಸಿ ಆಳುವಳು, ಶಿವನು ಸಾಕ್ಷೀಭೂತನು ಇವಳು ಶಿವನಿಗಾಗಿ ಆಟ ಮಾಡುವಳು. ವೀರಶೈವರು ಪ್ರಕೃತಿ-ಪುರುಷ-ಪರಶಕ್ತಿ-ಪರಶಿವ ತತ್ತ್ವಗಳನ್ನು ಒಪ್ಪುವರು. ಪ್ರಕೃತಿ ಜಡವಿದೆ. ಇದರ ಸಂಗದಿಂದ ಪುರುಷನು ಜಾಡ್ಯಕ್ಕೊಳಗಾಗಿದ್ದಾನೆ. ಪರಶಕ್ತಿಯು ಮಾತ್ರ ಚೈತನ್ಯ ಸೂಚಕವಾಗಿರುವಳು. ಪರಶಕ್ತಿಯುತನಾದ ಪರಶಿವನು ಚೈತನ್ಯಾತ್ಮಕನಾಗಿರುವನು. ಇದೇ ವೀರಶೈವ ಶಕ್ತಿವಿಶಿಷ್ಟಾದ್ವೈತದ ಸಿದ್ಧಾಂತವು.

ಆದರೆ ವೈದಿಕ ಧರ್ಮವು ಅದ್ವೈತ, ದ್ವೈತ, ವಿಶಿಷ್ಟಾದ್ವೈತವೆಂದು ಮೂರು ಪಂಗಡವಾಗಿದೆ. ಜಗವು ಭ್ರಮೆ ಭ್ರಾಂತಿ ಎನ್ನುವರು. ನಸುಗತ್ತಲಲ್ಲಿ ಹಗ್ಗನ್ನು ನೋಡಿ ಹಾವೆಂದು ಭ್ರಮಿಸಿದಂತೆ ಈ ಜಗವು ಅಜ್ಞಾನದಿಂದ ತೋರುವದು. ನಿಜವಾಗಿ ಜಗವು ಸುಳ್ಳೆಂದು ಹೇಳುವರು. ಬ್ರಹ್ಮನೊಬ್ಬನೆ ಸತ್ಯನಾಗಿದ್ದಾನೆಂದು ನಂಬುವರು. ಇದರಿಂದ ಹೇಡಿಗಳಾಗಿ ಕಾಯಕ ಮಾಡದೆ. ಅಧಮರಾದವರ ಸಂಖ್ಯೆಯೇ ಹೆಚ್ಚಾಗಿರುವದು.

ದ್ವೈತವು ಜೀವಾತ್ಮ-ಪರಮಾತ್ಮ ಎಂಬ ಎರಡು ಭೇದಗಳನ್ನು ನಿರಂತರ ಒಪ್ಪುವರು. ಜೀವ-ಜಡದಲ್ಲಿ, ಜೀವ ಜೀವರಲ್ಲಿ ಜಡಪರಮರಲ್ಲಿ, ಜಡ-ಜಡದಲ್ಲಿ ಭೇದವನ್ನು ಮನ್ನಿಸುವರು.

ವಿಶಿಷ್ಟಾದ್ವೈತವು ಚಿತ್ ಅಚಿತ್ ಈಶ್ವರ ಮೂರು ತತ್ವಗಳಿರುವವೆಂದು ಹೇಳುವರು. ಚಿತ್ (ಜೀವ) ಅಚಿತ್ (ಪ್ರಕೃತಿ) ಇವು ದಾಳಿಂಬ ಹಣ್ಣಿನ ಕಾಳಿನಂತೆ ಈಶ್ವರನಲ್ಲಿ ಇರುತ್ತವೆ. ಚಿದ ಚಿತ್ತಿನಿಂದ ಕೂಡಿದ ಪರಮಾತ್ಮ ಒಂದೆಯಾಗಿದೆ ಎಂದು ನಂಬುತ್ತಾರೆ.

ಈ ಪ್ರಕಾರ ವೈದಿಕ ಸಿದ್ಧಾಂತದಿಂದ ವೀರಶೈವ ಸಿದ್ಧಾಂತವೂ ಕೂಡ ಭೇದ ಉಳ್ಳದ್ದಾಗಿ ಈಗೀಗ ಶ್ರೀ ರಾಮಕೃಷ್ಣರು ಶ್ರೀ ಅರವಿಂದರು ವೀರಶೈವ ಸಿದ್ಧಾಂತಕ್ಕೆ ಸರಿಹೋಗುವಂತೆ ಹೇಳುವರು. ಜಗವೇ ಶಕ್ತಿಯನ್ನು ಒಪ್ಪುವಂತಾಗಿದೆ. ವೇದಾಂತಿಗಳು ಇಹ ಪರಕ್ಕೆ ಭೇದನನ್ನು ಮಾಡುವರು. ವೀರಶೈವರು ಇಹಪರದಲ್ಲಿ ಭೇದವನ್ನು ಮಾಡುವದಿಲ್ಲ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು. ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವು. ಈ ಲೋಕದಲ್ಲಿ ಮತ್ತನಂತ ಲೋಕ, ಶಿವಲೋಕ ಶಿವಾಚಾರ. ಭಕ್ತನಂಗಣವೇ ವಾರಿಣಾಸಿ. ಕಾಯಕವೇ ಕೈಲಾಸ. ಭಕ್ತ

ನಿದ್ದ ಠಾವೇ ದೇವಲೋಕ. ಸಂಸಾರಕ್ಕೆ ಮಿಥ್ಯ ಎಂದು ವೀರಶೈವನು ಹೇಳುವದಿಲ್ಲ. ಈ ಪ್ರಪಂಚ (ಲೋಕ) ಶಿವಪ್ರಪಂಚವನ್ನಾಗಿ ಮಾಡುವದೇ ವೀರಶೈವನ ಕರ್ತವ್ಯ. ಮುಕ್ತಿಯನ್ನು ಕೂಡ ಅವನು ಬಯಸುವದಿಲ್ಲ.

(೧೫) ವೀರಶೈವ ಧರ್ಮವು ಬೇಕಾದಷ್ಟು ಬೇಕಾದಂತೆ ಗಳಿಸಿ ಐಷ ಆರಾಮುದಲ್ಲಿರಬೇಕೆಂದು ಹೇಳುವದಿಲ್ಲ. ಅದರಲ್ಲಿ ತನ್ನ ಉದರಂಭರಣಕ್ಕೆ ಸಾಲುವಷ್ಟು ಇಟ್ಟುಕೊಂಡು ಉಳಿದುದನ್ನು ಸಮಾಜಸೇವೆಗೆ ದಾಸೋಹ ಭಾವದಿಂದ ಅರ್ಪಿಸುವದೇ ಆಗಿದೆ. ವೀರಶೈವರಲ್ಲಿ ದಾಸೋಹವು ಬಹು ಮಹತ್ವದ್ದಿದೆ. ಅನ್ನ ದಾಸೋಹ, ಜ್ಞಾನ ದಾಸೋಹ, ಧನ ದಾಸೋಹ, ವಿದ್ಯಾದಾಸೋಹವೆಂದು ಅನೇಕ ದಾಸೋಹಗಳಿರುವವು. ಅದಕ್ಕಾಗಿ ಇನ್ನೂ ಅನೇಕ ವೀರಶೈವರ ಮಠಗಳಲ್ಲಿ ಅನ್ನ ವಸ್ತ್ರ ವಿದ್ಯ ಜ್ಞಾನ ಮೊದಲಾದವುಗಳ ದಾಸೋಹ ನಡೆದಿರುವದು. ಇದರಿಂದ ಧನವು ಗಳಿಸಿದಲ್ಲೇ ಸಂಗ್ರಹವಾಗಿ ಉಳಿದು ಸಮಾಜಕ್ಕೆ ಬಡತನ ಬರಬಾರದೆಂದು ಆರ್ಥಿಕ ಸಮತೆಯನ್ನು ಸಾಧಿಸಿದ್ದಾರೆ.

ನಾನು ಆರಂಬವ ಮಾಡುವೆನಯ್ಯ ಗುರುಪೂಜೆಗೆಂದು. ನಾನು ಬೇವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು. ನಾನು ಪರಸೇವೆಯ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು. ನಾನಾವ ಕರ್ಮಂಗಳ ಮಾಡಿದರೂ ಆ ಕರ್ಮದ ಫಲಭೋಗವ ನೀ ಕೊಡುವೆ ಎಂಬುದ ನಾ ಬಲ್ಲೆ. ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ ಮಾಡೆನು. ನಿಮ್ಮ ಸೊಮ್ಮು ನಿಮಗೆ ಸಲಿಸುವೆನು. ನಿಮ್ಮಾಣೆ ಕೂಡಲಸಂಗಮದೇವ.

ತ್ರಿವಿಧ ದಾಸೋಹವಿರುವದು—ತನು ದಾಸೋಹ, ಮನ ದಾಸೋಹ, ಧನ ದಾಸೋಹ ಅಂದರೆ ಸಮಾಜಕ್ಕೆ ತನು ಮನ ಧನ ಕೊಟ್ಟು ದುಡಿ ಎಂದು ಹೇಳುವರು. ಇದಕ್ಕೆಲ್ಲ ಪ್ರಸಾದಿಸ್ಥಲವೆನ್ನುವರು. ಅಂದರೆ ಗಳಿಸಿದ ಗಳಿಕೆಯನ್ನು ಹೆಚ್ಚಾಗಿ ಭೋಗಿಸದೆ ಪ್ರಸಾದರೂಪದಿಂದಲೇ ಭೋಗಿಸಬೇಕೆಂದು ಅದರ ಮರ್ಮ. ಅದಕ್ಕಾಗಿ ಮನೆ ಬಡವಾದರೂ ಮನ ಘನಸಂಪನ್ನವಾಗಿರಬೇಕೆಂದು ಹೇಳಿದ್ದಾರೆ.

ಆದರೆ ವೈದಿಕಧರ್ಮದಲ್ಲಿ ಇದೆಲ್ಲಕ್ಕೂ ವಿರೋಧ ವ್ಯತ್ಯಾಸವೇ ಇರುವದು. ಬೇಕಾದಂತೆ ಬೇಕಾದಷ್ಟು ಗಳಸಿ ಬೇಕಾದಷ್ಟು ಭೋಗಿಸಲಿಕ್ಕೆ ಮನುವಿನ ಕಾಯ್ದೆಯಿಂದಲೇ ವಿಧಿಸಲಾಗಿದೆ.

(೧೬) ವೀರಶೈವರಿಗೆ ಧಾರ್ಮಿಕ ಸಮಾನತೆ ಹಾಗೂ ಸ್ವಾತಂತ್ರ್ಯತೆ ಇರುವದು. ಎಲ್ಲರಿಗೂ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳು ಸರಿ ಸಮಾನವಾಗಿಯೇ ಇರುವವು. ಸಗಲ ಉದ್ಯೋಗಗಳು ಒಂದೇ ಜಾತಿ ಇಲ್ಲ. ಕುಲವಿಲ್ಲ. ಶಿವಭಕ್ತರೆಲ್ಲ ಒಂದೇ ಎಂದ ಮೇಲೆ ಧಾರ್ಮಿಕ ಸಮಾನತೆಗೆ ಎಂಥ ಅವಕಾಶವಿರುವದು ವಿಚಾರಿಸಿರಿ. ಯೋಗ್ಯತೆ, ತ್ಯಾಗ, ವೈರಾಗ್ಯ, ಜ್ಞಾನ, ಬ್ರಹ್ಮಚರ್ಯ ಪಾಲನೆ, ಸೇವೆ, ಸತ್ಯ, ಅಹಿಂಸೆ ಮೊದಲಾದ ಹೆಚ್ಚಿನ ಗುಣಗಳಿಂದಲೇ ಅವನಿಗೆ ಗುರುತ್ವಬರುವದು. ನಮ್ಮಲ್ಲಿ ಈಗಿನ ಗುರುತ್ವದ ಪದ್ಧತಿಯಾಗಲಿ, ಅಯ್ಯಾಚಾರದ ಪದ್ಧತಿಯಾಗಲಿ ಬಂದುದು ವೈದಿಕ ಧರ್ಮದಿಂದ ಬಂದು ಸೇರಿರಬೇಕೆಂದು ಅನಿಸುವದು. ಇಲ್ಲದಿದ್ದರೆ ವೀರಶೈವ ತತ್ವದ ಪ್ರಕಾರ ಈಗ ಗುರುವರ್ಗವೇ ಇರುತ್ತಿರಲಿಲ್ಲ. ಅದು ಯೋಗ್ಯತೆಯು ಮೇಲೆ ಅವಲಂಬಿಸಿರುತ್ತಿತ್ತು. ಇದರಿಂದಲೇ ನಮ್ಮ ತತ್ವ ಸಮಾಜ ಸಿದ್ಧಾಂತಗಳೆಲ್ಲ ಹಾಳಾಗಿ ಐಕ್ಯತೆ ಸಂಘಟನೆಗಳಿಲ್ಲದಾಗಿವೆ.

ಆದರೆ ವೈದಿಕ ಧರ್ಮದಲ್ಲಿ ವರ್ಣಗಳು, ಜಾತಿಗಳು, ಕುಲಗಳು ಇದ್ದುದರಿಂದ ಗುರುತ್ವವು ಒಂದೇ ವರ್ಗಕ್ಕೆ ಬಂದಿದೆ. ಸ್ತ್ರೀಯರೂ, ಶೂದ್ರರೂ ಮೋಕ್ಷಕ್ಕೆ ಅಧಿಕಾರಿಗಳಲ್ಲ. ಬ್ರಾಹ್ಮಣರಿಗೇ ಮೋಕ್ಷ. ಉಳಿದವರೆಲ್ಲ ಸೇವಾಧಾರಿಗಳು. ಕ್ಷತ್ರಿಯರು ಇವರನ್ನು ಸಂರಕ್ಷಿಸುವವರು. ವೈಶ್ಯರು ಇವರಿಗಾಗಿ ವ್ಯಾಪಾರ ಒಕ್ಕಲುತನ ಮಾಡಬೇಕು. ಶೂದ್ರರು ಕೂಲಿ ಸೇವೆ ಮಾಡಬೇಕೆಂದು ವಿಧಿಸಲಾಗಿದೆ. ಅದಕ್ಕೆ ವೈದಿಕ ಧರ್ಮದಲ್ಲಿ ಸಮಾನತೆ ಇಲ್ಲ. ಸ್ವಾತಂತ್ರ್ಯವೂ ಇಲ್ಲ. ಭೇದವು ಎಲ್ಲ ಕಡೆಗೂ ಮನೆಮಾಡಿಕೊಂಡಿರುವದು. ಇದನ್ನು ಕಳೆಯುವದಕ್ಕಾಗಿ ಮಹಾತ್ಮರು ಸದಾ ಯತ್ನಿಸುವರು. ಆದರೂ ಸುಧಾರಣೆ ಇಲ್ಲ.

(೧೮) ವೀರಶೈವರಲ್ಲಿ ಸಾಮಾಜಿಕ ಸಮಾನತೆ ಇರುವದು. ಸಾರ್ವಜನಿಕ ಕೆಲಸಗಳಲ್ಲಿ ಎಲ್ಲರಿಗೂ ಅಷ್ಟೇ ಹಕ್ಕುಬಾಧ್ಯತೆಗಳಿರುವವು. ಅದಕ್ಕಂತೆ ಶಿವಾನುಭವ ಮಂಟಪದಲ್ಲಿ ಎಲ್ಲ ಜಾತಿಯ ಶರಣರೂ ಸರಿಸಮಾನ ಸ್ಥಾನಗಳಲ್ಲಿ ಕುಳಿತೇ ಶಿವಾನುಭವ ಚರ್ಚೆಯಲ್ಲಿ ಭಾಗವಹಿಸಿ ವಾಸಿಸುತ್ತಿದ್ದರು. ಅಲ್ಲದೆ ವಚನಗಳನ್ನೂ ಸಹ ರಚಿಸಿದ್ದಾರೆ. ಅವರೆಲ್ಲರೂ ಶರಣಸ್ಥಲವನ್ನು ಹತ್ತಿ ಎಲ್ಲರೂ ಸಮಭಾವದಿಂದಲೇ ಇದ್ದರು. ಆದರೆ ವೈದಿಕ ಧರ್ಮದಲ್ಲಿ ಇಂಥ ಅನುಭವಮಂಟಪಗಳಿರಲಿಲ್ಲ. ಬ್ರಾಹ್ಮಣರೇ ಶಾಸ್ತ್ರ ವೇದಾಂತ ಓದ

ಲಿಕ್ಕೆ ಅಧಿಕಾರಿಗಳು, ಉಳಿದವರು ಓದಕೂಡದು, ಮಂತ್ರ ಅನ್ಯರಿಗೆ ಹೇಳ ಕೂಡದು, ವಿದ್ಯವನ್ನು ಉಳಿದವರು ಕಲಿಯುತ್ತಿರಲಿಲ್ಲ. ಭೂಲೋಕದ ದೇವರೆಂದರೇನೆ ಬ್ರಾಹ್ಮಣರು, ಅದಕ್ಕಾಗಿ ಭೂಸುರರೆಂದು ಹೆಸರು ಬಂದಿದೆ. ಅದರಂತೆ ಅಯ್ಯಗಳಿಗೂ ಕೂಡ ಭೂಲೋಕದ ರುದ್ರರೆಂದು ಹೇಳುವರು. ಇದಾದರೂ ವೈದಿಕ ಧರ್ಮದಿಂದ ಬಂದಂತೆ ತೋರುವದು. ಈ ವೈದಿಕ ಧರ್ಮದಿಂದ ಕಡ ತಂದವುಗಳನ್ನು ಬಿಡುವದು ಒಳಿತು. ವೀರಶೈವರಲ್ಲಿ ಕೆಲವರು ಮಡಿ ಮೈಲಿಗೆ ಎಂಬು ಬಹುವಾಗಿ ಪಾಲಿಸುವರು ಕೆಲವರು ಹೋಮಹವನಗಳನ್ನು ಸಹ ಮಾಡುವರು ಅಲ್ಲದೆ ಗುರುತ್ವದ ಗುತ್ತಿಗೆಯೂ ಕೂಡ ಇರುವದು. ಇವೆಲ್ಲವುಗಳನ್ನು ನಮ್ಮವರು ಎಷ್ಟು ಜಾಗ್ರತೆ ಬಿಡು ವರೋ ಅಷ್ಟು ಜಾಗ್ರತೆಯಾಗಿ ವೀರಶೈವವು ಮುಂದುವರಿದು ವಿಶ್ವಧರ್ಮ ವಾಗುವದು. ಬರೇ ಬಾಯಿಯಿಂದ ವೀರಶೈವ ತತ್ವಗಳು ವಿಶಾಲವಾಗಿವೆ. ಅವೆಲ್ಲ ವಿಶ್ವಧರ್ಮವಾಗಲಿಕ್ಕೆ ಬಹಳೇ ಯೋಗ್ಯವಾಗಿವೆ ಎಂದ ಮಾತ್ರಕ್ಕೆ ಕೆಲಸವಾಗದು. ಅದರಂತೆ ಹಿರಿಯರು ಸ್ವಾಮಿಗಳು ನಡೆದು ಪ್ರಚಾರ ಮಾಡಿ ದರೆ ಒಳಿತಾಗುವದು ಬರೇ ಬಾಯಿ ಮಾತುಗಳಿಂದ ಏನೂ ಪ್ರಯೋಜ ನವಿಲ್ಲ.

ವೈದಿಕ ಧರ್ಮದ ಬೋಧೆಗಳಿಗಾಗಿ, ಹಿಂಸೆಗಾಗಿ, ಮೇಲು ಕೀಳೆಂಬ ತ್ರಾಸಿಗಾಗಿ ಕ್ಷತ್ರಿಯ ಅರಸರಲ್ಲಿ ಜನಿಸಿದ ಗೌತಮಬುದ್ಧನು ಹೊಸಧರ್ಮ ವನ್ನೇ ಸ್ಥಾಪಿಸಿದನು. ಮುಂದೆ ಆ ತ್ರಾಸು ಪುನಃ ಆಗಹತ್ತಲು ಬ್ರಾಹ್ಮಣ ರಲ್ಲಿ ಬಸವೇಶ್ವರ ಮಹಾತ್ಮನು ಜನಿಸಿ ಮೇಲೆ ವಿವರಿಸಿದ ವೀರಶೈವ ತತ್ವ ಗಳನ್ನು ಬೆಳಿಸಿದನು. ಅವನು ಸಣ್ಣ ಹುಡುಗನಿದ್ದಾಗ ವೈದಿಕ ಧರ್ಮಕ್ಕೆ ವಿರೋಧ ಮಾಡಹತ್ತಿದನು. ೮ ವರ್ಷದವನಾದಾಗ ಉಪನಯನವನ್ನೇ ತಿರ ಸ್ಕರಿಸಿ ಮನೆಬಿಟ್ಟು ಕೂಡಲಸಂಗಮಕ್ಕೆ ಬಂದು ವೀರಶೈವ ದೀಕ್ಷೆಯನ್ನು ಪಡೆದು ಬ್ರಾಹ್ಮಣ ಧರ್ಮವನ್ನೇ ತೊರೆದದ್ದು ಏನು ತೋರಿಸುವದು ವಾಚ ಕರೇ ಊಹಿಸಿರಿ. ಪರಶಿವನ ಇಚ್ಛೆಯಂತೆ ಇದೆಲ್ಲ ನಂದಿ ಅವತಾರ ದ್ವಿತಿಯ ಶಂಭುವೆನಿಸಿದ ಬಸವೇಶ್ವರರು ಹಾಳಾದ ವೀರಶೈವ ಮತವನ್ನು ಪುನಃ ಉದ್ಧಾರ ಮಾಡಿದ್ದು ನೋಡಿದರೆ ಪರಮಾತ್ಮನ ಪೂರ್ವ ಯೋಚನೆಯಂತೆ ಇವೆಲ್ಲ ಕೆಲಸಗಳು ನಡೆದವೆಂದು ಸಕಲರಿಗೂ ವಿಚಾರ ಹೊಳೆಯದೆ ಇರ ಲಾರದು. ಸಣ್ಣ ಬಾಲಕನಲ್ಲಿ ಈ ಪ್ರಕಾರದ ಬುದ್ಧಿ ಭಾವನೆಗಳು ಹೇಗೆ ಬಂದವು ? ಇದಕ್ಕೆ ಪ್ರೇರಕರಾರು ? ಇದೇನು ತತ್ವಜ್ಞಾನಗಳನ್ನೆಲ್ಲ ತಿಳಿದ

ಬಳಿಕ ಬುದ್ಧನಂತೆ ಬೇರೆ ತತ್ವಗಳು ಬಂದವುಗಳೂ ಅಲ್ಲ. ಜನಿಸುವದ ಕ್ಕಿಂತ ಪೂರ್ವದಲ್ಲಿ ಇದರ ಯೋಜನೆ ನಡೆದಿತ್ತೆಂದು ಅನಿಸುವದು. ಅದ ರಂತೆ ಅವನು ಜನನವಾದ ಮೇಲೆ ಸಹ ಬ್ರಾಹ್ಮಣತ್ವಕ್ಕೆ ವಿರೋಧವನ್ನೇ ಚಿಕ್ಕವನಿದ್ದಾಗಲೇ ಕೂಸು ಇರುವಾಗಲೇ ಮಾಡಹತ್ತಿದ್ದು ವಿಚಾರಶೀಲರಿಗೆ ಹೊಳೆಯುವದು. ಪರಮಾತ್ಮನು ಈ ವೈದಿಕ ಧರ್ಮದ ಈ ಕಟ್ಟುನಿಯಮುಗಳಿಗೆ ಅವುಗಳನ್ನೆಲ್ಲ ತೊರೆದು ಹಾಕಲೋಸುಗ ಸಮತೆಯ ವೀರಶೈವ ಧರ್ಮದ ಉದ್ಧಾರವನ್ನು ಬಸವೇಶ್ವರನ ಅವತಾರಲಿಂಗ ಮಾಡಿಸಿದ್ದು ಒಳ್ಳೇ ನಂಬ ಲರ್ಹವಾದ ನಿಜಸಂಗತಿ ಎಂದು ಹೇಳಬಹುದು. ಅನೇಕರು ವಯಸ್ಸಾದ ಬಳಿಕ ಎಲ್ಲ ತತ್ವಗಳ ಅಭ್ಯಾಸವನ್ನು ಮಾಡಿ ಯೋಗ್ಯ ಕಂಡದ್ದಕ್ಕೆ ಕೈಹಾಕುವ ರೂಢಿಯೆರುವದು. ಆದರೆ ಬಸವೇಶ್ವರನು ಇಂಥ ರೂಢಿಗಳಿಗೆ ಒಳಗಾಗದೆ ಪರಮಾತ್ಮನ ಯೋಜನೆಯಂತೆ ಅವತಾರತಾಳಿ ಕಾರ್ಯಮಾಡಿದನೆಂದು ಹೇಳಲಿಕ್ಕೆ ಏನೂ ಅಡ್ಡಿ ಇಲ್ಲ. ಇವರಿಗೆ ೩೬ ವರ್ಷ ಆಯುಷ್ಯ ಎಂಟು ವರ್ಷ ಮನೆಯಲ್ಲಿ ಬ್ರಾಹ್ಮಣ್ಯದ ವಿರುದ್ಧ ಸದಾತಂಟೆ ಮಾಡುವದರಲ್ಲಿ ಹೋಯಿತು. ೧೬ ವರ್ಷ ಸಾಧನ ಮಾಡುವದರಲ್ಲಿ ಕಳೆಯಿತು. ೩ ವರ್ಷ ಪ್ರವಾಸದಲ್ಲಿ ಕಳೆಯಿತು. ಉಳಿದ ೯ ವರ್ಷಗಳನ್ನು ಧರ್ಮದ ಉದ್ಧಾರದಲ್ಲಿ ರಾಜಕಾರಣದಲ್ಲಿ ಮಂತ್ರಿಕರಣಿಕ ಮೊದಲಾದವುಗಳಲ್ಲಿ ಕಲ್ಯಾಣದಲ್ಲಿ ಕಳೆದ ದ್ದನ್ನು ಧರ್ಮಕ್ರಾಂತಿಗಾಗಿ ಆರೇಳು ವರ್ಷ ಸಿಕ್ಕಂತೆ ತೋರುವದು. ಇಷ್ಟು ಅಲ್ಪಕಾಲದಲ್ಲಿ ಇಂಥ ಅದ್ಭುತ ಸುಧಾರಣೆಯನ್ನು ದೇಶದ ತುಂಬ ೮೦೦ ವರ್ಷ ಗಳ ಹಿಂದೆ ಮಾಡಿದ್ದನ್ನು ವಿಚಾರಿಸಿದರೆ ಪರಶಿವನ ಪೂರ್ವ ಯೋಜನೆ ಯಂತೆ ಇದೆಲ್ಲ ನಡೆಯಿತಲ್ಲದೆ ಬೇರೇ ಇಲ್ಲ. ಅದಕ್ಕೆ ವೀರಶೈವವು ಸಮ ಭಾವದ ಸಮತೆಯ ಧರ್ಮವಾಗಿದೆ. ಇದು ವಿಶ್ವಧರ್ಮವಾಗಲಿಕ್ಕೆ ಏನೂ ಅಡ್ಡಿ ಇಲ್ಲ. ಎಲ್ಲ ಮಾನವ ಕೋಟಿಗೆ ಒಗ್ಗುವಂಥ ತತ್ವಗಳು ಇದರಲ್ಲಿ ಅಡಕವಾಗಿವೆ. ಇದನ್ನು ಒಳ್ಳೇ ರೀತಿಯಿಂದ ಪ್ರಚಾರ ಮಾಡಿದರೆ ಜಗತ್ತೇ ಈ ವಿಶ್ವಧರ್ಮದಂತೆ ನಡೆಯಲು ಹತ್ತುವದೆಂದು ಅನಿಸುವದು.

# ಎಂ. ಎಲ್. ನಾಗಣ್ಣನವರಿಗೆ ಎಚ್ಚರಿಕೆ.

( ಬರೆದವರುಃ— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ. ( ಇಂಡಿ )

ವೀರಶೈವವು ಶಕ್ತಿವಿಶಿಷ್ಟಾದ್ವೈತವೇ ಹೌದು! ಹೌದು! ಅಷ್ಟೇ ಏಕೆ? ಜಗತ್ತಿನ ಯಾವತ್ತೂ ಧರ್ಮಗಳೂ ಕೂಡ ನಿಜವಾಗಿ ಶಕ್ತಿವಿಶಿಷ್ಟಾದ್ವೈತಗಳೇ ಆಗಿರುವವೆಂದು ಶಿವಾನುಭವದಲ್ಲಿ ವಿವರಿಸಲಾಗಿದೆ. ಆದರೆ ವೀರಶೈವರಾಗಿ ಹುಟ್ಟಿ ನೀವೊಬ್ಬರೇ ಅದ್ವೈತವೆಂದು ಹುಯ್ಯಲ ಎಬ್ಬಿಸುವ ಕಾರಣವೇನು ? ಉಳಿದವರಿಗೆ ತಮ್ಮ ಇಷ್ಟ ಬಂದಂತೆ ನಡೆಯಲಿಕ್ಕೆ ಬರೆಯಲಿಕ್ಕೆ ಸ್ವಾತಂತ್ರ್ಯವಿರುವದು. ಅದ್ವೈತ ಬೇಕಾದರೆ ಅತ್ತ ಕಡೆಗೆ ಹೋಗಲು ನಿಮಗೆ ಯಾರೂ ಅಡ್ಡಿ ಮಾಡಿಲ್ಲವಷ್ಟೇ ? ಉಳಿದವರನ್ನೆಲ್ಲ ನೀವೊಬ್ಬರು ಮಾತ್ರ ಅದ್ವೈತದಂತೆ ನಡಿಯುವಂತೆ ಮಾಡುವ ಹೊಣೆಯನ್ನು ಹೊತ್ತಂತೆ ತೋರುವದು. ಡಾ. ನಂದೀಮಠರವರ ಆಶ್ರಯ ಪಡೆದರೆ ತಾವು ಉಳಿಯಬಹುದೆಂದು ತಿಳಿದು ಪುನಃ ಪುನಃ ಅವರ ಹೆಸರನ್ನು ತಾವು ಎತ್ತುವಂತೆ ತೋರುವದು. ಮೊದಲಿನ ಅವರ ಅದ್ವೈತ ವಿಚಾರವು ಈಗ ಹೋಗಿದೆ. ಅವರಲ್ಲಿ ಈಗ ಶಕ್ತಿವಿಶಿಷ್ಟಾದ್ವೈತವೇ ಬಂದಿರುವದೆಂದು ಪಾಪ! ನಿಮಗೆ ಇನ್ನೂ ಗೊತ್ತಾದಂತೆ ತೋರುವದಿಲ್ಲ. ಅಂತು ನಿಮ್ಮ ಕೈಯ್ಯನ್ನು ಎಲ್ಲರೂ ಬಿಟ್ಟಂತೆ ಆಗಿದೆ. ಹೀಗಾಗಿ ನೀವು ಮುಳುಗುವರಲ್ಲಾ! ಎಂದು ಮಾತ್ರ ನಮಗೆ ಕರುಣ ಬರುವದು. ವಯಸ್ಸು ಆಗಿದೆ. ಮುಳುಗಿದರೇನು ನಷ್ಟವಿಲ್ಲೆಂದು ಸಮಾಧಾನ ಹಚ್ಚಿಕೊಳ್ಳಬೇಕಾಗಿದೆ.

ಸಾಮಾನ್ಯವಾಗಿ ಇತ್ತಿತ್ತಲಾಗಿ ನಿಮ್ಮಂಥವರಿಂದಲೇ ವೀರಶೈವರಲ್ಲಿ ಪಂಚಾಚಾರ್ಯರ ಬಣ, ಬಸವನ ಬಣಗಳೆಂದೂ, ಪಟ್ಟದವರ ಬಣ, ವಿರಕ್ತರ ಬಣ ಎಂದೂ ಎರಡು ಬಣಗಳು ಕೆಲವು ಕಾಲದ ಹಿಂದೆ ಆಗಿವೆ. ಅವುಗಳು ಈಗ ಸಾವಧಾನವಾಗಿ ಮಾಯವಾಗುತ್ತಿರುವದು ಒಂದು ಶುಭಸೂಚನೆಯೇ ಸರಿ. ಪಂಚಾಚಾರ್ಯರ ಬಣದಲ್ಲಿ ಮುಖಂಡರಾದ ಪಂಡಿತ ಕಾಶೀನಾಥ ಶಾಸ್ತ್ರಿಗಳು ಕೆಲವು ಗ್ರಂಥಗಳನ್ನು ಬರೆದು ವೀರಶೈವವು ಶಕ್ತಿವಿಶಿ

ಷ್ಟಾದ್ವೈತವೆಂದು ಸಿದ್ಧ ಮಾಡಿದ್ದಾರೆ. ಅದರಂತೆ ಸಿದ್ಧಾಂತಶಿಖಾಮಣಿಯು ಲ್ಲಿಯೂ ಕಾಣಿಸಿದ್ದಾರೆ. ಬಸವನ ಬಣದವರಂತೂ ಶಕ್ತಿವಿಶಿಷ್ಟಾದ್ವೈತಿಗ ಳೆಂಬ ಮಾತಿನಲ್ಲಿ ಸಂಶಯುವೇ ಇಲ್ಲ. ಈ ಎರಡು ಬಣಗಳನ್ನು ಬಿಟ್ಟು ನೀವು ಯಾವ ಬಣಕ್ಕೆ ಸೇರಿರುವಿರೆಂಬುದು ತಿಳಿಯದಾಗಿದೆ. ನೀವು ಈ ಎರಡೂ ಬಣಗಳನ್ನು ಬಿಟ್ಟು ಮೂರನೇ ಬಣದವರೆಂದರೆ ವೀರಶೈವರಲ್ಲದ ಶ್ರೀ ಶಂಕರಾಚಾರ್ಯರ ಬಣದವರೆಂದು ತೋರುವದು ಶಂಕರಾಚಾರ್ಯರು ವೀರಶೈವರಿಗೆ ಏನೂ ಸಂಬಂಧವಿಲ್ಲ. ಅದರಂತೆ ವೇದ ಉಪನಿಷತ್ತುಗಳೂ ಕೂಡ ನಮ್ಮ ಧರ್ಮಗ್ರಂಥಗಳಲ್ಲ. ನಮ್ಮ ಧರ್ಮಗ್ರಂಥಗಳು ಆಗಮಗಳು, ವಚನಗಳು, ಸಿದ್ಧಾಂತ ಶಿಖಾಮಣಿ ಮೊದಲಾದವುಗಳೇ ಆಗಿರುವವು. ಉಳಿದ ವೇದ ಉಪನಿಷತ್ತುಗಳನ್ನು ಓದಲು ಅಡ್ಡಿ ಇಲ್ಲ. ನೀವು ಶೈವರಾದ ಶಂಕ ರಾಚಾರ್ಯರ ಚಿತ್ರವನ್ನು ಅನೇಕ ಸಲ ನಿಮ್ಮ ಪ್ರಕಟನೆಯಲ್ಲಿ ಹಾಕಿದ್ದೀರಿ. ಹೀಗಾದರೆ ನೀವು ಶೈವ ಸಾಂಪ್ರದಾಯದವರೆಂದು ನಾವು ಏಕೆ ತಿಳಿಯ ಬಾರದು ?

ವೀರಶೈವ ಸಿದ್ಧಾಂತವು ಶುದ್ಧಾದ್ವೈತವೆಂದು ಸಿದ್ಧ ಮಾಡುವ ನಿಮ್ಮ ರೀತಿಯು ವಿಚಿತ್ರವಾದದ್ದು. ಪ್ರಶ್ನೆ ಕೇಳುವವರು ನೀವೆ. ಅದಕ್ಕೆ ಉತ್ತರ ಹೇಳುವವರೂ ನೀವೆ. ಶಂಕಾ ತಕ್ಕೊಳ್ಳುವವರೂ ನೀವೆ. ಅದಕ್ಕೆ ಸಮಾ ಧಾನ ಹೇಳುವವರೂ ನೀವೆ. ಇದರಿಂದ ನಮ್ಮ ಬೆನ್ನನ್ನು ನೀವೇ ಛಪ್ಪರಿಸಿ ಕೊಳ್ಳುವಂತೆ ಆಗುವದೇ ಹೊರತು ನಿಮ್ಮ ಕೃತಿಗೆ ಅನ್ಯರಾರೂ ಶಬ್ಬಾಸ್ ಕೊಟ್ಟಂತೆ ಕಾಣುವದಿಲ್ಲ.

ವೈದಿಕ ಮತವು ಈಶ್ವರ ಜೀವ ಪ್ರಪಂಚವನ್ನು ಒಪ್ಪಿದರೆ ವೀರಶೈ ವರು ಪರಶಿವ, ಪರಶಕ್ತಿ, ಪುರುಷ ಪ್ರಕೃತಿಗಳನ್ನು ಒಪ್ಪುತ್ತಾರೆ. "ವೇದಕ್ಕೆ ಅನುಸಾರವಾಗಿರುವ ಆಗಮುಗಳೇ ಪ್ರಮಾಣವೆಂದು" ಸಿದ್ಧಾಂತ ಶಿಖಾಮ ಣಿಯ ೫ನೇ ಪರಿಚ್ಛೇದದ ೧೨-೧೩ನೇ ಶ್ಲೋಕುಗಳನ್ನು ಉದಹರಿಸಿದ್ದೀರಿ. ಇದರ ಮೇಲಿಂದ ವೇದಗಳು ಮೊದಲು ಆಗಮುಗಳು ಹಿಂದೆ ಬರೆದವುಗ ಳೆಂದು ಹೇಳಿದಂತೆ ಆಗುವದು. ಇದಂತೂ ಶುದ್ಧ ತಪ್ಪು ತಿಳುವಳಿಕೆ. ವೇದ ಗಳು ಆರ್ಯರಿಂದ ಬರೆದವುಗಳು. ಆಗಮುಗಳು ದ್ರಾವಿಡರಿಂದ ಬರೆದವು ಗಳು. ದ್ರಾವಿಡರೇ ಭಾರತದ ಮೂಲನಿವಾಸಿಗಳು. ಇಗ ಒಳ್ಳೇ ಶ್ರೇಷ್ಠತರ ವಾದ ಶೈವ ವೀರಶೈವ ಸಂಸ್ಕೃತಿಯು ಭಾರತದಲ್ಲಿ ನೆಲಿಸಿತ್ತು. ಅತಿ ಮೊದ

ಲಿನ ಗ್ರಂಥಗಳೇ ಆಗಮಗಳು. ಹಿಂದಿನಿಂದ ಆರ್ಯರು ಏಸಿಯಾದ ವಾಯವ್ಯ ದಿಕ್ಕಿನಿಂದ ಹಿಂದುಸ್ಥಾನದಲ್ಲಿ ಬಂದು ನೆಲಿಸಿದರು. ಆಗ ಇವರು ವೇದ ಗಳನ್ನು ಬರೆದು ವೈದಿಕ ಧರ್ಮವನ್ನು ಸ್ಥಾಪಿಸಿದರು, ಈಗೀಗ ಆಗಮ ಗಳು ಅತಿ ಪುರಾತನವಾದವುಗಳೆಂದು ಕೆಲವರು ಕಂಡುಹಿಡಿದಿದ್ದಾರೆ. ವೇದ ಗಳಲ್ಲಿ ನಮ್ಮ ಲಿಂಗಪೂಜೆಯನ್ನು ಶಶ್ನಪೂಜೆಯೆಂದು ಟೀಕೆ ಮಾಡಿದ್ದು ನೋಡಿದರೆ ವೇದಗಳಲ್ಲಿ ಲಿಂಗಪೂಜೆಗೆ ವಿರೋಧವಿತ್ತೆಂದು ಸಹಜ ತೋರು ವದು. ಈ ಧರ್ಮವನ್ನು ಹತ್ತಿಕ್ಕುವ ಸಲುವಾಗಿ ಹೀಗೆಲ್ಲ ಅವರು ಮಾಡಿ ದ್ದಾರೆಂದು ಅನಿಸುವದು. ಆದರೂ ನೀವು—"ವೇದದ ಅನುಸಾರವಾಗಿರುವ ಆಗಮಗಳೆಂದು'' ಹೇಳಿ ನಮ್ಮನ್ನು ನೀವು ಕೀಳರನ್ನಾಗಿ ಮಾಡಲು ಸದಾ ಯತ್ನಿಸಿದಂತೆ ಆಗುವದು. ಅಲ್ಲದೆ ಮೊದಲೇ ಅಂದರೆ ಶ್ರುತಿಯೇ ಪರಮ ಪ್ರಮಾಣವೆಂದು ಸಿದ್ಧವಾಯಿತು ಎಂದು ಬರೆದಿದ್ದೀರಿ, ಆಗಮಗಳು, ವಚನ ಗಳು, ಸಿದ್ಧಾಂತಶಿಖಾಮಣಿ ಮೊದಲಾದವುಗಳು ನಮ್ಮ ಗ್ರಂಥಗಳೇ ಅಲ್ಲೆಂದು ಒಂದು ರೀತಿಯಿಂದ ಹೇಳಿದಂತೆ ಆಗಿರುವದು. ಮೊದಲು ವೇದಗಳು ನಮ್ಮ ಧರ್ಮಗ್ರಂಥಗಳಲ್ಲೆಂದು ಅಳಿದುಕೊಂಡು ಮುಂದೆ ಬರೆಯಲಿಕ್ಕೆ ಶುರುಮಾ ಡಬೇಕು.

ಪರಬ್ರಹ್ಮ ವಸ್ತುವೊಂದೇ ಸತ್ಯ (ಉದಯ ನಾಶಗಳಿಲ್ಲದೆ ಯಾವಾ ಗಲೂ ಇರತಕ್ಕದ್ದು.) ಪ್ರಪಂಚವು ಮಿಥ್ಯ. (ನಿಜವಾಗಿಲ್ಲದೆ ಇರುವಹಾಗೆ ತೋರತಕ್ಕದ್ದು.) ವೀರಶೈವರಿಗೆ ಪರಬ್ರಹ್ಮವೆಂಬ ಶಬ್ದವೇ ಸಂಬಂಧವಿಲ್ಲ. ಪರಶಿವ ಎಂದು ನಮ್ಮ ಶಬ್ದವಾಗಿದೆ ನೀವು ಯಾವುದನ್ನೂ ವೀರಶೈವ ಪರ ವಾಗಿ ಬರೆಯುತ್ತಿಲ್ಲ. ಹೇಳುತ್ತಿಲ್ಲ. ಈ ಪ್ರಪಂಚವು ಎಂದು ಯಾವಾಗ ಪರಮಾತ್ಮನ ಸಂಕಲ್ಪಮಾತ್ರದಿಂದ ಪರಶಕ್ತಿಯು ರೂಪುಗೊಂಡು ಪ್ರಪಂಚ ವಾದಳೆಂದು ಹೇಳಲಿಕ್ಕೆ ಯಾರಿಗೂ ಶಕ್ಯವಿಲ್ಲ. ಎಷ್ಟೋ ಕೋಟಿ ವರ್ಷ ಗಳಿಂದ ಈ ಪ್ರಪಂಚಕ್ಕೆ ಅಸ್ತಿತ್ವ ಇರುತ್ತದೆ. ಅದರ ಕಾರ್ಯಗಳು ಹೀಗೆ ಅವ್ಯಾಹತವಾಗಿ ಸಾಗಿವೆ. ಮುಂದೆಯೂ ಹಾಗೇ ಸಾಗುವದು. ಅನೇಕ ವರ್ಷ ಉಂಡು, ತಿಂದು, ಬಾಳಿ, ಗಳಿಸಿ, ಹಡೆದು, ಮಡಿದು, ದುಡಿದು, ಇರುತ್ತಿದ್ದರೂ ಇದಕ್ಕೆ ಸುಳ್ಳು ಸುಳ್ಳು ಎಂದು ಸುಳ್ಳಿನ ಧ್ಯಾನ ಮಾಡಿ ಪರಮಾತ್ಮನ ಲೀಲೆಗೆ ಬೈದು ನಿಂದಿಸಿ ಮಹಾ ಅಪರಾಧವನ್ನೇ ಮಾಡು ತ್ತಿರುವಿರಿ. ಮಾಯಾಮಾತ್ರಮಿದು ದ್ವೈತಂ, ಅದ್ವೈತಂ ಪರಮಾರ್ಥಂ

ಎಂದು ಹೇಳುವ ನೀವು ಇಂಥ ಕಾಲದಲ್ಲಿ ಮೈಸೂರ ರಾಜಪಾಲರಿಗೆ ಹರಿ ಜನೋದ್ಧಾರವು ಸಮಂಜಸವಲ್ಲೆಂದು ಅದು ಶಾಸ್ತ್ರೋಕ್ತವಲ್ಲೆಂದು ಬಿನ್ನಪ ತ್ರಿಕೆಯನ್ನೇಕೆ ಕಳಿಸಿದ್ದೀರಿ ? ಇದರ ಮೇಲಿಂದ ನಿಮ್ಮ ಅದ್ವೈತವು ಬಾಯಿ ಬ್ರಹ್ಮವಿದ್ದಂತೆ ತೋರುವದು. ನಿಮ್ಮ ಈ ಬಾಯಿಯು ಅದ್ವೈತವು. ಯಾವ ಮಾಯೆಯಿಂದ ಕಲ್ಪಿಸಲ್ಪಟ್ಟಿದೆ ತಿಳಿಯದಾಗಿದೆ. ನಿಮ್ಮ ಹೇಳಿಕೆಯ ಪ್ರಕಾರ ಮಾಯೆ ಯೆಂಬವಳಿದ್ದು ಆಕೆ ಇದೆಲ್ಲ ಆಟ ನಡಿಸಿದ್ದಾಳೆಂದು ಹೇಳಿ ದಂತೆ ಆಗುವದಿಲ್ಲವೇ ?

ಅನಾದಿ ನಿಧನಾಚ್ಛಾಂತಾಚ್ಛಿ ವಾತ್ಪರಮ ಕಾರಣಾತ್ ।
ಇಚ್ಛಾಶಕ್ತಿರ್ವಿನಿಷ್ಕ್ರಾಂತಾ ತತೋಜ್ಞಾನಂ ತತಃಕ್ರಿಯಾ।
ತತ್ರೋತ್ಪನ್ನಾನಿ ಭೂತಾನಿ ಭುವನಾನಿ ಚತುರ್ದಶ ॥

ಎಂಬ ಆಗಮೋಕ್ತಿಯಂತೆ ಎಂದು ಹೇಳಿ ಇದರ ಅರ್ಥವನ್ನು ಸಹ ಮಾಡಲಿಕ್ಕೆ ಬಂದಿಲ್ಲ. ನೀವು ಸಂಸ್ಕೃತ ಕಲಿತಂತೆ ತೋರುವದಿಲ್ಲ. ಬೇಕಾ ದಂಥ ಪದ್ಯಗಳಿಗೆ ನಿಮ್ಮ ತಲೆಯಲ್ಲಿರುವ ಅದ್ವೈತದ ಅರ್ಥವನ್ನೇ ಮಾಡು ವಂತೆ ತೋರುವದು. ನಾವು ಸಂಸ್ಕೃತ ಕಲಿಯದಿದ್ದರೂ ಇದರ ಅರ್ಥವು ನೀವು ಮಾಡಿದಂತೆ ಇಲ್ಲವೆಂದು ನಮಗೆ ಅನಿಸುವದು. ಇದರಲ್ಲಿ ಪರಬ್ರಹ್ಮ ವೆಂಬ ಶಬ್ದವೇ ಇಲ್ಲ. ಅಹಂ ಇದಂ ಎಂಬ ಶಬ್ದಗಳೇ ಇದರಲ್ಲಿಲ್ಲ. ಅಹಮಸ್ಮಿ, ಅಹಂ ಬಹುಸ್ಯಾಂ ಪ್ರಜಾಯೇಯ ಎಂಬ ಶಬ್ದಗಳು ಇದರಲ್ಲಿ ಇಲ್ಲದೆ ಅವುಗಳನ್ನು ಸೇರಿಸಿ ಅರ್ಥ ಬರೆದಿದ್ದೀರಿ. ಹೀಗೆ ಸಂಸ್ಕೃತ ಪದ್ಯ ಗಳಿಗೆ ಬೇಕಾದಂತೆ ಅರ್ಥ ಬರೆದರೆ, ಕುರುಬರಿದ್ದ ಊರಿಗೆ ಕಲಿಯಲಾರದ ಲಫಂಗನು ಹೊಟ್ಟೆಗಾಗಿ ಕೀರ್ತನ ಹೇಳಲಿಕ್ಕೆ ಹೋದಂತೆ ಆಗುವದು. " ರಂ, ರುಂ, ಕಂ, ಕುಂ, ಗುಂ, ಗಂ ಎಂದರೆ ಹೀಗೆ ಒಂದು ಊರಲ್ಲಿ ಒಬ್ಬ ಕುರುಬನಿದ್ದನು. " ಎಂದು ಹೇಳುವಂತೆ ನಿಮ್ಮ ಸಂಸ್ಕೃತ ಪದ್ಯಗಳ ಅರ್ಥಗಳಿರುವವು. ಇದರ ಗುದುಮುರಿಗೆಗೆ ಬಿದ್ದರೆ ಗಾಳಿಯನ್ನು ಗುದ್ದಿ ಮೈ ನೋಯಿಸಿಕೊಂಡಂತೆ ನಿಮಗೆ ಮಾತ್ರ ದಣಿವೆಯಾಗುವದು. ಗಾಳಿಗೆ ಏನೂ ಆಗುವದಿಲ್ಲೆಂದು ಜ್ಞಾಪಕದಲ್ಲಿ ಇಡಬೇಕು. ಅಲೆಗಳಿಲ್ಲದ ಸಮುದ್ರ ದಲ್ಲಿ ಅಲೆಗಳು ಎಲ್ಲಿಂದ ಬಂದವು ? ಹ್ಯಾಗೆ ಬಂದವು ? ಯಾಕೆ ಬಂದವು? ಇದಕ್ಕೆ ನಿಮ್ಮ ಉತ್ತರವಂತೂ ಯಾವ ಬಿನ್ನಪತ್ರಿಕೆಯಲ್ಲಿಯೂ ಇಲ್ಲ.

ಸುಮ್ಮನಿದ್ದ ಗಿಡವು ಏಕೆ ಅಲುಗಾಡಬೇಕು ? ಹೀಗೆಲ್ಲ ಆಗಬೇಕಾದರೆ ಒಂದು ಶಕ್ತಿ ಬೇಕಲ್ಲವೇ ? ಸಮುದ್ರದಲ್ಲಿ ಅಲೆಗಳಾಗಲಿಕ್ಕೆ ಒಂದು ಶಕ್ತಿಯೇ ಕಾರಣವಾಗಿದೆ. ಅದನ್ನು ಮಾತ್ರ ಮರೆತುಬಿಡುವಿರಿ. ತಾಯಿಯನ್ನೇ ಮರೆತು ಬರೀ ತಂದೆಗೆ ಹುಟ್ಟಿದೆವೆಂದು ಹೇಳಿದಂತೆ ಆಗುವದು.

ಈ ಜಗತ್ತಿನ ಮೇಲೆ ಇರುವದಕ್ಕಿಂತ ಹೆಚ್ಚಾಗಿ ಸಮುದ್ರದಲ್ಲಿಯೇ ಅಸಂಖ್ಯ ಜೀವ ಕೋಟಿಗಳುಂಟು. ಉಪ್ಪುಂಟು. ಪ್ರಪಂಚ ಉಂಟು. ಮುತ್ತುಂಟು. ಮತ್ತು ಏನೇನೋ ಉಂಟು. ಆದರೂ ಅದಕ್ಕೆಲ್ಲ ಸಮುದ್ರ ವೆನ್ನುವರು. ಆದರಂತೆ ಪರಶಿವನಲ್ಲಿ ಒಂಭತ್ತು ತರದ ಶಕ್ತಿಗಳಿದ್ದಾರೆ. ಅವರೇ ನವದುರ್ಗೆಯರು. ಈ ಎಲ್ಲ ಶಕ್ತಿಗಳ ಒಂದೇ ರೂಪಾದ ಪರಶಕ್ತಿಯು ಪರಶಿವನಲ್ಲಿ ಇದ್ದಾಳೆ. ಅವಳೇ ಇದೆಲ್ಲ ಸೃಷ್ಟಿ ಸ್ಥಿತಿ ಲಯಕ್ಕೆ ಕಾರಣಳಾಗಿದ್ದಾಳೆ. ಕಾರಣ ರೂಪನು ಶಿವನಾದರೆ ಕಾರ್ಯ ರೂಪಳು ಆ ಶಕ್ತಿಯೇ ಆಗಿದ್ದಾಳೆ. "ಪರಬ್ರಹ್ಮನಲ್ಲಿ ನಾನ – ಇದು – ಕರ್ತೃ - ಕರ್ಮ – ಕ್ರಿಯಾ ರೂಪ ಭೇದ ವ್ಯತ್ಯಾಸ ಇರುವದಿಲ್ಲ." ಎಂದು ಹೇಳುವವರು ಪುನಃ ಅದೇ ಕ್ಷಣದಲ್ಲಿ ಅದಂ ಅಸ್ಮಿ ಅಹಂ ಬಹುಸ್ಯಾಂ ಪ್ರಜಾಯೇಯ ಅರುಹು ಇಚ್ಛೆಗಳು ಎಲ್ಲಿಂದ ಬಂದವು ? ಯಾರೂ ಇಲ್ಲದ ಮನೆಯೊಳಗಿಂದ ಅನೇಕ ಮಂದಿ ಜನರು ಹೊರಗೆ ಬಂದರೆಂದು ಹೇಳಿದಂಥ ಹುಚ್ಚತನ ಬರುವದು. ಇದ್ದುದರಿಂದ ಇದೇ ಹೊರಗೆ ಕಾಣಿಸುವದು ಹೊರತು ಏನೂ ಇಲ್ಲದುದರಿಂದ ಇದ್ದುದು ಎಂದೂ ಹೊರಗೆ ಬರಲಾರದು. ಮಹಾ ಕಾರಣದಿಂದ ಕಾರಣ ಬಂದಿತು. ಕಾರಣದಿಂದ ಸೂಕ್ಷ್ಮ ಬಂದಿತು. ಸೂಕ್ಷ್ಮದಿಂದ ಈ ಸ್ಥೂಲ ಬಂದಿತು. ಸ್ಥೂಲಕ್ಕಿಂತ ಸೂಕ್ಷ್ಮದಲ್ಲಿ, ಸೂಕ್ಷ್ಮಕ್ಕಿಂತ ಕಾರಣದಲ್ಲಿ, ಕಾರಣಕ್ಕಿಂತ ಮಹಾ ಕಾರಣದಲ್ಲಿ ಶಕ್ತಿ ಹೆಚ್ಚೆಚ್ಚಾಗಿ ಇರುವದೆಂಬ ಅನುಭವವು ವ್ಯವಹಾರದಲ್ಲಿ ಕೂಡ ಅನಿಸುವದು. ಆಣೆಕಲ್ಲಿಗಿಂತ ನೀರಿನ ಶಕ್ತಿ ಹೆಚ್ಚು. ನೀರಿಗಿಂತ ಉಗಿಯಲ್ಲಿ ಶಕ್ತಿ ಹೆಚ್ಚೆಂಬುದು ಕಂಡುಂಡ ಮಾತಾಗಿರುವದು. ಇದರ ಮೇಲಿಂದ ಮಹಾ ಕಾರಣನಾದ ಪರಶಿವನಲ್ಲಿ ಸರ್ವಶಕ್ತಳಿರುವಳೆಂದು ತೋರುವದು. ಹಾಲಿನಲ್ಲಿ ಬೆಣ್ಣೆ ಇದ್ದರೂ ಕೂಡ ಬರೀ ಹಾಲೇ ಎಂದು ಹೇಗೆ ಕರೆಯುವೆರೋ ಆದರಂತೆ ಪರಶಿವನೆಂದು ಕರೆದರೂ ಪರಶಕ್ತಿ ಇದ್ದೇ ಇರುವಳು. ಆ ಹಾಲಿಗೆ ಬೆಣ್ಣೆಯಿಂದ ಯಾವ ಆತಂಕಗಳು ಹೇಗೆ ಇರದೆ ಪೋಷಕವಾಗುವವೋ ಆದರಂತೆ ಪರಶಿವನಲ್ಲಿಯ ಪರಶಕ್ತಿಯು ಆತಂಕವಾಗಿರದೆ ಅವನ ಪರಿಪೂರ್ಣತೆಗೆ ಪೋಷಕವಾಗಿ ಹಾಲಿ

ನಂತೆ ಒಂದೇಯಾಗಿ ತೋರುವದು. ಇದಕ್ಕೆ ನೀವು ಅದ್ವೈತವೆಂದು ಅರ್ಥ ಮಾಡುತ್ತಿರುವಿರಿ. ಇದು ಶುದ್ಧ ತಪ್ಪು. ಹೀಗಿರುವದರಿಂದ ನಾವು ಶಕ್ತಿ ವಿಶಿಷ್ಟಾದ್ವೈತಿಗಳೆಂದು ಹೇಳುನೆವು. ಪರಶಕ್ತಿಯಿಂಮೊಡಗೂಡಿ ಒಂದೇ ಒಂದಾಗಿ ತೋರುವ ಪರಶಿವನೆಂದು ಇದರ ಅರ್ಥವಾಗುವದು.

'ಸಮುದ್ರವೇ ಅಲೆಯಾಗಿ ತೋರಿದರೆ ಆ ಅಲೆಯು ಸಮುದ್ರವೇ ಹೊರತು ಬೇರಿಲ್ಲ ಎಂದು ಹೇಳಿದ್ದೀರಿ ಪರಬ್ರಹ್ಮನೇ ಹೀಗೆ ಪ್ರಪಂಚವಾಗಿ ತೋರಿದನೇ ಹೊರತು ಇದು ಪ್ರಪಂಚವಲ್ಲ. ಆದರೆ ಇದೆಲ್ಲ ಪರಬ್ರಹ್ಮನೆಂದು ನೀವು ಹೇಳಿದರೆ'' ಇದಕ್ಕೆ ಮಿಥ್ಯೆವೆಂದಂತೆ ಹೇಗಾಯಿತು. ತೋರುವದೆಲ್ಲ ಪರಮಾತ್ಮನೆಂದು ಹೇಳಿದಂತೆ ಆಗುವದು ಹೊರತು ಮಿಥ್ಯೆವೆಂದಂತಾಗು ವದಿಲ್ಲ. ಅಲೆಗಳು ಏಳಬೇಕಾದರೆ ಒಂದು ಶಕ್ತಿಬೇಕಲ್ಲವೆ ಅದರಂತೆ ಈ ಪ್ರಪಂಚ ಆಗಬೇಕಾದರೆ ಒಂದು ಪರಶಕ್ತಿಯೇ ಬೇಕು ಎಂದು ಸಿದ್ಧವಾ ಗುವದಿಲ್ಲವೇ? ಆ ಪರಶಿವನ ಪರಶಕ್ತಿಯೇ ಹೀಗೆಲ್ಲ ಬಹುರೂಪಾಗಿ ಪರ ಶಿವನಿಗಾಗಿ ಲೀಲೆ ಮಾಡುವಳೆಂದು ಸಿದ್ಧವಾಗುವದಿಲ್ಲವೇ? 'ಅಲೆಯು ರೂಪ ದಿಂದ ಸತ್ಯವಾಗಿರದೆ ಸಮುದ್ರರೂಪದಿಂದ ಸತ್ಯವಾಗಿದೆ ಎಂದು ಸಿದ್ಧ ಮಾಡಲಿಕ್ಕೆ ಹೊರಟಿದ್ದೀರಿ'' ನಿರಾಕಾರ ಸಮುದ್ರಕ್ಕೆ ಸಾಕಾರ ಅಲೆಯು ರೂಪ ಬರುವದು ಯಾತರಿಂದ? ಒಂದು ಶಕ್ತಿಯಿಂದಲ್ಲವೆ? ಅದರಂತೆ "ಪರಬ್ರಹ್ಮನಲ್ಲಿ ತೋರುವ ಶಕ್ತಿಯು ಶಕ್ತಿರೂಪದಲ್ಲಿ ಸತ್ಯವಾಗಿರದೆ ಪರ ಬ್ರಹ್ಮರೂಪದಿಂದ ಸತ್ಯವಾಗಿದೆ." ಹೀಗಂದರೇನು? ಬಸುರಾಗಿ ಹಡೆಯು ವಾಕಿ ನನ್ನ ಹೆಂಡತಿ ಸತ್ಯವಾದರೂ ಆಕೆಯ ಹೆಸರನ್ನು ಹೇಳದೆ ನನ್ನ ಹೆಸರನ್ನೇ ಹೇಳಕೊಳ್ಳುವೆನೆಂದಂತೆ ಆಗುವದು. ನಿಮ್ಮ ಹೇಳಿಕೆಯಲ್ಲಿ ಪರ ಬ್ರಹ್ಮನಲ್ಲಿ ಶಕ್ತಿ ಇರುವಳೆಂದು ಮೊದಲು ಒಪ್ಪಿಕೊಂಡು ನಿಮ್ಮ ದುರುಳ ಅದ್ವೈತಕ್ಕೆ ದೋಷ ಬರುವದೆಂದು ಶಕ್ತಿ ತೋರಿದರೂ ಸತ್ಯವಾಗಿರದೆ ಪರ ಬ್ರಹ್ಮರೂಪದಿಂದ ಸತ್ಯವಾಗಿದೆ ಎಂದು ಅಪಾರ್ಥ ಅರ್ಥವನ್ನು ಮಾಡುತ್ತ ನಡೆದಿದ್ದೀರಿ.

ಶ್ರೀರಾಮಕೃಷ್ಣರು ಪರಬ್ರಹ್ಮಕ್ಕೆ ತಾಯಿ ಎಂದು ಪೂಜಿಸಿದರು. ಯಾಕಂದರೆ ತಂದೆಯ ಭಾವಕ್ಕಿಂತ ದೇವರಲ್ಲಿ ತಾಯಿ ಭಾವ ಮಕ್ಕಳಿಗೆ ಹೆಚ್ಚು ಪ್ರಿಯಕರ ಸಲಿಗೆಯದು. ಅದಕ್ಕೆ ಪರಬ್ರಹ್ಮ ಒಬ್ಬನೇ ಇರುವನೆಂದು ಹೇಳಹೊರಟ ನೀವು ಅವರು ಸ್ತ್ರೀ ಆಕಾರದ ಮೂರ್ತಿಯನ್ನೇಕೆ ಮಾಡಿ ದರು. ತಂದೆಯಲ್ಲಿ ತಾಯಿಯ ಭಾವ ಮಾಡಿದರೆ ತಂದೆ ಎಂದೂ ತಾಯಿ

ಯಾಗಲಾರ. ಅವನೇನು ಮೊಲೆ ಕುಡಿಸಲಾರ, ಹಡೆಯಲಾರ, ರಾಮಕೃಷ್ಣ ರಿಗೆ ನಿರ್ವಿಕಲ್ಪ ಸಮಾಧಿ ಹೇಳಿದ ಗುರುವಾದ ಶಕ್ತಿವಿರೋಧಿ ತೋತಾ ಪುರಿಗೆ ಪ್ರತಿಯಾಗಿ ಶಕ್ತಿ ಇರುವಿಕೆಯನ್ನು ಸಿದ್ಧಮಾಡಿ ಅವನಲ್ಲಿಯ ಅಜ್ಞಾ ತನವನ್ನು ಹೋಗಲಾಡಿಸಿ ಗುರುವಿಗೆ ಗುರುವಾದ ಕಥೆಯನ್ನಷ್ಟು ಓದಿ ನೋಡಿರಿ. ಅಪೂರ್ಣ ಓದಿಕೊಂಡು, ಅನುಭವ ಪಡೆಯದೆ ಸಾಧನಗೈಯದೆ ತ್ಯಾಗ ಮಾಡದೆ ಬರೆದರೆ ತೀರಲಿಲ್ಲ. ಇಂಥದಕ್ಕೆ ಯಾರೂ ಮುಂಬಾಗು ವದಿಲ್ಲ. ಇದರಂತೆ ಶಂಕರಾಚಾರ್ಯರಿಗೂ ವಶಿಷ್ಠ ಮುಪಋಷಿಗಳಿಗೂ ಮಹ ಮಹತಾಯಿಯು ಅನುಭವವಾದ ಕಥೆಗಳು ಜಗಪ್ರಸಿದ್ಧವಿದ್ದರೂ ನೀವು ಅವು ಗಳನ್ನು ಓದಿಲ್ಲ ಕೇಳಿಲ್ಲೆಂದು ಅನಿಸುವದು. ಅವುಗಳನ್ನು ಓದಿದರೂ ಕೇಳಿ ದರೂ ನಿಮ್ಮ ಮೊಂಡತನವನ್ನು ಎಂದೂ ಬಿಡಬಾರದೆಂದು ಪಣತೊಟ್ಟಂತೆ ಕಾಣುವದು.

ಪಿಂಡಸ್ಥಲದ ಪರಶಿವಪರವಾದ ೩೩ನೇ ಶ್ಲೋಕವನ್ನು ಬರೆದಿದ್ದೀರಿ. ಆದರೆ ಅದರ ಹಿಂದಿನ ಶಿವಶಕ್ತಿಯ ಪರವಾದ ಶ್ಲೋಕವನ್ನು ಕಣ್ಣೆತ್ತಿ ನೋಡಿಲ್ಲೇಕೆ ? ಅದರಂತೆ ಜ್ಞಾನಶೂನ್ಯಸ್ಥಲದ ಕೆಲಪದ್ಯಗಳನ್ನು ಹೇಳಿ ಅದ್ವೈತವೆಂದು ಸಿದ್ಧಮಾಡಿದ್ದೀರಿ. ವೀರಶೈವರ ಶಕ್ತಿವಿಶಿಷ್ಟಾದ್ವೈತವು ಕೂಡ ಕಡೆಗೆ ಅದ್ವೈತಕ್ಕೆ ಹೋಗುವದು. ಆದರೆ ಅದಕ್ಕೆ ಹೋಗಬೇಕಾದರೆ ಶರೀರಬೇಕು, ಶಕ್ತಿಬೇಕು, ಮನಬೇಕು, ಎಲ್ಲವೂ ಬೇಕು. ಹೊಳೆದಾಟಿ ಹೋಗಬೇಕಾದರೆ ಡೋಣಿಬೇಕು, ಹುಟ್ಟುಬೇಕು, ಹುಟ್ಟು ಹೊಡೆಯುವವರೂ ಬೇಕು. ಅವರಿಗೆಲ್ಲ ಶಕ್ತಿಯೂಬೇಕು. ಇದನ್ನೇ ವೀರಶೈವರು ಶಕ್ತಿವಿಶಿಷ್ಟಾ ದ್ವೈತವೆನ್ನುವರು. ಶಿವಾದ್ವೈತವನ್ನುವರು ದ್ವೈತಾದ್ವೈತವೆಂದರೂ ಇದೇ ಸರಿ.

"ಸತ್ಕರ್ಮೋಪಾಸನೆಗಳಿಂದ ತಮ್ಮ ಅಂತಃಕರಣವನ್ನು ಶುದ್ಧಿಮಾಡಿ ಕೊಂಡು ಶ್ರೋತ್ರಿಯ ಬ್ರಹ್ಮನಿಷ್ಠನಾದ ಸದ್ಗುರುವಿನ ಅನುಗ್ರಹದಿಂದ ಪಾರ ಮಾರ್ಥವಾದ ತಮ್ಮ ಪರಬ್ರಹ್ಮ ಸ್ವರೂಪವನ್ನು ಯಾರು ಸಾಕ್ಷಾತ್ಕಾರ ಮಾಡಿಕೊಂಡಿರುತ್ತಾರೋ ಅಂತಹ ಜ್ಞಾನಿಗಳು ಮಾತ್ರ ವೀರಶೈವಸಿದ್ಧಾಂತವು ಶುದ್ಧಾದ್ವೈತವೆಂದು ಒಪ್ಪುತ್ತಾರೆಯೇ ಹೊರತು ಇತರರು ಒಪ್ಪಲು ಸಾಧ್ಯ ವಿಲ್ಲ." ಎಂದು ಬರೆದಿದ್ದೀರಿ. ಬರೆಯುವದೊಂದು ಮಾಡುವದೊಂದು ನಿಮ್ಮಲ್ಲಿ ಇದ್ದಂತೆ ತೋರುವದು. ಅದಕ್ಕಂತಲೇ ನೀವು ಶಕ್ತಿವಿಶಿಷ್ಟಾ ದ್ವೈತವನ್ನು ಒಪ್ಪಿಕೊಂಡಿಲ್ಲ. ನಿಮಗೆ ಯೋಗ್ಯ ಗುರುಗಳ ಸಿಕ್ಕಲ್ಲಿ

ನಿಮಗೆ ಸಾಕ್ಷಾತ್ಕಾರವಂತೂ ಆಗೇ ಇಲ್ಲ. ಯಾಕಂದರೆ ನೀವು ಪರಶಿವನಲ್ಲಿ ಪರಶಕ್ತಿಯನ್ನು ಒಪ್ಪಿಲ್ಲ. ಅರ್ಧಾಂಗವನ್ನು ಒಪ್ಪಿದ ನೀವೊಬ್ಬರೇ ಅರ್ಧಮರ್ಧ ಬುದ್ಧಿಯವರೆಂದು ತೋರುವದು. ಉಳಿದ ಸಕಲ ವೀರಶೈವರು ಪೂರ್ಣಾಂಗ ( ಪರಶಿವ ಪರಶಕ್ತಿಯರನ್ನು ) ಒಪ್ಪಿಕೊಂಡದ್ದರಿಂದ ಪೂರ್ಣ ಬುದ್ಧಿಯವರು ಪೂರ್ಣ ಮಾನವರು ಪೂರ್ಣ ಯೋಗಿಗಳು ಪೂರ್ಣ ಪೂಜಕರು ಎಂದು ಹೇಳಿದಂತೆ ಆಗುವದು.

" ವೀರಶೈವ ಮತದ ಕೈಪಿಡಿ " ಯನ್ನು ಮೊದಲು ಬರೆದ ಗ್ರಂಥವು. ಈಗ ಡಾ. ನಂದೀಮಠರವರೇ ಶಕ್ತಿವಿಶಿಷ್ಟಾದ್ವೈತವೇ ವೀರಶೈವರ ಸಿದ್ಧಾಂತ ವೆಂದು ಬೇರೆ ಗ್ರಂಥವನ್ನು ಬರೆಯಬೇಕೆಂದು ಮಾಡಿದ್ದಾರೆ. ಬೇಕಾದರೆಂದು ವಿಚಾರಿಸಿ ನೋಡಿರಿ. ಅಂತು ನಿಮಗೆ ಉದಾಹರಣೆ ಕೊಡಲಿಕ್ಕೆ ವೀರಶೈವರಲ್ಲಿ ಯಾರೂ ಈಗ ಇಲ್ಲದಂತೆ ಆಗಿದೆ. ನೀವು ಏಕಾಕಿಯಾಗಿ ಲೋಕ ನಾಯಕನಾಗಹೊರಟಂತೆ ಹಾಸ್ಯಾಸ್ಪದವಾಗಿರುವುದು.

೧೯೫೭ ನೇ ಎಪ್ರೀಲ ಮೇ ಸಂಚಿಕೆಯನ್ನು ಸರಿಯಾಗಿ ಓದಿದಂತೆ ಕಾಣುವದಿಲ್ಲ. ಈ ಸಿದ್ಧಾಂತವನ್ನು ಕ್ರಿ. ಶ. ೮ನೇ ಶತಮಾನದಲ್ಲಿ ನೀಲಕಂಠಾಚಾರ್ಯರು ಹೇಳಿದರೆಂದು ಹೇಳುವರು. ರೇಣುಕಾಚಾರ್ಯರೇ ಇದರ ಆಚಾರ್ಯರೆಂದು ಅನ್ನುವರು ಆದರೆ ಇದನ್ನು ಇನ್ನೂ ಸರಿಯಾಗಿ ಶೋಧಿಸಬೇಕಾಗಿದೆ." ಎಂದು ನಾವು ಬರೆದಿದ್ದೇವೆ. ಅದನ್ನೇ ನಿಮ್ಮ ಪ್ರಕಟನೆಯಲ್ಲಿ "ವೀರಶೈವ ಮತವನ್ನು ಸ್ಥಾಪಿಸಿದವರು ಶ್ರೀ ರೇಣುಕ ಭಗವತ್ಪಾದರು ಎಂಬ ವಿಷಯುವು ಅನುಮಾನಾಸ್ಪದವು ಎಂದು ಹೇಳಿ ಶ್ರೀ ನೀಲಕಂಠ ಶಿವಾಚಾರ್ಯರ ಶಕ್ತಿ ವಿಶಿಷ್ಟಾದ್ವೈತ ಮತಕ್ಕೆ ಸ್ಥಾಪಕರು." ಎಂದು ಬರೆದಿದ್ದೀರಿ. ಹೀಗೆ ಕಣ್ಣಿದ್ದು ಕುರುಡರಂತೆ ಕಿವಿ ಇದ್ದು ಕಿವುಡರಂತೆ ಮಾಡಬಾರದು. ಮುಪ್ಪಿನ ಕಾಲಕ್ಕೆ ಅರುವು ಮರವು ಹಿಡಿದಿರಬಹುದೋ ಏನೋ ಎಂದು ಸಂಶಯು ಬರುವದು.

ನಾನು ನೀಲಕಂಠಾಚಾರ್ಯರೆಂದರೆ ನೀವು ನೀಲಕಂಠ ಶಿವಾಚಾರ್ಯರೆಂದು ಬರೆದರೆ ಎಂಥ ತಪ್ಪ ಮಾಡಿದಂತೆ ಆಗುವದು. ನೀಲಕಂಠಾಚಾರ್ಯರು ಕ್ರಿ. ಶ. ೮ನೇಯ ಶತಮಾನದಲ್ಲಿ ಇದ್ದವರು. ನೀಲಕಂಠ ಶಿವಾಚಾರ್ಯರು ಕ್ರಿ. ಶ. ೧೪೦೦ನೇ ಶತಮಾನದಲ್ಲಿ ಇದ್ದವರು. ವೀರಶೈವ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ನೀಲಕಂಠಾಚಾರ್ಯರು ಕಂಡು ಹಿಡಿದಿದ್ದಾರೆ. ಹೇಳಿದರು. ನಾವು ಬರೆದರೆ ವೀರಶೈವ ಮತವನ್ನು ಸ್ಥಾಪಿಸಿದವರು ಶ್ರೀ

ರೇಣುಕ ಭಗವತ್ಪಾದರು ಎಂಬ ವಿಷಯವು ಅನುಮಾನಾಸ್ಪದವು ಎಂದು ನೀವು ಬರೆದಿದ್ದೀರಿ. ಸಿದ್ಧಾಂತ ಬೇರೆ ಮತಸ್ಥಾಪನೆಯು ಬೇರೆ. ಸಿದ್ಧಾಂತ ದಲ್ಲಿ ಬೇರೆ ಬೇರೆ ಸುಧಾರಣೆಗಳನ್ನು ಕಾಲ ಕಾಲಕ್ಕೆ ಮಾಡಬಹುದು. ಆದರೆ ವೀರಶೈವ ಮತವು ಯಾವಾಗಲೂ ಒಂದೇ ಇರತಕ್ಕದ್ದು. ಆದರೆ ಯೋಗ್ಯ ಪ್ರಸಿದ್ಧ ಉತ್ತಮ ಅವತಾರಿಕರ ಉಪದೇಶಕರಂತೆ ಸಿದ್ಧಾಂತದಲ್ಲಿ ಹೆಚ್ಚು ಕಡಿಮೆಯಾಗಬಹುದು. ಕೂಸು ಇದ್ದಾಗ ಎಲ್ಲ ಅಂಗೋಪಾಂಗಗಳು ಚಿಕ್ಕ ವಿರುವವು. ಆದರೆ ದೊಡ್ಡವನಾದಬಳಿಕ ಸಕಲವೂ ಪೂರ್ಣಡುವದು. ಆದರೆ ಮನುಷ್ಯನಲ್ಲಿ ಇರುವ ಮೂಲ ತತ್ವಗಳು ಯಾವಾಗಲೂ ಒಂದೇ ಇರಬೇಕಲ್ಲ ವೇನು ? ಅದರಂತೆ ಸಿದ್ಧಾಂತ ಮತಗಳಲ್ಲಿ ಸಂಬಂಧವಿರುವದು. ಅಲ್ಲದೆ ಮತವನ್ನು ಇಂಥವರಿಂದ ಸ್ಥಾಪಿತವಾಯಿತೆಂದರೆ ಅದಕ್ಕೆ ಕಡಿಮೆಯದೆನಿಸು ವದು. ಅದಕ್ಕೆ ಮಿತಿ ಅಳತೆ ಕಾಲಗಳನ್ನು ಹೇಳಿದಂತೆ ಆಗುವದು. ವೇದ ಧರ್ಮವನ್ನು ಯಾರೂ ಸ್ಥಾಪಿಸಿಲ್ಲ. ಋಷಿಗಳು ತತ್ವಗಳನ್ನು ಸಿದ್ಧಾಂತಗ ಳನ್ನು ಬರೆದರು. ಅದರಂತೆ ವೀರಶೈವವನ್ನು ಯಾರೂ ಸ್ಥಾಪಿಸಿಲ್ಲ. ಆಚಾ ರ್ಯರು ಶರಣರು ಅದರ ಬಗ್ಗೆ ತತ್ವ, ಸಿದ್ಧಾಂತ, ನಿಯಮ, ದರ್ಶನ ಮೊದಲಾದವುಗಳನ್ನು ಬರೆದು ಬೋಧಿಸಿ ಹೋದರು. ಮಹಮ್ಮದೀಯ ಧರ್ಮ, ಜೈನ ಧರ್ಮ, ಬೌದ್ಧ ಧರ್ಮ, ಕ್ರೈಸ್ತ ಧರ್ಮ ಮೊದಲಾದವು ಗಳಿಗೆ ಸ್ಥಾಪಕರಿರುವರು. ಇಂಥ ಇಷ್ವಿಯಲ್ಲಿಯೇ ಇದು ಬಂದಿತು. ಇದಕ್ಕೂ ಮೊದಲು ಇಲ್ಲೇ ಇಲ್ಲೆಂದು ಹೇಳಿ ಕಡಿಮೆಯದೆಂದು ನಾವೇ ಒಪ್ಪಿಕೊಂ ಡಂತೆ ಆಗುವದು. ನಮ್ಮದು ದ್ರಾವಿಡ ಸಂಸ್ಕೃತಿ. ವೇದ ಪೂರ್ವದ್ದು ಎಂದು ಎಲ್ಲರಿಗೂ ಈಗೀಗ ಅನಿಸಿರುವದು. ಅಂದರೆ ಯಾರಿಂದ ಯಾವಾಗ ಆಯಿತೆಂದು ಹೇಳುವದು ಹೇಗೆ ಶಕ್ಯವಿದೆ ? ಪಂಚಾಚಾರ್ಯರು, ಶರಣರು ಅದಕ್ಕೆ ಕಾಲಕ್ಕೆ ತಕ್ಕಂತೆ ಸ್ಥಿತಿಯನ್ನು ತಂದುಕೊಟ್ಟರು. ಆಗಮಗಳಿಗಿಂತ ಮೊದಲು ಈ ವೀರಶೈವವು ಇರಲೇಬೇಕೆಂದು ಹೇಳಬಹುದು. ಯಾಕಂದರೆ ಮೊದಲು ಧರ್ಮ ಮತಗಳು ಇರುವವು. ಹಿಂದಿನಿಂದ ಅವುಗಳ ಗ್ರಂಥ ಗಳು ಆಗುವವು. ಅದರಂತೆ ಮೊದಲು ವೀರಶೈವವು. ಆ ಮೇಲೆ ಆಗ ಮಗಳು ಬಂದವು. ಪಂಚಾಚಾರ್ಯರ ಕಾಲವು ವೇದಗಳ ತರುವಾಯವೆಂದು ಹೇಳುವರು. ಆಗಮಗಳು ವೇದಕ್ಕಿಂತ ಪೂರ್ವದಲ್ಲಿ ಇದ್ದವು. ಅದಕ್ಕಿಂತ ಪೂರ್ವದಲ್ಲಿ ವೀರಶೈವ ಮತವಿತ್ತೆಂದು ಹೇಳುವ ಕಾಲಕ್ಕೆ ಅದರ ಸ್ಥಾಪ ಕರ ಕಾಲವನ್ನು ಹೇಳುವದು ಶಕ್ಯವಿಲ್ಲ. ಅಲ್ಲದೆ ಯಾರು ಸ್ಥಾಪಿಸಿದರೆಂದು

ಹೇಳುವದಂತೂ ದೂರೇ ಉಳಿಯಿತು. ಅದಕ್ಕೆ ಸಿದ್ಧಾಂತವನ್ನು ಹೇಳುವ ಕಾಲಕ್ಕೆ ಮತಸ್ಥಾಪಕರಾದ ಪಂಚಾಚಾರ್ಯರನ್ನು ಎತ್ತಿ ಹಿಡಿದು ಉಳಿದ್ದು ಕೊಳ್ಳಲಿಕ್ಕೆ ನೀವು ಯತ್ನಿಸಬಾರದು. ಬೇಕಾದರೆ ಪಂಡಿತರನ್ನು ಕೂಡಿಸಿ ಈ ವಿಚಾರವನ್ನು ನಿಷ್ಕರ್ಷಿಸಬಹುದು.

ಸಾವಧಾನಪತ್ರಿಕೆಯ ಸಂಪಾದಕರಾದ ಪಂ. ನಾವಭೂಷಣ ಶಾಸ್ತ್ರಿಗಳು "ವೀರಶೈವಧರ್ಮವು ಎಂದು ಯಾರಿಂದ ಜನ್ಮವೆತ್ತಿತ್ತೆಂಬುದು ಯಾವ ಇತಿಹಾಸಕಾರನ ಬುದ್ಧಿಗೂ ಗೋಚವಾಗಿಲ್ಲ. ಆದರೆ ಅದು ಪೂರ್ಣಾವಸ್ಥೆಗೆ ಬಂದು ೧೨ನೇ ಶತಮಾನದ ಬಸವಾದಿಗಳ ಕಾಲದಲ್ಲಿ ಬಂದುದನ್ನು ಮಾತ್ರ ಯಾರೂ ನಿರಾಕರಿಸರು. ಎಂದು ಬರೆದಿದ್ದಾರೆ. ಇದು ನಾವು ಮೇಲೆ ಬರೆದುದನ್ನೇ ಸ್ಪತಪಡಿಸುವದು ಇದೇ ಸತ್ಯ, ಶತಸತ್ಯವಾಗಿದೆ. ಇದರಲ್ಲಿ ಯಾವ ಸಂಶಯುವೇ ಇಲ್ಲ. ಆದರೆ ನೀವು (ನಾಗಣ್ಣನವರು) ಬರೆಯುವದು ಶುದ ತಪ್ಪು. ಎಲ್ಲರಿಗೆ ನಿಜವಾದುದು ಮೇಲಿನಂತೆ ತಿಳಿದದೆ. ಆದರೆ ನಿಮಗೆ ಮಾತ್ರ ಇನ್ನೂ ಏನೂ ತಿಳಿಯದಿರುವದೇ ಬಹು ಹಾಸ್ಯಾಸ್ಪದವೇ ಸರಿ. ಅಂದಮೇಲೆ ವೀರಶೈವವು ಶಕ್ತಿವಿಶಿಷ್ಟಾದ್ವೈತ್ವವೆಂಬುದು ಹೇಗೆ ತಿಳಿಯಬೇಕು ಬಹಳ ಜನರಿಗೆ ಇಳಿಯುತ್ತ ಹೋದಂತೆ ತಿಳಿಯುತ್ತ ಹೋಗುವದಂತೆ ಆದರೆ ನಾಗಣ್ಣನವರೆ ನಿಮಗೆ ಇದರ ವಿರುದ್ಧ ಮಾಡುವದಕ್ಕೆ ಬಹು ದುಃಖವೆನಿಸುವದು.

ವೀರಶೈವ ಶಬ್ದದ ಅರ್ಥವನ್ನು ಸಿದ್ಧಾಂತಶಿಖಾಮಣಿಯಲ್ಲಿ ಹೇಳಿದಂತ ನೀವು ಮಾಡಿರುವಿರಿ. ವಿ. ಅಂದರೆ ಶಿವಜೀವರ ಐಕ್ಯ ಎಂಬ ವಿದ್ಯೆ ಒಂದು ಹೇಳಿದ್ದೀರಿ. ಯಾವ ಶಬ್ದಕೋಶದಲ್ಲಿಯೂ ಹೀಗೆ ಅರ್ಥವಿಲ್ಲ. ವಿ. ಅಂದರೆ ಹೊರತು-ಇಲ್ಲಿದೆ. ದೂರವಾದ-ನಾನಾತರಹದ ಎಂದು ಅರ್ಥವದೆ. ಅದಕ್ಕೆ ನಾನು ವಿ ಅಂದರೆ ನಿಮ್ಮಂತೆ ವಿತಂಡವಾದಿ ಎಂದು ಹೇಳಿದರೆ ಬರುವದೆಂದು ಅನಿಸುವದು. ವೀರ+ಶೈವ ಎಂದು ಸಂದಿಯಾಗಿದೆ. ವೀರ ಎಂವರೆ ಶಕ್ತಿಯುಳ್ಳ, ಶೈವ ಎಂದರೆ ಶಿವೋಪಾಸಕ-ಅಂದರೆ ಶಕ್ತಿಯುಳ್ಳ ಶಿವನ ಉಪಾಸಕರು ಎಂದು ಸರಳ ಅರ್ಥವೇ ಆಗುವದು. ಇದನ್ನು ಅರ್ಥಕೋಶದಲ್ಲಿ ನೋಡಿಕೊಳ್ಳಿರಿ. ಸಿದ್ಧಾಂತಸಿಖಾಮಣಿಯಲ್ಲಿ ಕವಿಯ ಬೆಡಗಿನ ಅರ್ಥವು ಹಾಗಾಗುವದು. ಆದರೆ ಅದು ನಿಜವಾದ ಶಬ್ದಾರ್ಥವೆಂದೂ ಆಗದು. ಅದು ಕವಿಯ ಹೃದ್ಗತದ ಅರ್ಥವೇ ಹೊರತು ನಿಜವಾದ ಅರ್ಥವಲ್ಲಿ. ಉದಾಹರಣೆಗಾಗಿ ವಕೀಲ ವ ವಚನಬ್ರಷ್ಟ, ಕ್ರಿ= ಕ್ರಿಯಾಬ್ರಷ್ಟ, ಲ=

ಲಬಾಡ, ವಕೀಲ = ವಚನಭ್ರಷ್ಟ, ಕ್ರಿಯಾಭ್ರಷ್ಟ, ಲಬಾಡ ಎಂದು ಅರ್ಥ ಮಾಡುವರಲ್ಲ. ಅದರಂತೆ ವೀರಶೈವದ ಅರ್ಥವನ್ನು ಕವಿಯು ಬಹು ಪ್ರೀತಿಯಿಂದ ಹಾಗೆ ಮಾಡಿರುವದು ಹೊರತು ನಿಜವಾದ ಶಬ್ದಾರ್ಥವು ನೀವು ಮಾಡಿದಂತೆ ಇರುವದು.

ವೈದಿಕ ಮತವನ್ನು ಶಂಕರಾಚಾರ್ಯರೇ ಮಾಡಿದ್ದಾರೆಂದು ಬರೆದು ಮಹಾ ದೊಡ್ಡ ಅಪರಾಧವನ್ನು ಮಾಡಿದ್ದೀರಿ. ಅವರು ಸ್ಥಾಪಕರಲ್ಲ. ಬೌದ್ಧ ಧರ್ಮದವರಿಂದ ಹಾಳಾಗಿರುವ ವೈದಿಕ ಮತವನ್ನು ಪುನರುಜ್ಜೀವನಗೊಳಿಸಿದ್ದಾರೆ. ಇದನ್ನು ವೈದಿಕ ಧರ್ಮದವರು ಕೇಳಿದರೆ ಓದಿದರೆ ಅವರ ಕ್ಷಮೆಯನ್ನು ಸಹ ಕೇಳಬೇಕಾದೀತು ! ಅದಕ್ಕೆ ಹೀಗೆ ಬರೆಯಬೇಡಿರಿ. ವೈದಿಕ ಧರ್ಮಕ್ಕೆ ವೀರಶೈವರಂತೆ ಸ್ಥಾಪಕರಿಲ್ಲೆಂದು ನೆನಪಿಡಿರಿ.

ವೀರಶೈವಸಿದ್ಧಾಂತವನ್ನು ತಿಳಿದ ಮಠಾಧಿಪತಿಗಳು ಪಂಡಿತರು ಜನರು ಅತ್ಯಂತ ವಿರಳ ಎಂದು ಹೇಳುವ ನೀವು ಮೊದಲು ಅದನ್ನೇ ಎಳ್ಳಷ್ಟು ತಿಳಿದಿಲ್ಲ. ನುಚ್ಚು ರೊಟ್ಟಿ ಕಟಿಪಿಜೆ ಕಲಿಸಿದಂತೆ ನಿಮ್ಮ ಸಿದ್ಧಾಂತವಿರುವದು.

ಶ್ರೀ. ಮ. ನಿ. ಪ್ರ ಸ್ವ. ಬಂಥನಾಳ ಶಿವಯೋಗಿಗಳು ಹಂಸಭಾವಿಯಲ್ಲಿ ಶಿವಾನುಭವ ಶಬ್ದಕ್ಕೆ ಪಾರಿಭಾಷಿಕ ಅರ್ಥ ಮಾಡಿದ್ದು ಸರಿ ಅದೆ. ಶಿವಾ+ಅನುಭವ, ಶಿವಾ= ಶಿವೆ, ಪಾರ್ವತಿ ಶಕ್ತಿ ಎಂದು ಅರ್ಥಕೋಶದಲ್ಲಿ ಅರ್ಥವಿರುವದು ನೋಡಿಕೊಳ್ಳಿರಿ. ಅದಕ್ಕೆ ಶಕ್ತಿಸಮೇತ ಶಿವನ ಅನುಭವವೆಂದು ಅರ್ಥ ಸಹಜ ಹೊರಡುವದು. ಶಿವ+ಅನುಭವ ಶಿ ಕಾರದೊಳಗಿನ ಇಕಾರವು ಸ್ತ್ರೀಲಿಂಗವೆನಿಸುವದು. ಅದನ್ನು ತೆಗೆದರೆ ಶವ ಆಗುವದು ಸಹಜವಿದೆ. ಅದಕ್ಕೆ ಶಕ್ತಿರಹಿತ ಶಿವನು ಶವನಾಗುವದರಲ್ಲಿ ಸಂದೇಹವೇ ಇಲ್ಲ. ಶಿವ ಶಕ್ತಿಯರ ಅವಿನಾಭಾವ ಸಂಬಂಧವೂ ಕೂಡ ಈ ಶಿವಾನುಭವ ಶಬ್ದದಲ್ಲಿ ಪಾರಿಭಾಷಿಕವಾದ ಅರ್ಥದಿಂದ ಅಡಕವಾಗಿದೆ. ಎರಡೂ ರೀತಿಯ ಸಂದಿಗಳಿಂದ ಶಕ್ತಿ ಸಮೇತ ಶಿವನೆಂದೇ ಅರ್ಥ ಹೊರಡುವದು. ಅದಕಂತೇ ವೀರಶೈವ ಸಿದ್ಧಾಂತವು ಶಕ್ತಿವಿಶಿಷ್ಟಾದ್ವೈತವೇ ಹೌದು. ಶಕ್ತಿಸಹಿತ ಅನುಭವ ಪಡೆದವರೇ ಎಲ್ಲ ಜ್ಞಾನಿಗಳಿದ್ದಾರೆ. ನಿಮಗೆ ಶಕ್ತಿಯ ಜ್ಞಾನವಾಗಲಾರದಕ್ಕಾಗಿ ನಿಮಗೆ ಇನ್ನೂ ಜ್ಞಾನವಾಗಲೆಂದೇ ಹೇಳಬಹುದು. ಶ್ರೀರಾಮಕೃಷ್ಣರ ವಚನಾಮೃತವನ್ನು ಓದಿದರೆ ತಿಳಿಯುವದು. ಶಕ್ತಿಯನ್ನು ಮರೆತು

ಬರೀ ಶಿವನ ಉಪಾಸನೆಯನ್ನು ಮಾಡಿದರೆ ಶಿವಜ್ಞಾನವಾದಾಗ ಶಕ್ತಿಯು ಪೂರ್ಣ ಪ್ರತ್ಯಕ್ಷ ಬರುವದು. ಶಕ್ತಿಯು ಅಸ್ತಿತ್ವ ಆಗ ಅವರಿಗೆ ತಿಳಿಯುವದು ಎಂದು ಹೇಳಿದ್ದಾರೆ. ಅದಕ್ಕೆ ತೋತಾಪುರಿಗೆ ಶಕ್ತಿಯು ಜ್ಞಾನವು ಅವರಿಂದಲೇ ಆಯಿತು. ಆಗ ಅವನಿಗೆ ನಿಜವಾದ ಆನಂದ ಶಾಂತಿಗಳುಂಟಾದವು. ಹೀಗೆ ಶಂಕರಾಚಾರ್ಯರಿಗೆ, ವಶಿಷ್ಠರಿಗೆ, ಅರವಿಂದರಿಗೆ, ರಾಮಕೃಷ್ಣರಿಗೆ ಅನೇಕರಿಗೆ ಆಗಿದೆ. ನೀವು ಯಾವ ಯಾವ ಇತಿಹಾಸವನ್ನು ಓದಿದ್ದೀರಿ? ಶಕ್ತಿ ಮಾಯಾ ಅವಿದ್ಯಾ ವಿದ್ಯಾ ಪ್ರಪಂಚ ಮೊದಲಾದವುಗಳು ಯಾವಾಗಲೂ ಬೀಜರೂಪದಿಂದ ಅವಿನಾಭಾವ ಸಂಬಂಧದಿಂದ ಕಾರನೀಫವೊಳಗಣ ಮಿಂಚಿನಂತೆ, ಫಲರಸದೊಳಗಣ ನವರುಚಿಯಂತೆ, ಶಶಿಯೊಳಗಣ ತಣ್ಪಿನಂತೆ, ಮರೀಚಿಯೊಳಗಣ ಬಿಸಿಲಿನಂತೆ, ಆಲಿಯೊಳಗಿನ ತೇಜದಂತೆ, ಶಿಲೆಯೊಳಗಣ ಪಾವಕದಂತೆ, ಉದಕದೊಳಗಣ ಪ್ರತಿಬಿಂಬದಂತೆ, ಚಿನ್ನದೊಳಗಣ ಬಣ್ಣದಂತೆ, ಕನ್ಯೆಯೊಳಗಣ ಸ್ನೇಹದಂತೆ, ವೃಕ್ಷಮೊಳಗಣ ಬೀಜದಂತೆ ಶಿವಶಕ್ತಿಯರು ಇದ್ದಾರೆ. ಬೇಕಾದಂಥ, ಬೇಕಾದಷ್ಟು ಆಧಾರ, ಉದಾಹರಣೆ, ಅನುಭವಗಳನ್ನು ಕೊಟ್ಟರೂ ನೀವು ವಾದವನ್ನು ಬಿಡುವಂತೆ ತೋರುವದಿಲ್ಲ. ಇದರಂತೆ ಅನೇಕರು ನಿಮಗೆ ಉತ್ತರ ಕಳಿಸಿದರೂ ಇನ್ನೂ ನಿಮ್ಮ ಹಟವನ್ನೇ ಬಿಡಬಾರದೆಂದರೆ ಏನಿದರ ಅರ್ಥ ತಿಳಿಯದಾಗಿದೆ. ಸಿದ್ಧಾಂತಶಿಖಾಮಣಿಯ ೫ನೇ ಪರಿಚ್ಛೇದ ೬ನೇ ಪರಿಚ್ಛೇದಗಳಲ್ಲಿಯ ಹೀಗೆ ಬರೇ ಅದ್ವೈತಪರವಾಗಿಯೇ ಇರುವ ಶ್ಲೋಕಗಳನ್ನು ಸದಾ ಬರೆಯುತ್ತ ಅಪಾರ್ಥ ಅರ್ಥ ಮಾಡುತ್ತ ಸಕಲ ಶಾಸ್ತ್ರವನ್ನೇ ಕೆಡಿಸುತ್ತ ನಡೆದಿದ್ದೀರಿ. ಸಲ್ಪ ಶಾಂತರಾಗಿರಿ. ಸರಿಯಾಗಿ ಸಾಧನ ಮಾಡಿರಿ. ಮುಪ್ಪಿಗೆ ಒಪ್ಪುವಂತೆ ನಡೆಯಿರಿ.

ನಿಮಗೆ ಮೋಕ್ಷಬೇಕಾದರೆ ಹೋಗಿರಿ ಈಗಲೇ ಇನ್ನೂ ಎಷ್ಟು ದಿನ ಈ ಸುಳ್ಳು ಸಂಸಾರದಲ್ಲಿ ಉ. ಮ. ಹೇ. ಮ. ಗಳನ್ನು ಮಾಡುವಿರಿ. ಉಳಿದವರು ಶಿವಾನುಭವ ಸಂಘ ಸಮ್ಮೇಳನ ಮಾಡಿ ಅನ್ಯರ ಉದ್ಧಾರ ಮಾಡಿ ಸ್ವಾರ್ಥತ್ಯಾಗಿಗಳಾಗಲಿ ನೀವು ಒಳ್ಳೇ ಸ್ವಾರ್ಥಿಗಳಾಗಿ ಮುಕ್ತರಾಗಿರಿ ಎಲ್ಲರನ್ನೂ ಇಲ್ಲಿ ದುಃಖದಲ್ಲಿ ಇರಿಸಿ ನೀವೊಬ್ಬರೇ ಸುಖದಲ್ಲಿ ಇರುವದು ಎಂಥ ಸ್ವಾರ್ಥ ವಿಚಾರಿಸಿರಿ? ಅದಕ್ಕೆ ನೀವೇ ಭಗವಂತನ ಧ್ಯಾನ ಪೂಜೆಗಳನ್ನು ಮಾಡಿ ನಿಮ್ಮ ಅಂತಃಕರಣವನ್ನು ಶುದ್ಧಮಾಡಿಕೊಂಡು ಸ್ವಾರ್ಥ ಬಿಡಿರಿ. ಶಕ್ತಿಯನ್ನು ಅರಿಯಿರಿ.

ಲಿಂಗಾಂಗ ಸಾಮರಸ್ಯದ ಅರ್ಥವನ್ನು ಶ್ರೀ ಮ. ನಿ. ಪ್ರ. ಸ್ವರೂಪಿಗಳಾದ ಬಂಥನಾಳ ಶಿವಯೋಗಿಗಳಿಗೆ ಉಪದೇಶಿಸುವದು ನಿಮಗೆ ಬಹು ಹೇಯವೆನಿಸುವದು. ನೀವು ಹೊಸದಾಗಿ ಪಾರಮಾರ್ಥಕ್ಕೆ ಒಲಿದಿರಬಹುದು. ಅವರು ಹುಟ್ಟಿದಾಗಲೇ ಆ ಪದವಿಯನ್ನು ಪಡೆದು ಬಂದಿರುವರು. ನೀವು ಯಾರಿಗೂ ಉಪದೇಶಿಸಲಿಕ್ಕೂ ಬರೆಯಲಿಕ್ಕೂ ನಿಜ ಅಧಿಕಾರಿಗಳಲ್ಲೆಂದು ನಿಮ್ಮ ಯಾವತ್ತೂ ಆಂತರಿಕ ವ್ಯವಹಾರ ಬಲ್ಲವರಿಗೂ ಹಾಗೂ ನಿಮ್ಮ ಲೇಖನಗಳನ್ನು ಓದಿದವರಿಗೂ ಅನಿಸದೆ ಬಿಡುವದಿಲ್ಲ. ಮಠಾಧಿಪತಿಗಳೂ, ಪಂಡಿತರೂ, ವೀರಶೈವ ಸಿದ್ಧಾಂತವನ್ನು ಚನ್ನಾಗಿ ಅರಿತಿದ್ದಾರೆ. ನೀವು ಮಾತ್ರ ಇನ್ನೂ ತಿಳಿದಿಲ್ಲ. ಕಾಲ ಹೋಗುವ ಮುನ್ನ ಅರಿತುಕೊಳ್ಳಿರಿ. ನಿಮ್ಮ ಮೋಕ್ಷದ ಅರ್ಥ ಬಹು ಪವಿತ್ರವಾಗದೆ ಸತ್ತಬಳಿಕ ನಿಮಗೆ ಮೋಕ್ಷವಾಗುವದು. ಅದೇನು ಉದ್ರಿ ಪಂಚಾಂಗವಲ್ಲ. ಇಷ್ಟುದಿನಗಳಳೆದರೂ ಮೋಕ್ಷ ಶಬ್ದದ ಅರ್ಥವೇ ಗೊತ್ತಿಲ್ಲಿಂದ ಮೇಲೆ ಸತ್ತ ಬಳಿಕ ನಿಮಗೆ ಏನಾದರೂ ಏನು ಪ್ರಯೋಜನ ? ಆದದ್ದೆಲ್ಲ ಮೋಕ್ಷವೆನ್ನುತ್ತ ಸತ್ತರಾಯಿತೆಂದು ನಿಮ್ಮ ಶಾಸ್ತ್ರಾರ್ಥವಾಗಿದೆ. ದಯಮಾಡಿ ಇಂಥ ಮೋಕ್ಷವನ್ನು ಅನ್ಯರಿಗೆ ಹೇಳಬೇಡಿರಿ. ಮಹಾ ಅಪರಾಧ ಮಾಡಿದಂತೆ ಆಗುವದು.

"ಕೆರವಗಿವ ಶುನಿಯು ಖಂಡ ಶರ್ಕರವ ಮೆಲ್ಲುವುದೆ ?" ಎಂಬ ನಿಮ್ಮ ಬರಹವು ನಿಮಗೇ ಹತ್ತುವದು. ಶಕ್ತಿವಿಶಿಷ್ಟಾದ್ವೈತವೆಂಬ ಖಂಡ ಶರ್ಕರವ ಮೆಲ್ಲಲು ಇನ್ನಾದರೂ ಕಲಿಯಬೇಕು. ನಿಮ್ಮ ಲೇಖದಲ್ಲಿ ಎಲ್ಲರಿಗೂ ಹುಚ್ಚುಚ್ಚಾರ ಬೈಯುವದು ಮೂರ್ಖತನವೇ ಸರಿ ಯಾರಿಗೂ ಬೈಯದಂತೆ ತತ್ವ ವಿಚಾರವನ್ನೇ ಮಾಡಬೇಕು. ಬಾಯಿಯನ್ನು ಲೇಖಣಿಯನ್ನು ಬಿಗಿಹಿಡಿದು ಉಪಯೋಗಿಸಬೇಕು ಎಂದು ಎಚ್ಚರಿಕೆಯನ್ನು ಕೊಡಬಯಸುವೆವು.

## ವಿಜಯಪುರ ನಗರಸಭೆಯ ಶಿಕ್ಷಣ ಸಮಿತಿಯ ಪರವಾಗಿ

# ಶಿಕ್ಷಣಾಭಿವೃದ್ಧಿಗೆ ಪ್ರೋತ್ಸಾಹನ




* ವಿನಾಯಕನ ಉತ್ಸವದಲ್ಲಿ ಜಿಲ್ಲಾಧಿಪತಿಗಳು *

ಹರುಷ ಶರಧಿ! ಶ್ರೀ. ಎಸ್. ರಾಮನಾಥನ್ |
ಸರಸ ಸಂದರ್ಶನದ ಶುಭದಾಯ ಮಿಲನ ||
ಹೇರಲಗಿಯವರ, ಯಶಸ್ವೀ ಸುಖಸದನ |
ಹಾರೈಸಲಿ, ಶ್ರೀಮಂಗಲ ಮೂರ್ತಿ ಗಜಾನನ ||೧||

ಶ್ರೇಷ್ಠ ವಿಜಯಪುರದ ಪ್ರಜಾರಾಜ್ಯ ಸೇವೆಯನು |
ಇಷ್ಟ ಸ್ವಾತಂತ್ರ್ಯ ಸುಜನ ಹಿತದ ಹಿರಿಮೆಯನು ||
ನಿಷ್ಠೆಯಿಂ ಪಾಲಿಸುತ್ತ, ಆಡಳಿತೆಯ ಕರ್ತವ್ಯವನು |
ದೃಷ್ಟಿ ಜ್ಞಾನಪರ ಸಾಮೂಹಿಕ ಸಮತೆಯನು ||೨||

ಪ್ರೇಮದಾಮಂತ್ರಣಕೆ ಆಶಾದೀಪ ಬೆಳಗಿಸುತ ।
ನೆಮ್ಮದಿ ಒಡಗೂಡಿ, ಸತಿ ಸುಮಿತ್ರಾದೇವಿ ಸಹಿತ ॥
ನಮ್ರ ಎಸ್. ಎಸ್. ಹೇರಲಗಿ ಸಮೂಹವನುಂ ಪ್ರೋತ್ಸಾಹಿಸುತ ।
ಸುಮಹೋದಯ ಜಿಲ್ಲಾಧಿಪತಿ ಶ್ರೀ ಎಸ್. ಎನ್. ರಾ ॥೩॥

ಕಾಂತಿ ಪೊಂದುತಿಹ, ಕರ್ನಾಟಕಕೆ ಕೀರ್ತಿಯುತ ।
ಶಾಂತಿ ಯೋಜನೆ ಪಂಚವಾರ್ಷಿಕ ಫಲಿಸುತ ।
ಕ್ರಾಂತಿಮಯದೇಳ್ಗೆಯಲಿ ಶ್ರಮದ ವಹಿ
ಪ್ರಾಂತ ನವ ಮೈಸೂರಿಗೆ ಲೋಕಪ್ರಿಯರಾಗುತ ॥೪॥

ಭಾರತದ ಒಡೆಯಲಾಗಿರುವ ಬಂಧು ರಾಜ್ಯಂಗಳಲಿ ॥
ವೀರ ಕನ್ನಾಡು ಓಲಾಟದೊಳು ಮೇಲಾಡುವದರಲಿ ॥
ನಿಮ್ಮ ಮತಿನೈಪುಣ್ಯಗಳ ಹಿರಿ ಸೇವೆ ಸಲ್ಲಲಿ ।
ನಿಮ್ಮ ವಂಶವು ಬೆಳಗಿ, ನಾಡು ನಿಮ್ಮನು ಪಾಡುತಿರಲಿ ॥೫॥

# ಶ್ರಾವಣಮಾಸದ ಸಂದರ್ಶನ.

(ಲೇಖಕಃ— ಶ್ರೀಯುತ ಸಿ. ನಾ. ಮಹಾಂತಣ್ಣವರ-ಹೂನೂರು.)

ವರ್ಷದಲ್ಲಿ ಉಂಟಾಗಿರುವ ಹನ್ನೆರಡು ಮಾಸಗಳಲ್ಲಿ ಒಂದೊಂದು ಮಾಸದ ಕಾಲಮಾನವನ್ನನುಸರಿಸಿ, ಅಯನಗಳೂ, ಋತುಗಳೂ, ಮಾಸಗಳೂ, ಪಕ್ಷಗಳೂ, ವಾರಗಳೂ, ದಿನಗಳೂ, ತಾಸುಗಳೂ, ಗಳಿಗೆಗಳೂ, ಫಳಗಳೂ, ವಿಫಳಗಳೂ, ನಿಮಿಷಗಳೂ ಉಂಟಾಗಿರುವವಷ್ಟೇ! ಈ ಕಾಲವಿಭಾಗಗಳನ್ನನುಸರಿಸಿ, ಕೆಲವರು ಚಾತುರ್ಮಾಸಗಳೆಂದು ಮೂರು ವಿಭಾಗಗಳನ್ನು ಮಾಡಿಕೊಂಡಂತೆ, ನಮ್ಮೀ ಕರ್ನಾಟಕ ಸಮಾಜವು ಬೇಸಿಗೆಕಾಲ, ಮಳೆಗಾಲ, ಚಳಿಗಾಲವೆಂದು ತ್ರಿವಿಧವನ್ನುಂಟು ಮಾಡಿಕೊಂಡು, ಒಕ್ಕಲಿಗರು ಬೇಸಿಗೆಯ ಬೇಸಾಯವನ್ನೂ, ನೇಕಾರರು ಅದೇ ಬೇಸಿಗೆಯಲ್ಲಿ ತಮ್ಮ ಕೂಡಿಟ್ಟ ಕೈಗಾರಿಕೆಯ ಒಡವೆಗಳನ್ನು ಮಾರಿ ತಮ್ಮ ಕಾಳಿನ ಸಂಗ್ರಹನನ್ನು, ವ್ಯಾಪಾರಸ್ಥರು ಅರಿವೆಅಂಚಡಿ ಕೈಗಾರಿಕೆಯ ಸಾಮಾನುಗಳ ವ್ಯಾಪಾರ ಮಾಡಿ ಬಂದ ಹಣದಿಂದ ತಮ್ಮ ಜೀವನೋಪಾಯಗಳನ್ನೂ ಮಾಡುವಂತೆ, ಬೇರೆ ಬೇರೆ ಕಾಯಕದವರು ತಮ್ಮ ತಮ್ಮ ವೃತ್ತಿಗನುಸರಿಸಿ ತಮ್ಮ ಯೋಗ್ಯತಾನುಸಾರವಾಗಿ ಜೀವನದ ಪದಾರ್ಥಗಳನ್ನು ಕೂಡಿಟ್ಟು ಮುಂಗಾರಿಯ ಮಳೆರಾಜನನ್ನು ಸ್ವಾಗತಿಸುತ್ತ ಮೃಗಪಂಚಕಗಳಲ್ಲಿ ಉಂಟಾದ ಹದವನ್ನರಿತು, ಬೆದೆಗಾಲೊಳು ತಕ್ಕ ಬೀಜಗಳ ಬಿತ್ತಿದನಂತರ ಜಗದೀಶನು ಜಗದಾಕಾರನಾಗಿ, ಥಳಥಳಿಸಿ ಹೊಳೆಹೊಳೆವ ನಳನಳಿಪ ಬೆಳೆಗಳನ್ನೀಕ್ಷಿಸುತ್ತ ಶ್ರಾವಣಮಾಸವು ಬರುತಿರಲು, ಸದಾನಂದವನ್ನು ಬೀರುವ ವೇದಶಾಸ್ತ್ರ ಆಗಮ ಪುರಾಣೋಕ್ತಿಗಳನ್ನು ಕೇಳಲು ಯೋಗ್ಯವಾದ ಈ ಶ್ರಾವಣಮಾಸದಲ್ಲಿ ಶ್ರವಣಮಾಡುತ್ತ ಕೇಳಿದ್ದನ್ನು ಮನನ ಮಾಡುತ್ತ ಹಾಗೆಯೇ ನಿಧಿಧ್ಯಾಸಪನ್ನು ನಿಲ್ಲಿಸುತ್ತ ಸತ್ಕ್ರಿಯೆವಿಡಿದು, ಗುರುಲಿಂಗಜಂಗಮದ ದಾಸೋಹಿಗಳಾಗಿ ಚತುರ್ವಿಧ ಷಡ್ವಿಧ ನವವಿಧ ಭಕ್ತಿಸಂಪನ್ನರಾಗಿ, ಲಿಂಗತ್ರಯವಿಡಿದು ಪೂಜಿಸಿ, ಅಂಗತ್ರಯದೊಳು ಅಳವಡಿಸಿಕೊಂಡು ದಶವಿಧ ಪಾದೋದಕ ಏಕಾದಶ ಪ್ರಸಾದಗಳ ಪರಿಯನ್ನರಿತು ಲಿಂಗಾಂಕ ಸಾಮರಸ್ಯವನ್ನು ಹೊಂದುವಂಥ ಸಾಧನ ಸಾಹಿತಿಗಳಾಗಿ, ಪ್ರತಿಯೊಂದು ಮಾಸಾಂತ್ಯದಲ್ಲಿ ಒದಗುವ ಚತುರ್ದಶಿಗಳಲ್ಲಿ

ಶಿವಶರಣರು ಆಚರಿಸುತ್ತ ಬಂದ ಮಹಾಮನೆಯು ಶಿವಾಚಾರವನ್ನೇ ಸ್ವಯ ಚರ ಪರ ಜಂಗಮವಿಡಿದು ಮಹಾ ಶಿವರಾತ್ರಿ ಶಿವಯೋಗ ಕಾಲದೊಳು ಬಿತ್ತಿದ ಬೀಜವೂ ಹತ್ತಿಯ ತೊಳೆಯೂ ಕೈಗೆ ಬರುವ ಸಂಗ್ರಹದ ಸಂಧಾನದಲ್ಲಿ ಅಂದರೆ ಶಿವಯೋಗಕಾಲದಲ್ಲಿ (ಮಾಘಮಾಸಾಂತ್ಯದಲ್ಲಿ) ಇಡೀ ಸಮಾಜವೇ ಲಿಂಗಾಂಗಸಂಗ ಸಮರಸಹೊಂದಿ ಸಂದಿಲ್ಲದ ಸುಖಸಾಮ್ರಾಜ್ಯದಲ್ಲಿ ಇರುವ ಶಿವಾನುಭವವು ಸಕಲ ಜೀವಿಗಳಿಗೂ ಸಂಭವನೀಯವೇ ಸರಿ.

ಜಗದೀಶನಿತ್ತ ಹೊಲಮನೆಗಳಿದ್ದ ಹೂವುನೂರ (ಹುನ್ನೂರ) ಎಂದೆನಿಸುವ ಊರಿಗೆ ಸದ್ಯಕ್ಕೆ ಧಾರವಾಡ ವಾಸಿಯಾದ ನಾನು ಶ್ರಾವಣ ಮಾಸದ ಮೊದಲನೇ ವಾರದಲ್ಲಿ ಹೋದೆನು, ಅಲ್ಲಿ ದೇಗುಲದ ಜ್ಞಾನಮಂದಿರದಲ್ಲಿ ಬೆಳಿಗ್ಗೆ ೫॥ ಗಂಟೆಯಿಂದ ೬॥ ಗಂಟೆಯ ವರೆಗೆ ಶ್ರೀ ನಿಜಗುಣಾರ್ಯರ ಪಾರಮಾರ್ಥ ಗೀತೆಯೂ ಸಂಜೆಯ ೫॥ ಗಂಟೆಯಿಂದ ೬॥ ಗಂಟೆಯ ವರೆಗೆ ವೃತ್ತಿಪ್ರಭಾಕರ ರತ್ನವೆಂಬ ಶಾಸ್ತ್ರಾನುಭವವೂ ಶ್ರೀಬಸವೇಶ್ವರ ದೇವಾಲಯದಲ್ಲಿ ಸಂಜೆಯ ೭॥ ಗಂಟೆಯಿಂದ ೮॥ ಗಂಟೆಯ ವರೆಗೆ ಶ್ರೀ ಭಗವದ್ಗೀತೆಯೂ ಗದಗಿನ ಸ್ವಾಮಿಗಳಾದ ಶ್ರೀ ಷ. ಬ್ರ. ಗಳಾದ ಶ್ರೀ ಮಲ್ಲಿಕಾರ್ಜುನರೆಂಬ ಮಹಾನುಭಾವರಿಂದ ಆಷಾಢಮಾಸದೊಳಾರಂಭವಾಗಿ ಚ್ಯುತಿಯಿಲ್ಲದೆ ಸಾಗಿದ್ದನ್ನು ಕೇಳಿ ದಿನಂಪ್ರತಿ ನಾನಾದರೂ ಶ್ರವಣಮನನ ನಿಧಿಧ್ಯಾಸಗಳಿಂದ ಆನಂದಾಬ್ಧಿಯಲ್ಲಿ ಮುಳುಗಿ, ಸದ್ಭಕ್ತ ಮಹಾತ್ಮೆಯ ಮಹಾನಂದನರ್ತಿಯಾಗಿ ಷಟ್‌ಸ್ಥಲಗಳಲ್ಲಿ ಕಂಡುಬಂದ ಶ್ರುತಿಜ್ಞಾನ ಮತಿಜ್ಞಾನ ಖಂಡ ಜ್ಞಾನ ಕೇವಲಜ್ಞಾನ ಜ್ಯಾತಿಜ್ಞಾನ ಪರಂಜ್ಯೋತಿ ಜ್ಞಾನಗಳು ಕ್ರಮಗೊಂಡು ನಿಯತವಾಗಿ ನಿಲ್ಲುತ್ತ ಜ್ಞಾನತ್ರಯಗಳಾದ ಜ್ಞಾತೃ ಜ್ಞಾನ ಜ್ಞೇಯಗಳ ಹಾಗು ಧ್ಯಾತೃ, ಧ್ಯಾನ, ಧ್ಯೇಯಗಳ, ಮತ್ತು ಮನ, ಮನನ, ಮನನೀಯಗಳ, ಜಾಗ್ರತ್, ಸ್ವಪ್ನ ಸುಷುಪ್ತಿಗಳ, ವಿಶ್ವತೈಜಸ. ಪ್ರಾಜ್ಞಗಳ, ಅಧಿಭೂತ, ಅಧಿದೈವ, ಅಧ್ಯಾತ್ಮಗಳ, ತತ್, ತ್ವಂ, ಅಸಿಗಳ, ಜೀವಾತ್ಮ, ಅಂತರಾತ್ಮ, ಪರಮಾತ್ಮಗಳ ಸ್ವರೂಪವೂ ಆಯಾ ಸ್ವರೂಪಗಳ ಅನುಭವವೂ ಆಗುತ್ತ, ತೋರುವ ತೋರಿಕೆಯೇನೂ ಇಲ್ಲದಂತಾಗಿ, ಶಿವನ ಸದ್ರೂಪವು ಸಮನಿಸಿ ಚಿದ್ರೂಪವು ನೆಲೆಗೊಂಡು ಚಿನ್ಮಯ ಸ್ವರೂಪದಲ್ಲಿ ಅಂದರೆ ಲಿಂಗಾಂಗ ಸಮರಸದಲ್ಲಿ ಲೀನವಾಗುವ ಆ ಬೋಧಾಮೃತವು ಸಚ್ಚಿದಾನಂದ ನಿತ್ಯಪರಿಪೂರ್ಣದ ಲಕ್ಷಣಗಳು ಆಯಾ ಅಧಿಕಾರಿಗಳ ಸಾಧನಸಾಮಗ್ರಿಗಳಂತೆ ತೋರಹತ್ತಿದವೆಂದು ಹೇಳಲು ಆನಂದವೆನಿಸುವದು.

ಆ ಊರಲ್ಲಿ ಭಕ್ತಿಯಖಣಿ, ಶಾಂತಿಯಮಣಿ, ಪರುಷದಖಣಿ, ಸತತೋದ್ಯೋಗದ ಶಿಖಾಮಣಿಯಾದ ಚಿಕ್ಕಾದ ಓಣಿಯ ಶ್ರೀಬಸವೇಶ್ವರ ದೇವಾಲಯದ ಪಟಾಂಗಣದ ವಿಶಾಲತೆಯ ರಮ್ಯವಾದ ಮಣಿಮಂಟಪದಲ್ಲಿ ಮಹಾವಿದ್ಯಾವಿಶಾರದರಾದ ಶಿವಮೂರ್ತಿಗಳ ಅಗ್ರಪೀಠವು ದಿನಮಣಿಯ ಉದಯಕಾಲದ ಸಂಭ್ರಮದ ಪರ್ವೇಶ್ವರನ ಕಾಂತಿಯನ್ನು ಬೀರುತ್ತಿತ್ತು. ಅಲ್ಲಿಗೆ ದಿನಾಲು ಶ್ರೀ ಭಗವದ್ಗೀತೆಯ ಶ್ರವಣ ಮಾಡಲು ಅಕ್ಕನ ಬಳಗವೂ ಬಸವನ ಬಳಗವೂ ಕಿಕ್ಕಿರಿದು ಕೂಡುತ್ತಿರುವದಲ್ಲದೆ, ಸರ್ವಪಂಗಡದ ಬಂಧುಭಗಿನಿಯರೂ ಪುರುಷರೂ ಆಗಮಿಸಿ ಮೂರು ಸಾವಿರಕ್ಕಿಂತ ಕಡಿಮೆಯಲ್ಲದಷ್ಟು ಜನಾಂಗವು ಕೂತುಕೊಂಡಾಗ ಗೀತಗಾಯನ, ವಚನಗಾಯನ, ಸ್ತೋತ್ರಗಾಯನಾದಿಗಳು ಮುಗಿದ ಕೂಡಲೆ ಸ್ವಾಮಿಗಳ ಶಿವಯೋಗಸಂಧಾನಾಬ್ಧಿಯ ತೆರೆಗಳು ಮಂಗಲಮಯವಾಗಿ ಮೂರ್ತಗೊಂಡು ಹೊರಹೊಮ್ಮುತ್ತ ಪ್ರಾರಂಭಿಸಿದ ಅವರ ಬ್ರಹ್ಮ ಶಿವಚಿಂತನದ ಸ್ವರೂಪದಲ್ಲಿ ನಮಸ್ತೇ ಎಂಬ ಶಬ್ದ ಹೊರಬೀಳುವಾಗ ಮೂರು ಸಾವಿರ ಆತ್ಮಗಳ ಸ್ವರೂಪವನ್ನು ಕಂಡುಹಿಡಿದರೆ, ಆಗ ಒಂದು ಸೂಜಿ ಕೆಳಗೆ ಬಿದ್ದದ್ದಾದರೆ, ಆ ಸಪ್ಪಳವು ಎಲ್ಲರಿಗೂ ಕೇಳ ಬರುವಂತೆ ನಿಃಶಾಬ್ದತ್ಮಕವಾಗಿ, ನಿರಾವರಣವಾಗಿ, ಚಿತ್ತೈಕಾಗ್ರವಾಗಿ ನಿರಾಳವಾಗಿ ಶ್ರವಣಾತುರವಾಗಿ ತೋರುತ್ತಿತ್ತು. ಈ ಸ್ಥಿತಿಯು ಶಾಸ್ತ್ರ ಮುಗಿಯುವ ವರೆಗೂ ಇರುವ ಪರಿಣಾಮವು ಆ ಸ್ವಾಮಿಗಳ ಸಪ್ತಭೂಮಿಕೆಗಳ ಷಟ್‌ಸ್ಥಳಗಳ ಸಾರಾಮೃತವನ್ನು ಉಂಡ, ಜಂಜಡವಿಲ್ಲದ ಮಹಾನಂದದ (ಮಹಾಜ್ಞಾನದ) ಪ್ರಭಾಪ್ರಕಾಶವೆಂದೇ ಹೇಳಲು ಅಡ್ಡಿ ಇಲ್ಲ.

ಪ್ರತಿ ದಿವಸ ಮುಂಜಾನೆ ೫॥ ಗಂಟೆಯಿಂದ ೬॥ ಗಂಟೆಯ ವರೆಗೆ ಶ್ರೀ ನಿಜಗುಣಾರ್ಯರ ಪಾರಮಾರ್ಥ ಗೀತೆಯು ಸಾಗುತ್ತಿತ್ತಷ್ಟೇ! ಇದರಲ್ಲಿ ೧೦ ಗತಿಗಳಿದ್ದು ೧ನೇ ಗತಿಯಲ್ಲಿ ವಸ್ತು ಹಾಗೂ ಶಕ್ತಿಗಳ ವಿಮರ್ಶೆಯೂ ೨ನೇ ಗತಿಯಲ್ಲಿ ಭೂತಪಂಚೀಕರಣವೂ ೩ನೇ ಗತಿಯಲ್ಲಿ ಆ ಪಂಚಭೂತಗಳ ಗುಣವಿವರಣೆಯೂ ೪ನೇ ಗತಿಯಲ್ಲಿ ಸೃಷ್ಟಿಕ್ರಮ ಹಾಗು ಅಂಡಜ, ಪಿಂಡಜ, ಜರಾಯುಜ, ಉದ್ಭಿಜ, ಮಲತ್ರಯ, ಶರೀರದ ಉತ್ಪತ್ತಿ, ಸಪ್ತಧಾತು, ಷಡ್ಭಾವ, ಷಟ್‌ಚಕ್ರ, ಆ ಚಕ್ರಗಳ ಸ್ಥಳಕುಳದಳ, ಪಂಚಕೋಶ, ಅರಿಷಡ್ವರ್ಗಾದಿಗಳ ವಿವರಣೆಯೂ ೫ನೇ ಗತಿಯಲ್ಲಿ ಕರಣ ಚತುಷ್ಟಯಗಳ ಕಾರ್ಯ ಹಾಗೂ ಸಂಕಲ್ಪವಿಕಲ್ಪಗಳ ವಿಕಾರವೂ ೬ನೇ ಗತಿಯಲ್ಲಿ ಬಂಧಮೋಕ್ಷಗಳ ಪರಿಯೂ ಹೇಳಲ್ಪಟ್ಟಿದೆ.

ಇದರಂತೆ ಶ್ರೀ ಚನ್ನಬಸವದೇವರು ವಿರಚಿಸಿದ ಕರಣಹಸಿಗೆಯಲ್ಲಿ ಓಂಕಾರ ಪ್ರಣವದ "ಅಕಾರೇಚ ಉಕಾರೇಚ ಮಕಾರೇಚ ತೃತೀಯತೆ | ಇದಮೇಕಂ ಸಮುತ್ಪನ್ನಂ ಓಂ ಇತಿ ಜ್ಯೋತಿರೂಪಕಂ|| " ಈ ಶ್ಲೋಕಾನುಭವದಿಂದಲೂ ಓಂಕಾರಾತ್ಪ್ರಭವಾವೇದಂ ಓಂಕಾರಾತ್ಪ್ರಭವಾ ಸ್ವರಂ | ಓಂಕಾರಾತ್ಪ್ರಭವಾಸರ್ವಂ ತ್ರೈಲೋಕ್ಯಂ ಸಚರಾಚರಂ ||" ಈ ಶ್ಲೋಕದಿಂದಲೂ ನಾಲ್ಕು ವೇದಗಳೂ ಳ ಉಪವೇದಗಳೂ ಆಗಮಗಳೂ ಶಾಸ್ತ್ರಗಳೂ ಪುರಾಣಗಳೂ ಷಡಧ್ವ ಷಡ್ಗುಣ ವಸ್ತುಗಳೂ ತತ್ವಪಂಚಕವೂ, ಸಪ್ತ ಭುವನಂಗಳೂ ಹುಟ್ಟಿದವು. ಮಹಾದೇವನ ಸದ್ಯೋಜಾತ ಮುಖದಿಂದ ಪೃಥ್ವಿ, ವಾಮದೇವ ಮುಖದಿಂದ ಅಪ್ಪು, ಅಘೋರ ಮುಖದಿಂದ ತೇಜ, ತತ್ಪುರುಷ ಮುಖದಿಂದ ವಾಯು, ಈಶಾನ ಮುಖದಿಂದ ಆಕಾಶಗಳೆಂಬ ಪಂಚ ಭೂತಗಳು ಹುಟ್ಟಿದವು. ಆಕಾಶ ತತ್ವದ ಅಧಿದೈವ ಸದಾಶಿವನು. ಈತನ ಕೃತ್ಯವು ತಿರೋಧಾನವು. ಅಗ್ನಿತತ್ವದ ಅಧಿದೈವ ರುದ್ರನು. ಈತನ ಕೃತ್ಯವು ಲಯವು. ಅಪ್ಪು ತತ್ವದ ಅಧಿದೈವ ವಿಷ್ಣುವು. ಈತನ ಕೃತ್ಯ ಸ್ಥಿತಿಯು ಪೃಥ್ವಿತತ್ವದ ಅಧಿದೈವ ಬ್ರಹ್ಮನು. ಈತನ ಕೃತ್ಯ ಸೃಷ್ಟಿಯು.

ಅಂಡಜ, ಪಿಂಡಜ, ಜರಾಯುಜ, ಉದ್ಭಿಜಗಳೆಂಬ ಸೃಷ್ಟಿಯ ಉತ್ಪತ್ತಿ ಸ್ಥಿತಿಲಯಗಳಿಗೆ ಕಾರಣರು ಬ್ರಹ್ಮ ವಿಷ್ಣು ರುದ್ರರು. ಆಯಾ ಚೇತನಗಳ ಪಾಪ ಪುಣ್ಯಗಳ ಮಾನದಂತೆ ಆಯಾ ಜನ್ಮಗಳನ್ನು ಕೊಡುವ ಈಶ್ವರನೇ ತಿರೋಧಾನ ಕೃತ್ಯದ ಅಧಿದೇವತೆಯಾಗಿ ತಾನೇ ಜೀವ ನೆನಿಸಿ, ತಾನೇ ಸರ್ವ ಚೇತನಗಳಿಗೆ ಪೂಜ್ಯ ರೂಪನಾಗಿರುತಿಹನಷ್ಟೇ! ಬ್ರಹ್ಮ ಜ್ಞಾನದಿಂದ ಬ್ರಾಹ್ಮಣನೆನಿಸಿದಾತನು, ಅನಾಚಾರದಿಂದ ಶೂದ್ರನೆನಿಸಿದ ಹಾಗೆ, ಆ ಈಶ್ವರನೇ ವಿಷಯಾಸಕ್ತನಾಗಿ ಜೀವನಾಗಿಹನು. ಆ ಜೀವನೇ ಅನೇಕ ಜನ್ಮದ ಸಂಸ್ಕಾರದೊಳು ಪುಣ್ಯಮಂ ಗೈದು ಮಾನವ ಜನ್ಮಕ್ಕೆ ಬಂದು ಜ್ಞಾನಾಜ್ಞಾನದ ಸತ್ಯಾಸತ್ಯದ ಕ್ರಿಯಾಕ್ರಿಯೆದ ಧರ್ಮಾಧರ್ಮದ ಆಧಾರಾಧೇಯದ ಭಾವಾಭಾವದ ದೃಶ್ಯಾದೃಶ್ಯದ ಅಹಂ ಇದಂ ದ ವಿಷಯಾವಿಷಯದ ಸಂಕಲ್ಪ ವಿಕಲ್ಪದ ಜೀವ ಪರಮರ ಅಥವಾ ಅಂಗ ಲಿಂಗಗಳ ಸುವಿಚಾರದಿಂದ ಚಿತ್ತ ಸುಚಿತ್ತ, ಬುದ್ಧಿ ಸುಬುದ್ಧಿ, ಅಹಂಕಾರ ನಿರಹಂಕಾರ, ಮನ ಸುಮನ, ಜ್ಞಾನ ಸುಜ್ಞಾನ, ಭಾವ ಸದ್ಭಾವಗಳನ್ನರಿಯಲು ಸದ್ಗುರುಗಳ ಸನ್ನಿಧಿಯಿಂದ ಹಿತಾಹಿತಗಳನ್ನರಿತು ಸಂಸಾರದಲ್ಲಿ ಹೇಯವುಂಟಾಗಿ ವೈರಾಗ್ಯ ಸಂಪದವನ್ನು ಪಡೆಯುವದೇ ಮುಮುಕ್ಷುವಿಗೆ ಮೊದಲನೇ ಭೂಮಿಕೆಯು.

ಮೋಕ್ಷ ವಿಷಯಂ ವೈರಾಗ್ಯಂ
ಬಂಧಂ ವಿಷಯ ಮೋಹಕಂ

ಎಂಬದಾಗಿಯೂ "ಕಣ್ಣಮುಂದಿನ ಕಾಮನ ಕೊಂದು, ಮನದ ಮುಂದಿನ ಆಶೆಯ ತಿಂದು ಆತನ ಅರಿ. ಆತುರ ವೈರಿ ಮಾರೇಶ್ವರಾ ||೧||" ಹಾಗು "ಕಂಗಳ ಕರುಳ ಕೊಯ್ವವರ ಮನದ ತಿರುಳ ಹುರಿದವರ ಮಾತಿನ ಮೂಲ ಬಲ್ಲವರ ತೋರಯ್ಯ ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ ||" ಮತ್ತು "ಮೋಹ ಏವ ಮಹಾ ಮೃತ್ಯುರ್ಮುಮುಕ್ಷೋರ್ವ್ವಪುರಾದಿಷು | ಮೋಹೋ ವಿನಿರ್ಜಿತೋಯೇನ ಸಮುಕ್ತಿ ಪದಮರ್ಹತಿ ||"

ಅರ್ಥ:— ಯಾವನು ದೇಹಾದಿಗಳಲ್ಲಿರುವ ರಾಗವನ್ನು ಜಯಿಸುವನೋ ಅವನೇ ಮುಕ್ತಿಪದಕ್ಕೆ ಅರ್ಹನಲ್ಲದೆ ವಿಷಯಾಸಕ್ತನಿಗೆ ಸಾಧ್ಯವಾಗ ಲಾರದು. ಇದೇ ವಿಷಯವಾಗಿ ಶ್ರೀ ನಿಜಗುಣ ಶಿವಯೋಗಿಗಳು—

ಅಹಮೆಂಬೀ ಬಗೆ ದೇಹದೊಳಿರ್ಕು | ಬಹಿರಂಗದೊಳಿದಮೆಂಬುದು ತೋರ್ಕು || ಅದು ಕೇಳೀ ಸಕಲಾರ್ಥದೊಳಿರ್ಕು | ಅದರಿಂ ಬಹು ಬಗೆ ನಿರವಧಿಯಕ್ಕು || ಕೆಲಕೆಲವೆಡೆಯೊಳಗಪ್ರಿಯವಲ್ಲಿ || ಹಿಡಿವ ಬಿಡುವ ಕರ್ಮ ಕ್ಕದು ಮೂಲ | ತಡೆಯದೆ ತತ್ಕರ್ಮವೆ ಭವ ಮೂಲ || ಅದರಿಂದಭಿರುಚಿ ನಿನಗೆತ್ತಾನು | ಉದಿಸಿತ್ತಾದೊಡೆ ಕೇಳದು ತಾನು || ವಿದಿತಂ ಬಂಧವೆನಿಪ ಸಂಸಾರ | ಅದನುಳಿದರೆ ನೀನೀಶಂ ಧೀರಂ ||೧|| ಎಂಬದಾಗಿ ಸಂಸಾರ ಬಂಧವನ್ನು ಉಸುರಿ,

ಇಂದ್ರಿಯಗೋಚರಮಾದ ವಿಷಯಮಂ | ಪೊಂದಿ ಪ್ರಿಯಮಂ ಮೇಣ ಪ್ರಿಯಮಂ || ಬಗೆಯಲು ದೇಹದೊಳುಂಡಿರಬೇಕು | ಮಿಗೆ ಕಾಮಿಸಿ ಭೋಗಿಪುದದು ಸಾಕು || ಕಾಮಂ ಕ್ರೋಧಂ ಮೋಹಾದಿಗಳು | ತಾವು ಸವು ಹೃದಯ ಗ್ರಂಥಿಗಳು || ಅಗಳು ಅವರಿಂದತ್ತಿತ್ತೊಲಿವ | ಆ ಗಂಟಿನ ಭವಬಂಧನ ಮನವ || ಪುಟ್ಟುವ ಸುವಿವೇಕದ ಮನದಿಂದ | ನೆಟ್ಟನೆ ಕಡಿವುದು ಮಸೆದುಳಿಯಿಂದ || ಜಡದಿಹ ಸಂಕಲೆಯಂ ಕಡಿವಂತೆ | ಕಡಿದೊಡೆ ನೀನಹೆ ಮುನ್ನಿರ್ದಂತೆ ||೨|| ಮೋಕ್ಷ ಸ್ವರೂಪವನ್ನು ನಿರ್ಧರಿಸಿರುವರು.

ನಮ್ಮ ಶಿವಶರಣರಾದರೂ ಸಂಸಾರ ಹೇಯ ಸ್ಥಲದಲ್ಲಿ,

ಚಂದ್ರಮನಂತೆ ಕಳೆ ಸಮನಿಸಿತ್ತೆನಗೆ, ಸಂಸಾರವೆಂಬ ರಾಹು ಸರ್ವ ಗ್ರಾಸಿಯಾಗಿ ನುಂಗಿತ್ತಯ್ಯ, ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು, ಇನ್ನೆಂದಿಗೆ ಮೋಕ್ಷವಹುದೋ ಕೂಡಲಸಂಗಮದೇವಾ ||೧||

ಒಂದು ಯೋನಿಯಲ್ಲಿ ಬಂದ ದುಃಖವ ನಾನೆಂದಿಗೂ ಕಳೆಯಲಾರೆ. ಏಂಭತ್ತುನಾಲ್ಕು ಯೋನಿಯೆಂದರೆ ಇನ್ನೇವೆನಯ್ಯ? ನೊಂದೆನಯ್ಯ. ಮಾತೊಂದನರಿಯದ ಶಿಶು ಬೆಂದೆನಯ್ಯ! ಶಿವ ಶಿವ! ಎನ್ನ ಕಂದ ನೀ ಬಾರೆಂದು. ಕಂಬನಿಯ ತೊಡೆದು, ಎತ್ತಿ ಎತ್ತಿ ಆನಂದದಿಂದ ಕಣ್ದೆರೆ ಉಳಿಯುಮೇಶ್ವರಾ ||೨||

ಕೆಲವರು ಷಟ್ಕರ್ಮಗಳನ್ನಾಚರಿಸಿ, ಆಯಾ ಫಲಪದಗಳನ್ನನುಭವಿಸಿ, ಪುನಃ ಜೀವಿಗಳಾಗಿಯೇ ಉಳಿದು ಮತ್ತೆ ಸಂಸಾರ ತಾಪತ್ರಯಗಳಲ್ಲಿಯೇ ಸವೆಯುವರು. ಇದನ್ನರಿತ ಜೀವನು ವಿವೇಕದಿಂದ ಭವದುಃಖಂಗಳ ನೋಡಿ ಅವನ್ನತಿಗಳೆದು ದುಃಖಂ ಬೆರಸದ ಸುಖಮಂ ನೋಡಿ, ಈ ಸಂಸಾರದ ವಿಷಯಗಳನ್ನೆಲ್ಲ ನಿರಸನಂಗೈದು, "ನಾಯಿಯು ಎಲುವನ್ನು ಬಾಯಿಯಾಡಿಸಿದಂತೆ ವಿಷಯಾಸಕ್ತಿಯೆಂದು ನಿಶ್ಚಯಿಸಿ, ತನ್ನ ಮನವ ವಿಷಯವಿಮುಖ ಮಾಡಿ ಒಳ್ಳೇ ಬಟ್ಟೆಯನಾರಯ್ಯುತ್ತ ಇರುವವನೇ ಸುಖದಿಚ್ಛೆಯ ಯೋಗಿ.

ವಿರತಿಗೆ ಬೀಜ, ರೂಪ, ಕಾರ್ಯಗಳನ್ನರಿಯುವದೇ ನಿಜ ಧೈರ್ಯ. ವಿಷಯ ದೋಷವನು ಊಹಿಸುವದು ಬೀಜವು. ಬಳಿಕಾ ವಿಷಯವನ್ನು ಚನ್ನಾಗಿ ಬಿಟ್ಟೇ ಬಿಡುವದು ರೂಪವು. ಬಳಿಕ ಆಯಾ ವಿಷಯವಾಸನೆಯು ತೀವ್ರ ಮನವನ್ನಾವರಿಸುತ್ತಿರಲು ಛಲಬಲದಿಂದ ಬಿಟ್ಟದ್ದೇ ಕಾರ್ಯವು. ಇವೇ ವಿರತಿಯ ನಿಜಲಕ್ಷಣವಾಗಿ, ಇದನುಳ್ಳಾತನೇ ಸಹಜ ವಿರಾಗಿ.

ಬಳಿಕೀ ಸಂಸ್ಕೃತಿಯಲ್ಲಿ ನೂತನವಮಂ ಕಾಣದೆ, ನೋಡಿದ್ದನ್ನೇ ನೋಡುತ್ತ, ವಾಸಿಸಿದ್ದನ್ನೇ ವಾಸಿಸುತ್ತ, ಕೇಳಿದ್ದನ್ನೇ ಕೇಳುತ್ತ, ಮುಟ್ಟಿದ್ದನ್ನೇ ಮುಟ್ಟುತ್ತ, ಉಂಡದ್ದನ್ನೇ ಉಣ್ಣುತ್ತ, ಪಿಷ್ಟ ವಿಪೇಷಣ ನ್ಯಾಯದಂತೆ ಅನುಭವಿಸುವ ಪ್ರಸಂಗದಲ್ಲಿ ಆತನ ವಿರತಿ ಬಲಿಯಲು ವಿರತಿಯೊಳಳವಟ್ಟವನೆಂದು ತಿಳಿಯಬೇಕು.

ಮತ್ತು ಇಹಪರ ಭೋಗದಲ್ಲಿಯೂ ಸುರನರ ವಂದ್ಯತೆಯಲ್ಲಿಯೂ ನಿಜ ಸುಖವಿಲ್ಲದ ಅಜಹರಿ ಪದಗಳಿಂದೇನು? ಇವೆಲ್ಲವ ಅನುಭವಿಸುವಾಗಷ್ಟೇ ಸುಖವು. ಕಾರಣ ಬಿಡಬೇಕಾದವುಗಳನ್ನು ಬಿಟ್ಟು, ಕಡು ಚಪಲತೆಯ ಚಿತ್ತು, ವಿವಿಧ ವಾಸನೆಗಳಳಿವನಕ ಭವಮಾಲೆ ಪರಿದು, ನಿಜವರಿದು, ಸಮತೆ ನೆಲೆಗೊಂಡು, ಬಹು ದುಃಖದ ಗ್ರಂಥಿ ಕಡಿದು, ಸಹಜಾರೋಗ್ಯತೆಯೊದಗಿ, ನಿಜಸುಖ ಕೊಡುವರಾರೆಂದು ಹಂಬಲಿಸುವದೇ ವಿರತಿಯ ಪರಿಪಾಕ ದೆಸೆಯು.

ತಡೆಯದೆ ಸುಕೃತವನಾಚರಿಪವನು | ಬಿಡುವ ದುಷ್ಕೃತವನೆಲ್ಲವನು ||
ಧರ್ಮಂಗಳನೆಡೆವಿಡಿದಾಚರಿಪ | ಧರ್ಮ ಫಲಂಗಳನುರೆ ಧಿಕ್ಕರಿಪ ||
ಪರರ ಸಿರಿಗೆ ಮತ್ಸರವಂ ಮಾಡ | ಪರಪೀಡೆಯ ನೆನಹಿನೊಳೊಡಗೂಡ ||
ದೇಶೋಚಿತ ಕಾಮೋಚಿತವಾಗಿ | ಅಸುರಗತಿಯುಳಿದನುಗುಣವಾಗಿ ||
ಒಂದೆರಡನಿವಾತಂ ನುಡಿವ | ಕುಂದದಿಳೆಗೆ ಸೊಗಸಾಗಿರೆ ನಡೆವ ||
ಇಂತೆಸಗುವ ಯೋಗವುಳ್ಳವನು | ಇಂತಾದಿಯ ಭೂಮಿಕೆಯುಳ್ಳವನು ||
ಜೀವೇಶ್ವರ ಯೋಗವನರಿದಂದು | ಭಾವಾಧ್ಯಾಸಕೆ ಹರವಾದಂದು ||
ಭವದ ಲತೆಯ ಬೇರಂ ಕೊಯ್ದವನು | ತವೆ ಪರಮಾನಂದವನೈದವನು ||

ನಿಜಸುಖೇಚ್ಛೆಗೆ ವಿರತಿಯೇ ಕಾರಣವಾದ್ದರಿಂದ ಮೊದಲನೇ ಭೂಮಿಕೆಯನ್ನು ಹೇಳುವದಾಯಿತು. ಮತ್ತು ಷಟ್‌ಸ್ಥಲದಂತೆ ಭಕ್ತಸ್ಥಲವನ್ನೂ ಪರ್ಯಾಯದಿಂದ ಹೇಳುವದಾಯಿತು. ಇನ್ನು ೨ನೇ ಭೂಮಿಕೆಯಾದ ಆತ್ಮ ವಿಚಾರದ ಬಗೆಯನ್ನು ತಿಳಿದುಕೊಳ್ಳುವಾ.

ಈ ಭೂಮಿಕೆಗೆ ಯೋಗವು ಅವಶ್ಯವು. ಯೋಗಕ್ಕೆ ಬೀಜ, ರೂಪ, ಕಾರ್ಯಗಳುಂಟು. ನಿಯಮ ನಿಯಮಾದ್ಯಂಗಳೇ ಬೀಜವು. ಹಲವು ತರದ ಸದುಪಾಯಗಳಿಂದಲೂ ಅನುಭಾವಿಗಳ ಒಡನಾಟದಿಂದಲೂ ಚಲಿಸುವ ಮನವನ್ನು ಸುಸ್ಥಿರಗೊಳಿಸುವದೇ ರೂಪವು. ಹೆಚ್ಚು ದುಃಖ ಕೊಡುವ ಕರ್ಮಂಗಳನ್ನೂ ಬಹಿರ್ವ್ಯಾಪಾರಗಳನ್ನೂ ಬಿಡುವದೇ ಕಾರ್ಯವು. ಇಂತು ಈ ಮೂರನುಳ್ಳವನೇ ಯೋಗಿ. ಯೋಗಾಂಗಗಳು ಬಹುವಿಧವಾಗಿದ್ದರೂ ಯೋಗಿಗೆ ಅವೆಲ್ಲ ವಿಧಿಯಾಗಿರುವವು. ದಶಭೇದವಾದ ಯಮವೂ ದಶಭೇದವಾದ ನಿಯಮವೂ ಹಲವು ವಿಧವಾದ ಆಸನವೂ ಏಳು ವಿಧವಾದ ಪ್ರಾಣಾಯಾಮವೂ ಅನ್ನವನುಂಬುವದು ಪ್ರತ್ಯಾಹಾರವೂ ಹೃದಯಸ್ಥಳ ವಿಚಾರದ ಧಾರಣವೂ ಶಿವಮೂರ್ತಿಯ ನೆನಹಿನ ಧ್ಯಾನವೂ ಆ ಧ್ಯಾನದೊಳು ಮನವ ಸುಸ್ಥಿರಗೊಳಿಸುವ ಮೌನವೂ ಸಗುಣಾಷ್ಟಾಂಗದ ಸಂಜ್ಞೆಗಳಾಗಿರುವವು.

ಇವುಗಳ ಸುಲಕ್ಷಣಗಳಾದ ಅಗುಣಾಷ್ಟಾಂಗಗಳು ಅತ್ಯುತ್ತಮವಾಗಿರುವವು. ತನುಮುಖ್ಯದ ವಿರತಿಯೇ ಯಮ. ಘನ ನಿಜ ಪದರತಿಯೇ ನಿಯಮ. ಬಾಹ್ಯದುದಾಸೀನವೇ ಆಸನ, ಬಾಹ್ಯ ಕರಣಂಗಳಳಿವೇ ಪ್ರಾಣಾಯಾಮ. ಜಡವಿಮುಖತೆಯೇ ಪ್ರತ್ಯಾಹಾರ, ಪಡೆದ ನಿಜಸ್ಥಿತಿಯೇ ಧಾರಣೆ. ಪರವು ತಾನೆಂಬುದೇ ತದ್ಧ್ಯಾನ. ಪರಮಾತ್ಮನಲ್ಲಿಯೇ ಮನಮುಳುಗಲದೇ ಮೌನ.

ಈ ನಿರ್ಗುಣ ಯೋಗದ ಅನುಗುಣವಾಗಿ ಶುದ್ಧ ಬುದ್ಧಿಯಾಗಿರುವಾತನೇ ಯೋಗಿ. ಈ ಪುಣ್ಯಪುರುಷನು ದೇಹಾದಿಗಳ ಆತ್ಮತೆಗಳ ಕಳೆದು, ಊಹಿಸಲು ಯೋಗ್ಯವಾದ ಆತ್ಮವಿಚಾರತೆಯೊಳಿದ್ದು ಗುರುಗಳನ್ನು ಸೇವಿಸುವವನಾಗಿ, ಯಾವಾಗಲೂ ಸುವಿಚಾರ ಪರನಾಗಿ ಸಾರತರ ಶಾಸ್ತ್ರವನ್ನು ಕೇಳುತ್ತ ಘೋರ ಭವದ ಕೇಡಂ ಕಾಣುತ್ತ ಇರುವುದೇ ೨ನೇ ಭೂಮಿಕೆಯುಳ್ಳವನು. ಹಾಗು ಮನದ ವಿಕಲ್ಪಗಳನು ಅಳಿಯುತ್ತ ಸಕಲಾರ್ಥಗಳ ಬಿಡುತ್ತ ನಿಜಸುಖ ದೊರೆವ ಮಾರ್ಗವ ತೋರುವ ಗುರುವಿನ ವೇದ ರಹಸ್ಯವ ತಿಳಿಯುತ್ತ ಜೀವೇಶ್ವರರ ನಿಜ ಲಕ್ಷಣವರಿದು, ಒಂದರೊಳಾದ ಉಭಯಾಧ್ಯಾಸವನು, ಮುಂದೆ ಆ ಬಹು ವಿಧದ ಅಧ್ಯಾಸವನು, ಜೀವೇಶ್ವರರ ಏಕತ್ವದ ನಿಲವನು ಭಾವಿಸುತ, ಆ ಸಹಜಾತ್ಮನ ನಿಜವ ತಿಳಿವ ವಿಚಾರವೇ ಅಧ್ಯಾತ್ಮವಿಚಾರವು.

ಇಂತಪ್ಪ ಆತ್ಮ ವಿಚಾರಿಯು ಮುಟ್ಟದ ಹಾಗೆ, ಹೆರೆಯುಚ್ಚಿದ ಹಾವಿನ ಸುಖದಂತೆ ವೈರಾಗ್ಯದ ಬಲದಿಂದ ವಿಷಯ ಭ್ರಾಂತಿಗಳನುರೆ ಬಿಟ್ಟು ನಿರ್ವಾಸನೆಯುಳ್ಳವನಾಗಿ ಶಾಂತಿಮಯನಾಗಿ ಪೂರ್ವಾಶ್ರಯಂಗಳ ನಿರಸನ ಮಾಡಿ, ಗುರುವರನ ಕೃಪಾಕಟಾಕ್ಷದಿಂದ ತತ್ವಮಸೀತಿ ಮಹಾವಾಕ್ಯದ ವಾಚ್ಯ ಲಕ್ಷ್ಯಂಗಳಾದ ಜೀವ ಶಿವೈಕ್ಯ ಅರ್ಥಂಗಳ ತಿಳಿವವನಾಗಿ ಮಾಯಾದ್ಯುಪಹಿತ ತತ್ಪದವಾಚ್ಯ, ಕಾಯಾದ್ಯುಪಹಿತ ತ್ವಂ ಪದವಾಚ್ಯ, ಪರತರ ಬ್ರಹ್ಮನೇ ತತ್‌ಪದ ಲಕ್ಷ್ಯ, ತುರ್ಯ ನಿಜಾತ್ಮನೆ ತ್ವಂ ಪದ ಲಕ್ಷ್ಯ, ಉಭಯ ಪದದ ವಾಚ್ಯಾರ್ಥವ ಬಿಟ್ಟು, ಶುಭ ಲಕ್ಷ್ಯಾರ್ಥವ ಲಕ್ಷಿಸಿಕೊಟ್ಟು ಚಿದಖಂಡೈಕರಸವನರು ಹಿಡಿದು ಅದು ತಾನೆ ಅಸಿಪದದರ್ಥವೆನಿಪುದು. ಹೇಗೆ ಘಟಮಠಗಳೆರಡಂ ಬಿಚ್ಚಿದೊಡೆ, ದಿಟವಾದ ಆಕಾಶವು ಉಳಿಯುವಂತೆ, ಮಕುಟಾ ಕೃತಿಯುಳಿಯಲು ಮಿಸುನಿಯು ಗಟ್ಟಿ ಉಳಿವಂತೆ, ತತ್ಪದದ ಸರ್ವಜ್ಞತ್ವವನ್ನೂ ತ್ವಂ ಪದದ ಕಿಂಚಿಜ್ಞತ್ವವನ್ನೂ ಉಳಿದು, ಚೈತನ್ಯವೆರಲ್ಲಿಯೂ ಒಂದೆಂಬುದನು ತಿಳಿದು, ಲಕ್ಷಪದದ ಅರ್ಥವೇ ಅಕ್ಷಯ ಪದವೆನಿಸುವದು.

ಜೀವಾತ್ಮ ಪರಮಾತ್ಮರ ವಿಚಾರವು ಶಿವಶರಣರದಷ್ಟು ಗಮನಕ್ಕೆ ತರುವಾ.

ತನ್ನ ತಾನರಿವುದೇ ಪರಮಾತ್ಮಯೋಗ. ತನ್ನ ತಾ ಮರೆವುದೇ ಮಾಯಾ ಸಂಬಂಧ. ಅಂತರಂಗ, ಬಹಿರಂಗ, ಪರಮಾಕಾಶ ಮಧ್ಯದಲ್ಲಿ ಪರಮಾ

ತ್ಮನು ಪರಬ್ರಹ್ಮ ಸ್ವರೂಪನು ನಿತ್ಯ ನಿರಂಜನ ಉಪಮಾತೀತನು ನಿಷ್ಪತಿ ಕೇವಲ ನಿಃಕಲ ಸ್ವರೂಪನು. ಭ್ರೂಮಧ್ಯದಲ್ಲಿ ಪರಮಾತ್ಮನೇ ಅಂತರಾತ್ಮ ನೆನಿಸಿ ಸಕಲ ನಿಃಕಲನಾಗಿಪ್ಪನು. ಹೃದಯಸ್ಥಾನದಲ್ಲಿ ಪರಮಾತ್ಮನೇ ಜೀವಾತ್ಮನಾಗಿ ಕೇವಲ ಸಕಲನಾಗಿಪ್ಪನು. ಬ್ರಹ್ಮಸ್ಥಾನದಲ್ಲಿ ನಿಷ್ಕಲ ಗುರುಮೂರ್ತಿ. ಲಿಂಗವು ಭ್ರೂಮಧ್ಯದಲ್ಲಿ ನಿಷ್ಕಲ ಪರಂಜ್ಯೋತಿರ್ಲಿಂಗ. ಹೃದಯ ಸ್ಥಾನ ದಲ್ಲಿ ಕೇವಲ ಸಕಲ ಜಂಗಮಲಿಂಗ. ಇಂತೀ ಪರಮಾತ್ಮನೇ ಅಂತರಾತ್ಮ. ಪರಮಾತ್ಮನೇ ಜೀವಾತ್ಮ. ಬಹಿರಂಗದಲ್ಲಿ ಪರಮಾತ್ಮನೇ ಗುರುಲಿಂಗ, ಪರ ಮಾತ್ಮನೇ ಶಿವಲಿಂಗ. ಇಂತು ಪರಬ್ರಹ್ಮವೇ ಪರಮಾತ್ಮ, ಪರಮಾತ್ಮನೇ ಸರ್ವಾತ್ಮ, ಪರಮಾತ್ಮನೇ ಸರ್ವಗತ, ಪರಮಾತ್ಮನೇ ಆತ್ಮಗತ, ಇದು ಕಾರಣ ಪರಮಾತ್ಮನೇ ಅಂತರಂಗ ಬಹಿರಂಗ ಭರಿತ ಪ್ರಾಣಲಿಂಗ. ಇಂತ ರಿದುದೇ ಪರಮಾತ್ಮಯೋಗ. ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

೩ ನೇ ಭೂಮಿಕೆಯಾದ ನಿಸ್ಸಂಗದ ವಿಷಯವಾಗಿ ವಿಚಾರಿಸಲು ವೈರಾಗ್ಯ ಹಾಗು ಆತ್ಮವಿಚಾರಗಳ ಬಲದಿಂದ ವಿಷಯ ವಿಮುಖನಾಗಲು ಜ್ಞಾನದೃಷ್ಟಿಯು ಪ್ರಕಾಶಿಸಲು ಆ ಜ್ಞಾನಕ್ಕೆ ಬೀಜ ರೂಪ ಕಾರ್ಯಗಳುಂಟಾಗುವವು. ಶ್ರವಣಾದಿಕವೇ ಬೀಜ. ಶ್ರುತಿಗೇಳ್ದು ಯುಕ್ತ್ಯನು ಯೋಗದಿಂದ ಅಹಮಾತ್ಮರನು ಸಹಜವಾಗಿ ಪ್ರಥಕ್ಕರಿಸುವದು ರೂಪ. ಮತ್ತು ಆಹಮ್ಮಿ ನೊಳಿರ್ದ ಸಂಸಾರಮೋತ್ತಿನೊಳು ಬರುತಿರುವ ದುಃಖವಿಚಾರ ತೋರಿದೊಡೆ ಅದಕ್ಕಾನು ಸಾಕ್ಷಿಕನೆಂದೂ ಬೇರೆ ಅದರಿಂದವೆ ಸುಖಿ ಚಿನ್ಮಯನೆಂಬುದೇ ಕಾರ್ಯವೆಂದು ನಂಬುವದು ನಿಸ್ಸಂಗತ್ವವು.

ಈ ಮೂರನೇ ಭೂಮಿಕೆಯಲ್ಲಿ ಸಾಮಾನ್ಯಾಸಂಗ, ವಿಶೇಷಾಸಂಗವೆಂದು ಎರಡು ವಿಧವು. ಬಾಹ್ಯ ವಿಷಯಗಳ ಚಿಂತೆಯಿಲ್ಲದ ನಿರರ್ಥಕ ಗೋಷ್ಠಿಗಳ ನತಿಗಳೆದ ನಿಜವೈರಾಗ್ಯದ ಬಲದಿಂದ ಸುಜನರ ಗೋಷ್ಠಿಗಳನ್ನನುಸರಿಸಿ ಸುವಿ ಚಾರವೆಂಬ ಭಸಿತದಿಂದ ಬುದ್ಧಿಯೆಂಬ ಕನ್ನಡಿಯನ್ನು ಬೆಳಗಿ, ವಿಷಯ ವೆಂಬ ಮಲಿನ ಪೋಗಲು ಆ ಕನ್ನಡಿಯನ್ನು ಇದಿರಿಟ್ಟು ನೋಡಿದಾಗಲೇ ಬಚ್ಚ ಬರಿಯ ಸಮುಸುಖವೆನಿಸಿರ್ದ ನಿಜವೇ ತೋರುವದು. ಅದುವೇ ತಾನು ಸದ್ರೂಪವು ಚಿದ್ರೂಪನೆನಿಸುನನು. ಈತನೇ ಸಕಲ ನಿಷ್ಕಲನು. ಹಾಗು ಸಾಮಾನ್ಯಾಸಂಗನು. ಆ ತೋರಿದ ನಿಜವು ತನ್ನಲ್ಲಿ ಸದಾ ಸನ್ನಿಹಿತವಾದರ್ದೇ ವಿಶೇಷಾಸಂಗವು. ಅದುವೇ ಕೇವಲ ನಿಷ್ಕಲವೂ, ಚಿದ್ರೂಪವೂ, ಚಿನ್ಮಯವೂ ಸರಿ.

ಈ ಬಗ್ಗೆ ಶಿವಶರಣರ ಅನುಭವವು—.

ಸಂಕಲ್ಪವೆಂಬ ಸಂಕೋಲೆಯು ಹರಿಯಿತ್ತಯ್ಯ, ಕಾಮವೆಂಬ ಕಂಬ ಕಿತ್ತೀಡಾಡಿತ್ತಯ್ಯ, ಮಾಯೆಯೆಂಬ ಮಾವತಿಗನ ಮೀರಿತ್ತು. ಆಶೆಯೆಂಬ ಅಂಕುಶಕ್ಕೆ ನಿಲ್ಲದು. ಮಾಯಾಪಾಶವೆಂಬ ಪಾಯದಳ ಅಂಜಿ ಓಡಿತ್ತು. ಮದಗಜವೆಂಬ ಆನೆ ಉಳಿದ ಬಳಿಕ ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗ ದಲ್ಲಿ ಆನೆ, ಆನೆ, ಎಂಬುದೇನೋ ಇಲ್ಲದೆ ಹೋಯಿತ್ತು.

ವೈರಾಗ್ಯ ಬಲಿತು ಜಡಾಜಡಗಳನ್ನು ವಿಂಗಡಿಸಿ, ಜಡಗಳನ್ನುಳಿದು ಅಜಡವು ಆವರಿಸಿ, ಮನವು ಸುಸ್ಥಿರಗೊಳ್ಳುವ ಗುರೂಪದೇಶದಿಂದ ನಿಸ್ಸಂಗದ ನಿಜತ್ವವು ಶಾಸ್ತ್ರಾಧಾರದಿಂದ ಹಾಗು ನಿಜಾನುಭವದಿಂದ ಮತ್ತು ಸದ್ಬುದ್ಧಿ ಯಿಂದ ಜಾಗರಣದೊಳು ಮನವರಿಕೆಯಾಗಿ ಮುಂದೆ ಶಿಷ್ಯನು ೪ನೇ ಭೂಮಿ ಕೆಯಾದ ವಾಸನಾಕ್ಷಯದಿಂದಾಗುವ ಪರಿಯ ಕೇಳುವವನಾಗುವನು.

೪ನೆಯ ಭೂಮಿಕೆ:—

ಬಳಿಕಾ ಭೂಮಿತ್ರಯುಗಳ್ ಬಲಿದು । ತಿಳಿವಿನ ಸುಖದನುಭವದೊಳು ನಲಿದು ॥
ಎಲ್ಲಾ ಯಿಂದ್ರಿಯದೊಲವಂ ಜರಿದು । ಎಲ್ಲಾ ವಿಷಯದ ಮತಿಯಂ ಮರೆದು ॥
ಜಗದಾಭಾಸಂ ತೋರುತ್ತಿಹುದು । ನೆಗಳಿದ ವಾಸನೆ ಲಯಿಸುತ್ತಿಹುದು ॥
ಅದರಿಂದದನು ವಿಲಾಯಿನಿಯೆಂದು । ಚದುರ್ಪೇಳುವರಾ ದಶ ಬಂದು ॥
ನೆಲಿಸಲು ಯೋಗಿಯ ಮತಿ ಧೃಡವಾಗಿ । ಚಲಿಸದೆ ತೋರ್ಪುದು ಸುಖಮಯ ವಾಗಿ ॥ ಅದು ತದ್ಧ್ಯಾನಿಗೆ ತಿಳಿಕನಸಕ್ಕು । ಅದು ನಾಲ್ಕನೆಯ ಸುಭೂಮಿಕೆ ಯಕ್ಕು ॥೧॥

ವೀರಶೈವ ಷಟ್‌ಸ್ಥಲಗಳಲ್ಲಿ ೧ನೇ ಭೂಮಿಕೆಯು ಭಕ್ತಸ್ಥಲದಲ್ಲಿಯೂ ೨ನೇ ೩ನೇ ಭೂಮಿಕೆಗಳು ಮಹೇಶಸ್ಥಲದಲ್ಲಿ ೪ನೇ ಭೂಮಿಕೆಯು ಪ್ರಸಾದಿ ಸ್ಥಲದಲ್ಲಿ ವ್ಯಕ್ತವಾಗುವವು. ಇವು ೪ ಭೂಮಿಕೆಗಳು ಅಥವಾ ಮೂರು ಸ್ಥಲಗಳು ಮಾರ್ಗಕ್ರಿಯೆಯಲ್ಲಿ ಬರುವವು.

ಶಬ್ದ, ಸ್ಪರ್ಶ, ರೂಪು, ರಸ, ಗಂಧ ಪಂಚೇಂದ್ರಿಯಗಳೆಲ್ಲ ಏಕಾಕಿ ಗಳಾಗಿರ್ದವು. ತಮ್ಮೊಳಗೆ ತಾವು ಹರಿಯದೆ ಏಕಾಕಿಗಳಾಗಿರ್ದವು. ಸಕ ಳೇಶ್ವರ ದೇವರಲ್ಲಿ ಪರಿಣಾಮ ಪ್ರಸಾದವ ಪದವಿಯ ಪಡೆದನಾಗಿ ಎನ್ನೊ ಡನೆ ಹುಟ್ಟಿ ನೀವೆಲ್ಲ ಸುಖಿಗಳಾದಿರಯ್ಯ ಎಂಬದಾಗಿ ಶಿವಶರಣರಾನು ಭವವು.

ಇನ್ನು ೫ನೇ ಭೂಮಿಕೆಯಾದ ಆನಂದಿನಿ—

ಸರ್ವ ದ್ವೈತವನಳಿದುಳಿದಿರ್ದ | ನಿರ್ವ್ಯಾಪಾರವೆ ವ್ರೈಯಾಗಿರ್ದ ||
ಯೋಗಿವಿಷಯದ ಸಂಕಲ್ಪನೆಯಳಿದು| ಆಗಳೆ ಪೂರ್ಣಾಹಂಕೃತಿದಳೆದು ||
ಆ ಸಂಸೃತಿ ವಾಸನೆ ಪೋಗಿ | ಓಸರಿಸದ ನಿಜಸುಖ ತಾನಾಗಿ ||
ಸಂತತಂತರ್ಮುಖನಾಗಿಹನು| ಚಿಂತಿ ಸದಾ ಸುಖಮೂರ್ಛೆಯೊಳಿಹನು||
ಒರ್ಮ್ಮೊರ್ಮ್ಮೆ ಬಹಿರ್ಮ್ಮುಖನಾದಂದು| ನೆರ್ಮ್ಮಿದ ನಿಜಸುಖಮುದು ಬಳಿಸಂದು||
ಸಂಚರಿಪಂ ಪರವಶನೆಂತಂತೆ| ಪಂಚಮ ಪದವಿದು ಸುಪ್ತಿಯುಮಂತೆ ||೧||

೪ನೇ ಸ್ಥಲವಾದ ಶಿವಶರಣಾನುಭವವು:—

ಸ್ಥೂಲ ತನುವ ಬಿಟ್ಟು ಕಂಡಿಹೆನೆಂದಡೆ ನೀನೇ ಪ್ರಮಾಣು, ಕ್ರಿಯಿಡಿದು ಅಂಗದಲ್ಲಿ ನಿಂದ ಕಾರಣ. ಸೂಕ್ಷ್ಮ ತನುವನೊಲ್ಲದೆ ನಿನ್ನ ನೋಡಿ ಕಂಡೆಹೆನೆಂದಡೆ ನೀವೇ ಪ್ರಮಾಣು. ಭಾವದ ಕೊನೆಯ ಅರ್ಚಿಸಿಕೊಂಬೆಯಾಗಿ. ಕಾರಣ ತನುವ ಮರೆದು ನಿನ್ನ ನೋಡಿ ಕಂಡೆಹೆನೆಂದಡೆ ನೀವೇ ಪ್ರಮಾಣು, ಚಿದಂತ್ಯ ಚಿತ್ಪ್ರಕಾಶದ ಬೆಳಗಿನಲ್ಲಿ ಕಟ್ಟುವಡೆದೆಯಾಗಿ. ಇಂತೀ ಜಾಗ್ರದಲ್ಲಿ ಕ್ರಿಯಾವಂತನಾಗಿ ಸ್ವಪ್ನದಲ್ಲಿ ಆತ್ಮಸ್ವರೂಪನಾಗಿ ಸುಷುಪ್ತಿಯಲ್ಲಿ ಮೂರ್ಛೆಯಿಂದ ಅಮೂರ್ತಿಯಾಗಿ, ವಿರಳಕ್ಕೆ ವಿರಳನಾಗಿ ಪರಿಪೂರ್ಣ ವಸ್ತು ನೀನಲ್ಲಾ, ಭಕ್ತಿಕಾರಣನಾಗಿ, ಶಂಭುಗಿಂದತ್ತ ಸ್ವಯಂಭುಗಿಂದಿತ್ತ ಅತಿಬಳ ನೋಡಾ. ಮಾತುಳುಗ ಮಧುಕೇಶ್ವರಾ.

ಇನ್ನು ೬ನೇ ಭೂಮಿಕೆಯಾದ ತೂರ್ಯವು—

ಆನಂದಿನಿಯೆಂಬ ಭೂಮಿಯೊಳು | ತಾನಭ್ಯಾಸಿಗೆ ಮೇಲ್ಭೂಮಿಯೊಳು||
ಆನಂದಾವಿರ್ಭವ ಮನವ | ಆನಂದದೊಳಡಗಿಸು ತನ್ಮನವ ||
ಮಾಡಲು ನಿರ್ವಾಸನೆ ಚಿತ್ತಾಗಿ | ಕೂಡ ದ್ವೈತಂ ದ್ವೈತಂ ಪೋಗಿ||
ಏನುಂ ತೋರದೆ ಬರಿ ಬಯಲಾಗಿ | ಆನಂದದ ಪರ್ಣವೆ ತಾನಾಗಿ||
ವರ ಚಿತ್ರದ ದೀಪದ ತೆರನಕ್ಕು | ತುರಿಯ ವಿದಾರನೆಯುವನಿಯಕ್ಕು||
ಆತನು ಪರಪದವಾಗಿರುತಿಹನು | ಆತನ ಖಂಡೈಕರಸಂ ತಾನು ||೧||

೫ನೇ ಸ್ಥಲಾಚರಣೆಯ ಶರಣಸ್ಥಲಾನುಭವವು –

ಗಮನ ನಿರ್ಗಮನಕೆ ಗಮನ ನಿರ್ಗಮನವಾಯ್ತು |
ಘನಕೆ ಘನವು ನಿರ್ಗಮನವಾಯಿತ್ತು ||
ಘನಸ್ನೇಹವಳಿದು ತಾನೇ ತಾನಾದಲ್ಲಿ |
ಮನಕಗೋಚರವಾದ ಪರವು ತಾನೆ ||೧||

—ಶ್ರೀ ಪ್ರಭುದೇವರ ಮಂತ್ರಗೋಪ್ಯ.

ಭಾವಾರ್ಥ:— ಜ್ಞಾನಕ್ರಿಯೆಯಿಂದ ಆಚರಿಸುತ್ತಿರ್ಪ ಶರಣನೇ ಗಮನ ಸ್ವರೂಪು. ಲಿಂಗವೇ ನಿರ್ಗಮನ ಸ್ವರೂಪು. ಶರಣನುಮಿಸುತ್ತಿರುವ ಗಮನವು ನಿರ್ಗಮನದ ಲಿಂಗದೆಡೆಗೆ. ಹೀಗೆ ಅರಿವು ಹಿಡಿದುಗಮಿಸುತ್ತಿರುವ ಶರಣನು ಅರಿವಿಂಗೆ ತೆರಹಿಲ್ಲದ ಘನಲಿಂಗವನು ತಿಳಿದು ಭಿನ್ನವಿಡದೆ ಶಿವೋಹಂ ಎಂಬ ಇರುವಿಕೆಯ ತೂರ್ಯಾವಸ್ಥೆಯಿಂದ ಗಮನವು ನಿಂದು ನಿರ್ಗಮನ ಲಿಂಗವೇ ಆದುತ್ತಿರುತ್ತಾನೆ. ಹೀಗೆ ಅಭಿನ್ನತೆಯಿಂದ ಘನಕ್ಕೆ ಘನವಾದ ಮಹಾ ಘನದ ಅರಿವು ಘಟಿಸಿ ನಿರ್ಗಮನಿಯಾಗಿ ನಿಂದ ಶರಣನಲ್ಲಿ ಭಿನ್ನವಿಲ್ಲ ದಿರುವ ಮಹಾಘನ ಲಿಂಗವು ನಿರ್ಗಮನ ಸ್ವರೂಪದಲ್ಲಿಯೂ ಭಕ್ತಿಮುಖದಲ್ಲಿ ಗಮಿಸುತ್ತಿದ್ದ ಲಿಂಗವು ಗಮನ ಸ್ವರೂಪದಲ್ಲಿಯೂ ನಿಂದಿತ್ತು. ಹೀಗೆ ಅರಿವ ಅರುಹಿಸಿಕೊಂಬುವ ಎರಡನ್ನೂ ಅಳಿದು, ಅಭಿನ್ನ ಜ್ಞಾನದಿಂದ ಶಿವೋಹಂ ಎಂದು ಕಡೆಗೆ ಶಿವಸುಖವನು ತಿಳಿವುತಿರ್ಪ ಅರಿವು ಅಡಗಿ ನಿಂದ ಶರಣನು ತಾನೇ ಶಿವತತ್ವದ ಉಳಿಮೆಯೂದಲ್ಲಿ ಆ ಶರಣನ ಹಸ್ತದಲ್ಲಿದ್ದ ಮನಕೆ ಅಗೋಚರವಾಗಿದ್ದ ಲಿಂಗದ ಪರಮ ಕಳೆಯ ಕುರುಹು ತಾನೆಯಲ್ಲದೆ ಭಿನ್ನ ಕುರುಹುವಿಡಿದು ಗಮಿಸುವ ಗಮನವಲ್ಲ. ಶರಣನ ಕ್ರಿಯೆಯಲ್ಲವೂ ನಿಃಕ್ರಿಯೆಯಾಗಿರುವ ಅಖಂಡ ಲಿಂಗವೇ (ಮನಗೋಚರವಾದ ಪರವು ತಾನೆ)

ಸಾರಾಂಶಃ--- ಮರಣಾವಸ್ಥೆಯಂ ಪಡೆದಂತೆ ವ್ಯಾಪಾರ ಶೂನ್ಯನಾಗಿದ್ದರೂ ನಿತ್ಯನಾಗಿ, ಮನೋವ್ಯಾಪಾರವಿಲ್ಲದೆಯೂ ಶಾಂತನಾಗಿ, ಅಹಂಕಾರ ಮಮಕಾರವಿಲ್ಲದೆಯೂ ಸುಖದುಃಖ ಮೋಹಾತ್ಮಕ ಗುಣತ್ರಯದ ವಾಸನೆಯಿಲ್ಲದೆಯೂ ಹೃದಯ ಸ್ಥಾನವದ್ನು ಮೀರಿದುದೇ ತೂರ್ಯಾವಸ್ಥೆಯು.

೭ನೇ ಭೂಮಿಕೆ ತೂರ್ಯಾತೀತವುಃ—

ಆಗಳೆ ಪರಮಾತ್ಮನು ತಾನಾಗಿ । ಯೋಗಿ ಮಗುಳೆ ವರ್ತಿಪನಂತಾಗಿ ॥
ತಾನೇ ತನ್ನೊಳು ವ್ಯವಹರಿಪಂತೆ । ಜಾನಿಸೆ ತೆರೆ ಜಲದೊಳು ಸುಳಿವಂತೆ ॥
ಶರೀರ ಸಂಪಿಗೆಯುಂಡಳಿಯಂತೆ । ಉರುಳುವುದಾರಬ್ಧ ಸವೆದಂತೆ ॥
ಸಪ್ತಮಪದವಿದು ತೂಯಾತೀತ । ಕ್ಲುಪ್ತಿರಹಿತ ವಾಙ್ಮನಸಾತೀತ ॥
ಸತ್ತೆನಲಿಲ್ಲವ ಸತ್ತೆನಲಿಲ್ಲ । ಚಿತ್ತೆನಲಿಲ್ಲವ ಚಿತ್ತೆನಲಿಲ್ಲ ॥
ಅದು ಕೇಳ್ಬಾವಕೆ ಗೋಚರಮಲ್ಲ । ಅದರಿಂ ನಿಜವಂತಿಂತೆನಲಿಲ್ಲ ॥೧॥

ಷಟ್‌ಸ್ಥಲಗಳ ನೂರೊಂದು ಸ್ಥಲಗಳಲ್ಲಿ ಅಡಕವಾದ ಜ್ಞಾನ ಶೂನ್ಯಾನುಭಾವವು ಕೆಳಗಿನಂತೆ:—

ನಾನು ನೀನು ಅರಿದೆ ಮರೆದೆ, ಅಳಿದುಳಿದೆನೆಂಬ ಸಂಶಯಭ್ರಮೆ, ಆ ತತ್ವವು ತತ್ವವಿವೇಕದ ಭ್ರಮೆ, ಸ್ಥೂಲ ಸೂಕ್ಷ್ಮ ವಿಪರೀತ ಭ್ರಮೆ, ಪುಣ್ಯಪಾಪ ಸ್ವರ್ಗ ನರಕ ಬಂಧ ಮೋಕ್ಷ ಪ್ರವರ್ತಕ ನಿವರ್ತಕ ಯೋಗ ದಾಶಿಯ ಸಿಲಕುಭ್ರಮೆ, ಅಂತರ್ಮುಖ ಭ್ರಮೆ, ಅದ್ವೈತ ಭ್ರಮೆ, ಮಂತ್ರ ಭ್ರಮೆ, ಆದಿಷಟ್ಕರ್ಮ ಹುಸಿಜೀವ ಪರಮೈಕ್ಯ ಸಂಧಾನ ಭ್ರಮೆ, ನಾಹಂ ಭ್ರಮೆ, ಕೋಹಂಭ್ರಮೆ, ಸೋಹಂ ಭ್ರಮೆ, ತತ್ವವೇಷ್ಟಿತ ಜಗಕ್ಕೆಲ್ಲ ಮಾಯಾಮಯಂ ಕೂಡಲಸಂಗಾ ನಿಮ್ಮ ಶರಣಂಗೆ ಆವ ಭ್ರಮೆಯೂ ಇಲ್ಲ.

ಈ ವಚನದ ಶರಣಾನುಭವದಿಂದ ಸಪ್ತಭೂಮಿಕೆಗಳು ಮಾನವನಿಗೆ ಅಳವಡಲು ಅತಿ ಕಷ್ಟ ; ಆದ್ದರಿಂದ ಜಗತ್ತು ಜೀವಶಿವರುಗಳಲ್ಲಿ ತೋರುವ ಶಿವತತ್ವದ ಜ್ಞಾನವು ಪಂಚಾಚಾರ, ಅಷ್ಟಾವರಣ, ಲಿಂಗೈಕ ನಿಷ್ಠೆಗಳಿಂದ ಸಂಸಾರದೊಳಗಿದ್ದುಕೊಂಡೇ ಕೆಸರೊಳಗಿನ ಕಮಲದೋಪಾದಿಯಲ್ಲಿ ನಿಃಪ್ರಪಂಚಿಯಾಗಿ ಆತ್ಮತತ್ವ ೨೫ ವಿದ್ಯಾತತ್ವ ೧೦ ಶಿವತತ್ವ ೧ ಅಂತು ೩೬ ತತ್ವ ಜ್ಞಾನಿಯಾಗಿ ಅಂಗಸ್ಥಲದ ೪೪ ಲಿಂಗಸ್ಥಲದ ೫೭ ರ ಪ್ರಭೇದವರಿಯುತ್ತ ಮೊದಲು ಭಕ್ತಸ್ಥಲಾಚರಣೆಯಲ್ಲಿ ಆಸಕ್ತನಾಗಿ ತನ್ನ ಶರೀರದಲ್ಲಿ ಇಷ್ಟ ಪ್ರಾಣ ಭಾವಲಿಂಗಗಳ ಸ್ಥಳಕುಳಗಳನ್ನರಿತು ಗುರುಲಿಂಗಜಂಗಮಗಳಲ್ಲಿ ಭಕ್ತಿಯನ್ನು ವಹಿಸುತ್ತಲಿದ್ದು ಸತ್ಕಾಯಕ ವಹಿಸಿದ್ದಾದರೆ ಲಿಂಗಾಂಗ ಸಮರಸವು ಕೈಗನ್ನಡಿಯಂತೆಂಬುದು ಕೆಳಗಿನ ವಚನದಿಂದ ಸಹಜಗೊತ್ತಾಗುವದು.

ಪೃಥ್ವಿ, ಸಲಿಲ, ಪಾವಕ, ಪವನ, ಅಂಬರ ಸೂರ್ಯ, ಚಂದ್ರ, ಆತ್ಮರೆಂಬ ಅಷ್ಟತನುವ ಭೇದಿಸಿ, ಶ್ರೋತ್ರ, ನೇತ್ರ, ಘ್ರಾಣ, ಜಿಹ್ವೆ, ತ್ವಕ್ಕುಗಳೆಂಬ ಪಂಚೇಂದ್ರಿಯಂಗಳನರಿದು, ವಾಕ್ಕು ಪಾಣಿ ಪಾದ ಗುದ ಗುಹ್ಯವೆಂಬ ಕರ್ಮೇಂದ್ರಿಯಗಳನ್ನು ತೊರೆದು, ಪ್ರಾಣಾಪಾನ, ವ್ಯಾನ ಉದಾನ, ಸಮಾನ, ನಾಗಕೂರ್ಮಕೃಕಚ ದೇವದತ್ತ, ಧನಂಜಯವೆಂಬ ದಶವಾಯುಗಳ ಸಂಚವ ಮುರಿದು, ಮನ ಬುದ್ಧಿ ಚಿತ್ತ ಅಹಂಕಾರವೆಂಬ ಚತುಃಕರಣಂಗಳನೊಂದು ಮಾಡಿ, ಜ್ಞಾನವನೆ ಬೆಳಸಿ, ಧ್ಯಾನವ ನೆಲೆಗೊಳಿಸಿ, ಚಿತ್ತ ಸುಯಿಧಾನವಾಗಿ, ನಿಜಸಂಧಾನದ ಸಮಾಧಿಯಲ್ಲಿನಿಂದು, ಲಿಂಗಾರ್ಚನೆಯಂ ಮಾಡುವ ಶಿವಶರಣರ ಪಾದವ ತೋರಯ್ಯ. ॥ ಸಾಕ್ಷಿ ॥ "ವ್ಯಾಪಾರಂ ಸಕಲಂ ತ್ಯಕ್ತ್ವಾ ಸರುದ್ರೋ ರುದ್ರಮರ್ಚಯೇತ್" ಎಂಬ ಶ್ರುತಿ ನಿಮ್ಮ ಶರಣರಿಗೆ ಸಂದಿತ್ತು ಕೂಡಲಚನ್ನಸಂಗಮದೇವಾ.

ಹುನ್ನೂರ ಪ್ರಾಥಮಿಕ ಶಾಲಾ ಇಮಾರತು ತೀರ ಸಣ್ಣದಿದ್ದು ಪ್ರತಿಯೊಂದು ಕ್ಲಾಸನ್ನು ಮೂರು ಮೂರು ತಾಸೇ ಹಾಕುತ್ತಿದ್ದಾರೆ. ಈ ಅಡಚಣಿಯನ್ನು ಯಾರೂ ದೂರಮಾಡಿದ್ದಿಲ್ಲ. ಪ್ರಮುಖರಲ್ಲಿ ಇಬ್ಬಣವು ಕಂಡು ಬರುತ್ತಿತ್ತು. ಈ ಸ್ವಾಮಿಗಳ ಆಗಮನದಿಂದ ಸಮಾಜವು ಏಕೀಕರಣ ಮಾಡಲ್ಪಟ್ಟು ಒಂದು ವಾರದಲ್ಲಿ ಅಜಮಾಸು ೭ ಸಾವಿರ ರೂಪಾಯಿಗಳು ರೋಖ ವಸೂಲಾಗಿ ಆರು ಸಾವಿರ ರೂಪಾಯಿಗಳು ವಿಜಾಪುರ ಸರಕಾರಿ ಟ್ರೇಝರಿಗೆ ಜಮಾಮಾಡಲ್ಪಟ್ಟವು. ಒಂದು ಸಾವಿರ ರೂಪಾಯಿಗಳಿಂದ ಜ್ಞಾನಮಂದಿರದ ಹಿಂಭಾಗದಲ್ಲಿ ಬ್ರಹ್ಮಚಿಂತನೆಗೂ ಶಿವಯೋಗಕ್ಕೂ ನೆಲಮನೆ ಮೇಲ್ಪನೆಗಳನ್ನು ಕಟ್ಟುವ ಕೆಲಸವು ಭರದಿಂದ ಸಾಗಿದೆ. ಇವೆಲ್ಲ ಮಹಾತ್ಮರ ಮಹಾನುಭಾವದ ಫಲವೇ ಸರಿ.

ಈ ಶ್ರಾವಣಮಾಸದಲ್ಲಿ ತೇರದಾಳ ಜಮಖಂಡಿ ಮಹಾಲಿಂಗಪುರಗಳಲ್ಲಿ ಶಾಸ್ತ್ರಾನುಭವವು ನಡೆದು ಸರ್ವಸಮಾಜದ ದೃಷ್ಟಿಯು ಇಹಪರಗಳಲ್ಲಿ ಪಸರಿಸಿದ್ದು ಶುಭಸೂಚಕವೇ ಸರಿ.

ಮಾನವರಿಗೆ ಜಾಗ್ರ ಸ್ವಪ್ನ ಸುಷುಪ್ತಿಗಳೆಂಬ ಮೂರವಸ್ಥೆಗಳು ತಮ್ಮಿಂದ ತಾವೇ ತೋರಿ, ಸಂಸಾರಾತ್ಮಕವಾಗಿಹವು. ಮಿಕ್ಕ ತೂರ್ಯ ತರ್ಯಾತೀತವೆರಡವಸ್ಥೆಗಳು ಯೋಗಾಭ್ಯಾಸದಿಂದ ಜನಿಸಿ ಮುಕ್ತಿಸಾಧನಗಳಾಗಿರುವವು. ಈ ಅವಸ್ಥೆಗಳು ಗುರುಕೃಪೆಯಿಂದರಿದು ಜೀವನ್ಮುಕ್ತರಾಗಬೇಕು.

# ಪುರುಷಾರ್ಥಗಳ ಸಾಧನ ಹಾಗೂ ಜೀವನ

ಶ್ರೀ ನಿ. ಪ್ರ. ಸ್ವ. ಶ್ರೀ ಗುರುಶಾಂತಲಿಂಗ ಮಹಾ ಸ್ವಾಮಿಜಿ ವಿರಕ್ತಮಠ, ದುಧನಿ.

ಇವರ ಪ್ರಸಾದವಾಣಿ.

( ಸಂಗ್ರಾಹಕ— ಸುರೇಶ ಹೊಸಟ್ಟಿ )

---

" ಧರ್ಮಾರ್ಥ ಕಾಮ ಮೋಕ್ಷಾಣಾಂ ಯಶಯಿತೋಽಸಿನವಿದ್ಯತೆ ।
ಅಜಾಗಲಸ್ತನಸ್ಸೇವ । ತಸ್ಯ ಜನ್ಮ ನಿರರ್ಥಕಂ "

ಮಾನವನು ತನ್ನ ಜೀವಿತದ ಅವಧಿಯನ್ನು ಕಳೆಯುವಾಗ ಪುರುಷಾರ್ಥಗಳ ಅರ್ಥವನ್ನು ಹಿಗ್ಗಿಸಿ ಪ್ರಸಾದ ಮತ್ತು ಹಸಾದವಾದ ದಿವ್ಯ ಮಾರ್ಗವನ್ನು ಅನುಸರಿಸಬೇಕೇ ಹೊರತು ಅರ್ಥವನ್ನು ಕುಗ್ಗಿಸಿ ಅಧೋಮುಖಿಯಾಗಿ ಅನುಕೂಲ್ಯಸಿಂಧುವಾಗಿ ಅಧಃಪತನದ, ಅವಿಚಾರದ, ಅವಿವೇಕಯುಕ್ತ, ಅರ್ಥ ವಿಹೀನವಾದ ಹುರುಳನ್ನು ಹೊಟ್ಟಾಗಿಸುವದರಲ್ಲಿ ಬೆಲೆಯಿಲ್ಲ. ಸಾಮಾನ್ಯವಾಗಿ ಬಹುಜನರು ತಿಳಿದುಕೊಂಡ ಪುರುಷಾರ್ಥಗಳೇ ಬೇರೆ. ಸಾಂಪ್ರದಾಯದ ಪುರುಷಾರ್ಥಗಳೆಂದರೆ ಧರ್ಮ, ಅರ್ಥ, ಕಾಮ, ಮೋಕ್ಷವೆಂದು ಇಟ್ಟುಕೊಂಡಾಗ ಅವನ್ನಾದರೂ ಎಷ್ಟರ ಮಟ್ಟಿಗೆ ಶುದ್ಧೀಕರಿಸಿ, ಆಚರಿಸಿ, ಅನುಭವಿಸಿ ಲಿಂಗಾಂಗಸಾಮರಸ್ಯ ಪಡೆಯುವರೋ ತಿಳಿಯದು. ಇವುಗಳನ್ನು ಸಾಧಿಸದವನು " ಆಡಿನ ಕುತ್ತಿಗೆಯ ಕೆಳಗಿನ ಮೊಲೆಗಳಂತೆ ವ್ಯರ್ಥ " ವೆಂದು ಸುಜ್ಞನರು ಹೇಳಿದುದು ಸೂಕ್ತವಾದುದು.

ಈಗ ಧರ್ಮದ ವಿಷಯವಾಗಿ ಮಾತನಾಡುವಾಗ ಧರ್ಮವೆಂದರೆ ಒಂದು ಕಟ್ಟುನಿಟ್ಟಿನ ಸಂಕುಚಿತ ಪ್ರವೃತ್ತಿಯ ಆಚರಣೆ ಎಂದು ಕೆಲವರು ತಿಳಿದುಕೊಂಡರೆ ಮತ್ತೆ ಕೆಲವರು ವೇಷ ಭೂಷಣದಿಂದ ಸಮಾಜದ ವೈಶಿಷ್ಟ್ಯವನ್ನು ಪ್ರತಿಪಾದಿಸಿ ಇಂಥ, ಇಂಥವರ ಎಂದು ಒಂದು ಪಕ್ಷೀಯ ಏಕಧ್ವನಿಯನ್ನು ಉಬ್ಬುಬ್ಬಿ ಹೇಳಿ ಅದರ ಹೆಸರಿನಲ್ಲಿ ಹೊಟ್ಟೆ ಹೊರೆದುಕೊಂಡು ಕಾಲ ಕಳೆಯುವ ಮಬ್ಬುಗಳಿಗೇನು ಕೊರತೆಯಿಲ್ಲ. ಮುಸ್ಲೀಮರು ತಮ್ಮ ಧರ್ಮಾಚರಣೆಯನ್ನು ತಾವು ಆಚರಿಸುವರು. ದಾಡಿ, ಮೀಸೆ, ಪಂಜೆ ಹೀಗೆ ಅವರನ್ನು ನೋಡಿ ಕೂಡಲೇ ಇವರು ಇದೇ ಧರ್ಮದವರು ಎಂದು ಎತ್ತಿ

ತೋರಿಸುವಂತಾದರೆ ಮುಗಿಯಲಿಲ್ಲ. ವೀರಶೈವರು, ಲಿಂಗಾಂಗಿಗಳು, ಭಸ್ಮ ಧಾರಣರು, ಬ್ರಾಹ್ಮಣರು, ಜನಿವಾರ, ಹೀಗೆ ಅನೇಕ ಜಾತಿಮತಗಳ ಸಾಂಪ್ರ ದಾಯಗಳು ಏನೇ ಇದ್ದರೂ ಸಹ ಎಲ್ಲರೂ ಪಾಲಿಸಬೇಕಾದ ಧರ್ಮದ ನಿಯಮಗಳು ಇವೆ. ಅವೆಲ್ಲವನ್ನು ಬಿಟ್ಟು ಬಾಹ್ಯಾಚರಣೆಯನ್ನು ಮೇಲು ಮಾಡಿ ದೊರೆಯುವ ಮಾನವರಿಗೆ ಧರ್ಮದ ನಿಜವಾದ ಅರ್ಥ ಹೊಳೆಯದು.

ಹಾಗಾದರೆ ಯಾವುದು ಧರ್ಮ ? ಧರ್ಮವನ್ನು ಪ್ರತಿಪಾದಿಸುವ ಶಬ್ದ ಸಂಪತ್ತಿಯಿಂದ ವ್ಯಾಕರ್ಣ ತೀರ್ಥರಾಗಿ ಮಾತಾಡಿದರೆ ತೀರಿತೇ ? ಅದು ಎಂದೂ ಅಲ್ಲ. ಆಡುವದು, ಮಾಡುವದು, ಎರಡೂ ಜೀವನದ ಹೊರ ಮತ್ತು ಒಳಗಿನ ಶಕ್ತಿ ಇದ್ದಹಾಗೆ. "ಸಕಲ ಜೀವಾತ್ಮರಿಗೂ ಲೇಸನೇ ಬಯಿ ಸುವದು ಧರ್ಮ. ಸತ್ಯ ನುಡಿಯುವದೇ ಧರ್ಮ; ಆಚಾರವೇ ಧರ್ಮ; ಮಾನವ ಕುಲವೇ ಧರ್ಮ; ಪರಧನ, ಪರಸ್ತ್ರೀ, ಪರಪೀಡೆ, ಪರನಿಂದೆಗ ಳಿಂದ ವಿಮುಕ್ತನಾಗುವದೇ ಧರ್ಮ. ಅಹಿಂಸೆಯೇ ಧರ್ಮ; ಲಿಂಗ ಮೆಚ್ಚಿ ನಡೆಯುವದೇ ಧರ್ಮ; ಗುರು ಲಿಂಗ ಜಂಗಮ ಆರಾಧನೆಯೇ ಧರ್ಮ. ಶರಣರ, ಸಂತ ; ಸಾಧುಗಳ, ಫಕೀರರ ಸಹವಾಸ ಮಾಡುವದೇ ಧರ್ಮ. ಹೃದಯ, ಮನಸ್ಸು ಪರಿಶುದ್ಧಗೊಳಿಸಿಕೊಂಡು, ದೇವ ದೇವನ ಅಗಾಧ ಲೀಲೆ, ಅವನ ಆಟವನ್ನು ನೋಡಿ ನಲಿಯುವದೇ ಧರ್ಮ. ಕಿವಿ ಉತ್ತಮವಾದ ಶಿವಭಜನೆ, ಶಿವಕೀರ್ತನೆ ಕೇಳುವದೇ ಧರ್ಮ; ಕಣ್ಣು ಶಿವ ಸ್ವರೂಪನ್ನು ನೋಡುವದೇ ಧರ್ಮ; ಮೂಗು ಶಿವ ಶ್ವಾಸವನ್ನು ಮಾಡುವದೇ ಧರ್ಮ. ತ್ವಚ ಶಿವಸ್ಪರ್ಶ ಮಾಡುವದೇ ಧರ್ಮ; ಪಂಚೇಂದ್ರಿಯಗಳು ಪಂಚಮುಖನ ಪ್ರಾರ್ಥಿಸುವದೇ ಧರ್ಮ; ತಾನು ದೇವರು ಆಗುದೇ ಧರ್ಮ. ದೇವರೇ ಧರ್ಮ, ಧರ್ಮವೇ ದೇವರು. ದೇವ ಜೀವ ಸಾಮರಸ್ಯವನ್ನು ಹೊಂದಿ ಅಖಂಡದಲ್ಲಿ ಲೀನವಾಗಿ ಅನಂತ ಯಾತನೆಗಳಿಂದ ಮುಕ್ತವಾಗುವದೇ ಧರ್ಮ. ಇದು ಯಾವ ಧರ್ಮದಲ್ಲೇ ಇರಲಿ, ಯಾವದೇ ಇರಲಿ ಅವನೇ ನಿಜವಾದ ಮಾನವ. ಧರ್ಮವನ್ನರಿತವ ಮಹಾತ್ಮ ಉಳಿದದ್ದು ವ್ಯರ್ಥ. ಉಳಿದವರೂ ವ್ಯರ್ಥ. ಶಿವಮೆಚ್ಚುಗೆಯದಲ್ಲ !

ಇನ್ನು ಅರ್ಥದ ವಿಷಯವಾಗಿ ಹೇಳುವಾಗ ಹಣವೆಂದೇ ನಾವು ತಿಳಿದುಕೊಂಡಾಗಲೂ ಸಹ ಅದನ್ನು ಕೂಡಾ ಯಾವ ರೀತಿಯಿಂದ ಸಂಗ್ರ ಹಿಸಬೇಕೆನ್ನುವ ನಿಯಮವಿದೆ. ಜೀವನದಲ್ಲಿಯ ವ್ಯವಹಾರ ಸಾಗಿಸುವದಕ್ಕೆ

ಹಣ ಬೇಕು. ಆದರೆ ಅದು ಲಿಂಗ ಮೆಚ್ಚಿಗೆಯಾಗುವಂಥದಾಗಿರಬೇಕು. ಬೇಕಾದ ಹಾದಿಯಿಂದ ಹಣ ಗಳಿಸಲು ಬಹುದು. ಕಳ್ಳತನ ಮಾಡಿ, ಮೋಸ ಮಾಡಿ ಕೊಲೆಸುಲಿಗೆ ಮಾಡಿ ಹಣವನ್ನು ಗಳಿಸಬಹುದು. ಮತ್ತು ಮತ್ತೊಬ್ಬರನ್ನು ಅನ್ಯಾಯವಾಗಿ ಹಿಂಸಿಸಿ ಹಿಯ್ಯಾಳಿಸಿಯೂ ಗಳಿಸಬಹುದು. ಆದರೆ ಅದು ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ, ಸತ್ಪಾತ್ರಕ್ಕೆ ಸಲ್ಲದು. ನಾಯಿಯ ಹಾಲು ಪಂಚಾಮೃತಕ್ಕೆ ಸಲ್ಲಬಹುದೇ ? ಸಾಧ್ಯವಿಲ್ಲ. ಮತ್ತೊಬ್ಬರನ್ನು ಕೊರಗಿಸಿ ಮರುಗಿಸಿ ಮರುಳು ಮಾಡಿ ಮಾಟ ಮಾಡಿ ಗಳಿಸಿದ ಹಣವು ಕೋಟಿ ಕೋಟಿಯಾಗಿದ್ದರೂ ವ್ಯರ್ಥ. ಕಾಯಕವೇ ಕೈಲಾಸವೆಂದು ಮನಮುಟ್ಟಿ ತನುಮುಟ್ಟಿ ನಿರ್ಮಲ ಶುದ್ಧ ಆಚರಣೆಯಿಂದ ಬಂದ ಒಂದು ಕಾಸು ಬೆಲೆಯುಳ್ಳದ್ದು. ಬದುಕಿನಲ್ಲಿ ಬೇಕಾದಷ್ಟು ಗಳಿಸಬೇಕೆನ್ನುವ ಆಶೆಗಳು ಇರಬಹುದು; ಹಾಗೆ ಇರುವದೂ ಸಹಜ. ಆದರೆ ಶರಣ ಜನರಿಗೆ ಇಂಥ ಹುಚ್ಚು ಇರುವದಿಲ್ಲ. ಅವರು ನ್ಯಾಯ ಸಮ್ಮತ, ಧರ್ಮ ಸಮ್ಮತ, ಜಂಗಮ ಸಮ್ಮತವಾಗುವ ಕಾರ್ಯವೆಸಗಿ ಹಣ ಗಳಿಸುತ್ತಾರೆ. ಅಷ್ಟೇ ಬಳಿಸುತ್ತಾರೆ. "ನನಗಾಗಿ ನನ್ನ ಮಡದಿ ಮಕ್ಕಳಿಗಾಗಿ ಕುದಿದೆನಾದರೆ ತಲೆದಂಡ; ತಲೆದಂಡ ಕೂಡಲಸಂಗಮದೇವಾ" ಎಂಬ ವಿವೇಕಯುಕ್ತವಾಗಿ ವಿಚಾರಿಸಿ ನಡೆಯುವದೇ ಹಾಗೆ ವ್ಯವಹರಿಸಿ ಗಳಿಸುವದೇ ನಿಜವಾದ ಅರ್ಥ. ಅರ್ಥವನ್ನು ತಿಳಿದುಕೊಂಡು ಅರ್ಥ ಗಳಿಸಬೇಕು. ಅದು ಆಗದಿದ್ದರೆ ಅದೆಲ್ಲಾ ವ್ಯರ್ಥವೆಂಬುದು ಮರೆಯಲಾಗದು. ದುಡ್ಡಿನ ದುರಾಶೆಯಿಂದ ತನುಮನವನ್ನು ಮಾಡಿಪಾಗಿಟ್ಟು, ಶಿವನ ನಿಲವನರಿಯದೆ ಮರಣವಾದರೆ ಭವದ ಬಾಧೆ ತಪ್ಪದು. ಅವರಿಗೆ ಪುನರಪಿ ಜನನ, ಪುನರಪಿ ಮರಣ ಚಕ್ರದಲ್ಲಿ ತಿರುಗಬೇಕಾಗುವದು. ಗಳಿಸಿದಷ್ಟು ಪರೋಪಕಾರ ಪಾರಮಾರ್ಥಕ್ಕಾಗಿ ಬಳಿಸಬೇಕು. ನಾಳೆಯದು ಎಂಜಲವೆನ್ನುವ ಪ್ರಾಂಜಲ ಮನಸ್ಸಿರಬೇಕು. ಅಂದರೆ ಶಿವನ ಕರುಣೆಯ ಕಣ್ಣು ತೆರೆಯುವದು. ಕೇವಲ ಹಣದ ಹುಚ್ಚಿನಲ್ಲಿ ಹುಳುವಾಗಿ ಕಳೆಯುವದು ಮಾನವನಿಗೆ ಸಲ್ಲದು. ಪುಣ್ಯದ ಅರ್ಥ ಗಳಿಸಬೇಕು. ದಾಸೋಹಂ ಭಾವವಿರಬೇಕು. ದೇವನ ಸಂಪ್ರೀತಿಯ ಸಂಪತ್ತು ನಮ್ಮನ್ನು ಬದುಕಿಸುವದೇ ಹೊರ್ತು ಹಾಳಾಗಲಿರುವ ಈಗಣ ಈ ಹೊನ್ನು; ಈ ಮಣ್ಣು ಬದುಕಿಸಲಾರವು. ಇವು ನಮ್ಮನ್ನು ಮರಣ ಮುಖಕ್ಕೆ ಒಯ್ದು ನಿಲ್ಲಿಸುತ್ತವೆ. ಆಗ ಜ್ಞಾನದ ಅರಿವಾಗುವದು. ಅದು ವ್ಯರ್ಥ.

ಕಾಮವೆಂದರೆ ಬಹಳ ಜನರ ((*Sex*) ವಿಷಯಸುಖಭೋಗವೆಂದೇ ತಿಳಿದುಕೊಂಡುದು ಹೆಚ್ಚು. ಅದು ನಿಜವಾದ ಕಾಮವಲ್ಲ, ಅಂಥ ಕಾಮ ಸುಖಕ್ಕಾಗಿ ಸತ್ತವರು ಕೋಟಿ; ನಿನಗಾಗಿ ಸತ್ತವರನ್ನೊಬ್ಬರನ್ನೂ ಕಾಣೆ; ಎನ್ನುವಹಾಗೆ ಕಾಮ ವಿಷಯ ವಾಸನಾರಹಿತವಾದದ್ದೇ ನಿಜವಾದುದು. "ಅಂಗದ ಮೇಲೆ ಇಟ್ಟ ಆಶೆ ಕಾಮುವಾಗುವದು, ಲಿಂಗದ ಮೇಲೆ ಇಟ್ಟ ನಿಷ್ಠೆ ನಿಷ್ಕಾಮವಾದುದು. ಕಾಮವೆಂದರೆ ಆಶೆ, ಆಶೆಯದ ಬೆಂಬತ್ತಿದವನು ಹಿಂತಿರುಗಿ ಬಂದಿಲ್ಲ. ನಿಷ್ಕಾಮ ಸಕಾಮುಗಳು ಬೆಳಕು, ಕತ್ತಲೆಯಂತೆ. ಕಮಲು ಕೆಸರಿನಂತೆ, ಹೆಣ್ಣನ್ನು ನೋಡಿ ಆಶೆಪಡುವದು, ಭೊಗೇಚ್ಛಪಡುದು ಕಾಮಗಳು. ಅದನ್ನೇ ಪಾರ್ವತಿದೇವಿ ಶಕ್ತಿ ಶಾರದೆ ಎಂದು ಕಲ್ಪಿಸಿ ಆರಾಧಿಸುವದೇ ಸುಕಾಮ. ನೋಡುವ ದೃಷ್ಟಿ ಬದಲಾಗಬೇಕು. ಹೊನ್ನು ಮಣ್ಣು ಸಮಾನವಾಗಿ ಕಾಣದ ಹೊರ್ತು ಕಾಮದ ನಿಜವಾದ ಅರ್ಥ ಹೊಳೆಯಲಾರದು. ಅದಕ್ಕಾಗಿ 'ಹೆಣ್ಣಿಗಾಗಿ ಸತ್ತವರು ಉಂಟು. ಮಣ್ಣಿಗಾಗಿ ಸತ್ತವರು ಉಂಟು. ಹೊನ್ನಿಗಾಗಿ ಸತ್ತವರು ಉಂಟು. ಆದರೆ ಇವನ್ನು ಮೀರಿದ ಆ ಅಗೋಚರ ಅನುಪಮ ಶಕ್ತಿಗಾಗಿ ಸತ್ತವರು ವಿರಳ. ಭವದ ಬೀಜವ ಹುರಿದು, ಭಗವಂತನ ದಿವ್ಯ ಸಾನ್ನಿಧ್ಯ ಸಾಕ್ಷಾತ್ಕಾರ ಪಡೆಯುವದೇ ನಿಜವಾದ ಕಾಮ. ನಾವು ಜಗತ್ತನ್ನು ಪ್ರೀತಿಸಬೇಕು, ಜಗದಲ್ಲಿಯ ಎಲ್ಲ ವಸ್ತುಗಳನ್ನೂ, ಎಲ್ಲ ಪ್ರಾಣಿಗಳನ್ನೂ ಪ್ರೀತಿಸಬೇಕು. ಆದರೆ ಅವೆಲ್ಲ ದೇವನು ಒಡ್ಡಿದ ಮಾಯಾಜಾಲದ ಎಳೆಗಳೆಂದು ತಿಳಿದಿರಬೇಕು. ಜಾಲಗಾರನು ಬಲೆಯೊಗೆದು ಮೀನು ಹಿಡಿಯುವ ಹಾಗೆ ದೇವರು ತನ್ನ ಮಾಯಾ ಲೀಲಾ ಜಾಲವನ್ನು ಭವಸಾಗರದಲ್ಲಿ ಒಗೆದು ಅಲ್ಲಿಯೇ ಒದ್ದಾಡುವಂತೆ ಮಾಡುತ್ತಾನೆ. ಇದರ ಇತ್ಯರ್ಥವನ್ನು ತಿಳಿದುಕೊಂಡು ಅದರಿಂದ ಪಾರಾಗಬೇಕು. ಎಷ್ಟೋ ಜನ್ಮಜನ್ಮಗಳನ್ನು ಅಂಥ ಬಲೆಯಲ್ಲಿಯೇ ನಾವು ಕಾಮದ ಆಶೆಯದ ಕೈಹಿಡಿದು ಕಳೆದುದಾಗಿದೆ. ಆದರೆ ಈ ತಿಳಿವಳಿಕೆಯ ಜನ್ಮದಲ್ಲಿ ಮತ್ತೆ ಅದಕ್ಕೆ ಮನಸ್ಸು ಮಾಡಿದರೆ ಮೂರ್ಖತನ. ಈ ಬಂಧನದಾಚೆಗೆ ಭಗವಂತನ ಪಾದಪದ್ಮದಲ್ಲಿ ಸೇರುವ ಸದಿಚ್ಛೆಯಿಂದ ಕೂಡಿದವರಾಗಿರಬೇಕು. ಕಾಮಾತೀತರಾಗಿ ಭಕ್ತಿ ಭಾವದಲ್ಲಿ ಮನಸ್ಸಿಟ್ಟು ಭವದಬಂಧನ ಕಡಿಯಲು ಇಂದಿನಿಂದಲಾದರೂ ಸಾಧನಗೈಯಬೇಕು. ಜೀವನ ಸಾರ್ಥಕ ಮಾಡಿಕೊಳ್ಳಬೇಕು. ಈ ಬೇಕುಬೇಡುಗಳನ್ನು ಕ್ಷಯಗೊಳಿಸಬೇಕು. ಶುದ್ಧಾತ್ಮದಿಂದ ಸರ್ವಂ ಲಿಂಗ

ಮಯಜಗತ್'' ಎನ್ನುವ ದೃಷ್ಟಿ ಬೆಳೆಯಬೇಕು, ಗುರುಲಿಂಗಜಂಗಮರನ್ನು ಮೆಚ್ಚಿಸಬೇಕು, ನೋಹಿಸಬೇಕು, ಇದೇ ನಿಜವಾದ ಕಾಮವು.

ಮೋಕ್ಷ, ಸ್ವಗ, ಶಿವಲೋಕ, ಕೈಲಾಸ, ಈ ಎಲ್ಲ ಪದಗಳನ್ನು ಎಲ್ಲ ಜನರು ಬಳಿಸುತ್ತಿರುವದೆಂದರೆ ತಿಳಿದುಕೊಂಡದ್ದೆಂದರೆ ಅದೊಂದು ಸುಖದತಾಣ. ಆರಾಮಧಾಮ, ಎಲ್ಲ ಅಷ್ಟೈಶ್ವರ್ಯದ ಆಗರ; ಎಂದು ಅದು ಎಂದೂ ಹಾಗಲ್ಲ. ಇರುವದೂ ಇಲ್ಲ ಮೋಕ್ಷ ಇದರ ನಿಜವಾದ ತಿಳುವಳಿಕೆಯ ಅರ್ಥವೆಂದರೆ ಬಿಡುಗಡೆ ಎಂದು ಈ ಕಷ್ಟ ಕಾರ್ಪಣ್ಯಮಯ ಶರೀರವನ್ನು ತೊರೆದು ಶಿವ ಪಾದ ಸೇರುವದೇ ಮೋಕ್ಷ ಅಂಥ ಒಂದು ಶಕ್ತಿ ಸಂಪಾದಿಸಬೇಕಾದರೆ ಬೇರೊಂದುಕಡೆ ಹುಡುಕಾಡುವದೇ ಬೇಡ ತನ್ನಲ್ಲಿಯೇ ತನ್ನ ಹತ್ತಿರವೇ ಇರುವದು. ಆದರೆ ಅದನ್ನು ಹುಡುಕಿ ತೆಗೆದು ನೋಡುವದು ಮಾತ್ರ ಮರೆಯಬಾರದು. "ಸತ್ಯವ ನುಡಿವುದೇ ಸ್ವರ್ಗ, ಆಚಾರವೇ ಸ್ವರ್ಗ'' ಎಂದು ಸರಳವಾಗಿ, ಸುಂದರವಾಗಿ, ಸಾಧನ ಜೀವನ ಮಾಡುವ ಜನರಿಗೆ ಶರಣರು ಸ್ವರ್ಗದ ಬಾಗಿಲು ತೆರೆದಿಟ್ಟಿದ್ದಾರೆ. ಎಲ್ಲವನ್ನು ಕೊಟ್ಟು ಬಿಡ ಬಹುದು. ಕಳೆದುಕೊಳ್ಳಬಹುದು, ಆದರೆ ಸತ್ಯವನ್ನು ಎಂದೂ ಕೊಡಲಾ ಗದು, ಬಿಡಲಾಗದು, ಜೀವನದ ಆಂತರಿಕ ಮತ್ತು ಭಾಹ್ಯಕವಾದ ಶುದ್ಧೀ ಕರಣ ಮಾಡಿಕೊಂಡಾಗಲೇ ಆತ್ಮಲಿಂಗದ ಪರಂಜ್ಯೋತಿ ಪ್ರಕಾಶವಾನ ವಾಗಿ ಬೆಳಗುವನು. ಕುಸಂಸ್ಕಾರಯುಕ್ತ ಎಲ್ಲ ಆಶೆಯುಗಳನ್ನು ತೊರೆಯ ಬೇಕು. ಶಿವನೊಬ್ಬನೇ ದೈವವೆಂದು ನಂಬಿಕರೆದೆಡೆ ಓ ಎಂಬನೇ. ನಂಬಲ ರಿಯರು, ನಚ್ಚಲರಿಯರು, ಡಂಭಿನಾಭಕ್ತರು. ಶ್ರದ್ಧೆ, ವಿಶ್ವಾಸ, ನಂಬುಗೆ, ಇವು ಮೊದಲು ಜೀವನದಲ್ಲಿ ಪ್ರತಿಷ್ಠಾಪಿಸಿಕೊಳ್ಳಬೇಕು. ಈ ಮೋಹಿತ ಪರದೆಯಿಂದ ಪಾರಾಗಿ ಮುಕ್ತತ್ವದ ಮಂದಿರವನ್ನು ಸೇರುವದೇ ಮೋಕ್ಷ. ಅದು ನಾವು ಸಾಧಕರಾಗಿ ಶರಣರ ಸುವಿಚಾರಗಳನ್ನು ತಿಳಿದು ನಡೆದು ಕೊಂಡಾಗಲೇ ಆ ಮೊಕ್ಷ ಪ್ರಾಪ್ತವಾಗುವದು. ದಾನಧರ್ಮಾದಿಗಳನ್ನು ಮಾಡಿ ಪರಹಿತ ಪರಸುಖಕ್ಕಾಗಿ ಪ್ರಯತ್ನಿಸಬೇಕು. ಮೋಹವನ್ನು ಕ್ಷಯಗೊಳಿಸಿ ದಾಗ ಮೋಕ್ಷ ಸಿಗುವದು. ಮೋಹಿತನಾದವನಿಗೆ ಜೀವನ ಮುಕ್ತಿಯಿಲ್ಲ. ಧರ್ಮ, ಅರ್ಥ, ಕಾಮಾದಿಗಳ ನೈಜವಾದ ಅರ್ಥ ತಿಳಿದುಕೊಂಡು ನಡೆ ದರೆ ಮೋಕ್ಷದೊರೆಯುವದು. ಮೋಕ್ಷವೆಂದರೆ ಹಣಕೊಟ್ಟು ಕೊಳ್ಳುವ ವಸ್ತುವಲ್ಲ. ಬಾಡಿಗೆ ಕೊಟ್ಟು ಆರಾಮ ತಗೆದುಕೊಳ್ಳುವ ಕಷ್ಟ ಹೊಸವಲ್ಲ.

ಕಾಯಾ, ವಾಚಾ, ಮನಸ್ಸು ನಿರ್ಮಲಗೊಳಿಸಿ ನಿತ್ಯತೃಪ್ತನಾಗಿ ನಿತ್ಯನಿರಂಜನನಾಗಿ ಬಾಳಬೇಕಾಗುವದು. ಅದೇ ಮೋಕ್ಷ. ಮೋಕ್ಷವೆಂದರೆ ಒಂದು ಸುಖದ ನಿವಾಸವಲ್ಲ. "ನುಡಿದಂತೆ ನಡೆವುದೇ ಮೋಕ್ಷ."

---

# ಲಚ್ಯಾಣ ಪುಣ್ಯತಿಥಿಯಲ್ಲಿ

( ಬರೆದವರು— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ. ( ಇಂಡಿ )

---

ಕನ್ನಡನಾಡಿನಲ್ಲಿಯೇ ಒಳ್ಳೇ ಪ್ರಸಿದ್ಧ ಪ್ರಬುದ್ಧ ಪ್ರಭಾವಶಾಲಿ ಸ್ವಾಮಿಗಳೂ ಒಳ್ಳೇ ಕಳಕಳಿಯಿಂದ ಸಮಾಜ ಕಲ್ಯಾಣ ಮಾಡುವ ಮಹಾಶಿವಯೋಗಿಗಳೂ ವಿದ್ಯಾಪಕ್ಷಪಾತಿಗಳೂ ಆದ ಬಂಥನಾಳೇಶ್ವರರೂ ಬೋರ್ಡಿಂಗ ಶಾಲೆ, ಹಾಯಸ್ಕೂಲ, ಕಾಲೇಜಗಳನ್ನು ಸ್ಥಾಪಿಸಲು ಹೆಣಗಿದ ಹೆಣಗಾಡುತ್ತಿರುವ ಶ್ರೀ ಸಂಗನಬಸವ ಶಿವಯೋಗಿವರ್ಯರೂ ಅನೇಕ ಮಠಗಳಿಗೆ ಅಧಿಕಾರಿಗಳಾದ ವಿಖ್ಯಾತ ಶರಣ ಮಾರ್ಗಾವಲಂಬಿಗಳೂ, ಪುರಾಣ ಪ್ರವಚನ ವ್ಯಾಖ್ಯಾನ, ಕಂಠೀರವರೂ ಶ್ರೀ ಸಂಗನಬಸವನೇ ಈಗ ಶ್ರೀಸಂಗನಬಸವನಾಗಿ ಬಂದಂಥ ಶ್ರೀಗಳವರೂ ಕೋಪತೊರೆದು ಮುಗುಳ್ನಗೆಯಿಂದಲೇ ಸಕಲರಿಗೆ ಉತ್ತರಿಸುವ ಧರ್ಮವೇತ್ತರೂ ದೇಶ ಕಾಲ ಪರಿಸ್ಥಿತಿಗೆ ಹೊಂದಿಕೊಂಡು ನುಡಿದು ನಡೆಯುವ ಧೀರ ಸ್ವಾಮಿಗಳೂ ಸಣ್ಣ ಸ್ಥಾನದಿಂದ ಸ್ವಪ್ರಯತ್ನದಿಂದಲೇ ಒಳ್ಳೇ ಉಚ್ಚ ಸ್ಥಾನಕ್ಕೆ ಏರಿದ ಶಿವಯೋಗಿಗಳೂ ವ್ಯವಹಾರ ವೇದಾಂತಗಳೆರಡನ್ನೂ ಜೀವನದಲ್ಲಿ ಸಮನ್ವಯಗೊಳಿಸಿದ ಮಹಾಶರಣರೂ, ತಿರುಕನಿಂದ ಅರಸನಿಂದ ಪೂಜ್ಯಗೊಳ್ಳುವ ಮಹಾಶಿವಯೋಗಿಗಳೂ ಒಳ್ಳೇ ಶಿವಾನುಭವಿಗಳೂ ೭೭೦ ಅಮರಗಣಂಗಳ ಪೂಜೆಗೈದು ನಾಡು ದೇಶಗಳಲ್ಲಿಯೇ ಅಮರ ಕೀರ್ತಿಯನ್ನು ಗಳಿಸಿದ ಧರ್ಮಾಧಿಕಾರಿಗಳೂ ಆದ ಶ್ರೀ ಸಂಗನಬಸವ ಶಿವಯೋಗಿಗಳು ಲಚ್ಯಾಣ ಸಮಾರಂಭದಲ್ಲಿ ಎದ್ದು

ಕಾಣುತ್ತಿದ್ದರು. ಇಂಥ ಶ್ರೀಗಳವರ ಆಹ್ವಾನದ ಮೇರೆಗೆ ಲಚ್ಯಾಣದ ಸಿದ್ಧಲಿಂಗದೇವರ ಪುಣ್ಯತಿಥಿಯಲ್ಲಿ ನಾನೂ ಭಾಗಿಯಾಗಿದ್ದೆನು, ಇದೊಂದು ನನ್ನ ಭಾಗ್ಯೋದಯದ ಕಾಲವೆಂದೇ ನಾನು ನೆರೆನಂಬಿದ್ದೇನೆ.

ಇಲ್ಲಿಯ ಮಠದ ವಿಸ್ತೀರ್ಣ ನೋಡಿ ನಾನು ದಂಗುವರಿದೆನು. ಒಂದು ಕಡೆ ಹಾಯಸ್ಕೂಲದ ಕಟ್ಟಡಗಳು ಇನ್ನೊಂದು ಕಡೆ ಟ್ರೇನಿಂಗ ಕಾಲೇಜದ ಕಟ್ಟಡಗಳು ಮತ್ತೊಂದು ಕಡೆ ಭೋಜನದ ಕಟ್ಟಡಗಳು ಮಗ ದೊಂದು ಕಡೆ ಶಿಕ್ಷಕರ ಹಾಗೂ ವಿದ್ಯಾರ್ಥಿಗಳ ವಸತಿ ಗೃಹದ ಕಟ್ಟಡಗಳು ಅಲ್ಲೊಂದು ಕಡೆ ಸಾಧು ಸನ್ಯಾಸಿಗಳ ವಾಸದ ಕಟ್ಟಡಗಳು. ಇಲ್ಲೊಂದು ಕಡೆ ಶಿವಾನುಭವ ಕಟ್ಟಡಗಳು ಮಧ್ಯದಲ್ಲಿ ಮಹಾ ಸಿದ್ಧ ಪುರುಷನಾದ ಸಿದ್ಧ ಲಿಂಗೇಶ್ವರನ ಗದ್ದುಗೆ, ಗುಡಿ, ಮಂಟಪಗಳ ಕಟ್ಟಡಗಳು ಒಂದು ಕಡೆ, ಶ್ರೀ ಸಂಗನಬಸವ ಶಿವಯೋಗಿಗಳು ವಾಸ ಮಾಡುವ ಕಮರೀ ಮಠದ ಕಟ್ಟ ಡಗಳು ಬೇರೆ ಕಡೆಗೆ ನಿತ್ಯ ದಾಸೋಹದ ಕಟ್ಟಡಗಳು ಹಲವು ಕಡೆ ಪಾಂಥ ಸ್ಥರು ಉಳಿದುಕೊಳ್ಳುವ ಕಟ್ಟಡಗಳು ಹೀಗೆ ಅನೇಕ ಪ್ರಕಾರದ ಕಟ್ಟಡಗ ಳಿಂದ ಅದೊಂದು ಸಿದ್ಧಲಿಂಗನ ನಗರವಾಗಿ ಪರಿಣಮಿಸುತ್ತಿರುವದು.

ಎತ್ತ ನೋಡಿದತ್ತ ಅನೇಕ ಭಜನೆಯ ಮೇಳದವರು ಅನುಭವ ಪೂರ್ಣವಾದ ಭಕ್ತಿ ಭರಿತವಾದ ಪದಗಳನ್ನು ಅಹೋರಾತ್ರಿ ಹಾಡಿ ಜನ ರನ್ನು ತಣಿಸುತ್ತಿರುವರು. ಮಂಟಪದಲ್ಲಿ ಸಪ್ತಾಹ ನಡೆದಿತ್ತು. ಅಸಂಖ್ಯ ಕಾವಿ ಬಟ್ಟೆಯ ಸಾಧುಗಳು ಅಲ್ಲಿ ಕಾಣುತ್ತಿದ್ದರು. ಅಲ್ಲದೆ ಪಟ್ಟದವರು, ವಿರಕ್ತರು, ಮಠಾಧೀಶರರೂ ಆಗಮಿಸಿದ್ದರು. ಶ್ರೀ ಸ್ವಾಮಿ ಲಿಂಗಾನಂದ (ಬಿ. ಎ. ಆನರ್ಸ) ಇವರು ಎಂಟು ದಿನ ಪ್ರವಚನ ಹೇಳಿ ಜನರನ್ನು ಬಹು ವಾಗಿ ತಣಿಸಿದ್ದರು. ಪರಮ ಶಾಂತಿಮಯನೂ ಪರಮ ಶಕ್ತಿಮಯನೂ ಆದ ಶ್ರೀ ಶಾಂತವೀರ ಮಹಾ ಸ್ವಾಮಿಗಳು ಬಬಲೇಶ್ವರ ಇವರು ಈ ಪುಣ್ಯ ತಿಥಿಯಲ್ಲಿ ಮುಖ್ಯ ಅಥಿತಿಗಳಾಗಿ ಆಗಮಿಸಿದ್ದೊಂದು ಲಚ್ಯಾಣಕ್ಕೆ ಒಳ್ಳೇ ಕಳೆಯನ್ನು ತಂದುಕೊಟ್ಟಿತ್ತು. ಅನೇಕ ತರದ ವಾದ್ಯದವರು ಗಾಯಕರು ಆಗಮಿಸಿ ಜನವೃಂದವನ್ನು ತಮ್ಮ ವಿದ್ಯೆಯಿಂದ ತಣಿಸುತ್ತಿದ್ದರು. ಜನರು ಈಸಲ ಪ್ರತಿ ಸಲಕ್ಕಿಂತ ಹೆಚ್ಚಾಗಿ ಆಗಮಿಸಿತ್ತೆಂದು ಆಡಿಕೊಳ್ಳುತ್ತಿದ್ದರು.

ಈ ಜಾತ್ರೆಯಲ್ಲಿ ಒಂದು ಒಕ್ಕಲತನದ ಪ್ರದರ್ಶನ ಒಂದು ಕಲೆಯ ಪ್ರದರ್ಶನ, ಒಂದು ನೂಲು ನೇಗಿಯು ಪ್ರದರ್ಶನ ಏರ್ಪಟ್ಟಿದ್ದವು. ನಿತ್ಯ

ಆಧ್ಯಾತ್ಮ ವಿಷಯದ ಚರ್ಚೆ ಎರಡು ವೇಳೆ ನಡೆಯುತ್ತಿತ್ತು. ಇದರಲ್ಲಿ ಒಬ್ಬರು ಮಾಯಾವಾದವನ್ನು ಪ್ರತಿಪಾದಿಸುತ್ತಿದ್ದರು. ಬ್ರಹ್ಮ ಸತ್ಯ ಜಗತ್ತು ಮಿಥ್ಯವೆಂದು ತರ್ಕಪೂರ್ಣ ವಾದವನ್ನು ಮಾಡುತ್ತ, ಪರಮಾನುಭವ ಬೋಧೆ ಯನ್ನು ಹೇಳುತ್ತಿದ್ದರು. ಉಳಿದವರು ಜಗತ್ತೂ ಸತ್ಯ, ಬ್ರಹ್ಮನೂ ಸತ್ಯ ಎಂದು ಅನುಭವಯುಕ್ತವಾದ ಶರಣರ ಪ್ರಮುಥರ ವಚನಗಳಿಂದ ಸಿದ್ಧ ಮಾಡಿ ತೋರಿಸುತ್ತಿದ್ದರು. ಸಾಮಾನ್ಯವಾಗಿ ಈ ಲೇಖಕರೂ, ಶ್ರೀ ಶಾಂತ ವೀರ ಸ್ವಾಮಿಗಳೂ ಶ್ರೀ ಬಿದರಿ ಕುಮಾರ ಸ್ವಾಮಿಗಳೂ ಶಕ್ತಿವಿಶಿಷ್ಟಾದ್ವೈತ ವನ್ನು ಪ್ರತಿಪಾದಿಸುತ್ತಿದ್ದರು. ಇಂಡಿಯ ಸಿದಗೊಂಡಪ್ಪನೂ ನಿಂಬಾಳದ ಸ್ವಾಮಿಗಳೂ ಅದ್ವೈತವನ್ನು ಪ್ರತಿಪಾದಿಸುತ್ತಿದ್ದರು. ಈ ಚರ್ಚೆಗಳು ಬಹು ಸ್ವಾರಸ್ಯವಾಗಿ ಜರುಗಿದವು. ಈ ಚರ್ಚೆಯನ್ನು ಕೇಳಿದವರಿಗೆ ಮಾತ್ರ ಅದರ ಅನುಭವವಾಗಿ ಆನಂದ ಹೊಂದಿರುವದರ ದ್ಯೋತಕಗಳು ಮುಖದ ಮೇಲೆ ಎದ್ದು ಕಾಣುತ್ತಿದ್ದವು. ಸಭೆಯಲ್ಲಿ ಗದ್ದಲವೆದ್ದಾಗ ಬೇರೆಯವರ ವ್ಯಾಖ್ಯಾನ ರುಚಿಸದಾಗ ಜನ ಬೇಸತ್ತಾಗ ಶ್ರೀ ಬಂಥನಾಳ ಶಿವಯೋಗಿಗಳು ಎದ್ದು ನಿಂತ ಕೂಡಲೇ ಎಲ್ಲರೂ ಚಪ್ಪಾಳೆ ತಟ್ಟಿ ಶಾಂತರಾಗಿ ಕೇಳಲು ಕೂತು ಬಿಡುತ್ತಿ ದ್ದರು. ಈ ಪ್ರಕಾರ ಜನರ ಹೃದಯಗಳನ್ನು ಆಕರ್ಷಿಸುತ್ತಿದ್ದರು. ಇವರು ಸಮಯೋಚಿತ ಭಾಷಣಗಳನ್ನು ಮಾಡುತ್ತಿದ್ದರು. ಪ್ರತಿ ಸೋಮವಾರ ಇವರು ಮೌನವನ್ನು ಆಚರಿಸುತ್ತಿದ್ದರೂ ಸನ್ನೆಯಿಂದಲೇ ಜನರನ್ನು ಶಾಂತ ಗೊಳಿಸಿ ತಣಿಸುತ್ತಿದ್ದರು. ಈ ಲೇಖಕರೂ ಎರಡು ಭಾಷಣಗಳನ್ನು ಮಾಡಿ ಶಿವನು ಶಕ್ತಿಸಮೇತನಾಗಿರುವನೆಂದೂ, ಬ್ರಹ್ಮನಲ್ಲಿ ಜಗವು ಬೀಜರೂಪದಲ್ಲಿ ಮೊದಲೇ ಇರುವದೆಂದೂ ಹೇಳಿದರು. ಶ್ರೀ ಲಿಂಗಾನಂದರು ಇದನ್ನು ಎತ್ತಿ ಹಿಡಿದು ಶರಣರ ಉದಾತ್ತ ವಿಶಾಲ ತತ್ವಗಳನ್ನು ಒಳ್ಳೇ ಮನನೀಯವಾಗಿ ಹೇಳಿ ಶರಣರು ವಿಶ್ವ ಧರ್ಮವನ್ನೇ ಆಚರಿಸುತ್ತಿದ್ದರೆಂದು ಸ್ಪಷ್ಟಪಡಿಸಿದರು. ಬಹುತರ ಎಲ್ಲ ಸ್ವಾಮಿಗಳು ಶ್ರೀ ಬಂಥನಾಳ ಶಿವಯೋಗಿಗಳ ವಿಶಾಲ ಹೃದಯವನ್ನೂ ಕಾರ್ಯವನ್ನೂ ಬಹುವಾಗಿ ಬಣ್ಣಿಸಿದರು. ನಿಜವಾಗಿ ಅವರು ಬಣ್ಣಿಸಿಕೊಳ್ಳುವ ಮಹಾಪುರುಷರಿದ್ದಾರೆ. ಸಕಲರ ಕೂಡ ಒಳ್ಳೇ ನಿರಭಿ ಮಾನದಿಂದ ನಿರಹಂಕಾರದಿಂದ ಸಮಾನಸ್ಕಂದರಂತೆ ವರ್ತಿಸುತ್ತಿದ್ದುದರಿಂದ ಸಕಲರ ಮನವನ್ನು ತಮ್ಮ ಕಡೆಗೆ ಸೆಳೆದುಕೊಂಡಿದ್ದಾರೆ.

ಇವರು ಅಲ್ಪ ಕಾಲದಲ್ಲಿಯೇ ಅನೇಕ ಮಠಗಳಿಗೆ ಅಧಿಕಾರಿಗಳಾಗ ಬೇಕಾದರೆ ಇವರ ಮೇಲೆ ಜನತೆಯ ಪ್ರೀತಿ ಎಷ್ಟಿರುವದೆಂಬುದನ್ನು ವಾಚ

ಕರೇ ಊಹಿಸಬಹುದು. ಲಚ್ಯಾಣದಲ್ಲಿ ಇವರು ಸಾಧಿಸಿದ ಕಾರ್ಯಗಳನ್ನು ಪ್ರತ್ಯಕ್ಷಹೋಗಿ ನೋಡದೆ ತಿಳಿಯುವಂತಿಲ್ಲ. ಇದೊಂದು ಮಹಾದೊಡ್ಡ ಕ್ಷೇತ್ರವಾಗಿ ಯಾತ್ರಾ ಸ್ಥಳವಾಗಿ ಪರಿಣಮಿಸಿದೆ. ದಾಸೋಹನಂತೂ ಸದಾ ನಡದೇ ಇರುವದು. ಮಠಕ್ಕೆ ಹೊಂದಿ ಉಗಿಬಂಡಿಗಳು ಶಿಳ್ಳು ಹೊಡೆಯುತ್ತ ಅತ್ತಿಂದ ಇತ್ತ, ಇತ್ತಿಂದ ಅತ್ತ ಮೇಲಿಂದ ಮೇಲೆ ಹೋಗುತ್ತಿರುವದು ಆಶ್ರಮಕ್ಕೆ ಒಳ್ಳೇ ಶೋಭೆಯನ್ನುಂಟು ಮಾಡಿರುವದು. ಸ್ವಾಮಿಗಳ ನೆರವಿನಿಂದ ಊರಲ್ಲಿ ಈಗಿನ ಕಾಲದ ಎಲ್ಲ ಸುಧಾರಣೆಗಳು ಆಗಿರುವವು. ಅದರಂತೆ ಬಂಥನಾಳ, ರೂಗಿ, ಪುನಾ, ರಾಯಚೂರ, ಕೃಷ್ಣಾ ಮೊದಲಾದ ಇನ್ನೂ ಅನೇಕ ಊರುಗಳಲ್ಲಿಯ ಮಠಗಳೂ ಕೂಡ ಒಳ್ಳೇ ಸುಧಾರಣೆಯ ಸ್ಥಿತಿಯಲ್ಲಿಯೇ ಇರುತ್ತವೆ. ಇವುಗಳ ಆರ್ಥಿಕ ಪರಿಸ್ಥಿತಿ ಒಳ್ಳೇ ಉತ್ತಮವಿರುತ್ತದೆ. ಅನೇಕ ಜಮೀನುಗಳು ಮಠದ ಕೆಳಗೆ ಬಂದಿವೆ. ಅಸಂಖ್ಯ ಜನರು ಒಳ್ಳೇ ಭಯಭಕ್ತಿಯಿಂದ ನಡೆದುಕೊಂಡು ತನು, ಮನ, ಧನ ಮೊದಲಾದವುಗಳಿಂದ ಮಠಗಳಿಗೆ ಸಹಾಯ ಮಾಡಿ ಸ್ವಾಮಿಗಳಿಗೆ ಉತ್ತಮ ಸೇವೆ ಸಲ್ಲಿಸುತ್ತಿರುವರು. ಹೀಗಂತೆ ಎಲ್ಲ ಕಡೆಗಳಲ್ಲಿ ದೊಡ್ಡ ಪ್ರಮಾಣದಿಂದ ಪುಣ್ಯತಿಥಿ ಜಾತ್ರೆಗಳು ಜರಗಿ ಧಾರ್ಮಿಕ ನೈತಿಕ ಸಾಮಾಜಿಕ ಆಧ್ಯಾತ್ಮಿಕ ಮೊದಲಾದ ಸುಧಾರಣೆಗಳು ಆಗುತ್ತಿರುವವು ಇದೆಲ್ಲ ಮಹಾಸ್ವಾಮಿಗಳ ಪುಣ್ಯ ಪ್ರಭಾವವೇ ಸರಿ. ಇವರ ಪ್ರಭಾವದಿಂದ ಮರಾಠಿ ಆಂಧ್ರ ನಾಡುಗಳಲ್ಲಿ ಮಠಗಳಾಗಿ ವೀರಶೈವ ಉಚ್ಚ ಸಂಸ್ಕೃತಿಯನ್ನು ಬೆಳಗುತ್ತಿರುವದು, ಒಳ್ಳೇ ಅಭಿಮಾನದ ಸಂಗತಿಯೇ ಸರಿ. ಇಂಥ ಮಹಾಮಹಿಮರನ್ನು ವೀರಶೈವರು ವೀರಶೈವ ಮಹಾಸಭೆಯ ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿದ್ದು ಅವರ ಹಿರಿಮೆಯನ್ನು ವ್ಯಕ್ತಗೊಳಿಸುವದು. ಇವರು ಸಮಾಜಕ್ಕೆ ಅನೇಕ ಮುಖದಿಂದ ಸೇವೆ ಸಲ್ಲಿಸಿದ್ದಾರೆ. ಈ ಮಹಾ ಸ್ವಾಮಿಗಳಂತೆ ಸಕಲ ಸ್ವಾಮಿಗಳು ಸಮಾಜಕ್ಕೆ ಕಳಕಳಿಯಿಂದ ಸೇವೆ ಮಾಡುತ್ತ ನಡೆದದ್ದಾದರೆ ಹಿಂದುಳಿದ ನಮ್ಮ ಸಮಾಜವು ಭರಗುಡುತ್ತ ಎದ್ದೇಳುವದರಲ್ಲಿ ಸಂದೇಹವೇ ಇಲ್ಲ. ಪೂಜ್ಯ ಮಹಾಸ್ವಾಮಿಗಳು ಎಲ್ಲ ಕಾರ್ಯಕ್ಷೇತ್ರಗಳಲ್ಲಿ ಬಹುವಾಗಿ ಜಯ ಸಾಧಿಸಿರುವದು ಕಂಡುಬರುವದು. ಆದರೆ ಸಾಹಿತ್ಯ ಕ್ಷೇತ್ರದಲ್ಲಿ ಅಂದರೆ ವಚನ ಸಾಹಿತ್ಯವನ್ನು ಬಹುವಾಗಿ ಪ್ರಚಾರ ಮಾಡಲು ನೆರವಾದಂತೆ ತೋರುವದಿಲ್ಲ. ಅದಕ್ಕೆ ಇದೊಂದು ಕೊರತೆಯನ್ನು ಸ್ವಾಮಿಗಳು ಹೋಗಲಾಡಿಸುವಂತೆ ಮಾಡುವರೆಂದು ನೆರೆನಂಬಿದ್ದೇವೆ. ವೀರಶೈವ

ಸಾಹಿತ್ಯದ ಯೋಗ್ಯ ಗ್ರಂಥಗಳನ್ನು ಪ್ರಕಟಪಡಿಸುವಲ್ಲಿ ತನು, ಮನ, ಧನ ಗಳಿಂದ ನೆರವು ನೀಡಿ ವೀರಶೈವವನ್ನು ಹೆಚ್ಚಾಗಿ ಪ್ರಚಾರ ಮಾಡಬೇಕೆಂದು ಸಹ ಬೇಡಿಕೊಳ್ಳುವೆವು.

ಇವರಲ್ಲಿ ವಿರಕ್ತ ಪಟ್ಟದವರು ಎಂಬ ಭೇದವಿಲ್ಲ. ಇವರಲ್ಲಿ ಬಂದವ ರೆಲ್ಲ ತಕ್ಕ ಮಾನ ಮನ್ನಣೆ ಹೊಂದುತ್ತಿರುವದು ಕಂಡು ಬರುವದು. ವಿರಕ್ತ ಪಟ್ಟದವರನ್ನು ಒಂದೇ ಸ್ಥಾನದಲ್ಲಿ ಕೂಡಿಸುವದೆಂದರೆ ಎರಡು ಕೋಣಗ ಳನ್ನು ಕೂಡಿಸಿದಂತೆಯೇ ಸರಿ. ನಾ ಹೆಚ್ಚು ನೀ ಹೆಚ್ಚು ಎಂದು ಸದಾ ಬಡಿದಾಡುವವರೇ ಇದ್ದರೂ ಇವರಲ್ಲಿ ಎಲ್ಲರೂ ಸಹಜ ಸರಳ ರೀತಿಯಿಂದ ತಕರಾರು ಮಾಡದೆ ಕೂಡಿ ಹೋಗುವರು. ಇದೊಂದು ಮಹಾ ಸ್ವಾಮಿಗಳ ದಿವ್ಯ ಪ್ರಭಾವವೆಂದೇ ಹೇಳಬೇಕಾಗಿದೆ. ಇವರಿಂದ ವಿರಕ್ತ-ಪಟ್ಟ, ಪಂಚಾ ಚಾರ್ಯ-ಬಸವ ಈ ಭೇದಗಳು ಬಹುತರ ಈಗ ಕಡಿಮೆಯಾಗಿರುವವು.

ಪುಣ್ಯತಿಥಿಗೆ ಲಚ್ಯಾಣದಲ್ಲಿ ನೆರೆದ ಅಜಮಾಸು ಐದಾರು ನೂರು ಸಾಧು ಜನರದೊಂದು ಸಂಘವನ್ನು ಸ್ಥಾಪಿಸಿ ಇವರಿಂದ ಸಮಾಜಸೇವೆಯಾಗಿ ನಿಯಮಬದ್ಧವಾಗಿ ನಡೆಯುವಂತೆ ಮಾಡಬೇಕೆಂದು ವಿಚಾರಿಸಲಾಗಿತ್ತು. ಆದರೆ ವೇಳೆಯ ಅಭಾವದ ಮೂಲಕ ಈ ಕಾರ್ಯ ಜರಗಲಿಲ್ಲ. ಮುಂದಿನ ಸಲ ಇದನ್ನು ಸಾಧಿಸುವ ಇಚ್ಛೆಯನ್ನು ಸ್ವಾಮಿಗಳು ವ್ಯಕ್ತ ಮಾಡಿದ್ದಾರೆ. ಹೀಗೆ ಸ್ವಾಮಿಗಳು ಪ್ರತಿಯೊಂದು ರೀತಿಯಿಂದ ಸಮಾಜಕ್ಕೆ ಸೇವೆ ಸಲ್ಲಿಸು ತ್ತಿರುವರು. ಎಲ್ಲ ಸ್ವಾಮಿಗಳು ಇವರ ಅನುಕರಣ ಮಾಡಿ ಕೃತಾರ್ಥರಾಗ ಬೇಕು. ತಮ್ಮ ಕೈಲಾದಷ್ಟು ಸಮಾಜ ಕಲ್ಯಾಣಕ್ಕೆ ಹೆಣಗಬೇಕು. ಅಂದರೆ ಮಹಾ ಸ್ವಾಮಿಗಳ ಕಾರ್ಯಗಳಿಗೆ ನೆರವಾದಂತೆ ಆಗುವದು. ಬರೇ ಪೂಜೆ ಮಾಡಿಸಿಕೊಂಡು ಊಟ ಹೊಡೆದರೆ ತಿದ್ದುವದಲ್ಲ. ಆ ಕಾಲ ಹೋಗಿ ಬಹು ದಿನಗಳಾದವು. ಹೊಸ ಮನ್ವಂತರಕ್ಕೆ ಹೊಂದಿಕೊಂಡು ನಾವೆಲ್ಲ ಸ್ವಾಮಿಗಳು ನಡೆದುಕೊಳ್ಳಬೇಕು. ಎಲ್ಲ ತರಗತಿಯ ಜನರನ್ನು ತಮ್ಮ ಕಡೆಗೆ ಸ್ವಾಮಿ ಗಳು ಸೆಳೆದಿದ್ದಾರೆ. ಕಲಿತವರೂ, ಕಲಿಯಲಾರದವರೂ, ಶಿರಿವಂತರೂ, ದರಿದ್ರರೂ, ಅಧಿಕಾರಿಗಳೂ, ನಿರಧಿಕಾರಿಗಳೂ, ಶ್ರೇಷ್ಠರೂ, ಕನಿಷ್ಠರೂ, ಉಚ್ಚರೂ, ನೀಚರೂ, ಬಡವರೂ, ಬಲ್ಲಿದರೂ ಹೀಗೆ ಸಕಲರೂ ಇವರಿಗೆ ಪೂಜ್ಯ ಭಾವದಿಂದ ನಡೆದುಕೊಳ್ಳುತ್ತಿರುವದೊಂದು ಒಳ್ಳೇ ವೈಶಿಷ್ಟ್ಯವೆಂದೇ ಹೇಳಬೇಕು. ಸಾಹಿತಿಗಳೂ, ಕಲೆಗಾರರೂ, ಕವಿಗಳೂ, ಶಾಸ್ತ್ರಿಗಳೂ, ಸಕ ಲರೂ ಇವರಿಗೆ ಒಳ್ಳೇ ಮಾನ ಮನ್ನಣೆ ಕೊಡುವರು. ಈ ಪ್ರಕಾರ ಇವರ ಪ್ರಭಾವವು ಸಕಲರಲ್ಲಿಯೂ ಬೀರುತ್ತಿರುವದು. ಎಲ್ಲರೂ ಇವರಲ್ಲಿ ಬಂದು ತಮ್ಮ ಸೇವೆ ಸಲ್ಲಿಸಿ ಹೋಗುತ್ತಿರುವರು.

ಈ ಪ್ರಕಾರ ಈ ಮಹಾಸ್ವಾಮಿಗಳು ಸಕಲ ರೀತಿಯಿಂದ ಆದರ್ಶ ಪ್ರಾಯರಾಗಿದ್ದಾರೆ. ಇವರಷ್ಟು ಸಕಲರ ಕೂಡ ವ್ಯವಹರಿಸುವ ಚಾತುರ್ಯ ವನ್ನು ನಾನು ಬೇರಾರಲ್ಲಿಯೂ ಕಂಡಿರುವದಿಲ್ಲ. ಹೀಗಾಗಿ ಎಲ್ಲರೂ ಇವ ರಿಗೆ ಆಪ್ತಪ್ರೀತಿಯ ಮಿತ್ರರಾಗಿಯೇ ಬಿಟ್ಟಿದ್ದಾರೆ. ಕೆಲ ಅಹಂಕಾರೀ ಸ್ವಾಮಿಗಳು ಇವರ ಏಳ್ಗೆಯನ್ನು ಸಹಿಸುವದಕ್ಕೆ ಹೊಟ್ಟೆಕಿಚ್ಚಿನಿಂದ ಟೀಕೆ ಮಾಡಿದರೂ ಕೂಡ ನಗನಗುತ್ತ ಅವರಿಗೆ ಉತ್ತರಿಸುತ್ತ ಅಪರ ಸೇಡವನ್ನು ಸಹಜ ಕಡಿಮೆ ಮಾಡುವದೊಂದು ಇವರ ಹೆಚ್ಚಿನ ಸ್ವಭಾವವೇ ಸರಿ ಮೊನ್ನಿನ ಪುಣ್ಯತಿಥಿಯಲ್ಲಿ ತಮಗಿಂತ ಕಿರಿಯರನ್ನು ಅಡ್ಡಪಾಲಿಕೆಯಲ್ಲಿ ಕೂಡ್ರಿಸಿ ಮೆರಿಸಿದ್ದು ಇವರ ನಿರಹಂಕಾರ ವ್ಯಕ್ತವಾಗುವದು. ನಾನಂತೂ ಇವರು ಕೋಪಗೊಂಡು ಮುಖ ಕೆಂಪೇರಿದ್ದನ್ನು ನೋಡಿಲ್ಲ ಯಾವಾಗಲೂ ಮುಗುಳ್ನಗೆಯನ್ನೆಲ್ಲ ಬೀರುವರು. ಸದಾ ಇವರು ಜನ ಸಂದಣಿಯಲ್ಲಿ ಗಂಟಿ ಜಾಂಗಟೆ ಮೊದಲಾದವುಗಳ ಗದ್ದಲದಲ್ಲಿಯೇ ಅನಿವಾರ್ಯವಾಗಿ ಬಾಳಬೇ ಕಾಗಿದೆ. ಆದರೂ ಮನಸ್ಸನ್ನು ಕದಡಿಸುವದಿಲ್ಲ. ಶಾಂತಿಯಿಂದಲೇ ಬಾಳ್ವ ವರು. ಹೀಗಾಗಿ ಈ ಸ್ವಾಮಿಗಳ ಸ್ಥಾನವು ಬಹು ಉಚ್ಚ ಮಟ್ಟಕ್ಕೆ ಏರಿದೆ.

೭೭೦ ಅಮರಗಣಂಗಳ ಪೂಜೆಯನ್ನು ಮಾಡಿ ದೇಶದ ತುಂಬ ವೀರ ಶೈವರ ಅಮರ ಸಂದೇಶಗಳನ್ನೂ ಉಚ್ಚ ಸಂಸ್ಕೃತಿಯನ್ನೂ ಹರಡಿ ಕೀರ್ತಿ ಶಾಲಿಗಳಾಗಿದ್ದಾರೆ. ಆದರೂ ಇನ್ನಷ್ಟು ಧೈರ್ಯ ತಾಳಿ ಶರಣರ ತತ್ವ ದಂತೆ ಈ ಪೂಜೆ ನಡಿಸಿದ್ದರೆ ಮಹಾತ್ಮಾಗಾಂಧಿಯವರಂತೆ ಬಹು ಬೆಳಕಿಗೆ ಬರುವದರಲ್ಲಿ ಸಂದೇಹವಿಲ್ಲ. ಇಂಥ ಪೂಜೆಯನ್ನು ಸಹ ಅವರು ತೀವ್ರ ಕೈಕೊಳ್ಳುವರೆಂದು ನಮಗೆ ಬಲವಾದ ನಂಬಿಗೆ ಉಂಟಾಗಿದೆ. ಇವರು ತಾವೊಬ್ಬರೆ ಮುಂದೆ ಹೋಗಬಯಸುವದಿಲ್ಲ. ಇಡೀ ಸಮಾಜವನ್ನು ಸಾವ ಧಾನವಾಗಿ ಎತ್ತುತ್ತ ಮುಂದುವರಿಸುತ್ತ ನಡೆದಿದ್ದಾರೆಂದು ಇವರ ನಡೆನುಡಿ ಯಿಂದ ಬಲ್ಲವರಿಗೆ ತಿಳಿಯದೆ ಇರದು. ಇವರು ಆದಿವಾಸಿಗಳಿಂದ ಸಹ ಮುಟ್ಟಿ ನಮಸ್ಕರಿಸಿಕೊಳ್ಳುವರು. ಇಂಥ ಮಹಾಸ್ವಾಮಿಗಳು ಪಂಚಾಳ್ದಲ್ಲಿ ಜನಿಸಿದ ಸಿದ್ಧಲಿಂಗದೇವರ ಪುಣ್ಯತಿಥಿಯನ್ನು ನಿರಭಿಮಾನ ನಿರಹಂಕಾರದಿಂದ ಭಕ್ತಿ, ಪ್ರೀತಿ, ವಿಶ್ವಾಸಗಳಿಂದಲೇ ಆಚರಿಸುತ್ತಿರುವರು. ಅನ್ಯರೆಂಬ ಭೇದ ಎಳ್ಳಷ್ಟೂ ಮಾಡುವದಿಲ್ಲ. ಇದನ್ನು ಸಕಲರೂ ಕಲಿತುಕೊಂಡು ಆಚರಿಸು ವದು ಒಳ್ಳೇ ಭೂಷಣವಾಗಿರುವದು. ಅಂತು ಪುಣ್ಯತಥಿಯು ಸಕಲರಿಗೂ ಆದರ್ಶವಾಗಿತ್ತು.

———o———

# ಹರಿಹರದೇವನ ಮಲುಹಣ ರಗಳೆ.

[ ಲೇಖಕರುಃ- ಶ್ರೀಯುತ ಮ. ಮಲ್ಲಪ್ಪ ಜ್ಞಾನಮಂದಿರ, ಹಲಗೂರು ]

............●............

ಹರಿಹರದೇವನದು ಒಂದು ವಿಶಿಷ್ಟವಾದ ಭಕ್ತಿಮಾರ್ಗ. ಭಕ್ತಿಯೇ ಸಾಕ್ಷಾತ್ಕಾರವಾಗಿ ಮಾನವನ ರೂಪನ್ನು ತಾಳಿರುವಂತೆ ತನಗೆ ಬೇಕಾದ ಅನೇಕ ಪ್ರತಿಕೃತಿಗಳನ್ನು ತನ್ನ ಹೃದಯ ಗರ್ಭಗುಡಿಯಲ್ಲಿ ಪ್ರತಿಷ್ಠಿಸಿ ಕವಿಯು ಪಂಪಾಪತಿಯ ಕೃಪೆಗೆ ಪಕ್ಕಾಗುತ್ತಾನೆ. ರಗಳೆಯ ಹೊಸ ಛಂದಸ್ಸಿನಲ್ಲಿ ಭಾವಮಯವಾದ ಶಿವಭಕ್ತರ ಕಥೆಗಳನ್ನು ಉದ್ವೇಗ ತುಂಬಿ ಹಾಡಿದವನಿರುವನು ಎಂದು ಕವಿ ಕಾವ್ಯ ಪರಿಚಯ ಕೃತಿಯಲ್ಲಿ ಉಕ್ತವಾಗಿದೆ. ರಗಳೆಗಳಲ್ಲಿ ಬರುವ ಪ್ರತಿಯೊಬ್ಬ ಭಕ್ತ ಭಕ್ತೆಯರ ಪಾತ್ರವೂ ಈತನ ಭಕ್ತಿಯ ಒಂದು ಪ್ರತೀಕವಾಗಿದೆ. ಇಲ್ಲಿ ಕಾಣಬರುವ ಕಣ್ಣಪ್ಪನಾಗಲೀ ತಿರುನೀಲಕಂಠನಾಗಲೀ, ಮಲುಹಣನಾಗಲೀ, ಯಾರೇ ಆಗಲೀ ಸಕಲರೂ ಹರಿಹರದೇವನ ಭಕ್ತಿಯ ಒಂದೊಂದು ವಿಶೇಷ ಭಂಗಿಯ ಪ್ರತಿಮೆಗಳು ಭಕ್ತಿಗೆ ಬಾಗಿಲಾಗಿ ಮಾನವಶಕ್ತಿಯು ಸಾಗಿದರೆ ಮಾತ್ರ ಮುಕ್ತಿಗೆ ಮಾರ್ಗ ಸಿಕ್ಕುತ್ತದೆ. ಕಷ್ಟ ಕಾರ್ಪಣ್ಯಗಳಿಗೆ ಕರಗದೆ ಕಾಲು ಹಾಕಿದಾಗ ಮಾತ್ರ ಪರದಲ್ಲಿ ಪರಮಾನಂದವನ್ನು ಪಡೆಯುವಂತಾಗುತ್ತದೆ-

ಈ ತತ್ವದ ಬುನಾದಿಯ ಮೇಲೆ ಹರಿಹರದೇವನು ಕಾವ್ಯವನ್ನು ಕಡೆಯದೆ ಇಲ್ಲ. ಈ ಮಥನದ ಫಲವೇ ಮಲುಹಣ ರಗಳೆಯು ಜನ್ಮತಾಳುವಂತೆ ಮಾಡಿದೆ. ಹರಿಹರದೇವನ ಪ್ರಸಾದಿಕ ವಾಣಿಯಿಂದ ಹೊರಹೊಮ್ಮಿದ ಮನೋಹರ ಮಧುಪಾತ್ರೆಯೇ ಮಲುಹಣ ರಗಳೆ. ಇದರಲ್ಲಿ ಕವಿಯ ಅನೇಕ ಸಾಧನೆಗಳನ್ನು ನೋಡಬಹುದಾಗಿದೆ. ಸಂಪ್ರದಾಯ ಶರಣತೆಯ ಶಬ್ದಾಲಂಕಾರ, ಅರ್ಥಾಲಂಕಾರ ವರ್ಣನೆಗಳು ಇಲ್ಲಿ ಇವೆ. ಚಿತ್ರತರವಾದ ಬಗೆಯಲ್ಲಿ ಸನ್ನಿವೇಶಗಳ ವಿಸ್ತಾರವಾದ ವರ್ಣನೆಗಳನ್ನು ಅಳವಡಿಸಿ, ಶೃಂಗಾರದ ಪರಿಕರದ ಮೇಲೆ ಕಾವ್ಯ ಪರಿಕರವನ್ನು ಸುರಿದು ಶೃಂಗಾರ ಪೂಜೆಯನ್ನು ಕವಿಯು ನಡೆಯಿಸಿದ್ದಾನೆ. ಈ ಶೃಂಗಾರ ಪೂಜೆಯು ಶಂಕರನ ಪೂಜೆಯಾಗಿ ಪರ್ಯವಸಾನವಾಗುವ ಬಗೆಯುಲ್ಲಂತೂ ಅತ್ಯಂತ ರಮಣೀ

ಯತಿಯನ್ನು ಪರಿಸ್ಪಷ್ಟಗೊಳಿಸಿ ಪರಿಣಾಮವನ್ನು ಸಫಲಗೊಳಿಸಿದ್ದಾನೆ- ಮಲು ಹಣನ ಪಾರ್ಥಿವ ಪ್ರಣಯವು ದೈವ ಭಕ್ತಿಯಾಗಿ ಪರಿವರ್ತಿತವಾಗಿದೆ. ಮಲು ಹಣ ಮತ್ತು ಮಲುಹಣಿಯರ ಪ್ರಣಯಕ್ಕೆ ಮಲುಹಣಿಯ ತಾಯಿಯು ಮದ್ಯೆ ಅಡ್ಡಿಬರುತ್ತಾಳೆ. ಮಲುಹಣನ ಪ್ರಾರ್ಥನೆಯಿಂದ ಶಿವನು ಪ್ರತ್ಯಕ್ಷ ನಾಗುತ್ತಾನೆ. ಈ ನಾಲ್ಕು ಪಾತ್ರಗಳಿಂದಲೇ ಕವಿಯು ನಾಟಕವನ್ನಾಡಿಸಿ ಆದರತ್ತ ನಮ್ಮನ್ನು ಸಾಗಿಸಿದ್ದಾನೆ. ಡಾ. ರಂಗನಾಥ ಶ್ರೀನಿವಾಸ ಮುಗುಳಿ ಯವರು ಕವಿಯ ವಿಚಾರವಾಗಿ ಇಂತು ನುಡಿದಿದ್ದಾರೆ.

"ಹರಿಹರನು ಹಿರಿಯ ಭಕ್ತ ಕವಿ. ಮೇಲಾದ ಶಿವಕವಿ. ಇವನೆಲ್ಲ ಕೃತಿಗಳಲ್ಲಿ ಭಕ್ತಿಪೂರ್ಣವಾದ ಭಾವ ನಿರ್ಭರವಾದ ಸಮಗ್ರ ವ್ಯಕ್ತಿತ್ವ ವೊಂದು ಕಾಣುತ್ತದೆ. ಪಾಂಡಿತ್ಯ ಪ್ರತಿಭೆಗಳ ರೆಕ್ಕೆಗಳನ್ನು ಬಿದಿರಿ ಭಕ್ತ ಹೃದಯವನ್ನು ತೆರೆದು ದಣಿವಿಲ್ಲದೆ ಹಾಡುತ್ತ ಹಾರುವ ಹಕ್ಕಿಯಂತೆ ಅವನು ತೋರುತ್ತಾನೆ."

ಕಾವ್ಯದ ಸಾರಭೂತವಾದ ಕಂದ ಪದ್ಯವೊಂದನ್ನು ಹಾಡಿದ ಮೇಲೆ ಕವಿಯು ಕಥೆಯನ್ನು ಹೇಳಲು ಆರಂಭಿಸುತ್ತಾನೆ. ಹವಣು ತಿಳಿದು ಆಯಾಯ ಸಮಯಕ್ಕೆ ಯೋಗ್ಯವಾಗಿ ವರ್ಣನೆಯನ್ನು ಕೊಡುವ ಹರಿಹರದೇವನ ಕೌಶ ಲ್ಯವು ವ್ಯಕ್ತವಾಗಿದೆ. ಕಾಶ್ಮೀರ ದೇಶವು ಶ್ರೀ ವಸುಮತೀವದನ ಮುಕುರ ವಾಗಿದೆ. ಅಲ್ಲಿ ಶ್ರೀ ಶಾರದಾದೇವಿಯು ನೆಲೆಸಿದ್ದಾಳೆ. ಮನೋಹರ ಕಲಾ ವಿದರು ಕಂಗೊಳಿಸಿರುತ್ತಾರೆ. ಘನವಿಚಾರಗಳನ್ನು ಕೇವಲ ಕೆಲವು ನುಡಿಗ ಳಲ್ಲಿಯೇ ಹೃದ್ಯವಾಗಿ ಹೇಳುವ ಹದದ ಹಿರಿಮೆಯು ಹರಿಹರದೇವನಲ್ಲಿ ಹುದುಗಿರುವುದು ಚನ್ನಾಗಿ ವ್ಯಕ್ತವಾಗುತ್ತಿದೆ.

ಊರೂರ್ಗೆ ತೀವಿದ ತಟಾಕ ನಿಕರಂಗಳಿಂ
ಊರೂರ್ಗೆ ಕಿಕ್ಕಿರಿದು ಕೊರ್ವಿದ ಬನಂಗಳಿಂ
ಬನದೊಳಗೆ ಸುಳಿತರ್ಪ ಕಸ್ತುರಿ ಮೃಗಂಗಳಿಂ
ಬಿನದದಿಂ ಪರಿತರ್ಪ ಚಮರೀ ಮೃಗಂಗಳಿಂ
ದೇವಮಾತೃಕ ನದೀಮಾತೃಕದ ಬೆಳೆಗಳಿಂ
ದೇವ ನದಿಯಂದದಿ ಪರಿವರಿವ ನದಿಗಳಿಂ
ನಗರಿನಗರಿಯೊಳೆಸೆವ ದೇವಾಲಯಂಗಳಿಂ
ಮುಗಿಲನಳ್ಳಿರಿವ ಘನ ಮಾಡ ಕೂಟಂಗಳಿಂ

ಕಾಶ್ಮೀರ ದೇಶದ ವಾತಾವರಣವು ನಮ್ಮ ಕಣ್ಣಿನ ಮುಂದೆ ಬಂದು ನಿಲ್ಲುತ್ತದೆ. ಶಬ್ದಗಳ ಶ್ಲೇಷೆಯ ಮೂಲಕ ಅಲ್ಲಿನ ಸುಸ್ಥಿತಿಯ ಸ್ಥಾಪನೆ ಮಾಡುವ ಬಗೆಯನ್ನು ಕವಿಯು ತೋರಿಸಿದ್ದಾನೆ.

ಬಂಧನಂ ಪೂಮಾಲೆಯೊಳಗಲ್ಲದಿಲ್ಲಲ್ಲಿ
ಅಂಧ ಕತ್ವಂ ಕಳ್ತಲೆಯೊಳಲ್ಲದಿಲ್ಲಲ್ಲಿ
ತೊಯ್ವ ನುಡಿ ಕೆಯ್ಗಳೊಳ್ಮಾನಿನಿಯರಳಕದೊಳ್
ಬಯ್ವ ನುಡಿ ಗಿಳಿಗಳೊಳ್ನಲ್ಲರೊಳ್ ಸರಸದೊಳ್
ಬಡತನಂ ಲತೆಗಳೊಳ್ ಲಲನೆಯರ ನಡುವಿನೊಳ್
ಕೆಡಿಸುವುದು ವಂಶಮಂ ಮೇದರೊಳ್ ವೃಷಭನೊಳ್
ಅವನಿಗತಿ ಕಂಟಕಂ ಕೇತಕೀ ವೃಂದದೊಳ್
ಭುವನ ಕಂಟಂಕವೆಂಬುದಂಬುಜದನಾಳರೊಳ್
ಪೆರ್ಚು ಕುಂದೆಂಬುದಾ ಚಂದ್ರನೊಳ್ ಶರಧಿಯೊಳ್
ಪೆರ್ಚಿರ್ದ ದಾನಾರ್ಥವೆಂಬುದಾ ತುಂಬಿಯೊಳ್

ನಾಡಿನ ಸಂತತ ಸೌಖ್ಯವನ್ನು ವಾಚಕರಿಗೆ ಕವಿಯು ಸರಳವಾಗಿ, ಸಾಂಗೋಪಾಂಗವಾಗಿ ತಿಳಿಸಿದ್ದಾನೆ. ಕಾಶ್ಮೀರ ದೇಶದಲ್ಲಿ ಭೂದೇವತೆಯ ನೊಸಲ ತಿಲಕವಾಗಿರುವ ಭಾರತೀ ಪೀಠವು ಒಂದು ನಗರ ಇದು ಪರಿ ಶುದ್ಧ ಸ್ಫಟಿಕದ ಕೋಟೆಯಿಂದ ಸುತ್ತುವರಿಯಲ್ಪಟ್ಟು, ಶಿವಕಥನ, ಶೈವಾ ಗಮ ಶ್ರವಣಗಳಿಂದಲೂ, ಕಳಹಂಸ, ಮಿಥುನಗಳು ಬಳಸಿದ ಕೊಳಗಗ ಳಿಂದಲೂ, ಬಾಳೆ, ಕಿತ್ತಳೆ, ನೇರಿಳೆ, ನಿಂಬೆ ಇತ್ಯಾದಿ ತೋಟಗಳಿಂದಲೂ, ಅಲ್ಲಲ್ಲಿ ಶಶಿಕಾಂತ ಭವನಿಕೆಗಳಿಂದಲೂ, ನವ ಸೂರ್ಯ ಸೋಮವೀಥಿಗಳಿಂದಲೂ ರಾರಾಜಿಸುತ್ತಿರುತ್ತಿವೆ. ಸಾಂಪ್ರದಾಯಿಕ ನಗರ ವರ್ಣನೆಯಿದ್ದರೂ ವಿಸ್ತಾರ ವಿರದೆ ಹೆಚ್ಚನ್ನು ಅಳವಡಿಸಿಕೊಂಡಿರುವ ಕಿರಿದಿದೆ. ಈ ಭಾರತೀ ಪೀಠ ವನ್ನು ವೀರಲಕ್ಷ್ಮೀವರನೂ, ಗಾಂಭೀರ್ಯವಿಸ್ತರನೂ ಆದ ಅಪ್ರತಿಮ ಭೂಪನು ಆಳುತ್ತಿರುತ್ತಾನೆ. ಸಂಪತ್ತಿನಲ್ಲಿ ಕುಬೇರನಿಗೆ ಸರಿಸಮಾನವಾದ ಸುವರ್ಣ ಭಟ್ಟನೆಂಬ ವಿಪ್ರನು ಅಲ್ಲಿ ಇದ್ದನು. ಈತನ ಔದಾರ್ಯದ ವರ್ಣನೆಯಲ್ಲಿ ಕನ್ನಡ ಸಂಸ್ಕೃತಿಯ ಆದರ್ಶವನ್ನು ನೋಡಬಹುದಾಗಿದೆ.

ಪೊರ್ದಿದಪೊರ್ರೆದರ್ಗೆ ಕೋಟಿ ಸಂಖ್ಯೆಯ ಧನಂ
ಸಾರ್ದ ಶಿಷ್ಯಾವಳಿಗನಂತ ಸಂಖ್ಯೆಯ ಧನಂ

ಹೆಸರ ಸತ್ರಂ ಹೆಸರ ಪುರವರ್ಗವಲ್ಲಲ್ಲಿ
ಹೆಸರ ಕೆರೆಯರವಟಿಗೆ ಯಾರವೆಗಳಲ್ಲಲ್ಲಿ
ಹೆಸರ ಗ್ರಾಹರಂ ಶಿವಾಲಯಗಳಲ್ಲಲ್ಲಿ
ಹೆಸರ ಧರ್ಮ ಪ್ರಕರಣವೆಣಿಸಲೆನಗರಿದಲ್ಲಿ

ಈ ವಿಪ್ರನಿಗೆ ಮಲುಹಣನೆಂಬ ಮಗನು ಜನಿಸುತ್ತಾನೆ. ಈ ಮಗು ಪಿತನ ಕಣ್ಮಣಿಯಾಗಿ, ಮಾತೆಯ ಮುದ್ದಾಗಿ, ಮಕ್ಕಳ ಮಾಣಿಕ್ಯವಾಗಿ ಬೆಳೆಯುತ್ತಿರುತ್ತಾನೆ. ಉಪನಯನ, ಶೈವೋಪದೇಶವು ಈತನಿಗೆ ದೊರಕುತ್ತದೆ. ನೃತ್ಯ, ಸಂಗೀತ, ವೇದ, ಶಾಸ್ತ್ರವನ್ನು ಕಲಿತುಕೊಳ್ಳುತ್ತಾನೆ. ಆಗಲೇ ಈತನ ಜನಕನು ಈತನಿಗೆ ನೂರು ವರ್ಷಗಳಿಗಿಂತಲೂ ಹೆಚ್ಚಿಗೆ ಕಾಲಕ್ಕೆ ಆಗುವಂತೆ ಹೊನ್ನನ್ನು ಕೂಡಿಸಿಡುತ್ತಾನೆ ಕಾಲನ ದಾಳಿ ನಿಂದು ರೋಗದ ದಾಳಿ ಬಂದು ಉಗ್ರ ಜ್ವರದ ತಾಪದಿಂದ ಅಳ್ಕಿ ಸುವರ್ಣಭಟ್ಟನು ಸತ್ತು ಹೋಗುತ್ತಾನೆ. ಮುಂದುಗೆಟ್ಟ, ಅರಿವುಗೆಟ್ಟ ಮಲುಹಣನು ಸರ್ವಸಂಭ್ರಮದಿಂದ ತಂದೆಯ ಸಂಸ್ಕರಿಸಿ, ಪಿಂಡಪಿತೃ ಕಾರ್ಯವನ್ನು ಸಲ್ಲಿಸುತ್ತಾನೆ. ಬರು ಬರುತ್ತ ಉತ್ತಮ ವ್ಯವಹಾರ ಪರಿಣತನಾಗಿ ಇರುತ್ತಿರಲು ಮಲುಹಣನಿಗೆ ಪ್ರಾಯವು ಪ್ರಾಪ್ತವಾಗುತ್ತದೆ. ಈ ಯೌವನೋದಯದ ಸನ್ನಿವೇಶವನ್ನು ಕವಿಯು ಮನೋಜ್ಞವಾಗಿ ವರ್ಣಿಸಿದ್ದಾನೆ.

ಸವಿನುಡಿಗಳಂ ಕಿವಿಗಳಾಲಿಸಲ್ತೊಡಗಿದವು
ನೋಟವೊಪ್ಪುವ ರೂಪನೆಚ್ಚರಿಸಲೆಳಸಿದವು
ಕೋಟಿಗೆಳಿಸುವ ಪುರ್ಬು ಗಂಟಿಕ್ಕತೊಡಗಿದವು
ನವ ಮಧುರಮಂ ಜಿಹ್ವೆ ಬಯಸಲನುಗೈಯಿತ್ತು
ನವಗಂಧಮಂ ಘ್ರಾಣ ಬರಿಯಲನುಗೈಯಿತ್ತು
ಗುಡಿ ಮೆಲ್ಲ ಮೆಲ್ಲನಕ್ಷೆಗಳತ್ತ ಹೊದ್ದಿತ್ತು
ನಡೆಯುರವಣೆಯನುಳಿದು ಗಮಕದೊಳ್ಬೆರಸಿತ್ತು
ಕರಕಳಂಕನು ರುಚಿಯ ನೋವನಂಗೈಸಿದವು
ಕರಣತತಿಭೋಗ ಸಂಪದನುನಿಚ್ಚೈಸಿದವು

ಹರೆಯದ ಮೂಲಕ ಮಲುಹಣನ ಪಂಚೇಂದ್ರಿಯ ಪ್ರೀತಿ ಹೆಣ್ಣಿನಾಸೆಯಾಗಿ ತಿರುಗುತ್ತದೆ.

ಅಂಗರುಚಿ ಮುಗ್ಧೆಯರ ಕಣ್ಗೆ ಕನ್ನಡಿಯಾಗೆ ಹರಿಹರದೇವನ ಉತ್ತಮ ಕಲ್ಪನಾಶಕ್ತಿಗೆ ಇದು ದರ್ಪಣವಾಗಿದೆ. "ಸುರಕುಜದ ಚಂದನದ ಕರ್ಪೂರದ ಸಸಿಯಂತೆ, ಪರಿಮಳದ ಚಂದ್ರಿಕೆಯ ಕಾಂತಿಕರುವಿಟ್ಟಂತೆ" ಮಲುಹಣನು ಹರೆಯದವನಾಗುತ್ತಾನೆ.

ಇತ್ತ ಆ ನಾಡಿನ ದೇವತೆಯಾದ ವಿಜಯೇಶ್ವರ ಸ್ವಾಮಿಯ ಪಾತ್ರದ ವಿಳಾಸಿನಿಯಾದ ಪದ್ಮಾವತಿಗೆ ಮಲುಹಣಿ ಎಂಬ ಪುತ್ರಿ ಇರುತ್ತಾಳೆ. ಸುಲಕ್ಷಣೆಯಾಗಿ, ನಾಟ್ಯವಿದ್ಯಾ ಪಾರಂಗತೆಯಾಗಿ, ರತಿಯ ಪ್ರತಿರೂಪಾಗಿ ಈಕೆ ಇರುತ್ತಾಳೆ. ಸಾಂಪ್ರದಾಯಿಕತೆಯಲ್ಲಿಯೂ ನೂತನ ಚಮತ್ಕೃತಿಯನ್ನು ಕಾಣುವಂತೆ ವರ್ಣನೆಯನ್ನು ಕವಿಯು ಕೊಟ್ಟಿದ್ದಾನೆ.

ಮನವನೆಡೆಗೊಂಡನಾ ಮನಸಿಜಂ ಪರಿತಂದು
ತನುವೆಡೆಗೊಂಡುದಾ ಸೌಭಾಗ್ಯವೆಯ್ತಂದು
ಪ್ರೇಮದಿಂ ಮಧು ರೂಪಿನೊಳ್ಪುಗಲ್ನೂತನಂ
ಪೂಮುಡಿಯನಿಂಬುಗೊಂಡುದು ಮಕರಕೇತನಂ
ಭ್ರೂಲತೆಯನಾಶ್ರಯಿಸಿತಿಕ್ಷು ಚಾಪಂ ನೋಡ
ಆ ಲೋಕನವನೊತ್ತುಗೊಂಡವಲರ್ಗಣೆ ನೋಡ

ಸರ್ವಾಂಗಗಳಿಗೆ ಹೋಲಿಸಿದ ವಸ್ತುಗಳು ಸಾಮಾನ್ಯವಾಗಿ ಸಾಂಪ್ರದಾಯಿಕವಾದರೂ ಅವುಗಳಲ್ಲೆಲ್ಲ ಕಾಮ, ಆತನ ಪರಿವಾರದ ವಸ್ತು ಹಾಗೂ ಜೀವಿಗಳ ಸಹಚರ್ಯವನ್ನು ಸಮಗ್ರವಾಗಿ ತಂದಿರುವಲ್ಲಿ ಕಥಾನಕದ ಔಚಿತ್ಯವಾದ ಮಲುಹಣ ಮಲುಹಣಿಯರ ಕಾಮ ಸೂತ್ರದ ಬಂಧನದಲ್ಲಿ ಸಾರ್ಥಕತೆಯನ್ನು ಹೊಂದಿವೆ. ಆಕೆಯ ತುಂಬು ಹರೆಯವು ಚೆಲುವಿನ ಹೊನಲಾಗಿದೆ.

ಅಳಿತುಡುಂಕದ ಮಘಮಘಿಪ ಬಿರಿಮುಗುಳಂತೆ
ಎಳಸುವ ಚಕೋರಿ ಮೊಗವಿಡದ ಚಂದ್ರಿಕೆಯಂತೆ
ಪಿಕ ಚುಂಚು ಸಂಚಾರವಿಲ್ಲದೆಳೆದಳಿರಂತೆ
ಶುಕ ಮುಖದಿ ಅಣ್ಣೆವಳಿಯದ ಪಕ್ವಫಳದಂತೆ
ತೊಳತೊಳಗಿ ಬಳೆವುತಿರ್ದಳ್ ಚಂದ್ರಕಳೆಯಂತೆ
ನಳನಳಿಸಿ ಬಳೆವುತಿರ್ದಳ್ ಕುಸುಮಶರದಂತೆ

ಈಕೆಯ ಸಕಲ ಅವಯವಗಳ ಚಲುವಿನ ಬಣ್ಣನೆಯಲ್ಲಿ ಶಬ್ದಗಳ ಆಯ್ಕೆ ಮತ್ತು ಶೈಲಿಯ ಸೊಬಗು ಬಹು ರಮಣೀಯವಾಗಿದೆ. ಮಗಳ ಸಸುಂದರ ರೂಪನ್ನು ಪದ್ಮಾವತಿಯು ನೋಡಿ ಸುಖರಸದಕ್ಲೋಲಾಡುತ್ತಾಳೆ.

ಕಡುನೇಹದಿಂ ನವಲಾಸ್ಯಮಂ ಮೈಗೊಳಿಸಿ
ಮೃಡನೊಲ್ವರಸಗಾನಮಂ ನೆರೆಕೊರಳ್ಗೊಳಿಸಿ
ಮಗಳ ನಿಟ್ಟಿಸುತ ಕಣ್ಣೊಳಗಿಕ್ಕಿ ಮುಚ್ಚುತಿರೆ
ಮಿಗೆ ವಿಳಾಸಿನಿಯರಿಂ ಸಿಂಗರಿಸುತಿರುತಮಿರೆ

ದ್ವಿತೀಯ ಸ್ಥಲದಲ್ಲಿ ಪ್ರಾರಂಭದಲ್ಲಿನ ಕಂದಪದ್ಯವೊಂದನ್ನು ಬಿಟ್ಟು ಉಳಿದುದೆಲ್ಲ ಗದ್ಯದಲ್ಲಿದೆ. ಈ ಕಾವ್ಯದ ಯೋಗ್ಯತೆಯನ್ನು ಇದು ಅದ್ವಿತೀಯವಾಗಿ ಎತ್ತಿತೋರಿಸುತ್ತದೆ. ಇಂದ್ರಿಯ ವೇದ್ಯವಾದ ವರ್ಣನೆಗಳ ಸೊಗಸು ಇಲ್ಲಿ ಸೂರೆಯಾಗಿದೆ. ಈಗ ಎಲ್ಲವೂ ಮಲುಹಣಿಗೆ ಹೊಸದು.

ಹೊಸ ನಡೆ ಹೊಸ ನುಡಿ ಹೊಸ ಮುಡಿ ।
ಹೊಸ ಹೊಸ ಸೌಭಾಗ್ಯವೆಸೆವ ಹೊಸ ಲಾವಣ್ಯಂ ।
ಹೊಸ ಹರೆಯಂ ಹೊಸ ನೋಟಂ ।
ಹೊಸ ಜವ್ವನದೇಳ್ಗೆ ಮಲುಹಣಿಗೆ ಚಿತ್ರತರಂ ॥

ಒಂದು ದಿವಸ ಪದ್ಮಾವತಿಯು ಮಲುಹಣಿಯನ್ನು ಸಕಲಾಲಂಕೃತೆಯನ್ನಾಗಿ ಮಾಡಿಕೊಂಡು ಸಖಿಯರ ಸಂಗಡ ವಿಜಯೇಶ್ವರ ದೇವಸ್ಥಾನಕ್ಕೆ ಕರೆತರುತ್ತಾಳೆ. ಮಲುಹಣಿಯ ಅಲಂಕಾರ ವೈಭವದಂತೆಯೇ ಇಲ್ಲಿನ ಶೈಲಿಯ ಸೊಗಸೂ ಸಹ ಅಲಂಕಾರದಿಂದ ಇನ್ನೂ ರಮಣೀಯವಾಗಿದೆ.

" ಚಕ್ರಮಿಥುನಕ್ಕೆ ಗವಸಣಿಗೆಯನಿಕ್ಕುವಂತೆ ಕುಚಯುಗಕ್ಕೆ ಕಂಚುಕೆಯಂ ತೊಡಿಸಿ ತೋರಮುತ್ತಿನ ಹಾರಮಂ ಹತ್ತೆ ಸಾರ್ಚಿ ಶಶಿ ಬಿಂಬಕ್ಕೆ ಶುಕ್ರನಂ ಸೇರಿಸುವಂತೆ ಮುಖಬಿಂಬದೊಳ್ ಮುತ್ತಿನ ಮೂಕುತಿಯಂ ಮೋಳ್ಪಿಸಿ ಕಾವನಂಬಂ ಕತ್ತುರಿಯ ಸಾಣೆಯಿಕ್ಕುವಂತೆ ಕಜ್ಜಳಮನೆಚ್ಚಿ ಎಳೆಲತೆಯಂ ಬೆಳ್ದಿಂಗಳಂ ಬಾಸಣಿಸುವಂತೆ ನವದುಕೂಲಮಂ ನಿರಿವಿಡಿದುಡಿಸಿ "

ದೇವಸ್ಥಾನಕ್ಕೆ ಸಖೀಜನಸಹಿತಳಾಗಿ ಅಲಂಕೃತ ಮಲುಹಣಿಯು ಬರುವಾಗ—

"ಮಲುಹಣಿಯ ಮರೆಗೊಂಡು ಕರ್ಬಿನ ಬಿಲ್ಲಗೊಲೆಗೇರಿಸುತ್ತ ಎಲರ್ದುಂಬಂ ನಡೆತರೆ."........"ತುಂಬಿಗಳ ಝೆಂಕಾರಂ ಕಂಕಣದ ಝಣತ್ಕಾರಂ ನೂಪುರದ ಕ್ರೇಂಕಾರಂಪಾದ ಮುದ್ರಿಕೆಯ ಠಣತ್ಕಾರಂ ಮದನನ ಬಿಲ್ಲ ಟೇಂಕಾರಂಬೆರಸಿ ಬೆಳೆದು ಪುರಜನರ ಕಿವಿಗಳ್ಗೆ ಹೊಸ ಸವಿಗಳಂ ಸಾಲಿಡೆ. "

ಇಲ್ಲಿ ಪಂಚೇಂದ್ರಿಯ ಪ್ರೀತಿಯನ್ನು ಉಂಟು ಮಾಡುವ ಕವಿಯ ವರ್ಣನಾಸಾಮರ್ಥ್ಯದ ಕಿವಿಕಣ್ಣುಗಳ ಆಕರ್ಷಣೆಯು ಪರಿಸ್ಪಷ್ಟವಾಗಿದೆ.

ಮಲುಹಣ ಮೊದಲಿನಿಂದಲೂ ಪರಮಶಿವಭಕ್ತ. ವಿಜಯೇಶ್ವರನಿಗೆ ನಿತ್ಯನೇಮದ ಪೂಜಾದಿಗಳನ್ನು ಮಾಡುತ್ತಿರುವ ಈತನು ಭಕ್ತಿಯಲ್ಲಿ ಯಾರಿಗೂ ಕಡಿಮೆಯಿರಲಿಲ್ಲ. ಈ ಬಗೆಯ ಮಲುಹಣ ನಿತ್ಯನಿಯಮದಂತೆ ಸ್ನಾನಾದಿಗಳನ್ನು ಮುಗಿಸಿಕೊಂಡು, ಮಡಿಯನ್ನುಟ್ಟು ಜೊತೆಗಾರರ ಜೊತೆಯಲ್ಲಿ ದೇವಸ್ಥಾನಕ್ಕೆ ಪೂಜೆಗಾಗಿ ಬರುತ್ತಾನೆ. ದೇವರ ಪೂಜೆಯು ಮುಗಿದ ಮೇಲೆ ಮುಂದಣ ರಂಗಮಂಟಪದ ಮಧ್ಯೆ ನರ್ತನವನ್ನು ನೋಡಲು ಬಂದಿದ್ದ ಮಂದಿಯನ್ನು ಮಲುಹಣನು ನೋಡುತ್ತಾನೆ. ಆಗ ವಿವಾಹ ಮುಹೂರ್ತದ ತೆರೆ ಸರಿವಂತೆ ಮಲುಹಣ ನೋಡೆ ನೋಡೆ ಜವನಿಕೆಯೋಡುತ್ತದೆ. ನರ್ತಕಿಯಾಗಿ ಬಂದಿದ್ದ ಮಲುಹಣಿಯ ದೃಷ್ಟಿಯೂ, ಮಲುಹಣನ ದೃಷ್ಟಿಯೂ ಪರಸ್ಪರ ನೆಟ್ಟು ಉಭಯರೂ ಮೋಹಪರವಶರಾಗುತ್ತಾರೆ. ರಂಗಮಂಟಪ ವಿರಹಮಂಟಪವಾಗುತ್ತದೆ. ಈಶ್ವರ ಕೇಳಿ ರತೀಶ್ವರ ಕೇಳಿಯಾಗುತ್ತದೆ. ಧನಿಕನಾದ ಈತನು ಮಲುಹಣಿಯ ಸೆಜ್ಜೆ ಮನೆಯನ್ನು ಸೇರುತ್ತಾನೆ. ಸಾಮಾನ್ಯವಾಗಿ ಕನ್ನಡ ಕವಿಗಳು ದಾಂಪತ್ಯದ ಚಿತ್ರಣದಲ್ಲಿಯೂ ಎಲ್ಲೆ ಮೀರುವುದು ಕಾಣಬರುತ್ತದೆ. ಇಲ್ಲಿನ ವಿಲಾಸದ ಚಿತ್ರಣದಲ್ಲಿ ಇವರಿಬ್ಬರ ಮೇಲೆ ಮೀರಿದ ಶೃಂಗಾರದ ಆನಂದವನ್ನು ಚಿತ್ರಿಸುವಲ್ಲಿ ಎಲ್ಲೆ ಮೀರದೆ, ಕ್ರಿಯೆಯನ್ನು ಭಾವವಾಗಿ ರೂಪುಗೊಳಿಸಿ, ಭಾವಗಳನ್ನು ಗಮ್ಯಮಾಡುವಲ್ಲಿ ಹಲವು ರಮ್ಯರೂಪಕಗಳನ್ನು ಬಳಿಸಿ ರಸಮಯವಾದ ಶೃಂಗಾರ ಚಿತ್ರಣವನ್ನು ನೀಡುವಲ್ಲಿ ನಿಜವಾದ ಮಹಾಕವಿಯ ಸಾಮರ್ಥ್ಯವನ್ನು ಹರಿಹರದೇವನು ವ್ಯಕ್ತಪಡಿಸಿದ್ದಾನೆ.

" ನೋಟವರಿದಪ್ಪುವ ಸ್ಯೆರಣೆಯವರಿದು ಸೋಂಕುವ ಆಸೆಯರಿದ ಲಂಗಿಸುವ ಬಯಕೆಯರಿದು ಬೆರಸುವ ಮನವರಿದನುಭವಿಸುವ ಇಚ್ಛೆಯರಿದು

ಹೆಚ್ಚುವ ಅಗ್ಗಳಿಕೆಯರಿಂದು ಬೋಳೈಸುವ ಎಚ್ಚರಿಕೆಯ ಸಮರತಿಯೊಳಿರ್ದು ಹಿಗ್ಗಿ ಸುಖದ ಸೋಂಕು ಸೆಳೆಯಲನುಗೆಯ್ವಲ್ಲಿಂ ಮುನ್ನಂ ರೋಮಾಂಚದ ಬಾಸುಳೆಳ್ಚಿ ಸುಕುಮಾರಾಂಗಿಯೆನಳೊಲ್ದು ನೆರೆವ ಸುಖಸಮಯದೊಳ್ಕರುಣ ವೆಲ್ಲಂ ನೋಟ ನೋಟವೆಲ್ಲಂ ನುಡಿನುಡಿಯೆಲ್ಲಂ ವಿರಹವಿರಹವೆಲ್ಲಂ ದೈನ್ಯ ದೈನ್ಯವೆಲ್ಲಿಂ ಸಾತ್ವಿಕಂ ಸಾತ್ವಿಕವೆಲ್ಲಿಂ ಮೆಯ್ಮೆಯ್ಯೆಲ್ಲಂ ಕೂಟಂ ಕೂಟ ವೆಲ್ಲಂ ಮನಂ ಮನಮೆಲ್ಲಂ ಮೆಚ್ಚು ಮೆಚ್ಚೆಲ್ಲಂ ಸೋಲಂ ಸೋಲವೆಲ್ಲಂ ರಸಮಯವಾಗಿ."

ಅಲ್ಲಿ ಇಬ್ಬರೂ ರತಿಸುಖವನ್ನನುಭವಿಸುತ್ತಾರೆ. ಎಷ್ಟು ದಿವಸಗಳಾದರೂ ಇಬ್ಬರಿಗೂ ತೃಪ್ತಿಯೇ ಆಗುವುದಿಲ್ಲ. ನೂರು ವರ್ಷಗಳಿಗೆಂದು ಸುವರ್ಣ ಭಟ್ಟನು ಕೂಡಿಸಿಟ್ಟ ಹೊನ್ನು ಕೆಲವು ದಿನಗಳಲ್ಲಿಯೇ ಸವೆದುಹೋಗುತ್ತದೆ. ಮಲುಹಣನಿಗೆ ಮಾತ್ರ ಮಲುಹಣಿಯ ಆಸೆಯು ತೀರುವದಿಲ್ಲ. "ಮುಡಿದ ಹೂವಗಲ್ದೊಡಂ ಹಿಡಿದ ಪರಿಮಳವಗಲದಿರ್ಪಂತೆ ಮೋಹ ರಸಾರದೆ ಮಲುಹಣ ಮಲುಹಣಿ ಪರಮಾನುರಾಗದೊಳಗಲದಿರೆ ಮಲುಹಣನ ಧನ ವೆಲ್ಲ ವ್ಯಯವಾಗುತ್ತದೆ. ಅರ್ಥದ ಸವಿಗೆ ಮನಮುಂ ನಾಲಗೆಯುಂ ಲನ ಲವಿಸಿ ಮಿಕ್ಕುಮೀರಿದ ರಕ್ಕಸಗುಂಟಣಿ ಪದ್ಮಾವತಿಯು ದುರಾಲೋಚನೆ ಮಾಡುತ್ತಾಳೆ.

ಪ್ರಣಯಿಗಳ ಜೊತೆಯ ಗಾಢತೆಗಾಗಿ ಇಲ್ಲಿ ಭೇರುಂಡಪಕ್ಕಿಯ ಹೋಲಿ ಕೆಯನ್ನು ಕೊಟ್ಟಿರುವದು ಸಹಜತೆಗೆ ಸಾಕ್ಷಿಯಾಗಿದೆ. ನಿನ್ನ ಮಾವನು ವಸ್ತ್ರಾಭರಣವನ್ನು ತಂದಿದ್ದಾನೆ ಎಂದು ತಾಯಿಯು ಹೇಳಿಕಳುಹಿಸಿ ಗಂಡ ನಿಂದ ಮಗಳನ್ನು ಅಗಲಿಸಲು ಪತಿರಹಿತ ಮಗಳು ನೊಸಲ ಕಣ್ಣ ಹೊಗೆ ಸುತ್ತಿದ ಪೂಸರದಂತೆ ಕೆಳದಿಯರ ಕಯೊಳ್ಕಯ್ಯ ನೀಡಾಡೆ ಮೆಲ್ಲ ಮೆಲ್ಲನೆ ಬಂದು ತಾಯಿಯನ್ನು ನೋಡುತ್ತಾಳೆ. ಹಣ ಮುಗಿಯಿತು, ಹರೆಯ ಹರಿ ಯಿತು, ಮಲುಹಣನ ಸಹವಾಸವನ್ನು ಬಿಡು ಎಂದ ತಾಯಿಯನ್ನು ಮಲು ಹಣಿಯು ಲೋಭ ಮುಂತಾಗಿ ಹುಟ್ಟಿದ ದೀನೆ, ಮುಪ್ಪ ಮುಂತಾಗಿ ಹುಟ್ಟಿದ ನಿರಸಸುಖಮಂ ಕೊಯ್ವಮಾನಸಗರಗಸವೇ ಆಗಿದ್ದೀಯೆ ಎನ್ನುತ್ತಾಳೆ. ಮಗಳ ಮೋಹದ ಫಲಿತವಾಗಿ ಕ್ರಮಕ್ರಮವಾಗಿ ಕೊಂಚ ಕೊಂಚ ಕಾಲ ಮಗಳನ್ನು ಅಗಲಿಸುವ ಅಭ್ಯಾಸವನ್ನು ತಾಯಿಯು ಮಾಡಿಸುತ್ತಾಳೆ. ಆಗಾಗ್ಗೆ ಮಲುಹಣನನ್ನು ಸೆಜ್ಜೆಯೊಳು ಮೂದಲಿಸಿ ಕುಳ್ಳಿರ್ದ ಕಡೆ ತುಸು ಹರಿದು ನಿಂದಿರ್ದೆಡೆಯೊಳು ನೀರನ್ನು ಚಲ್ಲುತ್ತಾಳೆ. ಮನೆಯ ಮುಂದೆ ಸುಳಿವ

ಶ್ರೀಮಂತ ತರುಣರ ಉಡುಗೆತೊಡುಗೆಯನ್ನು ನೋಡಿ ಸಹಿಸಲಾರದೆ ಅವುಡು ಕಚ್ಚಿ ನಿಷ್ಕಾರಣವಾಗಿ ವಿಲಾಸಿನಿಯರನ್ನು ಬಡಿದು ಕಾಲ್ಗಳವನ್ನು ತೆಗೆಯುತ್ತಾಳೆ. ಬೇನೆ ಇಲ್ಲದೆ ನರಳ್ದು ಸಾವಿಲ್ಲದೆ ಶೋಕಂಗೆಯ್ದು ಮಲುಹಣನನ್ನು ಮನೆಯಿಂದ ಹೊರದೂಡುತ್ತಾಳೆ. ಮಲುಹಣಿಯೂ ಸಹ ನಿರುಪಾಯಳಾಗುತ್ತಾಳೆ. ಮನದಲ್ಲಿಯೇ ಮಮ್ಮಲ ಮರುಗುತ್ತಾಳೆ, ವಿರಹ ಸೇವನೆಯಿಂದ ಬೇಯುತ್ತಾಳೆ; ಆದರೆ ತಾಯಿ ಕೈಕೆಳಗಿನ ಮಗಳು ಮಾಡುವುದು ತಾನೆ ಏನಿದೆ ?

ತೃತೀಯ ಸ್ಥಲದಲ್ಲಿ ಮಲುಹಣನ ವಿರಹತ್ತಾಪದ ವರ್ಣನೆಗೆ ಹೆಚ್ಚಿನ ಸ್ಥಾನವಿದೆ. ಕನ್ನಡ ಮಹಾ ಕಾವ್ಯಗಳಲ್ಲಿ ವಿರಹ ವರ್ಣನೆ ಬಿಡಲಾರದ ಕರ್ಮವಾಗಿ ಬಹುವೆಡೆ ಸಾಂಪ್ರದಾಯಿಕವಾಗಿ ಬಂದಿದೆ. ಹರಿಹರನಲ್ಲಿ ಅಕ್ಕ ಮಹಾದೇವಿಯ ಆತ್ಮದ ವಿರಹ, ಬಸವಣ್ಣನವರ ಭಕ್ತಿಯ ವಿರಹ, ಇವುಗಳ ಜೊತೆಗೆ ನಿಲಬಲ್ಲ ಸನ್ನಿವೇಶವು ಇದೊಂದೇ ಎಂದು ಮನವರಿಕೆಯಾಗದೆ ಇರದು. ವರ್ಣನಾಶಕ್ತಿಗೆ ಮಲುಹಣನ ರಗಳೆ ಉತ್ತಮ ಉದಾಹರಣೆಯಾಗಿದೆಯೆಂದು ಡಾ. ರಾ|| ಬ|| ಫ. ಗು. ಹಳಕಟ್ಟಿಯವರು ಹೇಳಿದ್ದು ಸಾರ್ಥಕವಾಗಿದೆ. ' ಹೊರಟು ಹೋಗಲಾರದೆ ಮನೆಯ ಮುಂದೆಯೇ ಮಲುಹಣನು ಮರುಗಿ ತಾಪಿಸುತ್ತ ಹುಚ್ಚನಂತಾಗಿ ಹಂಬಲಿಸುತ್ತಿರುತ್ತಾನೆ.

ನಿಂದರಂ ಕಂಡು ಮಲುಹಣಿ ಎನುತೆ ಸೋಂಕುವಂ
ಬಂದರಂ ಕಂಡು ಮಲುಹಣಿ ಎನುತ್ತಪ್ಪುವಂ
ಕಮಳಮಂ ಮಲುಹಣಿಯ ಮೊಗವೆಂದು ಮುಟ್ಟುವಂ
ಕುಮುದಮಂ ಕಣ್ಗಳೆಂದಕ್ಷೆಯೊಳಗೊತ್ತುವಂ

ಅಭಿನವ ಪಂಪನ ಕಾವ್ಯಾರಾಮದಲ್ಲಿ ಶ್ರೀರಾಮನ ಆಲಾಪವೂ ಇದೇ ಬಗೆಗೆ ಸೇರಿರುತ್ತೆ. ದಾರಿ ದಾರಿಗಳಲ್ಲಿ, ಬೀದಿ ಬೀದಿಗಳಲ್ಲಿ ಮಲುಹಣಿಯ ಕಳವಳದಿಂದ ತಳಮಳಿಸಿ ಕೊನೆಗೆ ಮಲುಹಣಿಯ ಮನೆಯ ಮುಂದಣ ಎಂಜಲು ಚೆಲ್ಲುವ ಒಂದು ಹೊಸ ಕುಳಿಯೊಳಗೆ ನಿಂತು ಮಲುಹಣಿಯ ಧ್ಯಾನವನ್ನೇ ಮಾಡುತ್ತಿರುತ್ತಾನೆ. ಆಗ ಮಲುಹಣಿಯು ಊಟ ಮಾಡಿದ ಹರಿಯಾಣವನ್ನು ತೊಳೆದು ಮಲುಹಣನ ಮೇಲೆ ಆ ನೀರನ್ನು ಚೆಲ್ಲಲು ' ಹಾ ! ಮಲುಹಣಿ !! ಹಾ ! ಮಲುಹಣಿ !!! ' ಎಂದು ಒರಲುತ್ತಾನೆ. ಈ ಕೂಗನ್ನು ಕೇಳಿದ ಮಲುಹಣಿ ಓಡಿ ಬಂದು ಸಂತೈಸಿ ಹೊರಟುಹೋಗುವಂತೆ ಹೇಳಿ ತನ್ನ ಸೆಜ್ಜೆ ಮನೆಗೆ ಹೋಗುತ್ತಾಳೆ; ಆದರೆ ಭ್ರಾಂತಿ ಪಟ್ಟ

ಮಲುಹಣನು ಆ ಇರುಳೆಲ್ಲಾ ಅಲ್ಲಿಯೇ ನಿಂತಿರಲು ಹಿಮವು ರಾಶಿ ರಾಶಿಯಾಗಿ ಬಿದ್ದು ಆತನನ್ನು ಪೂರ್ತಿಯಾಗಿ ಮುಚ್ಚಿತು. ವಿರಹದ ಉರಿಯಿಂದ ಆದೇ ಶಿಶಿರೋಪಚಾರವಾದಂತಾಯಿತು.

ಎಳೆಯ ಬೆಳ್ಮುಗಿಲೊಳಗೆ ಹೊಳೆವ ಪಾವಕನಂತೆ
ಹೊಳೆವಾಲಿ ಕಲ್ಲ ಮನೆಯೊಳಗಿರ್ಪ ರವಿಯಂತೆ
ದಿಟ್ಟಿಸಲ್ ಕಣ್ಮುಚ್ಚಿ ಹೊಯ್ವ ಸೀತದ ನಡುವೆ
ಮುಟ್ಟಿದೊಡೆ ಕೈ ಕಡಿದು ಬೀಳ್ವ ತುಹಿನದ ನಡುವೆ
ನೆನೆದೊಡೆ ಮನಂ ಮುರುಂಟುವ ಸೀತಳದ ನಡುವೆ
ತನುಕರಗಿ ಕೋಡಿಸುವ ಬಹಳ ಸೀತದ ನಡುವೆ

ಪದ್ಮಾವತಿಯಿಂದ ಆಗಬಾರದ ಅಪಮಾನಗಳು ಆದರೂ ಅದನ್ನೆಲ್ಲ ಸಹಿಸಿಕೊಂಡು ಸಾಗುತ್ತಿರುವ ಮಲುಹಣನ ಏಕನಿಷ್ಠ ಪ್ರೇಮ, ಕಷ್ಟಸಹಿಷ್ಣುತೆಯು ಗೊತ್ತಾಗುತ್ತದೆ. ಮಂಜಿನಿಂದ ಆವೃತವಾಗಿ ಯಾವುದರ ಜ್ಞಾನವೂ ಇಲ್ಲದೆ ಮಲುಹಣನನ್ನು ಬೆಳಗಿನ ಸಮಯದಲ್ಲಿ ಬಂದ ಮಲುಹಣೆಯು ನೋಡುತ್ತಾಳೆ; ಪ್ರಲಾಪಿಸುತ್ತಾಳೆ.

ಅಕಟಕಟ ಮಲುಹಣಂ ಹಿಮದೊಳ್ಮುರುಂಟಿದಂ
ಅಕಟಕಟ ಪಾಪಿ ಎನಗೊಲ್ದು ನೆರೆಮುಗ್ಗಿದಂ
ಪಾಪಿಯಾದೆಂ ಪಾಪಿಯಾದೆಂ

ಹಿಮವನ್ನು ಮರವುಟ್ಟಿನಿಂದ ಮಲುಹಣೆಯು ತೆಗೆಯಿಸುತ್ತಾಳೆ.

ಕಪಟವಳಿದೊಳಗೊಪ್ಪುವನು ರಾಗವಿರ್ಪಂತೆ
ಯುಪಚಾರವಳಿದು ಸತ್ಯ ಸ್ನೇಹವಿರ್ಪಂತೆ
ಇರ್ದನಾ ಮಲುಹಣಂ ವಿರಹಕ್ಕೆ ತಂಪಾಗಿ
ಇರ್ದನಾ ಮಲುಹಣಂ ತಾಪಕ್ಕೆ ತೆರಹಾಗಿ

ಮಲುಹಣೆಯ ಉಪಚಾರವು ಉದಾತ್ತ ಪ್ರೇಮದ ನೆನಪನ್ನು ತರುತ್ತದೆ. ಭವಭೂತಿಯು " ಅದ್ವೈತಂ ಸುಖದುಃಖಯೋರನುಗತಂ ಸರ್ವ ಸ್ವಾವಸ್ಥಾಸು" ಎಂದು ಹೇಳಿರುವದು ಈ ಸಮಯದಲ್ಲಿ ಸಮಂಜಸವಾಗಿ ಕಾಣುತ್ತದೆ. ಪ್ರಿಯಾರಾಧನೆಯ ರೀತಿಯನ್ನು ಹರಿಹರದೇವನು ಹೃದ್ಯವಾಗಿ ಚಿತ್ರಿಸಿದ್ದಾನೆ.

ಮಲುಹಣನನಳ್ಕರಿಂ ಕರುಣದಿಂದಂ ನೋಡಿ
ಮಲುಹಣೆ ಮನೋದುಃಖದಿಂದೆ ನುಡಿದಳ್ಬಾಡಿ

ಎನ್ನಮೇಲಿಕ್ಕುವೀ ಚಿತ್ತದಾತುರತೆಯುಂ
ಪನ್ನಗಾಭರಣನೊಳ್ಮಾಳ್ದುದೆನ್ನೊಲ್ಮೆಯುಂ
ಎಂದ ಮಾತಂ ಕೇಳ್ದು ಬಳಿಕ ನೀನೆನಗಪ್ಪೆ
ಇಂದುಧರನಂ ಬೇಡು ನಿನ್ನತ್ತ ನಾಂ ಬಪ್ಪೆ
ಎನ್ನ ಹವಣೇ ಕೋಟಿ ಮಲುಹಣಿಯರಾಗರೇ
ಮನಸಿಜಾರಿಯನರಿದು ದುಃಖಮಂ ನೀಗರೇ
ಬೇಡಿಕೊಳ್ಳೀಶ್ವರನೊಳೆನ್ನ ಮಲುಹಣ ಪೋಗು
ನೋಡಬಾರದು ವಿರಹದನುತಾಪಮಂ ನೀಗು

ಪ್ರಿಯೆಯ ಉಪದೇಶವೇ ಆರಾಧನೆಯಾಗಿ ಬೆಳಗುತ್ತದೆ. ತನ್ನಂತ ಹೆಣ್ಣಳಿಗಾಗಿ ಇಷ್ಟು ಕಷ್ಟವನ್ನು ಸಹಿಸಿದವನು ಪರಮೇಶ್ವರನನ್ನು ಇಷ್ಟೇ ನಿಷ್ಠೆಯಿಂದ ಪ್ರೀತಿಸಿದ್ದರೆ ದೊರಕುವ ಫಲವು ಹಿರಿದಾದದ್ದು ಎಂಬುದು ಆಕೆಯ ಬುದ್ಧಿಗೆ ಮಿಂಚುಹೊಳೆದಂತಾಗುತ್ತದೆ ಈ ಬಗೆಯ ಏಕನಿಷ್ಠೆಗೆ ಪರಮೇಶ್ವರನೊಬ್ಬನೇ ಪಾತ್ರನು ಎಂಬ ಭಾವನೆಯು ಬೇರೂರುತ್ತದೆ. ಕಾಮವು ಪ್ರೇಮವಾಗಿ ಮಾರ್ಪಟ್ಟಾಗ, ಕಾಮವಿಕಾರಕ್ಕೆ ಪ್ರೇಮಸಂಸ್ಕಾರ ಒದಗಿದಾಗ ಬರುವ ಮಾತುಗಳು ಇವು. ಕುರುಡು ಕಾಮದ ಆಶೆಗೆ ತುತ್ತಾಗಿರುವ ನಾಯಿಜೀವಿಯಂತಹ ಮಲುಹಣನು ಅಮೌಲ್ಯವಾದ ಮನುಷ್ಯಜೀವನವನ್ನೇ ಹಾಳುಮಾಡುವನಲ್ಲಾ ಎಂಬ ಅನುಕಂಪ, ಸಹಾನುಭೂತಿಯು ಮಲುಹಣಿಯಲ್ಲಿ ಜನಿಸಿ, ಹೃದಯದ ಬೆಳಕನ್ನು ಚೆಲ್ಲಲು ಯತ್ನಿಸುತ್ತಾಳೆ. ತತ್ಫಲವಾಗಿ ಕಾಮುಕನು ಪ್ರೀತಿಯ ಭಕ್ತನಾಗುತ್ತಾನೆ.

ವಿರಹಮಂ ತೆಗೆದು ಹರನಮೇಲಿಕ್ಕಿದಂ
ತನಿನೇಹಮಂ ಶಿವನ ಮೆಲ್ಲಡಿಗೆ ಸಾರ್ಚಿದಂ

ವಿಜಯೇಶ್ವರನ ರಂಗಮಂಟಪಕ್ಕೆ ಬಂದು ಮಲುಹಣನು ಧ್ಯಾನಾಸಕ್ತನಾಗುತ್ತಾನೆ. ಮಲುಹಣಿಯ ಪ್ರೇಮವನ್ನು ಬಿಡದೆ ತನ್ನ ಸಹಚರಿಯೊಡನೆ ಪರಮೇಶ್ವರನ ಸಾಹಚರ್ಯ ಮಾಡಬೇಕೆನ್ನುವ ಧ್ಯೇಯವನ್ನಿಟ್ಟುಕೊಂಡು ಆರಾಧಿಸುವ ಪರಿಸ್ಪಷ್ಟ ಚಿತ್ರವನ್ನು ಕವಿಯು ಕೊಟ್ಟಿದ್ದಾನೆ.

ದೇವ ಶಂಕರ ಭಕ್ತಜನ ಮನೋರಥ ರೂಪ
ದೇವ ಶಶಿಧರ ಶರಣ ಹೃದಯ ಸದಮಳದೀಪ
ಗೌರೀ ಕಚಪ್ರಚಯ ಪುಷ್ಪಗಂಧಕ್ಕೆಳಸಿ

ಘೋರೆನುತ್ತಿರಗಿ ಮಧುಕರ ವ್ರಜಮುನನುಕರಿಸಿ
ಮೆರೆವಗರಳದಗರುವ ಕರುಣಿಪುದು ಕರುಣಿಪುದು
ಹರೆಯ ಮಧುರಾಂಶ ಮಂಡಿತ ಮಕುಟ ಕರುಣಿಪುದು
ಗಿರಿಜಾ ಮನೋಹರನೆ ಕರುಣಿಪುದು ಕರುಣಿಪುದು

ಭಕ್ತನಾದ ಮಲುಹಣನ ಮನೋರಥವು ಮಲುಹಣಿ ಆಕೆಯ ರೂಪದಲ್ಲಿಯೇ ಶಂಕರನನ್ನು ಕಾಣುವೆನೆಂಬ ಧ್ವನಿಯು ಬಹಳ ಚೆನ್ನಾಗಿದೆ, ಗಿರಿಜೆಯು ತಲೆಯನ್ನು ಶಿರದ ಸಮೀಪದಲ್ಲಿರಿಸಿ ಆಕೆಯ ಹೂ ಮುಡಿಯ ಆಮೋದವನ್ನು ಸಂತಸದಿಂದ ಸವಿವ ಮಧುರ ಚಿತ್ರದ ನೆನಪು ಈ ಸಮಯಲ್ಲಿ ಶಂಕರನಿಗಾಗುವಂತೆ ಕಂದಿರುವುದು ಗೌರೀ ಪ್ರೇಮದ ಸೂಚನೆಯಿಂದ ಮಲುಹಣಿಯ ಪುನರ್ಮಿಲನದ ಸೂಚನೆಯನ್ನು ಸೂಕ್ಷ್ಮವಾಗಿ ಕೊಟ್ಟಿದ್ದಾನೆ. ಭಕ್ತನ ಭಕ್ತಿಗೆ ಶಂಕರನು ಮೆಚ್ಚಿ ಮಹಾಲಿಂಗದಿಂದ ಹೊರಬಂದು ವರವನ್ನು ಕೇಳೆಂದು ಹೇಳುತ್ತಾನೆ. ಮಲುಹಣನು ಸಂತೋಷದಿಂದ ಪರಮೇಶ್ವರನ ಪಾದಕ್ಕೆ ಎರಗುತ್ತಾನೆ. ಮಲುಹಣಿಯ ಜೊತೆಯಲ್ಲಿ ಇನ್ನೂ ನೂರು ವರ್ಷ ಕಾಲ ಇರುವಂತೆಯೂ ಅನಂತರ ಕೈಲಾಸಕ್ಕೆ ಕರೆದೊಯ್ಯುವಂತೆಯೂ ವರವನ್ನು ಕೇಳಿಕೊಳ್ಳುತ್ತಾನೆ. ಶಂಕರನು 'ತಥಾಸ್ತು' ಎಂದು ಅಂತರ್ಧಾನನಾಗುತ್ತಾನೆ.

---

ಸೂಚನೆ:— ಗದುಗಿನ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು ೨-೩ ತಿಂಗಳು ಹುನ್ನೂರಲ್ಲಿ ಶಾಸ್ತ್ರ ಕಥನವನ್ನು ಅವ್ಯಾಹತವಾಗಿ ನಡಿಸಿದ್ದು ಅದರ ವಿವರಣೆಯ ಲೇಖವು ನಮ್ಮ ಕಡೆಗೆ ಬಂದಿದೆ. ಅದನ್ನು ಸ್ಥಳಾಭಾವಕ್ಕೋಸ್ಕರ ಈ ಸಂಚಿಕೆಯಲ್ಲಿ ಪ್ರಸಿದ್ಧಿಸಿಲ್ಲ. ಅದನ್ನು ಮುಂದಿನ ತಿಂಗಳಿನ ಸಂಚಿಕೆಯಲ್ಲಿ ಪ್ರಸಿದ್ಧಿಸುವೆವು.

— ಸಂಪಾದಕ





ಸಂಪಾದಕರು

**ಡಾ॥ ರಾ. ಬ. ಫ. ಗು. ಹಳಕಟ್ಟಿ,**

ಬಿ. ಎ. ಎಲ್‌. ಎಲ್‌. ಬಿ.

**ವಿಜಾಪುರ.**


[ ವಾರ್ಷಿಕ ಚಂದಾ ೫–೧೨–೦ ಅಂಚೆಯ ವೆಚ್ಚ ಬೇರೆ ]


**ಸೆಪ್ಟಂಬರ ೧೯೫೭**

# ವಿಷಯಾನುಕ್ರಮಣಿಕೆ.









# ಲಿಂಗಪೂಜೆ.

(ಲೇಖಕರುः— ಶ್ರೀ ಮ. ಮಲ್ಲಪ್ಪ ಜ್ಞಾನಮಂದಿರ ಹಲಗೂರು.)



ಲಿಂಗವ ಪೂಜಿಸಿ ಲಿಂಗವೆಯಾಗುವೆ।
ಇಂಗಿತವರುಗಿದ ಕಂಗಳಾಲಯನೆ ॥

—ಮಹಂತಲಿಂಗದೇಶಿಕೇಂದ್ರ.

ಮನುಷ್ಯನ ಆಧ್ಯಾತ್ಮಿಕ ಪ್ರವೃತ್ತಿಯನ್ನು ಹುರುಪುಗೊಳಿಸುವುದು ಧರ್ಮ, ಶಾಸ್ತ್ರ, ಪುರಾಣ, ವೇದೋಪನಿಷತ್ತು, ಧಾರ್ಮಿಕ ವಿಭೂತಿ ಪುರುಷರ ಉದ್ಗಾರಗಳು. ಸಕಲ ಮತ ಧರ್ಮಗಳೂ ಭಗವಂತನೊಬ್ಬನನ್ನು ಬಗೆ ಬಗೆಯ ಹಾದಿಯಲ್ಲಿ ತಮತಮಗೆ ಸೇರಿದಂತೆ ಹಾಯ್ದು ಸೇರುತ್ತವೆ. ಇದರಲ್ಲಿ ಲಿಂಗವಂತ ಧರ್ಮವೂ ಒಂದಾಗಿದೆ. ಲಿಂಗವೇ ಇಲ್ಲಿ ಇವರಿಗೆ ಸಾಧನ. ಲಿಂಗ ಪ್ರಭಾವವು ಮಹತ್ವಪೂರಿತವಾಗಿದೆ.

ಲೀಯತೇ ಗಮ್ಯತೇ ಯತ್ರತ್ರೈ ಲೋಕ್ಯಂ ಸಚರಾಚರಂ ।
ತದೇತ್ರಲ್ಲಿಂಗಮಿತ್ಯುಕ್ತ ಲಿಂಗ ತತ್ವ ವಿಶಾರದೈಃ ॥

—ಶಿವಾಗಮ.

ಲಿಂಗವೆಂಬುದು ಸರ್ವ ಕಾರಣ ನಿರ್ಮಲ.
ಲಿಂಗವೆಂಬುದು ಸಚ್ಚಿದಾನಂದ ನಿತ್ಯಪರಿಪೂರ್ಣ

ಲಿಂಗವೆಂಬುದು ಸರ್ವ ಲೋಕೋತ್ಪತ್ತಿಗೆ ಕಾರಣ.
ಲಿಂಗವೆಂಬುದು ಸರ್ವ ತತ್ವ ಪೂರ್ಣ ಚೈತನ್ಯ.

ಲಿಂಗವೆಂಬುದು ಜನ್ಮವಾರಿಧಿಯ ದಾಂಟಿಸುವ ಧೈತ್ರವು.
ಲಿಂಗವೆಂಬುದು ಶರಣರ ಹೃದಯದಲ್ಲಿ ಬೆಳಗುವ
ಜ್ಯೋತಿರ್ಮಯ ಲಿಂಗವು.

ಇಂತಿ ಲಿಂಗದ ಮರ್ಮವನರಿದವನೇ ಅರಿದವನು ನಿಜ
ಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ.

—ವಚನಶಾಸ್ತ್ರಸಾರ

ಈ ಎಲ್ಲ ಹಾದಿಗಳಲ್ಲಿ ಲಿಂಗಪೂಜೆಯ ಮಾರ್ಗವೇ ಪ್ರಾಚೀನವೂ ಉಜ್ವಲವೂ ಆಗಿರುತ್ತದೆ. ಭಗವಂತನನ್ನು ಲಿಂಗರೂಪದಲ್ಲಿಯೇ ಪೂಜೆ ಮಾಡಬೇಕೆಂದು ಆಗಮೋಪನಿಷತ್ತುಗಳಲ್ಲಿ ಉಕ್ತವಾದದ್ದಲ್ಲದೆ ಮಹಾಭಾರತ ದಲ್ಲಿಯೂ ಹೇಳಿದೆ.

ಯಸ್ಯ ಬ್ರಹ್ಮಾಚ ವಿಷ್ಣುತ್ವಂ ಚಾಪಿ ಸಹದೇವ ಕೈಃ ।
ಅರ್ಚಯೇಧಾಃ ಸದಾ ಲಿಂಗಂ ತಸ್ಮಾಛ್ಛ್ರೇಷ್ಠತಮೋಹಿ ಸಃ ॥

ಶಿವಶರಣರು ಲಿಂಗವಿದ್ದ ಠಾವೇ ಕೈಲಾಸವೆಂದಿದ್ದಾರೆ.

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ

ಅಗಮ್ಯ ಅಪ್ರಮಾಣ ಅಗೋಚರ ಅಪ್ರತಿಮ ಲಿಂಗವೇ ಎನ್ನ ಕರ ಸ್ಥಲಕ್ಕೆ ಬಂದು ಚುಳುಕಾದಿರಯ್ಯ.

ಲಿಂಗ ಪೂಜೆಯ ಆರಂಭಕಾಲದ ನಿರ್ಧರವು ಸಿಗಲು ಇನ್ನೂ ಸರಿ ಯಾದ ಆಧಾರಗಳು ದೊರೆತಿಲ್ಲ. ಹರಪ್ಪಾ ಮೊಹೆಂಜಾದಾರೋ ಸಂಶೋಧ ನೆಯಿಂದ ಕ್ರಿ. ಪೂ. ಮೂರು ಸಾವಿರಕ್ಕಿಂತ ಹಿಂದೆಯೇ ಲಿಂಗಪೂಜೆಯು ಇತ್ತು ಎಂದು ಹೇಳಬಹುದು. ಈ ಸಂಶೋಧನೆಯಿಂದ ದೊರಕಿದ ಹಲವು ವಸ್ತುಗಳು ಇದನ್ನು ತಿಳಿಸುತ್ತವೆ. ಲಿಂಗಪೂಜೆಯು ಆರು ಸಾವಿರ ವರ್ಷ ಗಳ ಹಿಂದಿನಿಂದಲೂ ಎಂದರೆ ತಾಮ್ರಯುಗದಿಂದಲೂ ಇರುವದಲ್ಲದೆ ಭಾರತ

ದಲ್ಲಿ ವಿಶೇಷವಾಗಿರುವಂತೆಯೇ ರೋಮ ಅರೆಬ್ಬಿದೇಶ, ಫ್ರಾನ್ಸ, ಚೀನಾ ಜಪಾನ ಈ ದೇಶಗಳಲ್ಲಿ ಹರಡಿತ್ತು, ಎಂದು ರಾಮದಾಸಗೌಡರು ಹೇಳಿದ್ದಾರೆ. ಆರ್ಯರ ಆಗಮನಕ್ಕಿಂತ ಮೊದಲು ಭಾರತದಲ್ಲಿ ವಾಸ ಮಾಡುತ್ತಿದ್ದ ಕೆಲವು ಕಾಡು ಜನರಲ್ಲಿಯ ಲಿಂಗ ಪೂಜೆಯ ಪದ್ಧತಿಯು ಇದ್ದು ಅಲ್ಲಿಗೆ ಆರ್ಯರು ಬಂದ ನೆಲಸಿದ ನಂತರ ಕಾಡು ಜನರ ಇತರ ಸಂಸ್ಕೃತಿಗಳನ್ನೂ ತಮ್ಮ ಸಂಗಡ ಸೇರಿಸಿಕೊಂಡಂತೆಯೇ ಲಿಂಗಪೂಜೆಯ ಪದ್ಧತಿಯನ್ನೂ ಗ್ರಹಿಸಿರಬೇಕು. ಲಿಂಗಾರ್ಚನೆಯು ಅರ್ವಾಚೀನ ಶಿಲಾಯುಗದಿಂದ, *Neolithic age* ಇದ್ದಿರಬಹುದು ಎಂದು ಪ್ರಿಜಲುಸ್ಕಿ ಎಂಬ ಭಾಷಾಶಾಸ್ತ್ರವಿಶಾರದರು ಹೇಳಿದ್ದಾರೆ. ಜನರೂಢಿಯಲ್ಲಿ ವಿಗ್ರಹಾರಾಧನೆಯೂ ಸಹ ಜಾಗವನ್ನು ಆಕ್ರಮಿಸಿಕೊಂಡಿತು. ತತ್ಪರಿಣಾಮವಾಗಿ ಲಿಂಗಪೂಜೆಯು ವಿಗ್ರಹಾರಾಧನೆಯ ಮೂಲಕ ವ್ಯಾಪಿಸಿತು. ಶಿವಭಾಗವತರು ಕಬ್ಬಿಣದ ಭರ್ಚಿಯಂತಿರುವ ಆಯುಧವೊಂದನ್ನು ಪರಶಿವನ ಗುರುತೆಂದು ಭಾವಿಸುತ್ತಿದ್ದರು ಎಂದು ಪತಂಜಲಿಯು ಹೇಳಿದ್ದಾರೆ. ಮಳವಳ್ಳಿಯ ಕಲ್ಲೇಶ್ವರ ಮತ್ತು ತಾಳ್ಗುಂದದ ಪ್ರಣವೇಶ್ವರ ದೇವಸ್ಥಾನಪ ಲಿಂಗಗಳನ್ನು ಬನವಾಸಿ ಅರಸನು ಹಾರೀತ ಪುತ್ರ ಶಾತಕರ್ಣಿಯು ಪೂಜಿಸುತ್ತಿದ್ದಂತೆ ಶಾಸನಗಳಿಂದ ಗೊತ್ತಾಗುತ್ತದೆ. ಬರುಬರುತ್ತ ವಿಗ್ರಹರೂಪದ ಲಿಂಗಗಳು ಹೆಚ್ಚಿದವು. ಶ್ರೀರಾಮನು ರಾಮೇಶ್ವರದಲ್ಲಿ ಲಿಂಗಪೂಜೆಯನ್ನೂ ಪಾರ್ಥನು ಪಾಶುಪತಾಸ್ತ್ರ ಸಂಪಾದನೆಯ ವೇಳೆಯಲ್ಲಿ ಲಿಂಗಪೂಜೆಯನ್ನೂ ಮಾಡಿದ ಸಂಗತಿಯು ಯಾರಿಗೆ ತಾನೇ ತಿಳಿಯದು? ಯಜ್ಞದ ಯೂಪಸ್ತಂಭವೂ ಬೌದ್ಧ ಸ್ತೂಪವೂ ಸಹ ಲಿಂಗರೂಪ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಶಿವಶಕ್ತಿ ತತ್ವಗಳ ಐಕ್ಯತೆಯ ಕುರುಹೇ ಲಿಂಗವು. ಉಮಾಯೈ ಭಗರೂಪಿಣಿ ಲಿಂಗರೂಪ ಧರಾಯಚ ಶಂಕರಾಯ ನಮಸ್ತುಭ್ಯಂ ಎಂದಿದೆ. ಕಾಮಿಕಾಗಮವು ವಿಶ್ವದ ಕುರುಹಾಗಿ ಮನುಜ ಶರೀರದ ಪ್ರತೀಕವಾಗಿ ಓಂಕಾರದ ಸಂಕೇತವಾಗಿ ಬಗೆಬಗೆಯ ರೂಪದಲ್ಲಿ ಲಿಂಗವು ಜನರಿಗೆ ದೊರಕಿದೆ. ಪೀಠಕ್ಕೆ ಮಿದುವಾದ ಹೆಣ್ಣುಗಲ್ಲನ್ನೂ, ಲಿಂಗಕ್ಕೆ ಬಿರುಸಾದ ಒಪ್ಪಿನ ಗಂಡುಗಲ್ಲನ್ನೂ ಉಪಯೋಗಿಸಬೇಕೆಂದು ಆಗಮಗಳಲ್ಲಿಯೂ, ಶಿವತತ್ವ ರತ್ನಾಕರದಲ್ಲಿಯೂ ಸೂಚನೆ ಇದೆ. ಮೂರ್ತಿರೂಪ ಬದಲಾವಣೆಯು ಬಂದಂತೆಲ್ಲ ಲಿಂಗರೂಪವು ಬದಲಾವಣೆಯಾಗುವುದು ಸಹಜವಲ್ಲವೇ? ವೈಷ್ಣವರು ಉಪಯೋಗಿಸುವ ಸಾಲಿಗ್ರಾಮವನ್ನು ವೈಷ್ಣವ ಲಿಂಗ ಎಂದು ಕರೆಯುವ ಸಂಪ್ರ

ದಾಯವಿದೆ. ಮಲಯ, ಜಾವ, ಸುಮಾತ್ರ, ಈಜಿಪ್ತ, ಬ್ಯಾಬಿಲೋನಿಯಾದಿ ಪರದೇಶಗಳಲ್ಲಿಯೂ, ಕಾಶಿ, ಕೇದಾರ, ಸೌರಾಷ್ಟ್ರ, ಶ್ರೀಶೈಲ, ಗೋಕರ್ಣ, ಹಂಪೆಯಾದಿ ಕ್ಷೇತ್ರಗಳಲ್ಲಿ ಪ್ರಾಚೀನ ಕಾಲದಿಂದಲೂ ಶಿವಲಿಂಗವಿರುವುದೇ ಲಿಂಗಪೂಜೆಯ ವ್ಯಾಪ್ತಿ ಮತ್ತು ಪ್ರಾಚೀನತೆಗೆ ಸಾಕ್ಷಿಯಾಗಿದೆ.

ಸ್ಥಾವರ ಲಿಂಗಪೂಜೆಯ ವಿಕಾಸದ ಫಲವಾಗಿಯೋ ಎಂಬಂತೆ ಲಿಂಗವಂತ ಅರ್ಥಾತ್ ವೀರಶೈವರ ಅಂಗದ ಮೇಲೆ ಧರಿಸುವ ಇಷ್ಟಲಿಂಗದ ಪೂಜೆಯು ರೂಢಿಗೆ ಬಂದಿರುವಂತೆ ಕಾಣಬರುತ್ತದೆ. ವೀರಶೈವರಿಗೆ ಇಷ್ಟಲಿಂಗ ಪೂಜೆಯ ಜೊತೆಗೆ ಪ್ರಾಣಲಿಂಗ ಮತ್ತು ಭಾವಲಿಂಗದ ಅನುಸಂಧಾನವು ಅವಶ್ಯಕವೆಂದು ಧರ್ಮಗ್ರಂಥಗಳಲ್ಲಿ ನಿರೂಪಿತವಾಗಿರುವಂತೆ ಸ್ಥೂಲಶರೀರ–ತ್ಯಾಗಾಂಗದಲ್ಲಿ ಇಷ್ಟಲಿಂಗ, ಸೂಕ್ಷ್ಮಶರೀರ–ಭೋಗಾಂಗದಲ್ಲಿ ಪ್ರಾಣಲಿಂಗ, ಕಾರಣಶರೀರ, ಯೋಗಾಂಗದಲ್ಲಿ ಭಾವಲಿಂಗವು ಅವಶ್ಯಕವಾಗಿದೆ. ದೀಕ್ಷಾವೇಳೆಯಲ್ಲಿ ಶ್ರೀಗುರುವು ಇಷ್ಟ ಪ್ರಾಣ ಭಾವಲಿಂಗಗಳನ್ನು ವೇಧಾ, ಕ್ರಿಯಾ, ಮನು ಎಂಬ ದೀಕ್ಷಾತ್ರಯಗಳಿಂದ ಸ್ಥೂಲ, ಸೂಕ್ಷ್ಮ, ಕಾರಣಶರೀರಗಳಲ್ಲಿ ಸ್ಥಾಪನೆ ಮಾಡುತ್ತಾನೆ. ಲಿಂಗರೂಪಿಯಾದ ಪರಶಿವನನ್ನು ಜಗದೀಶ್ವರನೆಂದು ವೀರಶೈವರು ನಂಬಿ ಪೂಜಿಸಲು ಶಿವದೀಕ್ಷಾಸಂಸ್ಕಾರವು ಅತ್ಯವಶ್ಯಕವು.

> ಅಭಿಧ್ಯಾನಾದಿತ್ಯನೇನ ಪ್ರಾಣಲಿಂಗೋಪಾಸನಂ:
> ಯೋಜನಾದಿತ್ಯನೇನ ಇಷ್ಟಲಿಂಗೋಪಾಸನಂ
> ತತ್ವ ಭಾವಾಧಿತ್ಯನೇನ ಭಾವಲಿಂಗೋಪಾಸನಂ
> ಸ್ಪಷ್ಟಮುಕ್ತಂ —ಶ್ರೀಕರಭಾಷ್ಯ.

ಹೊರಗಣ ಹೂವ ತತದು ಸ್ಥೂಲತನುವಿನ ಮೇಲಿಪ್ಪ ಆಚಾರಲಿಂಗಮಂ ಪೂಜೆಯ ಮಾಡಿ ತನುವ ಸಮರ್ಪಿಸಿ ಬೇಡಿಕೊಂಡು ಹೊರಗೆ ಹೊನ್ನು ಹೆಣ್ಣು ಮಣ್ಣು ಷಟ್ಕರ್ಮಂಗಳ ಬಿಟ್ಟದ್ದೇ ಇಷ್ಟಲಿಂಗದ ಪೂಜೆ, ಬಳಿಕ ಮನವ ಸಮರ್ಪಿಸಿ ಉಪಾವಸ್ಥೆಯಂ ಮಾಡಿ ಒಳಗಣ ಅಂತಃಕರಣಗಳು ಸುಟ್ಟುದೇ ಪ್ರಾಣಲಿಂಗ ಪೂಜೆ, ಮನೋಮಧ್ಯದೊಳಿಪ್ಪ ಭಾವಪುಷ್ಪನೆ ಕಂಡು ಕಾರಣ ತನುವಿನ ಮೇಲಣ ತೃಪ್ತಿಲಿಂಗಮಂ ಪೂಜೆಯ ಮಾಡಿ ಸಂತೋಷಮಂ ಸಮರ್ಪಿಸಿದೆನೆಂಬಷ್ಟು

ಜ್ಞಾನಕ್ರಿಯೆಗಳಳಿಯದೆ ಭಾವಲಿಂಗದ ಪೂಜೆ ಈ ಪ್ರಕಾರ ಲಿಂಗಾಂಗದ
ಸಾಧಕತ್ವಮಂ ಶಿವರಾತ್ರಿಯ ಸಂಕಣ್ಣಗೊಲಿದಂತೆ ಎನಗೊಲಿದು ಕರುಣಿ
ಸಯ್ಯ ಘನಲಿಂಗಿಯ ಮೋಹದ ಚನ್ನಮಲ್ಲಿಕಾರ್ಜುನ,—ವಚನಶಾಸ್ತ್ರ

ತ್ರಿವಿಧ ಲಿಂಗಪೂಜೆಯ ಬಗೆ ಇದಾಗಿದೆ. ಇಷ್ಟಲಿಂಗದಲ್ಲಿ ಆಚಾರ ಲಿಂಗ ಗುರುಲಿಂಗ, ಪ್ರಾಣಲಿಂಗದಲ್ಲಿ ಜಂಗಮಲಿಂಗ, ಶಿವಲಿಂಗ ಭಾವ ಲಿಂಗದಲ್ಲಿ ಪ್ರಸಾದಲಿಂಗ, ಮಹಾಲಿಂಗ, ಅಂತರ್ಭೂತವಾಗಿವೆ. ಜೀವ ಆಂಗನನ್ನು ಸತತವೂ ಪರಿಶುದ್ಧವಾಗಿರಿಸಿ ಬ್ರಹ್ಮ-ಲಿಂಗದಲ್ಲಿ ಸಮರಸ ಮಾಡುವುದೇ ಇಷ್ಟಲಿಂಗ ಧಾರಣದ ಪ್ರಥನು ಕರ್ತವ್ಯವಾಗಿರುತ್ತವೆ.

ಲಿಂಗಧಾರಣೆ ಮಾಡಬೇಕಾದರೆ ಶ್ರೀಗುರುವು ತನ್ನ ದೃಷ್ಟಿಯಿಂದ ಶಿಷ್ಯನ ದೃಷ್ಟಿಯನ್ನು ನೋಡಿ ಆತನ ಶಿರಸ್ಸಿನಲ್ಲಿರುವ ಚಿತ್ಕಲೆಯನ್ನು ತೆಗೆದು ಕಿವಿಯಲ್ಲಿ ಷಡಕ್ಷರ ಮಂತ್ರವನ್ನು ಜಪಿಸಿ ಈ ಮಂತ್ರ ಸ್ವರೂಪವೇ ಲಿಂಗವೆಂದು ಕೊಡುತ್ತಾನೆ. ಇದರ ಬಾಹ್ಯ ಚಿಹ್ನೆಗಾಗಿ ಇಷ್ಟಲಿಂಗವಿರು ತ್ತದೆ. ಅಲ್ಲಮಪ್ರಭುದೇವರ ಇಷ್ಟಲಿಂಗದ ಅವಶ್ಯಕತೆಯನ್ನು ಇಂತು ಹೇಳಿ ದ್ದಾರೆ.

"ಎಳ್ಳಿಗೆ ಪರಿಮಳ ಕಟ್ಟದಲ್ಲದೆ ಎಣ್ಣೆಗೆ ಪರಿಮಳವೇಧಿಸದು.
ದೇಹದಲ್ಲಿ ಇಷ್ಟಲಿಂಗ ಸ್ಥಾಪಿಸಿದಲ್ಲದೆ ಪ್ರಾಣಲಿಂಗ ಸಂಬಂಧವಾಗದು.
ಇದುಃಕಾರಣ ಗುಹೇಶ್ವರ ಲಿಂಗದಲ್ಲಿ ಇಷ್ಟಲಿಂಗ ಸಂಬಂಧಿಯಲ್ಲದೆ
ಪ್ರಾಣಲಿಂಗ ಸಂಬಂಧಿಯಾಗಬಾರದು.

ಬಹಿರಂಗದಿಂದ ಅಂತರಂಗದ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುವುದು ಶಿವಶರಣರ ಗುರಿಯಾಗಿರುತ್ತದೆ ಈ ತತ್ವವನ್ನು ಲಿಂಗಪೂಜೆಯಲ್ಲಿ ಸ್ಪಷ್ಟ ಪಡಿಸಿದ್ದಾರೆ. ಇಷ್ಟಲಿಂಗದ ಬಣ್ಣವು ಕಪ್ಪಗಿದೆ. ನಿರಾಕಾರ ಭಾವಲಿಂಗದ ಕಲ್ಪನಾರೂಪವಾದ ಸಾಕಾರಮೂರ್ತಿಯೇ ಸಪ್ತ ವರ್ಣಗಳನ್ನೊಳಗೊಂಡ ಹಾಗೂ ದೃಷ್ಟಿಯನ್ನು ಸಹಜವಾಗಿಯೇ ಆಕರ್ಷಿಸುವ ಕಪ್ಪುಬಣ್ಣದ ಕ್ರಾಂತಿಯು ಮಂತ್ರವಿದರು ಕಪ್ಪುಬಣ್ಣಕ್ಕೆ ಹೆಚ್ಚಿಗೆ ಒಂದು ತರದ ಹೊಳಪೂ, ಗೋಲಾ ಕಾರವೂ ಶಿವಯೋಗ ಸಾಧನೆಗೆ ಅನುಕೂಲವಾಗಿರುತ್ತದೆ. ಗಮನವು ಹೆಚ್ಚಿಗೆ ಸಾಗಬೇಕಾದರೆ ಕಪ್ಪು ಬಣ್ಣವೇ ಯೋಗ್ಯವಂತೆ! ಸೃಷ್ಟಿಯಲ್ಲಿನ ಪದಾರ್ಥ ಗಳು ಹಗಲು ನಿಚ್ಚಳ ಬೆಳಕಿನಲ್ಲಿ ರೂಪಾಗ ಅವುಗಳ ಸ್ವರೂಪ ಹಾಗೂ ಕ್ರಿಯಗಳು ನಮ್ಮ ಬಾಹ್ಯೇಂದ್ರಿಯಗಳ ಮೇಲೆ ಪರಿಣಾಮವನ್ನು ಉಂಟು

ಮಾಡುತ್ತವೆ. ಆದರೆ ಇರುಳಿನಲ್ಲಿ ಎಲ್ಲೆಲ್ಲಿಯೂ ಕಾರಿರುಳು ಕವಿದಿರಲಾಗಿ ಮನಸ್ಸಿನ ಮೇಲೆ ಉಂಟಾಗುವ ಪರಿಣಾಮಗಳು ಬೇರೆ ಬಗೆಯಾಗಿರುತ್ತವೆ. ಆಗ ಆತನಿಗೆ ಬಾಹ್ಯ ಸೃಷ್ಟಿಯ ತಿಳಿವಿನ ಬದಲು ಅಂತರಿಂದ್ರಿಯಗಳು ಬಲಪಡುತ್ತವೆ. ಆ ವೇಳೆಯಲ್ಲಿ ಮನದ ಓಘವು ಒಂದೆಡೆಗೆ ಕೇಂದ್ರಿಕೃತ ವಾಗಿ ಅಂತರಂಗದ ವ್ಯಾಪಾರಗಳು ಪ್ರಜ್ವಲಿತವಾಗುತ್ತವೆ. ಇದನ್ನನುಸರಿ ಸಿಯೇ ಲಿಂಗದ ಕಪ್ಪು ಬಣ್ಣಕ್ಕೆ ಪ್ರಾಶಸ್ತ್ಯ ತೊಟ್ಟಿದ್ದಾರೆ. ಶಿವಶರಣರು ಲಿಂಗದ ಕಾಂತಿಯನ್ನು ದೃಷ್ಟಿಸಿ ನೋಡುತ್ತ ಏಕಾಗ್ರತೆಯ ಸಾಧನೆಯ ಕೈಹಿಡಿದು ಬಾಹ್ಯ ವಸ್ತುಗಳನ್ನು ಮರೆತು ಬಿಟ್ಟು ಕೆಲವುಕಾಲ ಅಂತಃಶಕ್ತಿ ಗಳನ್ನು ಬಲಪಡಿಸಿಕೊಂಡು ಪ್ರಾಣಲಿಂಗವನ್ನು ಉತ್ತೇಜಿಸಿ ತನ್ನಲ್ಲಿಯ ಕಿರಣಗಳು ಅಂತರೇಂದ್ರಿಯಗಳನ್ನು ವ್ಯಾಪಿಸಿಕೊಳ್ಳುವಂತೆ ಮಾಡುವುದರಿಂದ ಶಿವಶರಣರು ಯೋಗಪುರುಷರಾಗಿರುವುದಾಗಿದೆ.

ನಿರಾಕಾರವಾದ ಆಕಾಶವನ್ನು ಗುಂಡಗೆ ಎಂತು ನಾವು ನೋಡುವೆವೋ ಅದರಂತೆಯೇ ನಿರಾಕಾರನಾದ ಪರಮೇಶ್ವರನನ್ನು ಗುಂಡಗೆ ನಾವು ನೋಡ ಬೇಕಾದರೆ ಆ ರೂಪವು ಲಿಂಗವೇ ಸರಿಯಾಗಿರುತ್ತದೆ. ಜಗತ್ತಿನಲ್ಲಿನ ತಾರೆ ಭಾನು ಚಂದ್ರ ಕಾಯಿ, ಹಣ್ಣು ಇತ್ಯಾದಿಗಳೆಲ್ಲವೂ ದುಂಡಗೆ ಇರುವುದ ರಿಂದ ಲಿಂಗವು ಪ್ರಕೃತಿಗೆ ಸಂಬಂಧಿಸಿರುವುದು ತಿಳಿಯುವುದಿಲ್ಲವೇ? ಭೂಮಿಯು ಗೋಳಾಕಾರವಾಗಿದೆ.

ಆಕಾಶಂ ಲಿಂಗಮಿತ್ಯಾಹು: ಪೃಥಿವೀ ತಸ್ಯ ಪೀಠಿಕಾ ।
ಆಲಯಃ ಸರ್ವದೇವಾನಾಂ ಲಯನಾಲ್ಲಿಂಗ ಮುಚ್ಯತೇ ॥

ಈ ಸ್ಕಾಂದೋಕ್ತಿಯನ್ನು ನೋಡಿದರೆ ಲಿಂಗದ ಭಾಗಗಳಾಗಿ ಆಕಾಶ ಭೂಮಿಯಾಗಿದ್ದು ಸಕಲ ದೇವತೆಗಳ ಆವಾಸ ಸ್ಥಾನವಾಗಿರುವುದನ್ನು ಸ್ಪಷ್ಟ ಪಡಿಸುತ್ತದೆ. ಶರೀರದಲ್ಲಿನ ಲಕ್ಷಣ ಪ್ರಮಾಣಗಳನ್ನು ಅನುಸರಿಸಿ ಅವೇ ಲಕ್ಷಣ ಪ್ರಮಾಣಗಳನ್ನು ಲಿಂಗವು ಅಳವಡಿಸಿಕೊಂಡಿರುತ್ತವೆ. ಲಿಂಗದ ವಿಷಯವಾಗಿ ಪಂಚಸೂತ್ರಕಾರರು ಅಳತೆಯ ನಿರ್ಣಯವನ್ನು ನಿರ್ಧರಿಸಿ ದ್ದಾರೆ. ಬಾಣದ ಸುತ್ತಳತೆಯು ಎಷ್ಟಿದೆಯೋ ಅಷ್ಟೇ ಸಮನಾಗಿ ಬಾಣದ ಎತ್ತರವಿರಬೇಕು. ಪೀಠದ ತಲದ ವ್ಯಾಸವೂ ಅಷ್ಟೇ ಇರಬೇಕು. ಪೀಠದ ಉದ್ದವೂ ವ್ಯಾಸವೂ ಅಷ್ಟೇ ಇರಬೇಕು. ಬಾಣದ ಸುತ್ತಳತೆಯ ಅರ್ಧ ವಷ್ಟು ಜಲಹರಿಯ ಉದ್ದವಿರಬೇಕು.

ಇಷ್ಟಲಿಂಗದ ಗುಟ್ಟು ಗುಹ್ಯತಮವೇ ಸರಿಯು. ಸೃಷ್ಟಿಯ ಕುರುಹು ಇಷ್ಟ. ಇಷ್ಟದಲ್ಲಿ ದೃಷ್ಟಿ— *the thing in appearance* ಸೃಷ್ಟಿ— *the thing in being* ಯ ಸಂಗಮವಿದೆ. ಈ ಸಂಗಮವನ್ನೂ, ಇರುಹು ಕುರುಹುಗಳ ಹೊಂದಿಕೆಯನ್ನೂ ಆಗಮಕಾರರು ಶಕ್ತಿ-ಭಕ್ತಿಯ ಬೆಸುಗೆ ಎಂದಿದ್ದಾರೆ. ಇಷ್ಟಲಿಂಗವು ತನ್ನೊಳು ಆಡಕಗೊಳಿಸಿ ತನ್ನಿಂದಲೇ ಹೊರ ಹೊಮ್ಮಿ ತನ್ನನ್ನು ಆನಂದ ಕಡಲಿನಲ್ಲಿ ತೇಲಿಸುವುದರಿಂದ ಶಿವಶರಣರು ಇದನ್ನು 'ಶರಣಸತಿ ಲಿಂಗಪತಿ' ಎಂದಿರುವುದರಲ್ಲಿ ಸತ್ಯವಿಲ್ಲದೆ ಇಲ್ಲ. ವೀರ ಶೈವರು ಇಷ್ಟಲಿಂಗವನ್ನು ಎದೆಯ ಮೇಲೆಯೆ ಕಟ್ಟಿಯೇ ತೀರಬೇಕೆಂಬ ನಿರ್ಬಂಧವು ಆಗಮ ಕಾಲದಲ್ಲಿ ಇರಲಿಲ್ಲ. ಕಕ್ಷೆ, ಕರ, ಉರ, ಕಂಠ, ಅಮಳೋಕ್ಯ ಎಂಬ ಆರು ಸ್ಥಾನಗಳಲ್ಲಿ ತಮಗೆ ಇಷ್ಟಬಂದ ಎಡೆಯಲ್ಲಿ ಕಟ್ಟಿ ಕೊಳ್ಳುತ್ತಿದ್ದರು. ಬರುಬರುತ್ತ ಇಷ್ಟಲಿಂಗಧಾರಣೆಗೆ ಸಾರ್ವತ್ರಿಕ ಸ್ವರೂಪವು ಬಂದಿತು. ಮನಸ್ಸಿನಿಂದ ಪರಶಿವನನ್ನು ನೆನೆವಂತೆ, ಮಾತಿನಿಂದ ಆತನನ್ನು ಧ್ಯಾನಿಸುವಂತೆ ಶರೀರದಿಂದ ಆತನನ್ನು ಧರಿಸಿ ವೀರವೃತ್ತಿಯ ವೀರರನ್ನು ಗುರುತಿಸಲು ಲಿಂಗವು ಒಂದು ಚಿಹ್ನೆಯಾಗಿರಬೇಕು. ಪ್ರಕೃತಿಯ ಸಂಬಂಧ ದಿಂದ ಲಿಂಗದ ಲಕ್ಷಣವನ್ನು ನೋಡಿರುವಲ್ಲಿ ಪ್ರಕೃತಿಯ ಚಿತ್ರವನ್ನು ನೋಡು ವುದು ಅವಶ್ಯಕವಾಗಿದೆ. ಪ್ರಕೃತಿಯು ತ್ರಿಗುಣಾತ್ಮಕವಾಗಿದೆ. ಸತ್ವ ರಜೋ ತಮೋ ಗುಣವನ್ನು ತ್ರಿಕೋನದ ನಿದರ್ಶನದಲ್ಲಿ ಹೇಳುವುದಾದರೆ ಸಮ ತ್ರಿಭುಜ ಕೋನದ ಆಕೃತಿಯಾಗುತ್ತದೆ. ಚಿಚ್ಛಕ್ತಿ ಇಲ್ಲದೆ ಏನೂ ನಡೆಯ ಲಾರದಂತೆ! ಸತ್ ಚಿತ್ ಆನಂದವಾಗಿ ಚಿಚ್ಛಕ್ತಿಯನ್ನು ಬಿಡಿಸಿ ಹೇಳಬಹು ದಾಗಿದೆ. ಇದನ್ನೂ ಇನ್ನೊಂದು ಸಮತ್ರಿಭುಜ ಕೋನವಾಗಿ ಚಿತ್ರಿಸಬಹು ದಾಗಿದೆ. ಮೇಲ್ಮುಖಿಯಾದ ಚಿಚ್ಛಕ್ತಿಯನ್ನೂ ಕೆಳಮುಖಿಯಾದ ಪ್ರಕೃತಿ ಯನ್ನೂ ಒಂದರಮೇಲೊಂದಿರಿಸಿದಲೆ ಒಂದು ಆಕೃತಿಯಾಗುತ್ತದೆ. ಸಕಲ ವಿದ್ಯೆಗಳನ್ನೂ ಮೀರಿರುವ ಪರಾತ್ಪರ ವಸ್ತುವನ್ನು ಚಿತ್ರಿಸಬೇಕಾದರೆ ಮನುಜ ಮತಿಯ ಯತ್ನಗಳೆಲ್ಲವೂ ಶೂನ್ಯತೆಯನ್ನು ಪಡೆಯುತ್ತವೆ. ಆ ಚಿತ್ರವೇ ಶೂನ್ಯವಾಗಿ ಕಾಣುತ್ತದೆ. ಅದರ ಪರಿಪೂರ್ಣ ಚಿತ್ರವು ಈ ರೀತಿ ಅನು ತ್ತದೆ. ಆ ಇಷ್ಟದ ಬಲದಿಂದ ಅನಿಷ್ಟವನ್ನು ಜಯಿಸಿ ಮುಂದೆ ಹಾಯು ವನೇ ಮಹಾಂತನು. ಈ ಬಗೆಯ ದಿವ್ಯಾನುಭವಿಯ ನಿಲವನ್ನು ತೋರಿಸ ಬೇಕಾದರೆ ಒಂದು ಸರಳರೇಖೆಯನ್ನು ಎಳೆಯಬೇಕು. ಏತಕ್ಕೆಂದರೆ ಈ ದಿವ್ಯಾನುಭವವು ಸಂಸಾರಕ್ಕೆ ಅಡ್ಡವಾಗಿದೆ. ಆಗಲೇ ಪರಿಪೂರ್ಣವಾದ

ಚಿತ್ರವು ಈ ಬಗೆಯುಲ್ಲಿ ಆಗುತ್ತದೆ. ಇಷ್ಟಲಿಂಗದ ಆಕೃತಿಯಿಂದ ವ್ಯಕ್ತವಾಗುವ ಅನುಭವದ ಅರಿವು ಇದೇ ಆಗಿರುತ್ತದೆ. ಶಿವಶರಣನು ಸತತವೂ ಇದಕ್ಕೆ ದೂರವಾಗದಂತಿರಲು ಇಷ್ಟಲಿಂಗವನ್ನು ಅಂಗದ ಮೇಲೆ ಅಗಲಲಾರದಂತಿರಿಸಿ, ದಿನಸವೂ ಕೊನೆಯು ಪಕ್ಷ ಎರಡುಬಾರಿ ಅರ್ಚಿಸಿ ಆರಾಧಿಸಿ, ಪ್ರತಿಸಾರಿಯೂ ಇಷ್ಟಲಿಂಗದಲ್ಲಿ ಹತ್ತು ನಿಮಿಷಗಳವರೆಗೆ ತನ್ನ ಮನಸ್ಸು ಏಕಾಗ್ರತೆಯಿಂದ ನಿಶ್ಚಲವಾಗಿ ತಲ್ಲೀನವಾಗುವಂತೆ ಮಾಡಬೇಕು.

ಗುರುಶಿಷ್ಯರ ಮಧ್ಯದಲ್ಲಿ ಲಿಂಗದುದಯವೆಂಬುದು "ಕಣ್ಣ ಬೆಳಗು ಸೂರ್ಯನ ಬೆಳಗು ಕೂಡಿ ವಸ್ತುವ ಕಾಂಬಂತೆ ಎನ್ನ ನಿನ್ನ ಅರಿವಿನ ಬೆಂಬಳಿಯಲ್ಲಿ ಲಿಂಗವು ಕಾಣಬಂದಿತ್ತು" ಎಂಬುದರಿಂದ ಗೊತ್ತಾಗುತ್ತದೆ. ಲಿಂಗವು 'ಮುಟ್ಟಿದ ಕೈ ಮೀಸಲು' ಎಂಬ ಗಾದೆಯೇ ಲಿಂಗದ ಮಹತ್ವವನ್ನು ತಿಳಿಸುತ್ತದೆ. ಪ್ರತಿಯೊಬ್ಬ ವೀರಶೈವನು ಇಷ್ಟಲಿಂಗ ಪೂಜೆಯನ್ನು ತಪ್ಪದೆ ಮಾಡಿ ಚಿತ್ತ ವೃತ್ತಿಗಳ ನಿರೋಧ ಮಾಡಿಕೊಂಡು ಮನಶ್ಶಾಂತಿಯನ್ನು ಪಡೆದರೆ ಮಾತ್ರ ಪುರುಷಾರ್ಥವು ಕಟ್ಟಿಟ್ಟ ಗಂಟೇ ಆಗಿರುತ್ತದೆ. ಲಿಂಗಪೂಜೆಯಿಂದ ಇಂದ್ರಿಯ ವೃತ್ತಿಗಳನ್ನು ತಡೆಗಟ್ಟಲು ನಿಜಗುಣ ಶಿವಯೋಗಿಗಳು ಇಂತು ಹೇಳಿದ್ದಾರೆ.

> ಅರಿದು ವನಿತಾದಿ ವಿಷಯದೊಳುಳ್ಳ ದೋಷವನು
> ತೊರೆದವನು ಮರಳಿ ಮೋಹಿಸದೆ ಚಲಿಯಾಗಿ
> ಕೊರತೆಯಿಲ್ಲದ ಶಂಭುಲಿಂಗದಂತಿರೆ ಭೋಗ
> ಪರಮ ವೈರಾಗ್ಯ ಕರುಣಿಸೆನಗಿದನೆ ಬೇಡುವೆನಭವ
> ಬೇರೊಂದು ವರವ ನೊಲ್ಲೆನು ಮುಕುತಿ ದೊರೆವ ಸಾಧನವ॥

ಪ್ರಾಣಲಿಂಗೋಪಾಸನೆಗೆ ಪ್ರಧಾನವಾದದ್ದು ಮನಸ್ಸು ಆ ಮನಸ್ಸಿನ ಲಕ್ಷಣ ಅದರಾಧೀನವಾದ ಇಂದ್ರಿಯ ವೃತ್ತಿ ನಿರೋಧದಿಂದ ನಿಗ್ರಹಿತವಾದ ಜೀವಾತ್ಮವು ಪ್ರಾಣಲಿಂಗೋಪಾಸನಾಂತರ್ಗತವಾಗಿ ಸಹಜಾನಂದಿಯಾಗುತ್ತದೆ. ಆ ಆನಂದಲೋಲುಪ್ತ ಪರಿಸ್ಥಿತಿಯೇ ಪ್ರಾಣಲಿಂಗದ ಅನುಸಂಧಾನದಿಂದ ಸೂಕ್ಷ್ಮತನುವಿನ ರಜೋಗುಣವನಳಿಸಿ ಪ್ರಾಣಸಿದ್ಧಿಯನ್ನು ಪಡೆಯುತ್ತಾನೆ. ಜೀವೇಶ್ವರ ಐಕ್ಯಸ್ಥಿತಿಯೇ ಭಾವಲಿಂಗೋಪಾಸನೆಯು ಭಾವಲಿಂಗ ಸಮಾಧಿಯಲ್ಲಿ ಮಗ್ನನಾಗಿ ಬಾಹ್ಯವಿಚಾರಗಳೆಲ್ಲವೂ ನಿಂತುಹೋಗಿ ಶರೀರ ಕ್ರಿಯಾದಿಗಳ ಕಡೆಗೆ ಭಾವವಿರದೆ ನಿರ್ಲಕ್ಷ್ಯನಾಗಿರುತ್ತಾನೆ. ಈ ಸ್ಥಿತಿಯನ್ನು ಬುದ್ಧದೇವನು ನಿಬ್ಬಾಣ ಎಂದು ಕರೆದಿದ್ದಾನೆ. ದೀಪವನ್ನು ತೆಗೆದ

ತಕ್ಷಣವೇ ಸರ್ವತ್ರ ಶಾಂತಿಮಯವಾದ ವಾತಾವರಣವು ಹೇಗೆ ಬರುವುದೋ ಆದರಂತೆಯೇ ದೃಷ್ಟಿವಿಷಯವೆಲ್ಲವೂ ಪರಿಶಾಂತವಾಗಿ ಪರಮಾನಂದ ಪರಿಸ್ಥಿತಿಯಲ್ಲಿ ಲೋಲುಪ್ತನಾಗುತ್ತಾನೆ. ಇದೇ ಜೀವನ್ಮುಕ್ತ ಸ್ಥಿತಿಯು ಭಾವ ಲಿಂಗಿಯ ಬದುಕು ಬಹುವ್ಯಾಪ್ತವೇ ಆಗಿರುತ್ತದೆ.

ತನು ಬಯಲು ನಿರವಯ ದೊಳಗಡಗಿತ್ತು
ಮನ ಬಯಲು ನಿರವಯ ದೊಳಗಡಗಿತ್ತು
ಭಾವ ಬಯಲು ನಿರವಯ ದೊಳಗಡಗಿತ್ತು
ಬಯಲು ಬಯಲ ಬೆರಸಿ ಬಯಲೆ ಆಯಿತ್ತು
ಕೂಡಲಚನ್ನಸಂಗಯ್ಯನೆಂಬ ನುಡಿಯಡಗಿತ್ತು.

ಮನಸ್ಸಿನಲ್ಲಿ ಉದಾಸೀನ ವೃತ್ತಿಯನ್ನು ತಾಳಿ ಸಂಸಾರದ ಭಾರವನ್ನು ಪರಶಿವನಿಗೆ ವಹಿಸಿಬಿಟ್ಟು ಇಷ್ಟ, ಪ್ರಾಣ, ಭಾವಲಿಂಗೋಪಾಸನೆಗಳಲ್ಲಿ ನಿರತನಾದವನಿಗೆ ಬಯಸಿದ್ದು ಬಹು ಸಮೀಪ.

ಮುಕ್ತಿ ದೂರವಿಲ್ಲವೋ ಪಾರಮಾರ್ಥ ತತ್ವ ಸುಖದ
ಸೂರೆಗೊಂಬ ಯತಿಗದೇನು ದೂರವಿಲ್ಲವೋ
ಮುಕ್ತಿ ದೂರವಿಲ್ಲವೋ.

ಲಿಂಗಧಾರಿಗೆ ಏಕ ಜನ್ಮದಲ್ಲಿಯೇ ಮೋಕ್ಷ, ಲಿಂಗಧಾರಿಗೆ ಏಕಲಿಂಗ ನಿಷ್ಠೆಯು ಅಗತ್ಯ.

ಕರಸ್ಥಲದಲ್ಲಿದ್ದ ಲಿಂಗವ ಬಿಟ್ಟು ಧರೆಯ ಮೇಲಣ ಪ್ರತಿಮೆಗೆ ಎರಗುವ ನಾಯಕ ನ ಕಿಗಳನೇನೆಂಬೆನಯ್ಯಾ. ಪರಮಗುರುಶಾಂತ ಮಲ್ಲಿಕಾರ್ಜುನ.

ಲಿಂಗಾನಂದವು ನಿಲುವಿಗೆ ನಿಲುಕದು. ಲಿಂಗದ ನೋಟ ಕೂಟವೇ ಮಹಾನೋಟವು.

ನಂಬಿಸಿ ಚುಂಬಿಸಿ ಪದಯುಗ ।
ಮುಂ ಬಿಗಿದಪ್ಪಿ ಹೆಪ್ಪನಿಟ್ಟಂತೆ ಮನಂ ॥
ತುಂಬಿದ ತೊರೆಯ ವೋಲಿಹ ಸುಖ ।
ಮುಂ ಬಯಸುವೆ ನಾಂ ಆಖಂಡಲಿಂಗ ಪ್ರಭುವೇ ॥

ಲಿಂಗದೊಳಿರ್ದು ಲಿಂಗವನೆ ತಾಳ್ದು ನಿರಂತರ ಲಿಂಗಪೂಜೆಯುಂ।
ಲಿಂಗದಿನೊಲ್ದು ವಿಸ್ತರಿಸಿ, ಲಿಂಗಕ್ಕೆ ಅಂಗಮನರ್ಪಿಸುತ್ತ ಮಾ।
ಲಿಂಗ ಪದಾರ್ಥಮಂ ಸವಿದು ಲಿಂಗಾಸ್ಪದವಾಗಿ ರಾರಾಜಿಪಂ।
ಲಿಂಗ ನಿಜೈಕ್ಯನಯ್ಯ ಪರಮ ಪ್ರಭುವೇ ಮಹದೈಪುರೀಶ್ವರಾ॥

ಲಿಂಗದೊಳು ನಡೆ ಲಿಂಗದೊಳು ನುಡಿ
ಲಿಂಗದೊಳು ಸಕಲೇಂದ್ರಿಸಮರಸ
ಲಿಂಗದೊಳು ತನುಭಾವ ಕರಣಗಳೊಂದು ಹುರಿಯಾಗಿ॥
ಲಿಂಗದೊಳು ಕೀಲಿಸಿದ ಕಂಗಳು
ಹಿಂಗದಿರೆ ನಿಜಮುಕ್ತಿ ಯೆನುತಲಿ ।
ಲಿಂಗದೊಳು ಸಮರಸವ ತೋರಿದ ಗುರುವೇ ಶರಣಾರ್ಥಿ॥

ಅಂಗವನ್ನು ಲಿಂಗಮಯವನ್ನಾಗಿ ಪರಿವರ್ತಿಸಿಕೊಳ್ಳುವದೊಂದು ಗಹನವಾದ ಪಾರಮಾರ್ಥಿಕವಾಗಿದೆ. ಪ್ರತಿಯೊಂದು ಇಂದ್ರಿಯದಲ್ಲಿಯೂ ವೀರಶೈವನು ಲಿಂಗವನ್ನು ಸ್ಥಾಪಿಸಿಕೊಂಡು ಸರ್ವಾಂಗ ಲಿಂಗಭಾವನಾ ಪರರಾಗಿ ಸದ್ವರ್ತನೆ ಸತ್ಕ್ರಿಯೆ ಸದಾಚಾರಗಳತ್ತ ಮನವನ್ನು ಹರಿಯ ಬಿಟ್ಟು ಅದರಂತೆ ಆಚಾರ ಪರರಾಗಿದ್ದುದರಿಂದಲೇ ಶಿವಾದ್ವೈತವು ವಾಸ್ತವ ಧ್ಯೇಯವಾದ *Realistic Idealism* ಆಗಿರುತ್ತದೆ. ವೀರಶೈವ ಮಾನಸ ಶಾಸ್ತ್ರವು ಗಹನವಾಗಿರುತ್ತದೆ.

# ಲಿಂಗ ಪೂಜೆಯ ರಹಸ್ಯ ಹಾಗೂ ವಿಧಾನ.

ಬರೆದವರು:— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ (ತಾ. ಇಂಡಿ)

---

ಲಿಂಗ ಪೂಜೆಯು ಮೊಟ್ಟಮೊದಲು ಆದಿದ್ರಾವಿಡರಿಂದ ಸ್ಥೂಲವಾಗಿ ಭಕ್ತಿಯಿಂದ ಪ್ರಾರಂಭವಾಯಿತು. ಆಗಮ ಕಾಲಕ್ಕೆ ಅದು ವಿಶೇಷವಾಗಿ ಸುಧಾರಿಸಿತು. ಆಗ ಪೂಜೆಯ ವಿಧಾನವೆಲ್ಲ ಸಂಸ್ಕೃತದಲ್ಲಿ ಬರೆಯಲ್ಪಟ್ಟವು. ಸಾಮಾನ್ಯರಿಗೆ ಈ ಪೂಜೆ ಶಕ್ಯವಾಗಲಿಲ್ಲ. ವಿಶೇಷವಾಗಿ ವಿದ್ಯಾವಂತರಿಗೆ ಆಗ ಮಾತ್ರ ಸಂಸ್ಕೃತದಿಂದ ಪೂಜೆಯು ಶಕ್ಯವಾಗುತ್ತಿತ್ತು. ಲಿಂಗ ತತ್ವವು ವಿಶಾಲವಾಗಿ ಬೆಳೆದುಬಂದಂತೆ ಅದರ ಪೂಜೆಯ ವಿಧಾನದಲ್ಲಿಯೂ ಕೂಡ ಕಾಲಕಾಲಕ್ಕೆ ಬದಲಾವಣಿಯಾಗುತ್ತ ನಡೆಯಿತು. ಸಂಸ್ಕೃತ ಮಂತ್ರಗಳೆಲ್ಲ ಕನ್ನಡದಲ್ಲಿ ಆಗಹತ್ತಿದವು. ಶರಣರ ಕಾಲಕ್ಕೆ ಇದು ವಿಶೇಷ ಬದಲಾವಣೆ ಹೊಂದಿತೆಂದು ಹೇಳಬಹುದು. ಶರಣರ ಕಾಲಕ್ಕೆ ಲಿಂಗಪೂಜೆಯ ಹಸಿವೆ ಹೆಚ್ಚಾಗುತ್ತಿತ್ತು. ತನ್ನ ತಾನರಿಯಬೇಕೆಂಬ ಹುಚ್ಚು ಹೆಚ್ಚಾಗಿತ್ತು. ಆದಕ್ಕಾಗಿ ಅಸಂಖ್ಯ ಸ್ತ್ರೀಪುರುಷರು ಕನ್ನಡದಲ್ಲಿ ವಚನಗಳನ್ನು ಲಿಂಗ ಪೂಜೆಯ ಸಲುವಾಗಿ ಸಹ ರಚಿಸಿದ್ದು ಕಂಡುಬರುವದು. ಅನೇಕ ಮಹಿಮರು ಈ ಹೊಸ ಪದ್ಧತಿಯ ಲಿಂಗಪೂಜೆಯ ವಿಧಾನದಿಂದ ಘನಮಹಿಮರೂ ಶಿವಯೋಗಿಗಳೂ ಆಗಿಹೋದರು. ಸಂಸ್ಕೃತವನ್ನು ಅರಿಯದವರು ಅದರ ಪದ್ಯಗಳನ್ನು ಅರ್ಥ ತಿಳಿಯದೆ ಹಾಡಿ ಲಿಂಗಪೂಜೆ ಮಾಡುವದರಿಂದ ಫಲವು ಸಾಕಷ್ಟು ದೊರೆಯುತ್ತಿರಲಿಲ್ಲ. ಮುಂದೆ ಶರಣರ ಕಾಲಕ್ಕೆ ಅಚ್ಚಗನ್ನಡದಲ್ಲಿ ವಚನಗಳನ್ನು ತಿಳಿದುಕೊಂಡು ಹಾಡಿ ಲಿಂಗಪೂಜೆಯನ್ನು ಮಾಡುವದರಿಂದ ವಿಶೇಷ ಫಲಲಭಿಸಿ ಶಿವಶಕ್ತಿಯರ ಕೃಪೆಗೆ ತೀವ್ರ ಪಾತ್ರರಾಗಹತ್ತಿದರು. ನವವಿಧ ಭಕ್ತಿಯಿಂದ ಲಿಂಗವನ್ನು ಪೂಜಿಸುತ್ತಿದ್ದರು. ಅನೇಕ ಶರಣರು ಅಚ್ಚಗನ್ನಡದಲ್ಲಿ ಪದಪದ್ಯ ವಚನಗಳನ್ನು ಲಿಂಗಪೂಜೆಯ ಸಲುವಾಗಿ ರಚಿಸಿ ಹಾಡಿದ್ದು ಹೆಚ್ಚಾಗಿ ಕಂಡುಬರುತ್ತದೆ. ಈಗ ಕೆಲವು ಕಡೆ ಸಂಸ್ಕೃತ ಶಿವಪೂಜಾ ವಿಧಿಗಳಾಗಲಿ ಲಿಂಗಪೂಜಾ ವಿಧಿಗಳಾಗಲಿ ಇರುವದು ಕಂಡುಬರುವದು. ಅವೆಲ್ಲ ಆಗಮ ಮೊದಲಾದ ಗ್ರಂಥಗಳಿಂದ ಆಯ್ದು

ಕೊಂಡು ಬಂದವುಗಳು ಅವುಗಳ ಅರ್ಥ ತಿಳಿಯುವದಿಲ್ಲ. ಲಿಂಗಕ್ಕೆ ತಮ್ಮ ಮನೆಯ ಮುಂದಿನ ಬಾವಿಯ ನೀರನ್ನು ಹಾಕುತ್ತ "ಗಂಗೇ ಚ ಯಮುನೇ ಚ ವ ಗೋದಾವರಿ ಸರಸ್ವತಿ ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ" ಎಂಬ ಮಂತ್ರವನ್ನು ಹೇಳಿದರೆ ಶಿವನನ್ನು ಮೋಸಗೊಳಿಸಿದಂತೆ ಅಲ್ಲವೇನು? ಅದರಂತೆ ಭಸ್ಮಧಾರಣ ಮಂತ್ರ, ಅಭಿಷೇಕ ಮಂತ್ರ, ಪುಷ್ಪಧಾರಣ ಮಂತ್ರ, ಗಂಧಧಾರಣ ಮಂತ್ರ, ಅಕ್ಷವಾರ್ಧಿಕಮಂತ್ರ, ಧೂಪ ಮಂತ್ರ, ದೀಪಮಂತ್ರ, ಕರ್ಪುರಮಂತ್ರ, ನೈವೇದ್ಯಮಂತ್ರ, ಅರ್ಘ್ಯಮಂತ್ರ, ತಂಬೂಲಮಂತ್ರ, ದಕ್ಷಿಣಮಂತ್ರ, ಪುಷ್ಪಾಂಜಲಿಮಂತ್ರ, ಪ್ರದಕ್ಷಿಣಮಂತ್ರ, ನಮಸ್ಕಾರಮಂತ್ರ, ಘಂಟಾನಾದಮಂತ್ರ, ಹೀಗೆ ಅನೇಕ ಮಂತ್ರ ಹೇಳುವದು ಒಂದು, ಮಾಡುವದು ಮತ್ತೊಂದನ್ನೇ ಆಗಿರುವದು. ನಿತ್ಯ ಲಿಂಗ ಪೂಜೆಯ ಕಾಲಕ್ಕೆ ಸುಳ್ಳು ಹೇಳಿದಂತೆ ಆಗುವದು. ಈ ಪ್ರಕಾರ ಶಿವನು ನಮ್ಮ ಕಪಟವನ್ನು ತಿಳಿಯಲಾರನೆಂದು ಯಾರಾದರೂ ತಿಳಿದಿದ್ದರೆ ಶುದ್ಧ ತಪ್ಪು. ಹೀಗೆ ಅರ್ಥ ತಿಳಿಯದೆ ಸಂಸ್ಕೃತ ಮಂತ್ರಗಳನ್ನು ಅನ್ನುತ್ತ ಪೂಜೆ ಮಾಡುವದರಿಂದ ದೇವರನ್ನು ಮೋಸಗೊಳಿಸುವದರಲ್ಲದೆ, ಅಜ್ಞ ಜನರನ್ನೂ ಕೂಡ ಮೋಸಗೊಳಿಸುವರು. ಇದು ಒಳಿತೇ ಅಲ್ಲ. ಮಂತ್ರಗಳು ತನಗೂ ತಿಳಿಯಬೇಕು. ಅನ್ಯರಿಗೆ ಹೇಳಬೇಕಾದಲ್ಲಿ ಅವರಿಗೂ ತಿಳಿಯಬೇಕು, ಅಂದರೆ ಪೂಜೆಯ ಫಲ ತೀವ್ರ ಆಗುವದು. ಶಿವ ಮೆಚ್ಚುವನು. ತಿಳಿದು ಹಾಡಿದರೆ ಹೃದಯ ಭಕ್ತಿಯಿಂದ ಉಕ್ಕಿ ಬರುವದು. ಪುಳಕಾಶ್ರುಗಳು ತಾವಾಗಿ ಬರುವವು. ಮೈ ನಿಮಿರಿ ಜುಮ್ಮೇರುವದು. ಕಂಠವು ಗದ್ಗದವಾಗಿ ಪ್ರೇಮ ಹೆಚ್ಚಾಗಿ ಹೊರಸೂಸುವದು. ಆಗ ಇದೆಲ್ಲ ಉತ್ತಮ ಭಕ್ತಿಯಾಗುವದು. ಇದೇ ಪ್ರಕಾರ ಶ್ರೀರಾಮಕೃಷ್ಣರು ಜಗನ್ಮಾತೆ ಪಾರ್ವತಿಯನ್ನು ಪೂಜಿಸುವಾಗ ಸಂಸ್ಕೃತ ಪದ್ಯಗಳನ್ನು ಪಾಠ ಮಾಡಿ ಹೇಳುತ್ತ ಇದ್ದ ನೀರು ಪುಷ್ಪ ಮೊದಲಾದವುಗಳನ್ನು ಅರ್ಪಿಸಹತ್ತಲು ಒಮ್ಮೆ ಅವರು ತಾವು ಎಂಥ ಸುಳ್ಳು ಹೇಳಿ ತಾಯಿಯನ್ನು ಮೋಸಗೊಳಿಸುತ್ತಿರುವೆನಲ್ಲಾ! ಇದು ತಾಯಿಗೆ ಮೋಸವಲ್ಲ, ನನಗೇ ಮೋಸವಾಗುವದೆಂದೂ ಅಂದಿನಿಂದ ಅಲ್ಲಿ ಇದ್ದ ಒಡೆವೆಗಳನ್ನು ತಮ್ಮ ಭಾಷೆಯಲ್ಲಿ ಇದ್ದಂತೆ ಹೇಳಿ ಅರ್ಪಿಸಹತ್ತಿದರು. ಅದರಂತೆ ನಾವೂ ಮಾಡಲು ಕಲಿಯಬೇಕು. ಸುಳ್ಳು ಪೂಜೆಯನ್ನು ಅರ್ಥ್ವ ತಿಳಿಯದೆ ಎಂದೂ ಮಾಡಬಾರದು. ಭಕ್ತಿಯಿಂದ ಇದ್ದಂತೆ ಮಾಡಬೇಕು. ಅಂದರೆ ಫಲ ಸಿಗುವದು. ಅದಕ್ಕಾಗಿಯೇ ಕನ್ನ

ಡದಲ್ಲಿ ತಿಳಿಯುವ ಮಂತ್ರಗಳನ್ನು ಹೇಳಿ ಇದ್ದಂತೆ ಪೂಜಿಸಬೇಕು. ಆ ಲಿಂಗ ಪೂಜೆಯು ಅನುಭವಯುಕ್ತವಾಗಿ ಭಕ್ತಿಯಿಂದ ನಡೆಯಬೇಕು ಈ ಲಿಂಗ ಪೂಜೆಯನ್ನು ವೀರಶೈವರು ಸಾರ್ವತ್ರಿಕಗೊಳಿಸಿದರು. ಮನೆಯವರೆಲ್ಲರೂ ಹೆಣ್ಣು ಗಂಡು, ಹುಡುಗ ಹುಡಿಗಿ ಸಣ್ಣವರು ದೊಡ್ಡವರು, ಮುದಕ ಮುದುಕಿ, ತಾಯಿ ತಂದೆ, ಗಂಡ ಹೆಂಡತಿ, ಮಗ ಮಗಳು, ಸೇವಕ ಸೇವಕಿ, ಹೀಗೆಲ್ಲರೂ ಲಿಂಗಕಟ್ಟಿಕೊಂಡು, ನಿತ್ಯ ಒಂದು ವೇಳೆ ಎರಡು ವೇಳೆ ಮೂರು ವೇಳೆ ಪೂಜಿಸಬೇಕು. ಇಲ್ಲವೆ ತಮಗೆ ಅನುಕೂಲವಾದಷ್ಟು ಕಾಲ ಪೂಜಿಸಬೇಕು. ಕನಿಷ್ಠ ನಿತ್ಯ ಒಮ್ಮೆಯಾದರೂ ಪೂಜಿಸಬೇಕು. ಪೂಜಿಸುವ ಕಾಲಗಳು ಮುಂಜಾನೆ, ಮಧ್ಯಾನ್ಹ, ಸಾಯಂಕಾಲಗಳಾಗಿರುವವು. ತಮ್ಮ ಮನೆಯ ಬಂಧು, ಬಳಗ, ತಾಯಿ, ತಂದೆ ಮೊದಲಾದವರಿದ್ದರೂ ಕೂಡ ಲಿಂಗ ಧರಿಸಿ ಪೂಜಿಸದಿದ್ದರೆ ಅವರು ತನ್ನ ಬಂಧುವಲ್ಲ, ಬಳಗನಲ್ಲ, ತಾಯಿಯಲ್ಲ, ತಂದೆಯಲ್ಲ, ಹೆಂಡತಿಯಲ್ಲ, ಗಂಡನಲ್ಲ ಎಂದು ವಚನಕಾರರು ಹೇಳಿದ್ದಾರೆ. ಒಬ್ಬರು ಲಿಂಗವನ್ನು ಪೂಜಿಸಿ ಮತ್ತೊಬ್ಬರು ಅದೇ ಮನೆಯಲ್ಲಿ ಬೇರೆ ದೇವತೆಯರನ್ನು ಪೂಜಿಸುತ್ತಿದ್ದರೆ ಅವರೂ ಕೂಡ ತಮ್ಮ ಬಂಧುಬಾಂಧವರಲ್ಲ, ಎಂದು ಶರಣರು ಒಳ್ಳೇ ಸ್ಪಷ್ಟ ಹೇಳಿದ್ದಾರೆ. ಲಿಂಗ ಸಾಹಿತ್ಯವಿಲ್ಲದವರು ಎನ್ನವರೆನ್ನವರು ಎನ್ನೆನಯ್ಯ. ಲಿಂಗ ಸಾಹಿತ್ಯವಿದ್ದ ಎಲ್ಲಾ ಜನರು ನನ್ನವರು, ನನ್ನ ಬಳಗದವರು, ನನ್ನ ಬಂಧುಗಳು, ನನ್ನ ಬಾಂಧವರು ಎಂದು ಶರಣರು ಹೇಳಿದ್ದಾರೆ. ಅದಕ್ಕಾಗಿಯೇ ಲಿಂಗಾಂಗಿ ಭಕ್ತರನ್ನೆಲ್ಲ ಒಂದೇ ಎಂಬೆ ಎಂದು ಹೇಳಿದ್ದಾರೆ. ಗಂಡ ಶಿವಲಿಂಗದೇವರ ಭಕ್ತ, ಹೆಂಡತಿ ಮಾರಿ ಮಸಣಿಯ ಭಕ್ತೆ ಗಂಡ ಕೊಂಬುವದು ಪಾದೋದಕ ಪ್ರಸಾದ, ಹೆಂಡತಿಕೊಂಬುವಳು ಸುರೆಯು ಮಾಂಸವ ಎಂದು ಹೇಳಿದ್ದನ್ನು ವಿಚಾರಿಸಿದರೆ ಎಲ್ಲರೂ ಲಿಂಗ ಭಕ್ತರೇ ಆಗಿರಬೇಕೆಂದು ಹೇಳಿದ್ದಾರೆ. ಈ ಪ್ರಕಾರ ಶರಣರು ಲಿಂಗವನ್ನೂ ಲಿಂಗ ಪೂಜೆಯನ್ನೂ ಸಾರ್ವತ್ರಿಕಗೊಳಿಸಿ ಪ್ರಚಾರ ಮಾಡಿದರು. ಲಿಂಗವು ಅಂಗ ಬಿಟ್ಟು ಅಗಲಬಾರದೆಂದು ವಿಧಿಸಿದರು ಅದಕ್ಕೆ ದೇಹವೇ ಲಿಂಗಕ್ಕೆ ದೇವಾಲಯವೆಂದು ಹೇಳಿದರು. ಅಲ್ಲದೆ ದೇಹವನ್ನು ಸದಾ ನೀತಿ ಸತ್ಯ ನ್ಯಾಯಗಳಿಂದ ನಡೆದು ಸದಾಚಾರವನ್ನು ಅಳವಡಿಸಿ ಲಿಂಗಪೂಜಿಸಬೇಕೆಂದು ಹೇಳಿದರು. ಅಂದರೆ ಇಷ್ಟಲಿಂಗ ಪೂಜೆಯಾಯಿತು. ಅನೀತಿ ಅನಾಚಾರದಿಂದ ನಡೆದು ಎಷ್ಟು ಕಾಲ ಪೂಜಿಸಿದರೂ ಎಳ್ಳಕಾಳಿನಷ್ಟು ಫಲವಾಗುವದಿಲ್ಲ. ಆದಕ್ಕಾಗಿ– ಕೆಂಚ ಕರಿಕನ ನೆನೆದರೆ ಕರಿಕನಾಗು

ವನೇ? ದರಿದ್ರ ಸಿರಿವಂತನ ನೆನೆದರೆ ದರಿದ್ರ ಸಿರಿವಂತನಾಗುವನೇ? ಅದ ರಂತೇ ಅನೀತಿ ಅನಾಚಾರದವರು ಶಿವನ ನೆನೆದರೆ ಶಿವನಾಗಬಲ್ಲರೇ? ಎಂದೂ ಇಲ್ಲೆಂದು ಹೇಳಿದ್ದಾರೆ. ಅದಕ್ಕೆ ಲಿಂಗಭಕ್ತರು ಒಳ್ಳೇ ಸದಾಚಾರದಿಂದ ನಡೆದು ಸದಾ ಸತ್ಕರ್ಮಗಳನ್ನೇ ಮಾಡುತ್ತಿರಬೇಕು. ಅಂದರೆ ಇಷ್ಟಲಿಂಗ ಪೂಜೆಯ ಫಲವು ಲಭಿಸುವದು. ದೇವರಿದ್ದ ಗುಡಿಗಳನ್ನು ಸದಾ ಜಳಜಳವಾಗಿ ಒಳ್ಳೇ ಸ್ವಚ್ಛವಾಗಿ ಪವಿತ್ರವಾಗಿ ಶುದ್ಧವಾಗಿ ಇರಿಸುವಂತೆ, ಇಷ್ಟಲಿಂಗದ ಗುಡಿಯಾದ ಈ ದೇಹವನ್ನೇ ನಿಜವಾಗಿ ಸದಾಚಾರ ಸದ್ಗುಣ ಸದ್ವಿಚಾರಗಳಿಂದ ಪವಿತ್ರ ಶುದ್ಧಗೊಳಿಸಬೇಗು ಎಂದು ವಿಧಿಸಿದ್ದಾರೆ. ಲಿಂಗ ಪೂಜೆಗೂ ತನ್ನ ಆಚರಣೆಗೂ ಎಂಥನಿಕಟ ಸಂಬಂಧವನ್ನು ನಮ್ಮವರು ಕಲ್ಪಿಸಿಕೊಂಡಿದ್ದಾರೆ, ವಿಚಾರಿಸಿರಿ. ಇದರಿಂದ ತನ್ನ ಹಾಗು ಅನ್ಯರ ಸಂಸಾರ ಸುರಕ್ಷಿತ ಸುರಳೀತ ಸಾಗುವದರಲ್ಲಿ ಸಂದೇಹವೇ ಇಲ್ಲ. ನಮ್ಮವರು ಇದರಲ್ಲಿ ಎಷ್ಟು ಧೂರ್ತತನವನ್ನು ಉಪಯೋಗಿಸಿದ್ದಾರೆ ವಿಚಾರಿಸಿರಿ.

ಲಿಂಗ ಪೂಜಕರಲ್ಲಿ ಲಿಂಗಭಕ್ತರಲ್ಲಿ ಶರಣರು ಯಾವ ತರದ ಭೇದವನ್ನು ಮಾಡಲಿಲ್ಲ. ಎಲ್ಲ ಕಾಯಕದವರೊಂದಿಗೆ ಎಲ್ಲರೂ ಸರಿಸಮಾನ ಭಾವದಿಂದಲೇ ನಡೆದುಕೊಳ್ಳುತ್ತಿದ್ದರು. ಹರಳಯ್ಯನ ಮನೆಗೆ ಹೋಗಿ ಬಸವಣ್ಣನು ಲಿಂಗಪೂಜೆಯ ತೀರಿಸಿಕೊಂಡು ಪ್ರಸಾದಸೇವಿಸಿ ಬರುತ್ತಿದ್ದನು. ಇದರಂತೆ ಎಲ್ಲ ಶರಣರೂ ನಡೆಯುತ್ತಿದ್ದರು. ಎಲ್ಲರಿಗೂ ಎಲ್ಲ ಜಾತಿಯವರಿಗೂ ಲಿಂಗದ ನೆಲೆಕಲೆಗಳನ್ನು ತಿಳಿಸಿ ಲಿಂಗಪೂಜೆಗೆ ಹಚ್ಚುತ್ತಿದ್ದರು. ಮತ್ತು ಅವರಿಗೆ ಸಮಾಜದಲ್ಲಿ ಮನೆಯಲ್ಲಿ ಸಮಭಾವದಿಂದ ನಡೆದುಕೊಳ್ಳುತ್ತಿದ್ದರು. ಅದಕ್ಕೆ ಕೀಳಜಾತಿಯವರೂ ಕೂಡ ಲಿಂಗಪೂಜೆಯಿಂದ ಭಕ್ತಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯರಾಗುತ್ತಿದ್ದರು. ಇವರೂ ಗುರು ಜಂಗಮರಾಗುತ್ತಿದ್ದರು. ಯಾವ ಜಾತಿಗೂ ಈಗಿನಂತೆ ಪ್ರಾಶಸ್ತ್ಯವನ್ನು ಕೊಟ್ಟಿರಲಿಲ್ಲ. ಲಿಂಗಪೂಜೆಯನ್ನು ಎಷ್ಟು ಭಕ್ತಿಯಿಂದ ಮಾಡುವರೋ ಯಾರು ಎಷ್ಟು ನೀತಿ ನ್ಯಾಯ ತ್ಯಾಗ ಸತ್ಯ ಬ್ರಹ್ಮಚರ್ಯಪಾಲನೆ ಮೊದಲಾದವುಗಳಿಂದ ನಡೆಯುವರೋ ಅವರು ಹೊಲೆಯ ಮಾದಿಗ ಸಮಗಾರರಿದ್ದರೂ ಗುರುತ್ವ ಜಂಗಮತ್ವಗಳು ಬರುತ್ತಿದ್ದವೆಂದು ಧಾರಾಳವಾಗಿ ಹೇಳಬಹುದು. ಇದೇ ನಿಜವಾದ ಲಿಂಗಪೂಜೆಯ ರಹಸ್ಯವೆಂದು ಹೇಳಬಹುದು. ಎಷ್ಟು ಲಿಂಗ ಪೂಜೆಯನ್ನು ಭಕ್ತಿಯಿಂದ ಮಾಡಿ ಸದಾಸತ್ಕರ್ಮಗಳನ್ನು ಮಾಡಿ ತ್ಯಾಗ

ವೈರಾಗ್ಯ ಬ್ರಹ್ಮಚರ್ಯ ಪಾಲನೆ ಮಾಡಿದರೂ ಕೂಡಾ ಭಕ್ತನಾಗಿಯೇ ಉಳಿದರೆ ಹೊಲೆಯ ಹೊಲೆಯನಾಗಿ ಉಳಿದರೆ ಆ ಲಿಂಗ ಪೂಜೆಯಿಂದ ಸಮಾಜಕ್ಕೆ ಏನೂ ಉಪಯೋಗವಾಗುವದಿಲ್ಲ. ಅವನ ಸ್ವಂತ ಸ್ಥಿತಿಯು ಬೇಕಾದಷ್ಟು ಅಂತರಂಗ ಬಹಿರಂಗಗಳಲ್ಲಿ ಉತ್ತಮಗೊಂಡರೂ ಕೂಡ ಸಮಾಜವು ಮನ್ನಿಸಿ ಅವನಿಗೆ ಯೋಗ್ಯ ಸ್ಥಾನ ಕೊಡದಿದ್ದರೆ ಸಮಾಜದವರು ದೇವದ್ರೋಹ, ಗುರು ದ್ರೋಹ, ಜಂಗಮ ದ್ರೋಹ ಮಾಡಿದಂತೆ ಆಗುವದು. ಅದರಂತೇ ಶಿವಶರಣರು ವೀರಶೈವರಲ್ಲಿ ಉದ್ಯೋಗದಿಂದ ಬಂದ ಜಾತಿಕುಲಗಳನ್ನು ಸಂಪೂರ್ಣ ತೊಡೆದು ಹಾಕಿ ಲಿಂಗ ಭಕ್ತರನೆಲ್ಲ ಒಂದೇ ಎಂಬ ತತ್ವದಂತೆ ನಡೆದುಕೊಂಡು ಬಂದು ಕೀಳರೆನಿಸ.ವವರನ್ನು ಮೇಲೆತ್ತಿ ದೇಶಕ್ಕೆ ಆದರ್ಶ ಸಮಾಜವೆಂದು ತೋರಿಸಿಕೊಟ್ಟರು. ಇಷ್ಟಾದರೆ ಲಿಂಗಪೂಜೆಯ ನಿಜವಾದ ರಹಸ್ಯವು ಸಮಾಜಕ್ಕೆ ತಿಳಿದಿದೆ ಎಂದು ಹೇಳಬೇಕು.

ಇದರಂತೆ ಸ್ತ್ರೀಯರಿಗೂ ಲಿಂಗ ಧರಿಸಿ ಪೂಜಿಸುವ ಹಕ್ಕನ್ನೂ ದಯಪಾಲಿಸಿದರು. ಅವರೂ ಪುರುಷರಂತೆ ಲಿಂಗನಿಷ್ಠರಾಗಿ ಲಿಂಗಾನುಭಾವಿಗಳಾಗಿ ಲಿಂಗಾಂಗ ಸಮರಸವನ್ನು ಸಾಧಿಸಿದರು. ಎಲ್ಲ ಜಾತಿಯ ಸ್ತ್ರೀಯರಿಗೂ ಲಿಂಗ ಪೂಜಿಸಿ ಅಷ್ಟಾವರಣದಂತೆ ಪಂಚಾಚಾರ ಷಟ್‌ಸ್ಥಲದಂತೆ ನಡೆಯುವ ಸರಿಸಮಾನ ಹಕ್ಕನ್ನು ದಯಪಾಲಿಸಿದರು ಅನೇಕ ಸ್ತ್ರೀಯರು ಲಿಂಗ ಗೋಷ್ಠಿಯಲ್ಲಿ ಭಾಗಿಗಳಾಗಿ ವಚನಗಳನ್ನು ರಚಿಸಿದರು. ಹೀಗಾಗಿ ಸ್ತ್ರೀಯರು ಲಿಂಗ ಜಂಗಮದ ನಿಲವನ್ನು ಕಂಡು ಮಹಾಲಿಂಗವನ್ನು ಪಡೆದರು. ಹೀಗಾಗಿ ಸ್ತ್ರೀ ಸಮಾಜವು ಸುಧಾರಿಸಿ ಜನಾಂಗಕ್ಕೆ ಮಹದುಪಕಾರ ಮಾಡಿದರು. ಸ್ತ್ರೀಯರ ಬುದ್ಧಿಶಕ್ತಿ ಭಾವನಾಶಕ್ತಿಗಳು ಬೆಳೆದು ನಾಡಿಗೆ ಒಳ್ಳೇ ಕಲ್ಯಾಣವಾಯಿತು. ಇದೆಲ್ಲ ಲಿಂಗಪೂಜೆಯನ್ನು ಸ್ತ್ರೀಯರಿಗೆ ದಯಪಾಲಿಸಿದ್ದರ ಪರಿಣಾಮವಲ್ಲದೆ ಮತ್ತೇನು ? ಅನೇಕ ಅನೀತಿಯ ಪುರುಷರಿಗೆ ಸ್ತ್ರೀಯರ ಲಿಂಗಾನಂದವು ಅವರನ್ನು ಸುಧಾರಿಸಲಿಕ್ಕೆ ಹಚ್ಚಿತು. ಹೀಗಾಗಿ ಎಲ್ಲರೂ ಕಾಯಕ ಮಾಡುವವರು ಸ್ವಾವಲಂಬಿಗಳು ಆದರು. ಲಿಂಗಜಂಗಮದ ನಿಲವಿಗಾಗಿ ಯಾವ ಕಾಯಕ ಕೈಕೊಂಡರೂ ಅಷ್ಟೇ ಸರಿ. ಅದೆಲ್ಲ ತನ್ನ ಬಂಧುಬಳಗ ಮೊದಲಾದವರ ಪೋಷಣೆಗೆ ಆಗಿರುವದೆಂದು ಬಗೆದರು. ಲಿಂಗವನ್ನು ಪೂಜಿಸುವದರಿಂದ ಅವನು ಸತ್‌ಕ್ರಿಯಾಚರಣೆಯನ್ನು ಅನುಸರಿಸಲೇ ಬೇಕಾಯಿತು. ನೀತಿ, ನ್ಯಾಯ, ಸತ್ಯದಿಂದಲೇ ನಡೆದು ದುಡಿದು ಗಳಿಸಬೇಕಾಯಿತು. ಹೀಗೆ ಲಿಂಗಪೂಜೆಯಿಂದ ಎಲ್ಲವೂ ತಾನೇ ಸುಧಾರಣೆಗೆ

ಇಳಿಯಿತ್ತು. ಅವನು ಲಿಂಗಪೂಜೆಯಿಂದ ಜ್ಞಾನಿಯಾದನು. ಆವನು ಸಂಪಾದಿಸಿದ ಸುಜ್ಞಾನವೇ ಜಂಗಮವು ಅವನೇ ಅದರಿಂದ ಜಂಗಮನಾದನು. ಶರಣನೆಂದರೂ ಅವನೇ ಸರಿ. ಅವನೇ ಮಹಂತ, ಒಡೆಯನೆಂದೂ ಹೆಸರಾದನು. ಜಾತಿ ಇಲ್ಲ, ನೀತಿಗೆ ಬೆಲೆಬಂದಿತು. ಹೀಗಾಗಿ ಅನೇಕರು ಲಿಂಗ ಧರಿಸಿ ಪೂಜಿಸಬೇಕೆಂದು ಅವರಿಗೆ ಅನಿಸಿ ಅದರಂತೆ ಅವರು ಮಾಡಿ ಲಿಂಗಾನುಭವವನ್ನು ಪಡೆದು ಪುನೀತರಾದರು. ಜನಸಾಮಾನ್ಯರಿಗೆ ಇದೊಂದು ಅತ್ಯುತ್ತಮ ಆಚರಣೆ, ಪದ್ಧತಿ ಎನಿಸಿತು. ಬಿದ್ದವರು ಏಳಲಿಕ್ಕೆ, ಹಿಂದುಳಿದವರು ಮುಂದೆ ಹೋಗಲಿಕ್ಕೆ, ಕನಿಷ್ಠರೆನಿಸಿದವರು ಶ್ರೇಷ್ಠರಾಗಲಿಕ್ಕೆ, ಕೀಳೆನಿಸಿದವರು ಮೇಲಾಗಲಿಕ್ಕೆ, ಅಸ್ಪೃಶ್ಯರೆನಿಸಿದವರು ಸ್ಪೃಶ್ಯರೆನಿಸಲಿಕ್ಕೆ ಈ ಲಿಂಗಪೂಜೆಯು ಲಿಂಗಭಕ್ತಿಯು ಲಿಂಗಧಾರಣೆ ಒಳ್ಳೇ ಪ್ರೋತ್ಸಾಹವನ್ನು ಜನಸಾಮಾನ್ಯರಿಗೆ ನೀಡಿದವು. ಇದರಿಂದ ಎಲ್ಲಿ ಬೇಕಾದಲ್ಲಿ ಲಿಂಗಪೂಜೆಯ ಸುಗಂಧವು ಹರಡಿಕೊಂಡಿತು. ಇದಕ್ಕೆಲ್ಲ ಸಂಸ್ಕೃತ ಮಂತ್ರಗಳನ್ನು ವಚನ ರೂಪದಿಂದ ಕನ್ನಡದಲ್ಲಿ ಮಾಡಿದುದೂ ಕಾರಣವಾಯಿತು. ಲಿಂಗ ಪೂಜೆಯಿಂದ ಎಲ್ಲರೂ ಲಿಂಗಗಳಲ್ಲಿ ಆಗಿಬಿಡುವದರಿಂದ ಎಲ್ಲರೂ ಒಬ್ಬರಿಗೊಬ್ಬರು ಪೂಜಕರೇ ಆಗಿಬಿಡುತ್ತಿದ್ದರು ಲಿಂಗಪೂಜೆಯು ಇಷ್ಟು ವ್ಯಾಪಕವಾಗಿ ಬೆಳೆದದೆ, ಆದರೆ ಅದರ ಪೂಜೆಯ ವಿಧಾನವನ್ನು ಈಗ ಈ ಲೇಖದಲ್ಲಿ ಹೇಳಬಯಸುವೆವು. ಮುಖ್ಯವಾಗಿ ಲಿಂಗಪೂಜೆಗೆ ಭಕ್ತಿ, ಪರಮ ಭಕ್ತಿ, ಪರಮ ಪರತರ ಭಕ್ತಿ, ಪರಮ ಪರತರ ದಿವ್ಯ ಭಕ್ತಿಗಳೇ ನಿಜವಾದ ಫಲವು. ಅಂದರೆ ಲಿಂಗವೇ ಅವರ ಉಸಿರಾಗಬೇಕು. ಲಿಂಗವೇ ಪ್ರೀತಿಯ ವಸ್ತು ಆಗಬೇಕು. ಲಿಂಗವೇ ಅವರ ಪಂಚ ಪ್ರಾಣಗಳಾಗಬೇಕು. ಲಿಂಗವೇ ಅವರ ನರನಾಡಿಯಾಗಬೇಕು. ಲಿಂಗದ ಬಗ್ಗೆ ಒಂದು ಬಗೆಯ ಹುಚ್ಚೇ ಹಿಡಿದರಂತೂ ಬಹು ಉತ್ತಮ. ತೀವ್ರ ಲಿಂಗದರುಶನವಾಯಿತೆಂದೇ ತಿಳಿಯಬೇಕು. ಲಿಂಗದ ಬಗ್ಗೆ ಕೇಳಬೇಕು, ಲಿಂಗದ ಬಗ್ಗೆ ಕೀರ್ತನ ಮಾಡಬೇಕು. ಲಿಂಗದ ಸ್ಮರಣೆಯನ್ನು ಮಾಡಬೇಕು. ಲಿಂಗದ ಪಾದಸೇವನೆ ಮಾಡಬೇಕು. ಲಿಂಗದ ಅರ್ಚನೆ ಮಾಡಬೇಕು. ಲಿಂಗಕ್ಕೆ ವಂದಿಸಬೇಕು. ಲಿಂಗಕ್ಕೆ ಸೇವೆ ಮಾಡಬೇಕು. ಲಿಂಗದ ಸಖ್ಯ ಮಾಡಬೇಕು. ಲಿಂಗಕ್ಕೆ ಆತ್ಮನಿವೇದನ ಮಾಡಬೇಕು. ಅಲ್ಲದೆ ಧ್ಯಾನ ಜಪಗಳನ್ನು ಮಾಡಬೇಕು. ಇವುಗಳ ಜೊತೆಗೆ ಕಾಯಕವೂ ಇರಬೇಕು. ಅಲ್ಲದೆ ಸತ್ಮಾರ್ಗಗಳನ್ನೂ ಆಚರಿಸಬೇಕು. ಅಲ್ಲದೆ ಸದ್ವಿಚಾರಗಳನ್ನೂ ಮಾಡಬೇಕು.

ಮೇಲೆ ಹೇಳಿದುದು ಪ್ರಶ್ನನು ದರ್ಜೆಯ ಭಕ್ತರಿಗೆ ಶಕ್ಯವಾಗಿರುವದು. ಸಾಮಾನ್ಯರಿಗೆ ಇಂಥ ಭಕ್ತಿ ಶಕ್ಯವಿಲ್ಲ. ಅವರಿಗೆ ಒಂದು ವಿಧಾನವು ಅವಶ್ಯ ಬೇಕೇ ಬೇಕು.

(೧) ಬೆಳಿಗ್ಗೆ ಬ್ರಾಹ್ಮೀಮುಹೂರ್ತದಲ್ಲಿ ಅಂದರೆ ನಸುಕಿನ ನಾಲ್ಕು ಘಂಟೆಗೆ ನಿತ್ಯ ಏಳಬೇಕು. ಹಾಸಿಗೆಯಲ್ಲಿ ಕುಳಿತೆ ಶಿವಧ್ಯಾನಮಾಡುತ್ತ ಎದ್ದು ಮುಖತೊಳೆದುಕೊಂಡು ಅದೆ ಹಾಸಿಗೆಯ ಮೇಲೆ ಕುಳಿತು ಕೆಳಗಿನ ಉದಯ ರಾಗವನ್ನುಮಾಡಬೇಕು.

ಏಳು ಜ್ಞಾನದ ಕಣಿಯೆ ಏಳುಜ್ಯೋತಿಯ ಮಣಿಯೆ ।
ಏಳು ಮಹಾಲಿಂಗ ಏಳು;ಬೆಳಗಾಯಿತೇಳು ಏಳು ॥ಪಲ್ಲ॥

ಭಕ್ತ ವತ್ಸಲನೇಳು ಭಕ್ತಪ್ರೇಮಿಯೆ ಏಳು ।
ಭಕ್ತರನು ಸಲುಹುವ ಭಕ್ತ ದುಂದುರನೆ ಏಳು ॥೧॥

ಬಸವ ಅಲ್ಲಮ ಚನ್ನ ಮಡಿವಳ ಸಿದ್ಧರಾಮರು ।
ಅಕ್ಕ, ಮುಕ್ತಾಯಿ, ನಾಗಮ್ಮ, ಸತ್ಯಕ್ಕ, ಮಹಾದೇವಿಯರ ॥೨॥

ಚಂದಯ್ಯ ಹರಳಯ್ಯ ಮೊದಲಾದ ಶರಣ ಶರಣೆಯರು ।
ಬಾಗಿಲಲಿ ಬಂದಿಹರು ಏಳಯ್ಯ ಮಹಾಲಿಂಗದೇವ ॥೩॥

ನಿನ್ನ ಭಕ್ತನು ನಾನು ಕರೆಯುವೆನು ಏಳಯ್ಯ ।
ನಿನ್ನ ಮಹಿಮೆಯ ಕವನ ಹಾಡುವೆನು ಕೇಳಯ್ಯ ॥೪॥

ಪಿತ ಸಿದ್ಧಲಿಂಗೇಳು ಗುರುಸಿದ್ಧಲಿಂಗೇಳು ।
ವರ ಸಿದ್ಧಲಿಂಗೇಳು ಬೇಗನೇಳಯ್ಯ ಏಳು ॥೫॥

(೨) ಆ ಬಳಿಕ ಕೆಲಹೊತ್ತು ಕೈಯಲ್ಲಿ ರುದ್ರಾಕ್ಷಿಮಾಲೆಯನ್ನು ಎಣಿಸುತ್ತ ಶಿವಮಂತ್ರವನ್ನು ಜಪಿಸುತ್ತ ಪದ್ಮಾಸನದಲ್ಲಿ ಕುಳಿತಿರಬೇಕು.

(೩) ಶ್ರೀ ನಿಜಗುಣ ಶಿವಯೋಗಿ ಮೊದಲಾದವರ ಪದ್ಯಗಳಲ್ಲಿ ಇದ್ದ ಹರನಾಮಗಳನ್ನೂ ಪಾರ್ವತಿಯ ನಾಮಗಳನ್ನೂ ಹಾಡಿ ಶಿವಶಕ್ತಿಯರ ಗುರುತಾದ ತನ್ನ ಇಷ್ಟಲಿಂಗವನ್ನು ಹೊರಗೆ ತೆಗೆಯದೆ ನಮಿಸಿ ಮಂತ್ರ ಜಪಿಸುತ್ತ ಹಾಸಿಗೆಯಿಂದ ಸೂರ್ಯೋದಯದ ಪೂರ್ವದಲ್ಲಿ ಮೂವತ್ತು ನಿಮಿಷ ಮುಂಚಿತವಾಗಿ ಏಳಬೇಕು.

(೪) ಶೌಚವಿಧಿ:— ಬಲಗೈಯಲ್ಲಿ ತುಂಬಿದ ತಂಬಿಗೆಯನ್ನು ಹಿಡಿದುಕೊಂಡು ಊರಬಿಟ್ಟು ದೂರ ಬಯಲಿಗೆ ಹೋಗಿ ಮಲವಿಸರ್ಜನೆ ಮಾಡಬೇಕು. ಆ ಕಾಲಕ್ಕೆ ಒಳ್ಳೇ ವಿಚಾರಗಳನ್ನು ಮಾಡಬೇಕು. ವಿನಯ, ಧೈರ್ಯ, ಶಾಂತಿ, ಸತ್ಯ, ದೃಢವಿಶ್ವಾಸ, ಭಕ್ತಿ ಮೊದಲಾದ ಯೋಗ್ಯ ಗುಣಗಳು ತನ್ನಲ್ಲಿ ಬರಲೆಂದೂ ಒಳ್ಳೇ ರೀತಿಯಿಂದ ಕಾಯಕ ಮಾಡಿ ಗಳಿಸಿ ಪರರ ಕಲ್ಯಾಣಕ್ಕೆ ಅದನ್ನು ಕೊಟ್ಟು ದಾಸೋಹ ಮಾಡಿ ಉಳಿದದ್ದನ್ನು ಪ್ರಸಾದ ರೂಪದಿಂದ ಭೋಗಿಸುವ ಬುದ್ಧಿಯನ್ನೂ ಸದ್ವಿಚಾರಗಳನ್ನೂ ಸತ್ಕ್ರಿಯೆಗಳನ್ನೂ ದಯಪಾಲಿಸೆಂದು ಬೇಡುತ್ತಿರಬೇಕು. ಆಗ ಅವನು ಏಕಾಂತದಲ್ಲಿ ಮೌನವನ್ನೂ ಅನುಭವಿಸುತ್ತಿರಬೇಕು. ಕೆಟ್ಟ ಕಾಮುಕ ವಿಚಾರಕ್ಕೆ ಆಸ್ಪದ ಕೊಡಬಾರದು. ಮಂತ್ರ ಜಪಿಸುತ್ತ ಮನೆಗೆ ಬರಬೇಕು.

(೫) ಹಲ್ಲುತಿಕ್ಕುವದು:— ಅತ್ತಿ, ಆಲ, ಉತ್ತರಾಣಿ, ಮಾವು, ಹಲಸು, ನೇರಿಳೆ, ಬೇವು ಮುಂತಾದ ಕಡ್ಡಿಗಳಿಂದ ಹಲ್ಲನ್ನು ತಿಕ್ಕಬೇಕು. ಅತ್ತಿಯಿಂದ ವಾಕ್ಯಸಿದ್ಧಿ, ಆಲದಿಂದ ಸಕಲಸಂಪತ್ತು, ಉತ್ತರಾಣಿಯಿಂದ ಸಕಲಸಿದ್ಧಿಗಳು, ಮಾವಿನಿಂದ ರಾಜ ಪೂಜ್ಯತೆ, ಹಲಸಿನಿಂದ ಸೌಭಾಗ್ಯ, ನೇರಿಲದಿಂದ ದೀರ್ಘಾಯು, ಬೇವಿನಿಂದ ರೋಗನಿವಾರಣೆ ಇವು ಆಗುವವೆಂದು ಅನೇಕರು ಹೇಳುತ್ತಾರೆ.

(೬) ಸ್ನಾನ ಮಾಡುವದು:— ತಣ್ಣೀರು ಅಥವಾ ಸಾದಾ ಬೆಚ್ಚಗಿನ ನೀರಿನಿಂದ ಸ್ನಾನ ಮಾಡಬೇಕು ಆಗ ಕೆಳಗಿನ ವಚನಗಳನ್ನು ಅಥವಾ ತಮಗೆ ಬೇಕಾದ ದೇವರ ಪದ್ಯಗಳನ್ನು ಹಾಡುತ್ತಾ ಸ್ನಾನ ಮಾಡಬೇಕು. ಆದಿ ಅನಾದಿ ಇಲ್ಲದಂದು, ಶೂನ್ಯ ನಿಶ್ಶೂನ್ಯ ವಿಲ್ಲದಂದು, ಸರಾಳ ನಿರಾಳ ವಿಲ್ಲದಂದು, ಭೇದಾಭೇದಂಗಳೇನೂ ಇಲ್ಲದಂದು, ನಿಮ್ಮ ನೀವರಿಯದೆ ಇರ್ದಿರಲ್ಲಾ ಎಲೆ ಮಹಾಲಿಂಗವೆ.

ಶಿವ ತನ್ನ ಶಕ್ತಿಯ ವಿನೋದಕ್ಕೆ ಜಗವ ನಿರ್ಮಿಸಿದ. ಅನಂತ ಲೋಕಂಗಳನು ಅನಂತ ಜೀವಕೋಟಿಯನು ಯಂತ್ರವಾಹಕನು ಮಾಡಿದ ಕಟ್ಟಣೆಯನಾರಿಗೂ ತಿಳಿಯಬಾರದು ನೋಡಾ, ಸರ್ವಾತ್ಮರು ಮಲಪಾಶದಿಂದ ಬಂಧಿಸಿಕೊಂಬ ಪಶುಗಳಾದರು. ತಾ ಪಶುಪತಿಯಾದ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ.

ಈ ಪ್ರಕಾರ ಸೃಷ್ಟಿರಚನೆಯ ವಚನಗಳನ್ನು ತಮಗೆ ಬೇಕಾದಷ್ಟನ್ನು ಹಾಡುತ್ತ ಸ್ನಾನ ಮಾಡಬೇಕು. ಪರಮಾತ್ಮನಿಗೇ ಸ್ನಾನವೆಂದು ಹೇಳಬೇಕು.

(೭) ವಸ್ತ್ರಧಾರಣ:— ಮಡಿಬಟ್ಟೆಗಳನ್ನು ಧರಿಸುತ ಕೆಳಗಿನ ವಚನವನ್ನು ಹಾಡಬೇಕು— "ಆದಿ ಅನಾದಿಗಳಿಲ್ಲದಂದು ನಾದ ಬಿಂದು ಕಳೆ ಮೊಳೆದೋರದಂದು, ದೇಹಿ ದೇಹಂಗಳು ಉತ್ಪತ್ಯವಾಗದಂದು ಜೀವಾತ್ಮ ಪರಮಾತ್ಮರೆಂಬವರಿಲ್ಲದಂದು, ಸಕಲ ಚರಾಚರಂಗಳ ಸುಳಿಹಿಲ್ಲದಂದು, ನೀನು ಶೂನ್ಯನಾಗಿ ಇರ್ದಿಯಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ' ಎಂದು ಹೇಳುತ್ತ ಪರಮಾತ್ಮನಿಗೆ ಮಡಿವಸ್ತ್ರವನ್ನು ಧಾರಣ ಮಾಡುವೆನೆಂಬ ಭಾವ ಬರಬೇಕು.

(೮) ಲಿಂಗಪೂಜಾಸ್ಥಾನಕ್ಕೆ ಪ್ರವೇಶ:— ಮಡಿಯಾದ ಶುದ್ಧ ನೀರನ್ನು ತಂಬಿಗೆಯಲ್ಲಿ ತುಂಬಿಕೊಂಡು ಮಂತ್ರ ಜಪಿಸುತ್ತ ಲಿಂಗಪೂಜೆಯ ಕೋಣೆಗೆ ಹೋಗಬೇಕು ಆಗ ಎಲ್ಲ ಬಾಹ್ಯವಿಚಾರಗಳನ್ನು ಬಿಡಬೇಕು. ಲಿಂಗವಿದ್ದ ಠಾವಿಂಗೆ ಪ್ರಳಯವುಂಟೇ? ಸದ್‌ಭಕ್ತರ ಭಾವದಲ್ಲಿಪ್ಪನಲ್ಲದೆ ಮತ್ತೆಲ್ಲಿಯೂ ಇಲ್ಲ ಗುಹೇಶ್ವರ ಲಿಂಗವು'' ಎಂಬ ಹಾಡು ಹಾಡಬೇಕು.

(೯) ಆಸನ ಸ್ವೀಕಾರ:— ಆಸನದ ಮೇಲೆ ಕುಳ್ಳಿರುವಾಗ ತನ್ನಲ್ಲಿಯ ಯಾವತ್ತೂ ಕೆಟ್ಟ ಆಶೆ ವಾಸನೆಗಳನ್ನು ತೊರೆಯಲು, ಮನಸ್ಸಿನ ಚಂಚಲತೆ ಹೋಗಲು ಹಂಬಲಿಸಿ ಕೆಳಗಿನ ವಚನ ಹೇಳಬೇಕು.

ಸ್ವಾಮಿ ನೀನು, ಶಾಶ್ವತನು ನೀನು, ಎತ್ತಿದೆ ಬಿರಿದು ಜಗವೆಲ್ಲರಿಯಲು।
ಮಹಾದೇವ ಮಹಾದೇವ ಇಲ್ಲಿಂದ ಮೇಲೆ ಶಬ್ದವಿಲ್ಲ।
ಪಶುಪತಿ ಜಗಕ್ಕೆ ಏಕೋ ದೇವ. ಸ್ವರ್ಗ ಮರ್ತ್ಯ ಪಾತಾಳದೊಳಗೆ।
ಒಬ್ಬನೇ ದೇವ ಕೂಡಲಸಂಗಮದೇವ ॥

ಎಂದು ಹೇಳಿ ಪದ್ಮಾಸನದ ಮೇಲೆ ಕೂಡ್ರಬೇಕು. ಇದೇ ಆಸನ ಪೂಜೆಗೆ ಯೋಗ್ಯವಾಗಿರುವದು.

(೧೦) ದಿಗ್ಬಂಧನ:— ಅಂತರಂಗ ಬಹಿರಂಗಗಳಲ್ಲಿ ಶಾಂತಿ ನೆಲಿಸಬೇಕು. ಸಂಕಲ್ಪ ವಿಕಲ್ಪಗಳು ಹೋಗಬೇಕು. ಯಾವ ಗದ್ದಲ ಸಪ್ಪಳವೂ ಕೇಳದಂತೆ ಮನಸ್ಸನ್ನು ಬಂಧಿಸಬೇಕು. ಅದಕ್ಕಾಗಿ ಕೆಳಗಿನ ವಚನ ಹೇಳಬೇಕು.

" ಭವ ಬಂಧನ ಭವಪಾಶವೆನಗಾದ ಕಾ ಣವೇನಯ್ಯ?
ಹಿಂದಣ ಸಿರಿಯಲ್ಲಿ ಲಿಂಗವ ಮರೆದೆನಾಗಿ
ಹಿಂದಣ ಜನ್ಮದಲ್ಲಿ ಜಂಗಮವ ಜರಿದೆನಾಗಿ
ಅರಿವಡೀ ಸಂಸಾರ ಹೊದ್ದಲೀವೆನೆ ಕೂಡಲಸಂಗಮದೇವಾ "

(೧೧) ಜಲಶುದ್ಧಿಃ— ನೀರು ತುಂಬಿದ ತಂಬಿಗೆಯಲ್ಲಿ 'ಓಂ ನಮಃ ಶಿವಾಯ' ಮಂತ್ರವನ್ನು ಬಲಗೈ ತೋರ ಬೆರಳಿನಿಂದ ಮೂರು ಸಲ ಬರೆದು ಮೂರು ಸಲ ಐದು ಬೆರಳಿನಿಂದ ನೀರನ್ನು ಮೇಲಕ್ಕೆ ಎತ್ತಿ ಕೆಳಗೆ ತಂಬಿಗೆಯಲ್ಲಿ ಬಿಡಬೇಕು. ಶಿವನ ಜಡೆಯಿಂದ ಹರಿದು ಬಂದವಳೇ ಆಕಾಶದಿಂದ ಭೂಮಿಗೆ ಇಳಿದವಳೇ ಭಾವಿಯಲ್ಲಿ ಝರಿಯಾಗಿ ಬಂದವಳೇ ಓಂ ನಮಃ ಶಿವಾಯ ಮಂತ್ರದಿಂದ ಶುದ್ಧಗೊಳಿಸುವೆನೆಂದು ಹೇಳಬೇಕು.

(೧೨) ಸಂಕಲ್ಪಃ— ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳನ್ನು ಅಂದರೆ ಆಚಾರಲಿಂಗ ಗುರುಲಿಂಗ, ಶಿವಲಿಂಗ ಜಂಗಮಲಿಂಗ, ಪ್ರಸಾದಲಿಂಗ ಮಹಾಲಿಂಗಗಳನ್ನು ಕ್ರಮವಾಗಿ ಕಂಡು ಸರ್ವಾಂಗಲಿಂಗಿಯಾಗಿ ಲಿಂಗಾಂಗ ಸಮರಸಹೊಂದಲು ನನ್ನಲ್ಲಿಯ ಶಿವಶಕ್ತಿಯರ ಕುರುಹಾಗಿರುವ ಈ ಇಷ್ಟಲಿಂಗವನ್ನು ಭಯಭಕ್ತಿಯಿಂದ ಪೂಜಿಸುವೆನು. ಅದಕ್ಕೆ ಲಿಂಗದೇವನೇ ಸಿದ್ಧರಾಗಿರಿ ಎಂದು ವಿನಯದಿಂದ ಹೇಳಿಕೊಳ್ಳಬೇಕು. ಇಲ್ಲಿ ಆಹ್ವಾನವಿಲ್ಲ. ಯಾಕಂದರೆ ಹೊರಗಿನ ದೇವನನ್ನು ಈಗ ಪೂಜಿಸುವದಿಲ್ಲ. ತನ್ನ ಆತ್ಮ ಕುರುಹನ್ನೇ ಪೂಜಿಸುವನು. ಅವನು ಹೋಗುವದಿಲ್ಲ, ಬರುವದಿಲ್ಲ.

(೧೩) ಗುರುಸ್ಥಲಃ— ಒಳಗೆ ಶೋಧಿಸಿ ಹೊರಗೆ ಶುದ್ಧವಿಸಿ, ಒಳ ಹೋರಗೆಂಬ ಉಭಯ ಶಂಕೆಯ ಕಳೆದು, ಸ್ಫಟಿಕದ ಶಲಾಕೆಯಂತೆ, ತಳವೆಳಗು ಮಾಡಿ ಎನ್ನಯ ಸರ್ವಪ್ರಪಂಚ ನಿವೃತ್ತಿಯ ಮಾಡಿ ನಿಜೋಪದೇಶವನಿತ್ತು, ನಿನ್ನ ಈ ಶಿಷ್ಯನ ನಿಜದಾದಿಯ ನೈದಿಸುವ ನಿಜಜ್ಞಾನ ಗುರುವೆ ನಿಮ್ಮ ಶ್ರೀಪಾದಕ್ಕೆ ನಮೋ ನಮೋ ಚನ್ನಮಲ್ಲಿಕಾರ್ಜುನಾ.

ನರಜನ್ಮವ ತೊಡೆದು ಹರಜನ್ಮವ ಮಾಡಿದ ಶ್ರೀ ಗುರುವೆ ನಮೋ ನಮೋ. ಭವಬಂಧನ ಬಿಡಿಸಿ ಪರಮ ಸುಖವ ತೋರಿದ ಶ್ರೀಗುರುವೆ ನಮೋ ನಮೋ. ಭವಿ ಎಂಬುದ ತೊಡೆದು ಭಕ್ತನೆಂದೆನಿಸಿದ ಶ್ರೀಗುರುವೆ ನಮೋ ನಮೋ. ಚನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಶ್ರೀಗುರುವೆ ನಮೋ ನಮೋ

(೧೪) ಪೂಜಾ ಸಾಮಗ್ರಿಗಳ ಶುದ್ಧಿ:— ಆ ಶುದ್ಧಿ ಮಾಡಿದ ಜಲದಲ್ಲಿ ಐದು ಬೆರಳುಗಳನ್ನು ಎದ್ದಿ ಪೂಜಾಸಾಮಗ್ರಿಗಳಿಗೆ ಮಂತ್ರ ಹೇಳುತ್ತ ಸಿಂಪಡಿಸಿ ಶುದ್ಧಿ ಮಾಡಬೇಕು.

(೧೫) ಭಸ್ಮ ಶುದ್ಧಿ:— ಈ ಪದ್ಯವನ್ನು ಹಾಡಬೇಕು- ಭಸ್ಮಕ್ಕೆ ನಮಸ್ಕರಿಸಬೇಕು.

ಭಕ್ತನ ಶಾಂತಿ ಕಳೆ ಇದು ।
ಭಸಿತರೂಪದಿ ಶಕ್ತಿಬಂದಳು ।
ಅಸಮ ಶಿವನಾ ಸತ್ವ ಮಾಗಿದೆ ಕೇಳು ಈ ಭಸ್ಮ ॥
ಭಸಿತ ಧರಿಸುತ ಅಂಗ ಲಿಂಗಕೆ ।
ಬಸವ ನಂದದಿ ಪದವಿ ಪಡೆಯಲು ।
ವಸುಧಿ ಜನರಿಗೆ ನಿರುತ ಬಪ್ಪುದು ಸಾನುರಾಗದಲಿ ॥

(೧೬) ಭಸ್ಮಧಾರಣ:— ಬಲಹಸ್ತದಿಂದ ಭಸ್ಮವನ್ನು ತೆಗೆದುಕೊಂಡು ಎಡಹಸ್ತದಲ್ಲಿ ಇರಿಸಿ ಪತ್ರಿಯ ದಳವನ್ನು ಏರಿಸಿ ಧೂಪವನ್ನು ತೋರಿಸಿ, ಪೂಜಿಸಿ ಬಲಹಸ್ತದಿಂದ ಅದನ್ನು ಮುಚ್ಚಿ ಈ ಮಂತ್ರ ಹೇಳಬೇಕು.

ಕಾಮ ದಹನದ ಭಸ್ಮ ಇದು ತಾ
ಕ್ರೋಧ ದಹನವ ಭಸ್ಮ ಲಿಂಗವು
ಕಾಮಿಸುವದಕೆ ನೆರವ ನೀಡುವ ಭಸ್ಮ ತಾನಿಹುದು.

ಹೀಗೆ ಹೇಳುತ್ತ ತನ್ನ ಮಸ್ತಕ, ಹಣೆ, ಕಿವಿ, ಕಂಠ, ಭುಜ, ಹೃದಯ, ನಾಭಿ, ಬೆನ್ನು ಮೊಳಕೈ, ಹೆಗಲು, ಮುಂಗೈ, ನಾಸಿಕ, ಕಣ್ಣು, ನಾಲಿಗೆಗಳಲ್ಲಿ ಮೂರು ಬೆರಳುಗಳಂತೆ ಭಸ್ಮವನ್ನು ಧರಿಸಬೇಕು.

(೧೭) ರುದ್ರಾಕ್ಷಿ ಧಾರಣ:—

ಶಿವನ ನೇತ್ರವೆ ರುದ್ರ ಅಕ್ಷಿಯು
ಶಿವನೊಳೈಕ್ಯವ ಗೈದ ಮಹಿಮರ
ಶವದ ರುಂಡಗಳಂತೆ ಮೆರೆಯುವ ಬೀಜ ಧರಿಸುವೆನು.

ಭವವ ಹರಿಸುತ ಜ್ಞಾನ ನೇತ್ರವ
ಜವದಿ ಪಡೆಯಲು ನೆರವು ನೀಡುತ
ಜವದ ಬಾಧೆಯ ಹರಿಸಿ ಪಾಪವ ಮುದದಿ ಕಳೆಯುವದು.

ಹೀಗೆ ಹೇಳುತ್ತ ತಾನು ರುದ್ರಾಕ್ಷಿಗಳನ್ನು ಕೊರಳು ಕೈ ಮೊದಲಾದವುಗಳಲ್ಲಿ ಧರಿಸಬೇಕು. ಆಗ ದೇವರಿಗೆ ರುದ್ರಾಕ್ಷಿ ಧರಿಸುವ ಭಾವವನ್ನಿಟ್ಟು ಧರಿಸಬೇಕು.

(೧೮) ಇಷ್ಟಲಿಂಗವನ್ನು ವಸ್ತ್ರದಿಂದ ಅಥವಾ ಕರಡಿಗೆಯಿಂದ ಹೊರಗೆ ತೆಗೆದು ಎಡದ ಅಂಗೈಯ್ಯಲ್ಲಿ ಗೋಮುಖವನ್ನು ಹೆಬ್ಬೆರಳಿನ ಕಡೆಗೆ ಮಾಡಿ ಇರಿಸಿ ಪ್ರೇಮದ ದೃಷ್ಟಿಯಿಂದ ತಾನು ಸತಿ ಲಿಂಗ ಪತಿ ಎಂಬ ಭಾವದಿಂದ ವಿನಯದಿಂದ ನೋಡುತ್ತ ಕೆಳಗಿನ ವಚನವನ್ನು ಹಾಡಬೇಕು.

ಜಗದಗಲ ಮುಗಿಲಗಲ ಮಿಗೆಯಗಲ
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ
ಬ್ರಹ್ಮಾಂಡದಿಂದತ್ತ ನಿಮ್ಮ ಶ್ರೀ ಮುಕುಟ
ಅಪ್ರಮಾಣ ಅಗೋಚರ ಅಪ್ರತಿಮ ಲಿಂಗವೇ
ನೀವೆನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಲ್ಲ
ಕೂಡಲಸಂಗಮದೇವಾ ||

ಪಾತಾಳವಿತ್ತಿತ್ತ ಬ್ರಹ್ಮಾಂಡವತ್ತತ್ತ |
ದಶದಿಕ್ಕು ಇತ್ತಿತ್ತ ದಶಭುಜಂಗಳತ್ತತ್ತ ||
ಬ್ರಹ್ಮಾಂಡವಿತ್ತಿತ್ತ ಮಣಿಮುಕುಟವತ್ತತ್ತ |
ಚನ್ನಮಲ್ಲಿಕಾರ್ಜುನಯ್ಯ ನೀವೆನ್ನ ಕರಸ್ಥಲಕ್ಕೆ ಬಂದು
ಚುಳುಕಾದಿರಲ್ಲ ||

(೧೯) ಲಿಂಗಕ್ಕೆ ಸ್ನಾನಃ—

ಎನ್ನಯ ಕಾರ್ಮಿಕ ಮಾಯಾ ಆಗಾಮಿ |
ಮಲಗಳು ಹೋಗಲು ನಿನ್ನನು ಎರೆಯುವೆ ||
ಮೋದದಿ ಒಳ್ಳೆಯ ನೀರನು ಹಾಕುವೆ |
ಆದಿಯನಾದಿಯು ಅರಿಯದ ಲಿಂಗವೆ ||
ಆದರದಿಂದಲಿ ಜಲವನು ಎರೆಯುವೆ |
ಮುದದಲಿ ಮೈಯನು ತೊಳೆಯುವ ಲಿಂಗವೆ ||
ನಿನ್ನಯ ಉದರದಿ ಸಕಲ ಚರಾಚರ |
ನಿನ್ನಯುಲಿರಿಸುತ ಪೋಷಣಗೈಯ್ಯುವಿ ||
ನಿನ್ನಯ ಸ್ನಾನದಿ ಸಕಲರ ಸ್ನಾನವು |
ಚನ್ನಿಗಲಿಂಗವೆ ಎನಿಸಲಿ ಇದರಿಂ ||

ಹೀಗೆ ಹೇಳುತ್ತ ದಯಾರಸದಿಂದ ಮಜ್ಜನ ಮಾಡಿಸಬೇಕು. ತನ್ನಲ್ಲಿಯ ಯಾವತ್ತೂ ತರದ ಕಾರ್ಮಿಕ ಮಾಯಾ ಆಗಾಮಿ ಮಲಗಳನ್ನು ತೊಳೆಯುವೆನೆಂದು ಭಾವಿಸಬೇಕು.

(೨೦) ವಿಭೂತಿ ಧಾರಣ:— ತಾನು ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನೆಲ್ಲ ದೂರೀಕರಿಸಿ ಲಿಂಗಕ್ಕೆ ಭಸ್ಮಧಾರಣ ಮಾಡುವೆನೆಂದು ಹೇಳಿ ಕೆಳಗಿನ ವಚನವನ್ನು ಹೇಳುತ್ತ ಭಸ್ಮ ಧರಿಸಬೇಕು. ತಾನು ಮಹಾ ವಿಭೂತಿಯಾಗಬೇಕೆಂದು ಇದು ಸೂಚಿಸುವದು.

ಮಾಯಾ ಮೋಹದ ಮದವ ಕಳೆಯುತ
ಧರ್ಮ ಅರ್ಥವ ಕಾಮ ಮೋಕ್ಷವ
ಮನದಿ ಬಯಸದೆ ನಿನಗೆ ಭಸ್ಮವ ಮುದದಿ ಧರಿಸುವೆನು
ಶಾಂತ ಶಾಶ್ವತ ಲಿಂಗಪದವಿಯು,
ಭ್ರಾಂತಿ ಕಳೆಯುತ ಪೊಂದಲೋಸುಗ
ಕಾಂತಿ ಕೊಡುವತಿಭಸ್ಮವನ್ನತಿ ಜವದಿ ಮುಟ್ಟಿಸುವೆಂ

(೨೧) ಗಂಧಧಾರಣ:— ಗಂಧವು ತಂಪು ಗುಣವುಳ್ಳದ್ದು. ಇದರಿಂದ ಅಂತರಂಗವು ಪರಮಶಾಂತಿಯನ್ನು ಹೊಂದಲೆಂದು ಸೂಚಿಸುವದು.

ಪರಮಶಾಂತಿಯ ನಾನು ಪೊಂದಲು ।
ನಿರುತ ಧರಿಸುವೆ ಗಂಧ; ಲಿಂಗವೆ ।
ಇರದೆ ಕರುಣಿಸು ಪರಮಕಾಂತಿಯ ನನಗೆ ಮುದದಂದ ॥

(೨೨) ರುದ್ರಾಕ್ಷಿ ಧಾರಣ:— ಈ ರುದ್ರಾಕ್ಷಿಗಳನ್ನು ತಾನು ಜ್ಞಾನ ನೇತ್ರ ಅಂದರೆ ಸಮ್ಯಕ್ ದೃಷ್ಟಿಯನ್ನು ಪಡೆಯುವ ಸಲುವಾಗಿ ಲಿಂಗಕ್ಕೆ ಧಾರಣ ಮಾಡಬೇಕೆಂದು ತಿಳಿದು ಧರಿಸಬೇಕು.

ಜ್ಞಾನದೃಷ್ಟಿಯು ತೆರೆಯಲಾಶಿಸಿ ।
ಸಾನುರಾಗದಿ ನಿನ್ನ ಮಹಿಮೆಯ ।
ದಾನ ಧಾರೆಯ ಸುರಿಸಿ ರುದ್ರಾಕ್ಷಗಳ ಧರಿಸುವೆನು ।
ಪರಮ ರುದ್ರಾಕ್ಷಿಗಳೆ ನಾದವು ।
ಕಳೆಯು ಬಿಂದುವು ರೂಪವಾಗಿವೆ ।
ಭವದ ಬಾಧೆಯ ಹರಿಸಲೆನ್ನುತ ನಿನಗೆ ಧರಿಸುವೆನು ॥

(೨೩) ಬಿಲ್ವಧಾರಣಃ— ಮೂರು ದಳದ ಬಿಲ್ವವು ತ್ರಿಗುಣಗಳನ್ನು ಸೂಚಿಸುವದು. ತನ್ನ ತ್ರಿಗುಣಾತ್ಮಕ ವರ್ತನೆಗಳನ್ನೆಲ್ಲ ಪರಮಾತ್ಮನಿಗೆ ಅರ್ಪಿಸಿ ತ್ರಿಗುಣಾತೀತನಾಗುವೆನೆಂದು ಸೂಚಿಸುವದು. ಬಿಲ್ವವನ್ನು ಏರಿಸುತ್ತ.

ಮೂರು ಹೆಳದೀ ಬಿಲ್ವಗಳನಾ ।
ಧಾರಣವ ಮಾಡುವೆನು ಲಿಂಗವೆ ।
ದೂರ ಮಾಡೈ ತ್ರಿಗುಣಗಳನಂ ನೀನು ಎನ್ನಿಂದ ॥
ಧೀರ ತನುವನು ಪಾಲಿಸೆನ್ನಲಿ ।
ಮಾರಹರನೆಂದೆನಿಸು ಮುದದಲಿ ।
ಸಾರಿ ಹೇಳುವೆ ನಿನ್ನ ಪೂಜಿಸುವಂತೆ ಕರುಣಿಪುದು ॥

(೨೪) ಪುಷ್ಪಧಾರಣಃ— ತನ್ನಲ್ಲಿಯ ಹೃದಯ ಕುಸುಮವನ್ನು ಅರಳಿಸುವ ಗುರುತಿಗಾಗಿ ಲಿಂಗಕ್ಕೆ ಕುಸುಮಗಳನ್ನು ಏರಿಸಿ ಸುಗಂಧವನ್ನು ಸುತ್ತಲು ಬೀರಬೇಕು. ತನ್ನ ಹೃದಯ ಕುಸುಮವನ್ನು ಅರಳಿಸುವಂತೆ ದೇವರಿಗೆ ಕೇಳುವ ಈ ಪದ್ಯವನ್ನು ಹಾಡಬೇಕು.

ಎನ್ನ ಕರ್ಮವ ಕಳೆದು ಹೃದಯದ ।
ರನ್ನ ಕುಸುಮವನರಳಿಸೆನ್ನುತ ।
ಇನ್ನು ಕುಸುಮವ ನಿನಗೆ ಧರಿಸುವೆ ಎನ್ನ ಲಿಂಗಯ್ಯ ॥
ಎನ್ನ ಹೃದಯದಿ ದಿವ್ಯ ಭಕ್ತಿಯ ।
ಉನ್ನತದ ಪದವನ್ನು ಈಯುತ ।
ಚನ್ನಿಗನೆ ಇರಿಸುವದು ಲಿಂಗಾನಂದ ದೊಳಗೆನ್ನ

(೨೫) ಅಕ್ಷತಾರೋಪಣಃ— ನನ್ನನ್ನು ಅಕ್ಷಯ ಪದವಿಗೆ ಏರಿಸೆಂದು ಲಿಂಗಕ್ಕೆ ಅಕ್ಷತಾರೋಪಣವ ಮಾಡುವೆನೆಂಬ ಭಾವದಿಂದ ಕೆಳಗಿನ ಮಂತ್ರವನ್ನು ಹೇಳಬೇಕು.

ಎನ್ನ ದುರ್ಗಣ ನಾಶ ಮಾಡುತ
ಉನ್ನತದ ಪದವಿಯನು ಈಯುತ
ಎನ್ನನಕ್ಷಯ ಪದವಿಗೇರಿಸು ಎನುತ ಮುದದಿಂದ
ಇನ್ನು ಅಕ್ಷತೆ ನಿನಗೆ ಏರಿಸಿ
ನನ್ನಿಯಲಿ ಬೇಡುವೆನು ಲಿಂಗವೆ
ಚನ್ನಬಸವಗೆ ಬಸವ ಅಲ್ಲಮರಿಂಗೆ ಕೊಟ್ಟಂತೆ

(೨೬) ಧೂಪ ಸಮರ್ಪಿಸುವದು:— ಧೂಪವು, ಒಡಲಿನ ದುರ್ಭಾವಗಳೆಲ್ಲ ಅಗ್ನಿಯಲ್ಲಿ ಸುಟ್ಟುಹೋದ ಮೇಲೆ ಉಳಿಯುವ ಸದ್ಭಾವನೆಗಳ ಸುಗಂಧವು ಸುತ್ತಲೆ ಹರಡುವದು ಎಂಬದನ್ನು ಸೂಚಿಸುವ ಕೆಳಗಿನ ಪದ್ಯವನ್ನು ಹೇಳುತ ಧೂಪವನ್ನು ಹಾಕಬೇಕು.

ಎನ್ನ ದುರ್ಭಾವಗಳ ನೆಲ್ಲವ
ನಿನ್ನು ಓಡಿಸಿ ಒಳ್ಳೆ ಭಾವಗ-
ಳನ್ನು ಎನ್ನಲಿ ತುಂಬು ಎನ್ನುತ ಧೂಪ ಹಾಕಿರುವೆನು

(೨೭) ಘಂಟಾನಾದ:— ಇದು ಜಯ ಜಯನಿನಾದವನ್ನು ವೊಳಗಿಸುವದು ಏನೂ ಇಲ್ಲೆಂದು ಸೂಚಿಸುವದು. ಸಕಲ ಶರೀರ ಗುಣಗಳೆಲ್ಲ ಅಳಿದು ಲಿಂಗಗುಣಗಳೇ ಬಂದ ಸರ್ವಾಂಗಲಿಂಗಿಯಾಗಿ ಜಯ ಲಭಿಸಿತೆಂದು ಇದು ಸೂಚಿಸುವದು. ಘಂಟೆಯನ್ನು ಬಾರಿಸುತ್ತ ಕೆಳಗಿನ ಪದ್ಯವನ್ನು ಹೇಳಬೇಕು.

ಅಂಗಗುಣಗಳು ಎಲ್ಲ ಹೋಗಲಿ ।
ಲಿಂಗ ಗುಣಗಳು ಬರಲಿ ಅಂಗದಿ ।
ಭಂಗ ಬಡಿಸದೆ ಎನುತ ಘಂಟಾನಾದ ಮಾಡುವೆನು ।
ಲಿಂಗವಾದರು ಬಸವ ಅಲ್ಲಮು ।
ಸಂಗ ಅಳಿಯುತ ಅಂಗ ಗುಣಗಳ ।
ಲಿಂಗವೆನ್ನಿಸು ಇದರ ತರದಲಿ ನೀನು ಎನ್ನನ್ನು ॥

(೨೮) ದೀಪ ಸಮರ್ಪಣೆ— ಎನ್ನ ಹೃದಯದ ಕತ್ತಲೆಯ ಕಳೆದು ಸಚ್ಚಿದಾನಂದಮಯ ಪ್ರಕಾಶವನ್ನು ಕೊಡು ಎಂಬ ಗುರ್ತಿಗಾಗಿ ದೀಪವನ್ನು ಸಮರ್ಪಿಸುವದು.

ಕವಿದ ಕತ್ತಲೆ ಕಳೆದು ಹೃದಯದಿ
ಭವದ ಬಾಧೆಯ ಕೆಡಿಸಿ ಸುಖದಾ
ಭವನದಲ್ಲಿಯೆ ಇರಿಸಲೋಸುಗ ನಿನಗೆ ದೀಪವನು ।
ಜವದಿ ಸಲಿಸುತ ನಾನು ಬೇಡುವೆ
ಬುವಿಯ ಶರಣರ ತರದಿ ಎನ್ನನು
ಜಯತು ಜಯವೆನುವಂತೆ ಲಿಂಗವೆ ಎನಗೆ ಹರಿಸುವದು ॥

(೨೯) ನೈವೇದ್ಯ:— ಲಿಂಗದ ನೆನಹಿನಿಂದ ತನ್ನ ಮನೆಯಲ್ಲಿಯ ಪದಾರ್ಥಗಳನ್ನು ಲಿಂಗಕ್ಕೆ ಪ್ರಸಾದವಾಗಿ ನೈವೇದ್ಯ ಮಾಡಬೇಕು. ಅಂದರೆ ತನ್ನಲ್ಲಿಯ ಎಲ್ಲವುಗಳನ್ನು ಲಿಂಗದ ಮುಂದೆ ನಿವೇದಿಸಬೇಕು. ಅಂದರೆ ಸರ್ವಸಮರ್ಪಣೆ ಅಥವಾ ಆತ್ಮ ನಿವೇದನೆಯೇ ನಿಜವಾದ ನೈವೇದ್ಯವೆನಿಸು ವದು. ಇದರ ಗುರ್ತಿಗಾಗಿ ನೈವೇದ್ಯವು ಏರ್ಪಟ್ಟಿದೆ.

ಎನ್ನ ಗುಣಗಳನೆಲ್ಲ ನಿನ್ನಲಿ
ಇನ್ನು ಬಿಡದಲೆ ನಿವೇದಿಸುವೆ ನಾ ।
ನೆನ್ನುತಲಿ ನೈವೇದ್ಯ ಮಾಡುವೆ ತಿನಸು ತಿಂಡಿಗಳ ॥

(೩೦) ಅಗ್ಗವಣಿ:— ಆತ್ಮನಿವೇದನದಿಂದ ಪರಮಾನಂದ ವಾಗು ವದು. ಅದನ್ನು ಹೊಂದಿದ ಗುರುತಿಗಾಗಿ ನೀರನ್ನು ಲಿಂಗಕ್ಕೆ ನೀಡುವದು.

ಮನದ ಚಂಚಲ ತನವು ಎಲ್ಲವು
ಬಿನದದಿಂದಲಿ ಹೋಗಲೆನ್ನುತ
ನಿನಗೆ ನೀರನು ನೀಡುವೆನು ನಾ ಲಿಂಗದೇವಯ್ಯ

(೩೧) ನಿರಾಜನ:— ಶರೀರದ ತಾಮಸವೆಲ್ಲ ಹೋಗಿ ಭಕ್ತಿಯ ಬೆಳಕು ಒಡಮೂಡಲೆಂಬ ಗುರುತಿಗಾಗಿ ನಿರಾಜನವನ್ನು ಬೆಳಗಬೇಕು.

ಎನ್ನ ತನುವಿನ ತಾಮಸೆಲ್ಲವು
ಇನ್ನು ಬಿಡದಲೆ ಹೋಗಲೆನ್ನುತ
ಸನ್ನುತ ನಿರಾಜನವ ನೆತ್ತುವೆ ನಿನಗೆ ಲಿಂಗೇಶ

(೩೨) ಆರತಿ:— ಲಿಂಗಪೂಜೆಯಲ್ಲಿ ಹೆಚ್ಚಾದ ಪ್ರೇಮವು ವ್ಯಕ್ತ ವಾಗುವದರ ಗುರುತಿಗಾಗಿ ಆರತಿಯನ್ನು ಮಾಡಬೇಕು.

ಜಯವೆಂದು ಬೆಳಗುವೆ ಇಷ್ಟಲಿಂಗನಿಗೆ । ಪ್ರಾಣಲಿಂಗನಿಗೆ ।
ಭಾವಲಿಂಗನಿಗೆ ಶೂನ್ಯ ಲಿಂಗನಿಗೆ ॥ಪಲ್ಲ॥
ಆಕಾರ ತಾಳುತ ಇಷ್ಟಲಿಂಗಾದಿ ।
ಪ್ರಾಣ ಭಾವ ಲಿಂಗ ನೀನೆ ಎನಿಸಿದೆಯೊ ।
ತನುವಿಗೆ ಇಷ್ಟವು ಮನಸಿಗೆ ಪ್ರಾಣವು ।
ಆತ್ಮಕೆ ಭಾವಲಿಂಗವೆ ನೀನೆ ಆದೀ ॥೧॥

ನಿನ್ನಯ ಮಹಿಮೆಯ ಬಣ್ಣಿಸಲಳವೆ ।
ಜಗವೆಲ್ಲ ತುಂಬಿದಿ ಜಗಭರಿತನಾಗಿ ।
ಬುವಿಯೆಲ್ಲ ನಿನ್ನಲ್ಲಿ ಅಡಗಿಕೊಂಡಿಹುದು ।
ಆದಿ ಅಂತ್ಯಗಳೆಲ್ಲ ಇಲ್ಲದಂಥವನು ॥೨॥

ಶಿವಶಕ್ತಿ ಎನಿಸುವ ಲಿಂಗ ನೀನಾದೆ ।
ಸಚ್ಚಿದಾನಂದದ ರೂಪದಿ ಬಂದೆ ।
ಉರುತರ ಭಕ್ತರಿಗೆ ಹರಿಸುತ ಬಂದು ।
ಪರತರ ಮೋಕ್ಷವ ಕೊಟ್ಟು ಸಲುಹಿದಿಯೆ ॥೩॥

ತಾಂಬೂಲವನ್ನು ಬೇಕಂತಲೇ ಅರ್ಪಣ ಮಾಡಿಲ್ಲ. ತಾಂಬೂಲದ ಚಟವು ದೇವರಿಗೆ ಹತ್ತಿದರೆ ಭಕ್ತರೂ ಕೂಡ ತಾಂಬೂಲ ಚಟಕ್ಕೆ ಹತ್ತ ಬಹುದೆಂದು ಹಾಗೆ ಮಾಡಲಾಗಿಲ್ಲ. ಇದನ್ನು ಅರ್ಪಿಸಿದರೆ ಈಗಿನ ಹೊಸ ಚಟಗಳಾದ ಬೀಡಿ ಸಿಗರೇಟಗಳನ್ನು ಸಹ ಊಟದ ತರುವಾಯ ಅರ್ಪಿಸ ಬೇಕಾದೀತು. ಇವುಗಳ ಅವಶ್ಯಕತೆ ಇಲ್ಲೆಂದು ತಿಳಿದು ಹಾಗೆ ಸುಧಾರಣೆ ಮಾಡಿಕೊಳ್ಳಲಾಗಿದೆ. ಇದರಿಂದ ಲಿಂಗಪೂಜೆಗೇನು ವ್ಯತ್ಯಾಸ ಬರುವದಿಲ್ಲ. ಪೂಜೆಯು ಕೆಡುವದಿಲ್ಲ. ನಾವು ಮೇಲೆ ಹೇಳಿದಂತೆ ಭಕ್ತಿಯೇ ಹೆಚ್ಚಿನದು. ಪರಮಾತ್ಮ ನೀನೆ ಪ್ರಿಯಕರ. ಅದನ್ನೇ ಲಿಂಗಪೂಜಕರು ಹೆಚ್ಚಾಗಿ ಸಾಧಿಸಲಿಕ್ಕೆ ಕಲಿತರೆ ಒಳ್ಳೇದು.

(೩೩) ಲಿಂಗದ ಮಹತಿಃ— ಅಂಗ ಸುಖಿಗೆ ಲಿಂಗಸುಖವಳವಡದು. ವಾಗದ್ವೈತ ಕ್ರಿಯಾದ್ವೈತ ಭಾವಾದ್ವೈತ ಇಂತೀ ತ್ರಿವಿಧದ್ವೈತ ಲಿಂಗ ಸುಖ ಸಾಹಿತ್ಯವಾದಲ್ಲಿ ನರಕವಿಲ್ಲ, ಕರ್ಮವಿಲ್ಲ, ಭಯವಿಲ್ಲ, ಭವವಿಲ್ಲ, ಫಲ ವಿಲ್ಲ, ಪದವಿಲ್ಲ, ಇಹವಿಲ್ಲ, ಪರವಿಲ್ಲ, ಸೌರಾಷ್ಟ್ರ ಸೋಮೇಶ್ವರ ನೀ ಸಾಕ್ಷಿಯಾಗಿ ಅಂಗ ಸುಖಿಗೆ ಲಿಂಗ ಸುಖ ದೊರಕೊಳ್ಳದು. ಲಿಂಗ ಸುಖದ ಮುಂದೆ ಅಂಗ ಸುಖ ಜೊಳ್ಳು.

ಅಂಗದ ಮೇಲೆ ಚಿಧ್ಘನ ಲಿಂಗವ ಧರಿಸಿದ್ದು ತನುಮನ ಭಾವದ ಅವ ಗುಣವು ಹಿಂಗದಿದ್ದರೆ ಆಲಿಂಗದಗೊಡವೆ ಏತಕಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ ? ಲಿಂಗಸಂಗವೆಂಬುದೇ ಸದಾಚಾರ. ಅಂಗಸಂಗವಾದುದೇ ಅನಾಚಾರ.

ಅಣುವಿಂಗೆ ಅಣು ಮಹತ್ತಿಗೆ ಮಹತ್ತು ಎನಿಸುವ ಲಿಂಗದೇವನ ಕಂಡೆನಯ್ಯ. ಎನ್ನ ಕರಸ್ಥಲದಲ್ಲಿ ಉಪಮಾತೀತ ವಾಙ್ಮನಕ್ಕಗೋಚರನೆನಿಸುವ ಲಿಂಗದೇವನ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ ಶ್ರುತಿತತಿ ಶಿರದ ಮೇಲೆ ದಶಾಂಗುಲನೆನಿಸುವ ಲಿಂಗದೇವನ ಕಂಡೆನಯ್ಯಾ ನಾನೆನ್ನ ಕರಸ್ಥಲದಲ್ಲಿ. ಭಾವ ಭರಿತ ಜ್ಞಾನಗಮ್ಯನೆನಿಸುವ ಲಿಂಗದೇವನ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ. ಅಖಂಡೇಶ್ವರನೆಂಬ ಅನಾದಿ ಪರಶಿವನ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ.

(೩೪) **ಪುಷ್ಪಾಂಜಲಿ:**— ತನು ಮನ ಧನ, ಜೀವ, ಭಾವನೆಂಬ ಕುಸುಮಗಳನ್ನು ಲಿಂಗನಿಗೆ ಸಂಪೂರ್ಣ ಅರ್ಪಣ ಮಾಡುವದರ ಸೂಚನೆಗಾಗಿ ಎಲ್ಲ ತರದ ಹೂವುಗಳನ್ನು ಪಾದಗಳಲ್ಲಿ ಅರ್ಪಿಸುವದು.

ಎನ್ನ ತನುಮನ ಜೀವ ಧನಗಳ
ಎನ್ನ ಭವಗಳನ್ನು ಪಾದಕೆ
ಇನ್ನು ಅರ್ಪಣ ಎನುತ ಪಾದದಿ ಪುಷ್ಪ ಇರಿಸುವೆನು

(೩೫) **ನಮಸ್ಕಾರ:**— ಅನನ್ಯ ಭಕ್ತಿ ಭಾವದಿಂದ ಲಿಂಗಕ್ಕೆ ಶರಣು ಹೋಗಿ ನಮಸ್ಕರಿಸುವದು.

ತನುವು ಪಾವನ ವಾಯುನಿನ್ನಿಂ
ಮನುನ ಶಾಂತಿಯು ಪೋದಿತಾಗಲಿ
ಧನವು ಸಾಧನ ವಾಯ್ತು ನಿನ್ನಯ ಪಾದ ಕಾಣುದಕೆ
ಜನನ ಮರಣದ ಭೀತಿ ಪೋದುದು
ದಿನ ದಿನದಿ ಬಿಡೆ ನಿನ್ನ ಪೂಜಿಸಿ
ಘನಲಿಂಗವೆ ! ನಿನಗೆ ಮಾಡುವೆ ಮುದದಿ ಶರಣಾರ್ಥಿ
ಅಂಗಲಿಂಗವ ವೇಧಿಸೆನ್ನುವೆ ।
ಅಂಗ ಲಿಂಗದೊಳಾಗ ಲೆನ್ನುವೆ ।
ಮನದ ಲಿಂಗವ ವೇದಿಸಿ ಮನವು ಲಿಂಗವಾಗಲೆನ್ನುವೆ ॥
ಭಾವ ಲಿಂಗವ ವೇಧಿಸೆನ್ನುವೆ ॥
ಭಾವ ಲಿಂಗದೊಳಾಗಲೆನ್ನುವೆ ।
ದೇವ ಲಿಂಗವೆ! ಕರುಣಿಸೆನ್ನುತ ಮಾಳ್ಪೆ ಶರಣಾರ್ಥಿ ॥

(೩೬) ಲಿಂಗಕ್ಕೆ ಬೇಡಿಕೊಂಬುವದು:— ಅತ್ತಿತ್ತ ಹೋಗದಂತೆ ಹೆಳವನ ಮಾಡಯ್ಯ ಲಿಂಗತಂದೆ, ಸುತ್ತಿಸುಳಿದು ನೋಡದಂತೆ ಅಂಧಕನ ಮಾಡಯ್ಯ ಲಿಂಗತಂದೆ, ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ. ಮತ್ತೊಂದ ಮಾತಾಡದಂತೆ ಮೂಕನ ಮಾಡಯ್ಯ ತಂದೆ ಮತ್ತೊಂದ ಮುಟ್ಟದಂತೆ ಮಲ್ಲನ ಮಾಡಯ್ಯ ತಂದೆ. ನಿಮ್ಮ ಪಾದವಲ್ಲದೆ ಅನ್ಯಕ್ಕೆಳಿಸ ದಂತೆ ಮಾಡಯ್ಯ ಕೂಡಲಸಂಗಮದೇವ.

ಎನ್ನ ವಚನದಲ್ಲಿ ನಿಮ್ಮ ನಾಮಾಮೃತ ತುಂಬಲಿ, ಎನ್ನ ನಯನದಲ್ಲಿ ನಿಮ್ಮ ಮೂರುತಿ ತುಂಬಲಿ, ಎನ್ನ ಮನದಲ್ಲಿ ನಿಮ್ಮ ನೆನಹು ತುಂಬಲಿ, ಎನ್ನ ಕಿವಿಯಲಿ ನಿಮ್ಮ ಕೀರುತಿ ತುಂಬಲಿ, ಎನ್ನ ಜೀವದಲಿ ನಿಮ್ಮ ಅರುಹು ತುಂಬಲಿ, ಎನ್ನ ಭಾವದಲಿ ನೀವೇ ತುಂಬಲಿ, ಎನ್ನ ಒಳಹೊರಗು ನೀವೇ ತುಂಬಲಿ, ಎನ್ನ ರೋಮ ನರನಾಡಿಗಳಲ್ಲಿ ನೀವೇ ತುಂಬಲಿ; ಕೂಡಲ ಸಂಗಮದೇವ ನಿಮ್ಮ ಚರಣಕಮಲದೊಳಗಾನು ತುಂಬಿಯಾಗಲಿ.

(೩೭) ಲಿಂಗಸ್ತವನ:—

ಉಂಡತರದಲಿ ಪೂಜೆ ಎನಿಸಿತು.
ಕಂಡತರದಲಿ ಆಯ್ತು ಮುಕ್ತಿಯು
ಖಂಡ ಸುಖವನು ಬರಿಸಹತ್ತಿದಿ ಎನಗೆ ಲಿಂಗೇಶ
ಕೊಂಡತೆರದಲಿ ಮನಕೆ ಶಾಂತಿಯು
ಭಂಡವಾದವು ಆಶೆಮಾಯಯು
ಖಂಡಲಿಂಗವೆ ಎನ್ನ ಕೃಪೆಯನು ಎನಿತು ಬಣ್ಣಿಸಲ ‖
ನಿನ್ನನಪ್ಪುತ ಮುದ್ದಿಸುತ ನಾ ।
ನನ್ನಿಯಲಿ ಹೊಗಳುತ್ತ ಬಿಡದಲೆ ।
ಚನ್ನಿಗನೆ ರಮಿ ಸುತ್ತಲಿ ಬೇಡುವೆ ಇಷ್ಟಲಿಂಗನಿಗೆ‖
ತನ್ನ ತನುವನು ಮರೆತು ಮುದವನು ।
ಎನ್ನ ಕರದಲಿ ಬಂದು ತೋರಿದಿ ।
ಇನ್ನು ಆಗಲದೆ ಇರುವೆ ನಿನ್ನನು ನಿತ್ಯ ಲಿಂಗೇಶ ‖

(೩೮) ಹರನಾಮ ಸ್ತೋತ್ರ:—

ಹರನಾಮವನು ಬಿಡದೆ ಜಪಿಸಬಲ್ಲವರ ಭವ । ಮರಣ ಮಾಯಾ ಕರ್ಮಮಲ ಪಾಶಬಂಧಬಹು । ದುರಿತ ಸಂಸಾರ ಸಂತಾಪ ಸಂಚಯವದು

ವರಭೋಗ ಮೋಕ್ಷವಹುದು ||ಪ|| ಶಿವಮಹಾದೇವ ಶಂಕರ ಶರ್ವ ಪಾರ್ವತೀ| ಧವ ನಂದಿವಾಹನ ದೇವೇಶಾನದಕ್ಷವೆ | ನವನ ತಪದಾಂಬೋಜ ನಗಚಾಪ ನಿರ್ಮಲನಿರಾತಂಕ ನೀಲಕಂಠ || ಭುವನೇಶ ವಿಜಯ ವೇದಾಂಗ ವೈಶ್ರವಣ ಸಖ | ಪವಮಾನ ಪಂಚಮುಖ ಪಶುಪತಿ ಸಹಸ್ರಾಕ್ಷ | ಭವಭರ್ಗ ಭಸಿತಾಂಗ ಭಾಳಲೋಚನ ಮೇರು ಕಾರಣ ಕಪರ್ದಿಯೆಂದು ||೧|| ಸೋಮ ಶಾಂತಾಭವ ವಿರುಪಾಕ್ಷ ವಿಶ್ವಾಧಿ | ರಾಮ ಗಂಭೀರ ಕಾಲಾರಿ ಕೂಟಸ್ಥವಿಭು | ವಾಮದೇವಾಘೋರ ಪಂಚಾಕ್ಷರೋಂಕಾರ ತತ್ಪುರುಷ ರುದ್ರ ಭದ್ರ || ಭೀಮಸದ್ಯೋಜಾತ ಮೃಡ ಮಹಾಕಾಲಜಿತ | ಕಾಮ ಮೃತ್ಯುಂಜಯ ಪುರಾತನ ಪರಾತ್ಪರ ನಿರಾಮಯಾನಂತ ತೇಜೋರಾಶಿ ಸರ್ವಜ್ಞ ಶಾಶ್ವತ ಕಪಾಲಿಯೆಂದು ||೨|| ಶೂಲಿ ಸುಜನೈಕ ಬಾಂಧವ ಸದಾಶಿವ ಚಂದ್ರಮೌಳಿ ಮಹಿಮೋಗ್ರ ಚರ್ಮಾಂಬರಾಸುರಶಿರೋ | ಮಾಲಿನಿ ಮಂದಾಕಿನೀಧರ ಮಹೇಶ ಮೇಘವಾಹನ ಮಂದರನಿವಾಸ || ನೀಲಲೋಹಿತ ಪಾರಿಜಾತ ಪಾವನಲೋಕ | ಪಾಲಕೈಲಾಸ ಮಂದಿರ ಮಂತ್ರಮಯಭಕ್ತ | ಲೋಲ ಪಂಚಬ್ರಹ್ಮಪರನಾದ ಬಿಂದುಕಳೆ ಪರಮಾತ್ಮ ಪುರವೈರಿಯೆಂದು ||೩|| ವರದವಾಗೀಶ ವರ್ಣಾತೀತ ವಂದ್ಯಜಯ | ಪರಮಪರತರ ಪರಂಜ್ಯೋತಿ ಪರಮಾನಂದ | ನಿರಘನಿರುಪಮ ನಿರಾವರಣ ನಿರ್ಲೇಪ ನಿರವಯವ ನಿತ್ಯತೃಪ್ತ || ಉರಗಕಂಕಣ ವಿಶ್ವತೋ ಬಾಹುವಿಶ್ವಾತ್ಮ ಸುರಗಣಾರ್ಜಿತ ಸನಾತನ ಸದಾಗತಿ ಹಂಸ | ಗಿರೀಶ ಗಾಂಗೇಯಪಿತ ಗಣನಾಥ ಜಗದೀಶ ವಿಷಧರ ಪಿನಾಕಿಯೆಂದು ||೪|| ಉದಯಾಸ್ತಮಾನದೊಳು ನೂರೆಂಟು ನಾಮವನು ಪದುಳದಿಂದೋದಿ ಕೇಳಿದವರ್ಗೆ ಶಂಭುಲಿಂ | ಗದ ಕರುಣದಿಂದಿನಿತು ಕೊರತೆಯಿಲ್ಲದೆ ಸಕಲ ಸಂಪದಗಳೊಂದುಗೂಡಿ | ಸದಮಳ ಜ್ಞಾನ ಸದ್ಭಕ್ತಿಗಳು ಮೇಲೆ ಮೇಲೊದಗಿ ಕೈಸಾರುತಿಹವಿಹದಲ್ಲಿ ಪರದೊಳಂ | ದಿದ ಗಣಪದವನೈದಿ ನಿಜಸುಖದೊಳಿಹ ಮುಕುತಿದೊರೆವುದಿದು ಸತ್ಯವೆಂದು ||೫||

## (೩೪) ಪಾರ್ವತೀಸ್ತೋತ್ರ

ಪರಮೇಶ್ವರಿಯ ಪುಣ್ಯ ನಾಮವನು ಪಗಲಿರಳು | ಸರಸಾನುರಾಗದಿಂದೋದಿ ಕೇಳಿದವರ್ಗೆ | ದುರಿತಕಂಟಕವಳಿದು ಕೈಸಾರುತಿಹವನುಳತರ ಭೋಗ ಮೋಕ್ಷಂಗಳು ||ಪಲ್ಲ||

ಹ್ರೀಂಕಾರಿ ವಾಣಿಕಲ್ಯಾಣಿ ರುದ್ರಾಣಿರಮೆ । ಓಂಕಾರರೂಪಿಣಿ ಗಣೌನಿ ಗಾನ ಪ್ರೀತೆ । ಐಂಕಿಲಾಮಾನಿನಿ ಮಹಾಮಾಯೆ ಮಾತಂಗಿ ಕ್ಲೀಂಕಲೇ ವರವರೇಣ್ಯೆ ಸೌಂಕಾರಸದನೆ ಶರ್ವಾಣಿ ಶಾರದೆ ಸತ್ಯ । ಕ್ರೋಂಕ ಕವಚ ಮುಖ್ಯ ಮಂತ್ರಾದಿ ದೇವತೆ ದೇವಿ । ಶ್ರೀಂಕಿಲಾಕಾರಿ ಮಾನ್ಯೆ ಶಂಕರೀ ಶಾನಿ ಯೆಂದು ॥೧॥ ಗಿರಿಜಾ ಗೀರ್ವಾಣಿ ಪೂಜಿತೆ ಗೌರೀಗುಹ ಜನನಿ । ಪರನಾದ ಬಿಂದು ಮಂದಿರೆ ಮನೋಂಬುಜ ಹಂಸೆ ವರದೆ ವೈಭವೆ ನಿತ್ಯಮುಕ್ತೆ ನಿರ್ಮಲೆ ನಿರಾವರಣೆ ಶಿವೆ ಶಾಂತಿ ಕಾಂತೆ ಧರಣಿ ಧರ್ಮಾನುಗತೆ ಸಾವಿತ್ರಿ ಗಾಯತ್ರಿ । ವಿರಜೆ ವಿಶ್ವಾತ್ಮಕೆ ವಿಧೂತೆ ಪಾಪ ವ್ರಾತೆ ಶರಣಹಿತೆ ಸರ್ವ ಮಂಗಳೆ ಸಚ್ಚಿದಾನಂದೆ ಪರಶುದಾಕಾರಿ ಯೆಂದು ॥೨॥ ಚಂಡಿ ಚಂಡೀಶ್ವರೀ ಚತುರೆ ಕಾಳಿಕೌಮಾರಿ ಕುಂಡಲೆ ಕುಟಲೆ ಬಾಲೆ ಭೈರವಿ ಭವಾನಿ । ಚಾಮುಂಡಿ ಮೂಲಾಧಾರೆ ಮನುವಂದೆ ಮುನಿ ಪೂಜ್ಯೆ ಪಿಂಡಾಂಡಮಯೆ ಚಂಡಿಕೆ ಮಲತ್ರಯ ನಿಲಯೆ ದಂಡಿ ಜಯ ದುರ್ಗೆ ಫಣಿ ಕುಂಡಲೆ ಮಹೇಶ್ವರಿ ಮನೋನ್ಮನಿ ಜಗನ್ಮಾತೆ । ಖಂಡ ಶಶಿ ಮಂಡನೆ ಮೃಡಾನಿ ಪಾರ್ವತಿ ಪರಮ ಚಂಡಕರ ಮೂರ್ತಿಯೆಂದು ॥೩॥ ವಿಮಲೆ ವಿಖ್ಯಾತೆ ಮಧುಮತಿ ಮುಖ್ಯ ಮಹನೀಯೆ । ಸುಮತಿ ಸುಲಲಿತೆ ಹೈಮವತೆ ಭಾವೆ ಭೋಗಾರ್ಥ । ಕಮಲೆ ಕಾತ್ಯಾಯಿನಿ ಕರಾಳೆ ತ್ರಿಪುರ ವಿಜಯೆ ದಮೆ ದಯಾರಸ ಪೂರಿತೆ । ಅಮೃತೆ ಅಂಬಿಕೆ ಅನ್ನಪೂರ್ಣೆ ಅಶ್ವಾರೂಢೆ । ಶಮೆ ಶುದ್ಧ ಸಿಂಹವಾಹಿನೀ ಶುಭಕಲಾಪೆ ಸು । ಪ್ರಮುದೆ ಪಾವನ ಪದ್ಮೆ ಪಾಶದೆ ಪರಬ್ರಹ್ಮೆ ಉಮೆ ಸಹಜ ಸುಮುಖಿಯೆಂದು ॥೪॥ ಇಂತು ಗುರು ಶಂಭುಲಿಂಗದ ಶಕ್ತಿ ಸೌಭಾಗ್ಯ ಸಂತತ ಶರೀರ ಸೌಮ್ಯಜ್ಞಾನ ಸತ್ ಕ್ರಿಯಾಪಮಂತು ಕರುಣಾಸನಾಭರಣಾಯುಧಾದಿ ಸುಗುಣಾಂತರಾ । ದಿಗಳಾಗುತ । ಸಂತಸವನೀವ ಶಾಂಭವಿಯ ನೂರೆಂಟು ಶುಭ । ವಂತನಾ ಮಂಗಳನು ಭಜಿಸಿದೊಡೆ ಸತಿ ಪುತ್ರ । ಸಂತಾನ ಸಕಲ ಸಂಪದ ಸಿದ್ಧಿಯಪ್ಪುದೋರಂತೆ ನಿಶ್ಚಯಮಿದೆಂದು.

(೩೯) ಜಪ:— ರುದ್ರಾಕ್ಷಿಮಾಲೆಯನ್ನು ಬಲಗೈಯ್ಯಲ್ಲಿ ಹಿಡಿದು ತೋರ ಬೆರಳು ಬಿಟ್ಟು ಹೆಬ್ಬೆರಳು ನಡುವಿನ ಬೆರಳಿನಿಂದ ಉಂಗುರ ಬೆರಳಿನ ಮೇಲೆ ಇಟ್ಟು ಜಗ್ಗಿ ಷಡಕ್ಷರಿ ಮಂತ್ರವನ್ನು ಕೆಲವು ಸಲ ಜಪಿಸಬೇಕು.

(೪೧) ಮುದ್ರಾ:— ಮೇಲೆ ಹೇಳಿದ ಪ್ರಕಾರ ಪೂಜಿಸುತ್ತ ಯಾವಾಗಲೂ ಶಕ್ಯವಿದ್ದಷ್ಟು ಲಿಂಗವನ್ನು ಎವೆಬಡಿಯದೆ ಕಣ್ಣು ದೆರೆದು ನೋಡು

ತ್ತ್ರೀ ಇರಬೇಕು. ಇದರಿಂದ ಪ್ರಾಣಾಯಾಮದಿಂದ ಯಾವ ಫಲ ದೊರೆಯುವದೋ ಅದಕ್ಕೂ ಸುಲಭವಾದ ರೀತಿಯಲ್ಲಿ ಅದಕ್ಕೂ ಹೆಚ್ಚಿಗೆ ಫಲ ದೊರೆಯುವದು. ಇದರಿಂದ ಮನಸ್ಸು ಹರಿದಾಡದೆ ನಿಲ್ಲುವದು. ಮನಸ್ಸಿನ ಸಂಕಲ್ಪ ವಿಕಲ್ಪಗಳು ಹೋಗಿ ಮನಸ್ಸು ಒಳ್ಳೇ ಶಾಂತ ಸ್ತಬ್ಧವಾಗುವದು. ಪ್ರಾಣಾಯಾಮದಿಂದ, ವಾಯುತತ್ವದಿಂದ ಜನಿಸಿದ ಮನವು ಹಿಡಿತದಲ್ಲಿ ಬರುವದು. ಯಾಕಂದರೆ ಉಸಿರನ್ನು ಕಟ್ಟಿ ಅದನ್ನು ನಿಯಂತ್ರಣಗೊಳಿಸಬೇಕಾಗುವದು. ಇದು ಬಹು ತ್ರಾಸದಾಯಕ. ರಾಜಯೋಗದಲ್ಲಿ ಒಳ್ಳೇ ನುರಿತ ಗುರುಗಳ ಹತ್ತರ ಇದ್ದೇ ಇದನ್ನು ಕಲಿಯಬೇಕು. ಎಲ್ಲಿಯಾದರೂ ನರಗಳಲ್ಲಿ ಉಸಿರು ಸಿಕ್ಕರೆ ತೀರೇ ಹೋಯಿತು. ಹುಚ್ಚು ಹಿಡಿಯುವದು. ಇಲ್ಲವೆ ಮರಣವೇ ಬರುವದು. ಆದರೆ ಲಿಂಗದ ಮೇಲೆ ಮುದ್ರಾ ಮಾಡುವದರಿಂದ ಇಂಥ ಯಾವ ಅಪಾಯಗಳು ಸಂಭವಿಸುವದಿಲ್ಲ. ವಾಯುತತ ದಿಂದ ಮನ ಹುಟ್ಟಿತು. ಮನಸ್ಸಿನ ಚಂಚಲತನಕ್ಕೆ ಕಣ್ಣು ನೆರವಾಗುವದು. ಕಣ್ಣಾಲಿ ಕರೇದಿರುವದು. ಈ ಕಣ್ಣಾಲಿಯು ಹೊಳಚದೆ ನಿಶ್ಚಲವಾಗಿ ನಿಲ್ಲಲು ಕರೇ ಬಣ್ಣದ ಇಷ್ಟಲಿಂಗವನ್ನು ಕೆಲಹೊತ್ತು ನೋಡುತ್ತ ಕುಳ್ಳಿರಬೇಕು. ಮುಂದೆ ಕೆಲವು ದಿವಸದ ಮೇಲೆ ದೃಷ್ಟಿ ಸ್ಥಿರವಾಗಿ ನಿಲ್ಲುವದು. ಆಗ ಅನೇಕ ಪ್ರಕಾಶಗಳು ನಕ್ಷತ್ರ ಚಕ್ರ ಬಣ್ಣಗಳು ಕಾಣಿಸುವವು. ಆಗ ಪ್ರಾಣ ಲಿಂಗವು ಜಾಗ್ರತವಾಯಿತೆಂದು ತಿಳಿಯಬೇಕು. ಮನಸ್ಸಿನ ಶುದ್ಧಿಗೆ ಈ ತೆರದ ಮುದ್ರೆಯು ಒಳ್ಳೇ ಸಹಾಯಕವಾಗುವದು. ಕಾರಣ ನಿತ್ಯ ಪೂಜೆಯ ಕಾಲದಲ್ಲಿ ಈ ತರದ ಮುದ್ರೆಯನ್ನು ಮಾಡುತ್ತಿರಬೇಕು. ಇದೇ ಮುಖ್ಯ ವಾದ ಲಿಂಗಪೂಜೆಯ ಉದ್ದೇಶವಾಗಿರುವದು. ಮೇಲೆ ಮಾಡುವ ಪೂಜೆ ಭಕ್ತಿ ಜ್ಞಾನಗಳದ್ದಾದರೆ ಈ ಮುದ್ರೆಯು ರಾಜಯೋಗದ್ದಾಗಿದೆ. ಇದರಿಂದಲೇ ಲಿಂಗಪೂಜೆಯ ಫಲವು ತೀವ್ರ ಲಭಿಸುವದು. ಅಲ್ಲದೆ ಭಕ್ತಿಯು ಇದರಿಂದ ಸ್ವಾಭಾವಿಕ ಬೆಳೆಯುವದು. ಅದಕ್ಕೆ ಪೂಜೆಯ ಕಾಲದಲ್ಲಿ ನಿತ್ಯ ಈ ಮುದ್ರೆಯನ್ನು ಮಾಡಬೇಕು. ಮೆಸ್ಮರಿಜಂ, ಹಿಪ್ನಾಟಿಜಂ ಗಳು ಈ ತೆರದ ಮುದ್ರೆಯಿಂದಲೇ ಬರುವವು. ಅದಕ್ಕೆ ಈ ಲಿಂಗಮುದ್ರೆಯು ಒಳ್ಳೇ ಮಹತ್ವದ್ದಾಗಿದೆ. ವೀರಶೈವ ಹಿರಿಯರು ಈ ಲಿಂಗತತ್ವವನ್ನೂ ಮುದ್ರೆಯನ್ನೂ ಬಹು ವಿಚಾರಿಸಿ ಕಂಡು ಹಿಡಿದು ಉಳಿದ ಯಾವತ್ತೂ ಧರ್ಮಗುರುಗಳಿಗಿಂತ ಮುಂದೆ ಹೋಗಿದ್ದಾರೆ. ಅಲ್ಲದೆ ಲಿಂಗಾಂಗ ಸಮರಸವನ್ನು ಒಳ್ಳೇ ಸರಳ ಮಾರ್ಗ

ದಿಂದ ಸುಲಭ ರೀತಿಯಿಂದ ಹೊಂದುವಂತೆ ಮಾಡಿ ನಮ್ಮ ಮೇಲೆ ಮಹದು ಪಕಾರ ಮಾಡಿದ್ದಾರೆ. ಇದರಲ್ಲಿಯೇ ನಮ್ಮ ಹಿರಿಯರ ಚಾತುರ್ಯ ವ್ಯಕ್ತ ವಾಗುವದು. ಇದರಂತೆ ವಿಚಾರಿಸಿದರೆ ಇವರು ಕಂಡು ಹಿಡಿದ ಧರ್ಮತತ್ವ ಗಳೂ ಸಿದ್ಧಾಂತಗಳೊ ಉಳಿದವರಿಗಿಂತ ಸುಲಭ ಸರಳ ಯೋಗ್ಯ ಶ್ರೇಷ್ಠ ವೆಂದು ಹೇಳಲಿಕ್ಕೆ ಯಾವ ಅಂಜಿಕೆ ಇಲ್ಲ. ಇರಲಿ ಮುಂದೆ ಇದರ ಬಗ್ಗೆ ಪ್ರತ್ಯೇಕ ಬರೆಯಲಾಗುವದು. ಈಗ ಮಾತ್ರ ನಿತ್ಯ ಪೂಜೆಯ ಸಮಯದಲ್ಲಿ ಈ ತೆರದ ಲಿಂಗಮುದ್ರೆಯನ್ನು ಮಾಡಬೇಕೆಂದು ಸೂಚಿಸದೆ ಇರಲಾರೆವು. ಮನಸ್ಸು ನಿಂತರೆ ಕುಂಡಲಿನಿ ಜಾಗ್ರತವಾಗುವದು. ಪ್ರಾಣಲಿಂಗ ಕಾಣು ವದು. ಅನೇಕ ತರದ ಪ್ರಕಾಶ ನಕ್ಷತ್ರ ಚಕ್ರಗಳು ಕಾಣುವವು. ಭಾವ ಲಿಂಗ ತನ್ನಷ್ಟಕ್ಕೆ ತಾನೆ ಪ್ರಕಟವಾಗಿ ಭಾವಗಳೆಲ್ಲ ಬಯಲಾಗಿ ಎಲ್ಲ ಕಡೆಗೂ ಪರಮಾತ್ಮನ ಪ್ರಜ್ಞೆ ಸಹಜ ಬರುವದು. ಈ ಪ್ರಕಾರ ಈ ಇಷ್ಟಲಿಂಗ ಪೂಜೆ ಯಿಂದ ಮುದ್ರೆಯಿಂದ ಪ್ರಾಣಲಿಂಗ ಭಾವಲಿಂಗಗಳ ಪ್ರಜ್ಞೆ ಸಹಜ ಬರು ವದು. ಅದಕ್ಕೆ ಎಲ್ಲ ಮಾನವಕೋಟಿಯೇ ಈ ಇಷ್ಟಲಿಂಗವನ್ನು ಧರಿಸಿ ಮೇಲೆ ಹೇಳಿದ ಪ್ರಕಾರ ಭಕ್ತಿಯಿಂದ ಪೂಜಿಸಿ ಮುಕ್ತರಾಗಬೇಕು.

ಈ ಮುದ್ರೆಯನ್ನು ಮಾಡುವಾಗ ಲಿಂಗವನ್ನು ಪತ್ರಿ ಪುಷ್ಪಗಳಿಂದ ರುದ್ರಾಕ್ಷಿಗಳಿಂದ ಮುಚ್ಚಬಾರದು. ಸಂಪೂರ್ಣ ಲಿಂಗ ದೃಷ್ಟಿಗಳಿಗೆ ಕಾಣ ಬೇಕು. ಅವುಗಳನ್ನು ಏರಿಸಿದ ಮೇಲೆ ಹಿಂದಕ್ಕೆ ಸರಿಸಿ ಬರೇ ಲಿಂಗವೇ ಕಾಣುವಂತೆ ಆಗಬೇಕು. ಅಂದರೆ ಮುದ್ರಾ ಮಾಡಲಿಕ್ಕೆ ಅನುಕೂಲವಾಗು ವದು. ಕೆಲವರು ಲಿಂಗಪೂಜೆಯ ಕಾಲಕ್ಕೆ ಕಣ್ಣು ಮುಚ್ಚಿ ಮುಸುಕು ಹಾಕಿ ಜಪವನ್ನು ಮಾಡುವರು. ಇದೂ ಸರಿಯಲ್ಲ. ನಿಚ್ಚಳವಾಗಿ ಲಿಂಗ ವನ್ನು ಕಣ್ಣುಗಳು ದಣಿದರೂ ಸದಾ ತೆರೆದೇ ನೋಡಬೇಕು. ಹೊಸದಾಗಿ ಕಣ್ಣಲ್ಲಿಯ ನೀರು ಹೋಗುವದು. ಆದರೂ ತೆರೆದೇ ನೋಡಬೇಕು. ಮುಂದೆ ಅವೆಲ್ಲ ತಾನೇ ರೂಢಿಯಾಗಿ ಹೋಗಲು ಆನಂದವಾಗುವದು. ಅದಕ್ಕೆ ಲಿಂಗಪೂಜಕರು ಈ ಮಾತುಗಳನ್ನೆಲ್ಲ ಲಕ್ಷದಲ್ಲಿಟ್ಟುಕೊಂಡು ಸಾಗಬೇಕು. ಲಿಂಗಕ್ಕೆ ಮುತ್ತು ಬಂಗಾರಗಳನ್ನು ಕೂಡ್ರಿಸಬಾರದು. ಇದು ಸರಿಯಲ್ಲ. ಒಳ್ಳೇ ಕರ್‍ರಗಿನ ಕರೇ ಹೊಳಪಿನ ಲಿಂಗವಿರಬೇಕು. ಅಂದರೆ ಪೂಜೆಗೆ ಮುದ್ರಾಮಾಡಲಿಕ್ಕೆ ಅತ್ಯುತ್ತಮವಾಗುವದು.

# ಲಿಂಗಪೂಜೆಯ ತತ್ವಗಳು

[ಲಿಂಗ ಪೂಜೆಯ ವಿಷಯವಾಗಿ ಇಬ್ಬರು ಮಹನೀಯರು ಹಿಂದೆ ಲೇಖಗಳನ್ನು ಬರೆದಿದ್ದಾರೆ. ಅವುಗಳಲ್ಲಿಯ ವಿವರಣೆಗಳು ಷೋಡೋಪಚಾರಗಳನ್ನು ಅವಲಂಬಿಸಿ ಬರೆದವುಗಳಾಗಿವೆ. ಆದರೆ ಲಿಂಗಪೂಜೆಯ ಕ್ರಿಯೆಗಳು ಆತ್ಮೋನ್ನತಿಯನ್ನು ಸಂಬಂಧಿಸಿ ವಿವೇಚಿಸಿದವುಗಳಾಗಿದ್ದು ಅವುಗಳನ್ನು ವೀರಶೈವರು ಷಟ್‌ಸ್ಥಲಗಳಿಗೆ ಸಂಬಂಧಿಸಿ ಆಚರಿಸಬೇಕು. ಅವುಗಳನ್ನು ಕೆಳಗೆ ಕೊಟ್ಟದ್ದೇವೆ.]

—ಸಂಪಾದಕ.

"ಪ್ರತಿಯೊಬ್ಬ ಮನುಷ್ಯನಿಗೆ ಮೂರು ಶರೀರಗಳಿರುತ್ತವೆ ಅವು ಯಾವವೆಂದರೆ ಸ್ಥೂಲ, ಸೂಕ್ಷ್ಮ, ಕಾರಣ. ಈ ಮೂರೂ ಶರೀರಗಳ ವ್ಯಾಪಾರವು ಸರಿಯಾಗಿ ನಡೆದರೆ ಮಾತ್ರ ಅವನಿಂದ ಕಾರ್ಯಗಳು ಆಗುತ್ತವೆ. ಈ ಶರೀರಗಳು ಒಂದಕ್ಕೊಂದು ಪರಸ್ಪರಾವಲಂಬಿಗಳು ಇವೆ. ಒಂದು ಶರೀರದ ಕಾರ್ಯವು ಕೆಟ್ಟರೆ ಮತ್ತೊಂದು ಸರಿಯಾಗಿ ವ್ಯವಹರಿಸಲಾರದು. ಶರೀರದ ಬಾಹ್ಯ ಕ್ರಿಯೆಗಳು ಸ್ಥೂಲ ಶರೀರದಿಂದ ಆಗುತ್ತವೆ. ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ವ್ಯವಹರಿಸುವ ಶರೀರವು ಸೂಕ್ಷ್ಮ ಶರೀರವು. ಈ ಸೂಕ್ಷ್ಮ ಶರೀರದ ಸಹಾಯವಿಲ್ಲದೆ ಸ್ಥೂಲ ಶರೀರವು ವ್ಯವಹರಿಸಲಾರದು. ಈ ಎರಡೂ ಶರೀರಗಳಿಗೆ ಚೈತನ್ಯ ಕೊಡುವಂಥ ಮೂರನೆಯದೊಂದು ಶರೀರವಿದ್ದು ಅದಕ್ಕೆ ಕಾರಣಶರೀರವೆಂಬ ಹೆಸರು. ಈ ಮೂರು ಶರೀರಗಳ ಸಹಾಯದಿಂದ ಮನುಷ್ಯನ ಕಾರ್ಯಗಳು ಜಗತ್ತಿನಲ್ಲಿ ಸಾಗುತ್ತವೆ. ಆದ್ದರಿಂದ ಈ ಮೂರೂ ಶರೀರಗಳಲ್ಲಿ ಲಿಂಗವನ್ನು ಚೈತನ್ಯಗೊಳಿಸದ ಹೊರತು ಆತನು ಪರಮಾತ್ಮನನ್ನು ಅರಿಯಲಾರನು. ಸ್ಥೂಲ ಶರೀರದಲ್ಲಿ ಪ್ರಜ್ವಲಿಸತಕ್ಕ ಲಿಂಗಕ್ಕೆ ಇಷ್ಟಲಿಂಗವೆಂತಲೂ, ಸೂಕ್ಷ್ಮ ಶರೀರದಲ್ಲಿ ಪ್ರಜ್ವಲಿಸತಕ್ಕ ಲಿಂಗಕ್ಕೆ ಪ್ರಾಣಲಿಂಗವೆಂತಲೂ, ಕಾರಣ ಶರೀರದಲ್ಲಿ ಪ್ರಜ್ವಲಿಸತಕ್ಕ ಲಿಂಗಕ್ಕೆ ಭಾವಲಿಂಗವೆಂತಲೂ ವಚನಕಾರರು ಹೆಸರುಗಳನ್ನು ಕೊಟ್ಟಿರುವರು. ಎಂದರೆ ಇಷ್ಟಲಿಂಗವು ಬಾಹ್ಯ ಕ್ರಿಯೆಗಳಿಗೆ ಸಂಬಂಧಿಸಿದಂಥಾದ್ದು, ಪ್ರಾಣಲಿಂಗವು ಮನಸ್ಸಿಗೆ ಸಂಬಂಧಪಟ್ಟಂಥಾದ್ದು, ಭಾವಲಿಂಗವು ಇವೆಲ್ಲವುಗಳಿಗೂ ಕಾರಣವಾದ ಕಾರಣ ಶರೀರಕ್ಕೆ ಸಂಬಂಧಪಟ್ಟಂಥಾದ್ದು ಇರುತ್ತದೆ. ಈ ಮೂರೂ ಶರೀರಗಳ ವ್ಯಾಪಾ

ರಗಳು ಲಿಂಗ ಚೈತನ್ಯವುಳ್ಳವಾಗಿ ಮಾಡುವದೇ ಲಿಂಗ ಪೂಜೆಯ ಮುಖ್ಯ ತತ್ವವಿರುತ್ತದೆ. ಈ ದೃಷ್ಟಿಯಿಂದ ಪೂಜಾರ್ಚನೆಗಳನ್ನು ಮಾಡುವದೇ ವೀರ ಶೈವನ ಕರ್ತವ್ಯವಾಗಿದೆ. ಕೇವಲ ಅಷ್ಟವಿಧಾರ್ಚನೆ ಷೋಡಶೋಪಚಾರಗ ಳನ್ನು ಲಿಂಗಪೂಜೆಯ ನಿಜವಾದ ಮರ್ಮವನ್ನು ಅರಿಯದೆ ಮಾಡಿದ್ದಾದರೆ, ಅದರಿಂದ ಏನೂ ಪ್ರಯೋಜನವಾಗಲಾರದು. ಈ ರೀತಿಯಾಗಿ ನಿರರ್ಥಕ ಪೂಜೆ ಮಾಡುವವರನ್ನು ವಚನಕಾರರು ಬಹಳ ಹಳಿದಿದ್ದಾರೆ. ಈ ಬಗ್ಗೆ ಬಸವೇಶ್ವರನು ಅನ್ನುವದೇನೆಂದರೆ:—

> ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವ ಹೆಮ್ಮಿನಲ್ಲಿ ಬೆಂದೆನಯ್ಯಾ. ಗುರುವೆಂದರಿಯೆ, ಲಿಂಗವೆಂದರಿಯೆ, ಜಂಗಮವೆಂದರಿಯೆ, ಪ್ರಸಾದವೆಂದರಿಯೆ. ಆನು ಬೆಂದೆನಯ್ಯಾ. ಕೂಡಲ ಸಂಗಮದೇವ ಆನು ಮಾಡುವದೆಲ್ಲ ಬರಿಯ ಉಪಚಾರವಯ್ಯಾ.

> ಬಂಡಿತುಂಬ ಪತ್ರಿಯ ತಂದು ಕಂಡ ಕಂಡಲ್ಲಿ ಮಜ್ಜನಕ್ಕೆರೆವ ರಯ್ಯಾ. ತಾಪತ್ರಯವ ಕಳೆದು ಪೂಜಿಸಿ. ತಾಪತ್ರಯವ ಲಿಂಗನೊಲ್ಲ. ಕೂಡಲಸಂಗಮದೇವ ಬರಿಯ ಉದಕದಲ್ಲಿ ನೆನೆವನೆ ?

"ಈ ಮೇರೆಗೆ ಶ್ರಮಪಟ್ಟು ಲಿಂಗಪೂಜೆಯನ್ನು ಮಾಡುವದು ವ್ಯರ್ಥ ವೆಂದು ಬಸವೇಶ್ವರನು ಹೇಳಿದ್ದಾನೆ. ಲಿಂಗ ಪೂಜೆಯ ಕ್ರಮದಲ್ಲಿ ಗುರು, ಲಿಂಗ, ಜಂಗಮ, ಪ್ರಸಾದವೆಂದರೇನು ಎಂಬುದನ್ನು ತಿಳಿದು ಪೂಜೆಯನ್ನು ಮಾಡಬೇಕೇ ಹೊರ್ತು ಬರೇ ಮೇಲಿನ ಉಪಚಾರಗಳನ್ನು ಮಾಡುತ್ತ ತಾಸುಗಟ್ಟಲೇ ಲಿಂಗದ ಮೇಲೆ ನೀರನ್ನು ಹಣಿಸುತ್ತ ಕೂಡುವದರಿಂದ ಪರಮಾತ್ಮನು ಎಂದೂ ಒಲಿಯಲಾರನೆಂದು ಅವನು ಇಲ್ಲಿ ಹೇಳಿದ್ದಾನೆ.

ಆದ್ದರಿಂದ ಈ ಮೂರೂ ಲಿಂಗಗಳ ಪೂಜೆಯ ಮರ್ಮವನ್ನು ಅರಿ ಯುವದು ಅತ್ಯಂತ ಅವಶ್ಯವಾಗಿರುತ್ತದೆ. ಪ್ರತಿಯೊಬ್ಬ ವೀರಶೈವನು ಇದ ನ್ನರಿತು ಆಚರಿಸಲಿಕ್ಕೇಬೇಕು. ಈ ಬಗ್ಗೆ ಅನೇಕ ವಚನಗಳುಂಟು. ಅವು ಗಳಲ್ಲೊಂದನ್ನು ನಾವು ಇಲ್ಲಿ ಉದಹರಿಸುತ್ತೇವೆ.

> "ಇಷ್ಟಲಿಂಗದ ಪೂಜೆಯಾವದು, ಪ್ರಾಣಲಿಂಗದ ಪೂಜೆಯಾವದು, ಭಾವಲಿಂಗದ ಪೂಜೆಯಾವದು ಹೇಳಿಹೆ ಕೇಳಿರಯ್ಯಾ. ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಮಾಡುವದು, ಅದು ಇಷ್ಟಲಿಂಗದ ಪೂಜೆ. ಆ ಲಿಂಗವ

ಮನಸ್ಸಿನಲ್ಲಿ ಧ್ಯಾನಿಸಿ ಮನೋಮಧ್ಯದಲ್ಲಿಪ್ಪ ನಿಃಕಲ ಬ್ರಹ್ಮವನು ಧ್ಯಾನವೆಂಬ ಹಸ್ತದಲ್ಲಿ ಹಿಡಿದು ಕರಸ್ಥಲದಲ್ಲಿಪ್ಪ ಲಿಂಗದ ಗೊತ್ತಿನಲ್ಲಿ ಕಟ್ಟಿ ನಿಲಿಸುವದೀಗ ಪ್ರಾಣಲಿಂಗದ ಪೂಜೆ. ಮನಸ್ಸು ತಲ್ಲಿಂಗ ದಲ್ಲಿ ಲೀಯವಾಗಿ ನಚ್ಚು ಮೆಚ್ಚು ಅಚ್ಚೊತ್ತಿ ಅಗಲದಿಪ್ಪುದೀಗ ಭಾವಲಿಂಗದ ಪೂಜೆ. ಇವು ಮೂರು ಲಿಂಗದ ಅರ್ಚನೆಯೇ ಮೂರು ಲಿಂಗದ ಉಪಚಾರ ಶಿವಾರ್ಚಕರಾದ ವೀರಶೈವರು ಮಾಡುವ ಲಿಂಗಾರ್ಚನೆಯ ಕ್ರಮವೆಂದು ಹೇಳಲ್ಪಟ್ಟಿತಯ್ಯ. ಮಹಾಲಿಂಗ ಗುರು ಶಿವ ಸಿದ್ಧೇಶ್ವರಪ್ರಭುವೇ. —ತೋಂಟದಾರ್ಯ.

ಇನ್ನೊಬ್ಬ ವಚನಕಾರನು ಅನ್ನುವದೇನಂದರೆಃ—

ಇಷ್ಟಲಿಂಗದಲ್ಲಿ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಂ ಮಾಡುವದು ಇಷ್ಟಲಿಂಗ ಪೂಜೆ. ಆ ಲಿಂಗವನು ಮನಸ್ಸಿನಲ್ಲಿ ಧ್ಯಾನಿಸುವುದೇ ಪ್ರಾಣಲಿಂಗದ ಪೂಜೆ ಅಪ್ರಮಾಣ ಕೂಡಲಸಂಗಮದೇವಾ.

ಉಪ್ಪು ಉದಕವ ಬೆರಸಿದಂತೆ ವಾರಿಕಲ್ಲು ವಾರಿಯ ಬೆರಸಿದಂತೆ ಕರ್ಪುರ ಅಗ್ನಿಯ ಬೆರಸಿದಂತೆ ಮನ ಲಿಂಗದಲ್ಲಿ ಲೀಯ್ಯವಾಗಿಹುದು ಭಾವಲಿಂಗ ಪೂಜೆ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

ಈ ವಚನಗಳ ಮೇಲಿಂದ ಬಾಹ್ಯೋಪಚಾರಗಳು ಇಷ್ಟಲಿಂಗದ ಪೂಜೆ ಎಂತಲೂ, ಪರಮಾತ್ಮನ ಧ್ಯಾನವು ಪ್ರಾಣಲಿಂಗದ ಪೂಜೆ ಎಂತಲೂ, ಆತನನ್ನು ಬೆರೆದುಕೊಂಡು ಏಕಾಕಾರವಾದ ಮನಸ್ಸಿನಿಂದಿರುವದು ಭಾವ ಲಿಂಗದ ಪೂಜೆ ಎಂತಲೂ ಸ್ಥೂಲ ರೀತಿಯಿಂದ ಅವರು ಇಲ್ಲಿ ಹೇಳಿದ್ದಾರೆ. ಈ ಮೂರೂ ಕಾರ್ಯಗಳನ್ನು ಯಾವ ವಿಧವಾದ ರೀತಿಯಿಂದ ಲಿಂಗ ಪೂಜೆಯಲ್ಲಿ ನೆರವೇರಿಸಬೇಕೆಂಬುದನ್ನು ನಾವು ತಿಳಿದುಕೊಳ್ಳುವದು ಅವಶ್ಯವದೆ.

ಈ ಸಂಗತಿಯನ್ನು ಕೊನೆಗಾಣಿಸಲು ವಚನಕಾರರು ಈ ಮೂರು ಲಿಂಗಗಳಲ್ಲಿ ಪ್ರತಿಯೊಂದರಲ್ಲಿ ಎರಡೆರಡು ಭಾಗ ಮಾಡಿ, ಒಟ್ಟಿಗೆ ಆರು ಲಿಂಗಗಳನ್ನು ಮಾಡಿದ್ದಾರೆ. ಆ ಆರು ಲಿಂಗಗಳ ಆಚರಣೆಗಳನ್ನು ಒಳಕೊಂಡರೆ ಮೇಲ್ಕಂಡ ಮೂರೂ ಲಿಂಗಗಳು ಸಾಧ್ಯವಾಗುವವೆಂದು ಅವರ ಅಭಿಪ್ರಾಯವದೆ. ಈ ಆರು ಲಿಂಗಗಳು ಯಾವವೆಂದರೆ:—

ಇಷ್ಟಲಿಂಗದಲ್ಲಿ ಆಚಾರಲಿಂಗ ಗುರುಲಿಂಗವೆಂತಲೂ, ಪ್ರಾಣಲಿಂಗದಲ್ಲಿ ಶಿವಲಿಂಗ ಚರಲಿಂಗವೆಂತಲೂ, ಭಾವಲಿಂಗದಲ್ಲಿ ಪ್ರಸಾದಲಿಂಗ ಮಹಾಲಿಂಗ ವೆಂತಲೂ, ಆರು ವಿಭಾಗಗಳು ಮಾಡಲ್ಪಟ್ಟಿವೆ. ಷಟ್‌ಸ್ಥಲ ಶಾಸ್ತ್ರದಲ್ಲಿ ಈ ಆರು ಲಿಂಗಗಳ ವ್ಯಾಖ್ಯೆಗಳು ಸವಿಸ್ತಾರವಾಗಿ ಮಾಡಲ್ಪಟ್ಟಿವೆ. ಆದರೆ ಪ್ರಸ್ತುತದಲ್ಲಿ ಲಿಂಗಪೂಜೆಯ ದೃಷ್ಟಿಯಿಂದ ಈ ಆರು ಲಿಂಗಗಳ ಅರ್ಥವನ್ನು ತಿಳಿಯುವದು ಅವಶ್ಯವದೆ. ಈ ಆರು ಲಿಂಗಗಳ ಅರ್ಥವು ಮಿಶ್ರಾರ್ಪಣ ಗ್ರಂಥದಲ್ಲಿ ಕೆಳಿಗೆ ಬರೆದ ಪ್ರಕಾರ ವಿವರಿಸಲ್ಪಟ್ಟಿರುತ್ತದೆ.

> ಪಂಚಾಚಾರ ಸ್ವರೂಪವಾದ ಆಚಾರಲಿಂಗ, ಮಂತ್ರ ಮೂರ್ತಿಯಾದ ಗುರುಲಿಂಗ, ಪರಮಪ್ರಕಾಶಸ್ವರೂಪವಾದ ಶಿವಲಿಂಗ, ಯಜನ ಸ್ವರೂಪವಾದ ಚರಲಿಂಗ, ಈಳನ ಸ್ವರೂಪವಾದ ಪ್ರಸಾದಲಿಂಗ, ಬೋಧಾಸ್ವರೂಪವಾದ ಮಹಾಲಿಂಗವಾಗಿ ನೆಲೆಗೊಂಡಿಪ್ಪುದು.

ಮೊಲ್ಕಂಡ ಉಕ್ತಿಯಲ್ಲಿ ಪೂಜಾ ದೃಷ್ಟಿಯಿಂದ ಈ ಆರು ಲಿಂಗಗಳ ಸ್ವರೂಪವು ಹೇಳಲ್ಪಟ್ಟಿದೆ. ಇದನ್ನು ತಿಳಿದುಕೊಂಡು ಈ ಆರು ಲಿಂಗಗಳನ್ನು ತನ್ನಲ್ಲಿ ಪ್ರಜ್ವಲಿಸುವದೇ ಈ ಷಟ್‌ಸ್ಥಲಾತ್ಮಕವಾದ ಲಿಂಗ ಪೂಜೆಯ ವಿವರ ವಿರುತ್ತದೆ.

ಆಚಾರಲಿಂಗ:— ಆಚಾರಲಿಂಗವು ಪಂಚಾಚಾರ ಸ್ವರೂಪವೆಂದು ಇಲ್ಲಿ ಹೇಳಲ್ಪಟ್ಟಿದೆ. ಸದಾಚಾರ, ಭೃತ್ಯಾಚಾರ, ಶಿವಾಚಾರ, ಲಿಂಗಾಚಾರ, ಗಣಾಚಾರ, ಇವು ಪಂಚಾಚಾರಗಳು. ಈ ಪಂಚಾಚಾರಗಳನ್ನು ದೃಢಪಡಿಸುವದರಿಂದ ಮನುಷ್ಯನ ನೀತಿ ನಡತೆಗಳು ಶುದ್ಧವಾಗುವವು. ಹೀಗೆ ಶುದ್ಧವಾದ ಹಾಗೆ ಅವನಲ್ಲಿ ಆಚಾರಲಿಂಗದ ಸ್ವಭಾವವು ನೆಲೆಗೊಳ್ಳಹತ್ತುತ್ತದೆ. ಲಿಂಗ ಪೂಜೆಯನ್ನು ಮಾಡುವವನು ಶುದ್ಧ ನಡತೆಯುಳ್ಳವನಾಗಿರುವದು ಅತ್ಯಂತ ಅವಶ್ಯವಿರುತ್ತದೆಂದು ತೋರಿಸಲು ಆಚಾರ ಲಿಂಗದ ವ್ಯಾಖ್ಯೆಯನ್ನು ವಚನಕಾರರು ಹೀಗೆ ಮಾಡಿರುವರು. ಈ ದೃಷ್ಟಿಯಿಂದ ನಾವು ವಿಚಾರಿಸಿದರೆ ಶುದ್ಧಾಚಾರ ವರ್ತನೆಯುಳ್ಳವನು ಯಾವಾಗಲೂ ಆಚಾರಲಿಂಗದ ಪೂಜೆಯಲ್ಲಿಯೇ ಮಗ್ನನಾಗಿರುತ್ತಾನೆಂದು ಹೇಳಬಹುದು. ಆದರೆ ನಿತ್ಯದ ಪೂಜಾ ಕ್ರಿಯೆಗಳಲ್ಲಿ ಈ ಆಚಾರಲಿಂಗದ ಸ್ಥಾನವನ್ನು ವಚನಕಾರರು ಎಲ್ಲಿ ಇಟ್ಟಿರುವರೆಂಬದನ್ನು ತಿಳಿಯುವದು ಅವಶ್ಯವದೆ. ನಾನು ಈ ಲೇಖದಲ್ಲಿ ಲಿಂಗಪೂಜೆಯ ಎರಡು ವಚನಗಳನ್ನು ಕೊಟ್ಟಿರುತ್ತೇನೆ. ಅವುಗಳ ಮೇಲಿಂದ

ಆಚಾರಲಿಂಗದ ಪೂಜೆಯನ್ನು ಪೂಜೆಯ ಪೂರ್ವದಲ್ಲಿ ತನ್ನ ದೇಹ ಶುದ್ಧಿ ಗೋಸ್ಕರ ಮಾಡುವ ಕ್ರಿಯೆಗಳೆಲ್ಲಿ ಎಂದರೆ ಸ್ಥಲಸಮ್ಮಾರ್ಜನೆ, ಸ್ನಾನ, ಪದಾರ್ಥ ಶುದ್ಧಿ, ವಿಭೂತಿ ರುದ್ರಾಕ್ಷೆ ಧಾರಣ, ಪ್ರಣಮಸಂಬಂಧ, ಕರ ನ್ಯಾಸ ಅಂಗನ್ಯಾಸ ಇಂಥ ಕ್ರಮುಗಳಲ್ಲಿ ಇಟ್ಟಿರುವರೆಂದು ತಿಳಿದುಬರುತ್ತದೆ ಆದ್ದರಿಂದ ಲಿಂಗಪೂಜಾ ಕಾಲದಲ್ಲಿ ಈ ಕಾರ್ಯಗಳನ್ನು ಮಾಡುವದರಲ್ಲಿಯೇ ಆಚಾರಲಿಂಗದ ಪ್ರಜ್ವಲನೆಯು ಇರುತ್ತದೆ. ಇದು ಯೋಗ್ಯವಿರುತ್ತದೆ. ಈ ರೀತಿಯಾಗಿ ವರ್ತಿಸುವದರಿಂದ ಮನುಷ್ಯನ ದೇಹ ಮತ್ತು ಮನಸ್ಸು ಒಂದುತರದ ನಿರ್ಮಲತೆಯನ್ನು ಹೊಂದಿ ನಿತ್ಯದ ಕ್ರಿಯೆಗಳನ್ನು ಶುದ್ಧವಾದ ರೀತಿಯಿಂದ ಮಾಡಲು ಉತ್ಸಾಹ ಭರಿತನಾಗುತ್ತಾನೆ. ಇದನ್ನು ಪ್ರತಿಯೊ ಬ್ಬನು ಪ್ರಯೋಗದಿಂದ ತಿಳಿದುಕೊಳ್ಳಬಹುದು. ಇದು ಆಚಾರಲಿಂಗದ ಸಾಧ ನೆಯು. ಇದು ಭಕ್ತಸ್ಥಲವು.

ಗುರುಲಿಂಗಃ--- ಗುರುಲಿಂಗವು ಮಂತ್ರಮೂರ್ತಿಯೆಂದು ಮೇಲ್ಕಂಡ ವಚನದಲ್ಲಿ ಹೇಳಿದೆ. ಗುರುವು ದೀಕ್ಷೆಯ ಕಾಲದಲ್ಲಿ ಭಕ್ತನಿಗೆ ಮಂತ್ರೋಪ ದೇಶವನ್ನು ಮಾಡುತ್ತಾನೆ. ಇದರ ಪ್ರಬಾವದಿಂದ ಆ ಶಿಷ್ಯನು ಗುರುವಿನ ಶ್ರೇಷ್ಠ ತರದ ಚೈತನ್ಯಗಳನ್ನು ಒಳಕೊಳ್ಳುತ್ತಾನೆ. ಆದ್ದರಿಂದ ಶಿಷ್ಯನು ಗುರು ವಿನ ಮಗನೆಂದು ಭಾವಿಸುವದುಂಟು. ಹೀಗೆ ಉಪದೇಶಿಸಲ್ಪಟ್ಟ ಮಂತ್ರ ವನ್ನು ಧ್ಯಾನಿಸುವದು ಶಿಷ್ಯನ ಕರ್ತವ್ಯವು. ಈ ಕ್ರಿಯೆಯಿಂದ ಭಕ್ತನಲ್ಲಿಯ ಲಿಂಗದ ಗುಣಗಳು ಬೆಳೆಯುತ್ತ ಹೋಗುತ್ತವೆ. ಹೀಗೆ ಗುರುಮಂತ್ರ ಜಪಿ ಸುವದರಿಂದ ಗುರುಲಿಂಗವು ಪೂಜಕನಲ್ಲಿ ಪ್ರಜ್ವಲಿಸುತ್ತ ಹೋಗುತ್ತದೆ. ಇದೇ ಗುರುಲಿಂಗವನ್ನು ಒಳಹೊಕ್ಕುವ ರೀತಿಯು. ಇದು ಲಿಂಗಪೂಜೆಯ ಎರ ಡನೇ ಭಾಗವು. ಮಹೇಶ್ವರ ಸ್ಥಲಕ್ಕೆ ಸಂಬಂಧಿಸಿದಂಥಾದ್ದು.

ಈ ಎರಡು ಕ್ರಿಯೆಗಳು ಮನುಷ್ಯನ ಸ್ಥೂಲ ಶರೀರಕ್ಕೆ ಸಂಬಂಧಪಟ್ಟ ವಿರುತ್ತವೆ. ಇದರಿಂದ ಅವನ ಬಹಿರಂಗ ಕ್ರಿಯೆಗಳು ಶುದ್ಧವಾಗುತ್ತ ಹೋಗುತ್ತವೆ. ಮತ್ತು ಇಷ್ಟಲಿಂಗವು ಪೂಜಕನಲ್ಲಿ ಜಾಗ್ರತೆ ಹೊಂದುತ್ತ ಹೋಗುತ್ತದೆ.

ಶಿವಲಿಂಗಃ— ಶಿವಲಿಂಗವು ಪರಮ ಪ್ರಕಾಶ ಸ್ವರೂಪವೆಂದು ಮೇಲ್ಕಂಡ ವಚನದಲ್ಲಿ ಹೇಳಿದೆ. ಈ ಲಿಂಗವು ಮನಸ್ಸಿಗೆ ಸಂಬಂಧಪಟ್ಟದ್ದಿರುತ್ತದೆ. ಇಷ್ಟಲಿಂಗವನ್ನು ಭಕ್ತನು ಕರಕಮಲದಲ್ಲಿಟ್ಟುಕೊಂಡು ಅದನ್ನು ಏಕಾಗ್ರಚಿತ್ತ

ದಿಂದ ಅದರ ಮೇಲೆ ದೃಷ್ಟಿಯನ್ನಿಟ್ಟು ಧ್ಯಾನಿಸುವದರಿಂದ ಪ್ರಕಾಶ ಸ್ವರೂಪವಾದ ಈ ಶಿವಲಿಂಗವು ಭಕ್ತನಿಗೆ ದೃಗ್ಗೋಚರವಾಗಹತ್ತುತ್ತದೆ. ಈ ಪ್ರಕಾಶವನ್ನು ಸಾಧಿಸುವದೇ ತನ್ನಲ್ಲಿ ಶಿವಲಿಂಗವನ್ನು ಪ್ರಜ್ವಲಗೊಳಿಸುವ ಕ್ರಮವಿರುತ್ತದೆ. ಈ ಕ್ರಿಯೆಯನ್ನು ಅನುಸರಿಸುವದರಿಂದ ಮನುಷ್ಯನು ತನ್ನ ಚಿತ್ತವನ್ನು ನಿಗ್ರಹಿಸಲು ಸಮರ್ಥನಾಗುತ್ತಾನೆ. ಮತ್ತು ಪರಮಾತ್ಮನಲ್ಲಿ ಧ್ಯಾನೈಕತತ್ಪರನಾಗಲು ಶಕ್ತನಾಗುತ್ತಾನೆ. ಇದು ಲಿಂಗಪೂಜೆಯ ಮೂರನೇ ಭಾಗವಿರುತ್ತದೆ. ಇದು ಶಿವಲಿಂಗ ಸಾಧನೆಯು. ಇದು ಪ್ರಸಾದಿ ಸ್ಥಲವು.

ಚರಲಿಂಗ ಅಥವಾ ಜಂಗಮಲಿಂಗ:— ಚರಲಿಂಗವು ಯಜನ ಸ್ವರೂಪವೆಂದು ಮೇಲ್ಕಂಡ ವಚನದಲ್ಲಿ ಹೇಳಲ್ಪಟ್ಟಿದೆ ಎಂದರೆ ಅರ್ಚನೆ, ಪೂಜೆ ಇದರಿಂದ ಸಾಧ್ಯವಾಗುವವೆಂದು ಹೇಳಲ್ಪಟ್ಟದೆ. ನಿಜವಾಗಿ ಅರ್ಚನೆ ಪೂಜನೆಯಿಂದ ಪ್ರಪಂಚದಲ್ಲಿ ವ್ಯಗ್ರವಾದ ಮನುಷ್ಯನ ಮನಸ್ಸು ಪರಮಾತ್ಮನತ್ತ ಹೊರಳುವದು. ಅದು ಮನುಷ್ಯನ ಮನಸ್ಸಿನ ಚಂಚಲತೆಯನ್ನು ದೂರ ಮಾಡುವದು. ಆದ್ದರಿಂದ ಇದು ಮನಶ್ಶುದ್ಧಿಗೆ ಕಾರಣವು. ಈ ರೀತಿಯ ಕ್ರಿಯೆಗಳಿಂದ ಮನಸ್ಸಿನಲ್ಲಿ ಮೊದಲು ನೆಲೆಗೊಂಡ ಶಿವಲಿಂಗವು ಮತ್ತಿಷ್ಟು ದೃಢತೆಯನ್ನು ಹೊಂದಲಿಕ್ಕೆ ಕಾರಣವಾಗುವದು. ಹೀಗೆ ಪ್ರಸಾದಿ ಸ್ಥಲದಲ್ಲಿ ಮೂಡಿದ ಶಿವಲಿಂಗವು ಪ್ರಾಣಲಿಂಗವಾಗುವದು. ಆದ್ದರಿಂದ ವಚನಕಾರರು ಈ ಪೂಜಾ ಅರ್ಚನೆಗಳನ್ನು ಪ್ರಾಣಲಿಂಗಿ ಸ್ಥಲಕ್ಕೆ ಸೇರಿಸಿರುವರು.

ಈ ಪ್ರಕಾರ ಶಿವಲಿಂಗ ಮತ್ತು ಚರಲಿಂಗಗಳನ್ನು ತನ್ನಲ್ಲಿ ಪ್ರಜ್ವಲಗೊಳಿಸುವದೇ ಪ್ರಾಣಲಿಂಗದ ಪೂಜೆಯು ಎಂದು ಭಾವಿಸುವುದು.

ಪ್ರಸಾದಲಿಂಗ:— ಪ್ರಸಾದಲಿಂಗವು ಐದನೇ ಲಿಂಗವಾಗಿದೆ. ಇದು ಈಳನ ಸ್ವರೂಪವೆಂದು ಮೇಲ್ಕಂಡ ವಚನದಲ್ಲಿ ಹೇಳಲ್ಪಟ್ಟಿದೆ. ಈಳನವೆಂದರೆ ಪರಮಾತ್ಮನ ಗುಣಕೀರ್ತನೆಗಳನ್ನು ಮಾಡುವದು. ಹೀಗೆ ಪ್ರಾರ್ಥನೆ ಮಾಡುವ ಕಾರ್ಯವನ್ನು ವಚನಕಾರರು ಐದನೇ ಸ್ಥಲವಾದ ಶರಣ ಸ್ಥಲಕ್ಕೆ ಹಾಕಿದ್ದಾರೆ. ಇದರ ಮೇಲಿಂದ ಪರಮಾತ್ಮನನ್ನು ಪ್ರಾರ್ಥಿಸುವ ಕಾರ್ಯಕ್ಕೆ ವಚನಕಾರರು ಎಷ್ಟು ಮಹತ್ವ ಕೊಟ್ಟಿರುವರೆಂಬದು ತಿಳಿದು ಬರುತ್ತದೆ. ಯಾಕಂದರೆ ಈ ರೀತಿಯಾಗಿ ಪ್ರಾರ್ಥಿಸುವವನು ಪರಮಾತ್ಮನಿಗೆ ತನ್ನ ಸರ್ವಸ್ವವನ್ನು ಒಪ್ಪಿಸಿ ಭಕ್ತಿಯಿಂದ ತುಂಬಿ ತುಳುಕುವಂಥವನಾಗುತ್ತಾನೆ. ಈತನು ಶರಣನು. ಇದು ಲಿಂಗ ಪೂಜೆಯ ಐದನೇ ಭಾಗವು. ಇದರಿಂದ ಪ್ರಸಾದ ಲಿಂಗವು ಪ್ರಜ್ವಲಿಸುತ್ತ ಹೋಗುತ್ತದೆ.

ಮಹಾಲಿಂಗ:— ಮಹಾಲಿಂಗವು ಬೋಧಾಸ್ವರೂಪವೆಂದು ಮೇಲ್ಕಂಡ ವಚನದಲ್ಲಿ ಹೇಳಲ್ಪಟ್ಟಿರುತ್ತದೆ. ಬೋಧಾಸ್ವರೂಪವೆಂದರೆ ಪರಮಾತ್ಮನೊಡನೆ ಏಕಾಕಾರ ಭಾವದಿಂದ ವರ್ತಿಸುವದೇ ಇರುತ್ತದೆ. ಆಗ ಆತನು ಲಿಂಗಾನಂದದೊಡನೆ ಕೂಡಿಕೊಂಡು ತಾನೇ ತಾನಾಗಿರುತ್ತಾನೆ. ತಾನು ಸೇವಿಸುವ ವಸ್ತುಗಳನ್ನು ಪರಮಾತ್ಮನೊಡನೆ ಸಮರಸ ಭಾವದಿಂದ ಸ್ವೀಕರಿಸುತ್ತಾನೆ ಪಾದೋದಕ ಪ್ರಸಾದಸೇವನೆ ಎಂದರೆ ಇದೇ ಇರುತ್ತದೆ. ಇದರಲ್ಲಿ ಆತನು ತನ್ನನ್ನು ಮರೆತು ಪರಮಾತ್ಮನಲ್ಲಿ ಮಗ್ನನಾಗಿರುತ್ತಾನೆ. ಇದು ಲಿಂಗ ಪೂಜೆಯ ಕಡೆಯ ಸ್ಥಲವು. ಅಂದರೆ ಐಕ್ಯಸ್ಥಲವು. ಈ ರೀತಿಯ ವ್ಯವಹರಣೆಯಿಂದ ಪೂಜಕನಿಗೆ ಮಹಾಲಿಂಗವು ಒಳಕೊಳ್ಳಹತ್ತುತ್ತದೆ. ಹೀಗೆ ಪ್ರಸಾದಲಿಂಗ ಮತ್ತು ಮಹಾಲಿಂಗಗಳನ್ನು ಒಳಕೊಳ್ಳುವದೇ ಭಾವಲಿಂಗದ ಪೂಜೆಯು.

ಈ ಮೇರೆಗೆ ಲಿಂಗಪೂಜೆಯಲ್ಲಿ ಆರು ಭಾಗಗಳು ಇರುತ್ತವೆ. ಅವುಗಳ ಮರ್ಮಗಳನ್ನು ಪೂಜಕನು ಸಂಪೂರ್ಣವಾಗಿ ಮನಸ್ಸಿನಲ್ಲಿ ಬಿಂಬಿಸಿಕೊಂಡು ತನ್ನ ಪೂಜಾ ಕಾರ್ಯಗಳಲ್ಲಿ ತೊಡಗಿದರೆ ಅವನ ಲಿಂಗ ಪೂಜೆಯು ಫಲದಾಯಕವಾಗುತ್ತದೆ.

ಈ ತತ್ವಗಳು ಸೂಕ್ಷ್ಮಾಗಮದಲ್ಲಿ ಬಹು ಸಂಕ್ಷೇಪವಾಗಿ ವಿವರಿಸಲ್ಪಟ್ಟಿವೆ. ಸೂಕ್ಷ್ಮಾಗಮದ ಪಟಲ ೬ ಶ್ಲೋಕ ೬೪ ರಿಂದ ೬೮ ರ ವರೆಗೆ ನೋಡಿರಿ. ಇಲ್ಲಿ ಲಿಂಗಪೂಜೆಯು ಹೇಗೆ ಷಟ್‌ಸ್ಥಲಾತ್ಮಕವಾಗಿರುತ್ತದೆಂದು ಹೇಳಲ್ಪಟ್ಟಿರುತ್ತದೆ. ನಾನು ಇಲ್ಲಿ ಹೇಳಿದ ವಚನಗಳನ್ನು ವಾಚಕರು ನೋಡಿದರೆ, ಅವುಗಳಲ್ಲಿ ವಿವರಿಸಿದ ಸಂಗತಿಗಳು ಈ ಸೂಕ್ಷ್ಮಾಗಮದ ತತ್ವಗಳಿಗೆ ಸರಿಯಾಗಿ ಕೂಡುತ್ತವೆಂಬುದು ತಿಳಿದುಬರುತ್ತದೆ.

ಇದಂ ಮಂತ್ರ ರಹಸ್ಯಂ ವೈಶ್ರೂಯತಾಂ ಷಟ್‌ಸ್ಥಲಾತ್ಮಕಂ ।
ಭಕ್ತಸ್ಥಲೆ ಸಮೋಸಿನೊಭೂತಿ ರುದ್ರಾಕ್ಷಸಂಯುತಃ ॥೬೪॥

ಷಡಕ್ಷರಜಪಂ ಕೃತ್ವಾ ತತೋ ಮಾಹೇಶ್ವರಸ್ಥಲೆ ।
ಹಸ್ತೇಕೃತ್ವಾ ಸಾವಧಾನಂ ಪ್ರಸಾದಿಸ್ಥಲಮಾಶ್ರಿತಃ ॥೬೫॥

ಲಿಂಗಂ ಚ ಭಕ್ತ್ಯಾ ಸಂಪೂಜ್ಯ ಪ್ರಾಣಲಿಂಗಿಸ್ಥಲೆ ತತಃ ।
ಕೃತ್ವಾ ಶಿವಾರ್ಪಣಂ ದೇವಿ ಸಾನಂದಂ ಶರಣಸ್ಥಲೆ ॥೬೬॥

ಐಕ್ಯಸ್ಥಲೆ ಪ್ರಸಾದೋಪ ಭೋಗತೃಪ್ತಿಮವಾಪ್ನುಯಾತ್ ।
ಏವಂ ಸಮರಸಾದಾವಾದಂಗ ಷಟ್ಸ್ಥಲಯೋಗತಃ ॥೬೭॥

ಯಃಪೂಜಯತಿ ಮಾಂ ದೇವಿ ವೀರಶೈವಃಸ ಉಚ್ಯತೆ ।
ತತ್ರಲಿಂಗಾರ್ಚನಂ ಕುರ್ಯಾದ್ಯಥಾ ಯೋಗಮತಂದ್ರಿತಃ ॥೬೮॥

ಇದರಲ್ಲಿ ಷಟ್ಸ್ಥಲಾತ್ಮಕ ಲಿಂಗಪೂಜೆಯ ತತ್ವಗಳು ಸ್ಪಷ್ಟವಾಗಿ ನಿರೂಪಿಸಲ್ಪಟ್ಟಿವೆ. ವಿಭೂತಿ ರುದ್ರಾಕ್ಷಿಸಂಯುತನಾಗಿ ಲಿಂಗಪೂಜೆಗೆ ಕೂಡುವದು ಭಕ್ತಸ್ಥಲವೆಂತಲೂ, ಷಡಕ್ಷರಿ ಜಪವನ್ನು ಮಾಡುವದು ಮಹೇಶ್ವರಸ್ಥಲವೆಂತಲೂ, ಸಾವಧಾನಚಿತ್ತದಿಂದ ಹಸ್ತದಲ್ಲಿ ಲಿಂಗ ನಿರೀಕ್ಷಣೆ ಮಾಡುವದು ಪ್ರಸಾದಿಸ್ಥಲವೆಂತಲೂ ಆ ಲಿಂಗವನ್ನು ಭಕ್ತಿಯಿಂದ ಪೂಜಿಸುವದು ಪ್ರಾಣಲಿಂಗಿಸ್ಥಲವೆಂತಲೂ, ಆನಂದದಿಂದ ಶಿವಾರ್ಪಣ ಮಾಡಿಕೊಳ್ಳುವದೇ ಶರಣಸ್ಥಲವೆಂತಲೂ, ಪ್ರಸಾದೋಪಭೋಗ ತೃಪ್ತಿಯೇ ಐಕ್ಯಸ್ಥಲವೆಂತಲೂ ಹೇಳಲ್ಪಟ್ಟಿದೆ. ಈ ಮೇರೆಗೆ ಇರುವ ಆಗಮೋಕ್ತಿಗಳಿಗನುಸಾರವಾಗಿಯೇ ವಚನಕಾರರು ಲಿಂಗಪೂಜಾಕ್ರಿಯೆಗಳನ್ನು ಏರ್ಪಡಿಸಿರುತ್ತಾರೆ. ನಾನು ಮೇಲೆ ಕಾಣಿಸಿದ ವಿಷಯಗಳನ್ನು ವಾಚಕರು ಧ್ಯಾನದಲ್ಲಿಟ್ಟುಕೊಂಡು ಲಿಂಗಪೂಜೆಗೆ ಸಂಬಂಧಪಟ್ಟ ವಚನಗಳನ್ನು ಲಕ್ಷಪೂರ್ವಕವಾಗಿ ನೋಡಿದರೆ ಲಿಂಗ ಪೂಜೆಯು ಹೇಗೆ ಷಟ್ಸ್ಥಲಾತ್ಮಕವಾಗಿರುತ್ತದೆಂಬದು ಅವರಿಗೆ ತಿಳಿದು ಬರುವದು.

# ಕೇಂದ್ರ ಸಾಹಿತ್ಯ ಪ್ರಚಾರ ಸಂಘ

[ಲೇಖಕರುः—ಶ್ರೀಯುತ ಕೆ. ಓಂಕಾರಯ್ಯ, ಹೈಸ್ಕೂಲ ಶಿಕ್ಷಕ. ಪು. ತುರುವನೂರು ಜಿಲ್ಹಾ- ಚಿತ್ರಕಲ್‌ದುರ್ಗ]

ಸಮಾಜ ಬಾಂಧವರ ಉದ್ಧಾರಕ್ಕಾಗಿಯೇ ನಿಂತಿರುವ ಅಖಿಲಭಾರತ ವೀರಶೈವ ಮಹಾ ಸಭೆ, ಅಖಿಲ ಭಾರತ ಶಿವಾನುಭವ ಸಂಘ ಧಾರವಾಡ, ಶಿವಾನುಭವ ಸಾಹಿತ್ಯಮಾಲೆ ಬಿಜಾಪುರ, ಸದ್ಧರ್ಮ ದೀಪಿಕೆ, ಆತ್ಮ ವಿಚಾರ ಪತ್ರಿಕೆ ಮೈಸೂರು, ದೇಶದ ಬೇರೆ ಬೇರೆ ಭಾಗದಲ್ಲಿರುವ ವಿದ್ಯಾವರ್ಧಕ ಸಂಘಗಳು, ಶರಣ ಸಾಹಿತ್ಯ ಪತ್ರಿಕೆ ಬೆಂಗಳೂರು ಇತ್ಯಾದಿ ಅನಂತ ಸಂಘ ಸಂಸ್ಥೆಗಳು ಸಾಹಿತ್ಯ, ಸಂಸ್ಕೃತಿ, ಧರ್ಮ, ಸಮಾನತೆ ಇವುಗಳಿಗಾಗಿ ಪ್ರಚಾರ ಕಾರ್ಯ ನಡೆಸುತ್ತಲಿವೆ. ಆದರೆ ಇದು ವಿಶ್ವವ್ಯಾಪಿಯಾಗುವಂತೆಯೂ, ದೇಶದಲ್ಲಿರುವ ಈ ತತ್ವಾನುಯಾಯಿಗಳ ಪರಸ್ಪರ ಸಂಬಂಧವನ್ನು ಕಲ್ಪಿಸು ವುದಕ್ಕಾಗಿಯೂ ಉತ್ತಮ ಕಾರ್ಯವನ್ನು ಕೈಗೊಳ್ಳುವುದಗತ್ಯವಾಗಿದೆ. ನಾಡಿನ ಬೇರೆ ಬೇರೆ ಭಾಗಗಳಲ್ಲಿ ಆಯಾ ಭಾಷೆಗಳಲ್ಲಿ ಈ ತತ್ವಗಳನ್ನು ಪ್ರತಿಪಾದಿ ಸುವ ಕಾರ್ಯಕ್ಕೆ ಒಂದೆಡೆಯಿಂದ ಮತ್ತೊಂದೆಡೆಗೆ ಸಂಚಾರ ಹೊರಟು ಈ ಕೆಲಸವನ್ನು ಮಾಡಬಹುದು.

ಆದರೆ ಹೀಗೆ ಪ್ರತ್ಯಕ್ಷ ಸಂಚಾರದಿಂದ ಮಾಡುವ ಕಾರ್ಯಕ್ಕಿಂತ ಸುಲಭವಾಗಿ ಕಮ್ಮಿ ಖರ್ಚಿನಿಂದ ಈ ತತ್ವಗಳನ್ನು ಪತ್ರಿಕೆಗಳು ಪುಸ್ತಕ ಗಳ ಮೂಲಕ ಜನತೆಯ ಮುಂದಿಡಬಹುದು. ಆದರೆ ಹೀಗೆ ನಡೆಸುವ ಮುನ್ನ ನಾಡಿನಲ್ಲಿರುವ ಇಂತಹ ಸಂಸ್ಥೆಗಳು ಒಂದು ಕ್ರಮಬದ್ಧವಾಗಿ ಒಟ್ಟಾಗಿ ಕಾರ್ಯವನ್ನು ನಡೆಸುವುದು ಸುಲಭವಾಗಿರುತ್ತದೆ. ಈ ಸಂಸ್ಥೆಗ ಳಿಗೆಲ್ಲಾ ಒಂದು "ಕೇಂದ್ರಸಂಸ್ಥೆ" ಯಿದ್ದು ಅದರ ಆದೇಶದಂತೆ ಒಂದೊಂದು ಅಂಗ ಸಂಸ್ಥೆಯೂ (ಇದರಲ್ಲಿ ಧಾರ್ಮಿಕ ವಿದ್ಯಾವರ್ಧಕಾದಿ ಭೇದವಿಲ್ಲದೆ) ಒಂದೊಂದು ಕಾರ್ಯವನ್ನು ಗೊತ್ತು ಮಾಡಿಕೊಂಡು ಅದರಂತೆ ನಡೆಸು ವುದು ಒಳ್ಳೆಯದಾಗಿರುತ್ತದೆ. ಅಂದರೆ ಇದರಲ್ಲಿ ಗ್ರಂಥ ಅಥವಾ ಕಾವ್ಯಗಳ ಸಂಗ್ರಹಣ, ಸಂಶೋಧನೆ, ಹಾಗೆ ಸಂಶೋಧಿಸಿದವುಗಳನ್ನು ಮತ್ತೆ ಕೈಯಿಂದ

ಬರೆಸುವದು, ಪ್ರಿಂಟು ಮಾಡುವುದು ಇವುಗಳ ಒಂದೊಂದು ಕೆಲಸಕ್ಕೆ ತಗಲುವ ವೆಚ್ಚವನ್ನು ಒಂದೊಂದು ಸಂಸ್ಥೆಗೆ ಅವುಗಳ ಯೋಗ್ಯತೆಗೆ ತಕ್ಕಂತೆ ವಹಿಸಿ ಪ್ರಿಂಟು ಮಾಡಿಸುವುದು. ಮುಗಿದ ಗ್ರಂಥಗಳಿಗೂ ಕೂಡ ಹೀಗೆಯೇ ಒಂದೊಂದು ಸಂಸ್ಥೆಗೆ ವಹಿಸುವದು ಸೂಕ್ತವಾಗಿರುತ್ತದೆ.

ಅಖಿಲಭಾರತ ಶಿವಾನುಭವ ಸಂಸ್ಥೆಯಾಗಲೀ, ಅಖಿಲಭಾರತ ವೀರಶೈವ ಮಹಾಸಭೆಯಾಗಲೀ ಕೇಂದ್ರಸಂಸ್ಥೆಯಾಗಿದ್ದು ತನ್ನ ಆಶ್ರಯದಲ್ಲಿ ನಾಡಿನ ಎಲ್ಲೆಡೆಯೂ ಶಾಖೋಪಶಾಖೆಗಳನ್ನು ಸ್ಥಾಪಿಸುತ್ತ, ಈಗ ಇರುವ ಸಂಸ್ಥೆಗಳ ಮೇಲೆ ತನ್ನ ಪ್ರಭಾವವನ್ನು ಬೀರಿ ಆ ಎಲ್ಲ ಸಂಸ್ಥೆಗಳೂ ಇದರ ಅಂಗಸಂಸ್ಥೆಯಾಗುವಂತೆ ಪರಿವರ್ತನೆಯಾಗಬೇಕು. ಆದರೆ ಹಾಗೆ ಪರಿವರ್ತನೆಯಾದ ಯಾವ ಅಂಗಸಂಸ್ಥೆಯ ಒಳ ವ್ಯವಹಾರಕ್ಕೂ ಕೇಂದ್ರಸಂಸ್ಥೆಯು ಪ್ರವೇಶಿಸುವುದಿಲ್ಲವೆಂಬ ನಂಬುಗೆಯನ್ನಿತ್ತು ತಾನು ಕೇವಲ ಮಾರ್ಗದರ್ಶನ ಮಾಡುವ ಕೆಲಸ ಹಂಚುವ ಉದ್ದೇಶವಿರುವುದನ್ನು ತಿಳಿಸಬೇಕು.

ಈ ಎಲ್ಲ ಸಂಘಸಂಸ್ಥೆಗಳು ಯಾವ ಯಾವ ಕಾರ್ಯಗಳನ್ನು ನಡೆಸಿವೆ, ನಡೆಸುತ್ತಲಿವೆ ಎಂಬ ವಿಚಾರವೂ, ಇಲ್ಲಿನ ಇತರ ಚಟುವಟಿಕೆಗಳೂ, ಧಾರ್ಮಿಕಾದಿ ಉನ್ನತಿಯ ವಿಚಾರಗಳೂ ನಾಡಿನ ಸರ್ವಜನರಿಗೂ ತಿಳಿವುದಕ್ಕೆ ಅವಕಾಶವಿರಬೇಕು. ತಮಿಳನಾಡಿನಲ್ಲಿ ಕುಂಭಕೋಣದ ಪೆರಿಯ ಮಠಾಧೀಶ್ವರರಾದ "ಶ್ರೀಜಗದ್ಗುರು ಶಾಂತದೇವ ಸಾರಂಗದೇಶಿಕೇಂದ್ರ ಮಹಸ್ವಾಮಿ"ಗಳು ಮಾಡಿರುವ ಕ್ರಾಂತಿಕಾರಕ ಕಾರ್ಯಗಳು ನಾಡಿನ ಜನತೆಗೆ ತಿಳಿಯಬಾರದೆ? ಹನ್ನೆರಡನೆ ಶತಮಾನದಲ್ಲಿ ಬಸವಾದಿ ಶರಣರಿಂದ ಬಂದ ಆಹ್ವಾನಕ್ಕೆ ಅವಕಾಶದೊರೆಯದೆ ೨೦ ನೇ ಶತಮಾನದಲ್ಲಿ ಆ ಕರೆಗೆ ಓ ಕೊಟ್ಟಂತೆ, ಅನುಭವಮಂಟಪದ ಆಹ್ವಾನವನ್ನಂಗೀಕರಿಸಿ ತಾ. ೨೫-೫-೫೭ ರಲ್ಲಿ ಬಸವಕಲ್ಯಾಣದಲ್ಲಿ ಅಡ್ಡಪಲ್ಲಕ್ಕಿ ಮಹೋತ್ಸವವನ್ನು ನೆರವೇರಿಸಿಕೊಂಡು ಗುರುವಿರಕ್ತರ ತೊಡಕಿನ ಗಂಟನ್ನು ಬಿಡಿಸಲು ಯತ್ನಿಸಿದ "ಶ್ರೀಶೈಲ ಸೂರ್ಯ ಸಿಂಹಾಸನಾಧೀಶ್ವರ ಜಗದ್ಗುರುವಾಗೀಶ ಪಂಡಿತಾರಾಧ್ಯ ಶಿವಾಚಾರ್ಯಮಹಸ್ವಾಮಿಗಳು" ನಡೆಸುತ್ತಲಿರುವ ಅನಂತಕ್ರಾಂತಿಕಾರಕ ಕಾರ್ಯಗಳನ್ನು ಸಮಾಜ ಬಾಂಧವರು ತಿಳಿಯಬಾರದೇ ?

ಸೋಲಾಪುರದ (ಈಗ ಮುಂಬಯಿ ಸರ್ಕಾರದಲ್ಲಿರುವ) ಕಿರೀಟ ಮಠಾಧೀಶ್ವರ "ಶ್ರೀ ಶ್ರೀ ಮೃತ್ಯುಂಜಯ ಮಹಾ ಸ್ವಾಮಿಗಳು" ದಿವಾ ರಾತ್ರಿ ನಡೆ

ಸುತ್ತಲಿರುವ ಅನುಭವ ಪ್ರಚಾರ ಕಾರ್ಯಗಳು ಯಾವ ಸಮಾಜ ಬಾಂಧವರಿಗೆ ಬೇಕಾಗಿಲ್ಲ ? ಇವುಗಳು ಸರ್ವರಿಗೂ ತಿಳಿಯಬೇಕು. ಹಾಗೆ ತಿಳಿದದ್ದೇ ಆದರೆ ಅದರಿಂದ ಮಹತ್ತರ ಉತ್ಸಾಹವು ಸಮಾಜದಲ್ಲುಂಟಾಗಿ ಹೆಚ್ಚು ಕಾರ್ಯಗಳು ನಡೆಯಲು ಸಹಾಯವಾಗುತ್ತವೆ.

ಹೀಗೆ ನಡೆದ, ನಡೆಯುವ, ನಡೆಸುವ ಕಾರ್ಯವನ್ನು ಸಾರ್ವಜನಿಕರ ಅವಗಾಹನೆಗೆ ಬರಲು ಅಗತ್ಯವಾಗಿ ಒಂದು ಪತ್ರಿಕೆಯನ್ನು ಸಪ್ತಾಹಿಕವಾಗಿಯೋ, ಮಾಸಿಕವಾಗಿಯೋ ಹೊರಡಿಸುವ ಯತ್ನ ಮಾಡಬೇಕು. ಇಲ್ಲವೆ ಇಂತಹ ಕಾರ್ಯವನ್ನು ಕೈಕೊಂಡಿರುವ ಸಂಸ್ಥೆಗಳಿಗೆ ಸಹಾಯ ಸಹಕಾರವಿತ್ತು ಪ್ರೋತ್ಸಾಹಿಸಬೇಕು. ಈ ವಿಧದ ಕಾರ್ಯವನ್ನು ಮಾಡುವವರಿದ್ದಾರೆ. ಅದನ್ನು ಮೊದಲೇ ನೋಡಿದ್ದೇವೆ. ಅದರಲ್ಲಿ ಶ್ರೀಯುತ ಪಿ. ಜಿ. ಹಳಕಟ್ಟಿಯವರೂ ಒಬ್ಬರು. ಇವರು ನಡೆಸುವ ಮಾಸಿಕದ ಜೊತೆಗೆ ಬೇರೆ ಕೆಲವು ಅಂಶಗಳನ್ನು ಸೇರಿಸಬಹುದು. ಈ ಸಂದರ್ಭದಲ್ಲಿ ಮಾನ್ಯ ಪಿ. ಜಿ. ಹಳಕಟ್ಟಿಯವರ ವಿಚಾರದಲ್ಲಿ ಒಂದೆರಡು ಮಾತುಗಳನ್ನು ಹೇಳಿದರೆ ಅಪ್ರಸಕ್ತವಾಗಲಾರದು.

ಮಹನೀಯರೇ ! "ವಚನಶಾಸ್ತ್ರ ಪಿತಾಮಹ ರಾವಬಹದ್ದೂರ ಡಾ|| ಪೂಜ್ಯ ಶ್ರೀಮಾನ್ ಪಿ. ಜಿ. ಹಳಕಟ್ಟಿಯವರು" ವೀರಶೈವ ಸಾಹಿತ್ಯ ಸಂಸ್ಕೃತಿ ಪ್ರಚಾರಕ್ಕಾಗಿ ಅನವರತ ಸಂಶೋಧನೆಯ ಕಾರ್ಯ ನಡೆಸಿ ಅನೇಕ ಉದ್ಗ್ರಂಥಗಳನ್ನು ಹೊರತೆಗೆದಿದ್ದಾರೆ. ತೆಗೆಯುತ್ತಲೂ ಇದ್ದಾರೆ. ಒಂದು ಸಂಸ್ಥೆಯು ಲಕ್ಷಾಂತರ ರೂಪಾಯಿ ಹಣದ ಸಹಾಯದಿಂದ ಮಾಡತಕ್ಕ ಕಾರ್ಯವನ್ನು ಒಬ್ಬಾನೊಬ್ಬ ಜರ್ಝರಿತ ಶರೀರದ ಹಣ್ಣು ಹಣ್ಣು ಮುದುಕ ಮಾಡುತ್ತಿದ್ದಾನೆಂದರೆ ಆತನ ಮಹದಾಕಾಂಕ್ಷೆಯು ಎಂತಹುದೆಂಬುದನ್ನು ವಾಚಕರೇ ಊಹಿಸಬೇಕು.

ಶ್ರೀರಾಮ ಸೀತೆಯರ ಮಹತ್ವವನ್ನು ಆತನ ಸಮಕಾಲೀನರಿಂದಲಾಗಲೀ, ಪರಂಪರೆಯಾಗಿ ಬಂದ ದಂತ ಕಥೆಗಳಿಂದಾಗಲಿ ತಿಳಿದು ನಮಗೆ ಪೂಜ್ಯ ಬುದ್ಧಿಯುಂಟಾಗುವದಿಲ್ಲ. ಆತನ ಮಹತ್ವವನ್ನರಿಯುವದು ಅನೇಕ ವರ್ಷ ತಪಸ್ಸನ್ನಾಚರಿಸಿ ಹುತ್ತದಲ್ಲಿ ಹುದುಗಿದ್ದ ಮಹಾವ್ಯಕ್ತಿ ವಾಲ್ಮೀಕಿಯು ರಚಿಸಿದ ತಪಸ್ಸಿನ ಪ್ರತೀಕವಾದ ರಾಮಾಯಣ ಮಹಾ ಗ್ರಂಥದಿಂದ ಆ ಮಹಾ ಕವಿಯು ಆ ಮಹದಾನಂದವನ್ನು ತಾನನುಭವಿಸಿ ಅದರ ಸವಿಯನ್ನು ನಮಗೂ ಉಣಬಡಿಸಿದನು.

ವೀರಶೈವ ಧರ್ಮವು ವಿಶ್ವಧರ್ಮವೆಂದು ಸಾರಿ ಭಾರತದ ಮೂಲೆ ಮೂಲೆಗಳಿಂದ ಜನತೆಯನ್ನು ತನ್ನೆಡೆಗೆ ಆಕರ್ಷಿಸಿದ ಕಲ್ಯಾಣದ ಖ್ಯಾತಿಯು ಹೊರಹೊಮ್ಮಲು ಸಾಕ್ಷೀಭೂತನಾದ ಮಹದ್‌ವ್ಯಕ್ತಿ ಜಗಜ್ಯೋತಿ ಬಸವೇಶ್ವರ. ಈತನೂ ಈತನ ಅನುಯಾಯಿಗಳಾದ ಅನಂತ ಶರಣ–ಶರಣೆಯರೂ ಮಾನವತೆಗೆ ಮಾರ್ಗದರ್ಶವಾದ ಅನಂತ ವಚನಗಳನ್ನು ಹಾಡಿಹೋದರು. ಹೀಗೆ ಹಾಡಿಹೋದ ಅನಂತ ವಚನಗಳು ಮುಚ್ಚಿ, ಮಾಸಿಹೋಗಿ ಹುಳು ತಿನ್ನುವುದಕ್ಕೆ ಪ್ರಾರಂಭಿಸಿ ಎಂಟು ಶತಮಾನಗಳು ಕಳೆದುಹೋದವು. ಅನೇಕ ರಾಜ್ಯಗಳು ಹುಟ್ಟಿ–ನಾಶವಾಗಿ ಹೋದವು. ಇದರೊಂದಿಗೆ ಚಂಡಮಾರುತ, ಪ್ರಳಯಾಗ್ನಿಗಳಂತಹ ಅನೇಕ ದುಷ್ಟ ದಂಡಯಾತ್ರೆಗಳಾಗಿ ಹೋದವು. ಇಂತಹ ಅನಂತ ಕಷ್ಟಗಳನ್ನನುಭವಿಸಿದ ಕಾಲದಲ್ಲಿ ಈ ಸಾಹಿತ್ಯಗ್ರಂಥಗಳು ೮೦೦ ವರ್ಷಗಳ ವೇಳೆಗೆ ಯಾವ ಸ್ಥಿತಿಯನ್ನಪ್ಪಿರಬೇಕೆಂಬುದನ್ನು ವಾಚಕರೆ ಊಹಿಸಬೇಕು. ಇಂತಹ ಸ್ಥಿತಿಯಲ್ಲಿದ್ದವುಗಳನ್ನು ಹುಡುಕಿ, ಆರಿಸಿ, ಶೋಧಿಸಿ ಹೊರತೆಗೆಯುವುದು ಸಾಮಾನ್ಯ ಕೆಲಸವೇನಲ್ಲ.

ಹೀಗೆನಿಸುತ್ತಿದ್ದ ಸಮಯದಲ್ಲಿ ಅವುಗಳ ಮಹತ್ವವನ್ನರಿತ ಶ್ರೀ ಪಿ. ಜಿ. ಹಳಕಟ್ಟಿಯವರು ಅದರ ರಸದುಣಿಸನ್ನು ಪ್ರಪಂಚದ ಜನತೆಗುಣಬಡಿಸಲು ಯತ್ನಿಸಿ ಸುಮಾರು ೮೭ ಗ್ರಂಥಗಳನ್ನು ಹೊರತೆಗೆದಿದ್ದಾರೆ. ಮಹರ್ಷಿಗಳು ತರಗೆಲೆಗಳಾಧಾರದಿಂದ ಕೆಲವರ್ಷ, ನೀರುಂಡು ಕೆಲವರ್ಷ, ಗಾಳಿಯುಂಡು ಕೆಲ ವರ್ಷ, ನಿರಾಹಾರಿಗಳಾಗಿ ಕೆಲವರ್ಷ ತಪಸ್ಸು ಮಾಡಿ ಸಿದ್ಧಿಯನ್ನು ಪಡೆದಂತೆ ಇವರು ಈ ಮಹಾಕಾರ್ಯದಲ್ಲಿ ಸುಮಾರು ೩೦ ವರ್ಷ ಘನಘೋರ ತಪಸ್ಸನ್ನಾಚರಿಸಿ ಸಿದ್ಧಿಯನ್ನು ಪಡೆದಿದ್ದಾರೆ. ಶರಣರು ಹಾಡಿದ ವಚನಗಳನ್ನು ಹೊರತೆಗೆವುದು ಅವರ ಮಹತ್ವವನ್ನರಿಯಲು ಆನಂದಪಡೆಯಲು ಸಹಾಯಕವಾಗಿವೆ. ಈ ವಿಧದಲ್ಲಿ ಇವರು "ಇಮ್ಮಡಿ ವಾಲ್ಮೀಕಿ" ಗಳೆನ್ನಲಡಿಯಿಲ್ಲ. ಹೀಗೆ ತಪಾಚರಣೆಯಿಂದ ಭೌತಿಕವಾಗಿ ಜೀರ್ಣ ಶರೀರಿಗಳಾಗಿದ್ದರೂ, ಆತ್ಮತೇಜದಿಂದ ಶೋಭಿಸುವ ಮಹದ್ ವ್ಯಕ್ತಿಗಳಾಗಿದ್ದಾರೆ. ಹೀಗೆ ಸಮಾಜಕ್ಕಾಗಿ ಅನವರತ ದುಡಿದ ಇವರ ಆರ್ಥಿಕ ಸ್ಥಿತಿ ತುಂಬ ಕಠಿಣವಾಗಿದೆ. ಒಮ್ಮೆ ಇವರನ್ನು ಕಾಣಲು ಹೋದಾಗಿನ ಒಂದು ದೃಶ್ಯವನ್ನು ೧೯೫೫ನೇ ಅಗಸ್ಟ ಸಂಚಿಕೆಯಲ್ಲಿ ತಗ್ಗಿಹಳ್ಳಿ ಮಠದ ಸ್ವಾಮಿಗಳು ತಿಳಿಸಿರುವುದನ್ನು ಕಂಡ ಅಥವ ಕೇಳಿದ ಯಾವ ಸಮಾಜ ಬಾಂಧವನಿಗೆ ದುಃಖ ಉಕ್ಕಿ ಬರಲಿಕ್ಕಿಲ್ಲ? ಕಣ್ಣೀರಕೋಡಿ ಹರಿಯಲಿಕ್ಕಿಲ್ಲ!

ಸಮಾಜ ಬಾಂಧವರೇ ಇಂತಹ ಒಂದು ದಾರುಣ ಸ್ಥಿತಿಯಲ್ಲಿ ವೀರ ಶೈವರು ಮಾತ್ರವಲ್ಲದೆ ಮಾನವಕೋಟಿಯ ಮಾರ್ಗದರ್ಶನವನ್ನು ಹೊಂದ ಬಲ್ಲ ವಿಶ್ವಧರ್ಮ ತತ್ವವನ್ನೊಳಗೊಂಡ ಈ ಅಪಾರ ವಚನ ರಾಶಿಯನ್ನು ಹೊರತೆಗೆಯಲು ಅನಂತ ಕಷ್ಟಗಳನ್ನನುಭವಿಸುತ್ತ ಶರಣ ಜೀವನವನ್ನು ನಡೆ ಸುತ್ತಲಿರುವ ಈ ಬಾಂಧವರಿಗೆ ನಾವು ಅಗತ್ಯವಾಗಿ ಸಹಾಯ ಮಾಡಬೇಕು. ಇವರಿಗೆ ನಿಧಿ ಅರ್ಪಿಸಲು ಅನೇಕ ಸಂಸ್ಥೆಗಳು ಯತ್ನಿಸುತ್ತಲಿವೆ. ಆದರೆ ಇದು ಆದಷ್ಟು ಜಾಗ್ರತೆ ಕೈಗೂಡಬೇಕು. ಅಲ್ಲದೆ ಇವರು ನಡೆಸುತ್ತಲಿರುವ ಪತ್ರಿಕೆಯು ಜನಜಾಗ್ರತೆಗೆ ತುಂಬ ಸಹಾಯಕವಾಗಿದ್ದು ಮಾರ್ಗದರ್ಶಕ ವಾಗಿರುವದರಿಂದ ಈ ಪತ್ರಿಕೆಯನ್ನಾದರೂ ಹೊಸದಾಗಿ ಸ್ಥಾಪಿಸಲ್ಪಡುವ ಕೇಂದ್ರ ಸಂಸ್ಥೆಯು ತನ್ನ ಕೈಗೆ ತೆಗೆದುಕೊಂಡು ತುಂಬ ವ್ಯಾಪ್ತಿಯಾಗುವಂತೆ ಭಾರತದ ಎಲ್ಲ ಭಾಷೆಯಲ್ಲಿಯೂ ಸಾಧ್ಯವಾಗದಿದ್ದರೆ ಹಿಂದಿ, ಇಂಗ್ಲೀಷ ಭಾಷೆಯಲ್ಲಾದರೂ ಪರಿವರ್ತಕವಾಗುವಂತೆ ಮಾಡುವದರ ಮೂಲಕ ಶರಣ ಬಾಂಧವರ ಮತ್ತು ಅವರ ಅನುಯಾಯಿಗಳ ಸಹಾಯ ಸಂಪರ್ಕವನ್ನು ಹೊಂದುವದಕ್ಕೆ ಅವಕಾಶವನ್ನು ಕಲ್ಪಿಸಿಕೊಡಬೇಕು.

ಹೀಗೆ ಸ್ಥಾಪಿತವಾದ ಅಥವಾ ಪರಿವರ್ತನೆ ಹೊಂದಿದ ಒಂದು ಕೇಂದ್ರ ಸಂಸ್ಥೆಯು ಪತ್ರಿಕೆಗಳ ಮೂಲಕ ಪ್ರಚಾರ ಕಾರ್ಯವನ್ನು ಕೈಕೊಳ್ಳುವುದರ ಜೊತೆಗೆ ಸಾಹಿತ್ಯ ಪ್ರಚಾರ ದೃಷ್ಟಿಯಿಂದ ಬೃಹದ್ ಗ್ರಂಥಗಳನ್ನು ಅಂದರೆ ಹತ್ತು ರೂಪಾಯಿ ಬೆಲೆಯ ಚನ್ನ ಬಸವ ಪುರಾಣದಂತಹ ಮಹಾ ಕಾವ್ಯ ವನ್ನು ಕೇವಲ ಒಂದೆರಡು ರೂಪಾಯಿಗೆ ದೊರೆಯುವಂತೆ ಮಾಡಬೇಕು. ಇದಕ್ಕೆ ಇಂತಹ ಸಂಸ್ಥೆಗಳ ಆಶ್ರಯದಲ್ಲಿ "ಸಹಕಾರ" ತತ್ವದ ಮೇಲಾಗಲಿ (ಈಗಾಗಲೇ ಧಾರವಾಡದಲ್ಲಿ ಶ್ರೀ ಎಸ್. ಪಿ. ಪಾಟೀಲರವರ ಅಮೃತ ಹಸ್ತ ದಿಂದ ಪ್ರಾರಂಭವಾಗಿ ಇಂತಹ ಸಂಘವು ಕೆಲಸ ಮಾಡುತ್ತಲಿದೆ.) ಅಪಾರ ಹಣ ಶೇಖರಿಸುವುದರ ಮೂಲಕವಾಗಲೀ ಇದನ್ನು ನಡೆಸಬಹುದು. ಇದಕ್ಕೆ ಬೇಕಾದ ತಜ್ಞರ ಒಂದು ಸಮಿತಿಯನ್ನು ರಚಿಸಿ, ಅವರ ಸಲಹೆಯಂತೆ ಕೆಲಸ ಮಾಡಿ ಸುಲಭ ಬೆಲೆಗೆ ಕಾವ್ಯಗಳು ದೊರೆಯುವಂತೆ ಮಾಡಬಹುದು.

ಕನ್ನನ ನಾಡಿನಲ್ಲಿ ೧೨ನೇ ಶತಮಾನದ ಒಂದು ಕ್ರಾಂತಿಯು ಕೇವಲ ಧಾರ್ಮಿಕವಲ್ಲದೆ, ಸಾಹಿತಿಕ, ನೈತಿಕ, ಔದ್ಯೋಗಿಕದಲ್ಲಿಯೂ ನಡೆದು ತನ್ನ ಅಪಾರ ತೇಜಸ್ಸನ್ನು ಎಲ್ಲೆಡೆಯಲ್ಲಿಯೂ ಬೀರಿ ಸ್ಥಿರವಾದ ತಳಹದಿ ಹಾಕಿ ದುದರಿಂದಲೇ ಆ ಜ್ಯೋತಿಯು ಶಾಶ್ವತವಾಗಿ ನಿಂತು ಅದರ ನಂತರ ಬಂದ

ಇತರ ಧಾರ್ಮಿಕ ದಾಳಿಯನ್ನು ಎದುರಿಸಿ, ಗಾಳಿ, ಮಳೆ, ಬಿಸಿಲುಗಳಿಂದ ಕಿಚ್ಚನ್ನು ಕಳೆದುಕೊಳ್ಳದ ಸ್ಥಾಣುವಿನಂತೆಯೂ, ಬೂದಿಯಿಂದ ಮುಚ್ಚಲ್ಪಟ್ಟ ಜ್ಯೋತಿಯಂತೆಯೂ ಇದ್ದು ತನ್ನ ಸಂಸ್ಕೃತಿಯನ್ನು ಉಳಿಸಿಕೊಂಡು ಮತ್ತೆ ಪ್ರಕಾಶಮಾನವಾಗಿ ಕನ್ನಡನಾಡಿನ ಉದಯದೊಂದಿಗೆ ಮುನ್ನಡೆಯಲು ಯತ್ನಿಸಿದೆಯೋ ಎನ್ನುವಂತೆ ಜನಜಾಗ್ರತೆಯಾಗಿ ಶರಣರ ತತ್ವಾದಿಗಳು ಸಂಘ ಸಂಸ್ಥೆಗಳ ಮೂಲಕ ಕಥೆ, ಕವನ, ಜಯಂತಿಗಳ ರೂಪದಲ್ಲಿ ಪ್ರಚಾರವಾಗುತ್ತಲಿವೆ. ಕಾಲಜ್ಞಾನ ಸೂಚನೆಯೋ ಎನ್ನುವಂತೆ ನಾಡಿನ ಕಲ್ಯಾಣಕ್ಕಾಗಿ ತನ್ನ ಸಂದೇಶವನ್ನು ಸಾರಲು ಹಿಡಿದೆದ್ದು ನಿಂತ ಕುರುಹೋ ಎನ್ನುವಂತೆ ಅಖಿಲ ಭಾರತ ವೀರಶೈವ ಮಹಾ ಸಭೆಯು ೧೬ ನೆಯ ಅಧಿವೇಶನವು ಬಸವಕಲ್ಯಾಣದಲ್ಲಿಯೇ ನಡೆದು, ತನ್ನ ತತ್ವವನ್ನು ಸಾರಿತು. ಈ ಮಹಾಸಭೆಯ ಅಧ್ಯಕ್ಷ ಗದ್ದುಗೆಯಿಂದ ಶ್ರೀ. ಮ. ನಿ. ಪ್ರ. ಸಂಗನ ಬಸವ ಶಿವಯೋಗಿಗಳು ಬಂಥನಾಳ ಇವರು ಸ್ವಾಮಿಗಳನ್ನು ಕುರಿತು "ಕೇಂದ್ರ ಸರಕಾರದವರ ಕಾಯಿದೆದೆಸೆಯಿಂದ ನಿಮ್ಮ ಆಸ್ತಿಗಳು ಕರಗುವ ಸ್ಥಿತಿಗ ಬರುತ್ತವೆ. ಆದರೆ ಹಾಗೆ ಕರಗುವುದಕ್ಕೆ ಮುಂಚೆ ನಿಮ್ಮ ಆಸ್ತಿಯಲ್ಲಿನ ಸಹಾಯದಿಂದ ಸಾಹಿತ್ಯಕ್ಕಾಗಿ ಸಹಾಯ ಮಾಡಬೇಕು" ಎಂದು ಅಪ್ಪಣೆ ಕೊಡಿಸಿದ್ದರು. ಆದರೆ ಹೀಗೆ ಹೇಳಿದಾಕ್ಷಣ ಯಾವ ಮಠಾಧೀಶ್ವರರೂ ಈ ಕಾರ್ಯ ಕೈಕೊಂಡಿಲ್ಲವೆಂದಲ್ಲ. ನವಕಲ್ಯಾಣಮಠ, ಮೂರುಸಾವಿರವರು, ನಿಡುಮಾಮಿಡಿ ಸಂಸ್ಥಾನ, ಸಿದ್ಧಗಂಗಾಮಠ, ಸುತ್ತೂರು ವೀರಸಿಂಹಾಸನ ಗದ್ದುಗೆ, ಚಿತ್ರದುರ್ಗದ ಬೃಹನ್ಮಠ, ಕುಂಭಕೋಣದ ಪೆರಿಯಮಠ, ಸೊಲ್ಲಾಪುರದ ಕಿರೀಟಮಠ, ಶ್ರೀಶೈಲದ ಸೂರ್ಯಸಿಂಹಾಸನಮಠ ಇತ್ಯಾದಿ, ಇತ್ಯಾದಿ ಅನಂತಮಠಗಳ ಧರ್ಮಾಧಿಕಾರಿಗಳು ಅಪಾರ ಸೇವೆಯನ್ನು ಸಲ್ಲಿಸಿಯೂ, ಸಲ್ಲಿಸುತ್ತಲೂ ಇದ್ದಾರೆ. ಇದರಂತೆ ಈ ಕಾರ್ಯಕ್ಕೆ ಹೊರತಾದ ಮಠಾಧೀಶ್ವರರೂ ಇವರ ಅನುಕರಣೆ ಮಾಡಿ ಅನಂತ ಧನ ಸಂಚಯ ಮಾಡಬೇಕೆಂಬುದೇ ಇದರ ಮಥಿತಾರ್ಥ. ಇವರೊಂದಿಗೆ, ಸಮಾಜ ಬಾಂಧವರೇ, ಅಕ್ಕನ ಬಳಗದವರೇ, ತರುಣಮಿತ್ರರೇ, ಧನಾಧಿಪತಿಗಳೇ, ಅಧಿಕಾರಿಗಳೇ, ವಿದ್ಯಾರ್ಥಿಗಳೇ, ಕಷ್ಟಜೀವಿಗಳೇ, ವಿಶ್ವ ಧರ್ಮಾಭಿಮಾನಿಗಳೇ, ತಮ್ಮೆಲ್ಲರ ಉದಾರ ಹಸ್ತ ಸಹಾಯದಿಂದ ಆದಷ್ಟು ಜಾಗ್ರತೆಯಾಗಿ ಒಂದು ನಿಧಿಯನ್ನು ಕೂಡಿಸಿ ಅತಿ ಜರೂರಾಗಿಯೂ, ಅವಶ್ಯಕವಾಗಿಯೂ ಬೇಕಾಗಿರುವ ಒಂದು "ಕೇಂದ್ರ ಸಾಹಿತ್ಯ ಪ್ರಚಾರ ಸಂಘ" ಕ್ಕೆ ಪ್ರಯತ್ನಿಸಿ ಕಾರ್ಯೋನ್ಮುಖರಾಗಬೇಕಾಗಿ ಅನಂತ ಕಳಕಳಿಯಿಂದ ತಮ್ಮನ್ನು ಬೇಡುತ್ತೇನೆ.

# ವೈಭವ ಮತ್ತು ವೈರಾಗ್ಯ.

ಶ್ರೀ. ಮ. ನಿ. ಪ್ರ. ಸ್ವ. ಶ್ರೀ ಗುರುಶಾಂತಲಿಂಗ ಮಹಾಸ್ವಾಮಿಗಳು ದುಧನಿ,

ಅಕ್ಕಲಕೋಟ.

ಅವರ ಪ್ರವಚನದ ಪ್ರಸಾದ ವಾಣಿ (೧)

(ಸಂಗ್ರಾಹಕರುಃ— ಶ್ರೀ ಸುರೇಶ ಹೊಸಟ್ಟಿ, ಮು.-ದುಧನಿ.)

ವೈಭವಸಂಪನ್ನನಾಗಿ ಮಾನವನು ಮೆರೆದು ಕೊನೆಗೊಂದುದಿನ ಮಣ್ಣಿನಲ್ಲಿ ಮಣ್ಣಾಗುವನು. ತನ್ನ ಸಂಪತ್ತಿನ ಸುಖವಿಲಾಸದಲ್ಲಿ ಮೈಮರೆತು ಎಷ್ಟೋ ಅನ್ಯಾಯ-ಅತ್ಯಾಚಾರ, ಅಕೃತ್ಯಗಳನ್ನು ಮಾಡಿ ಮುಗಿಸುವನು. ತನ್ನ ಕೀರ್ತಿಯನ್ನು ಕಲ್ಲುಗಳ ಮೇಲೆ, ತಾಮ್ರದ ಪಟದ ಮೇಲೆ ಬರೆಯಿಸುವನು. ಇಲ್ಲಿ ಬದುಕಿರುವ ವರೆಗೆ, ಶಕ್ತಿಯುಕ್ತಿಗಳಿರುವವರೆಗೆ ಸಾಧನ ಸಾಮಗ್ರಿಗಳು ಸಿಗುವ ವರೆಗೆ ಆಯುಷ್ಯ ರೇಖೆ ಮುಗಿಯುವವರೆಗೆ ಈ ಭೂಮಿ ಮೇಲೆ ನಾಟಕವಾಡುವನು, "ಸಂಸಾರವೆಂಬುದೊಂದು ಸಂಠೆಯ ಮಂದಿ. ಕಂಡಯ್ಯ" ಅನ್ನುವ ಶರಣರ ದಿವ್ಯ ಸಂದೇಶ ಅವನಿಗೆ ಅರ್ಥವಾಗುವದಿಲ್ಲ. ಆಗ ಇದು ನನ್ನ ರಾಜ್ಯ, ಇದು ನನ್ನ ಮನೆ, ಇವರು ನನ್ನ ಹೆಂಡಿರು ಮಕ್ಕಳು, ಬಂಧು-ಬಾಂಧವರು, ಇದು ನನ್ನ ಸಂಪತ್ತು, ಇದು ನನ್ನ ಭೂಮಿ, ಎಂದು ಈ ಬೌತಿಕ ಭಾವನಾತ್ಮಕದಲ್ಲಿಯೇ ಜೀವನ ಕಳೆಯುವನು. ಕೊನೆಗೆ ಸಾಯುವ ಸಮಯದಲ್ಲಿ ಯಾವ ಸಂಪತ್ತು, ಯಾವ ಸಂಬಂಧಿಕರು, ಯಾವುದೂ ಕೈಗೆ, ಕಣ್ಣಿಗೆ ಕಾಣದಾಗುವದು. ಆಗ ಅವನಿಗೆ ಜ್ಞಾನೋದಯವಾಗುವದು. ಆದರೇನು? "ಹೊತ್ತುಹೋಗದ ಮುನ್ನ, ಮೃತ್ಯು ಮುಟ್ಟದ ಮುನ್ನ, ಪೂಜಿಸೋ ನಮ್ಮ ಕೂಡಲಸಂಗನ ಎನ್ನುವ ಮಾತು ಅವನಿಗೆ ಈ ಮೊದಲು ತಿಳಿದಿರುವದಿಲ್ಲ. ದೇವಕೊಟ್ಟ ಈ ದೇಹವೆಂಬ ಬಾಡಿಗೆಯ ಮನೆಯಲ್ಲಿದ್ದು, ಅವನಿಗೆ ಕೊಡಬೇಕಾದ ಪುಣ್ಯದ, ಪವಿತ್ರದ, ಬಾಡಿಗೆ ಕೊಡದೆ ಪಾಪ ಪೀಡೆಗಳಿಂದಲೇ ದೂರವಾಗುತ್ತಾನೆ. ಇಂಥವರು ಶಿವನ ಸಾಯುಜ್ಯಪದಕ್ಕೆ ಶಿವನ ಪಾದಕ್ಕೆ ಸಲ್ಲರು. "ಬೆಣ್ಣೆಗಾಗಿ ಸತ್ತ

ವರು ಕೋಟಿ, ಮಣ್ಣಿಗಾಗಿ ಸತ್ತವರು ಕೋಟಿ, ಹೊನ್ನಿಗಾಗಿ ಸತ್ತವರು ಕೋಟಿ, ಆದರೆ ನಿನಗಾಗಿ ಸತ್ತವರನೊಬ್ಬರನೂ ಕಾಣೆ, ಎನ್ನುವ ಅಮರ ನುಡಿ ಸಾವಿನ ಸಮಯದಲ್ಲಿ ತಿಳಿದು ಫಲವೇನು ? ಸತ್ತಮೇಲೆ ಸಾಮ್ರಾಜ್ಯ ಬಂದರೇನು ? ಎನ್ನುವಂತೆ ಆಯುಷ್ಯವಿದ್ದಾಗ ಅನಂತರೂಪಿಯಾದ, ಅಖಂಡ ಶಿವಮಯ ಮಂತ್ರ, ಜಪ, ತಪ, ನೇಮನಿಷ್ಠೆ ಇಲ್ಲದೆ ಬದುಕಿದವನು ನಾಯಿ–ಹಂದಿಗಳಿಗೂ ಕಂಕಷ್ಟವೆನ್ನುವಂತೆ ಆಗುವದು. ಅದಕ್ಕಾಗಿ ತಾವೆಲ್ಲ ಈ ಅಸ್ಥಿರವಾದ ಪಂಚಭೂತಾತ್ಮಕ ಶರೀರ ಬಿದ್ದು ಹೋಗುವುದರಲ್ಲಿ ಶಿವನ ಸಾಕ್ಷಾತ್ಕಾರವನ್ನು ಪಡೆಯಬೇಕು. ಶಿವನ ಒಲುಮೆ, ಶಿವನ ಕೃಪೆ, ಶಿವನ ಸ್ವರೂಪ ತಿಳಿದು ಶಿವಮುಕ್ತನಾಗಬೇಕು.

## (೨) ಜೀವನ ಜ್ಯೋತಿ

ಶರೀರವೆಂಬುದೊಂದು ಪ್ರಣತಿ; ಮನಸ್ಸೆಂಬುದೊಂದು ಬತ್ತಿ; ಜೀವ (ಆತ್ಮ)ವೆಂಬುದೊಂದು ಜ್ಯೋತಿ ಅದು ಸದಾವ ಕಾಲ ತನುಮನವನ್ನು ಬೆಳಗುತ್ತಿರಬೇಕು. ಬದುಕಿರುವ ವರೆಗೆ ಆ ದೀಪಕ್ಕೆ ಸಂಯಮ, ಸಾಧನ, ಸತ್‌ಸಂಗ, ಶರಣರ ಸಹವಾಸದ ಶುದ್ಧ ತೈಲವನೆರೆದು ಹೊತ್ತಿಸಬೇಕು. ಮಾಯೆ ಮಮಕಾರಗಳೆಂಬ; ಆಶೆ ಆಮಿಷಗಳೆಂಬ; ಕೋಪ ತಾಪತ್ರಯಗಳೆಂಬ; ಕಾಮಿನಿ ಕೀರ್ತಿ ಕಾಂಚನಗಳೆಂಬ ಬಿರುಗಾಳಿಗಳು ಬಂದು ಆರಿಸಲು ಪ್ರಾರಂಭಿಸುವವು. ಆ ಅಲ್ಪ ತೃಪ್ತಿಗೆ ಒಳಗಾಗಿ ಅಖಂಡ ಜ್ಯೋತಿಯನ್ನು ನಂದಿಸುವ ಆಶೆ ಮಾಡಬಾರದು. ಪತಂಗವು ಇಡೀ ದೀಪವನ್ನೇ ನುಂಗುವೆ ಎನ್ನುವ ಅಭಿಲಾಷೆಯಿಂದ ದೀಪದ ಮೇಲೆ ದಾಳಿ ಮಾಡೇ ಮಾಡುವದು. ಆದರೆ ಕೊನೆಗೆ ಅದೇ ಆ ಬೆಂಕಿಯಲ್ಲಿ (ದೀಪದಲ್ಲಿ) ಬಿದ್ದು ಸತ್ತುಹೋಗುವದು. ಇದೇ ಪ್ರಕಾರ ಮಾನವನು ಪತಂಗದಂತೆ ಆಶೆಯದ ಬೆಂಬತ್ತಿ ಸಂಸಾರ ಸುಖಕ್ಕೆ ಮನಸೋತು ಇದೇ ಸತ್ಯ, ಇದೇ ನಿತ್ಯ ಎನ್ನುವ ಟೊಳ್ಳು ವಿಚಾರಕ್ಕೇ ಮನಗೊಟ್ಟು ಹೃದಯದಲ್ಲಿ ಕತ್ತಲೆ ತುಂಬಿಕೊಳ್ಳುತ್ತಾನೆ. ಆದರಲ್ಲಿಯೇ ಅವನು ಸುಟ್ಟು ಹೋಗುತ್ತಾನೆ. "ಹೊತ್ತುಗಳೆಯಬೇಡ ಮರುಳೇ ಮತ್ತೆ ಬಾರದು ಈ ಮಾನವ ಜೀವ ಎನ್ನುವ ಬದುಕಿನ ಸೂತ್ರವನ್ನು ಅರಿಯಲಾರ. ಪ್ರಣತಿ ಒಡೆದು, ಬತ್ತಿ ಹರಿದು, ಜ್ಯೋತಿ ಅಖಂಡ ರೂಪವನ್ನು ಸೇರದೆ ಯಾವುದೋ ಮತ್ತೆ ಕ್ಷುದ್ರ ಪ್ರಾಣಿಯಾಗಿ ಹುಟ್ಟಬೇಕಾಗುವದು. " ಪುನರಪಿ ಜನನಂ; ಪುನರಪಿ ಮರಣಂ " ಎನ್ನುವ

ಹುಟ್ಟು ಸಾವುಗಳ ಚಕ್ರದಲ್ಲಿ ತಿರುಗಲು ಪ್ರಾರಂಭವಾಗುವದು. ಅದಕ್ಕಾಗಿ ಸಾವು ನೀಗುವ ಮೊದಲು ಸದಾಚಾರ, ಸುವಿಚಾರ ಸುಶೀಲರಾಗಿ ಬಾಳಿ ಬದುಕಬೇಕು. ನಾಲ್ಕು ದಿನದ ಈ ಬಾಳು ವ್ಯಾಮೋಹದಲ್ಲಿ ಉರುಳಾಡಿ ಸದೆ, ಮಾಯೆಯಲ್ಲಿ ಮುಸುಕದೆ ಜ್ಞಾನದೀಪ ಹೊತ್ತಿಸಿ ಬ್ರಹ್ಮ ಪದವಿ ಯನ್ನು ಪಡೆಯಲು ಸಾಧನೆ ಮಾಡಬೇಕು. ಶಿವಾನುಭವಿಗಳಾಗಿ ಶರಣರ, ಸಂತರ ಸೇವಕರಾಗಿ ಲಿಂಗಜಂಗಮ ಭಕ್ತರಾಗಿ, ಜೀವನ ಜ್ಯೋತಿ ಬೆಳಗಿಸಿ ಶಿವನ ಕರುಣೆಯ ನಂದಾದೀಪವಾಗಿ ಬೆಳಗಿರಿ.

## (೩) ಗುರುಕಾರುಣ್ಯ.

ಮಾನವನು ಮುಕ್ತನಾಗಬೇಕಾದರೆ ಗುರುಕಾರುಣ್ಯವನ್ನು ಪಡೆಯಲೇ ಬೇಕಾಗುವದು. ಈ ಭವಸಾಗರದಲ್ಲಿ ಜೀವನ ಡೋಣಿ ಕೊನೆಗೆ ಮುಟ್ಟ ಬೇಕಾದರೆ ಗುರುವಿನ ದಿವ್ಯಕೃಪೆ, ದಿವ್ಯಾಶೀರ್ವಾದ, ದಿವ್ಯ ಮಾರ್ಗದರ್ಶನ ಬೇಕೇಬೇಕು. ಇಲ್ಲವಾದರೆ ಅನಂತ ಅನುವು ಆಪತ್ತಿನ ಅಲೆಗಳು, ಸುಖ ದುಃಖದ ತೆರೆಗಳು ಬಂದು ಬಡಿದು ಮುಳುಗಿಸಲು ಹವಣಿಸುವವು. ಅಂಥ ವುಗಳನ್ನು ಸೈರಿಸಿ ಜಯಿಸಬೇಕಾದರೆ ಗುರುವಿನ ಮಾರ್ಗದರ್ಶನ ಹಿತೋಪ ದೇಶ ಅವಶ್ಯವಾದುದು. "ಎತ್ತಾಗಿ ತೊತ್ತಾಗಿ ಹಿತ್ತಲದ ಗಿಡವಾಗಿ ಮತ್ತೆ ಗುರುವಿನ ಪಾದಕೆರವಾಗಿ ಗುರುವಿನ ಹತ್ತಿರಿರು" ಎಂದ ಅಮೃತ ವಚನವ ಹಾಗೆ; ಗುರುವಿನ ಸಾನ್ನಿಧ್ಯ ಪಡೆಯಲೇಬೇಕು. "ಹರಮುನಿದರೆ ಗುರು ಕಾಯ್ವ, ಗುರುಮುನಿದರೆ ಹರ ಕಾಯಲಾರ'' ಎನ್ನುವದು ತಿಳಿದಿರಬೇಕು. ಗುರು ಪ್ರತ್ಯಕ್ಷ ದೇವಸ್ವರೂಪಿ, ಗು= ಅಂದರೆ ಅಂಧಃಕಾರ ಪಲಾಯನ ರು= ಅಂದರೆ ಮನಸ್ಸಿನ ಮಲಿನತೆ ನೀಗಿಸುವವ; ಗುರುವಾದವನು. ಈ ಬಾಳ ಕತ್ತಲನ್ನು ನೀಗಿಸಿ ಮನಸ್ಸಿನ ಮಲಿನತೆಯನ್ನು ಮಾಯವಾಡಿ ಶುದ್ಧಾತ್ಮಗೊಳಿಸುವನು. ಗುರು ಎಲ್ಲೇ ಇರಲಿ "ಸ್ಮೃತಿಮಾತ್ರೇಣ ಕೂರ್ಮ್ಮ ದೃಷ್ಟಿ ಮಾತ್ರೇಣ ಮತ್ಸ್ಯ ಸ್ಪರ್ಶ ಮಾತ್ರೇಣ ಪರುಷ'' ಹೀಗೆ ನೆನೆದರೆ, ನೋಡಿದರೆ, ಮುಟ್ಟಿದರೆ ಉದ್ಧಾರವಾಗುವದು. ಗುರುಮುಖದಿಂದ ತಿಳಿದ ಈ ನಿಗೂಢ ತತ್ವ ಮತ್ತಾರಿಂದಲೂ ತಿಳಿಯಲು ಸಾಧ್ಯವಿಲ್ಲ. ಗುರುವಿನ ಕೃಪಾಕ್ಷೇತ್ರದಲ್ಲಿ ನವಲತೆಯಾಗಿ ಬೆಳೆದು ಪರಿಪುಷ್ಪ ಪ್ರಫುಲ್ಲಿತ ಈ ಪುಷ್ಪ ವನ್ನು ಅರಳಿಸಬೇಕು. ಅದನ್ನು ಶಿವನ ಪಾದಕ್ಕೆ ಮುಡುಪಿಡಬೇಕು. ಗುರುವೇ

ಇಹ-ಪರಗಳೆರಡಕ್ಕೂ ಸಾಧನ ಸಂಜೀವಿನಿ ಅವನ ಕಾರುಣ್ಯಮಯ ದೃಷ್ಟಿ ಒಮ್ಮೆ ಆದರೆ ಮುಗಿಯಿತು. ವಿಮುಕ್ತನಾದಂತೆಯೇ. ಅದಕ್ಕಾಗಿ ವೀರಶೈವರು ಗುರು, ಲಿಂಗ ಜಂಗಮಕ್ಕೆ ಹೆಚ್ಚು ಮಹತ್ವ ಕೊಟ್ಟಿದ್ದಾರೆ.

## (೪) ಪರೋಪಕಾರ ಪಾರಮಾರ್ಥ

"ಪರೋಪಕಾರಾರ್ಥ ಇದಂ ಶರೀರಂ'' ಎಂಬ ಉಕ್ತಿಯಂತೆ ಪರೋಪಕಾರಕ್ಕಾಗಿಯೇ ಈ ಶರೀರ ಹುಟ್ಟಿಬಂದುದು. ಜಗತ್ತಿನಲ್ಲಿಯ ಪ್ರತಿಯೊಂದ ಜಡಾಜಡ ವಸ್ತುಸ್ಥಿತಿ ವಿಚಾರ ವಿವೇಕದಿಂದ ನೋಡಿದರೆ ಪರೋಪಕಾರಕ್ಕಾಗಿಯೇ ವಿನಿಯೋಗವಾಗುತ್ತಿವೆ. ನದಿಯ ನೀರು ಹರಿಯುತ್ತಿರುವುದು ತನ್ನ ತೃಷೆಯನ್ನು ನೀಗಿಸಿಕೊಳ್ಳುವದಕ್ಕಾಗಿ ಅಲ್ಲ, ಪರೋಪಕಾರಕ್ಕಾಗಿ ಪರಮಾತ್ಮನಿತ್ತ ಸಾಧನ ಸಾಹಿತ್ಯವದು. ಅನೇ ಪ್ರಕಕರ ಗಿಡ ಹಣ್ಣು ಕೊಡುವದು. ಬಳ್ಳಿ ಹೂ ಕೊಡುವದು, ಆಕಳು ಹಾಲು ಕೊಡುವದು. ಸೂರ್ಯ ಪ್ರಕಾಶ ಕೊಡುವದು, ಹಕ್ಕಿ ಹಾಡುವದು, ಭೂಮಿ ಬೆಳೆ ಕೊಡುವದು, ಮೋಡ ಮಳೆ ಗರಿಯುವದು, ಹೀಗೆ ವೈವಿಧ್ಯ ಮಯಗೊಂಡ ಜಗತ್ತಿನಲ್ಲಿ ಪರೋಪಕಾರಕ್ಕಾಗಿಯೇ ಈ ಕಾರ್ಯಗಳು ದೇವಸೃಷ್ಟಿಯಲ್ಲಿ ನಡೆಯುತ್ತವೆ. ಆದರೆ ಮಾನವನಿಂದ ಮಾತ್ರ ಈ ಕಾರ್ಯ ಆಗುವದಿಲ್ಲ. ಯಾಕಂದರೆ ತನ್ನ ಪ್ರಪಂಚದ ವ್ಯಾಮೋಹದಲ್ಲಿ ತೊಡಗಿ ಜಗತ್ತಿನ ಲಾಭವನ್ನೇ ತಾನು ಅಪೇಕ್ಷಿಸುವನು. ತನ್ನ ಲಾಭವನ್ನು ತನ್ನ ಉಪಕಾರವನ್ನು ಮಾಡುವದು ಅರಿತಿರುವದಿಲ್ಲ. ಪರೋಪಕಾರ ಬುದ್ಧಿ, ಮನಸ್ಸು, ಹೃದಯವಿರಬೇಕಾದರೆ ಪಾರಮಾರ್ಥದ ಪೀಠವೇರಿದಾಗಲೇ ಸಾಧ್ಯ. ಪಾರಮಾರ್ಥದಿಂದ ಸತ್ಯಸತ್ಯ ನ್ಯಾಯಾನ್ಯಾಯ, ಶಾಶ್ವತ ಅಶಾ ಮುಂತಾದ ತಾರತಮ್ಯ ಭಾವಬಂದು ವಿಮುಕ್ತತೆಯ ಮಾರ್ಗಾವಲಂಬಿಯಾಗಿ-"ತನ್ನಂತೆ ಪರರು'' ಎನ್ನುವ ಭಾವ ಬಂದು ಪರೋಪಕಾರಕ್ಕಾಗಿಯೇ ಈ ಜೀವನ ಕಳೆಯುವನು.

ಪರೋಪಕಾರಕ್ಕೂ ಪಾರಮಾರ್ಥಕ್ಕೂ ಏನು ಸಂಬಂಧ? ಪರೋಪಕಾರ ವೃತ್ತಿ ವಿಚಾರ ಪಾರಮಾರ್ಥದ ಪ್ರಥಮ ಪಾವಟಿಗೆ ನಿರ್ವಿಕಲ್ಪ ಬುದ್ಧಿಯಿಂದ ಸದ-ಸದ್ ವಿವೇಕದಿಂದ ದೇವಭಾವದಿಂದ ನಿಸ್ವಾರ್ಥತೆಯಿಂದ ಪರೋಪಕಾರಿ ತನ್ನ ಕಾರ್ಯಮಾಡಬೇಕು. ಕೇವಲ ಕೊಡುವದರಲ್ಲಿ ಬೇಡುವ ಭಾವವಾಗಲಿ, ಆಶೆಯಾಗಲಿ, ಸಂಕಲ್ಪವಾಗಲಿ ಇರಕೂಡದು. ಅದಕ್ಕಾಗಿ ಬಸವಣ್ಣನವರು "ತನು ನಿಮ್ಮದು, ಮನ ನಿಮ್ಮದು, ಗಾಳಿ, ಬೆಳೆ, ಭೂಮಿ,

ಎಲ್ಲಾ ನಿಮ್ಮವು, ನನ್ನವೆಂದು ನಂಬದವರನ್ನೇನು ಅನ್ನುವೆ. ದೇವಾ'' ಎಂದಿದ್ದಾರೆ. ಈ ರೀತಿಯಿಂದ ಸರ್ವಾರ್ಪಣಾರ್ಪಿತವಾಗಿ ಕೊಟ್ಟು ಬಿಡಬೇಕು. ಕೇವಲ ಪ್ರತಿಷ್ಠೆಗಾಗಿ, ಪ್ರಚಾರಕ್ಕಾಗಿ, ಕೀರ್ತಿ, ಕಾಮಿನಿ, ಕಾಂಚನಕ್ಕಾಗಿ ಪರೋಪಕಾರ ಮಾಡುತ್ತಿದ್ದರೆ ಅದು ವ್ಯರ್ಥ. ಅದು ಆಡಂಬರದ ಬುರುಗು. ಅದು ಇಂದಿಲ್ಲ ನಾಳೆ ಕರಿಗಿ ಹೋಗಬೇಕು. ಕಾರಣ ಶುದ್ಧ ಮನಸ್ಸಿನಿಂದ ನಿರ್ಮಲ ಚಿತ್ತದಿಂದ ಪರೋಪಕಾರ ಮಾಡಬೇಕೇಹೊರ್ತು ಸ್ವಾರ್ಥದ ಸ್ವಂತ ಸುಖದ ಸುಳಿಗಾಳಿ ಕೂಡ ಸುಳಿಯಬಾರದು. ನಶ್ವರಶರೀರ ನಂಬಿ ನನ್ನದು ಎಂದು ಅಹಂದಲ್ಲಿ ಅಳಿಯದೆ ನಿನ್ನದು ನೀನ್ನೆ ಎಂದು ಜೀದಿಸುವದೇ ಪಾರ ಮಾರ್ಥದ ಪವಿತ್ರ ಕಾರ್ಯ. ಇದೇ ಶರಣರ ಸಂದೇಶ.

## ೫ ಮಾನವನ ಆರುಮಂದಿ ಬಾಂಧವರು

ಸತ್ಯಂ ಮಾತಾಃ— ಮನುಷ್ಯನಿಗೆ ಸತ್ಯವೆನ್ನುವದು ತಾಯಿಗಿಂತಲೂ ಪ್ರಿಯವಾಗಿರಬೇಕು. ಮುತ್ತು ಒಡೆದರೆ, ಮಾತು ಆಡಿದರೆ; ತೀರಿತು. ನುಡಿಯುವ ಯಾವುದೇ ಮಾತು ಲಿಂಗಮೆಚ್ಚಿ ಅಹುದೆನ್ನುವಂಥದಿರಬೇಕು. ಸತ್ಯವನ್ನು ಎಂದಿಗೂ ಬಿಡಬಾರದು. ಎಲ್ಲವು ಕಳೆದುಕೊಂಡರೂ; ಎಲ್ಲವನ್ನೂ ದಾನವಾಗಿ ಕೊಟ್ಟರೂ; ಸತ್ಯವನ್ನು ಮಾತ್ರ ಕಾಯ್ದಿಟ್ಟುಕೊಂಡಿರಬೇಕು. (Truth is beauty) ಎನ್ನುವಂತೆ ಸತ್ಯವೇ ಸೌಂದರ್ಯವಾಗುವದು. ಸತ್ಯ ಕಳೆದುಕೊಂಡಾಗ ಜೀವಿಸಿದರೂ ಸತ್ತಂತೆ. ಅದಕ್ಕಾಗಿ ಗಾಂಧೀಜಿ ಸತ್ಯವನ್ನೇ ಆರಾಧಿಸುತ್ತಿದ್ದರು. ಶರಣರು ಸತ್ಯವನ್ನೇ ನುಡಿಯುತ್ತಿದ್ದರು. ಸತ್ಯವು ತಾಯಿಯಷ್ಟು ಪವಿತ್ರವಾದುದು.

ಪಿತಾಜ್ಞಾನಃ— ಜ್ಞಾನವೇ ತಂದೆ. ಜ್ಞಾನವೆಂದರೆ ಪುಸ್ತಕದಲ್ಲಿ ಆತ್ಮಜ್ಞಾನ; ಬ್ರಹ್ಮಜ್ಞಾನ; ಅಂಥ ಜ್ಞಾನದಿಂದ ಜೀವನ ಜಾಗ್ರತಗೊಂಡು ತನ್ನ ತಾನು ತಿಳಿದುಕೊಳ್ಳುವದು. ತಂದೆ ಜನ್ಮ ಕೊಟ್ಟುದು ಜ್ಞಾನ ಮುಕ್ತಿಗೆ ಕಾರಣವಾಗುವದು ತಂದೆಯಂತೆ ಜ್ಞಾನವೂ ಮಹತ್ವವುಳ್ಳದ್ದು ಅಂಥಾ ಜ್ಞಾನ ಸಂಪನ್ನರಾಗಬೇಕು. ಪಂಡಿತ ಪದವೀಧರರಾಗಬೇಕು ಒಬ್ಬ ಅನುಭವ ಎಂಜಲದಂತಿರುವ ಪುಸ್ತಕಜ್ಞಾನ ಎಲ್ಲಿ ಯಾರೂ ಅನುಭವಿಸದ ಅನಂತ ಆನಂದಮಯ ಬ್ರಹ್ಮಜ್ಞಾನ.

ಧರ್ಮೋಭ್ರಾತೃ:— ಸತ್ಯ ಜ್ಞಾನ ತಿಳಿದ ಮೇಲೆ ಧರ್ಮ ಬಿಟ್ಟಿರಲಾಗದು ದಯವೇ ಧರ್ಮ; ಸಕಲ ಜೀವಾತ್ಮರಿಗೆ ಲೇಸನು ಬಯಸವದೇ

ಧರ್ಮ; ನೀತಿಯಿಂದ ನಡೆಯುವದೇ ಧರ್ಮ; ಇಂಥ ಧರ್ಮ; ನಮ್ಮ ಒಡ ಹುಟ್ಟಿದವನಂತೆ ನಮ್ಮ ಜೊತೆಗೊಂಡು ಬೆಳೆಯುವದು; ಬೆಳಗುವದು.

ದಯಾಸಖಃ— ದಯೆಬೇಕು ಸಕಲ ಪ್ರಾಣಿಗಳಲ್ಲಿ ಅಂಥ ದಯದ ಸಖ್ಯವನ್ನು ಸದಾವಕಾಲ ಕಟ್ಟಬೇಕು ಸರ್ವತ್ರ ಪ್ರಾಣಿಗಳಲ್ಲಿ ಸಂಪ್ರೀತಿಯ ದೃಷ್ಟಿ ಪಡೆದವನಾಗಿರಬೇಕು ದಯದ ದೃಷ್ಟಿಯ ನೆರಳಿನಲ್ಲಿಯೇ ಜೀವಿಸ ಬೇಕು ಅದುವೇ ಪರಮ ಮಿತ್ರನೆಂದು ತಿಳಿದಿರಬೇಕು.

ಶಾಂತಿಃಪತ್ನಿ ಃ— ಶಾಂತಿಯು ಸಹಧರ್ಮಿಣಿಯಂತಿರಬೇಕು. ಎಂಥವೇ ಪ್ರಸಂಗವಿರಲಿ; ದುಷ್ಟ ಅಸುರೀಶಕ್ತಿಗಳಿಗೆ ಅವಕಾಶಕೊಡದೆ ಶಾಂತಿಯ ಆರಾಧಕರಾಗಬೇಕು.

ಕ್ಷಮಾಪುತ್ರಃ— ಕ್ಷಮೆಯು ಮಾನವನ ಒಂದು ದೊಡ್ಡ ಗುಣ. ಅಪರಾಧ ಅನಂತ ಕೋಟಿಯಾಗಿದ್ದರೂ ಕ್ಷಮೆಯ ಬುದ್ಧಿ ಅಚಲವಾಗಬಾ ದು ಕ್ಷಮೆ ನಮ್ಮ ಮಗುವಿನಂತೆ ಪ್ರೀತಿಯ ವಸ್ತುವಾಗಿರಬೇಕು. ಹೀಗೆ ಆರು ಬಾಂಧವರು ಮಾನವನಿಗೆ ಸದಾ ಬೆಂಗಾವಲಾಗಿ ನಿಂತಿದ್ದಾರೆ.

---

# ಕಲ್ಪನಾಮಯ ವಿಶ್ವ

[ ಲೇಖಕರುಃ— ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ. ]



ವಿಶ್ವವು ಇಷ್ಟೊಂದು ಮುಂದುವರೆದರೂ ಕೂಡ ವಿಶ್ವೋತ್ಪತ್ತಿಯು ಹೇಗಾಯಿತು ? ವಿಶ್ವನಿರ್ಮಾಣದ ಮೂಲಶಕ್ತಿಯಾವುದೆಂಬುದನ್ನು ಪರಿಶೀ ಲಿಸಲು ಅಸಮರ್ಥವಾಗಿದೆ. ಈ ದಿಶೆಯಲ್ಲಿ ಅನೇಕ ಶಾಸ್ತ್ರಜ್ಞರು ಸಂಶೋ ಧಿಸಿ ತೀರ್ಮಾನಕ್ಕೆ ತಂದದ್ದೇನಂದರೆ " ಈ ವಿಶ್ವವು ಸೂರ್ಯನಿಂದ ಸಿಡಿದು ಬಂದ ಒಂದು ತುಂಡು " ಈ ನುಡಿಯನ್ನು ಕೃತಿಯನ್ನಾಗಿಯೂ ಮಾರ್ಪಡಿಸಿ, ಆ ವಿಷಯದ ಬಗ್ಗೆ ಹೆಚ್ಚು ಚರ್ಚಿಸದೆ ಇನ್ನುಳಿದ ವಿಜ್ಞಾನಕ್ಕೆ ಕೈಹಾಕಿ ಇಂದಿನ ವೈಜ್ಞಾನಿಕರು ವಿಶ್ವಘಾತುಕವಾಗುವಂಥ ಅಣುಬಾಂಬು ಮುಂತಾ ದವುಗಳಿಗಾಗಿ ಹೆಚ್ಚು ಆಸ್ಥೆವಹಿಸುತ್ತಿರುವದು ಅಜ್ಞಾನತನವೇ ಸರಿ.

ವಿಶ್ವೋತ್ಪತ್ತಿಯಾಗಿ ಇಂತಿಷ್ಟು ವರ್ಷಗಳಳಿದವು ಎಂಬುದು ನಮಗೆ ಬೇಕಿಲ್ಲ. ವಿಶ್ವವು ನಾಶವಾಗುವ ಸಮಯವೂ ನಮಗೆ ಬೇಕಿಲ್ಲ. ನಮಗೆ

ಬೇಕಾದುದು ವಿಶ್ವನಿರ್ಮಾಣದ ಮೂಲ ಶಕ್ತಿ ಆವುದು ? ಇದನ್ನು ಬಿಟ್ಟು ವಿಜ್ಞಾನಿಗಳು ವಿಶ್ವೋತ್ಪತ್ತಿಯಾಗಿ ಇಂತಿಷ್ಟು ಕಾಲಗಳಾದವೆಂಬುದನ್ನು ಪರಿಶೀಲಿಸಿ, ಒಬ್ಬೊಬ್ಬರು ಒಂದೊಂದು ಬಗೆಯಾಗಿ ತೀರ್ಮಾನಿಸುತ್ತಿರುವದೂ ಕಲ್ಪನಾಮಯವೇ ಆಗಿದೆ ಏಕೆಂದರೆ, ಆಧಾರಗಳಿಲ್ಲದ ಮಾತಿನಲ್ಲಿ ಅರ್ಥವಿಲ್ಲ. ವಿಶ್ವೋತ್ಪತ್ತಿಗೆ ಮೂಲವಾದ ಸೂರ್ಯನನ್ನಾದರೂ ನಿರ್ಮಿಸಿದವರಾರು ? ಈ ಪ್ರಶ್ನೆಗೆ “ ಪರಮಾತ್ಮ ” ಎಂಬ ಉತ್ತರವು ತಾನಾಗಿಯೇ ಮುಂದೆ ಬರುವದು.

ವಿಶ್ವದಲ್ಲಿ ನ್ಯಾಯವು ಅನ್ಯಾಯವಾಗದು. ಒಂದು ವೇಳೆ ಅನ್ಯಾಯವು ಜಯಪಡೆಯಬಹುದು. ಆದರೆ ಕೊಂಚ ದಿನಗಳ ಮಟ್ಟಿಗೆ ಮಾತ್ರ. ಕೊನೆಗೆ ವಿಜಯಿಯಾಗುವದು ಸತ್ಯವೇ. ಇದಲ್ಲದೆ ಮಾನವನು ವಿಶ್ವದಲ್ಲಿ ನಡೆಯಬೇಕಾದ ರೀತಿ ನೀತಿಗಳ ಬೋಧಕ ದೃಶ್ಯಗಳನ್ನು ಸದಾ ಕಾಣುತ್ತಿರುತ್ತೇವೆ. ಈ ದೃಶ್ಯಗಳನ್ನು ಬಹಿರ್‌ದೃಷ್ಟಿಯವರು ಅಂತರ್‌ದೃಷ್ಟಿಯವರ ದೃಷ್ಟಿಯನ್ನು ವಿಕಾಸಪಡಿಸುವದಕ್ಕಾಗಿ ಸಾಧನಗಳನ್ನಾಗಿ ಮಾರ್ಪಡಿಸಿಕೊಂಡಿರುವದರಿಂದ ಜ್ಞಾನವಿಕಾಸವು ಸುಲಭವಾಗಿ ಮುಂದೊರೆಯಿತು. ಈ ಜ್ಞಾನವಿಕಾಸಕ್ಕಾದರೂ ಮೂಲವಾದುದು ಈ ವಿಶ್ವವೇ ಅಂದ ಮೇಲೆ ವಿಶ್ವೋತ್ಪತ್ತಿಯ ಮೂಲನಾದ ಪರಮಾತ್ಮನನ್ನು ಅರಿತುಕೊಳ್ಳಲು ಯಾರಿಗೆ ತಾನೆ ಇಷ್ಟವಿಲ್ಲ ? ಈ ದಿಶೆಯಲ್ಲಿ ಉಳಿದ ರಾಷ್ಟ್ರಗಳಿಗಿಂತಲೂ ನಮ್ಮ ರಾಷ್ಟ್ರದ ಜನ ಹೆಚ್ಚು ಹೆಲಬುತ್ತಿದ್ದಾರೆ. ಅನೇಕ ಪಂಗಡಗಳಿಂದೊಡಗೂಡಿದ ನಮ್ಮ ಜನ ಪರಮಾತ್ಮನ ಬಗ್ಗೆ ಅನೇಕ ರೀತಿಯಾಗಿ ಅಭಿಪ್ರಾಯ ಪಡುತ್ತಲೂ, ತಮ್ಮ ಅಭಿಪ್ರಾಯವನ್ನು ಜನತೆಗೆ ಪ್ರಸಾರಿಸುತ್ತಲೂ ಬಂದಿರುವರು. ಆದರೆ ಅರ್ಥ ತುಂಬಿದ ಕೊಡದಂತಹ ಅಂದರೆ ಅರ್ಥಮರ್ಥ ತಿಳಿದುಕೊಂಡ ಜನ ತಮ್ಮ ತಮ್ಮಲ್ಲಿ ತಮ್ಮ ನುಡಿಯ ಮೇಲ್ಮೆಗಾಗಿ ಬಡಿದಾಡುತ್ತ ಬಂದಿರುವದರಿಂದ ಪರಮಾತ್ಮನ ಬಗ್ಗೆಯೂ ವಿರೋಧ ತಾಳಿದವರಾಗಿ ಹರಿಹರಿ ಎಂಬುವ ಜನರೂ, ಹರಹರ ಎಂಬುವ ಜನರೂ ಮತ್ತು ಇನ್ನೂ ಅನಂತ ನಾಮಗಳನ್ನು ಉಚ್ಚರಿಸುವವರನ್ನು ಕಾಣದವರಿಲ್ಲ; ಕೇಳದವರಿಲ್ಲ. ಅಂಥ ಜನತೆಯ ನಂಬಿಗೆಯು ಏನೆಂದರೆ, ಆ ಪರಮಾತ್ಮನ ನಾಮಸ್ಮರಣೆಯಿಂದ ನಮ್ಮ ಪಾಪ ಪರಿಹಾರವಾಗುವದೆಂದೂ, ಬಂದಂತಹ ಕಷ್ಟಗಳು ಪರಿಹಾರವಾಗುವವೆಂದೂ ಮನೋಭಾವನೆಯನ್ನು ತಾಳಿ ಈ ರೀತಿಯಾಗಿ ಸತತವೂ ಉಚ್ಚರಿಸುವವರಾಗಿದ್ದಾರೆ. ಭಕ್ತರಲ್ಲಿ ನೂರಕ್ಕೆ ಎಪ್ಪತ್ತೈದರಷ್ಟಾದರೂ ಜನ ಆ ಪರಮಾತ್ಮನ ನಾಮಸ್ಮರಣೆಯನ್ನು ಕುಳಿತಲ್ಲಿ,

ನಿಂತಲ್ಲಿ, ಒರಗಿದಲ್ಲಿ, ಮುಗ್ಗುಲಾಗುವಲ್ಲಿ, ಪ್ರಾತಃಕ್ಕಾಲ ಏಳುವಲ್ಲಿ, ಇಷ್ಟೇ ಏಕೆ ಆಕಳಿಸುವಾಗ್ಗೆಯೂ ಕೂಡ ಪರಮಾತ್ಮನಿಗಿತ್ತ ನಾಮವನ್ನು ಉಚ್ಚರಿಸುವವರಾಗಿದ್ದಾರೆ. ಇದಲ್ಲದೆ ತಮ್ಮ ಮಕ್ಕಳಿಗೂ ಕೂಡ ತಮ್ಮ ಇಷ್ಟ ದೇವತೆಗಳ ಹೆಸರನ್ನಿತ್ತು ಕರೆಯುವವರಾಗಿದ್ದಾರೆ. ಹೀಗೆ ಅನಂತ ದಿಶೆಯಲ್ಲಿ ಮರುಳರಂತಾಗಿ ಬಾಳಿ ತೆರಳಿದವರುಂಟು; ತೆರಳುವವರುಂಟು. ಹಲವರಂತೂ ತಾಳ ತಂಬೂರಿ ಹಿಡಿದು ಮನೆಮಾರು ತ್ಯಜಿಸಿ ತಿರುಕರಾಗಿಯೂ ಮರುಳರಾಗಿಯೂ ಬಾಳುವವರುಂಟು. ಹಲವರು ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ಹಗಲಿರುಳು ಪೂಜೆ ಧ್ಯಾನದಲ್ಲಿ 'ನಿರತರಾಗಿರುವವರಾಗಿರುವದರಿಂದ ಉದರ ನಿರ್ವಾಹಕ್ಕಾಗಿ ಎರಡನೆಯ ಉದ್ಯೋಗವರಿಯಲಾಗದ ವಯಸ್ಸಾದುದರಿಂದಲೂ, ಬಹುದಿವಸಗಳಿಂದ ಕಷ್ಟಪಡದ ಸುಖಿಜೀವನವು ಕಾಯಕದ ಕಷ್ಟಕ್ಕೆ ಸಿಲುಕದೆ ಬೇರೆ' ದಾರಿಗಾಣದೆ ಪುರಂಧರದಾಸರು ಹೇಳಿದಂತೆ "ಉದರ ವೈರಾಗ್ಯವಿದು" ಎಂಬಂತೆ ಇಂಥ ವೈರಾಗ್ಯವಂತರಾದವರೇ ಅನಂತ ಜನರುಂಟು.

ವಿಶ್ವದ ಪ್ರತಿಯೊಂದು ಜೀವವು ಕಷ್ಟಕ್ಕೆ ಆಹುತಿಯಾಗಿಯೇ ತೆರಳುತ್ತಿರಲು, ವಿಶ್ವವು ಸುಖದುಃಖಗಳ ಸಂಗಮವಾಗಿರಲು ಅದರಲ್ಲಿಹ ನಾವು ಕೇವಲ ಸುಖಿಗಳಾಗಿ ಬಾಳುವದಕ್ಕಾಗಿ ಪರಮಾತ್ಮನಲ್ಲಿ ಬೇಡಿಕೊಳ್ಳುವದೂ ಒಂದು ಕಷ್ಟವೇ ಸರಿ.

ಪರಮಾತ್ಮನ ಬಗ್ಗೆ ಹಲವು ಗ್ರಂಥಗಳು ಹಲವು ಬಗೆಯಾಗಿ ಅಭಿಪ್ರಾಯಪಟ್ಟಿವೆ. ಆ ಅಭಿಪ್ರಾಯಗಳಿಗೂ ಜನ ವಿಪರೀತ ಅರ್ಥ ಮಾಡಿಕೊಂಡಿರುವದುಂಟು. "ಪರಮಾತ್ಮನು ನಮ್ಮ ದೇಹದಲ್ಲಿರುವ. ದೇಹವೇ ಆತನ ಆಲಯ." "ಜನಸೇವೆಯೇ ಈಶ ಸೇವೆ." ಈ ಹಿಂದಣ ವಾಕ್ಯಗಳು ಪರಮಾತ್ಮನ ಶೋಧನೆಗೆ ಉಪಯುಕ್ತ ವಾಕ್ಯಗಗಳಾಗಿವೆ. ಇವುಗಳನ್ನು ನಾವು ಪರಿಶೀಲಿಸಿದಲ್ಲಿ ಹಾಗೂ ಸ್ವಪ್ನಾವಸ್ಥೆ, ಪಿಶಾಚಿ ಇವುಗಳ ಮರ್ಮವನ್ನರಿತಲ್ಲಿ ಪರಮಾತ್ಮನ ಶೋಧವು ತಾನಾಗಿಯೇ ಆಗುವದು.

ಜ್ಞಾನ (ಜೀವ) ವೇ ಪರಮಾತ್ಮ. ಆ ಜೀವಕ್ಕೆ ಈ ದೇಹವೇ ಮುಖ್ಯವಲ್ಲ. ದೇಹವಿಲ್ಲದೆಯೂ ಈ ಜೀವ ಜೀವಿಸಬಲ್ಲದೆಂಬುದಕ್ಕೆ ನಾವು ಪಿಶಾಚಿ ಎಂದು ಸಂಬೋಧಿಸುವ ಜೀವನನ್ನು ಮೊದಲು ಅರಿಯಬೇಕು. ಹಲವರು ಪಿಶಾಚಿಯನ್ನು ನಂಬರು. ಹಾಗೆ ನಂಬದನರೆಲ್ಲರೂ ಧೈರ್ಯಶಾಲಿಗಳಾಗಿರಲೇ ಬೇಕು ಆದುದರಿಂದ ಆ ಪಿಶಾಚಿಯು ಅವರ ಸನಿಹಕ್ಕೆ ಬರಲಾರದು. ಮಾನವನು ತನ್ನ ಜೀವನದಲ್ಲಿ ಯಾವುದೊಂದು ಆಶೆಯನ್ನಿಟ್ಟುಕೊಂಡಿರಲು

ಆಕಸ್ಮಾತ್ತಾಗಿ ಮರಣ ಸಂಭವಿಸಿದರೆ ಆ ವಾಸನಾಮಯ ಜೀವವು ತನ್ನ ಇಚ್ಛಾಪೂರ್ತಿಗಾಗಿ ಇಟ್ಟುಕೊಂಡ ವಿಚಾರ ಭಾರದಿಂದ ಗಾಳಿಗಿಂತ ಹಗುರಾಗಿ ಮೇಲೆ ಸಾಗದೆ ವಿಶ್ವದಲ್ಲಿಯೇ ಅಲೆಯುವದು. ಹೀಗೆ ಅಲೆಯುವ ಜೀವಕ್ಕೆ ಯಾರಿಂದಲೂ ಮಾನ್ಯತೆ ದೊರೆಯದು. ಇದಕ್ಕೆ ಮಾನ್ಯತೆಕೊಡುವ ಜನತೆಯೂ ವಿಶ್ವದಲ್ಲಿದ್ದಾರೆ. ಅದರಿಂದ ಹೀನ ಕೃತ್ಯವನ್ನು ಮಾಡಿಸಿ ತಾವೂ ಪಿಶಾಚಿಗಳ ಸಮಾನ ಹೀನರಾಗಿ ಸಜ್ಜನರಿಂದ ದೂರಾಗಿದ್ದಾರೆ. ಇಂಥ ಅಜ್ಞ ಜೀವವು ಮರಳಿ ಶರೀರಕ್ಕಾಗಿ ಹಂಬಲಿಸಿ, ಪರಮಾತ್ಮನು ನಿರ್ಮಿಸಿದ ನಿಯಮವನ್ನು ಉಲ್ಲಂಘಿಸುವದರಿಂದ ಅದಕ್ಕೆ ಶಾಶ್ವತ ಶರೀರ ದೊರೆಯದೆ, ತನ್ನ ಬಂಧುಬಳಗದ ಕಷ್ಟವನ್ನು ಕಂಡು, ಹಾಗು ತನ್ನ ಕಷ್ಟವನ್ನು ಅವರಿಗರುಹಲು ಶಕ್ಯವಾಗದುದಕ್ಕಾಗಿ ಮರುಳನಂತಾಗಿ ಹಲವು ಅಂಜುಗುಳಿಗಳ ಹೃದಯದಲ್ಲಿ ಬೆರೆತು ಮಾತು ಬಿಟ್ಟು ಮಾತನಾಡುವದನ್ನು ನಾವು ಕೇಳುತ್ತೇವೆ. ಪಿಶಾಚಿಯು ಶರೀರವನ್ನು ಪ್ರವೇಶಿಸಲು ಮಾನವನ ಹೆದರುವಿಕೆಯೇ ಅದಕ್ಕೆ ಹೆಬ್ಬಾಗಿಲಾಗುವದು. ಪಿಶಾಚಿಯು ತೊಲಗಬೇಕಾದರೆ ಗುಡಿಗುಂಡಾರುಗಳಿಗೆ, ಮಠಮಾನ್ಯಗಳಿಗೆ ತೆರಳುವ ಜನರನ್ನು ನಾವು ಕಾಣುತ್ತೇವೆ. ಹಾಗು ಅಲ್ಲಿ ನ್ಯಾಯಾನ್ಯಾಯಗಳ ವಾಗ್ಯುದ್ಧದಲ್ಲಿ ನ್ಯಾಯವೇ ಜಯ ಪಡೆದು, ಅನ್ಯಾಯ ಮಾರ್ಗದಿಂದ ಹೊರಟ ಪಿಶಾಚಿಯು ಹೃದಯದಿಂದ ಮುಕ್ತವಾದದ್ದನ್ನೂ ನಾವು ಕಾಣುತ್ತೇವೆ. ಇದರಿಂದ ತಿಳಿಯಬೇಕಾದ ಸಂಗತಿ ಏನೆಂದರೆ ಕೇವಲ ಮರಣನ ತರ ಅಜ್ಞಾನತನದಿಂದ ಇರಬಯಸಿದ ಜೀವಕ್ಕೆ ಪಿಶಾಚಿ ಎಂತಲೂ, ಲೋಕಹಿತಕ್ಕಾಗಿ ಹೆಣಗಾಡುವ ವ್ಯಕ್ತಿಗಳು ಮರಣನಂತರವೂ ಕಾರ್ಯಮಾಡುವವರಾದುದರಿಂದ ದೇವತಾಪುರುಷರಾಗಿ ಪೂಜೆಗೊಳ್ಳುತ್ತಿರುವದೂ, ಅನೇಕ ಪವಾಡಗಳು ಆಯಾ ಕಾಲಕ್ಕೆ ಆಗುತ್ತಿರುವದನ್ನೂ ನಾವು ನೋಡಿಯೂ ಕೂಡ ಪರಮಾತ್ಮನನ್ನು ಸಾನ್ನಿಧ್ಯಪಡಿಸಿಕೊಳ್ಳಲು ಜಪ ತಪ ಹೋಮ ಹವನಾದಿಗಳನ್ನು ಮಾಡುವದು ಶುದ್ಧ ತಪ್ಪು. ಈ ನಮ್ಮ ಜ್ಞಾನವೇ ವಿಶ್ವ ನಿರ್ಮಾಣದ ಮೂಲವು. ಅದರ ಅಣುಗಳೇ ನಾವುಗಳು. ನಾವೆಲ್ಲರೂ ಒಮ್ಮನಸ್ಸು ಮಾಡಿದಲ್ಲಿ ಕಲ್ಲು ಸಹ ದೇವರಾಗಬಹುದು. ಹರಿಯುವ ಸಮುದ್ರ ಬತ್ತಬಲ್ಲದು. ಸೂರ್ಯ ಚಂದ್ರರು ಭೂಮಿಗಿಳಿಯಬಹುದು. ಈ ದಿಶೆಯನ್ನು ಸಮೀಪಿಸಿಗೊಳ್ಳುತ್ತಿರುವ ದೇವನಿಗೆ ಎಂತು ಅರ್ಚಿಸಬೇಕೆಂಬುದನ್ನು ವಾಚಕರೇ ಊಹಿಸಲಿ.

---

ಸಂಪುಟ ೨೧ ಸಂಚಿಕೆ ೧೨









ಡಿಸೆಂಬರ ೧೯೪೭

ವಾಗಿ ಮುಟ್ಟಬಹುದು. ಆದರೆ ಜಪಮಾಡುವಲ್ಲಿ ಎರಡುವಿಧ, ವೈಯಕ್ತಿಕ ಹಾಗೂ ಸಾಮೂಹಿಕ ವೈಯಕ್ತಿಕ ಜಪವು ಕಠಿಣತಮವಾದದ್ದಾಗಿರುವದು. ಇದನ್ನು ಸಾಧಿಸಲು ಎಲ್ಲರಿಂದಲೂ ಸಾಧ್ಯವಿಲ್ಲ. ಅಲ್ಲದೆ ಅದು ಕಾಲಾಂತರತೆಯಿಂದ ಇಡೀ ಜೀವನದಲ್ಲಿ ಏಕನಿಷ್ಠೆಯಿಂದ ಸಾಗಬೇಕಾಗುವದು, ಸಾಮೂಹಿಕ ಜಪವು ಸುಲಭವೂ ಫಲಕಾರಿಯಾಗಿರುವುದಷ್ಟೆ ಅಲ್ಲ, ಜನಸಾಮಾನ್ಯರಿಗೂ ಶಿವಾನುಭವದ ಸವಿಸಾರ ಸಿಕ್ಕುವದು. ಸಂಸಾರದ ಪಲವಾರು ಎಡರು ತೊಡರುಗಳ ಪ್ರಯುಕ್ತ ಶಿವನಾಮಪಠಿಸಲು ಅವಕಾಶವೆಲ್ಲಿ? ಇಂಥ ಮಹತ್ ಸ್ವರೂಪದ ಅವಕಾಶ ಜನಸಾಮಾನ್ಯರಿಗಷ್ಟೇ ಅಲ್ಲ. ಸರ್ವ ಮತಪಂಥದವರಿಗೂ ದೊರೆತು ಆತ್ಮಶಾಂತಿ ಪಡೆಯುವರು. ಶಿವಪಂಚಾಕ್ಷರಿಮಂತ್ರ ಜಪಿಸುವದು ಅಥವಾ ಧರ್ಮದ ಸೊತ್ತಾದೀತು? ಲೋಕದಲ್ಲಿ ಮಾನವ ಧರ್ಮ ಒಂದೆ. ಮೂರಾರು ಧರ್ಮಗಳ ಬುಡಕಟ್ಟಿನಲ್ಲಿ ಸಿಕ್ಕು ಬಳಲುವ ಜನತೆಯನ್ನು ಕೈಹಿಡಿದು ಎತ್ತಿ ಜಾತಿ ಮತಗಳ ಕಲಹದ ಬೇಗೆ ನಂದಲಿ ಸರ್ವರಿಗೂ ಶಾಂತಿ ದೊರೆಯಲಿ ಎಂಬ ಉದ್ದೇಶದೊಡನೆ ಏಕೇಶ್ವರೀ ಧರ್ಮ ಅಥವಾ ಸರ್ವಧರ್ಮಗಳ ಸಮನ್ವಯಗೊಳಿಸಿ ಕೀಳು ಕಲ್ಪನೆ ಮಾರಾಗಲಿ ಎನ್ನುವದೇ ಸಾಮೂಹಿಕ ಜಪದ ಮೂಲ ಉದ್ದೇಶವಾಗಿದೆ

ಶ್ರಾವಣ ಶುದ್ಧ ಪಂಚಮಿಯು ಬೆಳಗಿನ ಮೂರು ಗಂಟೆಗೆ ಜಪಾನುಷ್ಠಾನವು ಪ್ರಾರಂಭವಾಯಿತು. ಈ ಕಾರ್ಯಕ್ರಮದಲ್ಲಿ ಸುತ್ತುಮುತ್ತಲಿನ ಹಳ್ಳಿಯ ಜನರೂ ಜಮಖಂಡಿ ಸರಕಾರೀ ಟ್ರೇನಿಂಗ ಕಾಲೇಜದ ಕುಲಪತಿಗಳೂ ಪ್ರಾಧ್ಯಾಪಕರೂ ಹಾಗೂ ಶಿಕ್ಷಕ ವಿದ್ಯಾರ್ಥಿಗಳೂ ಖಾದೀ ವಿದ್ಯಾಲಯದ ವಿದ್ಯಾರ್ಥಿಗಳೂ ಕೂಡಿದ್ದರು. ಕನಿಷ್ಟ ಐದಾರುನೂರಕ್ಕೂ ಮಿಕ್ಕಿದ ಸಮುದಾಯವಿತ್ತು. ಜನಸಮೂದಾಯದಲ್ಲಿ ಕಾರ್ಮಿಕರಿಂದ ಶ್ರೀಮಂತವರ್ಗದವರೂ ನೌಕರದಾರರು ಅಶಿಕ್ಷಿತ ಹಾಗೂ ಸುಶಿಕ್ಷಿತ ಎಲ್ಲ ಜಾತಿಯವರೂ ಇದ್ದರು. ಪುರುಷರಷ್ಟೆ ಸ್ತ್ರೀಯರೂ ಈ ಜಪಾನುಷ್ಠಾನದಲ್ಲಿ ಭಾಗವಹಿಸಿದ್ದರು.

ಸರ್ವಶ್ರೀ ಸ್ವಾಮಿಗಳವರು ವೇದಿಕೆಯ ಮೇಲೆ ಮೂಡಿಸಿದಾಗ ಅಲ್ಲಿ ಶಾಂತಸ್ವರೂಪವು ಮೂರ್ತಿಮಂತವಾಗಿತ್ತು. ಶ್ರೀಮತ್ ಜಗದ್ಗುರು ಶ್ರೀ ಶಂಕರ ಸ್ವಾಮಿಗಳು ಜನಸಾಮಾನ್ಯರಿಗೂ ಶಿವಪಂಚಾಕ್ಷರೀ ಮಂತ್ರದ ಅರಿವನ್ನು ತೋರಿದರು. ಶಿವಪಂಚಾಕ್ಷರಿ ಮಂತ್ರವು ಮಾನವನ ಆತ್ಮೋದ್ಧಾರವನ್ನು ಮಾಡುವದು ಮನದ ಕಲ್ಮಿಷಗಳನ್ನೆಲ್ಲ ದೂರೀಕರಿಸಿ ಮನದ ದೃಢತೆಯಿಂದ

ಕರ್ಮನಿಷ್ಠರನ್ನಾಗಿ ಮಾಡುವದು. ಹೇಗೆ ವೇದಾಗಮಗಳು ಯಜ್ಞದ ಮಹತಿಯನ್ನು ಸಾರಿರುವವೋ ಹಾಗೆ ಆದರ ಅಂಗವಾದ ಶಿವಪಂಚಾಕ್ಷರಿ ಮಂತ್ರವೂ ಒಂದು ಯಜ್ಞವಾಗಿದೆ. ಇಂದು ಶ್ರಾವಣ ಶುದ್ಧ ಪಂಚಮಿ ಶ್ರೀಮತ್ ಸದ್ಗುರು ಶಿವಾನಂದ ಸ್ವಾಮಿಗಳು ಶಿವನೊಳು ಸಂದಿಸಿದ ಪುಣ್ಯದಿನ ಈ ದಿನದಂದು ನಾವು ಶಿವಪಂಚಾಕ್ಷರಿಯ ಯಜ್ಞಮಾಡಿ ನಮ್ಮ ಪಾಪ ಕಲ್ಮಿಷಗಳನ್ನು ಯಜ್ಞಕ್ಕೆ ಹೋಮಮಾಡಿ ಆತ್ಮಶಾಂತಿ ಗಳಿಸಿಕೊಳ್ಳೋಣ. ಶಿವ ಸಾಯುಜ್ಯವನ್ನು ಪಡೆಯೋಣವೆಂದು ಶಿವಪಂಚಾಕ್ಷರಿ ಮಂತ್ರದ ಮಹಿಮೆಯನ್ನು ತಿಳಿಸಿದರು. ಶ್ರೀಮನ್ನಿರಂಜನ ಪ್ರ. ಸ್ವ. ನಾಗನೂರ ಮಹಾಸ್ವಾಮಿಗಳವರು ಪಂಚಾಕ್ಷರಿ ಮಂತ್ರವನ್ನು ಜಪಿಸಲು ಕಡೆಗೆ ಆಶೀರ್ವದಿಸಿದರು.

ಮೊದಲೇ ನಿರ್ಧಿಷ್ಟಪಡಿಸಿದಂತೆ ಶಿವಪಂಚಾಕ್ಷರಿ ಮಂತ್ರ ಜಪಿಸಲು ಸರ್ವರೂ ಮಡಿವಸ್ತ್ರದಿಂದ ಆಚ್ಛಾದಿತಗೊಂಡಿದ್ದರು. ಒಂದೇ ಆಸನದ ಮೇಲೆ ಮೂರು ತಾಸು ಪಂಚಾಕ್ಷರಿಮಂತ್ರ ಪಠನೆಯು ಶಾಂತರೀತಿಯಿಂದ ಜರುಗಿತು. ಜನಸಮೂದಾಯವು ಭಕ್ತಿಭಾವನಾಮಯವಾಗಿದ್ದರು, ಈ ತೆರನಾಗಿ ಜಪಾನುಷ್ಠಾನವು ಜರುಗಿ ಸರ್ವರೂ ಆತ್ಮಶಾಂತಿಯಿಂದ ಪ್ರಸಾದವನ್ನು ಪಡೆದು ಸಾಗಿದರು.

ಜಪಾನುಷ್ಠಾನದ ಸವಿಸವಿದು ಜನತೆಯು ಹೊರಹೊರಟಾಗ ಪ್ರತಿಯೊಬ್ಬನ ಮುಖದಲ್ಲಿ ತೃಪ್ತಿಯುತ ಶಾಂತಿ ಕಳೆ ಒಡಮೂಡಿತ್ತು. ಸರ್ವರ ಹಾಗೂ ಲೋಕದ ಕಲ್ಯಾಣವಾಗಲೆಂದೂ ಜಾತಿಯ ಕೀಳು ಕಲ್ಪನೆಯನ್ನು ಅಳಿದು ಏಕೇಶ್ವರೀ ಧರ್ಮ ನಮ್ಮ ಭರತಭೂಮಿಯಲ್ಲಿ ಮೈಗೊಂಡು ಮಹೋನ್ನತ ಶಾಂತಿದೊರೆತು ಕರ್ಮನಿಷ್ಠರಾಗಿ ಬಾಳಿ ಬೆಳಗಲೆಂದೂ ಇಂಥ ಸಾಮೂಹಿಕ ಜಪಾನುಷ್ಠಾನವು ಅನೇಕಾನೇಕ ಸ್ಥಳಗಳಲ್ಲಿ ಜರಗುವಂತೆ ಪರಶಿವನು ಕರುಣೆ ನೀಡಿ ಕೃಪೆಮಾಡಲಿ.

ಇಂದಿನ ಜಪಾನುಷ್ಠಾನುದಿಂದ ಜನತೆಯಲ್ಲಿ ಯಾವ ವರಹದ ಬಿನ್ನಾಭಿಪ್ರಾಯಗಳು ಕಂಡುಬರಲಿಲ್ಲ. ಆತ್ಮ ತೃಪ್ತಿಯೇ ಅವರಿಗೆಲ್ಲ ದೊರೆತ ಅಮೂಲ್ಯವಸ್ತುವು. ಈ ತರಹದ ಆತ್ಮತೃಪ್ತಿಯು ಪುಣ್ಯಪುರುಷರ ಪ್ರಭೆಯಿಂದ ಹಾಗೂ ದೇವನಲ್ಲಿ ನಿಷ್ಠೆ ಇರಿಸುವದರಿಂದ ಸಿಕ್ಕುವದೆಂಬ ಅನುಭವ ಇಂದು ಗೋಚರಿಸಿತು.

———

# ಶಿವಮಹಾಮಂತ್ರದ ಮಹಿಮೆ.

(ಲೇಖಕರು— ಶ್ರೀ. ರಾಮಲಿಂಗಸ್ವಾಮಿಗಳು, ಸಾ। ಬಂಥನಾಳಮಠ, ತಾ. ಇಂಡಿ.)

ಶ್ರೀಮನ್ನಿಜಗುಣ ಶಿವಯೋಗಿಗಳು ವಿರಚಿಸಿದ ಕೈವಲ್ಯಪದ್ಧತಿ ನಾಲ್ಕನೇ ಪದದಲ್ಲಿ ಶಿವಪಂಚಾಕ್ಷರ ಮಹಾಮಂತ್ರವು ಅಗಣಿತ ಶಕ್ತಿಸಾಮರ್ಥ್ಯಗಳಿಂದ ತೋರುತ್ತದೆ. ಈ ಶಿವಪಂಚಾಕ್ಷರ ಮಹಾಮಂತ್ರ ಸಾಮರ್ಥ್ಯದಿಂದ ಅಜ-ಹರಿ-ಹರಾದಿ ದೇವತೆಗಳು ಶಿವಮಂತ್ರ ಜಪಿಸಿದೊಡನೆ ಸೃಷ್ಟಿ ಸ್ಥಿತಿಲಯಾದಿ ಕಾರ್ಯಗಳು ಮಾಡಲಿಕ್ಕೆ ಅವರಿಗೆ ಒಂದು ದಿವ್ಯ ಶಕ್ತಿ ಉದ್ಭವಿಸಿತು ಎಂದು ಬರೆದಿರುವರು. ಇಂಥ ಶಿವಪಂಚಾಕ್ಷರ ಮಹಾಮಂತ್ರವನ್ನು ಮಾನವ ಜನಾಂಗವೆಲ್ಲ ಪಠಿಸಿ ಸಂಸಾರವೆಂಬ ಸಾಗರದಲ್ಲಿ ಶಿವಮಹಾಮಂತ್ರದ ದಿವ್ಯಶಕ್ತಿ ಎಂಬ ನೌಕೆಯಲ್ಲಿ ಕುಳಿತು ಸುಗಮವಾಗಿ ದಾಟಿ ಮುಕ್ತಿಯ ಮಾರ್ಗವನ್ನು ಕಾಣಬಹುದು. ಪೂರ್ವಕಾಲದಲ್ಲಿ ಇಹಲೋಕದಲ್ಲಿ ದುಷ್ಕರ್ಮಗಳನ್ನು ಮಾಡಿ ಪರಲೋಕದಲ್ಲಿ ಯಮನಿಂದ ನರಕಯಾತನೆಯನ್ನು ಅನುಭವಿಸುತ್ತಿರುವ ಸಮಯದಲ್ಲಿ ಶಿವಮಹಾಮಂತ್ರವನ್ನೇ ಉಚ್ಚರಿಸಿ ನರಕಯಾತನೆಯಿಂದ ಮುಕ್ತರಾದ ಕಥೆಯನ್ನು ಇಲ್ಲಿ ವಿವರಿಸುತ್ತೇನೆ. ಒಂದು ದಿನ ಸಾನಂದ ಋಷಿಯು ಗರುಡಪುರಾಣದಲ್ಲಿ ನರಕಯಾತನೆಯ ವರ್ಣನೆಯನ್ನು ಕೇಳಿ ಬಹಳ ವ್ಯಸನ ಉಳ್ಳವನಾಗಿ ನಾರಕಿಗಳ ನಿವೃತ್ತಿಗೋಸುಗ ಯಮನಪಟ್ಟಣಕ್ಕೆ ಹೋದನು. ಯಮನು ಅರ್ಘ್ಯಪಾದ್ಯಾದಿ ಉಪಚಾರಗಳಿಂದ ಅವರಂ ಸತ್ಕರಿಸಿ ತಮ್ಮ ಆಗಮನದ ಉದ್ದೇಶವೇನೆಂದು ಕೇಳಲು, ಶ್ರೀಸಾನಂದ ಋಷಿಗಳು ಯಮನೆ ನಾರಕಿಗಳನ್ನು ನೋಡುವ ನಿಮಿತ್ಯವಾಗಿ ಬಂದಿರುವೆನು ತೋರಿಸಬೇಕೆನಲು, ಯಮನು ಸ್ವಾಮಿ ತಾವು ನೋಡಬಾರದೆಂದು ಎಷ್ಟೋ ವಿನಯದಿಂದ ಹೇಳದರೂ ಸಹ ಕೇಳದೆ ಆಗ್ರಹಪಡಿಸಲು ಯಮನು ನಿರುಪಾಯನಾಗಿ ತೋರಿಸುತ್ತ ನಡೆದಿದ್ದನು. ಆಗ ಶ್ರೀ ಸಾನಂದ ಋಷಿಗಳು ಮಹಾಯಾತನೆಯನ್ನು ಹೊಂದುತ್ತಿರುವ ನಾರಕಿಗಳಂ ನೋಡಿ ದಯಹುಟ್ಟಿ ಆ ನಾರಕಿಗಳಿಗೆಲ್ಲ ಕೇಳುವಂತ ಶಿವಮಂತ್ರವನ್ನು ನುಡಿಯಲು ಅವರೆಲ್ಲರೂ ಕೇಳಿ ತಾವೂ ನುಡಿಯುತ್ತ ನರಕಯಾತನೆಯಿಂದ ನಿವೃತ್ತರಾದರು. ಕಾರಣ ವಾಚಕರೆಲ್ಲರೂ ಶಿವಮಹಾಮಂತ್ರವನ್ನು ಗುರುಮುಖದ್ವಾರದಿಂದ ಕೇಳಿ ಮನಃಪೂರ್ವಕ ಪಠಿಸಿ ಸಂಸಾರಬಂಧನದಿಂದ ವಿಮುಕ್ತರಾಗಬೇಕೆಂದು ಬಯಸುತ್ತೇನೆ.

———

# ವೀರಶೈವ ತರುಣ ಮಂಡಲ (ವಿಜಾಪೂರ) ಕ್ಕೆ
# ಉದಾರ ದೇಣಿಗೆ.



ದಿನಾಂಕ ೧೩-೧೦-೧೯೫೭ ರಂದು ಸಮಾಜೋದ್ಧಾರಕರೂ ಜನತಾ ಸ್ವಾಂತ ಪ್ರೇಮಿಗಳೂ ಆದ ಶ್ರೀ ಮ. ಚ. ಶ್ರೀ ಮುಕ್ತಿನಾಥ ಶಿವಾಚಾರ್ಯರು ಕಲ್ಯಾಣಮಠ ಗಿರಿಸಾಗರ ಈ ಮಹಾಪೂಜ್ಯರು ತಾವಾಗಿಯೇ ವೀರಶೈವ ತರುಣಮಂಡಲದ ಪ್ರಧಾನ ಕಾರ್ಯಾಲಯಕ್ಕೆ ದಯಮಾಡಿಸಿ ಪ್ರಥಮವಾಗಿ ೧೦೧ ರೂಪಾಯಿಗಳನ್ನು ಆಶೀರ್ವದಿಸಿ ವೀರಶೈವ ತರುಣಮಂಡಲಕ್ಕೆ ಬೇಕಾದ ಮುಖ್ಯ ಆರ್ಥಿಕ ವ್ಯವಸ್ಥೆಯನ್ನು ಮಾಡಿಕೊಡುವದಾಗಿಯೂ ಮತ್ತು ವೀರ ಶೈವ ತರುಣರ ಸಂಘಟನೆಯನ್ನು ಮಾಡಿಕೊಡುವದಾಗಿಯೂ ಅಲ್ಲದೆ ವೀರ ಶೈವ ತರುಣಮಂಡಲಕ್ಕೆ ಆಧಾರಸ್ತಂಭರಾಗಿ ಕೆಲಸ ಮಾಡುವೆವೆಂದು ಪುನಃ ಪೂರ್ವಕ ಆಶ್ವಾಸನ ಕೊಡಬಲ್ಲೆ.' ಎಂದು ಅಪ್ಪಣೆ ಕೊಡಿಸಿದರು. ಇಂಥಹ ಮಹಾಪೂಜ್ಯರಿಗೆ ವೀರಶೈವ ತರುಣಮಂಡಲವು ಎಷ್ಟುಸಾರೆ ಪ್ರಣಾಮಗ ಳನ್ನು ಸಲ್ಲಿಸಿದರೂ ಕಡಿಮೆಯೆ! ಇದರಂತೆ ಯಾವತ್ತು ಹೆರಗುರು ಚರ ಮೂರ್ತಿಗಳು ತಮ್ಮ ಸಲಹೆ, ಸಹಾಯ, ಸಾಹಸ, ಧನಗಳನ್ನು ಆಶೀರ್ವ ಧಿಸಿ ವೀರಶೈವರಲ್ಲಿ ಗುರುಸ್ಥಾನವಾದ ಅನೇಕ ಮಠಗಳ ಕೀರ್ತಿಯನ್ನೂ ಈಗ ಸದ್ಯಕ್ಕಿರುವ ಅನೇಕ ಅಧಿಕಾರಿಗಳ ಸಾಫಲ್ಯವನ್ನು ಮಾಡಿಕೊಡಬೇ ಕಾಗಿ ಬಿನ್ನಹ. ಈಗಿನ ಕಾಲದಲ್ಲಿ ಹಿಂದುಳಿದುಕೊಳ್ಳದೆ ಮುಂದಾಳುತನ ವಹಿಸಿ ಉತ್ಸಾಹ ಕೊಟ್ಟು 'ಹಿಂದಿನವರ' ಕೀರ್ತಿಯನ್ನು ಕಳೆದುಕೊಳ್ಳದೆ ಮುಂದೆ ಬೆಳಿಸಿ ಸಮಸ್ತ ಪರಮಪೂಜ್ಯರು ಶ್ರೀ ಮ. ಚ. ಗಿರಿಸಾಗರ ಮಹಾ ಸ್ವಾಮಿಗಳಂತೆ ಮಾನ್ಯ ಧನ್ಯತೆಯನ್ನು ಹೊಂದಿ ವೀರಶೈವ ತರುಣಮಂಡಲ ವನ್ನು ತಮ್ಮ ಸೇವಾಧೀನತೆಯಲ್ಲಿಟ್ಟುಕೊಂಡು ವೀರಶೈವ ಮತವನ್ನು ವಿಶ್ವ ಮತವಾಗುವಂತೆ ಜಾಗ್ರತೆ ಮಾಡುವಿರೆಂದು ಪ್ರಾರ್ಥನೆ. ಅದರಂತೆ ಶ್ರೀಮಾನ್ ರಂಗನಗೌಡರು ಹುಚ್ಚಪ್ಪಗೌಡರು ಪಾಟೀಲ ವಿಜಾಪೂರ ಈ ಮಹನೀಯ ರಾದರೂ ಆಗಮಿಸಿ ೫೧ ರೂಪಾಯಿಗಳನ್ನು ಸಲ್ಲಿಸಿ ಆಶ್ರಯದಾತರಲ್ಲದೆ ತಮ್ಮ ಸೇವೆಯನ್ನು ನಿರಂತರವಾಗಿ ಇದಕ್ಕಾಗಿ ಸಲ್ಲಿಸುವೆವು ಎಂದು ತಿಳಿಸಿದರು.

ಈ ಮಹನೀಯರಿಗಾದರೂ ವೀರಶೈವ ತರುಣಮಂಡಲವು ಅಭಿನಂದನೆಗಳನ್ನು ಸಲ್ಲಿಸುತ್ತದೆ. ಇವರಂತೆ ಎಲ್ಲ ಗಣ್ಯ ಮಹನೀಯರು ವೀರಶೈವತರುಣ ಮಂಡ ಲಕ್ಕೆ ತಮ್ಮ ಸಹಾಯ-ಸಲಹೆಗಳನ್ನು ಅವಶ್ಯವಾಗಿ ನೀಡಿ ವೀರಶೈವ ತರುಣ ಮಂಡಲವು ತನ್ನ ಘನತರವಾದ ಉದ್ದೇಶಗಳನ್ನು ಪೂರೈಸುವದಕ್ಕೆ. ಬೆಂಬಲ ನೀಡುವಿರೆಂದು ವಿನಂತಿ.

ದಿನಾಂಕ
೧೫-೧೦-೫೭
ವಿಜಾಪೂರ

ತಮ್ಮ ವಿಶ್ವಾಸಿಕರು
ಸ್ವಾಮಿದಯಾನಂದದೇವರು ಯರನಾಳ
ಚೇಅರ್‌ಮನ್
ವೀರಶೈವ ತರುಣಮಂಡಲ
ವಿಜಾಪುರ

# ಶಿವಾನುಭವ ಪತ್ರಿಕೆಗೆ ಸಹಾಯ.

ಶ್ರೀ ಮ|| ನಿ|| ಗುರುಶಾಂತಲಿಂಗಸ್ವಾಮಿಗಳು ಮು|| ದುಧನಿ ಇವರು ರಾ| ಬ| ಡಾಕ್ಟರ ಹಳಕಟ್ಟಿ ಇವರಿಗೆ ಒಂದುನೂರು ರೂಪಾಯಿಗಳನ್ನು ಮತ್ತು ಪ್ರತಿಭಾ ಪತ್ರಿಕೆ ಮು|| ಬೆಂಗಳೂರು ಇದರ ಚಾಲಕರು ೨೫ ರೂಪಾಯಿಗಳನ್ನು ಅವರಿಗೆ ಕಾಣಿಕೆಯಾಗಿ ಕೊಟ್ಟಿದ್ದಾರೆ. ಈ ಉಭಯ ಮಹನೀಯರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಸಂಪಾದಕ— ಶಿವಾನುಭವ.
ವಿಜಾಪುರ

# ವೀರಶೈವನ ಬಿಡಿವು ಹಿಡಿವುಗಳು.

(ಲೇಖಕ— ಶ್ರೀ ಸಿ. ನಾ. ಮಹಾಂತಣ್ಣವರ)

ನಮ್ಮ ಭಾರತದಲ್ಲಿ ಪಟ್ಟಣಗಳ ಸಂಖ್ಯೆಗಿಂತ ಹಳ್ಳಿಗಳ ಸಂಖ್ಯೆಯೇ ಹೆಚ್ಚು. ಎಷ್ಟೋ ಹಳ್ಳಿಗಳು ಗುಡ್ಡಗಾಡ ಪ್ರದೇಶಗಳಲ್ಲಿರುವವು. ಅಂಥಲ್ಲಿ ಒಂದು ಹಳ್ಳಿಯಿಂದ ಮತ್ತೊಂದು ಹಳ್ಳಿಗೆ ಹೋಗಲು ಸರಳ ದಾರಿಗಳಿಲ್ಲ. ಅರಿಯದವರಿಗಂತೂ ಆ ದಾರಿಗಳೇ ಗೊತ್ತಾಗುವದಿಲ್ಲ. ಇಂಥ ಪ್ರಸಂಗದಲ್ಲಿ ಪ್ರವಾಸಿಯು ಮಾರ್ಗಬಲ್ಲವರ ಬೆನ್ನು ಹತ್ತಲೇ ಬೇಕಾಗುವದು. ಅವರ ಗೂಡ ಒಮ್ಮೆ ಹೋದ ಬಳಿಕ ದಾರಿಯು ಗುರ್ತು ಆಗಬಹುದು. ಆದರೂ ಹೋಗುವಾಗ ಕಾಡು ಗುಡ್ಡದಲ್ಲಿ ಎಷ್ಟೋ ಶೀಳು ದಾರಿಗಳು ದನಗಾಹಿಗಳಿಂದ ರಚಿಸಲ್ಪಟ್ಟಿರುತ್ತವೆ. ತನ್ನ ಇಚ್ಛಿತ ಊರಿಗೆ ಮುಟ್ಟಬೇಕಾದರೆ ಶೀಳು ದಾರಿಗಳನ್ನು ಬಿಟ್ಟು ತನ್ನ ಧ್ಯೇಯ ಸ್ಥಾನದ ಊರ ದಾರೀ ಹಿಡಿಯಲೇ ಬೇಕಾಗುವದು. ಇದರಂತೆ ಬೈಲು ಪ್ರದೇಶದಲ್ಲಿ ಪ್ರವಾಸ ಮಾಡುವಾಗ ತಾನು ಹೋಗುವ ಊರ ದಾರಿಯು ಎಡಬಲ ಶೀಳು ಮಾರ್ಗಗಳು ಕಂಡುಬರುತ್ತವೆ. ಆವಾಗಲಾದರೂ ಶೀಳು ದಾರಿಗಳನ್ನು ನಿರಾಕರಿಸಿ, ತನ್ನ ಗಮನಾರ್ಹವಾದ ದಾರಿಯನ್ನನುಸರಿಸಬೇಕಾಗುತ್ತದೆ. ಲೈನ ಮಾರ್ಗ ಪ್ರವಾಸದಲ್ಲಿಯೂ ಅನೇಕ ಶೀಳು ಮಾರ್ಗಗಳು ಬರುವದುಂಟು. ಆಗ ಸರಕಾರದವರು ಬರೆದ ಬೋರ್ಡಿನ ಸಂಜ್ಞೆಗಳನ್ನು ನೋಡಿ, ಇಚ್ಛಿತ ಮಾರ್ಗವನ್ನವಲಂಬಿಸಬೇಕಾಗುತ್ತದೆ ಇದಲ್ಲದೆ ರೇಲ್ವೆ ಜಂಗ್ಶನ್‌ಗಳಲ್ಲಿಯೂ ಅರಿಯದ ಪ್ರವಾಸಿಯು ಒಂದು ಗಾಡಿಯನ್ನು ಬಿಟ್ಟು ಮತ್ತೊಂದು ಗಾಡಿಯನ್ನು ಹತ್ತಿ ಕೂಡ್ರುವಾಗಲೂ ಇದೇ ಪ್ರಸಂಗವು ಒದಗುವದು. ಹಾಗು ಉಗಿಬಂಡಿ ವಿಮಾನಗಳನ್ನು ನಡೆಯಿಸುವಾಗಲೂ ಹೋಕಾ ಯಂತ್ರಾದಿ ಸಹಾಯಗಳಿಂದ ನಿಶ್ಚಿತ ಬಂದರ ಅಥವಾ ವಿಮಾನನಿಲ್ದಾಣಗಳಿಗೆ ಹೋಗಿ ನಿಲ್ಲಲೇಬೇಕಾಗುತ್ತದೆ. ಇದರಂತೆ ಷಟ್‌ಸ್ಥಲ ಮಾರ್ಗಾನುಯಾಯಿಯಾದ ವೀರಶೈವನು ನಿಜಲಿಂಗಾನುಸಂಧಾನದ ಸ್ಥಳಕ್ಕೆ ಮುಟ್ಟಲು ಆಧಾರಾದಿ ಷಟ್‌ಚಕ್ರಗಳನ್ನೂ ಅವುಗಳ ಮೇಲ್ಪಟ್ಟ ಬ್ರಹ್ಮ, ಶಿಖಾ, ಪಶ್ಚಿಮ ಚಕ್ರ ಸ್ಥಾನಗಳನ್ನೂ ಅರಿಯಲೇಬೇಕು.

ತೀರ ಮೊದಲನೇ ಚಕ್ರವಾದ ಆಧಾರಚಕ್ರವೆಂಬ ಸ್ಟ್ಯಾಂಡಿಗೆ ಪೋಗಲು ಜ್ಞಾನವೂ, ಶ್ರದ್ಧಾ ಭಕ್ತಿಯೂ, ಕ್ರಿಯಾಶಕ್ತಿಯೂ, ಅಂಗಲಿಂಗಗಳ ಜ್ಞಾನವೂ ಪದಾರ್ಥ ಪ್ರಸಾದಗಳ ತಿಳುವಳಿಕೆಯೂ ಹಸ್ತ ಮುಖಗಳ ಗೊತ್ತುವಳಿಯೂ ಬೇಕಾಗುತ್ತದೆ. ಈ ಎಲ್ಲ ಸಕೀಲಗಳ ಜ್ಞಾನಕ್ಕೆ ಶರೀರದಲ್ಲಿಯ ಗುಣಾವ ಗುಣಗಳನ್ನು ಅರಿತು ತನ್ನ ಧ್ಯೇಯಕ್ಕೆ ಅನಾನುಕೂಲವಾದವುಗಳನ್ನು ದೂರೀ ಕರಿಸಿ ಸಾನುಕೂಲವಾದವುಗಳನ್ನು ಹಿಡಿಯಲೇಬೇಕು.

> ಆರಾಧಯಾಮಿ ಮಣಿಸನ್ನಿಭಮಾತ್ಮಲಿಂಗಂ ।
> ಕಾಯ ಸ್ವರೂಪ ಹೃದಯಾಂಬುಜ ಸನ್ನಿವಿಷ್ಟಂ ॥
> ಶ್ರದ್ಧಾ ನದೀ ವಿಮಲಚಿತ್ತ ಜಲಾಭಿಷೇಕಂ ।
> ನಿತ್ಯಂ ಸಮಾಧಿ ಪುಷ್ಪಂಚ ಭವದೂರಣಾಯ ॥೧॥

ಲಿಂಗಪೂಜಕನು ತನ್ನ ಲಿಂಗಾನುಸಂಧಾನದ ಮಟ್ಟನ್ನು ಎಲ್ಲಿಯ ವರೆಗೆ ತಂದು ನಿಲ್ಲಿಸಿರುವನೆಂಬದು ಈ ಅನುಭವಶ್ಲೋಕವು ವ್ಯಕ್ತಪಡಿಸುತ್ತದೆ. ಈ ಸ್ಥಿತಿಗೆ ವೀರಶೈವನು ಬರಬೇಕಾದರೆ ತನಗೆ ವಿರೋಧವಾದ ಸಂಗತಿಗ ಳನ್ನು ತ್ಯಜಿಸಲೇ ಬೇಕಾಗುವದು. ಇದರಂತೆ,

> ದಶವಾಹನಂಗಳಿಂದೆಸೆದುದೀರೇಳ್ಭುವನ ।
> ಅಸುರವಡೆ ಅರುಪತ್ತಾರು ಕೋಟಿ ॥
> ಬಸವಳಿದು ಬೇಳಾಗಿ ಬೆಂಡಾಗಿ ಸಂತೈಸಿ ।
> ಪಸಿಯು ಸಲಹುತಲಿರ್ದೆ ಅನುದಿನದೊಳು ॥೨॥

ವೀರಶೈವ ಭಕ್ತನ ಲಿಂಗಾನುಸಂಧಾನಕ್ಕೆ ಚಿತ್ತಶುದ್ಧಿಯು ಅವಶ್ಯ ವೆಂಬುದನ್ನು ಎಲ್ಲರೂ ಬಲ್ಲರು. ಆದರೆ ಕ್ರಿಯಾಲಿಂಗ ಜ್ಞಾನಲಿಂಗ ಭಾವ ಲಿಂಗಗಳ ಪೂಜಾಮೂರ್ತಿಯಾದ ಇಷ್ಟಲಿಂಗ ಪೂಜೆ ಮಾಡುವಾಗ ಅನೇಕ ಉಪಾಧಿಗಳು ಉದಯಾಸ್ತಮಾನವಾಗುವವು. ಇದಕ್ಕೆ ಯಾವ ಕಾರಣಗ ಳಿರಬಹುದು ? ತನ್ನಲ್ಲಿ ಜೀವ ಭಾವದ ಕರಣ ಕೋಟಿಗಳ ಬಲಿಗಳೇ ಈ ಅನಾಹುತವೆಂದು ಹೇಳಲು ಅಡ್ಡಿಯಿಲ್ಲ. ಇದನ್ನು ಪರಿಹರಿಸುವ ಸಾಧನವೇ ತ್ರಿಕರಣ ಶುದ್ಧನಾದ ಏಕಾಗ್ರಚಿತ್ತವುಳ್ಳ ಲಿಂಗಪೂಜೆಯು. ಆದುದರಿಂದ ಪೂಜಕನು ಶಿವಪೂಜಾ ಕೋಣೆಯ ವ್ಯವಸ್ಥೆ ಮಾಡಿಕೊಂಡು ಯಾರನ್ನೂ ಬರಗೊಡದೆ ಪ್ರಾಣಲಿಂಗ ಭಾವಲಿಂಗ ಪೂಜೆ ನಡೆದಾಗ ಮುಸುಕು ಹಾಕಿ

ಜಪತಪಾದಿ ಅನುಷ್ಠಾನಗಳನ್ನೆಸಗುವನು. ಈ ಮೇಲಿನ ಮಂತ್ರಗೋಪ್ಯದ ಪದ್ಯದಲ್ಲಿ ಶ್ರೀ ಪ್ರಭುದೇವರಂಥವರಿಗೆ ಹದಿನಾಲ್ಕು ಇಂದ್ರಿಯಗಳಲ್ಲಿ ತೋರಿ ಬರುವ ಅರುವತ್ತಾರು ಕೋಟಿ ಕರಣಾದಿಗಳ ಕಲಕಲಾಟಗಳು ತೋರಿಬರುತ್ತಿದ್ದವೆಂದೂ ಅವುಗಳನ್ನು ನೀಗುವದಕ್ಕೆ ಲಿಂಗತ್ರಯ ಪೂಜಾಧುರೀಣರಾಗಿದ್ದರೆಂಬದೂ ಕಂಡುಬರುತ್ತದೆ. ಆದ್ದರಿಂದ ಲಿಂಗಪೂಜಕನು ಅರ್ಥಾತ್ ವೀರಶೈವನು ಯಾವ ಯಾವ ಸದ್ಗುಣಗಳನ್ನು ತನ್ನಲ್ಲಿ ಅಳವಡಿಸಿಕೊಂಡು ಯಾವ ಯಾವ ಸಂಗತಿಗಳನ್ನು ಬಿಡಬೇಕೆಂಬುದನ್ನು ಇಲ್ಲಿ ವಿವರಿಸುವದಾಗಿದೆ.

ಇಷ್ಟಲಿಂಗದ ಪೀಠ, ಕಟಿ, ವರ್ತುಳ, ಗೋಮುಖ, ನಾಳ, ಗೋಳಕಗಳೆಂಬ ಆರು ಸ್ಥಲಂಗಳನರಿದು, ಅನೃತ, ಅಷ್ಟಿರ ವಾಕ್ಯ, ವಂಚನೆ, ಪಂಕ್ತಿ ಭೇದ, ಉದಾಸೀನ, ನಿರ್ದಯವೆಂಬಾರು ಅಂತರಂಗದ ಭವಿಗಳ ಕಳೆದು, "ಒಂದೆಂಬುದಂ ಉಳಿದು ಒಂದು ಹಿಡಿವುದು" ಅಂದರೆ " ಅಹಂ ಬ್ರಹ್ಮಾಸ್ಮಿ" ಎಂಬುದನುಳಿದು ಶಕ್ತಿದಶಿಷ್ಟಾದ್ವೈತವ ಪಿಡಿವುದು. ಎರಡೆಂಬುದನು ವರ್ಜಿಸಿ, ಎರಡು ಹಿಡಿವುದೆಂದರೆ, ಅಂಗ ಬೇರೆ, ಲಿಂಗ ಬೇರೆಂಬುದನಳಿದು ಭಕ್ತಿ ಜ್ಞಾನಂಗಳನರಿವುದು.

ಮೂರು ಹಿಂಗಿಸಿ ಮೂರು ಹಿಡಿವುದೆಂದರೆ, ಅಧ್ಯಾತ್ಮಕ, ಆದಿಭೌತಿಕ, ಅಧಿದೈವತಗಳೆಂಬ ತಾಪತ್ರಯಂಗಳನುಳಿದು, ಇಷ್ಟ ಪ್ರಾಣ ಭಾವಗಳೆಂಬ ಲಿಂಗತ್ರಯಗಳನ್ನು ಅಂಗತ್ರಯಗಳಲ್ಲಿ ಅಳವಡಿಸುವದು.

ನಾಲ್ಕು ಬಿಟ್ಟು ನಾಲ್ಕು ಹಿಡಿಯುವದೆಂದರೆ ಮನ, ಬುದ್ಧಿ, ಚಿತ್ತ, ಅಹಂಕಾರಗಳೆಂಬ ಚತುಃಕರಣಂಗಳನುಳಿದು ಗುರುಗಳಲ್ಲಿ ಅಂಗ, ಅಪ್ತ, ಸ್ಥಾನ, ಸದ್ಭಾವಗಳೆಂಬ ನಾಲ್ಕು ತರದ ಭಕ್ತಿಯುತನಾಗಿರುವದು.

ಐದು ಬಿಟ್ಟು ಐದು ಹಿಡಿಯುವದೆಂದರೆ, ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶಗಳೆಂಬ ಪಂಚ ಕ್ಲೇಶಗಳ ವರ್ಜಿಸಿ, ನಕಾರಾದಿ ಯಕಾರಾಂತ್ಯವಾದ ಪಂಚಾಕ್ಷರಗಳಂ ಸ್ಮರಿಸುತ್ತ ಇರುವದು.

ಆರು ಬಿಟ್ಟು ಆರು ಹಿಡಿಯುವದೆಂದರೆ, ಕ್ಷುತ್, ಪಿಪಾಸೆ, ಶೋಕ, ಮೋಹ, ಜನನ ಮರಣಗಳೆಂಬ ಷಡೂರ್ಮಿಗಳನುಳಿದು, ದಾಸತ್ವ, ವೀರ ದಾಸತ್ವ, ಭೃತ್ಯತ್ವ, ಸಮಯಾಚಾರತ್ವ, ಶಾಂತತ್ವ, ಸಕಳ ವಕ್ತೃತ್ವಗಳೆಂಬ ಷಡ್ವಿಧ ಸಜ್ಜನತ್ವವುಳ್ಳವನಾಗಿರುವದು.

ಏಳು ಬಿಟ್ಟು ಏಳು ಹಿಡಿವುದೆಂದರೆ, ತನುವ್ಯಸನ, ಮನವ್ಯಸನ, ಧನ ವ್ಯಸನ, ರಾಜವ್ಯಸನ, ಉತ್ಸವ ವ್ಯಸನ, ಸೇವಕ ವ್ಯಸನ, ವಿಶ್ವವ್ಯಸನಗಳೆಂಬ ಸಪ್ತ ವ್ಯಸನಗಳ ವರ್ಜಿಸಿ, ಕ್ರಿಯಾಚಾರ, ಭಾವಾಚಾರ, ಸತ್ಯಾಚಾರ, ನಿತ್ಯಾಚಾರ, ಧರ್ಮಾಚಾರ, ಸರ್ವಾಚಾರ, ಸಂಪತ್ತಿನಾಚಾರಂಗಳ ವಹಿಸಿ ಕೊಂಡಿರುವದು.

ಎಂಟು ಬಿಟ್ಟು ಎಂಟು ಹಿಡವುದೆಂದರೆ, ಆಲಸ್ಯ, ಮೋಹ, ಅತಿನಿದ್ರೆ, ಚಾಪಲ್ಯ, ಹೀನವೃತ್ತಿ, ಪರನಿಂದೆ, ಹಿಂಸತ್ವ, ಪಾಪಿಷ್ಠತ್ವಗಳೆಂಬ ಎಂಟು ಗುಣ ಕಳೆದು, ಶಿವಭಕ್ತಜನ, ವಾತ್ಸಲ್ಯ, ಶಿವಸೂಚಾರತಿ, ಶಿವಾರ್ಚನೆ, ಶಿವಾರ್ಥವಾದ ವ್ಯಾಪಾರ, ಶಿವಕಥಾಶ್ರವಣೇಚ್ಛೆ, ಶಿವಧ್ಯಾನ, ಶಿವಾದ್ವೈತ, ಶಿವಾನುಕೂಲತೆಗಳೆಂಬ ಪರಮ ಸಾತ್ವಿಕಂಗಳಾದ ಅಷ್ಟವಿಧ ಭಕ್ತಿಯುಕ್ತ ನಾಗಿರುವದು.

ಒಂಭತ್ತನುಳಿದು ಒಂಭತ್ತು ಹಿಡಿವುದೆಂದರೆ, ಸುಖ, ದುಃಖ, ರಾಗ, ದ್ವೇಷ, ಮದ, ಮತ್ಸರ, ಲೋಭ, ಮನೋಧರ್ಮ, ಅಧರ್ಮಭಾವನೆಗಳೆಂಬ ನವಗುಣವರ್ಜಿಸಿ, ಅಕ್ರೋಧ, ಆರೋಗ್ಯ, ಜಿತೇಂದ್ರಿಯತ್ವ, ಕ್ಷಮೆ, ಜನ ಪ್ರಿಯತ್ವ, ಅಲೋಭ, ದಾತೃತ್ವ, ಅಭಯ, ನಿರ್ಮದಗಳೆಂಬ ನವಚಿಹ್ನಗ ಳುಳ್ಳಾತನಾಗಿರುವದು.

ಹತ್ತುಬಿಟ್ಟು ಹತ್ತು ಹಿಡಿವುದೆಂದರೆ, ತ್ವಕ್ಕು, ನೇತ್ರ, ಶ್ರೋತ್ರ, ಜಿಹ್ವೆ, ಘ್ರಾಣಗಳೆಂಬೈದು ಜ್ಞಾನೇಂದ್ರಿಯಗಳು, ವಾಕ್, ಪಾಣಿ, ಪಾದ, ಗುದ, ಗುಹ್ಯಗಳೆಂಬೈದು ಕರ್ಮೇಂದ್ರಿಯಂಗಳು. ಈ ದಶೇಂದ್ರಿಯಗಳ ವ್ಯಾಪಾರ ತೊಲಗಿಸಿ, ಸ್ಪರ್ಶನೋದಕ, ಅವಧಾರೋದಕ, ಹಸ್ತೋದಕ, ಗುರುಪಾದೋದಕ, ಲಿಂಗಪಾದೋದಕ, ಜಂಗಮಪಾದೋದಕ, ಆಪ್ಯಾಯ ನೋದಕ, ಪರಿಣಾಮೋದಕ, ನಿರ್ನಾಮೋದಕ, ಸತ್ಯೋದಕಗಳೆಂಬ ದಶವಿಧ ಪಾದೋದಕಗಳಲ್ಲಿ ಮಗ್ನನಾಗಿರುವದು.

ಹನ್ನೊಂದು ಬಿಟ್ಟು ಹನ್ನೊಂದು ಹಿಡಿವುದೆಂದರೆ– ಇತರ ಮತದವರು ಪಕ್ಷಪಕ್ಷಕ್ಕೆ ಮಾಡುವ ಏಕಾದಶ್ಯಾದಿ ವ್ರತಗಳ ವರ್ಜಿಸಿ, ಘ್ರಾಣದಲ್ಲಿ ಗಂಧ ಪ್ರಸಾದ, ಜಿಹ್ವೆಯೊಳು ರಸಪ್ರಸಾದ, ನೇತ್ರದಲ್ಲಿ ರೂಪಪ್ರಸಾದ, ಹಸ್ತದಲ್ಲಿ ಸ್ಪರ್ಶಪ್ರಸಾದ, ಶ್ರೋತ್ರದಲ್ಲಿ ಶಬ್ದಪ್ರಸಾದ, ಹೃದಯದಲ್ಲಿ ತೃಪ್ತಿಪ್ರಸಾದ, ತನುವಿನೊಳು ಗುರುಪ್ರಸಾದ, ಮನದೊಳು ಲಿಂಗಪ್ರಸಾದ, ಭಾವದೊಳು ಜಂಗಮಪ್ರಸಾದ, ಸಕಲೇಂದ್ರಿಯಗಳಲ್ಲಿ ಸಮತಾಪ್ರಸಾದ ಜ್ಞಾನಪ್ರಸಾದಗ ಳೊದಗಿ, ಏಕಾದಶ ಪ್ರಸಾದದೊಳು ಕಾಯುವಡಗಿರ್ಪಾತನೇ ಪ್ರಸಾದಿ.

ಶ್ರೀ ಷ. ಬ್ರ. ಚನ್ನಬಸವದೇವರು ಇನ್ನೊಂದು ಬಗೆಯಿಂದ ನಿರೂಪಿಸಿರುವರು. ಪ್ರಥಮದಲ್ಲಿ ಮಹಾದೇವಂಗೆ ಮನವರ್ಪಿತ, ದ್ವಿತೀಯದಲ್ಲಿ ಮಹೇಶ್ವರಂಗೆ ವೀರಾರ್ಪಿತ, ತೃತೀಯದಲ್ಲಿ ಶಂಕರಂಗೆ ಸಮಾಧಾನಾರ್ಪಿತ, ನಿರ್ವಿಷಯಾರ್ಪಿತ, ಪಂಚಮದಲ್ಲಿ ಪಂಚವಸ್ತ್ರಾರ್ಪಿತ, ಷಷ್ಠಮದಲ್ಲಿ ನಷ್ಟರೂಪಾಗಿ ನಿರೂಪಾರ್ಪಿತ, ಸಪ್ತಮದಲ್ಲಿ ಆತ್ಮಾರ್ಪಿತ, ಅಷ್ಟಮದಲ್ಲಿ ತನ್ನ ಮರೆದು ಮಹಾರ್ಪಿತ, ನವಮದಲ್ಲಿ ನಿಃಶೂನ್ಯಾರ್ಪಿತ, ದಶಮದಲ್ಲಿ ಮಹಾರ್ಪಿತ, ಏಕಾದಶದಲ್ಲಿ ಏಕಾದಶ ಪ್ರಸಾದವ ನೋಡಹೋದರೆ ತನ್ನ ನುಂಗಿತ್ತಯ್ಯ. ಉಪಮಿಸಬಾರದು ಮಹಾಘನವ ಕೂಡಲಚನ್ನಸಂಗಮದೇವಾ.

ಒಂದು ಬಿಟ್ಟು ಒಂದು ಹಿಡಿಯಬೇಕೆಂಬದನ್ನು ತೋರಿಸುವಾಗ, "ಅಹಂ ಬ್ರಹ್ಮಾಸ್ಮಿ" ಎಂಬದನ್ನು ಬಿಡಬೇಕೆಂಬದಾಗಿ ಹೇಳಲ್ಪಟ್ಟಿದೆ. ಇದರಿಂದ ಬಹುಜನರಿಗೆ ತಪ್ಪುತಿಳುವಳಿಕೆಯಾಗಬಹುದು. ಈ ಸಂಗತಿಯನ್ನು ಕುರಿತು ವೀರಶೈವ ಮತಜ್ಞಾನ ಚಕ್ರವರ್ತಿಗಳಾದ ಶ್ರೀ ಚನ್ನಬಸವಣ್ಣನವರ ಹಿರೇಮಂತ್ರಗೋಪ್ಯದ ಎರಡು ಪದ್ಯಗಳ ಅನುಭವವನ್ನು ಪರಾಮರ್ಶಿಸಿದರೆ ತಮಗಾದ ತಪ್ಪುತಿಳುವಳಿಕೆಯು ದೂರಾಗಬಹುದೆಂದು ಭಾವಿಸಿದ್ದೇನೆ.

ಆಕಾರವಿಡಿದು ಅರ್ಚನೆ ಪೂಜನೆಯಂ ಮಾಡಿ ।
'ಏಕೋದೇವನದ್ವಿತೀಯ' ಎಂದುದು ಶ್ರುತಿ ॥
ಯಾಕೆ ವೃಥಾ ಬೊಮ್ಮದ ಮಾತು ಆತ್ಮನೇ ದೈವವೆಂಬ ।
ಹೋಕ ಯೋಗಿ ಕೇಳು ವೀರಮಾಹೇಶ್ವರವಾ ॥೧॥

ಭಾವಾರ್ಥ: — ಆಕಾರವೆಂದಡೆ ಕ್ರಿಯಾಲಿಂಗ, ಕ್ರಿಯಾಲಿಂಗವೆಂದಡೆ, ಶಿವಸಾದಾಖ್ಯ, ಅಮೂರ್ತಿಸಾದಾಖ್ಯ, ಮೂರ್ತಿಸಾದಾಖ್ಯ, ಕರ್ತೃಸಾದಾಖ್ಯ, ಕರ್ಮಸಾದಾಖ್ಯವೆನಿಸುವ ಪಂಚಸಾದಾಖ್ಯಂಗಳ ಗರ್ಭೀಕರಿಸಿಕೊಂಡು ಇರುತ್ತಿಹ ಲಿಂಗವು. ಆಚಾರಲಿಂಗವೆಂದಡೆ, ಆ ಪಂಚಸಾದಾಖ್ಯವೇ ನಿಷ್ಕಲ ಪಂಚಶಕ್ತಿಯ ಸಂಬಂಧವು. ಇಂತಿವೆಲ್ಲಕ್ಕೂ ಆಶ್ರಯಕಾರಣವು ಶುದ್ಧ ಶಿವತತ್ವವು. ಇದುಕಾರಣ ಕ್ರಿಯಾಲಿಂಗವೆಂದಡೆ ಇಷ್ಟಲಿಂಗವು ಜನ್ಮ ಜರೆ ಮರಣಾದಿ ಅನಿಷ್ಟವ ಪರಿಹರಿಸುವ ಶಕ್ತಿಯುಳ್ಳದು. ಇಂತೀ ಇಷ್ಟಲಿಂಗವನು ಗುರುಕರುಣದಿಂದ ಉಪದೇಶವಾಗಿ ಪಡೆದು ಮಾರ್ಗಕ್ರಿಯೆಯಿಂದ ಲಿಂಗಾರ್ಚನೆ ಮಾಡುವದು. ಪರಮೇಶ್ವರ ನಿಜಪ್ರಸನ್ನ ಪ್ರಸಾದತ್ವವನೈದುವಡೆ ಲಿಂಗಪೂಜೆಯಿಂದಲ್ಲದೆ ಅಯ್ದುಬಾರದು. ಆ ಶಿವಲಿಂಗಪೂಜೆಯಂ ಸಾಮಾನ್ಯವೆಂದು ಕಂಡು, ಆತ್ಮತತ್ವವನು ವಿಶೇಷವೆಂದು ಬಗೆದು, ಲಿಂಗವೆಂದು

ಪರಮೇಶ್ವರನೆಂದು ಪರಮಾತ್ಮನೆಂದು ಪರಶಿವನೆಂದು ಪರಬ್ರಹ್ಮನೆಂದು, ಈ ನಾಮಪರ್ಯಾಯಗಳು ಶಿವಲಿಂಗವೆಂಬ ಶಿವಜ್ಞಾನವಿಲ್ಲದೆ, ಆತ್ಮಂಗೆ ಪರಮಾತ್ಮಾದಿ ನಾಮಪದಂಗಳಂ ಸಂಬಂಧಿಸಿ, ಅಹಮೆಂದು ಬ್ರಹ್ಮನ ಮಾನಸ ಪುತ್ರರಾದ ಸನಕಾದಿಗಳೊಳಗೊಬ್ಬ ಸನತ್ಕುಮಾರನೆಂಬ ಅಭ್ಯಾಸಯೋಗಿಯು "ಆತ್ಮನು ಅಸ್ವತಂತ್ರನು, ಅನೀಶ್ವರನು, ಪಾಪಬದ್ಧನು, ಪಶು" ಎಂಬ ವಿವೇಕವಿಲ್ಲದೆ, ಶೂನ್ಯನೆಂದು ಬಗೆದು, ನಂದಿಕೇಶ್ವರನ ಶಾಪದಿಂದ ಒಂಟೆಯಾದನು. ಮತ್ತಂ ಬ್ರಹ್ಮ ವಿಷ್ಣುಗಳು ಅಹಂಕರಿಸಿ ಆತ್ಮೈಕಮೆಂದು ಘನಲಿಂಗ ಪ್ರಮಾಣವನರಿಯದೆ ಗೃದ್ರ (ಹದ್ದು), ವರಾಹ ತನುಗಳನೆಯ್ದಿದರು ಇಂಥ ವರುಗಳಿಗೆ ಹೀಗಾಯಿತೆಂದಡೆ— ಎಲೈ ಭ್ರಾಂತಯೋಗಿ ? ನಿನಗೇತಕೆ ವೃಥಾ ಬಯಲು ಭ್ರಮೆಯು. ಅದುಕಾರಣ ಸಚ್ಚಿದಾನಂದ ನಿತ್ಯಪರಿಪೂರ್ಣ ಮಹಾದೇವನೊರ್ವನೆ ದೇವನಲ್ಲದೆ ಎರಡಿಲ್ಲವೆಂಬುದು ಶ್ರುತಿವಾಕ್ಯ. ಈ ವಾಕ್ಯದ ಪ್ರಮಾಣ ನಿಶ್ಚಯಿಸಲರಿಯದಿರ್ದಡೆ ವೀರಮಾಹೇಶ್ವರ ಸಿದ್ಧಾಂತದಲ್ಲಿ ನಿನ್ನ ತಿಳಹುವೆನೆಂದು ಶ್ರೀ ಚನ್ನಬಸವೇಶ್ವರ ದೇವರು ನಿರೂಪಮಂ ಕೊಡುತ್ತಿಹರು.

—ಮುಂದುವರಿಯುವದು.




# ಜಗತ್ತಿಗೆ
# ಶ್ರೀ ನಿಜಗುಣಶಿವಯೋಗಿಗಳ ಸಂದೇಶ.

(ಬರೆದವರುः— ಶ್ರೀ. ಅನ್ನದಾನೀಶ್ವರ ವಿರಕ್ತಮಠ, ಬಿ. ಎ. ಆನರ್ಸ, ಬಿ. ಟಿ.)

**ಮಾನವ ಸ್ವಭಾವಃ—** ಮಾನವನಿಗೆ ಸುಖಬೇಕು. ಭೌತಿಕ ಸುಖವಿಲ್ಲದ ಬಾಳು ಹಾಳು. ಆದರೆ ಭೌತಿಕ ಸುಖವೇ ಜೀವನದ ಸರ್ವಸ್ವವಲ್ಲ. ಭೌತಿಕ ಸುಖವನ್ನೇ ತನ್ನ ಜೀವನದ ಗುರಿಯನ್ನಾಗಿಟ್ಟುಕೊಂಡರೆ ಮನುಷ್ಯನಿಗೆ ಶಾಂತಿ ಸಿಗಲಾರದು. ಭೌತಿಕ ಸುಖದಲ್ಲಿಯೇ ಮನುಜನು ತನ್ನ ಶಾರೀರಿಕ ಮತ್ತು ಬೌದ್ಧಿಕ ಶಕ್ತಿಗಳನ್ನು ಅಪವ್ಯಯ ಗೊಳಿಸಲಾರರು. ಹಾಗೆ ನಡೆದರೆ ಜೀವನದಲ್ಲಿಯ ತತ್ವದೃಷ್ಟಿಯು ಮಾಯವಾಗುತ್ತೆ ಹೋಗುವದು. ಭೂತದೃಷ್ಟಿಯೇ ಹೆಚ್ಚಾಗಿ ತಾತ್ವಿಕ, ನೈತಿಕ, ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳಿಗೆ ಬೆಲೆಯೇ ಉಳಿಯುವದಿಲ್ಲ. ಸರಳ ಜೀವನ ಮತ್ತು ಉದಾತ್ತ ವಿಚಾರಗಳಿಗೆ ಮಹತ್ವವಿಲ್ಲದ ಮೇಲೆ ಜಗತ್ಕಲ್ಯಾಣ,

ಅನಿತ್ಯವಾದ, ಅಸತ್ಯವಾದ, ಕ್ಷಣಿಕವಾದ ವಸ್ತುಗಳನ್ನು ಬೆನ್ನುಹತ್ತಿದರೆ ಅವ ನಿಗೆ ಗಂಭೀರ ಸುಖವು ಸಿಗಲಾರದು. ಗಂಭೀರ ಸುಖಕ್ಕಾಗಿ ಮನುಷ್ಯನು ಆಧ್ಯಾತ್ಮಿಕ ಸ್ವಭಾವ ಸಂಸ್ಕೃತಿಗಳನ್ನು ಅಳವಡಿಸಿಕೊಳ್ಳಲಿಕ್ಕೆಬೇಕು. ಆಧ್ಯಾ ತ್ಮಿಕ ಸ್ವಭಾವ ಸಂಸ್ಕೃತಿಗಳನ್ನು ಅಳವಡಿಸಿಕೊಳ್ಳಲಿಕ್ಕೆಬೇಕು. ಆಧ್ಯಾತ್ಮಿಕ ಸಂಸ್ಕೃತಿಯನ್ನು ಮರೆತು ಭೌತಿಕ ವಾದವನ್ನೇ ಎತ್ತಿಹಿಡಿದ ವ್ಯಕ್ತಿಗಳು, ರಾಷ್ಟ್ರಗಳು, ಸಾಮ್ರಾಜ್ಯಗಳು, ಜಾತಿಗಳು, ಮತಗಳು, ಧರ್ಮಗಳು ಮಣ್ಣು ಗೂಡಿ ಹೋಗಿವೆ. ಆಧ್ಯಾತ್ಮಿಕ ತೇಜಸ್ಸಿಲ್ಲದ ಜಾತಿ ಮತ ಧರ್ಮಗಳು ಆತ್ಮ ವಿಲ್ಲದ ದೇಹಗಳಂತೆ ಜಡವಾಗಿ ಮಾನವ ಸಮಾಜದಲ್ಲಿ ದ್ವೇಷಾಸೂಯೆಗಳ ಬೀಜಗಳನ್ನು ಬಿತ್ತುತ್ತಲಿವೆ. ಮಡಿ ಮೈಲಿಗೆ, ವಿಧಿನಿಷೇಧ, ಸ್ಪೃಶ್ಯಾಸ್ಪೃಶ್ಯತೆ, ಶುಷ್ಕ ಕರ್ಮಠ ಆಚಾರ, ಜ್ಯೋತಿಷ್ಯ ಫಲದ ಅಂಧಾನುಕರಣ, ಉಚ್ಚ ನೀಚ ಉದ್ಯೋಗ ಭೇದ, ಮುಂತಾದ ಆಧ್ಯಾತ್ಮಿಕ ತೇಜವಿಲ್ಲದ ಆಚಾರ ವಿಚಾರಗಳನ್ನು ಆರ್ಯರು ನಂಬಿದಾಗ ಭಾರತದಲ್ಲಿ ಹಳ್ಳಿಗೊಂದು ಹೊಲ ಗೇರಿಯನ್ನುಂಟು ಮಾಡಿ ಸಮಾಜದಲ್ಲಿ ವಿಷಯತೆಯ ಬೀಜವನ್ನು ಬಿತ್ತಿದ ರೆಂದೂ, ಅದರ ವಿಷ ಫಲವನ್ನು ನಾವು ಈಗ ಉಣ್ಣುತ್ತಿದ್ದೇವೆಂದೂ, ಅಧ್ಯಾತ್ಮ ವಾದಿಗಳಾಗಿದ್ದ ಸ್ವಾಮಿ ರಾಮತೀರ್ಥರು ತಮ್ಮ ಉಪನ್ಯಾಸಗಳಲ್ಲಿ ಸ್ಪಷ್ಟವಾಗಿ ಹೇಳಿರುವರು.

ದೇಹ ಸುಖವನ್ನೇ ನೆಚ್ಚಿ ಆತ್ಮಾನಂದವನ್ನು ಮರೆಯುವದು ಮನುಷ್ಯ ಸ್ವಭಾವ. ಮಾನವ ಸ್ವಭಾವವನ್ನು ದಿವ್ಯ ಸ್ವಭಾವವನ್ನಾಗಿ ಪರಿವರ್ತಿಸಲಿಕ್ಕೆ ಮಹಾತ್ಮರು ನಮ್ಮ ಭಾರತದಲ್ಲಿ, ನಮ್ಮ ಕರ್ನಾಟಕದಲ್ಲಿ ಆಗಾಗ್ಗೆ ಜನ್ಮ ತಾಳಿ ತಮ್ಮ ಆಧ್ಯಾತ್ಮಿಕ ನಡೆನುಡಿಗಳಿಂದ ಮಾನವ ಜನಾಂಗಕ್ಕೆ ಬೆಳಕು ತೋರಿ ಹೋಗಿರುವರು. ಅಂಥ ಮಹಾತ್ಮರಲ್ಲಿ ಶ್ರೀ ನಿಜಗುಣಶಿವಯೋಗಿ ಗಳು ಒಬ್ಬರು. ಶ್ರೀ ನಿಜಗುಣಶಿವಯೋಗಿಗಳು ಅಚ್ಚಕೆಚ್ಚಿನ ಕನ್ನಡ ನುಡಿ ಗಳಲ್ಲಿ ಅಧ್ಯಾತ್ಮ ತೇಜಸ್ಸು ಓಜಸ್ಸುಗಳನ್ನು ತುಂಬಿ ಕನ್ನಡ ಶರಸತಿಯನ್ನು ತೇಜೋಮಯವಾಗಿ ಮಾಡಿರುವರು. ಅಂಥ ವಿಭೂತಿಗಳ ಆಧ್ಯಾತ್ಮಿಕ ಸಂದೇ ಶದ ಕಡೆಗೆ ಕನ್ನಡಿಗರಾದ ನಾವು ಹೊರಳಿ ನಡೆಯುವದು ನಮ್ಮ ಪವಿತ್ರ ಕರ್ತವ್ಯವಾಗಿದೆ.

## ಸಂದೇಶ.

ಹಸನಾದ ಬಾಳು:— ಲೌಕಿಕ ಮತ್ತು ಪಾರಮಾರ್ಥಿಕ ಬಾಳುಗಳೆ ರಡು ಬಿಡದೇ ಕೂಡಿ ನಡಿಸುತಿರುವವರೇ ನಿಜಗುಣಶಿವಯೋಗಿಗಳ ದೃಷ್ಟಿ

ಯಲ್ಲಿ ಜಾಣನು. ನರನು ಭೋಗಾನುಭವದಲ್ಲಿದ್ದರೂ ಆಧ್ಯಾತ್ಮಿಕ ಸಾಧನವನ್ನು ಮಾಡುತ್ತಿರಬೇಕು. ಬ್ರಹ್ಮಾನಂದವು ತಿಳಿವಿನ ಸುಖವು. ಲೌಕಿಕ ಸುಖವು ವಿಷಯ ಸುಖವು, ಬಾಹ್ಯದಲ್ಲಿ ಹೆಂಡಿರು ಮಕ್ಕಳುಗಳ ಮೇಲೆ ಪ್ರೀತಿಯಿದ್ದರೂ ಅಂತರಂಗದಲ್ಲಿ ಪರಮಾತ್ಮನ ನೆನಹು ನೆಲಿಸಿರಬೇಕು.

## ವ್ಯಾವಹಾರಿಕ ವೇದಾಂತ-

"ನಾನು ಬ್ರಹ್ಮನಿದ್ದೇನೆ. ನಾನು ಶುದ್ಧ ಅರಿವು ಇದ್ದೇನೆ." ಎಂದು ಅಂದರೆ ಸಾಲದು. ನಿಜಗುಣಶಿವಯೋಗಿಗಳು ಸುಮ್ಮನೆ ಅರಿವಿನಿಂದ ಮುಕುತಿಯಾಗುವದಿಲ್ಲವೆಂದೂ, ಲೇಸೆನಿಸುವ ಗುಣಗಣಬೇಕೆಂದೂ ಸ್ಪಷ್ಟವಾಗಿ ಸಾರಿರುವರು. ಜೀವನದಲ್ಲಿ ಶರಣರ ಸಂಗಬೇಕು, ಕರುಣೆಬೇಕು, ವಿನಯಬೇಕು, ವಿವೇಕದಿಂದ ಕೂಡಿದ ವಿದ್ಯೆಬೇಕು, ಅಂತರಂಗ ನಿಗ್ರಹಬೇಕು, ಬಹಿರಿಂದ್ರಿಯ ನಿಗ್ರಹಬೇಕು, ಸತ್ಯಧರ್ಮ ನಿಷ್ಠೆಬೇಕು, ಶ್ರೇಷ್ಠ ಭಕ್ತಿಯಿಂದಲೂ ನೀತಿಯಿಂದಲೂ ನಡೆಯಬೇಕು. ಸುಜನರನ್ನು ಬಗಗೊಳಿಸುವ ನಡೆನುಡಿಗಳು ಬೇಕು ಜೀವಭಾವವೆಳ್ಳನಿತು ತೋರದಂತೆ ಅಮಳಯೋಗ ಸಾಧನ ಮಾಡುತ್ತಿರಬೇಕು, ಕಾಮನ ಹೂಬಾಣಕ್ಕೆ ಹೆದರದ ಶಕ್ತಿಬೇಕು, ಭೃಂಗಕೀಟನ್ಯಾಯದಂತೆ ಜೀವ ಶಿವನಾಗುವ ಸಾಧನದಲ್ಲಿರಬೇಕು. ಒಟ್ಟಾರೆ ವೇದಾಂತವನ್ನು ವ್ಯವಹಾರದಲ್ಲಿ ತರಬೇಕು. ಕೇವಲ ವಾಗಾದ್ವೈತಿಗಳಾಗಬಾರದು. ಎಡರಡಿಸಿದ ವೇಳೆಯಲ್ಲಿ ಧೈರ್ಯವಿರಬೇಕು, ಸಿರಿವಂತನು ವಿನಯವಂತನಾಗಿರಬೇಕು, ಹುಸಿಯ ನುಡಿಯದ ಸತ್ಯನಿಷ್ಠೆಬೇಕು, ಶಾಂತಪುರುಷರು ಅಹುದೆಂಬ ವರ್ತನೆಯಿರಬೇಕು, ಅರ್ಥವನ್ನು ವಿತರಣ ಮಾಡಿ ಭೋಗಿಸಬೇಕು, ಕೋಪವಂಟದ ತಪ, ಪರವಧುವಿನ ರೂಪುಗಂಡೆಳಸದ ಕರಣ ವಿಜಯ ಧರೆಯೊಳತ್ಯಧಿಕವೆನಿಪಶಾಂತಿ ಬೇಕು, ಬರಿಯ ಬ್ರಹ್ಮನ ಮಾತುಗಳನ್ನು ಹೇಳುತ್ತ ದುರ್ಗುಣ ದುರಾಚಾರಗಳಿಂದ ನಡೆದರೆ ಅಂಥ ದುರುಳ ವೇದಾಂತಿಗಳಿಂದ ಜಗದಲ್ಲಿ ಶಾಂತಿ ಸ್ಥಾಪನೆಯಾಗಲಾರದು. ಈ ಸಂದರ್ಭದಲ್ಲಿ ವೈರಾಗ್ಯಧೀರಳಾದ ಅಕ್ಕಮಹಾದೇವಿ, ಮಹಾನುಭಾವಿ ಬಸವಣ್ಣ, ಸುಜ್ಞಾನಿ ಚನ್ನಬಸವಣ್ಣ ಈ ಅಮರ ಶರಣಿ-ಶರಣರ ಕೆಳಗಿನ ಅಮೃತದಂಥ ವಚನಗಳನ್ನು ಇಲ್ಲಿ ಸ್ಮರಿಸಬಹುದು.

"ಅಖಂಡ ಜ್ಞಾನವಾಯಿತೆಂದು ಶುನಕ ಸೂಕರ ಕುಕ್ಕುಟ ಮಾರ್ಜಾಲಗಳ ಕೂಡ ಭುಂಜಿಸಬಹುದೇ? ಭಾವದಲ್ಲಿ ತನ್ನ ನಿಜದ ನೆಲೆಯನರಿವು

ತ್ರಿಹುದು ಸುಜ್ಞಾನ ಸತ್ಕ್ರಿಯೆಗಳ ಸುನೀತಿ ಸುಮಾರ್ಗದಲ್ಲಿ ವರ್ತಿಸುವದು." ಎಂದು ಅಕ್ಕಮಹಾದೇವಿಯು ಹಾಡಿರುವಳು.

"ಬರಿಯ ವಾಗಾದ್ವೈತವ ನುಡಿವರೆಲ್ಲ ಹೊಲಬುಗೆಟ್ಟರು, ಸುಜ್ಞಾನ ಸತ್ಕ್ರಿಯವಿಡಿದು ಸಮರಸೈಕ್ಯರಾಗಲರಿಯದ ಬರಿಯವಾಗ ದ್ವೈತಿಗಳ ಕಂಡು ಎನ್ನ ಮನ ಹೇಸಿತ್ತು" ಎಂದು ಚನ್ನಬಸವಣ್ಣನವರು ಹಾಡಿರುವರು.

"ಶಿವಜ್ಞಾನ ದೀಪ್ತಿಯಾಯಿತ್ತೆಂದು ಶಿವಶರಣರೊಡನೆ ಧಿಕ್ಕರಿಸಬೇಡ" ಎಂದು ಬಸವಣ್ಣನು ಹಾಡಿರುವನು.

## ತ್ರಿಕರಣ ಶುದ್ಧಿಯಿಲ್ಲದೆ ಬ್ರಹ್ಮಸಾಕ್ಷಾತ್ಕಾರವಿಲ್ಲ.

ತ್ರಿಕರಣ ಶುದ್ಧಿಯಿಲ್ಲದೆ ಬ್ರಹ್ಮಸಾಕ್ಷಾತ್ಕಾರವಾಗಲಾರದೆಂದು ನಿಜಗುಣ ಶಿವಯೋಗಿಗಳು ಸುಂದರವಾಗಿ ಪ್ರತಿ-ಪಾದಿಸಿರುವರು. ಪರವಧುವಿನ ಕೂಟ, ಅನ್ಯರ ವಿತ್ತಾಪಹರಣ, ಅಭಕ್ಷ್ಯ ಸೇವನೆ, ಹಿಂಸೆ, ಈ ನಾಲ್ಕು ಪಾಪಗಳು ಕಾಯಕ ದೋಷಗಳೆನಿಸುವವು. ಹುಸಿ, ಅನುಚಿತ, ನಿಷ್ಠುರತ್ವ, ಪೈಶೂನ್ಯತೆ ಈ ನಾಲ್ಕು ವಾಚಕ ದೋಷಗಳು. ಜನರೊಲಿಯದ ಕಾರ್ಯದೆಶಕ, ಅನಿಷ್ಟ ಚಿಂತನೆ, ಅನ್ಯಧನಾಕಾಂಕ್ಷೆ, ಅನ್ಯಸತಿಯರಕಾಂಕ್ಷೆ ಇವು ನಾಲ್ಕು ಮಾನಸಿಕ ದೋಷಗಳು, ಈ ತ್ರಿದೋಷಗಳನ್ನು ಮನುಷ್ಯನು ಕಳೆದುಕೊಳ್ಳಲಿಕ್ಕೆ ಬೇಕು.

## ತಪಸ್ಸಿನಿಂದ ತ್ರಿಕರಣಶುದ್ಧಿ.

ತಪಸ್ಸಿನಿಂದ ತ್ರಿಕರಣ ಶುದ್ಧಿಯುಂಟಾಗುವದೆಂದು ನಿಜಗುಣಶಿವಯೋಗಿಗಳು ಸ್ಪಷ್ಟವಾಗಿ ಹಾಡಿರುವರು. ಮನೆಮಾರು ತೊರೆದು ವನವಾಸದಲ್ಲಿದ್ದು ಕೆಲವು ಆರ್ಯ ಋಷಿಗಳಂತೆ ತನುವ ದಂಡಿಸಿ ಮನವ ಬಳಲಿಸಿ ತಪಸ್ಸು ಮಾಡುವದು ಈಗ ಜಗತ್ತಿಗೆ ಬೇಕಾಗಿಲ್ಲ. ತನುವ ದಂಡಿಸಬೇಡ, ಧನವ ನೀಗಿರಬೇಡ ಮನೆಮಾರುದೊರೆದು ವನವಾಸಬೇಡ ಎಂದೂ, ಶಂಭುಲಿಂಗದ ಸುಜ್ಞಾನ ದೃಢಮಾಗೆ ಪರಮಾನಂದವಹುದೆಂದೂ ಶಿವಯೋಗಿಗಳು ಖಂಡಿತವಾಗಿ ಹೇಳಿರುವರು. ಒಳ್ಳೆಯ ಕೆಲಸಗಳನ್ನು ಮಾಡುವ ಪ್ರವೃತ್ತಿ ಇರಬೇಕು. ಹರ ಗುರುಪೂಜೆ ಭಜನೆ ನಡಿಸಬೇಕು, ಶರಣ ಸೇವೆ ಮಾಡಬೇಕು, ಸಾತ್ವಿಕ ರೀತಿಯಿಂದ ಬಾಳಬೇಕು. ಹೀಗೆ ಸಾತ್ವಿಕ ಜೀವನ ಸಾಗಿಸಿದರೆ ಕಾರ್ಯದೋಷಗಳು ನೀಗುತ್ತವೆ. ವಿನಯದ ನುಡಿಗಳು, ಪರಹಿತದ ನುಡಿ ಉಚಿತ ಮಾತುಗಳು, ಸ್ಪಷ್ಟಾರ್ಥದ ಮಾತುಗಳು, ಶಿವಮಂತ್ರೋ

ಚ್ಚರಣೆಗಳಿಂದ ವಾಚಕ ದೋಷಗಳು ನಿವಾರಣೆಯಾಗುತ್ತವೆ. ಶಮ, ದಮ, ದಯಾ, ವಿವೇಕ, ಆತ್ಮವಿದ್ಯೆ, ವಿರಕ್ತಿ, ಯೋಗಗಳಿಂದ ಮಾನಸಿಕ ದೋಷಗಳು ತೊಲಗುತ್ತವೆ.

## ಬಾಳಿನ ಚೆಲುವು.

ಶ್ರೀ ನಿಜಗುಣಶಿವಯೋಗಿಗಳು ಬದುಕಿನಲ್ಲಿ ಚೆಲುವು ನಲಿವು ಒಲವುಗಳು ಒಳಗೂ ಹೊರಗೂ ತುಂಬಿ ತುಳುಕುವಂತೆ ಆಚರಿಸಿ ಜಗತ್ತಿನಲ್ಲಿ ಶಾಂತಿಯನ್ನು ಸ್ಥಾಪಿಸಬೇಕೆಂದು ಬಗೆದುಂಬಿ ಹಾಡಿರುವರು. ಜಗತ್ತಿನಲ್ಲಿ ಮಾನವನು ಯಾರೊಡನೆಯೂ ವೈರತ್ವವಿಲ್ಲದೆ ಪ್ರೀತಿಯಿಂದಿರುವದೇ ಚೆಂದವು. ಪ್ರೀತಿಯಿಂದ ಪ್ರೀತಿಯೂ, ದ್ವೇಷದಿಂದ ದ್ವೇಷವೂ ಹುಟ್ಟಿ ಬೆಳೆಯುತ್ತವೆ. ಪ್ರೇಮಮಯ ಜೀವನವು ಶಾಂತಿಯ ಜೀವನವು. ತಲ್ಲಣಗೊಳ್ಳದೆ ನೀತಿಯಿಂದ ನಡೆಯುವದೇ ಚೆಂದವು. ನೀತಿಗೆ ಮಹತ್ವಕೊಡದೇ ಇದ್ದರೆ ಜಗತ್ತು ನಾಶವಾಗುವದು. ಯುದ್ಧಗಳೂ, ಕಲಹಗಳೂ ತಪ್ಪಿದ್ದಲ್ಲ. ಎಲ್ಲರೊಡನೆ ವೈರವಿಲ್ಲದೆ ಪ್ರೀತಿಯಿಂದಿರುವದು ಹೃದಯದ ಚೆಲುವಾದರೆ ಹಿತವ ವುದು? ಅಹಿತವಾವುದು? ಎಂದು ವಿಚಾರಿಸಿ ತಿಳಿದು ನಡೆಯುವದು ವಿಚಾರ ಆಚಾರಗಳ ಚೆಲುವು. ಬುದ್ಧಿಯಲ್ಲಿಯ ವಿಕಾರವನ್ನು ಅಚ್ಚಳಿಯುವದೇ ಬುದ್ಧಿಯ ಚೆಲುವು. ಯಾವಾಗಲೂ ಎಚ್ಚರದಿಂದ ನಡೆಯುವದೇ ನಡೆಯ ಚೆಲುವು. ಪರರ ದುರ್ಗುಣಗಳನ್ನೇ ನೋಡುತ್ತ ಹೋದರೆ ದೋಷೈಕ ದೃಷ್ಟಿಯು ಬೆಳೆದು ಬರುವದು. ಛಿದ್ರಾನ್ವೇಷಣದ ನೋಟದಿಂದ ಸತ್ಯಾನ್ವೇಷಣವು ಕಡಿಮೆಯಾಗುತ್ತ ಬರುವದು.

ಪರರ ದುರ್ಗುಣಗಳನ್ನು ಮರೆತು ಮನುಷ್ಯನು ಮನುಷ್ಯನನ್ನು ಆದರಿಸಬೇಕು. ಪ್ರಪಂಚದಲ್ಲಿ ಆದರಸತ್ಕಾರಗಳು ದ್ವೇಷಭಾವನೆಯನ್ನು ಕಡಿಮೆ ಮಾಡುತ್ತವೆ. ಪರರ ದುರ್ಗುಣಗಳನ್ನು ಮರೆತು ಆದರಿಸುವದು ಸಾಮಾಜಿಕ ಸಭ್ಯತೆಯ ಚೆಲುವು. ಜಗತ್ತಿನಲ್ಲಿ ಆಪತ್ತು ವಿಪತ್ತುಗಳು ಸಂಭವಿಸಿದರೆ ಮರುಗದಿರಬೇಕು, ತಾಳ್ಮೆಯಿಂದ ಸಹಿಸುವ ಶಕ್ತಿಯನ್ನು ಬೆಳೆಸಬೇಕು; ಇದು ತಾಳ್ಮೆಯ ಚೆಲುವು. ಸ್ವಸಂತೋಷದಿಂದ ಕಷ್ಟಗಳನ್ನು ಸಹಿಸುತ್ತಸಾಗಿದರೆ ಮನದ ಶಕ್ತಿಯು ಅಭಿವೃದ್ಧಿ ಹೊಂದುತ್ತ ಹೋಗುವದು. ಪ್ರಯತ್ನದಿಂದ ದೊರಕಿದ್ದರಲ್ಲಿ ತೃಪ್ತಿಹೊಂದಬೇಕು. ಹೆಚ್ಚು ಆಶೆಮಾಡಿದರೆ ಮನಸ್ಸಿನ ಸಮಾಧಾನವು ಮಾಯವಾಗುವದು. ಆಶೆಗೆ ಕೊನೆಯೇ ಇಲ್ಲ.

ಸಂತೃಪ್ತಿಯಿಂದ ಸಂಗ್ರಹ ಪ್ರವೃತ್ತಿಯು ಕಡಿಮೆಯಾಗುವದು. ಆಶೆಯಿಂದ ಸಂಗ್ರಹ, ಸಂಗ್ರಹದಿಂದ ಆಶೆ. ಹೀಗೆ ಆಶೆಯ ವರ್ತುಳವು ಬೆಳೆಯುತ್ತ ಹೋಗುವದು. ಪರಮಾತ್ಮನಲ್ಲಿ ಭಕ್ತಿಯನ್ನು ಕಲಿಯುವದೇ ಭಾವದ ಚೆಲುವು. ತನ್ನ ನಿಜವನರಿದಯುಕ್ತಿಯಗಲಿರುವದೇ ಜ್ಞಾನದ ಚೆಲುವು. ವಿರತಿ ವಜ್ರ ದಿಂದ ಮೋಹ ಗಿರಿಯನ್ನು ಒಡೆಯುವದೇ ವೈರಾಗ್ಯದ ಚೆಲುವು. ಶರಣರ ಪಾದಕ್ಕೆ ನಿರಹಂಕಾರದಿಂದ ನಮಿಸುವದೊಂದು ಆಚರಣೆಯ ಚೆಲುವು. ಶರಣರು ಪ್ರಪಂಚದಲ್ಲಿ ಹೇಗೆ ಬಾಳಬೇಕೆಂಬುದನ್ನು ನಡೆನುಡಿಗಳಿಂದ ತೋರಿಸಿ ಜಗತ್ಕಲ್ಯಾಣ ಮಾಡಿರುವರು. ಭವವನ್ನು ಶಿವಮಯವಾಗಿ ಮಾಡಿದವರು ಶರಣ-ಶರಣೆಯರು. ಜೀವನನ್ನು ಶಿವನನ್ನಾಗಿ ಪರಿವರ್ತಿಸಿದವರು ಶರಣರು. ಮೋಕ್ಷ ಮತ್ತು ಜಗತ್ಕಲ್ಯಾಣಗಳೆರಡನ್ನು ಸಾಧಿಸಿದವರು ಶರಣರು. ಆದ ಕಾರಣ ಶರಣರನ್ನು ಪ್ರೀತ್ಯಾದರ ಭಕ್ತಿ ವಿಶ್ವಾಸಗಳಿಂದ ಕಾಣಬೇಕೆಂದು ನಿಜಗುಣಶಿವಯೋಗಿಗಳು ಅಂದವಾಗಿ ಹೇಳಿರುವರು. ಮುಕ್ತಿಸಿಗುವಂತೆ ಲಿಂಗಪೂಜೆ ಮಾಡಿದರೆ ಅದು ಲಿಂಗಪೂಜೆಯ ಚೆಲುವು. ರೂಢಿಯ ದಾಸ ರಾಗಿ ಮುಕ್ತಿಯ ಗುರಿಯಿಲ್ಲದೆ ಲಿಂಗಪೂಜೆ ಮಾಡಿದರೆ ಅಂಥವರ ಬಾಳು ನಗೆಗೇಡು ನಗೆಗೇಡು.

## ವಿಶ್ವಧರ್ಮದ ತಿರುಳು.

ಶ್ರೀ ನಿಜಗುಣಶಿವಯೋಗಿಗಳು ಇಡೀ ವಿಶ್ವಕ್ಕೆ ಬೇಕಾದ ವ್ಯಾಪಕವಾದ ಉದಾರವಾದ ನೀತಿ-ಧರ್ಮವನ್ನೇ ಬೋಧಿಸಿರುವರು ಹಿಂದೂಧರ್ಮ, ಬೌದ್ಧಧರ್ಮ, ಇಸ್ಲಾಮಧರ್ಮ, ಕ್ರಿಸ್ತೀಧರ್ಮಗಳು ಮತ್ತು ವಿವಿಧ ಜಾತಿ ಮತಗಳಲ್ಲಿ ಪ್ರತಿಪಾದ್ಯವಾದ ಧರ್ಮಗಳು ವಿಶ್ವದಲ್ಲಿಯ ಪ್ರತಿಯೊಬ್ಬ ವ್ಯಕ್ತಿಗೂ ಮಾನ್ಯವಾಗಲಾರವು. ಜಗತ್ತಿನ ಜನರಿಗೆ ಇಂದು ವಿಶ್ವಧರ್ಮಬೇಕು. ಅಂಥ ವಿಶ್ವಧರ್ಮದ ತಿರುಳನ್ನು ಶಿವಯೋಗಿಗಳ ಹಾಡುಗಳಲ್ಲಿ ನಾವು ಸವಿಯ ಬಹುದು.

ಈ ಜಗತ್ತಿನಲ್ಲಿ ನರಜನ್ಮಕ್ಕಿಂತಲೂ ಮಿಗಿಲಾದ ಜನ್ಮವಿಲ್ಲ ಆದರೆ ಶರೀರವು ಕೊನೆಗೊಮ್ಮೆ ಕೆಡುವದು ನಿಶ್ಚಿತ. ಈ ಶರೀರವು ಹುಟ್ಟಿಬಂದ ದ್ದಕ್ಕೆ ಸಾಫಲ್ಯವಾವುದು? ಶರೀರದ ಸದುಪಯೋಗ ಮಾಡಿಕೊಂಡು ನಡೆ ಯುವದು, ಕರ್ಮೇಂದ್ರಿಯ, ಜ್ಞಾನೇಂದ್ರಿಯಗಳನ್ನು ಅಂಕಿತದಲ್ಲಿಟ್ಟುಕೊಂಡು ನಡೆಯುವದು, ಪರಹಿತ ಮಾಡುವದು ಈ ತೆರವಾಗಿ ನಡೆದರೆ ಶರೀರವು

ಸಫಲವಾಗುವದು. ಪರಹಿತ ಅಥವಾ ಜನಕಲ್ಯಾಣ ಮಾಡುತ್ತ ಬಾಳಿದರೆ ಶರೀರವು ಜನಿಸಿ ಬಂದದ್ದಕ್ಕೆ ಸಾರ್ಥಕವಾಗುವದು. ಪರೋಪಕಾರವೇ ಪುಣ್ಯ. ಪರಪೀಡೆಯೇ ಪಾಪ. ಇದೇ ಹದಿನೆಂಟು ಪುರಾಣಗಳ ಸಾರ. ಶರೀರವನ್ನು ಭಿಕ್ಷೆಬೇಡಹಚ್ಚುವದು ಅತ್ಯಂತ ಹಗುರಾದ, ಹೀನವಾದ ಕೆಲಸವು. ಭಿಕ್ಷೆ ಬೇಡುವವನಿಗೆ ಎಂದೂ ಗುರುತನ ಬರುವದಿಲ್ಲ. ಭಿಕ್ಷೆಬೇಡದೇ ಸ್ವಾವಲಂಬನ ದಿಂದ ಜೀವಿಸುವದೇ ಗುರುತನವು. ಅಯಾಚನೆಯೇ ಗುರುತನವು. ಯಾಚನೆ ಗಿಂತ ಲಘುತರವಾದುದು ಯಾವದೂ ಇಲ್ಲ. ಜಗತ್ತಿನ ಎಲ್ಲ ರಾಷ್ಟ್ರಗಳೂ ಭಿಕ್ಷೆಯನ್ನು ಕಾಯಿದೆಯಿಂದ ನಿಷೇಧಿಸಿವೆ.

ತನಗಿಂತ ಪ್ರಿಯವಾದ ವಿಷಯವು ಜಗತ್ತಿನಲ್ಲಿ ಯಾವದೂ ಇಲ್ಲ. ಆದಕಾರಣ ವ್ಯವಹಾರದಲ್ಲಿ ಭೆಟ್ಟಿಯಾದವರ ಕ್ಷೇಮಸಮಾಚಾರವನ್ನು ಮೊದಲು ವಿಚಾರಿಸಬೇಕು. ಜನರೆದುರಿಗೆ ತನ್ನ ವಿಷಯವನ್ನೇ ಯಾವಾಗಲೂ ಹೇಳುತ್ತ ಹೋಗಬಾರದು.

ರಣರಂಗದಲ್ಲಿ ಹೋರಾಡಿ ವೈರಿಗಳನ್ನು ಗೆಲ್ಲುವದು ವೀರತನವಲ್ಲ. ಕಾಮನನ್ನು ಗೆಲ್ಲುವದೇ ನಿಜವಾದ ವೀರತನ. ಜಗತ್ತಿನ ಎಲ್ಲ ವಿಚಾರ ವಂತರೂ ಯುದ್ಧ ವೀರರನ್ನು ಖಂಡಿಸಲೇಬೇಕು. ಆತ್ಮವೀರರನ್ನು ಎತ್ತಿ ಹಿಡಿದರೇನೇ ಯುದ್ಧಗಳು ನಿಲ್ಲಬಹುದು. ಶರಣ ವಿಜಯಕ್ಕಿಂತ ಹೆಚ್ಚಿನ ಕಲಿತನವಾವುದೂ ಇಲ್ಲ. ಆಧುನಿಕ ಇತಿಹಾಸಕಾರರು ಯುದ್ಧಗಳನ್ನು ಯುದ್ಧ ವೀರರನ್ನು ಯುದ್ಧಪ್ರಿಯ ರಾಷ್ಟ್ರಗಳನ್ನೂ ಖಂಡಿಸಲೇಬೇಕು.

ಈಗಿನ ಅಣುಬಾಂಬು, ಹೈಡ್ರೋಜನ್ ಬಾಂಬುಗಳಿಂದಲೂ ಕಾಮನ ಹೂಬಾಣವು ಭಯಂಕರವಾದದ್ದು. ಕಾಮದಿಂದ ಕ್ರೋಧ ಹುಟ್ಟುವದು. ಕ್ರೋಧದಿಂದ ಸಮ್ಮೋಹವುಂಟಾಗುವದು, ಸಮ್ಮೋಹದಿಂದ ಸ್ಮೃತಿವಿಭ್ರಮ ವಾಗುವದು. ಸ್ಮೃತಿ ಭ್ರಂಶದಿಂದ ಬುದ್ಧಿ ನಾಶವಾಗಿ ನಾಶ ಕಟ್ಟಿಟ್ಟದ್ದು. ಕಾಮನನ್ನು ಗೆಲ್ಲಬೇಕಾದರೆ ಕಾಮನನ್ನು ಗೆದ್ದ ಶಿವನಿಗೇನೆ ಶರಣಾಗಬೇಕು. ಶಿವ ಅಥವಾ ಪರಮಾತ್ಮ ಸಾಕ್ಷಾತ್ಕಾರ ಮಾರ್ಗದ ಕಡೆಗೆ ವ್ಯಕ್ತಿಗಳೂ ರಾಷ್ಟ್ರಗಳೂ ತಿರುಗಲೇಬೇಕು.

ಮೃದುವಚನವೇ ಸುಧಾರಸ ಧಾರೆ, ಮೃದುವಚನವೇ ಸಕಲ ಜಪತಪ ಗಳಿಗೆ ಸಮಾನ. ಮೃದುವಚನವೇ ನಿಜವಾದ ಜಪತಪ, ಬೇರೆ ಜಪತಪಗಳ ಅವಶ್ಯಕತೆಯಿಲ್ಲ. ಮೃದುವಚನವುಳ್ಳವನು ಶ್ರೀಗುರುವು. ಮೃದುವಚನವುಳ್ಳ

ಶ್ರೀಗುರುವಿನ ವಚನವೇ ಶ್ರೇಷ್ಠ ಅಮೃತವು. ಮೃದುವಚನವಿಲ್ಲದವನು ಗುರುವೇ ಅಲ್ಲ. ಸತ್ಯವನ್ನು ನಂಬುವದು, ಸತ್ಯವನ್ನು ನುಡಿಯುವದು, ಸತ್ಯದಿಂದ ನಡೆಯುವದು ಇದೇ ನಿಜವಾದ ತಪಸ್ಸು. ಪರಮಾತ್ಮನು ಸತ್ಯನು. ಆ ಪರಾತ್ಪರ ಸತ್ಯವನ್ನು ನಂಬುವದೇ ತಪವು. ಎಡೆವಿಡದಿಹ ಸತ್ಯಕ್ಕಿಂತ ಬೇರೆ ತಪವೇ ಇಲ್ಲ, ಬರೀ ಮೃದುವಚನವಿದ್ದರೆ ತೀರಲಿಲ್ಲ. ಆ ಮೃದು ವಚನವು ಸತ್ಯನಿಷ್ಠವಾದುದೂ ಆಗಿರಬೇಕು.

ನಿರ್ಮಲವಾದ ಮನಕ್ಕಿಂತ ಹೆಚ್ಚಿನ ತೀರ್ಥಕ್ಷೇತ್ರಗಳಿಲ್ಲ, ಮನಸ್ಸನ್ನು ಶುದ್ಧವಾಗಿ ಮಾಡಿಕೊಂಡರೆ ಸಾಕು, ತೀರ್ಥಕ್ಷೇತ್ರಗಳಿಗೆ ಕಂಡಲೆಯುವ ಕಾರಣವಿಲ್ಲ. ಮನಸ್ಸು ಶುದ್ಧವಾಗುವದು. ನಿಜಭಕ್ತಿಯಿಂದ ವರಭಕ್ತಿಯು ವರಭಕ್ತಿಯು ಸಚ್ಚಾರಿತ್ರ್ಯವನ್ನುಂಟುಮಾಡುವದು. ನಿಷ್ಕಾಮ ಭಕ್ತಿಯೇ ವರಭಕ್ತಿಯು. ಕಾಯಕ, ವಾಚಿಕ, ಮಾನಸಿಕ, ದೋಷಗಳು, ಹೋದರೆ ಮನವು ವಿಮಲವಾಗುವದು. ವರಭಕ್ತಿಯಿಂದ ತ್ರಿದೋಷಗಳು ದೂರಾಗುತ್ತಿವೆ. ಸುಚರಿತ್ರವೇ ಹೆಚ್ಚಿನ ಅಗ್ಗಳಿಕೆ, ವರಭಕ್ತಿಗಿಂತ ಹೆಚ್ಚಿನ ಸುಚ್ಚರಿತವಿಲ್ಲ. ವರಭಕ್ತಿಯು ಅಂತಃಕರಣವನ್ನು ಶಿವನ ಕಿರಣವನ್ನಾಗಿ ಮಾಡುವದು, ಜಾತಿ ಕುಲ ವರ್ಣ ಸೂತಕಾದಿಗಳಿಲ್ಲದ ಸಹಜ ಭಕ್ತಿಯು ಅಂತಃಕರಣವನ್ನು ಕರುಣಾಮಯವಾಗಿ ಮಾಡುವದು, ಕರುಣಾಧರ್ಮ ಅಥವಾ ಅಹಿಂಸಾಧರ್ಮಕ್ಕಿಂತ ಶ್ರೇಷ್ಠವಾದ ಧರ್ಮವೇ ಇಲ್ಲ. ಇಂಥ ಅಹಿಂಸಾ ಧರ್ಮದಿಂದ ಮನವೇ ಪವಿತ್ರವಾಗುವದು ಖಂಡಿತ, ಮನವು ಸಂಕುಚಿತವಾಗಲಾರದು ಉದಾರವಾಗಬೇಕು ಉದಾರತನವು ಶ್ರೇಷ್ಠ ಗುಣವು. ಮನವು ಉದಾರವಾಗಬೇಕು. ಮನವು ಸುಮನವಾಗಬೇಕು, ಚಿತ್ತವು ಸುಚಿತ್ತವಾಗಬೇಕು, ಅಹಂಕಾರವು ನಿರಹಂಕಾರವಾಗಬೇಕು, ಬುದ್ಧಿ ಸುಬುದ್ಧಿಯಾಗಬೇಕು. ಅಂದರೆ ಅಂತಃಕರಣ ಶುದ್ಧವಾದಂತೆ ಬುದ್ಧಿಯು ಸುಬುದ್ಧಿಯಾಗಬೇಕಾದರೆ ಅದು ಮಂಗಳವಾಗಬೇಕು, ಮತಿಗೆ ಮಂಗಳವನ್ನುಂಟು ಮಾಡುವದಾವದು ? ಉತ್ತಮ ಅಥವಾ ಶರಣರ ಸಂಗ: ನಯವಿನಯದಿಂದ ಮನೆಗೆ ಬಂದವರನ್ನು ನೋಡಿದರೆ ಅದೇ ಶ್ರೇಷ್ಠ ಉಪಚಾರವು, ಅಹಂಕಾರದಿಂದ ಬೇಕಾದಷ್ಟು ಕೃತ್ರಿಮ ರೀತಿಯ ಉಪಚಾರ ಮಾಡಿದರೂ ಅದು ಉಪಚಾರವಲ್ಲ, ಇಂಥ ನಯವಿನಯದಿಂದ ಅಹಂಕಾರವು ನಿರಹಂಕಾರವಾಗುವದು. ಚಿತ್ತದ ಶಕ್ತಿಯು ಬಲಿಯಬೇಕಾದರೆ ಏಕಾಗ್ರವಾಗಲಿಕ್ಕೆ ಬೇಕು, ಚಿತ್ತೈಕಾಗ್ರತೆಯು ಶಿವ ಮತ್ತು ಶಿವಶರಣರು, ಅಧ್ಯಾತ್ಮ, ಸಂಸ್ಕೃತಿ ತತ್ವಗಳಿಂದ

ಪ್ರಾಪ್ತವಾಗುವದು. ಸತ್ಯಸಂಗತಿಗಳಲ್ಲಿ ಅವಧಾನ ಮತ್ತು ಅಭಿರುಚಿಗ ಳುಂಟಾದರೆ ಚಿತ್ತೈಕಾಗ್ರತೆ ತಾನೇ ಸಾಧ್ಯವಾಗುವದು.

ಆನಂದವನ್ನು ಕೊಡತಕ್ಕ ವಿದ್ಯೆಯು ಮನುಷ್ಯನಿಗೆ ಅಚ್ಚಳಿಯದ ಆಭರಣವು. ಬೇರೆ ಆಭರಣಗಳ ಹಂಬಲವು ಅವನಿಗೆ ಬೇಡ. ಪರಬೊಮ್ಮದ ರಿವು ಅಂಥ ವಿದ್ಯೆಯು ಸದ್ವಿದ್ಯೆಯು. ಪರಬೊಮ್ಮದರಿವಿಗಿಂತ ಹೆಚ್ಚಿನ ಜ್ಞಾನ್ಯವಿಲ್ಲ. ಈ ಶುದ್ಧ ಅರಿವಿಲ್ಲದ ಎಲ್ಲ ತರ್ಕಶಾಸ್ತ್ರ, ವೇದಾಗಮ, ಪುರಾ ಣಗಳು, ವಿಜ್ಞಾನ, ಅರ್ಥಶಾಸ್ತ್ರಾದಿಗಳು ಜಗದಲ್ಲಿ ಶಾಶ್ವತ ಶಾಂತಿಯನ್ನು ನೆಲೆಗೊಳಿಸಲಾರವು. ಆನಾರೆಂದು ತಿಳಿವುದು ಮನುಜಕುಲ ಜನನದ ಲಾಭ ಈ ತರಪದ ಲಾಭಹಾನಿಯಲ್ಲಿಯೇ ಕಾಲಕಳೆದರೆ ಲಾಭಕ್ಕಿಂತ ಹಾನಿಯೇ ಹೆಚ್ಚು.

ಮನುಷ್ಯನು ಸದ್ವಿವೇಕಿಯಾಗಿ ನಡೆಯಬೇಕು. ಸತ್ಯದ ಅಭಿವರ್ಧನವೇ ಸದ್ವಿವೇಕ. ಸತ್ಯಾಗ್ರಹವೇ ಸದ್ವಿವೇಕ. ಸತ್ಯದ ವಾಣಿಯಂತೆ, ಅಂತರ್ವಾಣಿ ಯಂತೆ ನಡೆಯುವದೇ ಸದ್ವಿವೇಕ. ಅಸತ್ಯವನ್ನು ತ್ಯಜಿಸುವದೇ ಸದ್ವಿವೇಕ ಇಂಥ ಸದ್ವಿವೇಕವುಳ್ಳವನು ಉಪವಾಸ, ಜಾಗರಣಾದಿಗಳನ್ನು ಮಾಡುವ ಅಗತ್ಯವೇ ಇಲ್ಲ; ಏಕೆಂದರೆ ಸದ್ವಿವೇಕವೇ ಎಸೆವ ಜಾಗರಣ. ಸತ್ಯದ ಅಭಿಮಾನವು ಕೆಡಿಸದಿದ್ದ ಅಭಿಮಾನವು. ಇಂಥ ಸಾತ್ವಿಕ ಅಭಿಮಾನವೇ ಧನವು. ಇಂಥ ಧನವನ್ನು ಮಾನವನು ಗಳಿಸಲಿಕ್ಕೆಬೇಕು. ಅಂತರಂಗದ ಸಂಯಮನವಿಲ್ಲದೆ ಸದ್ವಿವೇಕ ಬರಲಾರದು. ಶಮೆಯು ಚಂದ್ರನ ಅಮೃತ ಕಿರಣದಂತೆ ಆನಂದದ ಸಾಧನವಾಗಿರುವದು. ಶಮೆಗಿಂತ ಮುಕುತಿ ಸಾಧನ ಬೇರೆ ಇಲ್ಲ.

ಮನುಷ್ಯನು ತನ್ನನ್ನು ಹೊಗಳಿಕೊಳ್ಳುತ್ತ ಪರರನ್ನು ನಿಂದಿಸುತ್ತ ಆಶೆ ಕಾಮಾದಿಗಳ ದಾಸನಾಗಿ ಮನಬಂದಂತೆ ನಡೆಯುವದೇ ಸ್ವಾತಂತ್ರ್ಯವಲ್ಲ. ಇದು ಸ್ವೇಚ್ಛಾಚಾರವು. ಆತ್ಮಸಂಯಮನದಿಂದ, ಶಿಸ್ತಿನಿಂದ ಯಾರನ್ನೂ ನಿಂದಿಸದೆ, ಯಾರ ಮನಸ್ಸನ್ನೂ ನೋಯಿಸದೇ ಈ ಜಗದಲ್ಲಿ ವರ್ತಿಸುವದೇ ಸ್ವಾತಂತ್ರ್ಯದ ನಿಜವಾದ ಅರ್ಥವು. ಸ್ವಾತಂತ್ರ್ಯದಿಂದ ಬುದ್ಧಿಯಲ್ಲಿ ಪ್ರಕಾಶ, ಸ್ವಭಾವದಲ್ಲಿ ಮಾಧುರ್ಯಗಳು, ಉಜ್ವಲವಾಗಿ ಹೊಳೆಯಬೇಕು. ನಿಂದೆಯು ಎಲ್ಲಕ್ಕಿಂತ ಹೆಚ್ಚಿನ ಪಾಪವು. ನಿಂದೆ ಮಾಡುತ್ತ ಕಾಲಕಳೆಯುವ ಮಾನ ವನು ತನ್ನ ಉನ್ನತಿಯನ್ನು ಮಾಡಿಕೊಳ್ಳಲಾರನು. ಜಗತ್ತಿನ ಸಾಧಾರ

ಣೆಯನ್ನು ಮಾಡಲಾರನು. ಎರಡನೆಯವರಲ್ಲಿ ಸುಗುಣಗಳನ್ನೇ ಅರಸಬೇಕು. ಅವನೇ ಸತ್ಯಾನ್ವೇಷಿಯಾಗುವನು. ತನ್ನಲ್ಲಿಯ ದುರ್ಗುಣಗಳನ್ನು ಅರಸಿ ತನ್ನ ನಿಂದೆಯನ್ನು ಮಾಡಿ ಉನ್ನತಿಹೊಂದಲಿಕ್ಕೆ ಮನುಷ್ಯನಿಗೆ ಅಧಿಕಾರವಿದೆ. ಜಗದಣ್ಣ ಬಸವಣ್ಣನು “ಆತ್ಮಸ್ತುತಿ ಪರನಿಂದೆಯ ಕೇಳಸದಿಂತಿರಿಸಯ್ಯಾ ನಿಮ್ಮ ಧರ್ಮ” ಎಂದು ಪರಮಾತ್ಮನನ್ನು ಪ್ರಾರ್ಥಿಸಿಕೊಂಡಿರುವನು. ತನ್ನನ್ನು ಹೊಗಳಿಕೊಳ್ಳಬಾರದು, ಅನ್ಯರು ತನ್ನನ್ನು ಹೊಗಳಿದರೆ ಹಿಗ್ಗಬಾರದು. ತಾನು ಅನ್ಯರನ್ನು ನಿಂದಿಸಬಾರದು. ಪರನಿಂದೆಯನ್ನು ಕಿವಿಯಿಂದ ಕೇಳಲೂಬಾರದು. ಇದೇ ಜೀವನೋನ್ನತಿಯ ಕ್ರಮ ವಿಕಾಸದ ರಾಜಮಾರ್ಗ.

ಮಾನವನು ವಿಚಾರ, ಮಾತು, ಕೃತಿಗಳಲ್ಲಿ ಒಂದು ಕ್ರಮ, ಒಂದು ಪದ್ಧತಿಯನ್ನು ಅನುಸರಿಸಬೇಕು. ಕ್ರಮತಪ್ಪಿ ನಡೆಯುವದೇ ಕಷ್ಟವನ್ನುಂಟು ಮಾಡುವದು. ಕ್ರಮಬದ್ಧವಾಗಿ ಜೀವನ ಸಾಗಿಸುವರೆ ಸುಖವು ಸಿಗುವದು. ಸಿಕ್ಕಾಗ ಸಿಕ್ಕಂತೆ ಶಿಸ್ತಿಲ್ಲದೇ ಮಾತನಾಡಿದರೆ ದುಃಖಕ್ಕೊಳಗಾಗಬೇಕಾಗುವದು. ಸಿಕ್ಕಂತೆ ಯದ್ವಾತದ್ವಾ ನಡೆದರೆ ಕೇಡು ತಪ್ಪಿದ್ದಲ್ಲ. ಕ್ರಮವಿಡಿದು ಬಾಳಿದರೆ ವೇಳೆಯ ಸದುಪಯೋಗವಾಗುವದು. ಶಕ್ತಿಯ ಅಪವ್ಯಯವಾಗುವದಿಲ್ಲ. ತದ್ವಿರುದ್ಧ ಶಕ್ತಿವಂತನುಯವಾಗುವದು.

ಮಾನವನು ಜನರಲ್ಲಿ ಅಪವಾದ ಬರದಂತೆ ನೀತಿಯಿಂದ ನಡೆಯಬೇಕು. ಪಡೆದ ಅಪವಾದಕ್ಕಿಂತ ಬೇರೆ ಮರಣವಿಲ್ಲ. ಸತ್ಕೀರ್ತಿಯೇ ಜೀವನ. ಅಪಕೀರ್ತಿಯೇ ಮರಣ. ಅಪವಾದದಿಂದ ಚಿಂತೆ ತಪ್ಪಿದ್ದಲ್ಲ. ಚಿಂತೆಯು ಜೀವನವೆರಸಿದ ಮರಣವೇ ಸರಿ. ಶಿವಚಿಂತೆಯು ಉದ್ಧಾರಕವು. ಪ್ರಪಂಚದಿಂದ ಪರಮಾರ್ಥವನ್ನು ಸಾಧಿಸುವ ಚಿಂತೆ ಇರಬೇಕು. ಅನಿಷ್ಟ ವಸ್ತುಗಳ ಚಿಂತೆಯಿದ್ದರೆ ಮನುಷ್ಯನು ಅನಿಷ್ಟನಾಗುತ್ತ ಸಾಗುತ್ತಾನೆ.

ಮನುಷ್ಯನು ಒಬ್ಬ ಪರಮಾತ್ಮನನ್ನು ನಂಬಬೇಕು, ಶಾಂತಸಜ್ಜನರ ಸಹವಾಸದಲ್ಲಿರಬೇಕು; ಏಕೆಂದರೆ ಅವರು ಶಿವ ಅಥವಾ ಪರಮಾತ್ಮ ಸಾಕ್ಷಾತ್ಕಾರದ ದಾರಿಯಲ್ಲಿರಿಸುವರು, ಆಧ್ಯಾತ್ಮ ಸಾಧನೆಗೆ ಸಹಾಯಕರಾಗುವರು, ದಯವೇ ಧರ್ಮದ ಮೂಲವೆಂದು ತಿಳಿದು ಕರುಣೆಯಿಂದ ನಡೆಯಬೇಕು. ತನ್ನನ್ನು ಆಶ್ರಯಿಸಿದವರನ್ನು ರಕ್ಷಿಸಬೇಕು, ಶಿವಪಥ ಹಿಡಿದು ನಡೆಯುವಾಗ ಎಡರುಗಳು ಬಂದರೆ ಅಂಜಿ ಸನ್ಮಾರ್ಗವನ್ನು ಬಿಡ

ಬಾರದು. ಧೈರ್ಯದಿಂದ ಮುಂದೆ ಮುಂದೆಯೇ ಸಾಗಬೇಕು, ಸಂಪತ್ತು ಬಂದಾಗ ತತ್ವ ದೃಷ್ಟಿಯನ್ನು ಬಿಡಬಾರದು, ಅಹಂಕಾರ ಮಮಕಾರಗಳಿಂದ ವರ್ತಿಸಬಾರದು, ಭಕ್ತಿ, ಜ್ಞಾನ, ವೈರಾಗ್ಯಗಳನ್ನು ಬಿಡಬಾರದು. ಅವು ಮುಕ್ತಿಯ ಸಾಧನಗಳು. ಅದ್ವೈತ ಜ್ಞಾನಸಾಧ್ಯವಾಯಿತೆಂದು ಬಾಹ್ಯದಲ್ಲಿ ಅದನ್ನು ಬಳಸಬಾರದು, ಅಂತರಂಗದಲ್ಲಿ ಏಕೀಭಾವನೆಯೊಡಗೂಡಿರ ಬೇಕು, ಜೀವನ್ಮುಕ್ತನು ಹೊರಗೆ ಪ್ರಾಪಂಚಿಕನಂತೆ ತೋರುತ್ತ ಬದುಕುತ್ತಿದ್ದರೂ, ಒಳಗೆ ಪರಮಾತ್ಮನೇ ಆಗಿ ಶೋಭಿಸುತ್ತಿರುವನು.

## ಬ್ರಹ್ಮಜ್ಞಾನದಿಂದ ಗಂಭೀರ ಸುಖ.

ಮನುಷ್ಯನು ಗಂಭೀರ ಸುಖವನ್ನು ಪಡೆಯಬೇಕು. ಬೇರೆ ಬೇರೆ ರೀತಿಯಲ್ಲಿ ಸಂಶಯದಿಂದ ವಿಪರೀತ ಭಾವನೆ ಮಾಡಿದರೆ ಗಂಭೀರ ಸುಖವು ಸಿಗಲಾರದು. ಅಹಂಭಾವನೆ, ಸಂಶಯ ಭಾವನೆ ಮತ್ತು ವಿಪರೀತ ಭಾವನೆಗಳು ಗಂಭೀರ ಸುಖಕ್ಕೆ ವಿಘ್ನಕಾರಿಗಳು. ಅನ್ಯಥಾಭಾವನೆಯಿಂದ ಬ್ರಹ್ಮಜ್ಞಾನವಿಲ್ಲ. ಬ್ರಹ್ಮಜ್ಞಾನವಿಲ್ಲದೆ ಗಂಭೀರ ಸುಖವಿಲ್ಲ. ನಾಲ್ಕುವೇದ, ಆರು ಶಾಸ್ತ್ರ, ಹದಿನೆಂಟುಪುರಾಣ, ದಶೋಪನಿಷತ್ತು, ಇಪ್ಪತ್ತೆಂಟು ಶಿವಾಗಮಗಳನ್ನು ಓದಿ ಧೀರನಾಗಿ ಹೇಳಿ ಜಗತ್ತಿನಲ್ಲಿ ಕೀರ್ತಿಯನ್ನು ಗಳಿಸಿ ತನ್ನ ಬಗೆಯನು ಅರೈಯದಿದ್ದರೆ, ತಾನಾರೆಂದು ವಿಚಾರಿಸಿ ನಿಜದಲ್ಲಿ ನಿಲ್ಲದಿದ್ದರೆ, ಗಂಭೀರ ಸುಖ ಪ್ರಾಪ್ತಿಯಿಲ್ಲ. ಕೋಟಿ ಜಪತಪಗಳನ್ನು ಮಾಡಿ ದೊಡ್ಡ ಋಷಿಯೆನಿಸಿಕೊಂಡು ತತ್ವಮಸಿ ಮಹಾವಾಕ್ಯದ ಅರಿವುಂಟಾಗದಿದ್ದರೆ ಗಂಭೀರ ಸುಖವು ಕನಸೇ ಸರಿ. ಯೋಗಸಾಧನೆಯಿಂದ ಅಣಿಮಾದ್ಯಷ್ಟ ಸಿದ್ಧಿಗಳು ಕರಗತವಾದರೂ ಶಂಭುಲಿಂಗದನುವರಿಯದಿದ್ದರೆ ಗಂಭೀರ ಸುಖವು ದೊರಕೊಳ್ಳದು.

ಗಂಭೀರ ಸುಖವು ಶಿವಸುಖವು. ಅಚ್ಚ, ಅನುಪಮ, ಅಪರೋಕ್ಷ, ಲಿಂಗದೊಳೇಕರಸವಾದ, ಶಂಭುಲಿಂಗದೊಳೇಕವೆನಿಸಿದ ಸುಖವೇ ಗಂಭೀರ ಸುಖವು. ಗಂಭೀರ ಸುಖವು ಜೀವ ಪರಮ ಯೋಗದ ನಿಜವಂದನುಭವಿಯು ಸುಖವು. ಬ್ರಹ್ಮಾನಂದವು ಪರಮ ಸುಖವು. ಅದು ಸಾಕೆನಿಸುವದಿಲ್ಲ. ಸವೆಯುವದಿಲ್ಲ ಬೇರೊಂದನು ಬೇಕೆನಿಸುವದಿಲ್ಲ. ತನ್ನ ಜೋಕೆಗುಂದುವದಿಲ್ಲ. ಮಂತ್ರ, ಲಯ, ಹಠ, ರಾಜಯೋಗಾದಿಗಳಲ್ಲಿ ಬಳಲದೇ ಆನಂದವನೆ ಸೂರೆಗೊಡುವ ಆತ್ಮನಿಜನಿಷ್ಠರಾಗಬೇಕು. ಅಂಗಜ ವಿಕಾರಾದಿ ಗುಣ

ವೆಲ್ಲ ತನಗೆ ವಿಷಯಗಳೆಂದೂ ಅವುಗಳನ್ನು ತಿಳಿವ ಅರಿವೇ ತಾನೆಂದೂ, ಈ ಅರಿವಿನ ನೆನಹು ಸಂತತವಳಿಯದಿಹುದೇ ಶ್ರೇಷ್ಠ ಯೋಗವೆಂದೂ ತಿಳಿಯಬೇಕು. ಸಚ್ಚಿದಾನಂದ ಪರಿಪೂರ್ಣನೆನಿಪ ಸಹಜ ಪರಬ್ರಹ್ಮನೆ ತಾನೆಂಬ ಮತಿಮರೆಯದಿಹುದೇ ನಿಜವಾದ ಯೋಗವು. ಶಂಭುಲಿಂಗ ತಾನಾದೆನೆಂಬ ಪರಿಕಲ್ಪನೆಯನುಳಿದು ತೆರೆಯಡಗಿದಂಬುಧಿಯ ಪರಿಯಂತೆ ಸಲೆಸುಮ್ಮನಿಹುದೇ ನಿಜಯೋಗ.

## ಅರಿವಿನ ಇರವು !

ಅರಿವಿನ ಬಾಳು ನಿಜಬಾಳು. ಮರವೆಯ ಬಾಳು ಹಾಳು. ಅರಿವೇ ನಿಜ ಶಂಭುಲಿಂಗ. ಅರಿವೆ ತಾನೆಂದು ಸಂದೇಹವಿಲ್ಲದಾತನೇ ಜಾಣರ ದೇವ. ಅರಿವು ಪರಮೋಕ್ಷದಿರವು ಎಂದು ಪ್ರೀತಿಯಿಂದ ಇರುವವನೇ ಜ್ಞಾನಿಗಳಲ್ಲಿ ಶ್ರೇಷ್ಠನು.

ಅರಿವೆ ಸದಾನಂದನೆಂದು ಅನುಭವಿಸುವವನೇ ಜಾಣರ ದೇವ. ಅರಿವೆ ಸ್ವಯಂ ಜ್ಯೋತಿ. ಅರಿವಿನಲ್ಲಿ ಮರಹು ಇಲ್ಲ. ಅರಿವೆ ಸತ್ಕ್ರಿಯೆಗಳಿಗೆ ಆಸುವೆಂದು ಬಿಡದಿಹನೆ ಜಾಣರ ದೇವ.

ಅರಿವೆ ಪರಬ್ರಹ್ಮವೆಂದು ಭಾವಿಸುವವನೆ ಜಾಣರ ದೇವ. ಅರಿವಿನಿಂದ ಮರವೆಯಳಿವುದು. ಮರವೆ ಅಳಿದರೆ ಭೇದ ಬುದ್ಧಿ ಕೆಡುವದು. ಭೇದ ಬುದ್ಧಿ ನಾಶವಾದರೆ ಸಹಜಾವಸ್ಥೆ ಪ್ರಾಪ್ತವಾಗುವದು. ಸಹಜಾವಸ್ಥೆಯಿಂದ ವಿಸ್ತರಿಸಲಸಾಧ್ಯವಾದ ಗಂಭೀರ ಸುಖವು ರಕ್ತಗತವಾಗುವದು. ಸಹಜಾವಸ್ಥೆಯು ಶಂಭುಲಿಂಗವಾಗಿ ತಾನಿಪ್ಪ ಇರವು ಅದು. ಸಹಜಾವಸ್ಥೆಯ ಯೋಗಿಯು ಶುದ್ಧ ಚೈತನ್ಯದ ಸ್ಥಿತಿಯು. ಸತ್ಕ್ರಿಯೆಗಳ ಪ್ರೇರಕನು. ಜಗತ್ಕಲ್ಯಾಣಕರ್ತನು. ಅವನಿಂದ ಮನುಷ್ಯ ಸ್ವಭಾವವಾಗುವದು. ಜಗತ್ತು ಶಿವ ಅಥವಾ ಕಲ್ಯಾಣಮಯವಾಗುವದು. ನಿಜಗುಣ ಶಿವಯೋಗಿಗಳು ಇಂಥ ಅತಿಮಾನವ ಯೋಗಿಗಳು. ಅವರ ಸಂದೇಶವು ಜಗತ್ತಿಗೆ ಸುಖ ಶಾಂತಿಗಳನ್ನು ನೀಡುವದು. ಜಗವು ಅತ್ತ ಹೊರಳಲಿ ವಿಶ್ವಶಾಂತಿಯು ಸ್ಥಾಪಿಸಲ್ಪಡಲಿ !!

# ಬಸವಣ್ಣನವರು
# ಭಾರತದ ಮಹಾಭಾಗ್ಯ ವಸ್ತು !

(ಲೇಖಕರುಃ— ಶ್ರೀ ಸ್ವಾಮಿ ದಯಾನಂದದೇವರು, ಬಿ. ಎ., ಯರನಾಳ.)

---

ಹನ್ನೆರಡನೆಯ ಶತಮಾನದ ಸಮಯುವನ್ನು ನಾವು ಈಕ್ಷಿಸಿದರೆ ಅದೊಂದು ಮಹಾಪ್ರಕಾಶಮಾನವಾದ ಕ್ರಾಂತಿಯುಗ. ನೂತನ ಜಗತ್ತಿನ ಜೀವನದ ರೂಪರೇಷೆಗಳನ್ನು ಪ್ರತ್ಯಕ್ಷೀಕರಿಸಿ, ಮಾನವನಲ್ಲಿರುವ ಗಾಢಾಂಧತೆ, ಅಸ್ಪೃಶ್ಯತೆ, ವೈಷಮ್ಯ, ಹೀಕಿಂಡುಗಳ ಕೂಗು, ಮೋಸ ಮತ್ತ್ರಗಳ ಮಸೆ ದಾಟ, ನಿರುದ್ಯೋಗ-ನಿಶ್ಶಕ್ತಿಗಳ ನಿಳವು, ದುರ್ಭಾವನೆಗಳ ಕಲ್ಪಿಸಿ-ಕೈಕೊಟ್ಟು ಹಗ್ಗದಿಂದ ಕಟ್ಟಿಸುವ ಮಾನವನು ಮತ್ತನಾದ ಬಗೆಯಿಂದ ಗುಲಾಮನಾಗಿದ್ದ ದಿನಗಳು.

ಅಂದಿನ ಸಮಯ-ಇಂದಿನ ಸಮಯಗಳ ಒಂದು ಸಾಮ್ಯರೂಪ ತೋರಿಸಲು ಎಷ್ಟೋ ಜನ ಪ್ರಯತ್ನ ಮಾಡುತ್ತಿರಬಹುದು. ಆದರೆ ಇಂದಿನ ವಾತಾವರಣಕ್ಕೆ ಇರುವ ಸುಲಭ-ಸಾಧನೆಗಳು ಆಗಿರಲಿಲ್ಲ. ಈಗಿರುವ ರೈಲು ಮೋಟಾರಗಳು, ತಂತಿ ವಕ್ತೃತ್ವ ಯಂತ್ರಗಳ ಸಾಧನೆ ಆಗಿರಲಿಲ್ಲ. ಜಾತೀಯತೆಯ ಜಾಲವನ್ನು ಜಗತ್ತಿನಲ್ಲೆಲ್ಲ ಬೀಸಿ, ಜನತೆಯನ್ನು ಬಲೆಯಲ್ಲಿ ಎಳೆದು ಪರಿಪರಿಯಿಂದ ಪರಿತಾಪ ಹೊಂದುತ್ತಿರುವ ದಿನ, ಹೋಟೆಲ್ಲುಗಳಿಲ್ಲ! ಮತ್ತೊಂದು ರಾಜ್ಯದ ಸಂದರ್ಶನವಿಲ್ಲ! ಎರಡನೆಯದಾಗಿ ಅವರಿಗೆ ಹಾದಿಯಲ್ಲಿ ಆಯಾಸ ಕಳೆನೊಗೆಯುವ ಒಂದು ಕೂಪವೂ ಇಲ್ಲ. ಧರ್ಮಶಾಲೆಯೂ ಇಲ್ಲ. ಅನಾಚಾರಗಳು ಅಧಿಕೃತ ಆಳಿಕೆಯನ್ನು ಸಾರಿ ಜನ ಜಂಗುಳಿಯನ್ನೆಲ್ಲ ವಿಷಮ ವಾತಾವರಣದಲ್ಲಿ ಎಳೆದು ತಂದ ದಿನಗಳು, ಇಂದು ಮಾನವನು ಕುಳಿತ ಸ್ಥಾನದಲ್ಲಿಯೇ ಬೇಕಾದಹಾಗೆ ಮಾಡುವಷ್ಟು ಜಗತ್ತಿನಲ್ಲಿ ಅದ್ಭುತ ವಸ್ತುಗಳಿಂದ ಸೇವೆ ಸ್ವೀಕರಿಸುತ್ತಾನೆ.

ಇಂಥ ಮಹಾಗಂಭೀರ ವಾತಾವರಣದಲ್ಲಿ ಅಣ್ಣ ಬಸವಣ್ಣನವರು ಹುಟ್ಟಿದರು. ಜಾತಿವೇದ ಮುನಿಗಳಿಂದ "ಜಂತಿಯಾವದು, ವೇದಯಾವದು,

ಇವುಗಳ ಸಂಗಮಕ್ಷೇತ್ರ. ಜಾತಿವೇದವುನಿ ಅಲ್ಲಿ ಅವರ ಅಭ್ಯಾಸ! ಅಧ್ಯಾತ್ಮದ ಹಕ್ಕುಯಾರಿಗಿಲ್ಲ? ಎಂಬ ಮನೋಭಾವ ಅವರದು, ಅದು ಸಾಮಾನ್ಯರಿಗೂ ಏಕೆ ಸಿಕ್ಕಬಾರದು? ಎಂಬ ಹಂಬಲ ಅವರದು, ಶಿವನು ದಂಕೀಯತ್ರಿಯಲ್ಲಿಯೇ ಇದ್ದಾನೆಯೆ? ಎಂಬ ಹಿರಿಕೂಗು ಅವರದು, ಬೇಕಾದ ಹಾಗೆ ವರ್ತಿಸುವವರಿಗೆ ಬ್ರಹ್ಮಜ್ಞಾನದ ಅಭ್ಯಾಸವೆ? ಆಚಾರವುಳ್ಳವರಾಗಿದ್ದವು; ಅದು ಅನಧಿಕೃತವೆ? ಹೀಗೇಕೆ ಎಂಬ ಕೊರಗು ಅವರದು.

ಯಾವ ಮಹಾತ್ಮರೇ ಆಗಲಿ, ಆತನ ಸಂಕಲ್ಪಗಳು ಕೈಗೂಡುವಾಗ ಅನೇಕ ಶಕ್ತಿಗಳೂ ಅವರಿಗೆ ಸಾಧನವಾಗುವವು." ಎಂದು ಹಲವರು ಹೇಳುತ್ತಾರೆ. ಅದರಂತೆ ಮಹಾತ್ಮ ಬಸವಣ್ಣನವರು "ಕುಟೀರದಿಂದ ಕಲ್ಯಾಣಕ್ಕೆ" ದಯಮಾಡಿಸಿದರು. ಇದು ಶಿವಶರಣರ ವೈಶಿಷ್ಟ್ಯ. ಅವರು ಕುಟೀರದಲ್ಲಿದ್ದು ತಪವ ಮಾಡಿ ಮೋಕ್ಷಸಾಧಿಸದೆ ಮಂದಿರದಲ್ಲಿದ್ದು ತಪಸ್ಸು ಮಾಡು ಎಂದು ಹೇಳುತ್ತಾರೆ. ಅದನ್ನೇ ಎತ್ತಿಹೇಳಿ ಅವರು ಸಿದ್ಧರಾಮನ ಉದಾಹರಣೆಯನ್ನು (ಅಲ್ಲಮಪ್ರಭುದೇವರು) ಸೂಚಿಸಿದ್ದಾರೆ. "ಸಣ್ಣ ಸಂಸಾರವ ಬಿಟ್ಟು ದೊಡ್ಡ ಸಂಸಾರಕ್ಕೆರವಾದಿರಲ್ಲ"ವೆಂಬುದನ್ನೂ ತೋರಿಸಿ ಚೆನ್ನಬಸವಣ್ಣನವರು.

> ಅನಂತಕಾಲ ಹೋಗಿ ತರುಮರಾದಿಗಳಲ್ಲಿ ತಪವಿರುವವನು ಒಂದುದಿನ ಗುರುಚರಣ ಸೇವೆ ಸಾಲದೆ ಅಯ್ಯ? ಅನಂತಕಾಲ ಗುರುಚರಣ ಸೇವೆ ಮಾಡುವದು ಒಂದು ದಿನ ಲಿಂಗಪೂಜೆ ಸಾಲದೆ? ಅನಂತ ಕಾಲ ಲಿಂಗಪೂಜೆ ಮಾಡುವದನು ಒಂದುದಿನ ಜಂಗಮ ತೃಪ್ತಿ ಸಾಲದೆ ಅಯ್ಯ! ಅನಂತಕಾಲ ಜಂಗಮ ತೃಪ್ತಿ ಮಾಡುವದನು ಒಂದು ನಿಮಿಷ ನಿಮ್ಮ ಶರಣರ ಅನುಭಾವ ಸಾಲದೆ ಕೂಡಲ ಚನ್ನಸಂಗಮದೇವಾ!

ಎಂದು ಹೇಳಿ ಸುಲಭಸಾಧನೆಯನ್ನು ವಿವರಿಸಿದ್ದಾರೆ. ಅವರಿಗೆ ಗುಡ್ಡದರಿಗಳು ಬೇಡ! ಜನತೆಯಲ್ಲಿದ್ದು, ಜನತೆಯೊಡನೆ ಇದ್ದು ಜನತೆಯೊಡನೆಯೇ ಜೀವನ್ಮುಕ್ತಿಯು ಸಾಧನೆಯಾಗಬೇಕೆಂದು ಹಂಬಲಿಸಿದ್ದಾರೆ; ಹಂಬಲಿಕೆ ಹಲವು ಮಟ್ಟಿಗಾದರೂ ಅವರಿಗೆ ಸಾಧಿಸಿಕೊಟ್ಟಿದೆ. ಈ ಮಾತಿಗೆ ಅನಂತರ ಶರಣರು ಹನ್ನೆರಡನೆಯ ಶತಮಾನದಲ್ಲಿ ಕ್ರಾಂತಿಯೆಸಗಿದುದೇ ಕಾರಣವೆಂದೇ ಹೇಳಬೇಕು. ಲಕ್ಷದಮೇಲೆ ತೊಂಭತ್ತಾರುಸಾವಿರ ಶರಣರು

ಏಳನೂರೆಪ್ಪತ್ತು ಅಮರಗಣಾಧೀಶ್ವರರು ಮೊದಲಾದವರು ಏಕಕಾಲಕ್ಕೆ ಉದ್ಭವಿಸಿ ಎಲ್ಲರೂ ಕೂಡಿ ಮಾಡಬಹುದು. ಎಲ್ಲರೂ ಕೂಡಿ ಕಡೆಯ ಬಹುದು "ಸಹನಾವವಂತು'' ಎಂಬ ಮಂತ್ರವನ್ನು ಪ್ರಾಯೋಗಿಕ ರೀತಿ ಯಲ್ಲಿ ತೋರಿಸಿ ಕೊಟ್ಟವರಲ್ಲಿ ಶರಣರು. ಇಂಥ ಶರಣಗಣಕ್ಕೆ ಹಿರಿಅಣ್ಣ ಬಸವಣ್ಣನವರಾದರು. ಅವರು ಭಕ್ತಿ ಕಾಯಕಗಳ ಸಂಗಮಕ್ಷೇತ್ರದಿಂದ ಜನತೆಯ 'ಕಲ್ಯಾಣ'ಕ್ಕೆ ಬಂದರು. ಅವರು ತಮ್ಮ ದುಡಿಮೆಯಿಂದಲೇ ಜನತೆಯನ್ನು ಉದ್ಧರಿಸಲು ಕಂಕಣಬದ್ಧರಾದರೂ, ದೈವೀ ಬಾಹು ಬಂದು ಅವರ ಹಸ್ತದ ನಿಡಿದು ಕಲ್ಯಾಣದ ಪ್ರಧಾನ ಸಚಿವರ ಸ್ಥಾನದಲ್ಲಿ ಕೂಡ್ರಿ ಸಿತು. ಅವರು ಅಲ್ಲಿ ಸ್ವಾರ್ಥಪರತೆಯನ್ನು ಬಹುಮಟ್ಟಿಗೆ ಜಗತ್ತಿನಿಂದ ಓಡಿ ಸಲು ಪ್ರಯತ್ನ ಮಾಡಿದರು. ಅಸ್ಪೃಶ್ಯತೆಯನ್ನು ಅಳುಕಿಸಿದರು. ಅದ ಕ್ಕಾಗಿ ಅವರು ಪ್ರಾಣವನ್ನು ಕೂಡ ಎರವಾಗುವ ಹೊತ್ತು ಬಂದಿತು. ಅಂಜ ಲಿಲ್ಲ, ಎದೆಗುಂದಲಿಲ್ಲ. ನಿರ್ದಾಕ್ಷಿಣ್ಯಪರವಾಗಿ ದುಡಿದರು.

## ಕಾಯಕವೇ ಕೈಲಾಸ-ದಾಸೋಹಂ ಭಾವ.

*Work is Worship* " ಎಂಬ ಮಾತನ್ನು ಮತ್ತು " *Service before yourself* " ಎಂಬುದನ್ನೂ ನಾವು ಕೇಳಿದ್ದೇವೆ. ಮಾತ್ರ ಕೃತಿ ಯಿಂದ ಕಾಣಲಿಲ್ಲವೆಂಬ ಚಿಂತೆಯನ್ನೂ ಶರಣರು ೮೦೦ ವರುಷ ಪೂರ್ವ ದಲ್ಲಿಯೇ ಬಗೆಹರಿಸಿದ್ದಾರೆ. ಅವರು ಕಾಯಕದ ಬಗ್ಗೆ ಉನ್ನತ ವಾದವನ್ನೇ ಹೂಡಿದ್ದಾರೆ. ಕಾಯಕದಲ್ಲಿ ನಾವೆಷ್ಟು ನಿಷ್ಠೆಯುಳ್ಳವರಾಗಿರಬೇಕೆಂಬುದನ್ನು ಶರಣರು ಸಾರಿದ್ದಾರೆ ನೋಡಿ !

> ಕಾಯಕದಲ್ಲಿ ನಿರುತನಾದಡೆ ಗುರುದರುಶನವಾದಡೂ
> ಮರೆಯಬೇಕು, ಲಿಂಗಪೂಜೆಯಾದಡೂ ಮರೆಯಬೇಕು.
> ಜಂಗಮ ಮುಂದಿದ್ದಡೆಯೂ ಹಂಗುಹರಿಯಬೇಕು.
> ಕಾಯಕವೇ ಕೈಲಾಸವಾದ ಕಾರಣ ಅಮರೇಶ್ವರ
> ಲಿಂಗವಾಯಿತ್ತಾದರೂ ಕಾಯಕದೊಳಗು.

ಅಣ್ಣ ಬಸವಣ್ಣನವರು ಕಾಯಕದಲ್ಲಿ "ವೀರ ಭಕ್ತನ ಭಾಷೆ" ಯಾಗಿ ಹೇಗೆ ಸಾರಿದ್ದಾರೆ ನೋಡಿ !

ಕರ್ಮವೆಂಬ ಅಂಕದೊಡನೆ ಕೊಡರಿಡೆ. ಬಿನ್ನಪವ ಅವಧಾರು,
ನಿರ್ವಾಳಿನ ಛಾಷೆಯ ಕಟಿಗಳಕ್ಕೆ ನೂಂಕುವೆ. ಕೆಡಹುವೆ.
ನರಕವ ಕರೆದಡೋಸರಿಸಿದರೆ ನಿವ್ವಾಳಿಲ್ಲ- ಶಿವಶರಣೆಂಬ ದಂಡ
ನೊಡ್ಡಿ, ಗಣಮೇಳಾಪವೆಂಬಲಗಿನಲ್ಲಿರುವೆ ಕೂಡಲಸಂಗಮದೇವಾ.

ಕಾಯಕದಲ್ಲಿ ತನ್ನ ಸ್ಥಿತಿಯಾವದು ? ಆತನು ಒಡೆಯನಿಗೆ ಹೇಗೆ ಪ್ರೀತನಾಗುತ್ತಾನೆ ಎಂಬುದನ್ನು ವಿವರಿಸಿದ್ದಾರೆ. ಅವರು ಕಾಯಕದಲ್ಲಿ ಹೇಗೆ ನಿರತರಾಗಿದ್ದರೋ-"ಅಸ್ಟೇ ಫಲದಲ್ಲಿ ಅವರು ನಿರತ ಆಸಕ್ತಿಯಾಗಿದ್ದರೂ ಅವರು ಲೋಕ ಹಿತಾರ್ಥಕ್ಕಾಗಿ ತಮ್ಮ ದುಡಿಮೆಯ ಗಳಿಸುತ್ತಿದ್ದರು: ಆ ದುಡಿಮೆಯ ಫಲವು ಅವರದಲ್ಲ; ಜಂಗಮರದು. ಜಂಗಮನು ಲೋಕ ಕಲ್ಯಾಣಕ್ಕಾಗಿ ಟೊಂಕ ಕಟ್ಟಿದ ಮಹಾತ್ಮರು ಆತನ ಸಹಾಯಕ್ಕಾಗಿ ಸಹ ಕರಿಸಿದ ಸೇವೆ." ಅವರ ಗುರಿ ಎಲ್ಲಿದೆ ಎಂಬುದನ್ನು ತಿಳಿದುಕೊಂಡಂತಾಯಿತು. ತಾನು ದಾಸನು. ದಾಸನು ದುಡಿದಂತಹ ಸೇವೆಯನ್ನು ಜಂಗಮನು ಸ್ವೀಕರಿಸಬೇಕು. ಜಂಗಮನಿಂದ ಆತನ ಉದ್ಧಾರಕ್ಕಾಗಿ ಅನುಗ್ರಹವೇತನ ದೊರೆಯುವದು. ಅವರು ಜಂಗಮನ ಜೀವಾಣುಗಳು ಎಂದು ಹೇಳಲಿಕ್ಕೆ ತಪ್ಪೇನಿಲ್ಲ. ಜಂಗಮನೇ ಅವರ ಪ್ರಾಣ. ಅವನಿಗಾಗಿ ಅವರು ಇಂತಹ ಲೋಕೋಪಕಾರಾಯ ವ್ಯಕ್ತಿ ಮಹಾತ್ಮನಿಗಾಗಿ ಅವರು:—

> ಅರಸು ಮುನಿದರೆ ನಾಡೊಳಗಿರಲಾಗದಯ್ಯಾ।
> ಗಂಡ ಮುನಿದರೆ ಹೆಂಡತಿಯಾಗಿ ಬಾಳಲರಿದಯ್ಯಾ।
> ಕೂಡಲಸಂಗಮದೇವ ಜಂಗಮ ಮುನಿದರೆ
> ನಾನೆಂತು ಬದುಕುವೆನಯ್ಯಾ ?"

ಎಂದಿದ್ದಾರೆ. ಇವರ ಮೇಲಿಂದ ದಾಸೋಹಂ ಭಾವವು ಶರಣರಲ್ಲಿ ಹೇಗೆ ಮಾಡಿತ್ತು? ಅದುವೇ ಅವರ ಜೀವಾಳವೆನ್ನಬಹುದಾಗಿದೆ. ಕಾಯಕ ವನ್ನು ಅವರು ಪ್ರತಿಯೊಬ್ಬರೂ ಮಾಡಲೇಬೇಕೆಂಬ ಕಡ್ಡಾಯದ ಮಾತ ನ್ನಾದರೂ ಈಕ್ಷಿಸಿ,

> ಗುರುವಾದಡೂ ಕಾಯಕದಿಂದಲೇ ಜೀವನ್ಮುಕ್ತ.
> ಲಿಂಗವಾದಡೂ ಕಾಯಕದಿಂದಲೇ ಶಿಲೆಯ ಕುಲಹಾರುವುದು.
> ಜಂಗಮವಾದಡೂ ಕಾಯಕದಿಂದಲೇ ವೇಷಪಾಶವ ಹರುವುದು.
> ಇದು ಚೆನ್ನಬಸವಣ್ಣ ಪ್ರಿಯ ಚಂದೇಶ್ವರ ಲಿಂಗದ ಅರಿವು.

ಈ ಮಾತಿನಲ್ಲಿರುವ ತತ್ವ, ಗ್ರಹಿಕೆಗಳನ್ನು ನಾವು ಕಾಣಬಹುದಾಗಿದೆ. ಇಲ್ಲಿ ಕಾಯಕದ ಮಹತ್ವವೆಷ್ಟಿದೆ, ನಮ್ಮ ನೆಲೆಗಳನ್ನು ನಮ್ಮ ಕಲ್ಮಷಗಳನ್ನು ನಾವು ಕಳೆದುಕೊಳ್ಳಲು ಸಾಧನವಾದುದೇ ಕಾಯಕವೆಂಬ ಮಾತು. ಕಾಯಕದ ಫಲಾಪೇಕ್ಷೆಯ ಬಗ್ಗೆ ಅವರ ಮನೋವೃತ್ತಿಯನ್ನವಲೋಕಿಸಿ !

> ಪರಮ ಪದವಿಯು ನಿಮ್ಮ ಕೊರಳಲ್ಲಿ ಕಟ್ಟಿಕೊಳ್ಳಿ.
> ಪರಮ ಪದವಿಯು ನಿಮ್ಮ ಎದೆಯ ಲ್ಲಿ ಇರಿದುಕೊಳ್ಳಿ.
> ಎನಗೆ ನಿಮ್ಮ ತೊತ್ತು ಸೇವೆಯೆ ಸಾಕು. ಮಹಾಲಿಂಗ
> ಕಲ್ಲೇಶ್ವರ ದೇವಾ ! ಪರಮ ಪದವಿಯು ನಿಮ್ಮ ತಲೆಯಲ್ಲಿ
> ಸುತ್ತಿಕೊಳ್ಳಿ.

ಕಾಯಕದಲ್ಲಿ ತಳೆವ ದಾಸೋಹಂ ಭಾವವೇ ಅವರ ಜೀವನ್ಮುಕ್ತಿಗೆ ಕಾರಣವಾಗಿದೆಂಬುದನ್ನು ಮೇಲಿನ ವಚನಗಳಿಂದ ಗ್ರಹಿಸಿಕೊಳ್ಳತಕ್ಕ ಮಾತಾಗಿದೆ. ಶರಣರು ನಿಸ್ಪೃಹ ಭಾವದವರು. ಅವರಲ್ಲಿ ಆಶೆಯು ಅರಸನಾಗಿರದೆ ದಾಸನಾಗಿರಬೇಕು. ಅದೂ ಲೋಕೋಪಕಾರಕ್ಕಾಗಿ ! ಇಲ್ಲಿ ಶರಣರು ಜಗತ್ತಿಗೆ ಸಲ್ಲಿಸಿದ ನಿಷ್ಕಾಮ ವೃತ್ತಿಯನ್ನೂ, ನಿರ್ಲೇಪ ಸ್ಥಿತಿಯನ್ನೂ ಕಾಣಬಹುದಾಗಿದೆ. ಅವರು ಜೀವನದಲ್ಲಿ ಕಾಯಕ ಹಾಗೂ ದಾಸೋಹಂ ಭಾವದ ಸ್ಥಿತಿಯನ್ನು ಸಾಧಿಸಿಕೊಂಡರು. ಅದರಲ್ಲಿ ಹುದುಗಿದ ಕರ್ಮಯೋಗಿಯ ತತ್ವವನ್ನು ನಾವು ಚೆನ್ನಾಗಿ ನೋಡಬಹುದಾಗಿದೆ.

---

# ನುಡಿಯೇ ಅಂತರಂಗ ಶುದ್ಧಿ ನಡೆಯೇ ಬಹಿರಂಗ ಶುದ್ಧಿ

(ಲೇಖಕರು:— ಶ್ರೀ ಭಸ್ಮಾಂಗದೇವರು.)

---

ಬಸವೇಶ್ವರನು ಉದ್ದವಾದ ದಂಡ ಒಂದನ್ನು ಹಿಡಿದು ಅಂಗಳ ದಾಟಿ ಕುಣಿಯುತ್ತಿದ್ದನು. ಸಂಜೆಯ ಸಮಯವದು ದನಕರುಗಳು ಹೊಟ್ಟೆ ತುಂಬ ಮೇದು ಬೀದಿತುಂಬ ಬರುತ್ತಿವೆ.

ಬಸವೇಶಾ 'ಬಸವೇಶಾ' ಎಂದು ಸುಶೀಲಮ್ಮನವರು ಅಬ್ಬರಿಸಿದರು. ಬಸವೇಶನು ಮಾತಾಡಲಿಲ್ಲ, ಸುಶೀಲಮ್ಮನವರಿಗೆ ಗಾಬರಿಯಾಯಿತು. ಅಂಗಳ ದಾಟಿಗೆ ಬಂದರು. ಬಸವೇಶನು ಒಂದೇ ಒಂದು ತೆಗ್ಗಗೆ ಹಾರಿದನು. ಇನ್ನೇನು ಅವನು ಗೋವುಗಳ ಮಧ್ಯಕ್ಕೆ ಹೋಗುತ್ತಿದ್ದಾನೆ. ಅಷ್ಟರಲ್ಲಿಯೇ ಅಮ್ಮನು ಓಡಿ ಬಂದು ಬದಿಗೆ ತಬ್ಬಿಕೊಂಡು ಬಸವಾ, ಬಸವಾ ಎಂದು ಮುದ್ದಿಟ್ಟಳು.

ನನ್ನನ್ನು ಬಿಡು ಅಮ್ಮಾ! ಆಡಲು ಹೋಗುತ್ತೇನೆ ಬೇಡ ಮಗು. ಕತ್ತಲಾಗುತ್ತ ಬಂತು ಆಡುವುದು ಸಾಕು. ಬೇಜಾರಾಗುತ್ತಮ್ಮಾ! ನಾನು ತಿರುಗಾಡುತ್ತೇನೆ. ಮಗು! ನಿನಗೊಂದು ಕಥೆಯನ್ನು ಹೇಳುತ್ತೇನೆ ಬಾ ಅಪ್ಪಾ ಒಳಗೆ ಹೋಗೋಣ.

ಸುಶೀಲಮ್ಮನವರು ಆಧುನಿಕರು. ತಕ್ಕಮಟ್ಟಿಗೆ ಕನ್ನಡ, ಇಂಗ್ಲೀಷ ಹಿಂದಿ ಮತ್ತು ಸಂಸ್ಕೃತಗಳ ಪರಿಚಯವಿತ್ತು. ಶ್ರೀಮಾನ ಹಳಕಟ್ಟಿಯವರು ಪ್ರಸಂಸಿದ ವಚನ ಶಾಸ್ತ್ರಗಳನ್ನು ಮನದಣಿಯ ಮನನ ಮಾಡಿದ್ದರು. ವೀರಶೈವ ತತ್ವದ ಕಡೆಗೆ ತಮ್ಮ ಒಲವನ್ನೇ ಒಲಿಸಿದ್ದರು. ಕಥೆಯನ್ನು ಹೇಳುವುದರಲ್ಲಿಯೇ ವೀರಶೈವ ತತ್ವವನ್ನು ಬೋಧಿಸುವ ಶಕ್ತಿ ಅವರಿಗಿತ್ತು. ಕೇರಿಯ ಹೆಣ್ಣುಮಕ್ಕಳೂ ಊರಿನ ಹೆಣ್ಣುಮಕ್ಕಳೂ ಆಗಾಗ್ಗ ಬಂದು ಗುರುಕರುಣ ತ್ರಿವಿಡಿ-ಮಹದೇವಿಯಕ್ಕನ ತ್ರಿವಿಡಿಗಳನ್ನು ಕಿವಿಗೊಟ್ಟು ಕೇಳುತ್ತಿದ್ದರು. ಸುಶೀಲಮ್ಮನವರೆಂದರೆ ಎಲ್ಲರಿಗೂ ಅಭಿಮಾನ.

ತಮ್ಮ ಸಂಸ್ಕೃತಿಗೆ ಅನುಸರಿಸಿ ಸುಶೀಲಮ್ಮನವರೂ ಮಗುವೂ ಕೈಕಾಲು ಮುಖಗಳನ್ನು ತೊಳೆದುಕೊಂಡರು. ಹಣೆಯ ತುಂಬ ಮೂರೆಳೆಯ ಭಸ್ಮವನ್ನು ಬಸವಾ ಬಸವಾ ಎಂದು ಧರಿಸಿದರು. ವೀರಶೈವ ಪ್ರಭೆಯು ತ್ರಿವಿಧ ರೂಪವಾಗಿ ತಾಯಿ ಮಕ್ಕಳ ಹಣೆಯ ಮೇಲೆ ಬೆಳಗುತ್ತಿತ್ತು. ಬಸವೇಶನೂ ಸುಶೀಲಮ್ಮನವರು ಅಂಗಳದಲ್ಲಿ ಹಾಸಿದ ಹಳದಿಚಾಪೆಯ ಮೇಲೆ ಕುಳಿತರು. ಆ ದಿನ ಬೆಳ್ದನೆಯ ಬೆಳದಿಂಗಳು ಅಂಗಳವನ್ನೆಲ್ಲಾ ಆವರಿಸಿತ್ತು. ಪರಿಮಳದಿಂದ ಕೂಡಿದ ಮಂದಮಾರುತವು ಶಿವಶರಣರಿಗೆ ಬೀಸಣಿಗೆಯನ್ನು ಹಾಕುತ್ತಿತ್ತು. ಶಿವಪೂಜಾ ಕೋಣೆಯಲ್ಲಿ ಒಂದು ಕೈದೀಪವು ಬೆಳಗುತ್ತಿತ್ತು.

ಯುದ್ಧ ಕಾಲದ ಮಿತವ್ಯಯವು ತನ್ನ ಹೆಮ್ಮೆಯನ್ನು ಎಲ್ಲರಲ್ಲಿ ಪಸರಿಸಿ ಬೇಸತ್ತು ಶಿವಶರಣರ ಶಿವಪೂಜಾಂಗಳದಲ್ಲಿ ವಿಶ್ರಾಂತಿ ಪಡೆಯುತ್ತಾ ಇದೆ.

ತಾಯಿಯು ತನ್ನ ಮಗುವನ್ನು ನೋಡಿ ಆನಂದಭಾಷ್ಪವನ್ನು ಸುರಿಸಿದಳು. ಮಗು ಇದು ಅಂತರಂಗದ ಶುದ್ಧಿ ಬಹಿರಂಗ ಶುದ್ಧಿಯ ಕಥೆ. ಸತ್ಯಶರಣರಿಗೆ ಪ್ರೀತಿಯುಳ್ಳದ್ದು. ನೀನೂ ಕಿವಿಗೊಟ್ಟು ಕೇಳು.

ಮಗುವು ಗಂಭೀರವಾಗಿ ಕೂತು ತನ್ನ ತಾಯಿಯ ಮುಖದ ಮೇಲಿನ ಪ್ರೇಮದ ಬೆಳದಿಂಗಳನ್ನು ದೃಷ್ಟಿಯಿಟ್ಟು ನೋಡುತ್ತ ಅಮ್ಮಾ ಕಥೆಯನ್ನು ಮೊದಲು ಮಾಡಮ್ಮ ಎಂಬ ಮುದ್ದು ಮಾತುಗಳಿಂದ ತನ್ನ ತಾಯಿಯ ಕಿವಿಗಳಿಗೆ ನಲ್ಮೆಯನ್ನು ಬೀರಿತು. ಸುಶೀಲಮ್ಮನವರು ಬಸವೇಶನ ಸವಿಮಾತುಗಳಿಂದ ಹಿರಿದಾಗಿ ಹಿಗ್ಗಿದರು.

ಮಗು ಇಂದಿಗೆ ಎಂಟು ವರ್ಷಗಳ ಹಿಂದೆ ನಲಿದಾಡುತ್ತ ವಸಂತ ಋತು ಬಂದಿತು. ಆ ದಿನ ಸೋಮವಾರ. ಹೊತ್ತು ನೆತ್ತಿಯ ಮೇಲಿದೆ. ಭೂಮಿಯು ಹಾದಿಗರ ಕಾಲುಗಳನ್ನು ಬೆಚ್ಚಗೆ ಮಾಡುತ್ತಿದೆ. ನಿಮ್ಮ ತಾತ ರುದ್ರಪ್ಪನವರು ಬಾಗಿಲಲ್ಲಿ ನಿಂತು ದಾರಿಯನ್ನೆ ನೋಡುತ್ತಿರುತ್ತಾರೆ. ಶುದ್ಧವಾದ ಮಡಿಯನ್ನುಟ್ಟಿದ್ದಾರೆ. ಮೈತುಂಬ ಭಸ್ಮವನ್ನು ಧರಿಸಿದ್ದಾರೆ. ಶಿವನೇ ಇನ್ನೂ ಅವರ ಸುಳಿವೇ ಇಲ್ಲವಲ್ಲ ಎಂದು ನಿಟ್ಟುಸುರುಬಿಟ್ಟರು. ಅಷ್ಟರಲ್ಲಿಯೇ ತಾವು ನಿರೀಕ್ಷಿಸುತ್ತಿದ್ದ ತಿಳಿಗಾವಿ ಹೊದಿಕೆಯ ಜಂಗಮವು ಬೇಗ ಬೇಗ ಹೆಜ್ಜೆ ಹಾಕುತ್ತ ಬರುತ್ತಿದ್ದಾರೆ.

ರುದ್ರಪ್ಪನವರು ಓಡಿಬಂದು ಜಂಗಮರ ಪಾದಂಗಳ ಮೇಲೆ ತಮ್ಮ ನೆತ್ತಿಯನ್ನಿಟ್ಟು ಸ್ವಾಮಿ ಒಳಗೆ ದಯಮಾಡಿಸಿ ಎಂದರು. ಶಿವಯ್ಯನವರು ರುದ್ರಪ್ಪನವರನ್ನು ಮನ್ನಿಸಿ ರುದ್ರಪ್ಪನವರ ಮನೆಯ ಸುತ್ತಲೂ ನೋಡಿದರು. ರುದ್ರಪ್ಪನವರೇ ನಮಗೂ ಶಿವಪೂಜೆಗೆ ವೇಳೆಯಾಗಿದೆ. ನಿಮಗೂ ಭಕ್ತಿ ಭಿಕ್ಷವನ್ನು ನೀಡಲು ಸಮಯವಾಗಿದೆ. ಆದರೆ ತಾವು ಕೋಪಿಸಿಕೊಳ್ಳಬೇಡಿ. ಭಕ್ತನೇ ಜಂಗಮಕ್ಕೆ ಆಶ್ರಯ. ಜಂಗಮನೇ ಭಕ್ತನ ಮನೆದೈವ, ಚರಿಸಿ ಚರಿಸಿ ಜಗತ್ತಿನಲ್ಲಿ ಭಕ್ತಿ ಬೀಜವನ್ನು ಬಿತ್ತಿ ಭಕ್ತಿ ಬೆಳಸನ್ನೇ ಬೆಳೆಯುವುದು ಜಂಗಮನ ಕರ್ತವ್ಯ. ಜಗದೋದ್ಧಾರಿಯಾದ ಜಂಗಮನ ದಾಸೋಹವನ್ನು ಮಾಡುವುದು ಭಕ್ತನ ಕರ್ತವ್ಯ. ಭಕ್ತನೇ ಜಂಗಮನ ಕಾಯ. ಜಂಗಮವೇ ಭಕ್ತಂಗೆ ಪ್ರಾಣ. ಭಕ್ತ ಜಂಗಮವು ತೋರಿಕೆಗೆ ಎರಡಾಗಿ ಕಂಡರೂ ವಿಚಾರಿಸಿದಲ್ಲಿ ವಸ್ತುಕತೆ ಒಂದೇ ವ್ಯಕ್ತಿ. ಇದೇ ವೀರಶೈವ ವ್ಯಕ್ತಿ. ಆದುದರಿಂದ ಭಕ್ತನ ಆಚಾರವಿಚಾರವನ್ನು ತಿದ್ದಿ ಸರಿಪಡಿಸುವುದು ಜಂಗಮನ ಕರ್ತವ್ಯ. ಜಂಗಮಂಗೆ ಆಗಾಗ್ಗೆ ಎಚ್ಚರವಿರುವುದು ಭಕ್ತನ ಕರ್ತವ್ಯವಲ್ಲವೇ! ಕರ್ತವ್ಯಪಾಲನೆಗೋಸುಗ ನಿರ್ದಾಕ್ಷಿಣ್ಯವಾಗಿ ಹೇಳುತ್ತೇನೆ, ನಾನು ನಿಮ್ಮ ಸೇವೆಯನ್ನು ಕೈಕೊಳ್ಳುವುದಿಲ್ಲ ಎಂದರು.

ಮಗು:- ಅವ್ವಾ ಅದು ತುಂಬ ಹಸಿವಿನ ವೇಳೆಯಾದರೂ ಅವರೇಕೆ ಹಾಗೆಂದರು ? ಮಗು ! ಶಿವಶರಣರು ತಮಗೆಷ್ಟು ಕಷ್ಟಬಂದರೂ ತಮ್ಮ ನಿಷ್ಠೆಯನ್ನು ಬಿಡುವುದಿಲ್ಲ. ಆಚಾರ ವಿಚಾರ ತಪ್ಪಿದಲ್ಲಿಯೇ ಅವರ ವಾದ ಮತ್ತೊಂದರಲ್ಲಿ ವಾದವಿಲ್ಲ.

ಹೌದಮ್ಮ. ಆಮೇಲೆ ರುದ್ರಪ್ಪನವರು ಖಿನ್ನರಾಗಿ "ಸ್ವಾಮಿ, ನನ್ನಲ್ಲಿರುವ ತಪ್ಪೇನು! ದಯವಿಟ್ಟು ತೋರಿಸೋಣವಾಗಲಿ. ಜಂಗಮವೈದ್ಯ ಶಕ್ತಿ ವೈದ್ಯವಲ್ಲವೇ. ತಾವು ಅಪ್ಪಣೆ ಕೊಡಿಸಿದಂತೆ ನಡೆದುಕೊಳ್ಳುವೆನು.

ಶಿವಯ್ಯನವರು ನಸುನಗುತ್ತ ರುದ್ರಪ್ಪನವರೇ ತಾವು ವಾಸ ಮಾಡುವ ಮನೆಯ ಮುಂದುಗಡೆ ನೋಡಿ. ಆತನ ಆ ಕಪ್ಪೆ ಆ ಕೊಳಕು ಇವುಗಳ ಮೇಲೆ ತಮ್ಮ ನೋಟವಾಗಲಿ ಅಲ್ಲಿರುವ ಬಚ್ಚಲ ನೀರನ್ನು ನೋಡಿ ರೊಜ್ಜೆಯನ್ನು ನೋಡಿ ಈ ಕಡೆ ಬಿದ್ದಿರುವ ಮಕ್ಕಳ ಹೊಲಸನ್ನು ನೋಡಿ ಈ ಕೊಳಕಿನಿಂದ ನೀವೂ ನಿಮ್ಮ ನೆರೆಹೊರೆಯವರು ಅನಾಚಾರಕ್ಕೆ ಈಡಾಗಿ ದುಃಖವನ್ನು ಅನುಭವಿಸುವದಿಲ್ಲವೇ ? ಇದರಿಂದಲೇ ಎನಗೊಪ್ಪಿಗೆ ಇಲ್ಲ"

ಎಂದು ರುದ್ರಪ್ಪನವರು— "ಸ್ವಾಮಿ ಕ್ಷಮಿಸಬೇಕು. ಈ ಮನೆಯೊಳ ಭಾಗವನ್ನು ನೋಡಿ ಎಷ್ಟು ಚನ್ನಾಗಿದೆ, ಎಷ್ಟು ನಿರ್ಮಲವಾಗಿದೆ. ಕುರ್ಚಿ, ಮೇಜು ಇವುಗಳ ವ್ಯವಸ್ಥೆಯನ್ನು ನೋಡಿ ಆನಂದಪಡುವದೇ ಇಲ್ಲ. ಗೋಡೆಗಳ ಮೇಲೆ ನೇತಾಡುವ ಚಿತ್ರಗಳನ್ನು ನೋಡಿ ನಲಿದಾಡದಿರುವದೇ ಇಲ್ಲ. ನಿತ್ಯವೂ ಮನೆಯೊಳಭಾಗದ ವ್ಯವಸ್ಥೆ ಮಾಡುವದರಲ್ಲಿಯೇ ವೇಳೆಯಾಗುತ್ತ ಒಳಗೆ ಶುದ್ಧವಿದ್ದರೆ ಸಾಕು. ಹೊರಗೆ ಹೇಗಿದ್ದರೇನೆಂಬ ಗಾದೆಗನುಸರಿಸಿ ನನ್ನ ಮನೆಯೊಳಭಾಗವು ನಿರ್ಮಲವಾಗಿದೆ ದಯಮಾಡಿಸಬೇಕು. ಶಿವಾರ್ಪಣೆಗೆ ವೇಳೆಯಾಯಿತು!

ಶಿವಯ್ಯನವರು ಆಹಾ! ರುದ್ರಪ್ಪನವರೇ ತವಕಿಸಬೇಡಿ. ಮನೆಯೊಳಭಾಗವು ನಿರ್ಮಲವಾಗಿದೆ, ಎಂದು ತಾವು ತಿಳಿದುಕೊಂಡಿರುವುದು ತಪ್ಪುಭಾವನೆ. ಬನ್ನಿ ಮನೆಯೊಳಭಾಗದಲ್ಲಿ ಕುಳಿತು ನೋಡಿ. ಎಂಥ ದುರ್ವಾಸನೆಯಾದ ಗಾಳಿ ಹೊರಗಿನಿಂದ ನುಗ್ಗುತ್ತದೆ. ಈ ಗಾಳಿಯಿಂದ ಮನೆಯಲ್ಲಿಯೂ ಕೊಳಕುಮಯವಾಗಿದೆ. ಇದೂಕೂಡ ಅನಾಚಾರದ ಶಿಖರದಲ್ಲಿದೆ. ಸ್ವಲ್ಪ ಯೋಚಿಸಿ ನೋಡಿ ಬಹಿರಂಗ ಶುದ್ಧಿ ಎಂದು ಮತ್ತೊಮ್ಮೆ ಹೇಳಿದರು.

ಅಷ್ಟರಲ್ಲಿಯೇ ಯಾರೋ ಓರ್ವರು ಓಡಿ ಬಂದು ಜಂಗಮರ ಪಾದಗಳ ಮೇಲೆ ಹಣೆಯನ್ನಿಟ್ಟು ಈಗಲಾದರೂ ನಮ್ಮ ಮನೆಗೆ ದಯಮಾಡಿಸಿ. ನನ್ನನ್ನುದ್ಧರಿಸಬೇಕು ಎಂದು ದೀನಸ್ವರದಲ್ಲಿ ನುಡಿದರು.

ಶಿವಯ್ಯನವರು:— 'ಲಿಂಗಣ್ಣನವರೆ ಏಳಿ! ಏಳಿ' ಇದೇಕೆ ಇಷ್ಟು ಆತುರ?

ಲಿಂಗಣ್ಣನವರು:— ಸ್ವಾಮಿ ತಮ್ಮ ಅಪ್ಪಣೆಯಂತೆ ನನ್ನ ಮನೆಯೊಳಭಾಗವನ್ನೂ ಶುಚಿಯಾಗಿಟ್ಟಿರುತ್ತೇನೆ. ಈಗ ಒಳಗೂ ಹೊರಗೂ ಪರಿಶುದ್ಧವಾಗಿದೆ. ನಾನು ಮೊದಲಿಗಿಂತಲೂ ಹೆಚ್ಚಾದ ಶಾಂತಿಯನ್ನು ಪಡೆಯುತ್ತಲಿದ್ದೇನೆ. ಈ ಸಮಯದಲ್ಲಿ ಶ್ರೀ ಜಂಗಮರ ಪಾದಪೂಜಾಮಹೋತ್ಸವನ್ನು ನೆರವೇರಿಸಬೇಕಾಗಿದೆ. ಕರುಣಿಸಬೇಕು.

ರುದ್ರಪ್ಪಣ್ಣನವರೇ ತಾವೂ ಕೂಡಬರಬೇಕು.

ಶಿವಯ್ಯನವರು:— ರುದ್ರಪ್ಪನವರೇ! ಎಲ್ಲರಿಗೂ ಶಿವಾರ್ಚನೆಗೆ ವೇಳೆಯಾಗಿದೆ. ನಮ್ಮ ಲಿಂಗಣ್ಣನವರ ದಾಸೋಹದಲ್ಲಿ ಭಾಗಿಯಾಗೋಣ ಬನ್ನಿ

ರುದ್ರಪ್ಪನವರು ಲಿಂಗಣ್ಣನವರ ಮನೆಯ ಮುಂದೆ ಶುಚಿಯಾಗಿರುವ ಬೀದಿಯನ್ನು ನೋಡಿದರು. ಮುಂಬಾಗಿಲುಗಳ ಪಕ್ಕದಲ್ಲಿರುವ ಹೂವುಗಳನ್ನು ನೋಡಿ ಆನಂದಪಟ್ಟರು. ಅಂಗಳದಲ್ಲಿ ಬೀಸುವ ಪರಿಮಳ ಮಾರುತವು ಎಲ್ಲರನ್ನೂ ತೃಪ್ತಿಗೊಳಿಸಿತು. ಒಳಗೂ ಚೆನ್ನಾಗಿದೆ. ಹೊರಗೂ ಚೆನ್ನಾಗಿದೆ ಎಂದುಕೊಂಡರು.

ಮಹಾಪಾದಪೂಜೆ. ಪಾದತೀರ್ಥ ಪ್ರಸಾದವಾದ ಮೇಲೆ ಎಲ್ಲರೂ ಹಜಾರದಲ್ಲಿ ವಿಶ್ರಮಿಸಿಕೊಳ್ಳುತ್ತ ಕುಳಿತಿರುವರು.

ಲಿಂಗಣ್ಣನವರು:— ಸ್ವಾಮಿ ಇಂದು ನಾನು ಧನ್ಯನಾದೆ. ನನಗೆ ಪರಮ ತೃಪ್ತಿಯಾಯಿತು. ಇದೇ ಮಹಾಸುದಿನ.

ಶಿವಯ್ಯನವರು:— ಲಿಂಗಣ್ಣನವರೇ ! ತಾವು ಬಿ. ಎ. ಪದವೀಧರರು. ಜವಾಬ್ದಾರಿಯಾದ ಹುದ್ದೆಯಲ್ಲಿರತಕ್ಕವರು. ಭಕ್ತಿಯ ಗುಟ್ಟನ್ನು ತಿಳಿದಿರುವಿರಿ. ಜನಾಂಗದ ಏಳಿಗೆಗೆ ತಾವು ದುಡಿಯುತ್ತಿರುವುದು ನನಗೆ ತುಂಬಾ ಸಂತೋಷವಾಗಿದೆ. ಇದು ಚಿರವಾಗಲಿ.

ಲಿಂಗಣ್ಣನವರು:— ಸ್ವಾಮಿ ! ನಾನು ಕೇವಲ ಹೊರಗಣ ಆಡಂಬರದಲ್ಲಿಯೇ ಮಗ್ನನಾಗಿ ಒಳಗಣ ಜ್ಯೋತಿಯನ್ನು ಕಾಣದೆ ಕಲಂಕಿಯಾಗಿದ್ದೆ. ಸ್ವಾಮಿಯವರು ಕೃಪೆಯಿಂದ ಎನ್ನ ಮನೆಗಡಿಯಿಟ್ಟು ನಿದಾಕ್ಷಿಣ್ಯವಾಗಿ ಬೋಧಿಸಿರುವಿರಿ ಒಳಗೂ ಹೊರಗೂ ಬೆಳಕನ್ನು ಮಾಡಿದಿರಿ. ಜೀವನ ಜ್ಯೋತಿಯ ಗುಟ್ಟನ್ನು ಅರುಹಿ ಶಾಂತಿಸ್ಥಾಪನೆ ಮಾಡಿದಿರಿ ದೇವ ದೇವ ತಮ್ಮಲಂಕಾರವು ಅತಿಶಯವಾಗಿದೆ. ತಮ್ಮಾಜ್ಞೆಯಂತೆ ನಡೆದುಕೊಳ್ಳುತ್ತೇನೆ.

ರುದ್ರಪ್ಪನವರು:— ಎನ್ನ ಗುರುವಿನ ಗುರುವೇ ಮಹಾಗುರುವೆ ! ಜಂಗಮಮೂರ್ತಿಯೇ? ಕರುಣಿಸಿ. ನಾನು ಕೂಡ ಲಿಂಗಣ್ಣನವರಂತೆ ಮನೆಯ ಒಳಹೊರಗೂ ಶುಚಿಯಾಗಿರುವಂತೆ ಏರ್ಪಡಿಸುತ್ತೇನೆ. ಈ ವಾತಾವರಣದಿಂದ ನನ್ನ ಭಾವನೆಯೇ ಬೆಳಗಿದೆ. ಲಿಂಗಣ್ಣವರೇ ತಾವೂ ಕೂಡ ನಾಳೆಯ ದಿನವೇ ನಮ್ಮ ಮನೆಗೆ ದಯಮಾಡಿಸಿ ಆತಿಥ್ಯವನ್ನು ಸ್ವೀಕರಿಸಬೇಕು.

ಶಿವಯ್ಯನರು:— ರುದ್ರಪ್ಪನವರೇ ತಾವು ಗುಣವಂತರು. ಮೇಲಾಗಿ ಐಶ್ವರ್ಯವಂತರು. ಆದರೂ ನಿರಹಂಕಾರಿಗಳು ದಾಸೋಹವೇ ತಮ್ಮ ಜೀವನವೆಂದೇ ನಿತ್ಯ ಭಕ್ತಿ ಮಾಡುತ್ತಿರುವುದು ನನಗೆ ಸಂತೋಷವಾಗಿದೆ.

ಲಿಂಗಣ್ಣನವರು:—ರುದ್ರಪ್ಪನವರೇ ಈ ಜಂಗಮವರ್ಯರಾದ ಶಿವಯ್ಯನವರು ತಮ್ಮ ಪೂರ್ವಾಶ್ರಮದಲ್ಲಿ ಎಂ. ಎ. ಪದವೀಧರರು ಆದರೂ ಕೇವಲ ಜಗತ್ತಿನ ಕಲ್ಯಾಣಕ್ಕಾಗಿ ತಮ್ಮ ಪ್ರಾಪಂಚಿಕ ಸುಖವನ್ನು ಒತ್ತಟ್ಟಿಗಿಟ್ಟರು. ತಮ್ಮಲ್ಲಿದ್ದ ಸಹಸ್ರ ರೂಪಾಯಿಗಳಿಂದ ಒಂದು ಅನಾಥಾಲಯವನ್ನು ಸ್ಥಾಪಿಸಿ ವಚನ ಸಾಹಿತ್ಯ ಭಾಂಡಾರದ ಅಭ್ಯಾಸವನ್ನು ಮಾಡಿಸುತ್ತಿರುತ್ತಾರೆ. ಅಲ್ಲದೆ ಊರಿಂದೂರಿಗೆ ಸಂಚರಿಸಿ ಸಮಾಜದಲ್ಲಿರುವ ಲೋಪದೋಷಗಳನ್ನು ತಿದ್ದಿ ತಾಸೂ ನುಡಿದಂತೆ ನಡೆದು ನಮ್ಮೆಲ್ಲರಿಗೂ ಮಾರ್ಗದರ್ಶಿಯಾಗಿರುತ್ತಾರೆ. ಇದಲ್ಲವೆ ಜಂಗಮತ್ವವು !

ಶಿವಯ್ಯನವರು:— ಎನ್ನ ಪರಮ ಬಂಧುಗಳೇ ನನ್ನನ್ನು ಹೊಗಳಿ ಹೊನ್ನಿನ ಶೂಲಕ್ಕೇರಿಸಬೇಡಿ. ಮಹಾತ್ಮ ಬಸವೇಶಾದಿ ಶರಣರ ವಚನ ಮಂತ್ರಗಳ ಶರಣವೇ ನಮ್ಮ ಸಮಾಜದ ಏಳಿಗೆಯ ಹಾದಿ ವಚನ ಶಾಸ್ತ್ರ ಭಂಡಾರವೇ ನಮ್ಮ ಸಮಾಜದ ಉತ್ತರೋತ್ತರವಾದ ಆಸ್ತಿ. ಆ ಆಸ್ತಿಯೇ ಅಂತರಂಗ ಬಹಿರಂಗ ಶುದ್ಧಿಗೆ ವಸ್ತಿ. ಕನ್ನಡ ದೇವಿಯ ಪ್ರಶಸ್ತಿ. ವಾಸ ಮಾಡುವ ಮನೆಯು ಒಳಗೂ ಹೊರಗೂ ಶುಚಿಯಾಗಿರಬೇಕೆಂದು ನಾವು ಹೇಗೆ ಕೋರುವೆವೋ ಹಾಗೆಯೇ ಈ ಕಾಯವೂ ಮನವೂ ಹೊರ ಒಳಗೂ ಶುದ್ಧವಾಗಿರಬೇಕೆಂದು ಶಾಂತಿಯು ಕೋರುವುದು. ಶಾಂತಿ ಇದ್ದೆಡೆಯಲ್ಲಿಯೇ ದೇವನಿರುವನು. ದೇವನಿದ್ದೆಡೆಯಲ್ಲಿಯೇ ಭಕ್ತರಿರುವರು. ಭಕ್ತರಿದ್ದೆಯಲ್ಲಿ ಗುರು ಲಿಂಗ ಜಂಗಮರಿರುವರು. ಅಲ್ಲೇ ಸಹಜ ಜೀವನ್ಮುಕ್ತಿಯ ಹಾದಿ ಇರುವದು. ಆದುದರಿಂದ ಅಂಗಕ್ಕೆ ಆಚಾರವೂ ಮನಕ್ಕೆ ವಿಚಾರವೂ ಬೇಕು. ಆಚಾರದಿಂದ ಅಂಗಶುದ್ಧಿ. ವಿಚಾರದಿಂದ ಜ್ಞಾನಶುದ್ಧಿ. ಇವುಗಳ ಬೋಧೆಯನ್ನು ಶ್ರೀ ಬಸವೇಶ್ವರರು ಉದಾರರಾಗಿ ಮಾಡಿರುವರು. ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ, ಅನ್ಯರಿಗೆ ಅಸಹ್ಯಪಡಬೇಡ, ಮುನಿಯಬೇಡ ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲ ಸಂಗಮ ದೇವನು ಒಲಿಯುವ ಪರಿ. ಈ ವಚನವನ್ನು ಚೆನ್ನಾಗಿ ಪರಿಶೀಲಿಸಿದರೆ ನುಡಿಯೇ ಅಂತರಂಗ ಶುದ್ಧಿ ನಡೆಯೇ ಬಹಿರಂಗ ಶುದ್ಧಿ ಎಂದು ಮನಗಾಣುವುದು. ಬಸವೇಶ್ವರ ಉಪದೇಶಗಳನ್ನು ನಾವೆಲ್ಲರೂ ಹಿಂಬಾಲಿಸಬೇಕು.

ಎಂದು ಗಂಭೀರವಾಣಿಯಿಂದ ಹೇಳುತ್ತಾ ಮೆಲ್ಲಗೆ ಮುಂದುವರಿದರು. ನುಡಿಯೇ ಅಂತರಂಗಶುದ್ಧಿ ನಡೆಯೇ ಬಹಿರಂಗಶುದ್ಧಿ ಎಂದು ಮತ್ತೊಮ್ಮೆ ಹೇಳಿದರು.

ಅಮ್ಮಾ! ಈ ಕಥೆಯು ಬಹು ಚೆನ್ನಾಗಿದೆ. ನಾವು ನಮ್ಮ ಮನೆಯನ್ನು ಒಳಗೂ ಹೊರಗೂ ಇನ್ನೂ ಶುಚಿಯಾಗಿಟ್ಟುಕೊಂಡರೆ ಆ ಸ್ವಾಮಿಯವರು ಇಲ್ಲಿಗೂ ಬರುತ್ತಾರಲ್ಲವೇನಮ್ಮಾ ಹೌದು ಮಗು. ಸ್ವಾಮಿಗಳು ಬರುವರು. ಶ್ರೀ ಬಸವೇಶನ ವಚನಗಳನ್ನು ನಮಗೂ ಉಪದೇಶಿಸುವರು. ಅವರು ಹೇಳಿದಂತೆ ನಡೆದರೆ ನಾವು ಪಾವನರಾಗಿ ಸುಖದಿಂದಿರುತ್ತೇವೆ. ನಿತ್ಯಾಚಾರದಿಂದ ನಮ್ಮ ದೇಹವೇ ದೇವಾಲಯವಾಗುತ್ತೆ. ವಿಚಾರದಿಂದ ನಮ್ಮ ಹೃದಯವು ಪವಿತ್ರವಾಗಿ ದೇವರಿಗೆ ಆಸನವಾಗುತ್ತೆ. ದೇವರ ದಿವ್ಯಜ್ಯೋತಿಯೇ ಭಕ್ತರ ಶರ ಮನ ಭಾವಗಳಲ್ಲಿ ಹೊಳೆಯುವ ಪ್ರಕಾಶ. ಆ ಪ್ರಕಾಶದ ಕಿರಣವೇ ನೀನು ಮಗು.

ಅಮ್ಮಾ! ಅಮ್ಮಾ! ಅಗೋ ಅಪ್ಪಾಜಿ ಬಂದರು. ಅಪ್ಪಾಜೀ, ಈ ಈ ಎಂದು ಬಸವೇಶನು ಓಡಿ ಬಂದು ತನ್ನಪ್ಪನ್ನು ಎದುರುಗೊಂಡನು.

ಸುಶೀಲಮ್ಮನವರು ಪತಿಯ ಪಾದಕ್ಕೆ ನಮಸ್ಕರಿಸಿ ವೀರಶೈವ ಸಂಸ್ಕೃತಿಗೆ ಅನುಸರಿಸಿ ಇಷ್ಟಲಿಂಗಾರ್ಚನೆಗೆ ಅಣಿಮಾಡಲು ಮೊದಲು ಮಾಡಿದರು.

ಬಸವೇಶನು:— ನುಡಿಯೇ ಅಂತರಂಗಶುದ್ಧಿ. ನಡೆಯೇ ಬಹಿರಂಗ ಶುದ್ಧಿ, ನುಡಿ ನಡೆ ಏಕವಾದುದೆ ಮೃಡನಡಿಗೆ ಪ್ರಸಿದ್ಧಿ ಎಂದು ಹಾಡುತ್ತಾ, ಕುಣಿದಾಡಲು ಮೊದಲು ಮಾಡಿದನು.

---

# ವೀರಶೈವನ ಬಿಡುವು ಹಿಡುವುಗಳು.

[ಹಿಂದಿನ ಸಂಚಿಕೆಯಿಂದ ಮುಂದುವರಿದುದು.]

(ಲೇಖಕ:— ಶ್ರೀ. ಸಿ. ನಾ. ಮಹಾಂತಣ್ಣವರ)

ಆತ್ಮನಂತೆ ಪರಿಭವಕ್ಕೆ ಬಪ್ಪನೆ ಶಿವಯೋಗಿ।
ಯಾತಕ್ಕೆ ನಿನ್ನ ಕಂಥೆ ಧರೆಯೊಳುಳಿದುದು ॥
ನೀ ಪಿಡಿದು ಭಕ್ತಿಜ್ಞಾನ ವೈರಾಗ್ಯವೇದ್ಯ ಶರಣನು।
ಕಂಥೆ ಸಹಿತ ಶಿವನ ಪಾದವನು ಬೆರಸುವ ॥೨॥

ಭಾವಾರ್ಥ:— ವೀರಮಾಹೇಶ್ವರನ ಸಿದ್ಧಾಂತ ನಿರ್ಣಯದಲ್ಲಿ 'ಜೀವವಿದು, ಶಿವತತ್ವವೆಂಬ ವಿವೇಕವೆಂತೆಂದೊಡೆ- ಆ ಶಿವಲಿಂಗದಲ್ಲಿ ಮಾರ್ಗಕ್ರಿಯೆಗಳಿಂದ, ಬಾಹ್ಯಕರಣಗಳು ಸಮಾಧಾನವಾಗದೆ, ಬರಿದೆ ಆತ್ಮೋಹಮೆಂಬೆಯಾದೊಡೆ, ಆತ್ಮನಂತೆ ಅಂಡಜ, ಸ್ವೇದಜ, ಉದ್ಭಿಜ, ಜರಾಯುಜವೆಂಬ ನಾಲ್ಕು ಯೋನಿಗಳಲ್ಲಿ, ೮೪ ಲಕ್ಷ ಜೀವರಾಶಿಗಳೊಳಗೆ ಹುಟ್ಟಿಬಂದು ಪ್ರತ್ಯೇಕ ದೇಹಂಗಳಲ್ಲಿ ದೇಹಿಕನಾಗಿ, ಅಲ್ಲಿ ಸುಖದುಃಖಗಳನನುಭವಿಸಿ, ಪಾರತಂತ್ರ್ಯದಿಂದ ನೊಂದುಬೆಂದು ಕಡೆಗಾಣವೆ, ಪರತಂತ್ರವಹ ಪಶುಜೀವಿಗಳಂತೆ, ಪರಮಸ್ವತಂತ್ರ, ಘನಲಿಂಗ ಸಂಬಂಧಿ, ಪರಮಗಂಭೀರ ಉಪಮಾತೀತ ಶಿವಯೋಗಿಯು ಆತ್ಮನಂತೆ ಪರಿಭವಕ್ಕೆ ಬಪ್ಪನೆ? ಬರಲಾರನು. ಆತ್ಮನು ಸರ್ವಸಾಕ್ಷಿಕನಲ್ಲದೆ ಪರಿಭವಕ್ಕೆ ಬಂದೂಬಾರನು ಎಂಬೆಯಾದರೆ (ಅವನಿಗೆ ಜೀವಾತ್ಮನೆಂಬ ವಾಕ್ಯವು ಪ್ರಸಿದ್ಧ) ಜೀವಾತ್ಮನು ಸ್ಥೂಲತನುವಿನಲ್ಲಿಯ ಜಾಗ್ರತಾವಸ್ಥೆ ವ್ಯಾಪ್ತಿಯ ಅಹಂಕಾರದಿಂದ ವಿಶ್ವಜೀವನೆನಿಸಿಕೊಂಬನು. ಕಾರಣತನುವಿನಲ್ಲಿ ಸುಷುಪ್ತಾವಸ್ಥೆಯ ವ್ಯಾಪ್ತಿಯ ಅಹಂಕಾರದಿಂದ ಪ್ರಾಜ್ಞ ಜೀವನೆನಿಸುವನು. ತೂರ್ಯಾವಸ್ಥೆಯಲ್ಲಿ ಪರಶಕ್ತಿಯಿಹುದು. ತೂರ್ಯಾತೀತದಲ್ಲಿ ಪರತತ್ವವಿಹುದು. ಈ ತೂರ್ಯಾದಿ ಎರಡು ಅವಸ್ಥೆಗಳು ಅನುಭಾವಗಮ್ಯವಲ್ಲದೆ, ಮನೋಗಮ್ಯವಲ್ಲ. ಮನೋಗಮ್ಯವಾದಡೆ ಆ ತನುವು (ಕಂಥೆ) ಕರಗಿ ನಿರವಯವಹುದಲ್ಲದೆ, ಭೂಮಿಗೊರಗದು. ಅಲ್ಲಿ ಮನೋಗಮ್ಯವೆಂದಡೆ ಶರಣಸ್ಥಲ. ಆತ್ಮಯೋಗದಿಂದಲೀ

ಅಹುದೆಂದೆಡೆ, ನಿನ್ನ ಕಾಯ ಶೂನ್ಯವಾದರೆ ಈ ಮಾಯೆ ಒಡಂಬಡಬಹುದು. ಶೂನ್ಯ ಕಾಯವು ಶಿವಯೋಗದಿಂದಲಹುದಲ್ಲದೆ, ನೀನು ಹೇಳುವ ಇತರ ಮತದ ಆತ್ಮಯೋಗದಿಂದದು ಘಟಿಸದಾಗಿ, ನಿನ್ನ ಶರೀರವೆಂಬುದು ಧರೆಯೊಳುಳಿಯಿತೆಂಬುದು "ಯಾತಕ್ಕೆ ನಿನ್ನ ಕಂಥೆ ಧರೆಯೊಳುಳಿದುದು" ಎಂಬ ಪಥಕ್ಕರ್ಥ. ಅದು ಕಾರಣ ವೀರಶೈವ ಸಿದ್ಧಾಂತವಹ ನಿಜಭಕ್ತಿ, ಶಿವಜ್ಞಾನ, ಪರಮ ವೈರಾಗ್ಯವನುಳ್ಳ ಸರ್ವಾಚಾರ ಸಂಪನ್ನ ಶರಣನು ಲಿಂಗಾತ್ಮಕನು ಲಿಂಗೇಂದ್ರಿಯನು, ಲಿಂಗಾಂಗಸಂಗಿಯು, ಘನಲಿಂಗ ಯೋಗಿಯಾಗಿ ತನ್ನಂಗವ ಬೇರೆ ಮಾಡದೆ ಲಿಂಗಪ್ರಭೆಯೊಳಗೆ ನಿರವಯನಹನೆಂದು ಶ್ರೀ ಚನ್ನಬಸವೇಶ್ವರ ದೇವರು ನಿರೂಪವಂ ಕೊಡುತ್ತಿಹರು.

ವಿಶ್ವಧರ್ಮವಾದ ವೀರಶೈವ ಮತಾನುಯಾಯಿಗಳು ಇತ್ತಿತ್ತಲಾಗಿ ಶ್ರೀ ನಿಜಗುಣ ಶಿವಯೋಗಿಗಳ ಆರು ಶಾಸ್ತ್ರಗಳನ್ನೂ ಶ್ರೀ ಸರ್ಪಭೂಷಣ ಶಿವಯೋಗಿಗಳ ಕೈವಲ್ಯವನ್ನೂ ಮುಂದು ಮಾಡಿ ಕೇವಲ ವೇದಾಂತವನ್ನ ವೇದಾಂತಕ್ಕೇನೇ ಮಹತ್ವವನ್ನಿತ್ತು, ಅವರೀರ್ವರ ಶಾಸ್ತ್ರಗಳಲ್ಲಿರುವ ಶಿವಯೋಗ ಪ್ರಕರಣಗಳನ್ನು ಅಭ್ಯಾಸ ಮಾಡುವದಿಲ್ಲ. ಹಾಗು ಅವರ ಸಮ್ಯಜ್ಞಾನಸ್ಥಳಗಳಲ್ಲಿರುವ ಪದಗಳ ಅರ್ಥವನ್ನು ಶಿವಯೋಗ ಪರವಾಗಿದ್ದರೂ ವೇದಾಂತದ ಕಡೆಗೇ ಗುರಿಯಿಟ್ಟು ಅರ್ಥಾನುಭವವನ್ನು ಮಾಡುವರು. ಇದರ ಕಾರಣವು ಅವರಿಗೆ ವೀರಶೈವದ ೩೬ ತತ್ವಗಳ, ಆರು ಸ್ಥಲಗಳ ಮತ್ತು ಅಷ್ಟಾವರಣಗಳ ಕ್ರಿಯೆಗಳ ಪಂಚಾಚಾರ, ಸಪ್ತಾಚಾರ, ದಶಾಚಾರ, ದ್ವಾದಶಾಚಾರಗಳ ತಿಳುವಳಿಕೆಯೂ ನಡೆನಳಿಕೆಯೂ ಇಲ್ಲದಿದ್ದದ್ದು ಸ್ಪಷ್ಟವಾಗುತ್ತದೆ. ಹೀಗಾಗಿ ಆರೂಢ ಪಂಥವು ಬೆಳೆದು, ಅಲಿಂಗಿಗಳಲ್ಲಿ ಲಿಂಗಧಾರಿಗಳು ಸೇರ್ಪಡೆಯಾಗಿ ಅಂಗದ ಮೇಲಿನ ಇಷ್ಟಲಿಂಗ ಕ್ರಿಯಾಚಾರಗಳನ್ನು ವರ್ಜಿಸುತ್ತ ನಡೆದಿದ್ದಾರೆ, ಹಾಗು ಮನೆತನದ ಮುಖ್ಯಸ್ಥನೇ ಲಿಂಗ ಬಿಟ್ಟು ಅನಾಚಾರಿಯಾದ ಬಳಿಕ ಅವನ ಕೋಮಲ ಹೃದಯದ ಸಂತತಿಯ ಗತಿ ಏನಾಗಬೇಕು ? ಪ್ರತಿಯೊಂದು ಗ್ರಾಮದಲ್ಲಿ ವೀರಶೈವ ಮಠಗಳು ಇದ್ದೇ ಇರುವವು. ಆ ಮಠಸ್ಥರು ಸಹಿತ ವೇದಾಂತದ ಕಡೆಗೇ ಎಳೆಯಿಸಿದ ಬಳಿಕ ಅಜ್ಞಾನಾಂಧಕಾರದಲ್ಲಿ ಮುಳುಗಿದ ವೀರಶೈವ, ಭಕ್ತ ಸಮಾಜದ ಗತಿಯೇನು ? ಪ್ರತಿಯೊಂದು ಗ್ರಾಮದ ಭಕ್ತಾಗ್ರಗಣ್ಯರೂ ಮಠಾಧಿಕಾರಿಗಳೂ ನಮ್ಮ ಸಮಾಜವು ದುರುಳ ವೇದಾಂತಕ್ಕೆ ಬಲಿಬೀಳ

ದೇಶಿ ಮತ್ತು ಭಕ್ತ ಜಂಗಮ ಭಾವೀ ಸಂತತಿಯು ಸುಧಾರಿಸುವಂತೆ ತಕ್ಕ ಏರ್ಪಾಡುಗಳನ್ನು ಕೈಕೊಳ್ಳುವರೆಂದು ನಂಬಿದ್ದೇನೆ.

—ಃ ಕಂದ ಪದ್ಯಗಳು ಃ—

ಮುಕ್ತಿಯ ಮಾರ್ಗವ ಪಿಡಿಯಲು ।
ಯುಕ್ತಂ ಗುರುದೇವ ತಾನು ಕೂಲಂ ಶೀಲಂ ॥
ಸಕ್ತಂ ದೀಕ್ಷಾವಂತಂ ।
ತ್ಯಕ್ತಂ ಸಂಸಾರ ಮೋಹ ಮಾಯಾ ಜಾಲಂ ॥ ೧ ॥

ಸತ್ಯಂ ಸದ್ಗತಿ ವದನಂ ।
ಮಿಥ್ಯಂ ಪಾತಾಳಕಿಳಿಪ ದುರ್ಮಾರ್ಗಂ ಕೇಳ್ ॥
ಭೃತ್ಯಾಚಾರದೆ ಸಾಗುತ ।
ನಿತ್ಯದಿ ನಿಜಲಿಂಗ ಪೂಜೆ ಮಾಡಲುಬೇಕೈ ॥ ೨ ॥

ನಿಗಮಾಗಮಗಳ ಕೇಳುತ ।
ಸುಗಮ ಶಿವಾಚಾರ ಬಿಡದೆ ನಡೆಸಲುಬೇಕೈ ॥
ಅಗಣಿತ ಗುಣಶರಣಂಗಳ ।
ಬಗೆಯನು ತರೆದು ಶಿವನಾಮ ಪಠಿಸಲುಬೇಕೈ ॥ ೩ ॥

ಮಿಶ್ರಾರ್ಪಣಮಂ ತಿಳಿದುಂ ।
ವಿಶ್ರುತ ಪರಮ ಪ್ರಸಾದ ಕೈಕೊಳಬೇಕೈ ॥
ಪ್ರಶ್ರುತ ಪೂರ್ವಾಚಾರವ ।
ಸುಶ್ರಾವ್ಯ ಮಹಾ ಪ್ರಸಾದಿ ಶರಣನೆ ಬಲ್ಲಂ ॥ ೪ ॥

ದುರಿತ ದುರಾಚಾರಂಗಳು ।
ಪರಿವವು ಸತ್ಕ್ರಿಯೆ ಸುನೀತಿ ಸಾಧನದಿಂದಂ ॥
ಶರಣರ ಸನ್ನುತ ಮಾರ್ಗಂ ।
ಪರಮಾನಂದಾಬ್ಧಿ ಸುಖವ ನೀವುದು ನಿಜದಿಂ ॥ ೫ ॥

—ಃ ವಚನಗಳು ಃ—

ಅಂತರಂಗದ ಆರು ಭವಿಗಳ ಕಳೆದು, ಮೂರು ಮಲಗಳ ತೊಳೆದು, ಬಹಿರಾಂತರ್ಗತ ಮದಗಳೆಂಟನು ಸೆಳೆದು, ಅರಿಷಡ್ವರ್ಗಂಗಳ ಮೊಳಕೆಯ

ನಳಿದು, ದಶವಾಯುಗಳ ಸಂಚವನುಳಿದು, ಪರವು ಪ್ರಕಾಶದೊಳು ಬೆಳೆವ ಮಹಾಂತರ ಪಾದವ ತೋರಯ್ಯ ಸಿದ್ಧೇಶ್ವರಾ ॥ ೧ ॥

ಸುಗಂಧ ಪ್ರಸಾದ ಆಚಾರಲಿಂಗಕ್ಕೆ, ಸುರುಚಿಪ್ರಸಾದ ಗುರುಲಿಂಗಕ್ಕೆ ಸುಸ್ಪರ್ಶನಪ್ರಸಾದ ಜಂಗಮ ಲಿಂಗಕ್ಕೆ, ಸುಶಬ್ದ ಪ್ರಸಾದ ಜಂಗಮ ಲಿಂಗಕ್ಕೆ ತೃಪ್ತಿ ಪ್ರಸಾದ ಮಹಾಲಿಂಗಕ್ಕೆ ಸಲ್ಲಿಸುವ ಸರ್ವಾಚಾರದೋರೆಂದ ನಮ್ಮ ಸಿದ್ಧೇಶ್ವರಾ ॥ ೨ ॥

ಭಕ್ತನೊಳು ಮತಿಜ್ಞಾನ, ಮಹೇಶನೊಳು ಶ್ರುತಿಜ್ಞಾನ, ಪ್ರಸಾದಿಯೊಳು ಖಂಡಜ್ಞಾನ ಪ್ರಾಣಲಿಂಗಿಯೊಳು ಕೇವಲಜ್ಞಾನ, ಶರಣನೊಳು ಜ್ಯೋತಿಜ್ಞಾನ, ಐಕ್ಯನೊಳು ಮಹಾಜ್ಯೋತಿಜ್ಞಾನಂಗಳನಿತ್ತ ಮಹಾಲಿಂಗ ಮೂರ್ತಿಯ ತೀರ್ಥಪ್ರಸಾದ ಕೊಳ್ಳೆಂದ ನಮ್ಮ ಸಿದ್ಧೇಶ್ವರಾ ॥ ೩ ॥

ನಿಜತತ್ವಗಳ ತಿಳಿವುತ, ನಿಜಲಿಂಗವುಂ ನಿಜಭಕ್ತಿಯಿಂದ ಪೂಜಿಸುತ, ಗುರುಲಿಂಗ ಜಂಗಮದ ಸೇವೆಯಂ ಸಲ್ಲಿಸುತ, ನಿಜಾನುಭವದೊಳು ನಿಲ್ಲುತ್ತ ನಿಜಲಿಂಗ ಸಂಧಾನದ ಸಮಾಧಿಯೊಳು ಸಮಾವೇಶವಾಗೆಂದ ನಮ್ಮ ಸಿದ್ಧೇಶ್ವರಾ ॥ ೪ ॥

ಸುಳಿದು ಸುತ್ತುವ ವಾಯುವನಂದು, ನೊಳೆದು ಬೆಳೆದು ಅಳಿಯುವ ಕಲ್ಪನೆ ಕಳೆದು ಹೃದಯಕಮಳ ನಾಳಗಳ ವಳಯದೊಳು ಥಳಥಳಿಸಿ ಉಜ್ವಳಿಪ ಲಳೆಯೊಳು ಉಳಿಯೆಂದ ನಮ್ಮ ಸಿದ್ಧೇಶ್ವರಾ ॥ ೫ ॥

---

# ಕವಿಕಂಡ ಸತ್ಯ ಸತ್ವ.

(ಲೇಖಕರು;— ಶ್ರೀ ಮಲ್ಲಿಕಾರ್ಜುನ ಶಿವಯೋಗಿಗಳು, ನಿಡುಗುಂದಿ.)

ಶ್ರೀಪತಿಗೆ ಸೊಬಗ ನುಡುಪತಿಗೆ ಶಾಂತಿಯನು ವಾ ।
ಣೀಪತಿಗೆ ಚಾತುರ್ಯಮಂ ದಿಸಸ್ಪತಿಗೆ ಪ್ರ ।
ತಾಪವಂ ಸುರಪತಿಗೆ ಬೋಧವಂ ರತಿಪತಿಗೆ ಮೂಲೋಕವಾವರಿಸುವ ॥

ರೂಪಂ ಸರಿತ್ಪತಿಗೆ ಗಂಭೀರತೆಯನು ಸಾ ।
ಹಾಪತಿಗೆ ತೇಜವಂ ಕೊಟ್ಟ ಗುರುಮೂರ್ತಿ ಶಂ ।
ಪಾಪತಿ ವಿರೂಪಾಕ್ಷನೆಮಗಿಷ್ಟಸಿದ್ಧಿಯಂ ಮಾಳ್ಕೆ ಸಂತೋಷದಿಂದ ॥

ಮಹಾದೇವನ ಮಗನೂ, ಹರೀಶ್ವರನ ಶಿಷ್ಯನೂ, ಶಿವಭಕ್ತಾಗ್ರೇಸರನೂ ಷಟ್‌ಪದಿಗಳ ಆದಿಕರ್ತೃವೂ, ಉಭಯಕವಿಶರಭಭೇರುಂಡನೂ ಆದ ರಾಘವಾಂಕ ವಿಜಯನಗರ ದೇವರಾಜನ ಹೇಳಿಕೆಯಂತೆ ಹರಿಶ್ಚಂದ್ರ ಕಾವ್ಯ ರಚಿಸುತ್ತಾನೆ, ರಾಘವಾಂಕ ಜಾಣ ಕಾವ್ಯದ ಉದ್ದಕ್ಕೂ ರಸ ತುಂಬಿದ್ದಾನೆ. ಅದರೂ ಸತ್ಯದಾನ ಎರಡು ಗಣ್ಯ ಆಗಿವೆ. ಕಾರಣ ಇವುಗಳನ್ನೇ ಪ್ರಾಮುಖ್ಯವಾಗಿ ಇಟ್ಟುಕೊಂಡು ಇಡೀ ಕಾವ್ಯದ ಸಾರಾಂಶ ಹೇಳುತ್ತೇವೆ.

ಸತ್ಯದಾನಗಳು ಮಾನವನ ಒರೆಗಲ್ಲು. ಕಲಿಕರ್ಣರು ಇವುಗಳಲ್ಲಿ ಉತ್ತೀರ್ಣ ಎನೋ ಆದರು ನಿಜ, ಆದರೆ ಬಲಿ ಪಾತಾಳಕ್ಕೆ ಇಳಿದ. ಕರ್ಣ ಪ್ರಾಣ ಕಳಕೊಂಡ. ಕಾರಣ ಇವರ ನಂಬಿಗೆಯು ದೇವರು ಇವರನ್ನು ಕಾಡಿ ಕೈಬಿಟ್ಟರೆ ಹೊರ್ತು ಕಾಯಲಿಲ್ಲ. ಹರಿಶ್ಚಂದ್ರನ ನಚ್ಚಿನ ಹರ ಮಾತ್ರ ಸತ್ಯಕ್ಕೆ ಮೆಚ್ಚಿ ಸುಡುಗಾಡಿನಲ್ಲಿಯೂ ಈತನ ಕೈಹಿಡಿಯುತ್ತಾನೆ. ಅಂತೇ ಹರ ಎಂದರೆ ಸತ್ಯ. ಸತ್ಯ ಎಂದರೆ ಹರ, ಎಂದು ಶ್ರುತಿ ಸಾರುತ್ತಿದೆ.

ಮಹಾಧಾರ್ಮಿಕನಾದ ಹರಿಶ್ಚಂದ್ರ ಅಯೋಧ್ಯಾಪುರಕ್ಕೆ ಒಡೆಯನಾಗಿ ಚಂದ್ರಮತಿ ಎಂಬ ಸತಿ, ಲೋಹಿತಾಶ್ವ ಎಂಬ ಸುತ, ಸತ್ಯಕೀರ್ತಿ ಎಂಬ

ಸಚಿವ. ಇವರೊಡನೆ ಸುಖದಿಂದ ಇರುತ್ತಾನೆ? ಸ್ವರ್ಗದ ಸಭೆಯಲ್ಲಿ ದೇವೇಂದ್ರ ರವಿಕುಲದ ರಾಜರಲ್ಲಿ ಸತ್ಯವಂತರು ಯಾರು ಎಂದು ವಸಿಷ್ಠನ ಕೇಳಲು, ಹರಿಶ್ಚಂದ್ರನ ಸತ್ಯವನ್ನು ವರ್ಣಿಸಲು ಎನ್ನಳವೇ ಆದಿಶೇಷನಿಗೆ ಅಸಾಧ್ಯ ಎಂದು ವಸಿಷ್ಠನು ಹೇಳುತ್ತಾನೆ.

ವಸಿಷ್ಠನ ಎದುರಾಳಿಯಾದ ವಿಶ್ವಾಮಿತ್ರನಿಗೆ ಆ ಮಾತು ಸಹನ ಆಗದೆ ಹರಿಶ್ಚಂದ್ರನಲ್ಲಿ ಸತ್ಯದ ವೇಶ ಇಲ್ಲೆಂದು ಅಬ್ಬರಿಸುತ್ತಾನೆ.

ಕೋಣಗಳೆರಡರ ಹೋರಾಟ. ಗಿಡಕ್ಕೆ ಮೃತ್ಯು ಎಂಬಂತೆ ತಾಳ್ಮೆಗೆಟ್ಟ ಮುನಿಗಳಿಬ್ಬರ ಜಗಳ ಹರಿಶ್ಚಂದ್ರನಿಗೆ ಹಾನಿ ಎಂದು ಜಂಭಮರ್ದನ ಬಿರುನುಡಿದ.

ವಿಶ್ವಾಮಿತ್ರನೇ?—

ಇಳೆ ತಳಕ್ಕಿಳಿದು ಶಶಿ ಬಿಸಿಯಾಗಿ ಮೇರುಗಿರಿ।
ಚಳಿಸಿ ರವಿಕಂದಿ ಜಲನಿಧಿ ಬತ್ತಿ ಶಿಖಿ ಹಿಮಂ।
ದಳೆದ ದಿನದೊಳು ಸತ್ಯಸಂಧಿ ಹರಿಶ್ಚಂದ್ರರಾಯನ ವಾಕ್ಯದೊಳು ಹುಸಿಗಳು।
ಮೊಳೆಯದಿದು ನಿರುತವಾನರಿಯುಬಾತನ ಸತ್ಯ।
ದಳವ ನೆರೆವಡೆ ನೊಸಲ ಕಣ್ಣುಳ್ಳನಾಗಬೇ।
ಕುಳಿದವರಿಂಗಳವಡದು ನೀನೇ ಪರೀಕ್ಷಿಸುವೆ ಕೇಳೆಂದನಾ ವಸಿಷ್ಠನು॥

ವಸಿಷ್ಠನೇ, ವರುಣನಿಂದ ಪುತ್ರನ ಪಡೆದು ಕೊಟ್ಟಭಾಷೆಗೆ ತಪ್ಪಿ ರೋಗಗ್ರಸ್ತನಾಗಿ, ಶುನಶ್ಶೇಫನ ತಂದು ಯಾಗ ಮಾಡಿದ ಹರಿಶ್ಚಂದ್ರ, ವಚನಭ್ರಷ್ಟ ಎಂಬುದು ವೇದದಲಿ ಪ್ರಸಿದ್ಧ. ನಿನ್ನ ಶಿಷ್ಯ ಎಂದು ಮರೆ ಮಾಚಬೇಡ. ಇನ್ನುಮುಂದೆ ಆದರೂ ಹರಿಶ್ಚಂದ್ರ ಹುಸಿದರೆ ಹೇಗೆ.

ವಿಶ್ವಾಮಿತ್ರನೇ? ಕೇಳು—

ಶ್ರುತಿಮತ ಕುಲಾಚಾರ ಧರ್ಮ ಮಾರ್ಗಂ ಮಹಾ।
ತಂತ್ರವನುಷ್ಠಾನ ಗುರುವಿಾಜ್ಞೆ ಲಿಂಗಾರ್ಚನೋ।
ನ್ನತ ತಪಂ ಬ್ರಹ್ಮ ಕರ್ಮಂ ಬೆಳೆದ ಪುಣ್ಯದೊಳಗಾವವಂ ತೊರೆದು ಕಳೆದು॥
ಸತಿಯನುಳಿದತಿ ದಿಗಂಬರನಾಗಿ ಭುಕ್ತಕೇ।
ಕಿತಕನಾಗಿ ನರಕಪಾಲದೊಳು ಸುರೆಯೆರೆದು ಕುಡಿ।
ಯುತ ತಿರಿವವನಾಗಿ ಹೋಹೆಂ ಹರಿಶ್ಚಂದ್ರ ಮರೆದು ಹುಸಿಯ ನುಡಿದರೆ॥

ವಸಿಷ್ಠನೇ? ಹರಿಶ್ಚಂದ್ರ ಹುಸಿಕ ಎನಿಸದೆ ಇದ್ದರೆ ಚಿರಕಾಲ ನೀವ ಲೋಕಕೆ ಬರಲಾರೆ, ಅಲ್ಲದೆ ಎನ್ನ ಪುಣ್ಯದೊಳಗೆ ಅರ್ಧ ಹರಿಶ್ಚಂದ್ರನಿಗೆ ಧಾರೆಯೆರೆವೆ. ನನ್ನ ಕಾಟಕ್ಕೆ ಇಂದು ಮೊದಲು ಆಯ್ತು. ಸತ್ಯ ಬಿಡ ಬೇಡ ಎಂದು ಹರಿಶ್ಚಂದ್ರನಿಗೆ ಹೇಳು.

ಮುನಿಗಳಿಬ್ಬರ ವ್ಯಾಜ್ಯದಿಂದ ವ್ಯಾಕುಲ ಆಯ್ತು ಒಡ್ಡೋಲಗ. ಶಾಪ ಭಯದಿಂದ ದೇವೇಂದ್ರನೂ ಮೌನಮುದ್ರಿತನಾದ.

ವಿಶ್ವಾಮಿತ್ರನೇ? ನಿನ್ನ ಕುಲಕ್ಕೆ ಸರಿಯಾಗಿ ನುಡಿದೆ, ನೀನು ರಾಜರ್ಷಿ ಅಲ್ಲದೆ ಬ್ರಹ್ಮರ್ಷಿ ಅಲ್ಲ.

ಕೇಳಿ ವಿಶ್ವಾಮಿತ್ರ ಸಿಟ್ಟುಗೊಂಡವನಾಗಿ ಹರಿಶ್ಚಂದ್ರನ ಬಳಿಗೆ ಹೋಗಿ ಹೇರಳಹಣ ಬೇಡಿ ಪಡೆದು, ನಿನ್ನಲ್ಲಿಯೇ ಇರಲಿ, ಬೇಕಾದಾಗ ಕರಿಸುವೆ ಎಂದು ಹೇಳಿ ಹೋಗುತ್ತಾನೆ.

ಬೇಡಬೇಕಾದರೆ ಹರಿಶ್ಚಂದ್ರನಂತಹ ಭಕ್ತಿವಂತನನ್ನೇ ಬೇಡಬೇಕು. ಭಕ್ತಿ ಇಲ್ಲದವರನ್ನು ಬೇಡಿದರೆ ಬರಿ ಕಕ್ಕುಲತೆ ಅಲ್ಲದೆ ಕಾರ್ಯವೇನೂ ಇಲ್ಲ. ದಾನಿ ಸರ್ವಶ್ರೇಷ್ಠ ಆಗಿದ್ದಾನೆ. ಅಂತೆಯೇ? ದುರ್ಭಿಕ್ಷದಲ್ಲಿ ಅನ್ನ ನೀಡುವ ಸುಭಿಕ್ಷದಲ್ಲಿ ಧನವೀಯುವ ದಾನಶೂರನನ್ನು ವಂದಿಸುತ್ತೇನೆ ಎಂದು ಕೃಷ್ಣನು ತಾನೇ ಹೇಳಿದ್ದಾನೆ. ದಾನಿ ಮಹೀತಲರತ್ನ ಎಂಬ ಸುಭಾಷಿತದ ಹೇಳಿಕೆ ನಿಜಕ್ಕೂ ನಿಜ.

ರಾಜ ಬೇಟೆಗೆ ಹೋಗಿ ವಸಿಷ್ಠನನ್ನು ಕಾಣುತ್ತಾನೆ. ವಸಿಷ್ಠ ವಿಶ್ವಾಮಿತ್ರನ ಆಶ್ರಮಕ್ಕೆ ಹೋಗದೇಡ ಎಂದು ಬೋಧಿಸಿ ರಾಜನಿಗೆ ಹಂಪೆಯ ವಿರೂಪಾಕ್ಷಲಿಂಗನ ದರ್ಶನ ಮಾಡಿಸುತ್ತಾನೆ.

ವಿಶ್ವಾಮಿತ್ರ ಮಾಯಾವರಾಹದ ಮುಖಾಂತರ ರಾಜನನ್ನು ತನ್ನ ಆಶ್ರಮಕ್ಕೆ ಬರಿಸುತ್ತಾನೆ. ವಿಶ್ವಾಮಿತ್ರನ ಆಶ್ರಮ ಇದು ಎಂದು ತಿಳಿದ ರಾಜ. ಗುರುವಾಕ್ಯ ಮೀರಿ ಪಾಪಿಯಾದ ನನಗೆ ಕೇಡಾಗದೆ ಇರದು ಎಂದು ಚಿಂತಿಸುತ್ತಾನೆ. ರಾಜನ ಈ ಗುರುನಂಬಿಗೆ ಆದರ್ಶ ಆಗಿದೆ. ನಂಬಿಗೆ ಇಲ್ಲದ ಸಂಶಯಾತ್ಮನು ನಾಶ ಆಗುತ್ತಾನೆ. ಸಂಶಯಾತ್ಮನಿಗೆ ಈ ಲೋಕ ಇಲ್ಲ, ಪರಲೋಕ ಇಲ್ಲ ಸುಖ ಇಲ್ಲ ಎಂದು ಗೀತೆಯ ಮತ. ರಾಜ

ರಾಣಿಯು ತೊಡೆಯ ಮೇಲೆ ಮಲಗಿ ಛೋಂಕನೆ ಏಳುತ್ತಾನೆ. ಬೆಳದಿಂತ ಮಲ್ಲ ನೀನು ನಡಗುವದು ಏಕೆ ಎಂದು ರಾಣಿ ಕೇಳಲು, ಪ್ರೀಯೆ ಕನಸೊಂದ ಕಂಡು ನಿರುತ ಎಂದೇ ಕಣ್ಣು ತೆರೆದೆ.

ಘುಡಿಘುಡಿಸುತ್ತೊಬ್ಬ ಮುನಿಬಂದು ನಾನೋಲಗಂ।
ಗೊಡುವ ಮಣಿಮಂಟಪದ ಕಂಭನೆಲ್ಲವನು ತಡೆ।
ಗಡಿದು ಕೋಂಗಳಸಂಗಳಂ ಮಾಣದೊಡೆಬಡಿದು ನೆರೆದ ಸಭೆಯೊಳಗೆನ್ನನು॥
ಕೆಡಹಿ ಸಿಂಹಾಸನವ ನೊಯ್ದಾಗಳೆನ್ನೆದೆಯ।
ನಡರ್ದೊಂದು ಕಾಗೆ ಕರೆದದು ಬಳಿಕಾಂಗಿರಿಯ।
ನಡರ್ದು ಶಿಖರದೊಳಿಸೆವ ಮಣಿಗೃಹಂ ಪೊಕ್ಕು ನಿದರಂತಸ್ಥವೇನೆಂದನು॥

ಪ್ರೀಯುನೇ? ವಿಶ್ವಾಮಿತ್ರನ ದೂಯೆ ಇದು. ಕಷ್ಟವಾಗಿ ಕಡೆಗೆ ಸ್ಥಿರಪದವಿ ಆಗುವದನ್ನೇ ಈ ಸ್ವಪ್ನ ಸೂಚಿಸಿದೆ. ಸರ್ವಸ್ವ ಹಾನಿ ಆದರೂ ಸತ್ಯ ಬಿಡಬೇಡ ಎನ್ನುತ್ತಾಳೆ. ಇಲ್ಲಿ ರಾಣಿ ರಾಜನಿಗೆ ಮಂತ್ರಿಯಂತೆ ಆಲೋಚನೆ ಕೊಡುವದು ಗಮನಾರ್ಹ ಆಗಿದೆ.

ಕನ್ನೆಯರೀರ್ವರು ಬಂದು ಸುಶ್ರಾವ್ಯವಾಗಿ ಹಾಡಲು ರಾಜ ಆಭರಣ ಕೊಡುತ್ತಾನೆ? ರಾಜನೇ? ಬಿಸಿಲಿನಿಂದ ಬಳಲಿದ ನಮಗೆ ಆಭರಣಗಳಿಂದ ಪ್ರಯೋಜನವೇನು. ನಿನ್ನ ಮುತ್ತಿನ ಸತ್ತಿಗೆ ಕೊಡು.

ಕನ್ನೆಯರೇ? ಈ ಕೊಡಲಿಕ್ಕೆ ಬಾರದನ್ನು ಕೇಳಿದರೆ ಕೊಡುವ ಬಗೆ ಹೇಗೆ. ಇದು ರಾಜ್ಯಾಭಿಷೇಕದಲ್ಲಿ ಪೂಜೆಗೊಳ್ಳುವದು ಆಗಿದೆ.

ರಾಜನೇ? ಹಾಗಾದರೆ ನೀನು ನಮ್ಮನ್ನು ಮದುವೆಯಾಗು.

ಕನ್ನೆಯರೇ? ಕೇಳಿರೆ ಮುನಿಯು ಕೋಪದಿಂದ ಜನಿಸಿದ ಕಾರಣ ನೀವು ಹೊಲತಿಯರು. ನಿಮ್ಮನ್ನು ಮದುವೆಯಾಗಿ ಕುಲ ಕೆಡಿಸಿಕೊಳ್ಳಲಾರೆ.

ರಾಜನೇ? ಕೆಚ್ಚಲ ಮಾಂಸದ ಹಾಲು. ನೊಣದ ಮಧು. ಮೃಗದ ಕಸ್ತೂರಿ. ದೇವರಿಗೆ ಸಲ್ಲುವದಿಲ್ಲವೇ? ಕುಲದ ಮಾತು ಏಕೆ?

ಕನ್ನೆಯರೇ? ನಾಯಿ ಹಾಲು ರುಚಿ ಎಂದು ಉಣ್ಣಬಹುದೆ. ಬಚ್ಚಲ ನೀರು ತಿಳಿ ಎಂದು ಮೀಯಬಹುದೇ? ಪ್ರೇತವನ ಪುಷ್ಪ ಸುವಾಸಿತ ಎಂದು ಮುಡಿಯಬಹುದೇ?

ರಾಜನೇ ? ಗಾಯನ ಕೇಳಿದ ಕಿವಿಗೆ, ಮಾತನಾಡಿಸಿದ ಬಾಯಿಗೆ, ರೂಪನೋಡಿದ ಕಣ್ಣಿಗೆ, ಮೂಸಿಸುವ ಮೂಗಿಗೆ ಹೊಲೆ ಇಲ್ಲ. ಸೋಂಕಿಗೆ ಮಾತ್ರ ಹೊಲೆ ಉಂಟೆ?

ಕನ್ಯೆಯರೇ ? ಬೆಂಕಿ ಮುಟ್ಟಿದರೆ ಸುಡುತ್ತದೆ. ಕೇಳಿದರೆ ಹೇಳಿದರೆ ಕಂಡರೆ ಮೂಸಿಸಿದರೆ ಸುಡುವದಿಲ್ಲ.

ರಾಜನೇ ? ನಿನಗೆ ಮನಸೋತ ನಾವು ಬೆನ್ನ ಬಿಡೆವೆನ್ನಲು. ರಾಜ ಮಂತ್ರಿಯರು ಅವರನ್ನು ಹೊಡೆದು ಅಟ್ಟುತ್ತಾರೆ.

ಅನವದ್ಯ ಸುಂದರಿಯರಾದ ಕನ್ಯೆಯರು ತಾವೇ ಮೋಹಿಸಿ ಬಂದಿರಲು. ನಿರಾಕರಿಸಿದ ರಾಜ ಅದೆಂತಹ ಜಿತೇಂದ್ರಿಯ ಎಂಬುದು ತಾನೇ ವ್ಯಕ್ತವಾಗುವದು.

ಕನ್ಯೆಯರು ಮೊರೆಯಿಡಲು, ಕೌಶಿಕ ಕಿಡಿಯಾಗಿ, ರಾಜನ ಬಳಿಗೆ ಹೋಗಿ, ಕನ್ಯೆಯರನ್ನು ವರಿಸುವದಾಗಿ ವಚನಕೊಡು ಎನ್ನುತ್ತಾನೆ.

ಬೇಡಿದರೆ ಸರ್ವರಾಜ್ಯವನ್ನಾದರೂ ಕೊಡುವೆ. ಈ ಮಾತನ್ನು ಮಾತ್ರ ಕೊಡಲಾರೆ ಎಂದು ರಾಜ ಹೇಳಲು, ವಿಶ್ವಾಮಿತ್ರ ಆ ಮಾತನ್ನೇ ಮುಂದು ಮಾಡಿ, ಇದೀಗ ರಾಜ್ಯವೆಲ್ಲಾ ನನಗೆ ಒಪ್ಪಿತಾ ಎನ್ನುತ್ತಾನೆ. ಶಿವಭಕ್ತ ಶಿರೋಮಣಿ ವಿಶ್ವಾಮಿತ್ರ ಬೇಡುತ್ತಿರಲು ಆಲೋಚನೆ ಏಕೆ ಎಂದು ರಾಣಿ ನುಡಿಯಲು, ರಾಜ ಸರ್ವರಾಜ್ಯವನ್ನೂ ವಿಶ್ವಾಮಿತ್ರನಿಗೆ ದಕ್ಷಿಣಧಾರೆ ಎರೆಯುತ್ತಾನೆ.

ಸರ್ವಸ್ವ ತ್ಯಾಗ ಮಾಡಿದ ಇವರಿಗೆ ಸದ್ಗತಿ ಆಗುವದರಲ್ಲಿ ಸಂದೇಹವಿಲ್ಲ. ತ್ಯಾಗವು ಮಾನವನ ಜೀವನವನ್ನು ಪಾವನಗೊಳಿಸುವದು ಆಗಿದೆ ಅಲ್ಲದೆ ಸದ್ಗತಿ ಉಂಟು ಮಾಡುವದು ಆಗಿದೆ. ಈ ಸದ್ಗತಿಯು ತ್ಯಾಗಿಗಳಲ್ಲದವರಿಗೆ ಎಂದಿಗೂ ದೊರೆಯದು.

ಲೋಭ ನರಕದ ದ್ವಾರ. ತ್ಯಾಗ ಸ್ವರ್ಗದ ದ್ವಾರ. ದುರ್ಗುಣಗಳಲ್ಲೆಲ್ಲಾ ಲೋಭವೇ ಹೆಚ್ಚಿನದು. ಸದ್ಗುಣಗಳಲ್ಲೆಲ್ಲಾ ತ್ಯಾಗವೇ ಹೆಚ್ಚಿನದು. ಯಾವ ದಾರಿದ್ರ್ಯ ಶಂಕೆಯಿಂದ ಲೋಭಿ ಹಣ ಕೊಡುವದಿಲ್ಲವೋ ಅದೇ ದಾರಿದ್ರ್ಯ ಶಂಕೆಯಿಂದ ತ್ಯಾಗಿ ಹಣಕೊಡುತ್ತಾನೆ. ಇಲ್ಲಿ ಇಬ್ಬರ ಶಂಕೆ ಒಂದೇ ಆದರೂ ಮಾಡುವ ಕೃತಿಗಳು ಹೊಂದುವ ಫಲಗಳು ಮಾತ್ರ ತೀರ ಭಿನ್ನವಾಗಿವೆ.

ವಿಶ್ವಾಮಿತ್ರ ತಾನು ಮೊದಲಿಟ್ಟ ಹಣ ಕೇಳಲು, ರಾಜ ಕಾಶಿಯಲ್ಲಿ ಕೊಡುತ್ತೇನೆ ಎಂದು ಹೇಳುತ್ತಾನೆ. ವಿಶ್ವಾಮಿತ್ರ ರಾಜನನ್ನು ರಾಜಧಾನಿಗೆ ಕರೆತಂದು. ನನ್ನ ಮಕ್ಕಳನ್ನು ವಿವಾಹ ಆದರೆ ರಾಜ್ಯವನ್ನು ಮರಳಿ ಕೊಡುತ್ತೇನೆ ಎಂದು ಹೇಳುತ್ತಾನೆ. ರಾಜ ಒಪ್ಪದೆ ಹೊರಡಲು ಪುರದ ಪುಣ್ಯ ಪುರುಷಾಕಾರದಿಂದ ಪೋಗುವದೆಂದು ಪುರಜನ ಕಣ್ಣೀರಿನಕೋಡಿ ಹರಿಸುತ್ತದೆ. ಪ್ರಜರು ದುಃಖಿಸುವವನ್ನು ನೆನೆದರೆ, ರಾಜ ಅದೆಷ್ಟು ಪ್ರಜಾರಂಜಕನಾಗಿದ್ದ ಎಂಬುದು ತಾನೇ ವಿದಿತವಾಗುತ್ತದೆ.

ಐಶ್ವರ್ಯ ಕಂಡು ಬಾಯಲ್ಲಿ ನೀರೂರಿ ಹುಸಿಯು ಬಹುದೆಂದು ಭಾವಿಸಿದ್ದ ವಿಶ್ವಾಮಿತ್ರ ಎಲ್ಲಿ ತನಗೆ ಸೋಲಾಗುವದೋ ಏನೋ ಎಂದು ಚಿಂತಿಸುತ್ತಾನೆ.

ಮಾರ್ಗದೊಳಗೆ ನಾಲ್ಕೂ ಸಿಟ್ಟನಿಂದ ಆವರಿಸಿ ಬರುವ ಉರಿಯಲ್ಲಿ ಚಂದ್ರಮತಿ ಪ್ರವೇಶಿಸಲು, ಸೂರ್ಯಹೊಕ್ಕ ಕತ್ತಲೆಯಂತೆ, ಕೃತ್ರಿಮ ಕೃಶಾನು ಹರಿದು ಹೋಗುತ್ತದೆ. ಸತಿ ಪತಿವ್ರತಾ ಸ್ತ್ರೀಯರ ಮಹತಿಯೇ ಅಂಥಾದ್ದು.

ರಾಜ ಕಾಶಿಗೆ ಮುಟ್ಟಿ, ವಿಶ್ವನಾಥನ-ದರ್ಶನ ಮಾಡಿಕೊಳ್ಳುತ್ತಾನೆ. ನಕ್ಷತ್ರಕ ರಾಜನ ಸೆರಗ ಹಿಡಿದು, ನೀಕೊಟ್ಟ ಅವಧಿ ಈ ದಿನ ಮುಗಿಯುತ್ತದೆ. ಧನ ತೀವ್ರಕೊಡೆಂದು ಕಾಡುತ್ತಾನೆ.

ಪತಿದೇವನೇ ? ಸಾಲದಲ್ಲಿ ಹೋದಷ್ಟು ಹೋಗಲಿ. ನನ್ನನ್ನೂ ಮಗನನ್ನೂ ಮಾರು. ಸರ್ವಕ್ಕೆ ಮೊದಲು ಸತಿಸುತರು. ನಾಚಬೇಡ ಎಂದು ಚಂದ್ರಮತಿ ಹೇಳುತ್ತಾಳೆ.

ಹೀಗೆ ಹೇಳಿ ಚಂದ್ರಮತಿಗೆ ಕೇವಲ ಆದರ್ಶಸತಿ ಎಂದು ಹೇಳಿದರೆ ಸಾಲದು. ಅಸಾಮಾನ್ಯ ಸತಿ ಎಂದು ಹೇಳಬೇಕು.

ರಾಜ ಸತಿಸುತರನ್ನು ಮಾರಾಟಕ್ಕೆ ನಿಲ್ಲಿಸಲು, ಅಗ್ನಿ ವಿಪ್ರನಾಗಿ ಕೊಳ್ಳುತ್ತಾನೆ.

ಧುರದೊಳಗೆ ಕಾದಿ ಜೂಜಾಡಿ ಸೋಲದೆ ಸವಿ ।
ಸ್ತ್ರರವುಶ್ಪ ಸಿರಿ ಹೋಯ್ತು ಪುರಹೋಯ್ತು ಧರೆ ಹೋಯ್ತು ।
ಪರಿವಾರ ಹೋಯ್ತು ನಿಷ್ಕಾರಣಂ ನಾರಿ ಹೋದಳು ಕುಮಾರಂ ಹೋದನು ॥

ಉರಿವಾರಿಯುವಧಿ ಬಂದುದು ಋಣವನಿನ್ನಾವ ।
ಪರಿಯೊಳುತ್ತರಿಸಿ ಶುಚಿಯಹೆನು ದುಷ್ಕರ್ಮವಿ ।
ಟ್ಸ್ಯಾರಸುಕಿಡೆ ಪೋಲೀನುಗತಿಯೆಂಬ ಭೂಪಂಗೆ ಮಂತ್ರೀಶನಿಂತೆಂದನು ॥

ರಾಜನೇ? ಶಿವನು ನಿನ್ನ ಪರೀಕ್ಷೆಗಾಗಿ ಈ ಕಷ್ಟತಂದಿರುವನು ಧೈರ್ಯ ಬಿಡಬೇಡ. ಸರಿ ಮಾನವನ ಸ್ವತಂತ್ರತಾ ಭ್ರಮೆಯನ್ನು ನಿವಾರಿಸಿ, ಎಲ್ಲಾ ಶಿವಾಧೀನ ಎಂದು ತಿಳಿಸುವದದೇ ಉಪನಿಷತ್ತುಗಳ ಉದ್ದೇಶ ಆಗಿದೆ.

'ಕಾಲ ವೀರಬಾಹುಕ' ಎಂಬ ಹೊಲೆಯನಾಗಿ ರಾಜನನ್ನು ಕೊಂಡು ಹಣ ಕೊಡಲು, ರಾಜ ಆ ಹಣವನ್ನು ನಕ್ಷತ್ರಕನಿಗೆ ಕೊಟ್ಟು ನಮಿಸು ತ್ತಾನೆ.

ವೀರಬಾಹುಕನ ಅಪ್ಪಣೆಯಂತೆ, ರಾಜ ಸುಡುಗಾಡ ಕಾಯುತ್ತಿರಲು ಮಂತ್ರಿ ದಿನಾಲು ರಾಜನ ವೈಕೈಗಳನ್ನು ಒತ್ತಿ ಸೇವಿಸುತ್ತಾನೆ.

ಜಯಾಪಜಯದಲ್ಲಿ, ಹಾನಿವೃದ್ಧಿಯಲ್ಲಿ, ಮಾನಾಪಮಾನದಲ್ಲಿ, ಸುಖ ದುಃಖದಲ್ಲಿ, ರಾಜಮಂದಿರ, ಸ್ಮಶಾನದಲ್ಲಿ ಯಾವನು ಸಂಗಾತಿಯೋ ಅವನೇ ನಿಜಮಿತ್ರ ಎಂದು ಉದ್‌ಘೋಷಿಸುವ ನೀತಿಶಾಸ್ತ್ರವನ್ನು ಈ ಮಂತ್ರಿ ಸಾರ್ಥಕ ಮಾಡಿದ್ದಾನೆ.

ಚಂದ್ರಮತಿ ದುಃಖಿಸುತ್ತ ಹಾವು ಕಚ್ಚಿ ಮಡಿದ ಮಗನನ್ನು ಸುಡು ಗಾಡಿಗೆ ತರಲು ಸುಂಕದ ಹಣ ಕೊಡದೆ ಸುಡಬೇಡ ಎಂದು ರಾಜ ತಡೆ ಯುತ್ತಾನೆ. ದಂಪತಿಗಳು ಅನ್ಯೋನ್ಯವಾಗಿ ಗುರ್ತಿಸಿ ದುಃಖಿಸುತ್ತಾರೆ.

ತಂದೆಯನ್ನು ಋಣಮುಕ್ತ ಮಾಡಲು ಆಳಾಗಿ ಆತ್ಮಾಹುತಿ ಕೊಟ್ಟ ಲೋಹಿತಾಶ್ವನಂತಹ ಸುಪುತ್ರ ರಾಜಪುತ್ರ ವಿರಳ.

ಹಣಕ್ಕಾಗಿ ಮನೆಗೆ ಹೊರಟ ಚಂದ್ರಮತಿಗ ಕಾಶೀರಾಜನ ಕುವರನ ಕೊಂದ ಆರೋಪ ತಟ್ಟಿ ಆವಳ ತಲೆ ತೆಗೆಯುವ ಕೆಲಸ ಹರಿಶ್ಚಂದ್ರನ ಪಾಲಿಗೆ ಬರುತ್ತದೆ. ಪಾಪಿಯೇ? ನಿನ್ನ ದೈವವನ್ನು ಸ್ಮರಿಸೆಂದು ಹರಿಶ್ಚಂದ್ರ ಗುಡುಗಲು, ಚಂದ್ರಮತಿಯು—

ಬಲಿದ ಪದ್ಮಾಸನಂ ಮುಗಿದಕ್ಷ ಮುಚ್ಚಿದಂ ।
ಜಲಿವೆರಸಿ ಗುರು ವಸಿಷ್ಠಂಗೆರಗಿ ಶಿವನ ನಿ ।
ರ್ಮಲರೂಪ ನೆನೆದು ಮೇಲಂ ತಿರುಗಿ ನೋಡಿ ಭೂಚಂದ್ರಾರ್ಕತಾರಂಬರಂ ॥

ಕಲಿ ಹರಿಶ್ಚಂದ್ರರಾಯಂ ಸತ್ಯವೆರಸಿ ಬಾ ।
ಳಲಿ ಮಗಂ ಮುಕ್ತನಾಗಲಿ ಮಂತ್ರಿ ನೆನೆದುದಾ ।
ಗಲಿ ರಾಜ್ಯದೊಡೆಯ ವಿಶ್ವಾಮಿತ್ರ ನಿತ್ಯನಾಗಲಿ ಹರಕೆ ಹೊಡೆಯೆಂದಳು ॥

ಹರಕೆ ಕೇಳಿ ಹರಿಶ್ಚಂದ್ರ ಹಾಹಾರಿ ಧಾಮ ಏಧಿಯೇ? ಮಗನ ಮರಣ ತೋರಿ ಮತ್ತೀಗ ಎನ್ನ ಕೈಯಿಂದಲೇ ಎನ್ನ ಶ್ರೇಷ್ಠ ಸತಿಯನ್ನು ಕೊಲ್ಲಿಸುವೆ ಆಗಲೆಂದು ಖಡ್ಗವೆತ್ತಿ ಹೊಡೆವನಿತಕ್ಕೆ ಹರ ಹರಿಶ್ಚಂದ್ರನ ಹಸ್ತ ಹಿಡಿಯುತ್ತಾನೆ!

ವಿಶ್ವಾಮಿತ್ರ ವಸಿಷ್ಠನೊಡನೆ ಬಂದು, ಹರಿಶ್ಚಂದ್ರನೇ ಬಹುಪರಿಯಿಂದ ಕಾಡಿದೆ ಕ್ಷಮಿಸು ಎಂದು ಬೇಡಲು, ಮುನೀಶ್ವರನಾದ ನೀನು ಕಾಡಿದ್ದರಿಂದ ರವಿಕುಲ ಪರಿಶುದ್ಧ ಆಯ್ತು ಎಂದು ಹರಿಶ್ಚಂದ್ರ ಹೇಳುತ್ತಾನೆ. ಹೌದ್ದು ಕಾಡಿದವರಿಗೆಲ್ಲ ಕಡೆಗೆ ಹೀಗೆ ಬೇಡಿಕೊಳ್ಳುವದೇ ಗತಿ.

ನನ್ನ ಪ್ರತಿಜ್ಞೆ ಪೂರೈಸಿದೆ ಎಂದು ವಸಿಷ್ಠ ಹರಿಶ್ಚಂದ್ರನನ್ನು ಹರಸುತ್ತಾನೆ. ವಸಿಷ್ಠನ ಶಿಷ್ಯಾಭಿಮಾನ ಪ್ರಶಂಸನೀಯವಾಗಿದೆ.

ಶಿವನು ಲೋಹಿತಾಶ್ವನಿಗೆ ಪ್ರಾಣದಾನ ಕೊಟ್ಟು ಹರಿಶ್ಚಂದ್ರನಿಗೆ ಪಟ್ಟಗಟ್ಟಿ ಸಪ್ತದ್ವೀಪಗಳನ್ನು ಸಲಹು ಎಂದು ಆಶೀರ್ವದಿಸುತ್ತಾನೆ. ಸೈ ಸೈ ಭೋಲಾ ಶಂಕರನು ಭಕ್ತರಿಗೆ ಬೇಡಿದ್ದನ್ನು ಕೊಡುವದರಲ್ಲಿ ಬಂಟ.

ಪತ್ನಿ ಪುತ್ರ ಮಂತ್ರಿಗಳೊಡನೆ ಅಯೋಧ್ಯೆಗೆ ಆಗಮಿಸಿದ ಹರಿಶ್ಚಂದ್ರ ಚಕ್ರವರ್ತಿಯನ್ನು ಪ್ರಜೆಗಳು ಸಂತಸದಿಂದ ಸ್ವಾಗತಿಸುತ್ತಾರೆ.

ಮೂರು ಲೋಕದಲ್ಲಿ ಸತ್ಯವೆಂಬ ಕೂರಲಗ ಹಿಡಿದು ಗೆದ್ದ ಹರಿಶ್ಚಂದ್ರನ ಮಾತೇ ಮಾತು, ಕಥನವೇ ಕಥನ!

---

# ಲಿಂಗಾಂಗಗಳು.

( ಲೇಖಕಃ-ಶ್ರೀ. ಸಿ. ನಾ. ಮಹಾಂತಣ್ಣವರು. ಧಾರವಾಡ. )

ಚರಚರಾತ್ಮಕವಾದ ಸೃಷ್ಟಿಯನ್ನು ನಿರೀಕ್ಷಿಸಿದರೆ ಚರಾತ್ಮಗಳು ಅಚರಾತ್ಮಕಗಳನ್ನ ಆಶ್ರಯಿಸಿ ಬಾಳುವವೆಂಬುದು ವಿವೇಕಿಗಳಿಗೆ ವಿದಿತವಾದದ್ದೇ. ಎಲ್ಲ ಜೀವಕೋಟಿಗಳಲ್ಲಿ ಮಾನವ ಜೀವಿಯು ಶ್ರೇಷ್ಠವು. ಪಶು ಪಕ್ಷಿ ಕ್ರಿಮಿಕೀಟಕಾದಿಗಳು ಈಶನು ಕೊಟ್ಟ ಸ್ವಾಭಾವಿಕ ನೈಸರ್ಗಿಕದಲ್ಲಿಯೇ ಬಾಳಿ ಹಾಳಾಗುವವು. ಆದರೆ ಮಾನವನ ಮಾತು ಹಾಗಲ್ಲ. ಈತನಿಗೆ ದೇವರು ಕೊಟ್ಟ ವಿಶಿಷ್ಟವಾದ ಇಂದ್ರಿಯಗಳಿಂದ ಸೃಷ್ಟಿಯನ್ನು ನಿರೀಕ್ಷಿಸಿ ಸೃಷ್ಟಿಯ ತತ್ವಗಳನ್ನು ಶೋಧಿಸಿ, ಆಯಾ ತತ್ವಗಳ ಗುಣಧರ್ಮಗಳನ್ನರಿತು, ತಾನು ತನ್ನ ಜೀವಿತಕ್ಕೂ ತನ್ನಂತಹ ಇತರ ಸಮಾಜಕ್ಕೂ ಉಪಯೋಗವಾಗುವಂಥ ಎಷ್ಟೋ ಸುಧಾರಣೆಗಳನ್ನು ಮಾಡುತ್ತ ಜಗತ್ತಿನಲ್ಲಿ ಮೆರೆಯುವನು. ಹಳ್ಳಿಯಲ್ಲಿಯೇ ಇರಲಿ, ಪಟ್ಟಣದಲ್ಲಿಯೇ ಇರಲಿ, ಆತನು ಸಮಾಜ ಕಟ್ಟಿಕೊಂಡು ಸಮಾಜದ ನಿಯಮಗಳನ್ನು ಪಾಲಿಸುತ್ತ ಸಮಾಜ ಧರ್ಮವನ್ನೂ, ಸಮಾಜವನ್ನು ಸಲಹುವ ರಾಜ್ಯದಾಡಳಿತೆಯ ರಾಜಕೀಯ ನಿಯಮಗಳನ್ನು ಪರಿಪಾಲಿಸುತ್ತ ತನ್ನ ಮನೆತನದ ಸ್ಥಿತಿಗತಿಗಳನ್ನು ಮುಂದುವರಿಸುತ್ತ ಹೋಗುವನು. ಇವೆಲ್ಲವನ್ನು ತಾನು ಸಾಧಿಸಲು ತನ್ನ ಕಾಯಕವೂ ತನ್ನ ಶರೀರದ ಶಕ್ತಿಯೂ ಅಚಲವಾಗಿರಲು ತನ್ನ ಹಾಗು ತನ್ನ ಕುಟುಂಬದ ಪೋಷಣೆಗೂ ತೋಷಣೆಗೂ ಸರಿಯಾದ ಇಮಾರತು ಇರಲೇ ಬೇಕು. ಆದ್ದರಿಂದ ವಿಶ್ವಧರ್ಮವೆಂದೆನಿಸಿದ ವೀರಶೈವ ಮತಸ್ಥನು ಲೌಕಿಕಕ್ಕೂ ಪಾರಮಾರ್ಥಕ್ಕೂ ಸರಿಯಾದ ಕಟ್ಟಡವನ್ನು ಕಟ್ಟಿಕೊಂಡು ಅದರಲ್ಲಿ ಬಚ್ಚಲ ಮನೆ, ಅಡಿಗೆಯ ಮನೆ, ಮಲಗುವ ಮನೆಗಳೆಂಬ ಕನಿಷ್ಟ ಮೂರು ಭಾಗಗಳನ್ನು ಮಾಡಲೇ ಬೇಕಾಗುವದು. ಇದಕ್ಕೂ ಹೆಚ್ಚು ಅನುಕೂಲವಿದ್ದವರು, ಇವೇ ಮೂರರಲ್ಲಿ ಆರು ಕೋಣೆಗಳನ್ನು ಮಾಡಿ, ಪ್ರಾತಃಕಾಲದ ಶೌಚಾಚಮನದ ಬಚ್ಚಲಮನೆ, ಶಿವಪೂಜೆಯ ದೇವರಮನೆ, ಪ್ರಸಾದಕ್ಕಾಗಿ ಅಡಿಗೆಯಮನೆ, ಕಾಯಕದಮನೆ, ಊಟದಮನೆ, ವಿಶ್ರಾಂತಿಗಾಗಿ ವಿಶಾಲವಾದ ಪಟ್ಟಸಾಲೆಗಳೆಂಬ ಆರು ಭಾಗಗಳನ್ನು ಮಾಡಿಕೊಂಡು

ಇರುವರು. ಇದೇ ಪ್ರಕಾರ ಪ್ರತಿಯೊಬ್ಬ ವೀರಶೈವಾನುಯಾಯಿಯು ತನ್ನ ಶರೀರವೆಂಬ ಗೃಹದಲ್ಲಿ ತನ್ನ ಆತ್ಮಸ್ವರೂಪಿಯಾದ ಲಿಂಗದೇವನು ಮೂರು ಸ್ವರೂಪಗಳಿಂದ ಇರುವ ಅಂಗಗಳನ್ನೂ ಲಿಂಗಗಳನ್ನೂ ಅವೇ ಆರಾದ ಲಿಂಗ ಲಿಂಗಾನುಭವವನ್ನೂ ಶಿವಶರಣರು ಮಾಡಲ್ಪಟ್ಟ ಮಹಾಜ್ಞಾನವನ್ನು ಶಿವಾನುಭವ ಪತ್ರಿಕಾ ವಾಚಕರ ಮುಂದೆ ಇರಿಸುವದೇ ಈ ಲೇಖನ ಪಿರಿದಾಶೆ.

ಸ್ಥೂಲದಿಂದ ದೃಷ್ಟ, ಸೂಕ್ಷ್ಮದಿಂದ ಅದರ ಸುಸಂಗ, ಕಾರಣದಿಂದ ವಾಯುಭ್ರಮೆ, ಇಂತೀ ತನುತ್ರಯಂಗಳ ಕಳೆದು ನಿಜದ ಉಳಿಮೆಯಲ್ಲಿ ಒಡಗೂಡಬೇಕು. ವೀರಶೂರ ರಾಮನಾಥಾ ||

ಅರ್ಥ:— ಸಾಕಾರವಾದ ಇಷ್ಟಲಿಂಗ ಸಂಬಂಧದಿಂದ ಸ್ಥೂಲತನುವಿನ ಪ್ರಪಂಚು, ನಿರಾಕಾರವಾದ ಪ್ರಾಣಲಿಂಗದ ಸಂಬಂಧದಿಂದ ಸ್ಥೂಲ ತನುವಿನೊಡನೆ ಕೂಡಿದ ಸೂಕ್ಷ್ಮತನುವಿನ ಪ್ರಪಂಚು, ಇಷ್ಟಲಿಂಗ ಪ್ರಾಣ ಲಿಂಗಕ್ಕೆ ಕಾರಣವಾದ ಭಾವಲಿಂಗ ಸಂಬಂಧದಿಂದ ಕಾರಣ ತನುವಿನ ಪ್ರಪಂಚು, ಈ ತ್ರಿವಿಧ ಲಿಂಗಸಂಬಂಧದಿಂದ ತನುತ್ರಯಂಗಳ ಪ್ರಪಂಚನು ಬೇರ್ಪಡಿಸಿ, ತ್ಯಾಗಾಂಗ, ಭೋಗಾಂಗ, ಯೋಗಾಂಗ ಸ್ವರೂಪವನೆಯ್ದಿಸಿ, ತಾನು ತ್ರಿವಿಧಾಂಗದಲ್ಲಿ ಉಳಿಮೆಯಾದ ತ್ರಿವಿಧ ಲಿಂಗಪೂಜೆಯಲ್ಲಿಂದ ಮಹಾ ಘನಲಿಂಗದಲ್ಲಿ ಸಮರಸವಾಗಬೇಕೆಂಬುದರ್ಥ;

ಗುರು ಕರುಣದಿಂದೊದಗಿದ ಇಷ್ಟಲಿಂಗದಲ್ಲಿ ವಿಶ್ವಾಸ ಬಲಿದಲ್ಲಿ ಆಯತಲಿಂಗ, ಆ ಇಷ್ಟಲಿಂಗದ ಭಾವ ಮನೋವೇದ್ಯವಾದದಲ್ಲಿ ಸ್ವಾಯತವಾದಲ್ಲಿ ಸ್ವಾಯತಲಿಂಗ. ಆ ಇಷ್ಟಲಿಂಗದಭಾವ ಮನೋವೇದ್ಯ ಸುಖವು ಭಿನ್ನವಾಗಿ ತೋರದೆ, ಅನುಪಮ ಪರಿಣಾಮ ಪರಿಪೂರಿತವಾದಲ್ಲಿ ಸನ್ನಿಹಿತಲಿಂಗ. ಇಂತು ಇಷ್ಟ ಪ್ರಾಣಭಾವಲಿಂಗಗಳು ತನುತ್ರಯಂಗಳಲ್ಲಿ ಆಯತ, ಸ್ವಾಯತ, ಸನ್ನಿಹಿತಂಗಳಾಗಲು, ಆ ಶರಣನ ಷಡಂಗದಲ್ಲಿ ಷಡ್ವಿಧಲಿಂಗ ಸಂಬಂಧವಾದುದೇ ಷಟ್‌ಸ್ಥಲಗಳೆಂದು ಪ್ರಭುದೇವರು ನಿರೂಪಿಸಿದರು.

ಆಯತಲಿಂಗ ಲಿಂಗ ಸಂಬಂಧವಿಲ್ಲದಾದ ಅಂಗಭವಿ ಸ್ವಾಯತಲಿಂಗ ಸಂಬಂಧವಿಲ್ಲದಾತ ಮನಭವಿ. ಇದು ಕಾರಣ ಆಯತ ಲಿಂಗವು ಅಂಗದಲ್ಲಿ ಅಳವಡಿಸಿ, ಸ್ವಾಯತ ಲಿಂಗವು ಮನದಲ್ಲಿ ಅಳವಡಿಸಿ, ಸನ್ನಿಹಿತ ಲಿಂಗವು ಆತ್ಮನಲ್ಲಿ ಅಳವಡಿಸಿ, ಅಂಗಪ್ರಾಣದಲ್ಲಿ ಲಿಂಗವಧರಿಸಿ ಹೆರೆಹಿಂಗದಿರ್ದನಯ್ಯ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ ||

ಹೊರಸವಿ, ಒಳಸವಿ ತೀರಾಸವಿ. ಹೊರಸವಿಯಿಂದ ಬ್ರಹ್ಮ ಸತ್ತ, ಒಳಸವಿಯಿಂದ ವಿಷ್ಣು ಸತ್ತ, ತೀರಾಸವಿಯಿಂದ ರುದ್ರ ಸತ್ತ. ಷಡ್ರುಚಿಯಿಂದ ಬ್ರಹ್ಮಾಂಡ ಜನರು ಸತ್ತರು. ಇಂತೀ ಸವಿಯ ಸೇವಿಸಿದಾತನೇ ನಿಜಲಿಂಗೈಕ್ಯ ನಿಃಕಳಂಕ ನಿರ್ವಾಣಯ್ಯ ಪ್ರಭುವೆ.

ಅರ್ಥ:— ಉತ್ತತ್ತಿಯನ್ನು ಮೇಲೆ ಕಡಿದರೆ ಸವಿ ಕಟ್ಟುತ್ತಿರ್ಪುದಲ್ಲದೆ, ಒಳಗೆ ಕಡಿದರೆ ಮಹಾಕಡಿವಾಣವಾಗಿ ತೋರುವ ಹಾಗೆ, ಇಷ್ಟಲಿಂಗವನು ಇದಿರಿಟ್ಟು ಅಷ್ಟವಿಧಾರ್ಚನೆ ಷೋಡಶೋಪಚಾರವನು ಮಾಡಿದೊಡೆ ಭಿನ್ನ ಭಾವದ ಜೀವಾತ್ಮರಿಗೆ ಮಹಾರಮ್ಯವಾಗಿ ತೋರುವದು, ಆ ಇಷ್ಟಲಿಂಗದ ಚಿಕ್ಕಳೆಯನು ಅಂತರಂಗಕ್ಕೆ ವೇಧಿಸು ಎಂದಡೆ ಕರ್ಮಕಾಂಡಿಗೆ ಅಸಾಧ್ಯವಾಗಿ ತೋರುತ್ತಿಹದೆಂಬುದೀಗ ಹೊರಸವಿ ಎಂಬ ಶಬ್ದಕ್ಕರ್ಥ. ತೆಂಗಿನ ಕಾಯಿಯ ಮೇಲೆ ಕಡಿದಡೆ ಕಡಿವಾಣವಾಗಿ ತೋರುವದು ಕಡಿದು ಒಳಗೆ ನೋಡಿದಡೆ, ರುಚಿಯಾಗಿ ತೋರುವದು. ಹಾಗೆ ದೇಹಭಾವಗಳನಳಿಯದೆ, ಪ್ರಾಣಲಿಂಗದಲ್ಲಿ ಸಮರಸಭಕ್ತಿ ಎಂಬದು ಕರ್ಮಕಾಂಡದ ವೇದಾಂತಿ, ಯೋಗಮಾರ್ಗಿ ಸಿದ್ಧಾಂತಿಗಳಿಗೆ ಅಸಾಧ್ಯ. ಆ ದೇಹಭಾವ ಸಕ್ಕಲಿಂಗದಲ್ಲಿ ಅಳಿದು ಸುಜ್ಞಾನ ಸ್ವರೂಪವಾದ ಪ್ರಾಣಲಿಂಗದಲ್ಲಿ ಅವಿರಳ ಸಂಬಂಧಿಯಾದ ಜ್ಞಾನಕಲಾತ್ಮಂಗೆ ಶಿವಸುಖ ಮಹಾನಂದವಾಗಿ ತೋರುವದೆಂಬುದೀಗ ಒಳಸವಿ ಎಂಬ ಶಬ್ದಕ್ಕರ್ಥ. ಬೆಲ್ಲದ ಪೆಂಟೆಯ ಯಾವ ಕಡೆಗೆ ಕಡಿದಡೆಯೂ ರುಚಿಯಾಗಿ ತೋರುವದಲ್ಲದೆ, ಕಹಿಯಾಗಿ ತೋರದು. ಹಾಗೆ ಇಷ್ಟಪ್ರಾಣವನೊಳಗೊಂಡ ಭಾವಲಿಂಗದಲ್ಲಿ ಸಮರಸವಾದ ಶಿವಜ್ಞಾನಿಗಳು ಇಂದ್ರಿಯಂಗಳ ಶ್ರೀಗುರು ಆವಕಡೆಗೆ ಮುಟ್ಟಿ ನೋಡಿದಡೆಯೂ ಅಮೃತಮಯವಾಗಿ ತೋರುವಲ್ಲದೆ ಸಂಸಾರ ಸಾರವಾಗಿ ತೋರಲಿಲ್ಲವೆಂಬುದೀಗ ತೀರಾಸವಿ ಎಂಬ ಶಬ್ದಕ್ಕರ್ಥ. ಚಿದಂಶಿಕನಾದ ಜ್ಞಾನಕಲಾತ್ಮಕನು ಇಷ್ಟಲಿಂಗವನು ಬ್ರಹ್ಮ ತತ್ವಂಶಿಕವಾದ ಸ್ಥೂಲತನುವಿನಲ್ಲಿ ಸ್ವಾಯತವ ಮಾಡಿ, ಆ ಸ್ಥೂಲತನುವಿನ ಪ್ರಕೃತಿಯನು ನಷ್ಟವಮಾಡಿದನೆಂಬುದೀಗ ಹೊರಸವಿಯಿಂದ ಬ್ರಹ್ಮ ಸತ್ತನೆಂಬ ಶಬ್ದಕ್ಕರ್ಥ. ಆ ಇಷ್ಟಲಿಂಗದ ಪ್ರಾಣಕಳಾ ಚೈತನ್ಯ ಸ್ವರೂಪವಾದ ಪ್ರಾಣಲಿಂಗವನು ವಿಷ್ಣು ತತ್ವಾಂಶಿಕ ಸೂಕ್ಷ್ಮತನುವಿನಲ್ಲಿ ಸ್ವಾಯತವಮಾಡಿ, ಆ ಸೂಕ್ಷ್ಮತನು ಪ್ರಕೃತಿಯ ನಷ್ಟವಮಾಡಿದನೆಂಬುದೀಗ ಒಳಸವಿಯಿಂದ ವಿಷ್ಣು ಸತ್ತನೆಂಬ ಶಬ್ದಕ್ಕರ್ಥ. ಪ್ರಾಣಲಿಂಗದ ಪರಮಾನಂದ ಸ್ವರೂಪವಾದ ಭಾವಲಿಂಗವನು ರುದ್ರ ತತ್ವಾಂಶಿಕವಾದ ಕಾರಣ

ತನುವಿನಲ್ಲಿ ಸ್ವಾಯತವ ಮಾಡಿ, ಆ ತನುವಿನ ಪ್ರಕೃತಿಯು ನಷ್ಟವಮಾಡಿ
ದನೆಂಬುದೀಗ ಶೀರಾಶವಿಯಿಂದ ರುದ್ರ ಸತ್ತ ಎಂಬ ಶಬ್ದಕ್ಕರ್ಥ. ಆ
ಇಷ್ಟಪ್ರಾಣ ಭಾವಲಿಂಗದ ಏಕ ಸ್ವರೂಪವಾದ ಘನಮಹಾಲಿಂಗವನು ಷಡ್ವಿ
ಧಾಂಗದಲ್ಲಿರುವ ಮನ ಮೊದಲಾಗಿ ಅರವತ್ತಾರುಕೋಟಿ ಕರಣಂಗಳ ಪ್ರಕೃ
ತಿಯು ನಷ್ಟವ ಮಾಡಿದನೆಂಬುದೀಗ ಷಡ್ರುಚಿಯಿಂದ ಬ್ರಹ್ಮಾಂಡದ ಜನರು
ಸತ್ತರು ಎಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗವನು ಸರ್ವಾಂಗದಲ್ಲಿ
ಸಂಬಂಧವ ಮಾಡಿಕೊಂಡ ಶಿವಶರಣನು ಪ್ರಳಯ ವಿರಹಿತವಾದ ಮಹಾ
ಲಿಂಗೈಕ್ಯವೆಂಬುದೀಗ, ಇಂಥಾ ಸವಿಯ ಸೇವಿಸಿದಾತ ನಿಜಲಿಂಗೈಕ್ಯ ನಿಷ್ಕಳಂಕ
ನಿರ್ವಾಣಿಯು ಪ್ರಭುವೇ ಎಂಬ ಶಬ್ದಕ್ಕರ್ಥ.

ಅಂಗದ ಮೇಲೆ ಸಾಕಾರವಿಡಿದು ಮಂತ್ರಾಹ್ವಾನಗಳಿಂದ ಅಷ್ಟವಿಧಾ
ರ್ಚನೆ ಷೋಡಶೋಪಚಾರಂಗಳಲ್ಲಿ ವ್ಯಾಪಿಸಿಕೊಂಡಿಪ್ಪುದೀಗ ಇಷ್ಟಲಿಂಗ.
ಆ ಇಷ್ಟಲಿಂಗಕ್ಕೆ ಆಶ್ರಯವಾಗಿ ಚತುರ್ದಶ ಇಂದ್ರಿಯಗಳಲ್ಲಿ ತನ್ಮುಖವಾಗಿ
ಸರ್ವೇಂದ್ರಿಯಗಳಿಗೆ ಚೈತನ್ಯವಾಗಿ ಪ್ರಾಣದಲ್ಲಿ ಪರಿಪೂರ್ಣವಾಗಿಪ್ಪುದೀಗ
ಪ್ರಾಣಲಿಂಗ. ಆ ಪ್ರಾಣಲಿಂಗಕ್ಕೆ ಆದಿಯಾಗಿ ಭಾವಭ್ರಮೆಗಳು ನಷ್ಟವಾಗಿ
ಅನುಭಾವದಲ್ಲಿ ಅನುವಾಗಿ ಭಾವ, ಸದ್ಭಾವ, ನಿರ್ಭಾವಂಗಳಲ್ಲಿ ಭರಿತವಾಗಿ
ಭಾವಬ್ರಹ್ಮವೆಂಬ ಭೇದವಿಲ್ಲದೆ ಸನ್ನಿಹಿತಭಾವದಿಂದ ಇಪ್ಪುದೀಗ ಭಾವಲಿಂಗ.
ಇಂತೀ ಮೂರು ಲಿಂಗದ ಮೂಲ, ಆರುಲಿಂಗದ ಅಂತ್ಯವನೊಳಕೊಂಡು
ಮಾರ್ಗಕ್ರಿ. ನಿಃಕ್ರಿಯವಾಗಿ, ಧ್ಯಾನ ನಷ್ಟವಾಗಿ, ಮಂತ್ರಗೋಪ್ಯವಾಗಿ ಜ್ಞಾನ
ಶೂನ್ಯವಾಗಿ, ಭಾವ ದಿಗಂಬರವಾಗಿ, ಘನಕ್ಕೆ ಘನವಾದ ಪರಬ್ರಹ್ಮವು ತಾನೇ
ಸೌರಾಷ್ಟ್ರ ಸೋಮೇಶ್ವರಾ ||

ಪರಪುಟ್ಟ ನಾದವು ಎಂಬ ಲಿಂಗ ತರಗೆಲೆಗಳಿಗೊಂದೇ ಗಾಳಿ ಹಾರು
ತ್ತಿರ್ಪವು. ಒಂದೇ ಅನಿಲನಿಂದ ದೇಹ ಸರಪಟಿಗಳೊಳಗೆಲ್ಲ ಕರೆದಡೆ ಓ
ಎಂಬಾತನೇ ಬಿಡಾಡಿ ||

ಅರ್ಥ:— ಚಿದಾಕಾರಕ್ಕೆ ಏಕಾರ್ಥವಾದ ಚಿದ್ಘನ ಲಿಂಗವೇ ಉಕಾರ
ಪ್ರಣವ ಸ್ವರೂಪವಾದ ಇಷ್ಟಲಿಂಗವಾಗಿಪ್ಪುದು. ಅಂಗದಲ್ಲಿ ಸಂಸಾರ
ವಿಷಯ ರಸವರತ ಇಂದ್ರಿಯಂಗಳಿಗೆ ಇಷ್ಟಲಿಂಗ ಚೈತನ್ಯ ಸ್ವರೂಪವಾದ
ಪ್ರಾಣಲಿಂಗ ಸ್ವರೂಪವಾಗಿಪ್ಪುದು. ಚೈತನ್ಯ ಸ್ವರೂಪವಾದ ಪ್ರಾಣಲಿಂಗ
ಸಂಬಂಧದಿಂದ ವಿಷಯಂಗಳತ್ತ ಹರಿಸುತ್ತಿದ್ದವು. ದೇಹ ಪ್ರಾಣ ಆತ್ಮಾಂಗ

ದೊಳಗೆಲ್ಲ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗವಾಗಿ ನೆಲೆಗೊಂಡಿಪ್ಪುದು ಒಂದೇ ಬ್ರಹ್ಮವು. ಸಗುಣ, ನಿರ್ಗುಣ, ಮನೋಲಯ, ನಿರಂಜನ ಪೂಜೆಗಳಿಂದಾರಾಧಿಸಿ, ಶಿವೋಹಂ, ಬ್ರಹ್ಮೋಹಂ ಎಂದುಚ್ಚರಿಸಿದಡೆ ತನ್ನ ನಿಜವನರಿವ ಜ್ಞಾನವನು ಎಚ್ಚರಿಸಿಕೊಡುವಾತನೇ ಚಿತ್ತಿಗೆ ಚೈತನ್ಯವಾದ ನಿಃಕಲ ಬ್ರಹ್ಮವು ಎಂಬುದರ್ಥ.

ಸೃಷ್ಟಿಹೇತುವಾದ ಸಂಸಾರವೇ ಪೃಥ್ವಿಯು, ತದ್ರಕ್ಷಣ ಹೇತುವಾದುದೇ ಜಲವು. ಇವೆರಡನ್ನು ಸಂಬಂಧಿಸಿ ಏಕನಾಗಿ ಘನೀಭವಿಸುವಂತೆ ಮಾಡಿ ತತ್ಸಂಹಾರಕ್ಕೆ ತಾನೇ ಕಾರಣವಾಗಿರ್ಪ ಮನಸ್ಸೇ ಅಗ್ನಿಯು. ಆ ಮನಸ್ಸನ್ನು ಪ್ರಕಾಶಗೊಳಿಸಿ ಅದರೊಳಗೆ ಕೂಡಿ ಅಭೇದವಾಗಿರ್ಪ ಜೀವನೇ ವಾಯು. ಅಗ್ನಿಯು ಪೃಥ್ವಿಯೊಳಗೆ ಬದ್ಧವಾಗಿರ್ಪಂತೆ, ಜೀವನು ಶರೀರದೊಳಗೆ ಬದ್ಧವಾಗಿರ್ಪನು. ಜೀವನು ತಾನು ಸಂಸಾರದೊಳ್ಕೂಡಿ ಸ್ಥೂಲವಾಗಿಯೂ, ಮನದೊಳ್ಕೂಡಿ ಸೂಕ್ಷ್ಮವಾಗಿಯೂ ಇರ್ಪನು. ಸಂಸಾರ ಶರೀರ ಮನೋಜೀವಂಗಳಿಗಾಧಾರವಾಗಿರ್ಪ ಕರ್ಮವೇ ಆಕಾಶವು. ಆ ಕರ್ಮವನಾವರಿಸಿರ್ಪ ಮಹಾಮೋಹವೆಂಬ ಸುಷುಪ್ತಿಯ ಒಳಹೊರಗೆ ಪ್ರಕಾಶಿಸುತ್ತಿರ್ಪ ಜಾಗ್ರತ್ಸ್ವಪ್ನಜ್ಞಾನಂಗಳೆ ಚಂದ್ರ ಸೂರ್ಯರು. ಮನಸ್ಸೆಂಬ ಅಗ್ನಿಯು ಜೀವಾನಿಲನಿಂ ಪಟುವಾಗಿ ಸಂಸಾರ ಶರೀರಂಗಳಂ ಕೆಡಿಸಿ ಕರ್ಮವೆಂಬಾಕಾಶದೊಳಗೆ ಜೀವಾನಿಲನಿಂ ಕೂಡಿ ಧೂಮರೂಪಾಗಿ ಶರೀರ ಸಂಸಾರಗಳೆಂಬ ಮೇಘಜಲವರ್ಷವಂ ನಿರ್ಮಿಸಿ, ಜೀವನಿಗವಕಾಶವಂ ಮಾಡಿಕೊಟ್ಟು, ತಾನಲ್ಲಿಯೇ ಬದ್ಧನಾಗಿ ಜೀವನಿಂದ ಪ್ರಕಾಶವಾಗುತ್ತಿರ್ಪುದು. ಇಂತಪ್ಪ ಕರ್ಮವೆಂಬ ಆಕಾಶಕ್ಕೆ ಜೀವನೆಂಬ ವಾಯುವೇ ಕಾರಣವು. ಇವು ಒಂದಕ್ಕೊಂದು ಕಾರಣವಾಗಿ, ಒಂದಕ್ಕೊಂದು ಸೃಷ್ಟಿಸ್ಥಿತಿ ಸಂಹಾರ ಹೇತುಗಳಾಗಿ ತೋರುತ್ತ, ಅಡಗುತ್ತ, ಬಳಲುತ್ತ ತೊಳಲುತ್ತಿರ್ಪ ಭವರೋಗದಲ್ಲಿ ಜಾಗುತ್ತಿರ್ಪ ಬಾಧೆಯ ಈ ದಂದುಗವಿನ್ನೆಂದಿಂಗೆ ಪೋಪುದು ಎಂದು ಮರುಂದುಗಾಣದೆ ಇರ್ಪೆನ್ನ ತಾಪವಂ ನೀಂ ದಯೆಯಿಂ ತಣ್ಣನೆ ಮಾಳ್ಪುದೆ, ಸತ್ಯಜ್ಞಾನಾನಂದದ ಮೂರ್ತಿಯಾದ ಪರಮಾತ್ಮನೇ ಗುರು, ಲಿಂಗ, ಜಂಗಮ ಸ್ವರೂಪಿಯಾಗಿ, ಜ್ಞಾನದಿಂದ ನಿಜವೂ, ನಿಜದಿಂದ ಆನಂದವೂ ಪ್ರಕಾಶವಾಗಿರ್ಪಂತೆ, ಗುರುವಿನಿಂದ ಲಿಂಗವಂ ಲಿಂಗದಿಂದ ಜಂಗಮವಂ ಕಂಡೆನು. ಅಂತಪ್ಪ ನಿಜಾತ್ಮಲಿಂಗವನು ಕರ್ಮವೆಂಬ ಆಕಾಶದಲ್ಲಿ ಬೆರಸಲು ಅದೇ ಕಾರಣವಾಯಿತ್ತು, ಆ ಕರ್ಮವೆಂಬ ಶಕ್ತಿಯು ಲಿಂಗವೆಂಬ ಶಿವ

ನೊಳಗೆ ಕೂಡಲು, ಲಿಂಗ ತೇಜಸ್ಸಿನಿಂ ಕರ್ಮಗರ್ಭದಲ್ಲಿ ಜೀವನಿಗೆ ಪುನ ಭವವಾದುದರಿಂ ಪ್ರಾಣಲಿಂಗವಾಯಿತ್ತು. ಅದೆಂತೆಂದೊಡೆ ಲಿಂಗವೆಂಬ ಮಹಾಲಿಂಗದಿಂ ಜನಿಸಿದ ಕರ್ಮವೇ ಪ್ರಸಾದಲಿಂಗವು. ಆ ಕರ್ಮದಿಂ ಜನಿಸಿದ ಜೀವನೇ ಜಂಗಮಲಿಂಗವು. ಅಂತಪ್ಪಲಿಂಗದಿಂದುಸಿದ ಮನಸ್ಸೇ ಶಿವಲಿಂಗವು. ಅಂತಪ್ಪ ಮನಸ್ಸಿನಿಂದ ಪರಿಶುದ್ಧವಾಗಿರ್ಪ ಶರೀರವೇ ಗುರು ಲಿಂಗವು. ಅಂತಪ್ಪ ಗುರುಲಿಂಗವಾಗಿರ್ಪ ಶರೀರದಿಂದನುಭವಿಸುತ್ತಿರ್ಪ ಸಂಸಾರವೇ ಆಚಾರಲಿಂಗವು. ಇಂತು ಸಂಸಾರ ಶರೀರಂಗಳಿಗೆ ಇಷ್ಟಲಿಂಗವೇ ಕಾರಣವೂ, ಮನೋಜೀವರಿಗೆ ಪ್ರಾಣಲಿಂಗವೇ ಕಾರಣವೂ ಆಗಿ ಕರ್ಮ ಕರ್ಮಲಿಂಗಂಗಳಿಗೆ ಭಾವಲಿಂಗಂಗಳೇ ಕಾರಣವಾಗಿ ಕಾರಣವೇ ಐಕ್ಯ ಸ್ಥಾನವಾದುದರಿಂ ಸಂಸಾರ ಶರೀರಂಗಳು ಇಷ್ಟಲಿಂಗದೊಳಗೂ ಮನೋ ಜೀವಂಗಳು ಪ್ರಾಣಲಿಂಗದೊಳಗೂ ಐಕ್ಯವಂ ಹೊಂದಿದವು. ಕರ್ಮ ಲಿಂಗಂಗಳು ಭಾವಲಿಂಗದೊಳಗೈಕ್ಯವಾಗಿ ಪ್ರಾಣವು ಭಾವದೊಳಗೆ ಬೆರೆದು, ಭೇದವಡಗಿ ತಾನುತಾನಾಗಿರ್ಪುದೇ ಲಿಂಗೈಕ್ಯ ಕಾಣಾ ಮಹಾಘನವೊಪ್ಪ ದೇಶಿಕಾರ್ಯಗುರುಪ್ರಭುವೇ.

ಘ್ರಾಣಕ್ಕೂ ಗಂಧಕ್ಕೂ ಪೃಥ್ವಿಯೆಂಬ ಮಹಾಭೂತ, ಅಲ್ಲಿ ನಿವೃತ್ತಿ ಯೆಂಬ ಕಲೆ ಇಹುದು. ಆ ಕಲೆಯಲ್ಲಿ ಕ್ರಿಯಾಶಕ್ತಿಯುಕ್ತವಾದ ಆಚಾರ ಲಿಂಗವ ಧರಿಸಿದಾತ ಭಕ್ತನು. ಜಿಹ್ವೆಗೂ ಗುಹ್ಯಕ್ಕೂ ಅಪ್ಪು ಎಂಬ ಮಹಾ ಭೂತ. ಅಲ್ಲಿ ಪ್ರತಿಷ್ಠೆ ಎಂಬ ಕಲೆ ಇಹುದು. ಆ ಕಲೆಯಲ್ಲಿ ಜ್ಞಾನ ಶಕ್ತಿಯುಕ್ತವಾದ ಗುರುಲಿಂಗವ ಧರಿಸಿದಾತ ಮಹೇಶ್ವರನು. ನೇತ್ರಕ್ಕೂ ಪಾದಕ್ಕೂ ಅಗ್ನಿಯೆಂಬ ಮಹಾಭೂತ. ಅಲ್ಲಿ ವಿದ್ಯೆಯೆಂಬ ಕಲೆ ಇರು ವದು. ಆ ಕಳೆಯಲ್ಲಿ ಇಚ್ಛಾಶಕ್ತಿಯುಕ್ತವಾದ ಶಿವಲಿಂಗ ಧರಿಸಿಕೊಂಡಾತ ಪ್ರಸಾದಿ. ತ್ವಕ್ಕಿಗೂ ಪ್ರಾಣಗೂ ವಾಯುವೆಂಬ ಮಹಾಭೂತ. ಅಲ್ಲಿ ಶಾಂತಿ ಎಂಬ ಕಲೆ ಇಹುದು. ಆ ಕಲೆಯಲ್ಲಿ ಆದಿಶಕ್ತಿಯುಕ್ತವಾದ ಜಂಗಮ ಲಿಂಗವ ಧರಿಸಿಕೊಂಡಾತ ಪ್ರಾಣಲಿಂಗಿ. ಶ್ರೋತ್ರಕ್ಕೂ ವಾಕ್ಕಿಗೂ ಆಕಾ ಶವೆಂಬ ಮಹಾಭೂತ. ಅಲ್ಲಿ ಶಾಂತ್ಯಾತೀತ ಎಂಬ ಕಲೆ ಇಹುದು. ಆ ಕಲೆಯಲ್ಲಿ ಪರಾಶಕ್ತಿಯುಕ್ತವಾದ ಪ್ರಸಾದ ಲಿಂಗವ ಧರಿಸಿಕೊಂಡಾತ ಶರಣನು. ಆತ್ಮಾಂಗಕ್ಕೆ ಮನವೆಂಬ ಮಹಾಭೂತ. ಅಲ್ಲಿ ಶಾಂತ್ಯಾತೀ ತೋತ್ತರ ಎಂಬ ಕಲೆ, ಇಹುದು. ಆ ಕಲೆಯಲ್ಲಿ ಚಿಚ್ಛಕ್ತಿಯುಕ್ತವಾದ

ಮಹಾಲಿಂಗವ ಧರಿಸಿಕೊಂಡಾತ ಐಕ್ಯನು. ಇಂತೀ ಷಟ್‌ಸ್ಥಲ ಭಕ್ತರು ಷಡ್ವಿಧಲಿಂಗವ ಧರಿಸಿ ನಿರಾಳ ಲಿಂಗಾರ್ಚನೆಯ ಮಾಡುತ್ತಿಹರು. ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ ನಿಮ್ಮ ಶರಣನು. ॥

ಕೂಟದ ಲಕ್ಷಣವುಳ್ಳನ್ನಕ್ಕ ಐಕ್ಯಸ್ಥಲ. ಭಾವದ ಕಲ್ಪಿತವುಳ್ಳನ್ನಕ್ಕ ಶರಣಸ್ಥಲ. ಕೊಂಡಿಹೆ ಕೊಟ್ಟಿಹೆನೆಂಬನ್ನಕ್ಕ ಪ್ರಾಣಲಿಂಗಿಯ ಸ್ಥಲ. ಉಂಡಿಹೆನುಟ್ಟಿಹೆನೆಂಬನಕ್ಕ ಪ್ರಸಾದಿಸ್ಥಲ. ಅರಿದಿಹೆನರಿದೆನೆಂಬನ್ನಕ್ಕ ಮಾಹೇಶ್ವರ ಸ್ಥಲ. ಗುರುವಿಂಗೆ ತನು, ಲಿಂಗಕ್ಕೆ ಮನ, ಜಂಗಮಕ್ಕೆ ಧನವ ಕೊಟ್ಟೆನೆಂಬನ್ನಕ್ಕ ಭಕ್ತಸ್ಥಲ. ಇಂತು ಸ್ಥಲದಿಂದ ಸ್ಥಲಲೇಪವಾದ ಮತ್ತೆ ಮೀರಿದ ತೆರನ ನೀವೇಬಲ್ಲಿರಿ ನಿಃಕಳಂಕ ಮಲ್ಲಿಕಾರ್ಜುನಾ. ॥

ಭಕ್ತಂಗೆ ಭಕ್ತಿಯೇ ಲಿಂಗಾರ್ಚನೆ. ಮಹೇಶಂಗೆ ಜ್ಞಾನವೈರಾಗ್ಯವೇ ಲಿಂಗಾರ್ಚನೆ. ಪ್ರಸಾದಿಗೆ ಸಮದೃಷ್ಟಿಯೇ ಲಿಂಗಾರ್ಚನೆ. ಪ್ರಾಣಲಿಂಗಿಗೆ ಪಂಚಪ್ರಾಣಾಃ ಪರಶಿವ ಎಂಬುದೇ ಲಿಂಗಾರ್ಚನೆ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ ॥

ಶ್ರೀಗುರು ತನ್ನ ಶಿಷ್ಯನ ಮಸ್ತಕದಲ್ಲಿ ಹಸ್ತವಿಟ್ಟು ಮಥನದಿಂದ ಒತ್ತಿ ಭಸ್ಮವ ಮಾಡಿ, ಬ್ರಹ್ಮರಂಧ್ರದಲ್ಲಿಪ್ಪ, ನಾದ ಚೈತನ್ಯನಪ್ಪ ಚಿತ್ಕಳೆಯನ್ನು ಭಾವಕ್ಕೆ ಭಾವದಿಂದ ಮನಕ್ಕೆ ಮನದಿಂದ ದೃಕ್ಕಿಗೂ ದೃಕ್ಕಿನಿಂದ ಕರ ತಳಕ್ಕೂ ಬರಮಾಡಿ ಆ ಚಿತ್ಕಳೆಯೇ ದೃಷ್ಟಿಗೋಚರವಾಗುವಂತೆ ಶಿಷ್ಯನ ಸ್ವರೂಪವಾದ ಇಷ್ಟಲಿಂಗದಲ್ಲಿ ಪೀಠ, ಕಟಿ, ವರ್ತುಳ, ಗೋಮುಖ, ಗೋಳಕ, ನಾಳಗಳೆಂಬ ಷಡಂಗ ಮೂರ್ತಿಯನ್ನು ಪಂಚಸೂತ್ರ ಪ್ರಮಾಣದಿಂದ ಕಟೆದು, ತಿದ್ದಿ, ತೀಡಿ ಒಪ್ಪವಿಟ್ಟು ಸಾಹಿತ್ಯ ಮಾಡಿದನಾಗಿ, ಭಾವದಲ್ಲಿ ಸತ್‌ಸ್ವರೂಪನಪ್ಪ ಭಾವಲಿಂಗವೆನಿಸಿ, ಪ್ರಾಣದಲ್ಲಿ ಚಿತ್‌ಸ್ವರೂಪನಪ್ಪ ಪ್ರಾಣಲಿಂಗವೆನಿಸಿ, ಒಂದೇ ವಸ್ತು ತನುಮನೋಭಾವಂಗಳಲ್ಲಿ ತ್ರಿವಿಧ ಭೇದಂಗಳನರಿದು, ಇಷ್ಟಲಿಂಗವ ದೃಷ್ಟಿಯಿಂದ ಗ್ರಹಿಸಿ, ಪ್ರಾಣಲಿಂಗವ ಮನಜ್ಞಾನದಿಂದ ಗ್ರಹಿಸಿ, ಭಾವಲಿಂಗವ ಭಾವಜ್ಞಾನದಿಂದ ಗ್ರಹಿಸಿ, ಇಷ್ಟವ ಲಿಂಗತ್ರಯವಿಡಿದು ಆಚರಿಸಿ, ಲಿಂಗದೊಡನೇಕವಾಗಿ ಆ ಲಿಂಗವೇ ತಾನೆತಾನಾಗಿ ವಿರಾಜಿಸುವ ಶಿವಯೋಗ ಸ್ಥಿತಿಯನ್ನು ಪರಿಶೀಲಿಸಿ, ಈ ಮುಂದಿನ ಶಿವಶರಣರ ವಚನವನು ತಿಳುವಳಿಕೆಗೆ ತಂದು ನಡೆವಳಿಕೆಯಲ್ಲಿ ತರುವದು ಪ್ರತಿಯೊಬ್ಬ ವೀರಶೈವ ಬಂಧುವಿನ ಕರ್ತವ್ಯವು.

ನಾದಾದಿ ಗುದ ಪರಿಯಂತರ ಪೃಥ್ವಿತತ್ವ, ಆ ತತ್ವದ ಕಠಿಣ ಗುಣವಳಿದು ಕರ್ಮ ಸಾದಾಖ್ಯದಿಂ ಭೃತ್ಯತ್ವವೇ ಭಕ್ತಸ್ಥಲಂ. ಗುದಾದಿ ಗುಹ್ಯ ಪರ್ಯಂತರ ಅಪ್ಪು ತತ್ವ. ಆ ತತ್ವದ ಮೃದುಗುಣವಳಿದು, ಕರ್ತೃ ಸಾದಾಖ್ಯದಿಂ ನಿಷ್ಠತ್ವವೇ ಮಾಹೇಶ್ವರಸ್ಥಲ. ಗುಹ್ಯಾದಿ ನಾಭಿಪರ್ಯಂತರ ಅಗ್ನಿ ತತ್ವ. ಆ ತತ್ವದ ದಹನ ಗುಣವಳಿದು ಮೂರ್ತಿ ಸಾದಾಖ್ಯದಿಂ ವಿಶ್ವಾಸವೇ ಪ್ರಸಾದಿಸ್ಥಲ. ನಾಭ್ಯಾದಿ ಹೃದಯಪರಿಯಂತರ ವಾಯುತತ್ವ, ಆ ತತ್ವದ ಸ್ಪರ್ಶನಗುಣವಳಿದು, ಅಮೂರ್ತಿಸಾದಾಖ್ಯದಿಂ ನಿರ್ಮಲವೇ ಪ್ರಾಣಲಿಂಗಿಸ್ಥಲ. ಹೃದಯಾದಿ ಕಂಠ ಪರಿಯಂತರ ಆಕಾಶ ತತ್ವ. ಆ ತತ್ವದ ಸಂಚಲ ಗುಣವಳಿದು, ಶಿವಸಾದಾಖ್ಯದಿಂ ಆನಂದವೇ ಶರಣಸ್ಥಲ. ಕಂಠಾದಿ ಭ್ರೂಮಧ್ಯ ಪರಿಯಂತರ ಆತ್ಮ ತತ್ವ. ಆ ತತ್ವದ ಮರಹು ಗುಣವಳಿದು ಮಹಾಸಾದಾಖ್ಯದಿಂ ಸಮರಸತ್ವವೇ ಐಕ್ಯಸ್ಥಲ.

ಇಂತೀಪಾದಾದಿ ನಾಲ್ವತ್ತೆಂಟು ಅಂಗುಲ ಪ್ರಮಾಣದಿಂದೂರ್ಧ್ವ ಭಕ್ತಸ್ಥಲ. ಆ ಭಕ್ತಸ್ಥಲದಿಂದ ನಾಲ್ಕು ಅಂಗುಲ ಊರ್ಧ್ವ ಮಾಹೇಶ್ವರಸ್ಥಲ. ಆ ಮಾಹೇಶ್ವರಸ್ಥಲದಿಂದ ಆರಂಗುಲ ಊರ್ಧ್ವಪ್ರಸಾದಿಸ್ಥಲ. ಆ ಪ್ರಸಾದಿಸ್ಥಲದಿಂದ ಎಂಟಂಗುಲ ಊರ್ಧ್ವಪ್ರಾಣಲಿಂಗಿಸ್ಥಲ, ಆ ಪ್ರಾಣಲಿಂಗಿಸ್ಥಲದಿಂದ ದ್ವಾದಶಾಂಗುಲ ಊರ್ಧ್ವಶರಣಸ್ಥಲ. ಆ ಶರಣಸ್ಥಲದಿಂದ ಷೋಡಶಾಂಗುಲ ಊರ್ಧ್ವಐಕ್ಯಸ್ಥಲ. ಆ ಐಕ್ಯಸ್ಥಲದಲ್ಲಿ ದ್ವಿ ಅಂಗುಲ ಪ್ರಮಾಣದಲ್ಲಿ ಪ್ರಣವ. ಇಂತೀ ತೊಂಭತ್ತಾರು ಅಂಗುಲವೇ ಅಂಗವಾಗಿ ಆ ಅಂಗಮುಖದಲ್ಲಿ ಲಿಂಗಳುಆರು ಅಡಗಿದ ಪರಿಎಂತೆಂದೊಡೆ.

ಸುಚಿತ್ತದಿಂ ಘ್ರಾಣದಿಂದ ಗಂಧವನಂಗೀಕರಿಸುವದು ಆಚಾರಲಿಂಗ. ಸುಬುದ್ಧಿಯಿಂ ಜಿಹ್ವೆಯಿಂದ ರುಚಿಯನಂಗೀಕರಿಸುವದು ಗುರುಲಿಂಗ. ನಿರಹಂಕಾರದಿಂ ನೇತ್ರದಿಂದ ರೂಪವನಂಗೀಕರಿಸುವದು ಶಿವಲಿಂಗ. ಸುಮನದಿಂ ಹಸ್ತದಿಂದ ಸ್ಪರ್ಶನ ಅಂಗೀಕರಿಸುವದು ಜಂಗಮಲಿಂಗ. ಸುಜ್ಞಾನದಿಂ ಶ್ರೋತ್ರದಿಂದ ಶಬ್ದವನಂಗೀಕರಿಸುವದು ಪ್ರಸಾದಲಿಂಗ. ಸಾವಧಾನದಿಂ ಹೃದಯದಿಂದ ತೃಪ್ತಿಯ ನಂಗೀಕರಿಸುವದು ಮಹಾಲಿಂಗ.

ಇಂತೀ ಹದಿನಾರು ಅಂಗುಲ ಪ್ರಮಾಣದಿಂದ ನಾಸಿಕದಿಂ ಇಷ್ಟಲಿಂಗದ ಪೀಠದಲ್ಲಿ ಆಚಾರಲಿಂಗವಡಗಿ, ದ್ವಾದಶಾಂಗುಲ ಪ್ರಮಾಣದಿಂ ಜಿಹ್ವೆಯಿಂದ ಇಷ್ಟಲಿಂಗದ ಕಲೆಯಲ್ಲಿ ಗುರುಲಿಂಗವಡಗಿ, ಅಷ್ಟಾಂಗುಲ ಪ್ರಮಾಣದಿಂ ಜಿಹ್ವೆಯಿಂದ ಇಷ್ಟಲಿಂಗದ ಕಲೆಯಲ್ಲಿ - ಗುರುಲಿಂಗವಡಗಿ, ಅಷ್ಟಾಂಗುಲ

ಪ್ರಮಾಣದಿಂ ನೇತ್ರದಿಂದ ಇಷ್ಟಲಿಂಗದ ಉದರದಲ್ಲಿ ಶಿವಲಿಂಗವಡಗಿ, ಷಡಂಗುಲ ಪ್ರಮಾಣದಿಂ ನೇತ್ರದಿಂದ ಇಷ್ಟಲಿಂಗದ ಉದರದಲ್ಲಿ ಶಿವಲಿಂಗವಡಗಿ, ಷಡಂಗುಲ ಪ್ರಮಾಣದಿಂ ತ್ವಕ್ಕುವಿನಿಂದ ಇಷ್ಟಲಿಂಗದ ಗೋಮುಖದಲ್ಲಿ ಜಂಗಮಲಿಂಗವಡಗಿ, ಚತುರಂಗುಲ ಪ್ರಮಾಣದಿಂ ಶ್ರೋತ್ರದಿಂದ ಇಷ್ಟಲಿಂಗದ ನಾಳದಲ್ಲಿ ಪ್ರಸಾದಲಿಂಗವಡಗಿ, ದ್ವಿಯಂಗುಲ ಪ್ರಮಾಣದಿಂ ಇಷ್ಟಲಿಂಗದ ಮಸ್ತಕದಲ್ಲಿ ಮಹಾಲಿಂಗವಡಗಿ, ಇಂತೀ ನಾಲ್ವತ್ತೆಂಟಂಗುಲ ಪ್ರಮಾಣದಲ್ಲಿ ಆ ಇಷ್ಟಲಿಂಗದಲ್ಲಿ ಆರು ಕುಳವಡಗಿ, ಇಂತೀ ಸ್ಥಳಕುಳಂಗಳ ಗರ್ಭೀಕರಿಸಿಕೊಂಡಿಪ್ಪ ಅಂಗಲಿಂಗವೆರಡು. ಆ ಅಂಗಲಿಂಗಗಳೇ ಮಾತ್ರವಾದ ಪರಿಯೆಂತೆಂದೊಡೆ.

ಇಂತೀ ಅಂಗ ತೊಂಬತ್ತಾರಂಗುಲ ಪ್ರಮಾಣವನಂಗೀಕರಿಸಿ ಕೊಂಡಿಪ್ಪುದೇ ಓಂಕಾರ ಪ್ರಣವ. ಆ ಪ್ರಣವವೇ ನಾದ, ಆ ನಾದದಲ್ಲಿ ಬಿಂದು ನಿಂದು, ಷಟ್ ಕೃತಿಗಳೇ ಪ್ರಾಣವಾಗಿ ಗರ್ಭೀಕರಿಸಿಕೊಂಡಿಪ್ಪ ಪಂಚಾಕ್ಷರಂಗಳು. ಇಂತೀ ಪಂಚಾಕ್ಷರಂಗಳಿಗೆ ಅಂಗವಾಗಿ ಗರ್ಭೀಕರಿಸಿಕೊಂಡಿಪ್ಪ ಷಟ್‌ಕೃತಿಗಳೇ ಷಡುಲಿಂಗವಾಗಿ, ಆ ಷಡುಲಿಂಗಗಳಿಗೆ ಷಡಕ್ಷರಂಗಳೇ ಪ್ರಾಣವಾಗಿ, ಓಂಕಾರವೇ ನಾದಮಯಾಂಗವಾಗಿ, ಪಂಚಾಕ್ಷರಂಗಳೇ ಪಂಚಾಕೃತಿ ಬಿಂದುಮಯ ಪ್ರಾಣವಾಗಿ, ಮಂತ್ರಾಂಗವಾಗಿ ನಾದಬಿಂದು ಕಳಾಕ್ಷರದಲ್ಲಿ ಪ್ರಣವ ಮಂತ್ರವಡಗಲು, ಆ ಕಳೆಯೇ ಬಿಂದುವಾಗಿ, ಆ ಬಿಂದುವೇ ನಾದವಾಗಿ, ನಾದವೇ ನಿಶ್ಶಬ್ದವಾಗಿ, ನಿಶ್ಶಬ್ದವೇ ಪರಬ್ರಹ್ಮವಾಗಿ, ಆ ಪರಬ್ರಹ್ಮವೇ ನಿಜವಾಗಿ, ಆ ನಿಜವೇ ಸಹಜಾನಂದ ವಸ್ತುವಾದ ಘನವೇದ್ಯ ಶರಣನ ಚರಣಕ್ಕೆ ನಮೋ ನಮೋ ಎಂಬೆ ಕಾಣಾ ಶ್ರೀಮದ್ಗುರು ಬಸವಲಿಂಗಪ್ರಭುವೇ.

ಇನ್ನು ಷಡಾಧಾರದಲ್ಲಿ ಆ ಷಡಕ್ಷರ ರೂಪಿಂದ ಷಡುಲಿಂಗವು ಸ್ಥಾಪ್ಯವಾಗಿಹುದು. ಅದು ಹೇಗೆಂದೊಡೆ, ನಕಾರವೇ ಆಚಾರಲಿಂಗ, ಮಕಾರವೇ ಗುರುಲಿಂಗ, ಶಿಕಾರವೇ ಶಿವಲಿಂಗ, ವಕಾರವೇ ಚರಲಿಂಗ, ಯಕಾರವೇ ಪ್ರಸಾದಲಿಂಗ, ಓಂಕಾರವೇ ಮಹಾಲಿಂಗವೆಂದು ಆರು ತೆರನಾಗಿಹುದು.

ಅದು ಹೇಗೆಂದೊಡೆ, ಆಧಾರದಲ್ಲಿ ನಕಾರ, ಸ್ವಾಧಿಷ್ಠಾನದಲ್ಲಿ ಮಕಾರ, ಮಣಿಪೂರಕದಲ್ಲಿ ಶಿಕಾರ, ಅನಾಹತದಲ್ಲಿ ವಕಾರ, ವಿಶುದ್ಧಿಯಲ್ಲಿ ಯಕಾರ, ಆಜ್ಞೆಯಲ್ಲಿ ಓಂಕಾರ, ಇಂತು ಷಡಾಧಾರದಲ್ಲಿ ಷಡಕ್ಷರ ರೂಪಾದ ಷಡುಲಿಂಗವು ಸ್ಥಾಪ್ಯವಾಗಿಹುದು.

ಇನ್ನು ಷಡುಧಾತುವಿನಲ್ಲಿ ಷಡಕ್ಷರ ರೂಪಿನಿಂದ ಷಡ್‌ಲಿಂಗ ಸ್ಥಾಪ್ಯವಾಗಿಹುದು. ಅದು ಹೇಗೆಂದೊಡೆ, ತ್ವಕ್ಕುಮಯವಾಗಿಹುದು ಓಂಕಾರ, ರುಧಿರಮಯವಾಗಿಹುದು ನಕಾರ, ಮಾಂಸಮಯವಾಗಿಹುದು ಮಕಾರ, ಮೇಧಸ್ಸುಮಯವಾಗಿಹುದು ಶಿಕಾರ, ಅಸ್ಥಿಮಯವಾಗಿಹುದು ವಕಾರ, ಮಜ್ಜೆಮಯವಾಗಿಹುದು ಯಕಾರ, ಇಂತು ಷಡುಧಾತುವೇ ಷಡಕ್ಷರಮಯವಾಗಿ, ಅದೇ ಲಿಂಗಾಂಗವಾಗಿ ಒಳಹೊರಗೆ ತೆರಹಿಲ್ಲದೆ ಸರ್ವಾಂಗವೆಲ್ಲವು ಲಿಂಗವಾದ ಇರವು ಅದು ತಾನೇ ಶಿವನ ಇರವು. ಅದು ತಾನೆ ಶಿವನ ವಿಶ್ರಮಸ್ಥಾನ. ಷಡುಸ್ಥಲ ಬ್ರಹ್ಮವನರಿದಾತನೇ ಶರಣ. ಆತನೇ ಲಿಂಗೈಕ್ಯ. ಇಂತೀ ಷಡುಸ್ಥಲ ಬ್ರಹ್ಮವೆಂದು ಅಪ್ರಮಾಣ, ಅಗೋಚರ ಅನಿರ್ವಾಚ್ಯವಾದ ಕಾರಣ, ವಚಿಸುವ ಚಿತ್ತ ವಚನಗೆಟ್ಟಿತು. ಉಪ್ಪು ನೀರೊಳಗೆ ಕೂಡಿದಂತೆ, ನಾರಿಕಲ್ಲು ಅಂಬುಧಿಯೊಳು ಬೆರೆದಂತೆ, ಶಿಖಿ ಕರ್ಪೂರ ಯೋಗದಂತಾದೆನಯ್ಯಾ ಕೂಡಲಚನ್ನಸಂಗಮದೇವಯ್ಯಾ.

ಒಟ್ಟಿನಲ್ಲಿ ಆಚಾರವೇ ಅಂಗವಾಗಿ, ಪರಿಣಾಮವೇ ಲಿಂಗವಾಗಿ, ಪರಿಣಾಮವೇ ಸಂಗವಾಗಿ, ಸಮರಸವಾಗಿ ಒಳಹೊರಗೆ ತೆರಹಿಲ್ಲದೆ ಷಡ್ವಿಧಸ್ಥಳದ ಬೆಳಗ ಬೀರುತ್ತ, ತೋರುತ್ತ, ಮೀರುತ್ತ ಇಂತೀ ಷಡ್ವಿಧ ಸ್ಥಲದ ನಿರ್ದೇಶವನು ಗುರುಲಿಂಗಜಂಗಮವೆಂಬ ಮೂರುಸ್ಥಲದಲ್ಲಿ ಕಾಣಿಸಿ ನಾದ ಬಿಂದುಕಳೆಗಳ ತಿಳಿದು, ಜೀವಾತ್ಮ ಅಂತರಾತ್ಮ ಪರಮಾತ್ಮನೆಂಬ ಆತ್ಮತ್ರಯದಲ್ಲಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ (ತೃಪ್ತಿಲಿಂಗ) ವೆಂಬ ಅಂಗತ್ರಯುವ ಸಂಬಂಧಿಸಿ, ಸ್ಥೂಲತನು, ಸೂಕ್ಷ್ಮತನು, ಕಾರಣ ತನುವೆಂಬ ತನುತ್ರಯದಲ್ಲಿ ತ್ಯಾಗಾಂಗ, ಭೋಗಾಂಗ, ಯೋಗಾಂಗವೆಂಬ ತ್ರಯಾಂಗ ಸಂಬಂಧವಾಗಿ ನಿಂದ ನಿರ್ದೇಶವೇ ತ್ಯಾಗಾಂಗದಲ್ಲಿ ಭಕ್ತಮಾಹೇಶಸ್ಥಲಗಳು. ಭೋಗಾಂಗದಲ್ಲಿ ಪ್ರಸಾದಿ ಪ್ರಾಣಲಿಂಗಸ್ಥಲಗಳು, ಯೋಗಾಂಗದಲ್ಲಿ ಶರಣ ಐಕ್ಯವೆಂಬ ಉಭಯಸ್ಥಲಗಳು. ಇಷ್ಟ ಪ್ರಾಣ ಭಾವ ಲಿಂಗಸ್ಥಳಗಳಲ್ಲಿ ಇದರಂತೆ ಷಡ್‌ಲಿಂಗಗಳೂ ಬೆರೆದು ಆರುಲಿಂಗಹೋಗಿ ಮೂರುಲಿಂಗವಾದವೆಂಬುದು ವಾಚಕರಿಗೆ ಸೂಚಿಸದೆ ಇರದು.

# ಬಿ. ನಂಜುಂಡಪ್ಪನವರ ಬರಹ.

ಪರಿಚಯ ಮಾಡಿದವರು:- ಶ್ರೀ. ಮ. ಮಲ್ಲಪ್ಪ ಜ್ಞಾನಮಂದಿರ. ಹಲಗೂರು.

---

ಕೃತಿಯ ಶೈಲಿಯೇ ಕೃತಿಗಾರನ ಪರಿಚಯ ಮಾಡಿಕೊಡುತ್ತದೆ. ಕೃತಿಯ ರೀತಿಯೇ ಕೃತಿಗಾರನ ಶೀಲವನ್ನು ಕುರಿತು ತಿಳಿಸುತ್ತದೆ. ಬರಹಗಾರನ ಚರ್ಮವೇ ಶೈಲಿ ಎಂದು ಥಾಮಸ್ ಕಾರ್ಲೈಲ್ ಹೇಳಿರುವುದೇ ಕೃತಿಯ ಮೂಲಕ ಕೃತಿಗಾರನ ಸಂಗತಿ ಸಮಾಚಾರವು ತಿಳಿಯುವುದಾಗಿದೆ. ಈ ತತ್ವನಿದರ್ಶನಕ್ಕಾಗಿಯೋ ಎಂಬಂತೆ ಅನೇಕ ಬರಹಗಾರರು ಇರುವುದು ರೂಢಿಗೋಚರವು. ಮೂಲೆಗುಂಪಾಗಿ ಮೊಳೆತು ಕೃತಿಯನ್ನು ಕೊಡುವುದು ಕೊಂಚವಾದರೂ ಅದರ ಕಿರುಳು ಮಾತ್ರ ಅತಿಯಾಗಿ ಫಲವು ಹಿಂದಾಗಿ ಪರಿಣಮಿಸುವಂತೆ ಜೀವನವನ್ನು ಸಾಗಿಸುತ್ತಿರುವ ಶ್ರೀ ಬೈರನಹಳ್ಳಿ ನಂಜುಂಡಪ್ಪನವರು ಮೈಸೂರು ಶಿಕ್ಷಣ ಶಾಲೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ನಿಧಾನ ಪ್ರಕೃತಿ, ಶಿವಧರ್ಮಜೀವ, ವಿನಯವಾಣಿ, ವ್ಯಾಸಂಗಹವ್ಯಾಸ, ವಾದಪ್ರಿಯತೆ ಇತ್ಯಾದಿಗಳು ಇವರಲ್ಲಿ ಮೇಳವಿಸಿರುವುದು ಇವರ ಸ್ವಭಾವ ಚಿತ್ರದ ಗುರುತಾಗಿರುತ್ತದೆ. ಇದ್ದುದರಲ್ಲಿಯೇ ತೃಪ್ತಿಪಡುವ ಇವರು ಸ್ವಕಾರ್ಯಕ್ಕಾಗಿ ಅನ್ಯರನ್ನು ಹೊಗಳಿ ಹಾಡಿ ಅಟ್ಟಲಿಗೇರಿಸಿ ಅವರ ಅನುಸರಣೆಯಲ್ಲಿಯೇ ಕಾಲ ಕಳೆಯುವ ಚಿತ್ತವೃತ್ತಿಯು ಕನಸೇಸರಿಯು. ಗ್ರಂಥಸಂಗ್ರಹದಲ್ಲಿರುವಷ್ಟು ಆಸಕ್ತಿ ಅವಧಾನವು ವ್ಯಾಸಂಗದಲ್ಲಿಯೂ ಇವೆ. ಓದುಗರಿಗೆ ಇವರ ಗ್ರಂಥ ಸಂಗ್ರಹವು ಒಂದು ಸುಗ್ಗಿಯ ಕಣವು.

ಜಯಕರ್ನಾಟಕ, ಶಿವಾನುಭವ, ಕಿರಣ ಇತ್ಯಾದಿ ಪತ್ರಿಕೆಗಳಲ್ಲಿ ಆಗಾಗ್ಗೆ ಇವರ ಬರಹಗಳು ಬರುತ್ತಿದ್ದವು. ಚಿಟ್ಟೆಯ ಜೀವನ ಎಂಬ ಬರಹವು ಇವರ ವಿಜ್ಞಾನಮಟ್ಟವನ್ನು ಎತ್ತಿ ತೋರಿಸುತ್ತದೆ. ಚಿತ್ರಗಳು ಮನೋಹರವಾಗಿಯೂ ಬೋಧಪ್ರದವಾಗಿಯೂ ಇರುವುದರ ಜೊತೆಗೆ ವಿಜ್ಞಾನವು ಸರಸ ಸುರಸವಾಗಿಯೂ ಇದೆ. 'ವೇಷಧಾರಿ' ಬರಹವು ಅತ್ಯುತ್ತಮ ಸ್ವಭಾವ ಚಿತ್ರವಾಗಿದೆ. "ಭಿಕ್ಷುಕರು ಎಂದರೆ ಕಪಟಿಗಳು, ಮೋಸಗಾರರು, ಸುಲಿಗೆಗಾರರು! ಅವರಿಗೆ ಕಾರಾಗ್ರಹವೇ ಯೋಗ್ಯಸ್ಥಾನ. ಇದನ್ನು ತಿಳಿದೂ

ದಾನಮಾಡುವುದು ಮೂಢ ಜನ' ಎಂದು ವಾದಿಸುವ ವೇಷಧಾರಿಯ ಔದಾರ್ಯವನ್ನು ಈ ಬರಹವು ಬಿಚ್ಚಿತೋರಿಸುತ್ತದೆ. ಒಳಗೊಂದು ಹೊರ ಹೊರಗೊಂದು ಮಾಡುವ ಕಪಟವೇ ವೇಷಧಾರಿಯ ಪಾಡಾಗುತ್ತದೆ. ಕಪಟಿಯು ತನ್ನ ಅವಿವೇಕವನ್ನು ಮುಚ್ಚಿಕೊಳ್ಳುವಂತೆ ಈತನು ತನ್ನ ಸಹಜ ಭಾವನೆಯನ್ನು ಮುಚ್ಚಿಕೊಳ್ಳುವುದಕ್ಕೆ ಯತ್ನಿಸಿದರೂ ಎಚ್ಚರಿಕೆಯು ತಪ್ಪಿದ ವೇಳೆಯಲ್ಲಿ 'ಅಳಿಯನ ಕುರುಡು ಬೆಳಗಾದ ಮೇಲೆ' ಆಗುತ್ತದೆ. 'ದೇವರ ಸೇವೆ' ಎಂಬ ಹಳ್ಳಿಯ ಹಾಡೊಂದನ್ನು ಸಂಗ್ರಹಿಸಿರುವುದು ಸ್ಮರಣೀಯಾಂಶವಾಗಿದೆ. ಭಗವಂತನ ಅರ್ಚನೆ ಆರಾಧನೆಯು ದಿನಚರಿಯ ಕರ್ತವ್ಯಗಳಲ್ಲೊಂದು ಎಂಬದನ್ನು ಪ್ರಾಚೀನರು ತಮ್ಮ ಜೀವನದಲ್ಲಿ ವ್ಯಕ್ತಪಡಿಸಿರುವ ಅಂಶವನ್ನು ಇದು ತಿಳಿಸುತ್ತದೆ. 'ಕಬ್ಬದ ಹಬ್ಬ' ಕವಿತೆಯು ಅನುಭವ ಪೂರಿತವಾಗಿದೆ. ಕಾವ್ಯವಸ್ತು, ಕಾವ್ಯ ಪ್ರಯೋಜನ, ಜನತೆಯ ಕಾವ್ಯಾಸಕ್ತಿಯುವೇ ಸಾಧ್ಯತೆ ಇತ್ಯಾದಿಯನ್ನು ಇದ್ದಂತೆಯೇ ಸತ್ಯಯುತವಾಗಿ ತಿಳಿಸಿದ್ದಾರೆ. ಉಪನಿಷತ್ತಿನ ನೆನಪನ್ನು ಕವಿತಾ ಕಾಮಿನಿಯ ಕೀರ್ತಿ ಪ್ರಸಾದ ಚಿತ್ರದ ಮೂಲಕ ಕವಿಗಳು ತಂದುಕೊಡುತ್ತಾರೆ.

ಮಾತಿಗಗೋಚರ ಮನಸಿಗಗೋಚರ
ನಾಗಿಹ ಸರ್ವೇಶ್ವರಮೂರ್ತಿ
ಮಾತಿಗು ಮನಸಿಗು ಅರಿವಿಗು ತೋರುವ
ಕವಿತಾಪ್ರತಿಭೆಗದು ಕೀರ್ತಿ.

ಆರಾರಿಗೆ ಆವಾವ ಬಯಕೆಯೋ ಎಂಬ ಕವಿತಾ ಸಾಲು ಮುಪ್ಪಿನ ಷಡಕ್ಷರಾರ್ಯರನ್ನು ಸ್ಮೃತಿಗೆ ತರುತ್ತದೆ. ಈ ಬರಹಗಳು ಜಯಕರ್ನಾಟಕದಲ್ಲಿ ಪ್ರಕಟವಾಗಿದೆ. "ಶಿವಾನುಭವ" ಪತ್ರಿಕೆಯಲ್ಲಿ ಬಂದ 'ನಡೆಸು ಬಾರ' ಎಂಬ ಕ್ರಾಂತಿಕಾರಕ ಕವಿತೆಯು ಇವರ ಕ್ರಾಂತಿಕಾರಕತ್ವಕ್ಕೆ ಕುರುಹಾಗಿರುತ್ತದೆ. ಬಸವೇಶ್ವರರ ಜೀವನ, ಉಪದೇಶ, ನಡೆ, ನುಡಿ, ಪ್ರಭಾವ, ಮಹತ್ತು—ಇವುಗಳನ್ನು ಕುರಿತು ಕವಿತೆಯಿವೆ. ಹನ್ನೆರಡನೆ ಶತಮಾನದ ಬಸವಣ್ಣನವರ ಕಾವ್ಯ ಕಲಾಪವನ್ನು ಕವಿಗಳು ಇಂದೂ ಬಯಸಿ ಪ್ರಾರ್ಥಿಸುತ್ತಾರೆ. ಗತವೈಭವವೇ ಇಂದಿನ ಜನತೆಯನ್ನು ನಡೆಯಿಸುವಂತೆ ಕೋರುತ್ತಾರೆ. ಕ್ರಾಂತಿ ಕಾವು ಕವ್ವರುತ್ತದೆ.

ಬಾಳುವುದು ಬದುಕುವುದು ವಿಷಯಲಾಲಸೆಗೆಂದು
ಮಂಕುತನದಲಿ ಕೆಡಹಿನಾಶಗೈದಿಹುದು.
ಮೀರಿ ಮಿರುಕಲಿರುವ ಪಾಪರಾಶಿಯನೊತ್ತಿ
ಧರ್ಮ ಸಾಮ್ರಾಜ್ಯವನು ಕಟ್ಟು ಬೇಗ.

ಇಂದಿನ ಸಾಮಾಜಿಕ ಸಂದೇಹಗಳಿಗೂ, ಸಮಸ್ಯೆಗಳಿಗೂ ಸಮಾಧಾನವು ಬಸವತತ್ವ ಪರಿಮಳದಿಂದ ಒದಗುತ್ತವೆ ಎಂಬ ಅಭಿಪ್ರಾಯವನ್ನು ಅಳವಡಿಸಿಕೊಂಡಿರುವ ಈ ಕವಿತೆಯು ಕುತೂಹಲಕಾರಿಯಾಗಿದೆ. ಶಿವಾನುಭವಿಗಳಾದ ಇವರಿಂದ ಶಿವಾನುಭವ ಪ್ರವಾಸಗೋಷ್ಠಿಯ ಗೊತ್ತುಗುರಿಗಳು ಎಂಬ ವಿಚಾರವನ್ನು ಕುರಿತು ಅಖಿಲಭಾರತ ಶಿವಾನುಭವ ಸಮ್ಮೇಳನದಲ್ಲಿ ಧಾರವಾಡದಲ್ಲಿ ಮಾಡಿದ ಭಾಷಣ ಮನನೀಯವಾಗಿದೆ. ಜನತೆಯ ಆಧ್ಯಾತ್ಮಿಕ ಜ್ಞಾನಮಟ್ಟವನ್ನು ಹೆಚ್ಚಿಸಲು ಎಷ್ಟು ಮಟ್ಟಿಗೆ ಶಿವಾನುವ ಪ್ರವಾಸಗೋಷ್ಠಿಯು ಸುಲಭಸಾಧನವಾಗಿದೆ ಎಂಬುದನ್ನು ಕ್ರಮಬದ್ಧವಾಗಿ, ಅನುಷ್ಠಾನರೀತಿಯಲ್ಲಿ ಇವರು ತಿಳಿಸಿದ್ದಾರೆ. ಈ ಭಾಷಣ ಬರಹವು ಜಯ ಕರ್ನಾಟಕ ಸಾಪ್ತಾಹಿಕದಲ್ಲಿ ಹೊರಬಂದಿದೆ.

ಶ್ರೀ ಸಿದ್ಧಗಂಗಾಕ್ಷೇತ್ರದ ಕಿರಣಪತ್ರಿಕೆಯಲ್ಲಿ ಇಂದಿನ ಶಿಕ್ಷಣದ ಕೊರತೆಗಳು ಎಂಬ ಬರಹವೂ, ಎಲೆ ಆತ್ಮ ಎಂಬ ಕವನವೂ ಇವರಿಂದ ಬರೆಯಲ್ಪಟ್ಟಿದೆ. ಇಂದಿನ ಶಿಕ್ಷಣದ ಕೊರತೆಗಳು ಎಂಬ ಬರಹವು ಅನುಭವಪೂರಿತವಾಗಿದೆ. ಆತ್ಮೋನ್ನತಿಯನ್ನು ಅರಳಿಸಿ ಸರ್ವಸಮಾನತೆಯನ್ನು ಕಲ್ಪಿಸಿ ಶರೀರದ ಪೂರ್ಣ ಬೆಳವಣಿಗೆಗೆ ಅವಕಾಶ ಮಾಡಿಕೊಟ್ಟು, ಸರ್ವಸುಖ ಸಂಪತ್ತಿಗೂ ಕಾರಣವಾಗುವಂತಹುದೇ ಶಿಕ್ಷಣ ಅವಶ್ಯಕವು ಎಂಬುದನ್ನು ಒತ್ತಿಹೇಳಿದ್ದಾರೆ. ಕೃತಕನಾಗರೀಕತೆಯ ಅನಾಹುತ, ವಿಜ್ಞಾನದ ಅಂಧಾಜಕತೆ, ಸ್ವಾವಲಂಬನದ ದೌರ್ಬಲ್ಯ. ಆಧ್ಯಾತ್ಮಿಕ ಅರಿವಿನ ಅಭಾವಾದಿಗಳನ್ನು ವಿವರಿಸಿದ್ದಾರೆ. ನೈತಿಕ ಮತ್ತು ಧಾರ್ಮಿಕ ಸಂಪರ್ಕವಿಲ್ಲದ ಶಿಕ್ಷಣದ ಅನಾಹುತಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ನಮ್ಮ ನಾಡಿನ ದಾರಿದ್ರ್ಯ ಅಜ್ಞಾನಾಂಧಕಾರಗಳಿಗೆ ಈ ಮೂಲಕ ಮನ್ನುಲಮರುಗಿದ್ದಾರೆ. ಧರ್ಮದ ಮೂಲತತ್ವಗಳು ಶಿಕ್ಷಣದ ಒಂದು ಭಾಗವಾಗಿ ಏರ್ಪಟ್ಟರೆ ಶಿಕ್ಷಣವು ಬಹುಮಟ್ಟಿಗೆ ಸುಧಾರಿಸಲ್ಪಡುವುದು ಎಂದು ಇವರು ಹೇಳಿರುವುದನ್ನು ಸರ್ವಶಿಕ್ಷಣ ಪ್ರಿಯರೂ ಒಪ್ಪುವಂತಹುದಾಗಿದೆ. ದೇಹಕ್ಕೆ ಜೀವ ಹೇಗೋ

ಜೀವನಕ್ಕೆ ನೀತಿ ಮತ್ತು ಧರ್ಮ ಹಾಗೆ ಎಂದು ಇವರು ಹೇಳಿರುವುದು ನೀತಿಶಾಲಿಗಳ ಭೂಮಿಗೆ ಉಚಿತವಾಗಿದೆ. ನೈಜ ವಿದ್ಯಾವಶ್ಯಕತೆಯನ್ನು ಅನುಭವದ ಮೂಲಕ ಈ ಲೇಖನವು ಬಿನ್ನವಿಸಿದೆ. ಎಲೆ ಆತ್ಮ ಎಂಬ ಕವನವು ಆಂಗ್ಲ ಕವನದ ಅನುವಾದವಾಗಿದೆ. ಈ ಬಗೆಯ ಅನುವಾದ ಕವನಗಳನ್ನು ಮೊಟ್ಟ ಮೊದಲಿಗೆ ಆಚಾರ್ಯರು ಬೆಳ್ಳೂರು ಮೈಲಾರ ಶ್ರೀಕಂಠಯ್ಯನವರು ಈ ಆಚಾರ್ಯರ ಹಾದಿಯಲ್ಲಿ ಹಾಯಲು ಇವರು ಯತ್ನಿಸಿರುವುದು ಶ್ಲಾಘನೀಯವೇ ಸರಿಯು. ಭಾವವಾಹಿನಿಯೇ ಕವಿತೆಯಾಗಿ ಕಾಲೂರುತ್ತವೆ. ಭಾವನಾವೇದನೆಯನ್ನು ಕವಿಯು ಕವಿತೆಯ ಮೂಲಕವಾಗಿ ಹೊರಪಡಿಸುತ್ತಾನೆ.

ಆತ್ಮನ ಕೂಡಿಹೆವಾವಿಂಪಿನಲಿ
ಹರುಷದ ದುಗುಡದ ವೇಳೆಯಲಿ
ಬೆರೆತಿಹ ಗೆಳೆಯರ ಅಗಲಿಕೆಯಲಿ
ಬಗೆಬರುವುದು ಕಂಬನಿಗೂಡಿ.

ಈ ಅನುಭವವು ಎಲ್ಲರಿಗೂ ವೇದ್ಯವಾಗಿದೆ. ಜೀವನದ ತತ್ತ್ವವನ್ನು ಅರಿತುಕೊಳ್ಳಲು ಆತ್ಮನ ಅರಿವಾಗಬೇಕು. ಅದಿಲ್ಲದಿದ್ದರೆ ಸಮಾನತೆಯ ಸ್ಥಾನವನ್ನು ಏರುಪೇರು ಆಕ್ರಮಿಸಿಕೊಳ್ಳುದೆ.

ದೇವರ ದಾಸಿಮಯ್ಯನ ಸ್ಮಾರಕೋತ್ಸವದ ಸಮಯದಲ್ಲಿ ದೇವರದಾಸಿಮಯ್ಯನ ಪ್ರಶಸ್ತಿ ಎಂಬ ಹೆಬ್ಬೊತ್ತಿಗೆಯು ಹೊರಬಂದಿತು. ಇದರಲ್ಲಿ 'ದೇವರ ದಾಸಿಮಯ್ಯ ಪುರಾಣದ ಕಥಾಸಾರ ಮತ್ತು ವಿಮರ್ಶೆ' ಎಂಬ ಬರಹವು ಇವರಿಂದ ಬರೆಯಲ್ಪಟ್ಟಿದೆ. ಇವರ ಆಳವಾದ ಅಭ್ಯಾಸ ಜ್ಞಾನದ ಕುರುಹಾಗಿದೆ. ದೇವರ ದಾಸಿಮಯ್ಯ ಪುರಾಣ ಕಾವ್ಯವನ್ನು ಚೆನ್ನಾಗಿ ಅಭ್ಯಸಿಸಿ ಅದರ ಸಾರವನ್ನು ಹೀರಿ ಕಾವ್ಯದ ಸ್ವರೂಪವನ್ನು ಚೆನ್ನಾಗಿ ಮುಂದಟ್ಟು ಮಾಡಿಕೊಂಡಿರುವುದು ಗೊತ್ತಾಗುತ್ತದೆ. ದೇವರ ದಾಸಿಮಯ್ಯನ ಉದಾತ್ತ ಪಾತ್ರವನ್ನು ರೂಪ ಚಿತ್ರದಲ್ಲಿ ತೋರಿಸಿದ್ದಾರೆ. ಕನ್ನಡ ವಚನ ಶಾಸ್ತ್ರ ಹಾಗೂ ವೀರಶೈವ ಧರ್ಮಗ್ರಂಥ—ಇವುಗಳಲ್ಲಿ ದಾರಿ ದರ್ಶಕ ದೀಪವೊಂದು ದೇವರ ದಾಸಿಮಯ್ಯ. ವಚನಕಾರರ ಮುಂದಾಳು ಬಸವೇಶ್ವರರಂತಹ ಮಹಾ ಪ್ರಭೂತಿಗಳು ಇವರನ್ನು ಹೃದಯಾರೆ ಹೊಗಳಿದ್ದಾರೆ. ಚಾರಿತ್ರಿಕ ವಿಭೂತಿಗಳೂ, ಶಿವಾಡ ಪುಣ್ಯ ಪುರುಷರೂ, ಆದ್ಯ ವಚನಕಾರರೂ,

ಸಮಾಜ ಸುಧಾರಕ ಶ್ರೇಷ್ಠರೂ ದೇವರ ದಾಸಿಮಯ್ಯನವರು ಆಗಿದ್ದಾರೆ. ಸುಮಾರು ಹತ್ತು ಶತಮಾನಗಳ ಹಿಂದೆ ಮುದನೂರಿನಲ್ಲಿ ಜನ್ಮ ತಾಳಿ, ಪೊಟ್ಟಲಕೆರೆಗೆ ಹೋಗಿ ರಾಜ ರಾಣಿಯರಾದ ಜಯಸಿಂಹ, ಸುಗ್ಗಲಾದೇವಿ—ಇವರಿಂದ ಮರ್ಯಾದಿಸಲ್ಪಟ್ಟ ಮಹಾದಿವ್ಯ ಪುರುಷ ದೇವರ ದಾಸಿಮಯ್ಯ ಶಿಷ್ಯ ಜೀವನ ನಡೆಯಿಸಿದಂತೆಯೇ ಆಚಾರ್ಯ ಜೀವನವನ್ನು ಇವರು ಸಾಗಿಸಿದ್ದಾರೆ. ನಿಶ್ಚಿಂತನಾಗಿ ನಿಶ್ಚಲಧ್ಯೇಯಿಯಾಗಿ ನಾಡನ್ನು ಸುತ್ತಿ ಸಂಚರಿಸಿ ಬೋಧನೆಯಿಂದ ಜ್ಞಾನಪ್ರಸಾರ ಮಾಡಿದ್ದಾನೆ. ಭಕ್ತಿ ಜ್ಞಾನವೈರಾಗ್ಯಗಳನ್ನು ಸಂಗಮಿಸಿ ಸಮ್ಯಗ್‌ಜ್ಞಾನಿಯಾಗಿದ್ದಾನೆ. ಭಕ್ತಿಭರಿತನಾಗಿ ಕಾಯಕ ನಿರತನಾಗಿ ಕರ್ಮಜ್ಞಾನಸಂಯೋಗ ಮಾಡಿದ್ದಾನೆ. ದಾಸೋಹಿಯಾದಂತೆಯೇ ದಯಾಜೀವಿಯಾಗಿ ಬಾಳಿದ್ದಾನೆ. ಆದರ್ಶ ದಾಂಪತ್ಯ ಜೀವನದ ಪ್ರದೀಪನ್ನು ಬೆಳಗಿದ್ದಾನೆ. ಅಧಿಕಾರಿಯಾಗಿ ಆಳಲು ಅವಕಾಶವಿದ್ದರೂ ಅದಕ್ಕೆ ಮನಗೊಡದೆ ಕೊನೆಯ ಪರ್ಯಂತ ಕಾಯಕ ಜೀವಿಯಾಗಿ ಸಾಗಿದ ಸಮಹೃದಯಿ ದೇವರ ದಾಸಿಮಯ್ಯ. ದೀನ ಬಂಧು ಎಚ್. ಸಿದ್ದಯ್ಯನವರು ಈ ರೀತಿ ಇವರ ವಿಚಾರದಲ್ಲಿ ನುಡಿದಿದ್ದಾರೆ.

"ದೇವರದಾಸಿಮಯ್ಯನವರ ವಚನಗಳು ಪ್ರಾಚೀನತೆಯಿಂದಲೇ ಅಲ್ಲದೆ ಪವಿತ್ರ, ಮೃದುಮಧುರ, ಉದಾತ್ತ ಉಜ್ವಲ ಗುಣಗಳಿಂದ ನಾಡಿನ ಸಾಹಿತಿಗಳ ಮತ್ತು ಕಲಾಪ್ರೇಮಿಗಳ ಮನಸ್ಸನ್ನು ಅಪಹರಿಸಿವೆ. ಶರಣ ದಾಸಿಮಯ್ಯನವರು ತಮ್ಮ ಪವಾಡಗಳಿಂದ ಭಾವುಕರ ಮನಸ್ಸಿನ ಮೇಲೆ ಧಾರ್ಮಿಕ ಮುದ್ರೆಯನ್ನು ಒತ್ತಿದ್ದಾರೆ. ತಮ್ಮ ಪ್ರತಿಭೆಯಿಂದ ಸಹೃದಯರ ಮನಸ್ಸನ್ನು ಆಕರ್ಷಿಸಿದ್ದಾರೆ. ಮತ್ತು ತಮ್ಮ ಉದಾತ್ತ ಜೀವನದಿಂದ ಕವಿ ಶ್ರೇಷ್ಠರ ಕಾವ್ಯಗಳಿಗೆ ಒಳ್ಳೆಯ ಕಥಾ ವಸ್ತುವಾಗಿದ್ದಾರೆ."

ಈ ಬಗೆಯ ವಿಭೂತಿ ಪುರುಷರ ವಿಚಾರದಲ್ಲಿ ವಿರೂಪಾಕ್ಷ ದೇಶಿಕನೆಂಬ ವೀರಶೈವ ಕವಿಯಿಂದ ಭಾಮಿನೀ ಷಟ್ಪದಿಯ ಕೃತಿಯೊಂದು ಜನಿಸಿತು. ಕವಿಯ ಗುರು ಮತಿಯುಶಾಂತ ಈ ಕೃತಿಯಲ್ಲಿ ಹದಿನೇಳು ಸಂಧಿ, ಒಂದು ಸಾವಿರದೊಂದನೂರೆಪ್ಪತ್ತಾರು ಪದ್ಯಗಳಿವೆ. ಇದು ಇನ್ನೂ ಅಚ್ಚಿನ ಮನೆಯನ್ನು ಕಂಡಿಲ್ಲ. ಈ ಕೃತಿಯ "ವಿಚಾರವಾಗಿಯೇ ಇವರು ಲೇಖನ ಬರೆದಿರುವುದು. ಕವಿ ಮತ್ತು ಕಾಲ, ಕಾವ್ಯ ವಿಮರ್ಶೆ, ಕಥಾ ಪ್ರವಾಹ, ಸಾಹಿತ್ಯ ಶೈಲಿ ಸಂಪತ್ತು ಎಂಬ ಶಿರೋನಾಮೆಗಳಲ್ಲಿ ಕವಿಕಾವ್ಯ

ವಿಮರ್ಶೆಯೂ, ಹದಿನೇಳು ಸಂಧಿಗಳ ಕಥಾಸಾರವೂ ಈ ಲೇಖನದಲ್ಲಿ ಅಳವಟ್ಟಿದೆ.

ಇವರ ಮೊದಲನೆಯ ಕೃತಿಯು "ಬಸವಣ್ಣನವರ ಅಭಯ ಸಂಪತ್ತು ಇದು ಬಸವ ಜಯಂತಿಯ ಕಾಣಿಕೆ. ವೀರಶೈವ ಧರ್ಮೋದ್ಧಾರಕರೂ, ಮಾನವಕೋಟಿಯುದ್ಧಾರಕರೂ, ಮಹಾಪುರುಷರೂ, ಚಾರಿತ್ರಿಕ ಮಹಾಪುರುಷರೂ ಸತ್ಯದಯಾ ಅಹಿಂಸಾ ಮೂರ್ತಿಗಳೂ ಆದ ಬಸವೇಶ್ವರರ ವಿಚಾರವಾಗಿ ಬಗೆಬಗೆಯ ಕೃತಿಗಳು ಬಂದಿವೆ. ಆದರೆ ಇಲ್ಲಿ ದೈವೀಸಂಪತ್ತು ಮೂರ್ತಿಗೊಂಡಂತಾಗಿ ಅಭಯ ಪ್ರದಾಯಕರಾದ ಜ್ಞಾನ ಮಹಾಮೂರ್ತಿ ಬಸವೇಶ್ವರನನ್ನು ಕಾಣುತ್ತೇವೆ.

"ಉತ್ತಮ ಧ್ಯೇಯಸಾಧನೆಗಾಗಿ ಬದ್ಧ ಕಂಕಣರಾಗಿ ಅಭಯ ಸಂಪತ್ತೆಂಬ ವಜ್ರಾಯುಧವನ್ನು ಹಿಡಿದು, ಇದಿರುಬಿದ್ದ ತೊಡಕುಗಳನ್ನು ಪರಿಹರಿಸುತ್ತ ಮುಂದೆ ನುಗ್ಗಿದವರು ಬಸವಣ್ಣನವರು. ಲೇಖಕರು ಬಸವಣ್ಣನವರ ಈ ಗುಣವನ್ನು ಇಲ್ಲಿ ವಿಸ್ತೃತಪಡಿಸಿದ್ದಾರೆ." ಎಂದು ಈ ಗ್ರಂಥದ ಗುರಿಯನ್ನು ಕುರಿತು ಶ್ರೀ. ಪ್ರ. ನಿ. ಸ್ವ. ಮಹಾದೇವಸ್ವಾಮಿಗಳು ಹೇಳಿದ್ದಾರೆ ಲೇಖಕರು ಬಸವಣ್ಣನವರ ವಚನಗಳನ್ನು ಮಾತ್ರ ತೆಗೆದುಕೊಂಡು ಅವುಗಳ ಆಧಾರದ ಮೇಲೆ ಕೃತಿಗೈದಿರುವುದು ಚಾರಿತ್ರ್ಯಾಂಶಕ್ಕೆ ಗಮನವನ್ನು ಕೊಟ್ಟಿರುವುದರ ಕುರುಹಾಗಿದೆ. ದೈವೀಗುಣಗಳಲ್ಲಿ ಮೊದಲನೆಯದು ಅಭಯಸಂಪತ್ತು ಆಗಿದೆ. ನಿರ್ಭೀತಿಯು ದೈವೀಸಂಪತ್ತಿನ ಪ್ರಧಾನವಾದ ಒಂದು ಅಂಗವಾಗಿದೆ. ಅಭಯ, ಅಂತಃಕರಣ ಸಂಶುದ್ಧಿ, ಜ್ಞಾನ ಮತ್ತು ಯೋಗದಲ್ಲಿ ನಿಷ್ಠೆ, ದಾನ, ದಮ, ಯಜ್ಞಾದಿ ಗುಣಗಳು ದೈವೀಸಂಪತ್ತನ್ನು ಹೊಂದಿದವರಲ್ಲಿರುತ್ತವೆ ಎಂಬುದಾಗಿ ಗೀತೋಕ್ತಿಯಿದೆ. ಕರ್ಮಯೋಗಿಯು ಕಷ್ಟಪರಿಹಾರಕ್ಕಾಗಿ ಅಭಯ ಪ್ರಾಪ್ತಿಯನ್ನು ಪಡೆಯಲು ಭಗವಂತನನ್ನು ಮೊರೆಹೋಗುತ್ತಾನೆ. ಇದನ್ನು ಬಸವೇಶ್ವರರು ಎಂತು ಸಾಧಿಸಿದರು ಎಂಬುದನ್ನು ಸರಳವಿರಳವಾಗಿ ವೇದೋಪನಿಷತ್ತುಗಳ ದೃಷ್ಟಾಂತದ ಮೂಲಕ ಸಾರ ಸಮಗ್ರವಾಗಿ ಬಹು ಹೃದ್ಯವಾಗಿ ಲೇಖಕರು ತಿಳಿಸಿದ್ದಾರೆ. ಸತ್ಯ ಧರ್ಮ ಬೋಧನೆಯ ಹಾದಿಯಲ್ಲಿ ಬಂದ ಕಂಟಕಗಳನ್ನು ಎದೆಗೊಟ್ಟು ಎದುರಿಸುವುದು ಮಹಾತ್ಮರ ಹುಟ್ಟುಗುಣವಾಗಿರುತ್ತದೆ. ಸಾಕ್ರೆಟೀಸ, ಏಸುಕ್ರಿಸ್ತ, ಮಹಾತ್ಮಗಾಂಧಿಯವರ ವಿಚಾರವನ್ನು ಸೂಕ್ಷ್ಮವಾಗಿ ಈ ಸಂಬಂಧದಲ್ಲಿ ತಿಳಿಸುತ್ತ, ಬಸವೇಶ್ವರರ ಎದೆಗಾರಿಕೆಯನ್ನು ಎತ್ತಿ ತೋರಿ

ಸಿದ್ದಾರೆ. ಜೀವನದ ಸರ್ವತೋಮುಖ ಕ್ಷೇತ್ರದಲ್ಲಿ ಬಸವೇಶ್ವರರ ಅಭಯ ಸಂಪತ್ತು ಅಳವಟ್ಟಿರುವುದನ್ನು ಲೇಖಕರು ಸ್ವಾರಸ್ಯವಾಗಿ, ಸಾರಭೂತವಾಗಿ ಬಿಡಿಬಿಡಿಯಾಗಿ ಚಿತ್ರಿಸಿದ್ದಾರೆ. ಅಭಯ ಸಂಪತ್ತು ಅಮೌಲ್ಯವಾಗಿರುತ್ತದೆ. ಇಷ್ಟೆಲ್ಲ ಹಿರಿಯ ವಿಚಾರವನ್ನು ಕಿರಿಯ ಕೃತಿಯಲ್ಲಿ ಅಡಕಮಾಡಿ ಕೊಟ್ಟಿರುವ ಲೇಖಕರ ಜಾಣ್ಮೆಯೂ ಹಿರಿದೇ ಆಗಿರುತ್ತದೆ. ಬೆಂಗಳೂರಿನ ಸರ್ವಭೂಷಣ ಮಠದಲ್ಲಿ ಈ ಕೃತಿಯು ಹೊರಬಂದಿದೆ.

ಇವರ ಎರಡನೆಯ ಗ್ರಂಥವು ಹರಿಹರನ ರಗಳೆಯ ಕಥೆಗಳು, ಭಾಗ ಒಂದು ಬೆಂಗಳೂರಿನ ಸಾಹಿತ್ಯಕುಟೀರದಿಂದ ಇದು ಹೊರಬಂದಿದೆ. ಚಂಪೂರೀತಿಯ ಕಾವ್ಯ ಶೃಂಖಲೆಯಿಂದ ಕನ್ನಡವನ್ನು ವಿಮುಕ್ತಿ ಮಾಡಿ ಕನ್ನಡಕ್ಕೊಂದು ಹೊಸ ಕಾವ್ಯ ಶೈಲಿಯನ್ನು ಹಾಕಿಕೊಟ್ಟ ಹರಿಹರನ ದೇವನು ಮಹಾಕವಿಯೂ, ಅಗ್ರಗಣ್ಯನೂ ಆಗಿದ್ದಾನೆ. ಸೈರಂಧ್ರಿಯಾಗಿದ್ದ ರಗಳೆಯನ್ನು ರಾಣಿಯನ್ನಾಗಿ ಮಾಡಿದ ಮಹಾನುಭಾವತ್ವವು ಹರಿಹರ ದೇವನಿಗೆ ಸೇರಿದ್ದಾಗಿರುತ್ತದೆ. ಈತನು ಹದಿಮೂರನೆಯ ಶತಮಾನದಲ್ಲಿಯೇ ನೂತನ ಕವಿ ಸಂಪ್ರದಾಯಕ್ಕೆ ಮಾರ್ಗದರ್ಶಕನಾಗಿ, ರಗಳೆಯ ಛಂದಸ್ಸಿನಲ್ಲಿ ಕವಿತಾ ರಚನೆಮಾಡಿ ತನ್ನ ಶಬ್ದ ಸಂಪತ್ತಿ, ಉಚಿತಪದ ಪ್ರಯೋಗದಿಂದ ಹೃದಯಂಗಮವಾದ ಕಥಾ ನಿರೂಪಣೆ, ಅಲಂಕಾರ ವೈವಿಧ್ಯ ಸುಹೃದಯತೆ, ಭಾವಾವೇಶ ಮೊದಲಾದ ಉಚ್ಚಕವಿತಾ ಗುಣಸಂಪತ್ತಿಯಿಂದ ಪರಿಶೋಭಿಸಿ, ಅಂದಿನಿಂದೀಚಿನ ಹಲವಾರು ಮಂದಿ ಕವಿಗಳಿಗೆ ಆದರ್ಶಪುರುಷನೆನಿಸಿದ್ದಾನೆ. ತನ್ನ ರಗಳೆಗಳಲ್ಲಿ ಅನೇಕ ಮಂದಿ ಪುರಾತನ ಶಿವಶರಣರ ಚರಿತ್ರೆಗಳನ್ನು ಈತನು ಬರೆದಿದ್ದಾನೆ. ಅವುಗಳಲ್ಲಿ ಹದಿನೈದು ಮಂದಿ ಶಿವಶರಣರ ಚರಿತ್ರೆಗಳನ್ನು ಮಾತ್ರ ಪ್ರಕೃತವಾಗಿ ಇವರು ಆರಿಸಿಕೊಂಡು ರಗಳೆಯ ರೂಪಿನಲ್ಲಿದ್ದುದನ್ನು ಮೃದುಮಧುರವಾದ ಶೈಲಿಯಲ್ಲಿ ಹೃದಯಂಗಮವಾಗಿ ಗದ್ಯಕಥಾರೂಪದಿಂದ ಬರೆದಿದ್ದಾರೆ. ಇವು ವಾಚಕರ ಚಿತ್ತಾಕರ್ಷವಾಗಿ ಪ್ರತಿಯೊಬ್ಬರೂ ತಪ್ಪದೆ ನೋಡುವಂತಿದೆ. ಮಹಾಕವಿಗಳ ಕೃತಿಗಳನ್ನು ಈ ಬಗೆಯಾಗಿ ಸುಲಭ ಸರಳಶೈಲಿಯಲ್ಲಿ ಬರೆದು ಕೊಡುವಂತೆ ಹಿರಿಮೆಯನ್ನು ಹೊಂದಿದ ಶ್ರೀ. ಬಿ. ನಂಜುಂಡಪ್ಪನವರು ಸಂಸ್ಕೃತಿ ದೃಷ್ಟಿಯಿಂದ ಭಾಗ್ಯಶಾಲಿಯಾಗಿದ್ದಾರೆ. ಈ ಕೃತಿಯು ದ್ರಾಕ್ಷಾಪಾಕವಾಗಿದೆ. ಶೈಲಿಯು ಶುದ್ಧ ಸಂಪ್ರದಾಯದಿಂದ ತನ್ನ ತನಕ್ಕೆ ಬಂದರೆ ಕೃತಿಯು ವೈವಿಧ್ಯಕ್ಕೆ ಮೆರಗಿಟ್ಟಂತಾಗುತ್ತದೆ.

ರಾಘವಾಂಕನ ಹರಿಶ್ಚಂದ್ರ ರೂಪಕಂ ಇವರ ನೂರನೆಯ ಹೊತ್ತಿಗೆಯು. ಮೈಸೂರಿನ ನವೋದಯ ಸಾಹಿತ್ಯಮಂದಿರದವರು ಇದನ್ನು ಪ್ರಕಟಿಸಿದ್ದಾರೆ. ಇದು ಹಳೆಗನ್ನಡ ನಾಟಕ. ಕರ್ನಾಟಕ ಸಾಹಿತ್ಯದಲ್ಲಿ ಮಹಾಕವಿ ರಾಘವಾಂಕನಿಗೆ ಹಿರಿದಾದ ಸ್ಥಾನವೊಂದಿದೆ. ಕಾವ್ಯದಲ್ಲಿ ಅವ್ಯಕ್ತವಾಗಿ ಅಡಕ ಮಾಡಿಸಿಕೊಂಡಿರುವ ನಾಟಕತ್ವವೇ ಕನ್ನಡ ಮಹಾ ಕವಿಗಳ ವೈಶಿಷ್ಟ್ಯವಾಗಿರುತ್ತದೆ. ರನ್ನ ಮಹಾ ಕವಿಯ ಗದಾಯುದ್ಧ ಕಾವ್ಯವನ್ನು ಶ್ರೀಯವರು ರೂಪಕಕ್ಕೆ ತಂದಿದ್ದಾರೆ. ರಾಘವಾಂಕ ಮಹಾ ಕವಿಯ ಹರಿಶ್ಚಂದ್ರ ಕಾವ್ಯವನ್ನು ಹರಿಶ್ಚಂದ್ರ ರೂಪಕವನ್ನಾಗಿ ಶ್ರೀ ಬಿ. ನಂಜುಂಡಪ್ಪನವರು ಮಾಡಿದ್ದಾರೆ. ಕಾವ್ಯದ ವೇಷ ಧರಿಸಿಕೊಂಡಿರುವ ನಾಟಕದ ಸ್ವಭಾವ ಸ್ವರೂಪವು ಎದ್ದುಕಾಣುವಂತೆ ಮಾಡಿಕೊಂಡಿರುವ ಮಾರ್ಪಾಟೇ ಇದಾಗಿರುತ್ತದೆ. ನಾಟಕದ ಜೀವಾಳವು ಸಂಭಾಷಣೆಯಲ್ಲಿರುತ್ತದೆ. ಸೂಳ್ನುಡಿಪ್ರಿಯನಾದ ರಾಘವಾಂಕನು ಚಿಕ್ಕ ಚಿಕ್ಕ ಮಾತುಗಳಲ್ಲಿ ಆಕರ್ಷಣೀಯವಾದ ವಿಚಾರಗಳನ್ನು ಅಳವಡಿಸಿಕೊಂಡಿದ್ದಾನೆ. ಸಹಜ ಮತ್ತು ತೀವ್ರ ಸಂಭಾಷಣೆ ನಡೆಯಲ್ಲಿ ಸರಸ ಸುರಸವಾಗಿರುತ್ತದೆ. ಕಿರಿದರಲ್ಲಿಯೇ ಹಿರಿದನ್ನು ಅಡಗಿಸುವ ಅದಟುಶಾಲಿ ಶಬ್ದಚಿತ್ರಗಾರ ರಾಘವಾಂಕನ ಕಾವ್ಯವೆಲ್ಲವೂ ಜೀವಂತ ಸಂಭಾಷಣೆಗಳಿಂದ ತುಂಬಿ ತುಳುಕುತ್ತದೆ ಕವಿ ರಾಘವಾಂಕನು ಸಂಭಾಷಣಾ ಸ್ವಾರಸ್ಯದಲ್ಲಿ ಸಿದ್ಧ ಹಸ್ತ. ಪ್ರಕೃತ ಬರಹಗಾರರು ಈ ಜಾಡಿನ ರಹಸ್ಯವನ್ನರಿತು ಇಂದಿನ ಕನ್ನಡಿಗರಿಗೆ ಅದನ್ನು ಕೊಡಲು ಯತ್ನಿಸಿ ಸಫಲ ಸಾಧ್ಯರಾಗಿದ್ದಾರೆ. ಕಾವ್ಯವನ್ನು ದೃಶ್ಯವಿಭಾಗ ಮಾಡಿಕೊಂಡು ಹರಿಶ್ಚಂದ್ರನ ಕಥೆಯನ್ನೆಲ್ಲವನ್ನೂ ಇಡೀ ಕಾವ್ಯವೇ ರೂಪಕವಾಗಿ ಮಾರ್ಪಟ್ಟಿರುವುದು ಕಾಣಬರುತ್ತದೆ. ಕೃತಿಗೆ ಕೈಗೋಲಿದ್ದಂತೆಯೇ ಕವಿವಿಚಾರ. ಕೃತಿ ವಿಷಯವನ್ನು ಸ್ವಾರಸ್ಯವಾಗಿ, ಸಾರಭೂತವಾಗಿ ವಿಮರ್ಶಿಸಿ, ರೂಪಕಕ್ಕೆ ಮುದ್ರಿಸೂಚನೆಯೋ ಎಂಬಷ್ಟು ಮಟ್ಟಿಗೆ ಕೊಟ್ಟು ರೂಪಕ ವಾಚನಕ್ಕೆ ಅನುಕೂಲ ಹಾದಿ ಮಾಡಿಕೊಟ್ಟಿದ್ದಾರೆ. ಇವರ ಶ್ರಮ, ಆಳವಾದ ಅನುಭವ, ಜ್ಞಾನ, ವಿಚಾರ ಇದರಲ್ಲಿ ಎದ್ದು ಕಾಣುತ್ತದೆ. ಹರಿಶ್ಚಂದ್ರನ ಕಥೆಯು ಜನಪ್ರಿಯ ಕಥೆ. ಹರಿಶ್ಚಂದ್ರನ ಸತ್ಯ ವ್ರತವನ್ನು ಕೆಡಿಸಲು ಪಣತೊಟ್ಟ ವಿಶ್ವಾಮಿತ್ರನ ಸಾಹಸ ಕಾರ್ಯಗಳೆಲ್ಲವೂ ವಿಫಲವಾಗಿ ವಚನಪಾಲನೆಯ ನಿಷ್ಠೆಯನ್ನು ಸಲೆಸಾಧಿಸಿದ ಹರಿಶ್ಚಂದ್ರನಿಗೆ ವಿಶ್ವನಾಥನು ಪ್ರತ್ಯಕ್ಷನಾಗುವುದೇ ಕಥಾಸಾರ. ರೂಪಕದ ಉತ್ತಮ ನಿರ್ವಹಣಕ್ಕೆ ಅನಿವಾರ್ಯವಾಗಿ ಕಾವ್ಯದಿಂದ ಅಲ್ಲಲ್ಲಿ

ಮಾರ್ಪಾಟನ್ನು ಮಾಡಿಕೊಂಡಿರುವುದು ಇವರ ಪ್ರತಿಭೆಯ ಕುರುಹಾಗಿದೆ. ಇದರಿಂದ ಮೂಲ ಕವಿಯ ವಿಷಯ ನಿರೂಪಣೆಗೆ ಭಂಗತಂದಂತಾಗಬಹುದು. ಇದು ಅನಿವಾರ್ಯ. ವಿಲಿಯಮ್ ಶೇಕ್ಸ್ಪಿಯರನ ನಾಟಕಗಳನ್ನು ಕಥಾರೂಪಕ್ಕೆ ಚಾರ್ಲೆಸ್ ಲ್ಯಾಂಬ ಮತ್ತು ಮೇರಿಲ್ಯಾಂಬ ತಂದಿರುವಲ್ಲಿ ಇದೇ ದೋಷವನ್ನು ನಾವು ಕಾಣುತ್ತೇವೆ. ಅಷ್ಟಕ್ಕೇ ಅವರ ಕಲಾವಂತಿಕೆಯ ಕುಸುರಿಕೆಗೆ ಕಪ್ಪನ್ನು ಹಚ್ಚುವುದು ತರವಲ್ಲ. ರೂಢಿಯ ದೋಷಗಳು ಅಲ್ಲಲ್ಲಿ ಅಡು ಬಂದರೆ ಅದನ್ನೇ ಅಷ್ಟು ಪ್ರಸಾದವನ್ನಾಗಿ ಮಾಡುವುದು ಯೋಗ್ಯವಲ್ಲ. ಕನ್ನಡ ಸಾಹಿತ್ಯಕ್ಕಿದ್ದ ಕೊರತೆಯನ್ನು ನೀಗಿಸುವ ಕೃತಿಯಲ್ಲಿ ಪ್ರಸ್ತುತ ಧ್ಯೇಯಕ್ಕೆ ಗಮನ ಕೊಡುವುದು ಮುಖ್ಯವಾಗಿರುತ್ತದೆ. ಕವಿಹೃದಯವನ್ನು ಪೂರ್ಣ, ಆತನ ಕೃತಿಗೆ ಲೋಪವು ಬಾರದಂತೆ ಎಚ್ಚರಿಕೆ ತೆಗೆದುಕೊಂಡು ಮಾತುಗಳನ್ನು ಆರಿಸಿರುವ ಲೇಖಕರ ಜಾಣ್ಮೆಯು ಜಾಗರೂಕತೆಯು ಇದರಿಂದ ವ್ಯಕ್ತವಾಗುತ್ತದೆ. ಕಠಿಣ ಪದಗಳಿಗೆ ಕೊನೆಯಲ್ಲಿ ಅರ್ಥವನ್ನು ಕೊಟ್ಟಿದ್ದಾರೆ. ಕನ್ನಡ ಗ್ರೀಕ, ಇಂಗ್ಲೀಷ, ಸಂಸ್ಕೃತಿಗಳ ಸಂಗಮದಿಂದ ನಿರ್ಮಿತವಾದ ಹರಿಶ್ಚಂದ್ರ ನಾಟಕವೊಂದು 'ಶೈಲಿ'ಯ ರಂಗಣ್ಣನವರಿಂದ ಇತ್ತೀಚೆಗೆ ಎಂದಿದೆ. ಇದಕ್ಕೂ, ಹರಿಶ್ಚಂದ್ರ ರೂಪಕಕ್ಕೂ ಹೋಲಿಸಿದರೆ ರೂಪಕದಲ್ಲಿ ಕನ್ನಡ ಸಾಮಾನ್ಯ ಜನತೆಯ ಸಂಸ್ಕೃತಿಯು ಎದ್ದು ಕಾಣುತ್ತದೆ. ಒಟ್ಟಿನಲ್ಲಿ ಇವರ ಇತರ ಕೃತಿಗಳಿಗೂ ಈ ಕೃತಿಗೂ ಹೋಲಿಸಿ ನೋಡಿದರೆ ಕನ್ನಡ ಕೆಲಸಗಾರರಿಗೆ ಒಂದು ಪಾಠ ಸಿಕ್ಕಿದಂತಾಗಿದೆ. ಸರಳವಾದ ಗದ್ಯ ನಿರೂಪಣೆಯಲ್ಲಿ ಸಿದ್ಧ ಅನುಭವವನ್ನು ಅರ್ಜಿಸಿದರೆ ಅದೇ ಹೃದ್ಯ ಕಾವ್ಯ ಶೈಲಿಗೆ ಹಾದಿಯನ್ನು ಹಾಕಿ ಕೊಡುತ್ತದೆ. ಆಳವಾಗಿ ಮುಳುಗಿದಷ್ಟೂ ಅನುಭವವು ಅದುಹಂತವಾಗುತ್ತದೆ. ನಿಧಾನವಾಗಿ ನಿಂತು ಕಾಯ್ದು ಕೆಲಸ ಮಾಡಿದಷ್ಟೂ ನಿರ್ಧರಿಸಿದ ಗುರಿಯು ಗರಿಗಟ್ಟುತ್ತದೆ. ಇಷ್ಟೆಲ್ಲವನ್ನೂ ಇದರಲ್ಲಿ ಇವರು ಸಾಧಿಸಿರುವುದನ್ನು ತಪ್ಪದೆ ನಾವು ನೋಡುತ್ತೇವೆ.

ಇವರ ಚತುರ್ಥ ಗ್ರಂಥವು ನಾಲ್ವರು ದೇವಮಾತೆಯರು. ಇದು ದಳವಾಯಿ ಕೋಡಿಹಳ್ಳಿಯ ಲಲಿತಾಂಬ ಗ್ರಂಥಮಾಲೆಯ ಪ್ರಥಮ ಕುಸುಮ. ಈ ಕಿರುಹೊತ್ತಿಗೆಯು ನಾಲ್ಕು ಶಿವಶರಣರ ಕಥೆಯಾಗಿದೆ. ಅಕ್ಕಮಹಾದೇವಿ ಮೊದಲನೆಯ ಕಥೆಯು. ವಚನಕಾರ್ತಿಯರಲ್ಲಿ ಅಗ್ರಗಣ್ಯಳೂ, ಕನ್ನಡ ಕವಯಿತ್ರಿಯರಲ್ಲಿ ಮೊದಲನೆಯವಳೂ ಅಕ್ಕಮಹಾದೇವಿ. ಈ ಶಿವಶರಣೆಯ ಪುಣ್ಯಚರಿತ್ರೆಯ ವೈಭವವನ್ನು ಚೆನ್ನಬಸವಾಂಕನ ಮಹಾದೇವಿಯಕ್ಕನ

ಪುರಾಣದಲ್ಲಿ ಚೆನ್ನಾಗಿ ಕಾಣಬಹುದಾಗಿದೆ. ಈಕೆಯ ವಿಚಾರವನ್ನು ತಮ್ಮವೇ ಆದ ಬಗೆಯಲ್ಲಿ ಶ್ರೀ ನಂಜುಂಡಪ್ಪನವರು ಕೊಟ್ಟಿದ್ದಾರೆ. ಉಡುತಡಿಯಲ್ಲಿ ಜನಿಸಿ, ನಿರ್ಮಲ ಸುಮತಿ ದಂಪತಿಗಳಿಗೆ ಮಗಳಾಗಿ, ಶಿವಭಕ್ತಿಯ ಪರವು ಪುತ್ಥಳಿಯಾಗಿ ರಂಜಿಸಿ ತಂದೆ ತಾಯಿಗಳ ಮಾತಿಗೆ ಕಟ್ಟುಬಿದ್ದು ದೊರೆ ಕೌಶಿಕನನ್ನು ಮದುವೆಯಾಗಲು ನಿರ್ಧರಿಸಿದಳು. ಶಿವದೀಕ್ಷಾ ಸ್ವೀಕಾರಕ್ಕೆ ದೊರೆಯು ಸಮ್ಮತಿಸಲಿಲ್ಲವಾಗಿ, ಅರಸನ ಸಂಬಂಧ ಸಲ್ಲದೆಂದು ಬಿಡಿ ಮುಡಿಯಿಂದ ಮುಚ್ಚಿದ ಮೈಯಲ್ಲಿಯೇ ಅರಮನೆಯನ್ನು ಬಿಟ್ಟು ಹೊರಟು, ಕಲ್ಯಾಣದ ಅನುಭವಮಂಟಪಕ್ಕೆ ಸೇರಿ, ಅಲ್ಲಿ ಪ್ರಭುದೇವರ ಪರೀಕ್ಷೆಯಲ್ಲಿ ಜಯಪ್ರದಳಾಗಿ, ಪ್ರಭುವಿನಿಂದ ಉಪದೇಶಿತಳಾಗಿ, ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮಯ್ಯ, ಮಡಿವಾಳ ಮಾಚಿದೇವರಾದ ಶರಣರ ಗೋಷ್ಠಿಯಲ್ಲಿ ಕೆಲದಿನ ಕಾಲ ಕಳೆದು ಶ್ರೀಗಿರಿಗೆ ಪಯಣಬೆಳೆಸಿ ಅಲ್ಲಿ ಕದಳಿಯಲ್ಲಿ ಐಕ್ಯಳಾಗುತ್ತಾಳೆ. ಎರಡನೆಯದು ಬಜ್ಜಮಹಾದೇವಿ ಈಕೆಯ ವಿಚಾರವೈಭವವನ್ನು ಧನಗೂರು ಷಡಕ್ಷರ ವ.ಹಾಳವಿ ಯ ವೃಷಭೇಂದ್ರ ವಿಜಯದಲ್ಲಿ ಸಾಂಗೋಪಾಂಗವಾಗಿ ಸಾರವತ್ತಾಗಿ ಚಂಪೂರೂಪದಲ್ಲಿ ಕಾಣುತ್ತೇವೆ. ಬಿಜ್ಜಾವರ ಗ್ರಾಮದಲ್ಲಿ ಶಂಕರ ಭಾಗೀರಥಿ ಶೈವಬ್ರಾಹ್ಮಣ ದಂಪತಿಗಳಿಗೆ ಅಮ್ಮವ್ವೆ ಮಗಳಾಗಿ ಜೀವಿಸುತ್ತಾಳೆ. ಶಿವಭಜನೆ, ಶಿವಕಥೆ, ಶಿವಪೂಜೆ ಪರಾಯಣಳಾದ ಅಮ್ಮವ್ವೆಯು ಹರೆಯದವಳಾಗಲು ವಿವಾಹವಾಗಳು. ದುರದೃಷ್ಟವಶಾತ್ ಕೆಲವು ದಿವಸಗಳಲ್ಲಿಯೇ ಅಮ್ಮವ್ವೆಯು ಪತಿ ಮತ್ತು ತಂದೆ ತಾಯಿಗಳನ್ನು ಕಳೆದುಕೊಳ್ಳುತ್ತಾಳೆ. ದಿಕ್ಕುಗೆಟ್ಟರೂ ಧೈರ್ಯಗೆಡದೆ ಕಪಿಲೆ ಕಾಯಕವನ್ನು ಕೈಕೊಂಡು ನೂಲಿನಿಂದ ಬಂದ ಉತ್ಪತ್ತಿಯನ್ನು ಜಂಗಮ ದಾಸೋಹಕ್ಕೆ ವಿನಿಯೋಗ ಮಾಡಿ ಜೀವಿಸುತ್ತಾಳೆ. ಜಂಗಮನೊಬ್ಬನಿಂದ ಶಿವನಿಗೆ ಯಾರೂ ಇಲ್ಲದಿರುವ ವಿಚಾರವು ಈಕೆಗೆ ತಿಳಿದು ಆತನನ್ನು ಕಾಪಾಡಲು ತನ್ನಲ್ಲಿಗೆ ಆತನು ಕಂದನಾಗಿ ಬರುವಂತೆ ಪ್ರಾರ್ಥಿಸುತ್ತಾಳೆ. ಇದು ಕೈಗೂಡುತ್ತದೆ. ಭಕ್ತಿ ಪರೀಕ್ಷೆಯ ಕಾಲವು ಬಂದಿತೋ ಏನೋ! ಮಗುವಿಗೆ ಖಾಯಿಲೆ ಬರುತ್ತದೆ. ಔಷಧೋಪಚಾರವು ಫಲಕಾರಿಯಾಗದೆ ಮಗುವಿಗೆ ಬೇನೆಯು ಪ್ರಬಲವಾಗುತ್ತದೆ. ಆಗ ಅಮ್ಮವ್ವೆಯು ಸ್ವಯಂ ಶಿರಚ್ಛೇದನಕ್ಕೆ ಕೈಹಾಕುತ್ತಾಳೆ. ಆಗ ಪರಮೇಶ್ವರನು ಪ್ರತ್ಯಕ್ಷನಾಗಿ ಆಕೆಗೆ ವರವನ್ನು ಕೊಟ್ಟು ಅಂತರ್ಧಾನನಾಗುತ್ತಾನೆ. ಈ ಅಮ್ಮವ್ವೆಯೇ ಬಿಜ್ಜಮಹಾದೇವಿ. ಮೂರನೆಯದು ಕೋಳೂರು ಕೊಡಗೂಸು. ಈ ಕಥೆಯು

ಬಹು ಭಂಗಿಯನ್ನು ಭೀಮ ಕವಿಯ ಬಸವಪುರಾಣದಲ್ಲಿ ಕಾಣುತ್ತೇವೆ. ಶಿವದೇವ ಎಂಬ ಶಿವಭಕ್ತನಿಗೆ ಚನ್ನಕ್ಕ ಎಂಬ ಮಗಳಿರುತ್ತಾಳೆ. ಕಲ್ಲಿನಾಥ ಸ್ವಾಮಿಗೆ ಹಾಲನ್ನು ನೈವೇದ್ಯ ಮಾಡುವ ಪದ್ಧತಿಯನ್ನು ಈತನು ಇಟ್ಟು ಕೊಂಡಿರುತ್ತಾನೆ. ಈ ರೂಢಿಯು ಚೆನ್ನಕ್ಕನಿಗೆ ಕಲ್ಲಿನಾಥನಲ್ಲಿ ಭಕ್ತಿಯನ್ನು ಬೆಳೆಯಿಸುತ್ತದೆ. ತಂದೆತಾಯಿಗಳು ಪರಸ್ಥಳಕ್ಕೆ ಹೋಗಲಾಗಿ ತಂದೆಯ ಸರದಿಯು ಮಗಳಿಗೆ ಬರುತ್ತದೆ. ಅದನ್ನು ಮಗಳು ಪಾಲಿಸುತ್ತಾಳೆ. ದಿನವೂ ಚನ್ನಕ್ಕನು ತಂದ ಹಾಲನ್ನು ಕಲ್ಲಿನಾಥನು ಕುಡಿಯುತ್ತಾನೆ. ವಾಯಿದೆ ಮುಗಿದು ನೆರೆಯೂರಿನಿಂದ ಹಿಂದಿರುಗಿ ಬರುತ್ತಿದ್ದ ತಂದೆತಾಯಿ ಗಳು ದೇವಸ್ಥಾನದ ದಾರಿಯಲ್ಲಿ ಮಗಳಿಗೆ ಸಿಗುತ್ತಾರೆ. ಬಟ್ಟಲು ಬರಿದಾಗಿ ರುವುದನ್ನು ನೋಡಿದ ತಂದೆಗೆ ಕೋಪಬರುತ್ತದೆ. ನಿಜವನ್ನು ಹೇಳಿದ ಮಗಳ ವಿಷಯದಲ್ಲಿ ತಂದೆಗೆ ನಂಬಿಗೆ ಬರಲಿಲ್ಲ. ಮರುದಿನ ಮಗಳ ಜೊತೆಯಲ್ಲಿ ದೇವರ ಗುಡಿಗೆ ತಂದೆಯು ತೆರಳುತ್ತಾನೆ. ಅಂದು ಚನ್ನಕ್ಕನು ಎಷ್ಟು ಪ್ರಾರ್ಥಿಸಿದರೂ ಕಲ್ಲಿನಾಥನು ಹಾಲು ಕುಡಿಯಲಿಲ್ಲವಾಗಿ ತಂದೆಗೆ ಕೋಪಬಂದು ಮಗಳನ್ನು ಕತ್ತರಿಸಲು ಕೈಹಾಕುತ್ತಾನೆ. ಹೆದರಿದ ಹೆಣ್ಣು ಮಗಳು ಲಿಂಗವನ್ನು ಅಪ್ಪಿಕೊಳ್ಳುತ್ತಾಳೆ. ಕಲ್ಲಿನಾಥನು ಪ್ರತ್ಯಕ್ಷನಾಗು ತ್ತಾನೆ. ಹಾಲು ಕುಡಿದು ಆ ಮಗಳನ್ನು ತನ್ನಲ್ಲಿ ಸೇರಿಸಿಕೊಳ್ಳುತ್ತಾನೆ. ಮಗುವಿನ ತಲೆಗೂದಲು ಮಾತ್ರ ಹೊರಗೆ ಉಳಿಯುತ್ತದೆ. ಇದೇ ಕೋಳೂರು ಕೊಡಗೂಸು. ನಾಲ್ಕನೆಯದು ಕಾರಿಕಾಲಮ್ಮ. ಈಕೆಯ ಕಥಾವಾಹಿನಿಯು ಮಹಾಕವಿ ಹರಿಹರನ ರಗಳೆಗಳಲ್ಲಿ ಎದ್ದುಕಾಣುತ್ತದೆ. ಕಾರೈಕಾಲ್ ನಗರದಲ್ಲಿ ಮಾಣಿಕಶೆಟ್ಟಿಗೆ ಕಾರಿಕಾಲಮ್ಮೆಯು ಹೆಂಡತಿ. ಈಕೆಯು ಪತಿ ಸೇವಾಪರಾಯಣೆ. ಮಹಾಶಿವಭಕ್ತಿ ಸಂಪನ್ನೆ. ತಾನು ಮಾಡುವ ಕೆಲಸ ವೆಲ್ಲವೂ ಶಿವಾರಾಧನೆಯೆಂದೇ ಅರಿಯುತ್ತಾಳೆ. ಪರಮೇಶ್ವರನು ಜಂಗಮ ರೂಪದಿಂದ ಇಲ್ಲಿಗೆ ಬರುತ್ತಾನೆ. ಈ ಜಂಗಮನು ಎರಡು ಫಲಗಳನ್ನು ಶೆಟ್ಟಿಗೆ ಕೊಡುತ್ತಾನೆ. ಈತನು ಅವುಗಳನ್ನು ತನ್ನ ಹೆಂಡತಿಯ ಕೈಗೆ ಕೊಡಲು ಅವುಗಳನ್ನು ಮುಚ್ಚಿಟ್ಟು ಅಡುಗೆಯ ಕೆಲಸದಲ್ಲಿ ಅಮ್ಮೆಯು ನಿರತಳಾಗುತ್ತಾಳೆ. ಶೆಟ್ಟಿಯು ತನ್ನ ವ್ಯವಹಾರಕ್ಕೆ ಹೊರಟು ಹೋಗುತ್ತಾನೆ. ವೇಷಧಾರಿ ಜಂಗ ಮನು ಬಂದು ಅಮ್ಮೆಯ ಕೈಯಿಂದ ಊಟಕ್ಕೆ ಬಡಿಸಿಕೊಂಡು ಊಟ ಮಾಡ ತ್ತಾನೆ. ಅಷ್ಟರಲ್ಲಿ ಶೆಟ್ಟಿಯು ಬರುತ್ತಾನೆ. ಅರಿವಾಗದಂತೆಯೇ ಈ ಜಂಗಮನು ನುಸುಳಿ ಹೋಗುತ್ತಾನೆ. ಸಂದೇಹಗೊಂಡ ಶೆಟ್ಟಿಯು ಹೆಂಡತಿಯನ್ನು ಪರೀ

ಕ್ಷಿಸಿ ವಿಫಲನಾಗಿ, ತನ್ನ ಪತಿಯು ವಿಚಾರದಲ್ಲಿ ಒಳ್ಳೆಯ ಭಾವನೆಯನ್ನು ಬೆಳೆಯಿಕೊಳ್ಳುತ್ತಾನೆ. ತನ್ನ ಗುಪ್ತ ಶಿವಭಕ್ತಿಯು ಪ್ರಕಟವಾಗಲು ಆಕೆಯು ಅಲ್ಲಿಂದ ಹೊರಡುತ್ತಾಳೆ. ತುಂಬುಪ್ರಾಯದ ಚೆಲುವೆಯನ್ನು ತಿಳಿಗೇಡಿಗಳು ಹಿಂಬಾಲಿಸಿ ವಿಫಲರಾಗುತ್ತಾರೆ. ಭಕ್ತಳ ಕೋರಿಕೆಯಂತೆ ಶಿವನು ತಾಂಡವ ಲೀಲೆಯನ್ನು ಪ್ರದರ್ಶಿಸುತ್ತಾನೆ. ನಂಬಿ, ಚೇರಮಾದಿ ಪುರಾತನರಿಗೆ ಮೊದಲೇ ಕೈಲಾಸವನ್ನು ಕಾರಿಕಾಲಮ್ಮ ಸೇರುತ್ತಾಳೆ. ನಂಜುಂಡಪ್ಪನವರು ಈ ನಾಲ್ವರು ಶಿವಶರಣೆಯರ ವಿಚಾರವನ್ನು ಬಹು ಸರಳರೂಪದಲ್ಲಿ ಕೊಟ್ಟಿದ್ದಾರೆ. ಹಾ ಹಂಸ ರಗಳೆಯ ಕಥೆಗಳನ್ನು ಬರೆದು ಕೊಟ್ಟ ಕೈಯ್ಯೇ ಇದನ್ನೂ ಬರೆದು ಕೊಟ್ಟಿರುವುದು ಇನ್ನೂ ಸಂತೋಷದಾಯಕವಾದ ವಿಚಾರವೇ ಸರಿಯು. ಸ್ತ್ರೀಯರ ಮಹಾನುಭಾವತ್ವವನ್ನೂ, ಹಿರಿಮೆಯನ್ನೂ, ಕ್ರಾಂತಿ ಶಾಂತಿತ್ವ ವನ್ನೂ, ಭಕ್ತಿ ತೇಜಸ್ಸನ್ನೂ, ಹೃದಯಕಾತುರತೆಯನ್ನೂ ಇಲ್ಲಿ ಚೆನ್ನಾಗಿ ಕಾಣಬಹುವಾಗಿದೆ. ಸಂಪ್ರದಾಯ ಪ್ರಿಯರೂ, ಪ್ರಗತಿ ಪ್ರೇಮಿಗಳೂ ಇತ್ತ ಗಮನಿಸಿದರೆ ಮಹಿಳೆಯ ಮಹತ್ವವನ್ನು ಅರಿಯಬಹುದಾಗಿದೆ. ಜಗತ್ತಿನಲ್ಲಿ ಎಲ್ಲಕ್ಕಿಂತಲೂ ಹಿರಿದು: ಮಾತೃತ್ವ ಮಾತೃತ್ವದ ಆ ಸರಿಯಲ್ಲಿಯೇ ಸಕ ಲವೂ ಸೇರಿಗೊಂಡಿದೆ, ರೂಪಿನಲ್ಲಿ ಮಾತ್ರ ಮಾತೃತ್ವ ಇದ್ದರೆ ಸಾಲದು, ಕೃತಿಯಲ್ಲಿಯೂ ಇದ್ದರೆ ಮಾತ್ರ ಅದು ಅನರ್ಘವಾಗುತ್ತದೆ. ಅನುಕಂಪನ, ಸಹಾನುಭೂತಿ, ಹೃದಯಾನುಭೂತಿ—ಮಾತೃತ್ವದಲ್ಲಿ ಎದ್ದು ಕಾಣುತ್ತದೆ. ದೇವಮಾತೃತ್ವವು ಇದಕ್ಕಿಂತಲೂ ಹಿರಿದಾಗಿರುತ್ತದೆ. ರಾಕ್ಷಸಿಗುಣವನ್ನೇ ವಿಧ್ವಂಸ ಮಾಡುವ ದೇವಗಣವು ಒಡಮೂಡಿದರೆ ಮಾತ್ರ ಮಾನವರು ದೇವಮಾನವರಾಗುತ್ತಾರೆ. ಇದು ಇಲ್ಲಿ ಮೂರ್ತಿಗೊಂಡಿರುವುದನ್ನು ಈ ನಾಲ್ವರಲ್ಲಿ ಹೃದಯಾನುಕಂಪನ, ಭಕ್ತಿಪರವಶತೆ, ಪತಿಭಕ್ತಿರೂಪದ ಈಶ್ವರ ಭಕ್ತಿ— ಈ ನಾಲ್ವರ ಮೂಲಕ ದೇವಮಾತೃತ್ವವನ್ನು ಲೇಖಕರು ನಮಗೆ ತೋರಿಸಿದ್ದಾರೆ. ಈ ಕೃತಿಯು ಕದಳಿವಾಕವಾಗಿದೆ. ಮಹಿಳೆಯರೂ, ಮಹಿ ಳಾಸಕ್ತರೂ ಅತ್ಯವಶ್ಯವಾಗಿ ನೋಡುವಂತಹ ಕೃತಿಯಾಗಿದೆ.

ಬಿ. ನಂಜುಂಡಪ್ಪನವರ ಬರಹದ ಗೊತ್ತುಗುರಿಯು ಗೂಢ ನೀತಿ ನಿರಿಗೆ ಯಾಗಿರುತ್ತದೆ. ಸಾಧಾರಣೆ, ಪರಂಪರೆಯ ಸಂಗವುವನ್ನೂ ಅಲ್ಲಲ್ಲಿ ಕಾಣು ತ್ತೇವೆ. ಕವನ ಸಂಗ್ರಹ, ಭಕ್ತಿ ಗೀತೆಗಳ ಸಂಗ್ರಹ ಮಾಡಿದ್ದಾರೆ. ಇನ್ನೂ ಪ್ರಕಟವಾಗಿಲ್ಲ. ಗದ್ಯ ಪ್ರಭುಲಿಂಗಲೀಲೆಯನ್ನು ಅಚ್ಚಿಗೆ ಸಿದ್ಧಪಡಿಸಿದ್ದಾರೆ.

ವೀರಶೈವ ಸಾಹಿತ್ಯದಲ್ಲಿ ಚಾಮರಸನ ಪ್ರಭುಲಿಂಗ ಲೀಲೆಯು ಒಂದು ಉತ್ತಮ ಕಾವ್ಯವು. ಇದರಲ್ಲಿ ಮಾಯಾ ಕೋಲಾಹಲ ಶೂನ್ಯ ಸಿಂಹಾಸನಾಧ್ಯಕ್ಷ ಅಲ್ಲಮಪ್ರಭುವಿನ ಪಾವನ ಚರಿತ್ರೆಯು ನಿರೂಪಿತವಾಗಿದೆ. ನಾಯಕನ ಉದಾತ್ತತೆಯು ಚೆನ್ನಾಗಿ ವ್ಯಕ್ತವಾಗಿದೆ. ಭಾರತೀಯರಿಗೆ ಪ್ರಿಯಕರವಾದ ಧಾರ್ಮಿಕ ವಿಷಯವನ್ನು ಕವಿಯು ತೋರಿಸುವ ಕಲಾವಂತಿಕೆಯಿಂದ ಕಾವ್ಯದ ಸೊಬಗು ಸ್ಪಷ್ಟವಾಗಿದೆ. ಪ್ರೌಢದೇವರಾಯನ ಕಾಲದ ಆಸ್ಥಾನ ಕವಿಯು ಚಾಮರಸನು. ಅಲ್ಲಮಪ್ರಭುವಿನ ಚರಿತ್ರೆಯನ್ನು ತಿಳಿಸುವ ಈತನ ವಿಶಿಷ್ಟ ತೆರದ ಸುಂದರ ಶೈಲಿಯಿಂದ ವೀರಶೈವ ಸಿದ್ಧಾಂತದ ಮತ್ತು ಶಿವ ಶರಣರ ಸಂದೇಶದ ಸೂಕ್ಷ್ಮವಾದ, ರುಚಿಕರವಾದ ತತ್ವಗಳು ಹಾಸುಹೊಕ್ಕಾಗಿ ಬೆರೆತು ಅಸಾಧಾರಣ ಸೌಂದರ್ಯವು ಸೂರೆಗೊಂಡಿದೆ. ಈ ಷಟ್ಪದಿಯ ಕಾವ್ಯದಲ್ಲಿ ಪ್ರತಿಯೊಂದು ಗತಿಯ ಸವಿಸ್ತಾರವಾದ ವಿಷಯನಿರೂಪಣೆಗೆ ಸೂಚ್ಯವಾಗಿ ಶಿವಶರಣರ ವಚನಗಳನ್ನು ಐತಿಹಾಸಿಕವಾಗಿ ಪ್ರಭಾವಯುತವಾಗಿ ಚಾಮರಸ ಕವಿಯು ಬೆಳಗಿಸಿದ್ದಾನೆ. ಈ ಕವಿಕೃತಿಗೆ ಕಿಂಚಿತ್ತು ಲೋಪಬಾರದಂತೆ ಆಧರಿಸಿಕೊಂಡು ನಂಜುಂಡಪ್ಪನವರು ಬರೆದಿದ್ದಾರೆ. ಈಗಾಗಲೇ ಸಂಸ್ಕೃತ ಪ್ರಭುಲಿಂಗ ಲೀಲೆಯನ್ನು ಆಧರಿಸಿಕೊಂಡು ಬಿಳಿಯಾಂಗಡಿಯವರು ಗದ್ಯ ಪ್ರಭುಲಿಂಗ ಲೀಲೆಯನ್ನು ಕೊಟ್ಟಿದ್ದಾರೆ. ಇದಕ್ಕಿಂತಲೂ ನಂಜುಂಡಪ್ಪನವರ ಕೃತಿ ಹೆಚ್ಚಿಗೆ ಪ್ರಭಾವವನ್ನು ಬೀರಬಲ್ಲದು. ಚಾಮರಸನ ಪ್ರಭುಲಿಂಗ ಲೀಲೆಯೂ ಇತರ ಎಲ್ಲ ಭಾಷೆಗಳ ಪ್ರಭುಲಿಂಗ ಲೀಲೆಗೆ ಮೂಲವಾಗಿದೆ.

# ಶಿವ-ಸೃಷ್ಟಿ!



೧

ಭೂಮಿ-ಬಾನು-ಬಯಲಿಗೆಲ್ಲ
ಶಿವನೆ ಸೂತ್ರಧಾರ;
ಹುಟ್ಟು-ಸಾವು-ದೈವ-ಲೀಲೆ
ಗೆಲ್ಲ ಅವನೆ ದಾರಿ!

೨

ಸೂರ್ಯ-ಚಂದ್ರ-ಕೋಟಿ ಚಿಕ್ಕೆ
ಶಿವನ ಕೃಪೆಯ ಕೋರಿ;
ಹಗಲು-ರಾತ್ರಿ ಬೆಳಗುತಿಹವೊ
ಅನಂತತೆಯ ಸೇರಿ!

೩

ಭೋಗಿಯಾದರೇನೊ, ಮನುಜ
ಒನ್ನೆ ಬಹುದು ದಾರಿ;
ನಮ್ಮ ಆಶೆ ಚೀರುತಿಹವೊ
ಕೊನೆಗೆ ಮಣ್ಣು ಸೇರಿ!

೪

ಅತ್ತಲಿತ್ತ ಸುಳಿಯುತಿಹನೊ
ಗುಪ್ತಪಾದಚಾರಿ;
ನಮಗೆ ದೃಷ್ಟಿ ಇಲ್ಲೊ, ನೋಡೆ
ಅವನೊ ವೇಷಧಾರಿ!

೫

ಭೂಮಿ-ಬಾನು-ಬಯಲಿಗೆಲ್ಲ
ಶಿವನೆ ಸೂತ್ರಧಾರ;
ಹುಟ್ಟು-ಸಾವು-ದೈವ-ಲೀಲೆ
ಗೆಲ್ಲ ಅವನೆ ದಾರಿ!

—ಬಿ. ಬಿ. ಹಿಂಗಮಿರೆ,
ರಾಜಾಪುರ (ಕೃಷ್ಣಾತೀರ)

ಕವೂ ಅಲ್ಲ. ಉಚ್ಚ ಶಿಕ್ಷಣಪಡೆದ ಪದವೀಧರರಿಗಿಂತಲೂ ಓದುಬರೆಹಬಾರದ ಎಷ್ಟೋ ಭಕ್ತರು ಹೆಚ್ಚು ಬುದ್ಧಿವಂತರಿದ್ದುದು ಇತಿಹಾಸದಿಂದ ತಿಳಿಯುತ್ತದೆ. ರಾಮಕೃಷ್ಣ ಪರಮಹಂಸರು ಶಿಕ್ಷಣ ಪಡೆದವರಿಲ್ಲದಿದ್ದರೂ ಅವರ ಬುದ್ಧಿಯು ಒಳ್ಳೇ ಶಕ್ತಿಸಂಪನ್ನವಾಗಿತ್ತು. ಜ್ಞಾನವನ್ನು ಅಭಿವ್ಯಕ್ತ ಮಾಡುವ ಶಕ್ತಿಯು ರಾಮಕೃಷ್ಣರಷ್ಟು ನಾ ನೀ ಅಂಬುವ ಪಂಡಿತರಲ್ಲಿದ್ದಿಲ್ಲ. ಎಲ್ಲ ಅಭಿವ್ಯಕ್ತಿಯ ಉಗಮಸ್ಥಾನವಾದ ಶಿವಶಕ್ತಿಯ ಅನುಗ್ರಹ ಸಂಪಾದಿಸಿದ ಶರಣನು ಶ್ರೇಷ್ಠ ಶಾಸ್ತ್ರಿಗಳಿಗಿಂತಲೂ ಜ್ಞಾನವನ್ನು, ಆನಂದವನ್ನು, ಅರುಹನ್ನು ಪೂರ್ಣ ರೀತಿಯಲ್ಲಿ ಅಭಿವ್ಯಕ್ತಗೊಳಿಸಬಲ್ಲನು. ಶರಣರ ವಚನಗಳೇ ಇದಕ್ಕೆ ಸಾಕ್ಷಿ.

ಸಾಧಕನಿಗೆ ತನ್ನ ಅನುಭವವನ್ನು ಅಭಿವ್ಯಕ್ತಗೊಳಿಸುವ ಶಕ್ತಿಯು ಸಾಧನದಿಂದಲೇ ಬರುತ್ತದೆ. ತರ್ಕಶಾಸ್ತ್ರ ಕಲಿಯದಿದ್ದ ಎಷ್ಟೋ ಶರಣರು ಅಮರ ವಚನಗಳನ್ನು ಸುಂದರ ಶೈಲಿಯಲ್ಲಿ ಬರೆದಿರುವರು.

ಅನೇಕ ಭಾಷೆಗಳನ್ನು ಕಲಿಯುವದರಿಂದಲೇ ಸಾಧಕನಿಗೆ ಸಿದ್ಧಿಯಾಗುವದಿಲ್ಲ. ಭಾಷೆಗಳಲ್ಲಿ ಹೆಚ್ಚು ಕನಿಷ್ಠ ಎಂಬ ಭೇದ ತರವಲ್ಲ. ಜಗತ್ತಿನ ಎಲ್ಲ ಭಾಷೆಗಳಲ್ಲಿಯೂ ಭಕ್ತರು ತಮ್ಮ ದಿವ್ಯಾನುಭವಗಳನ್ನು ವ್ಯಕ್ತಮಾಡಿರುವರು. ಕನ್ನಡ ಭಾಷೆಯಲ್ಲಿ ಶರಣರು ದಿವ್ಯಾನುಭವದ, ಲಿಂಗಾನುಭವದ ಆಧ್ಯಾತ್ಮಿಕ ತತ್ವಗಳನ್ನು ಸುಲಲಿತವಾದ ಶೈಲಿಯಲ್ಲಿ ವ್ಯಕ್ತಮಾಡಿರುವರು. ಶರಣರಿಂದ ಕನ್ನಡ ಸಾಹಿತ್ಯವು ಸುಂದರವೂ, ಭವ್ಯವೂ ಆಯಿತು. ಭಾರತದ, ಕನ್ನಡನಾಡಿನ, ತಮಿಳುನಾಡಿನ ಲಲಿತಕಲೆ, ಚಿತ್ರ, ಸಂಗೀತ, ಸಾಹಿತ್ಯ, ತತ್ವಗಳು ಆಧ್ಯಾತ್ಮಿಕ ಸಾಧನದಿಂದಲೇ ಶ್ರೇಷ್ಠಸ್ಥಾನವನ್ನು ಪಡೆದಿರುತ್ತವೆ.

ಸಾಧನೆಯಿಂದ ಮಾನಸಿಕ ವಿಕಾಸವಾಗುತ್ತದೆ. ಧ್ಯಾನ, ಧಾರಣ, ಸಮಾಧಿಗಳಿಂದ ಮನಸ್ಸು ಶುದ್ಧವಾಗುತ್ತದೆ. ಕೇಂದ್ರೀಕರಣ ಶಕ್ತಿಯು ಬೆಳೆಯುತ್ತದೆ. ಬುದ್ಧಿಯು ಶುದ್ಧವಾಗುತ್ತದೆ. ಶುದ್ಧ ಬುದ್ಧಿಯಿಂದ ಅರ್ಥಾತ್ ವಿಜ್ಞಾನದಿಂದ ಆನಂದವು ಸ್ಫುರಿಸುತ್ತದೆ. ಸಾಧನೆಯಿಂದ ಶಾರೀರಿಕ ವಿಕಾಸ, ಬೌದ್ಧಿಕ ವಿಕಾಸ, ಹೃದಯದ ವಿಕಾಸಗಳು ಸಾಧ್ಯವಾಗುತ್ತವೆ.

ಸಾಧಕನು ದೇಹದ ತಮೋಗುಣಗಳನ್ನು ನಿವಾರಿಸಲಿಕ್ಕೆಬೇಕು.. ಸಾಧನದಿಂದ ಶರೀರದ ತಮಸ್ಸು ಹೋಗಲಿಕ್ಕೆಬೇಕು. ಶರೀರದ ತಮಸ್ಸು ಶಮದಲ್ಲಿ ಪರಿವರ್ತನವಾಗಲಿಕ್ಕೆಬೇಕು. ದೇಹದ ಅಂಧತಮಸ್ಸಿನಿಂದಲೇ ಅನೇಕ ವ್ಯಾಧಿಗಳೂ ಆಧಿಗಳೂ ಹುಟ್ಟುತ್ತವೆ. ದೇಹದ ಭಾನು ಹೋಗಬೇಕಾದರೆ

ಆತ್ಮದ ಅರಿವು ಜಾಗೃತವಾಗಲಿಕ್ಕೆಬೇಕು. ಶುದ್ಧ ಅರಿವು ದೇಹದ ವ್ಯಾಧಿಗಳಿಗೆ ಅತೀತವಾಗಿರುವದು. ಶುದ್ಧ ಅರುಹು ತಾನೆಂದು ನಿಶ್ಚಯ ಜ್ಞಾನವಾದೊಡನೆ ಆದರ ಪ್ರಭಾವದಿಂದ ರೋಗ ಪೀಡತನು ನಾನಲ್ಲ ಎಂಬ ತಿಳಿವು ಉದಯವಾಗುವದು. ಇದರಿಂದ ವ್ಯಾಧಿಗಳನ್ನು ನಿವಾರಿಸಬಹುದು.

ಶಿವಶಕ್ತಿಯ ದಿವ್ಯಾನುಗ್ರಹದಿಂದ ಎಲ್ಲ ವ್ಯಾಧಿಗಳೂ ಓಡಿ ಹೋಗುತ್ತವೆ. ಶಿವಾದ್ವೈತ ಭಾನುವಿನಿಂದಲೂ ದೇಹದ ತಮಸ್ಸು ಹೋಗಬಲ್ಲುದು. ದೇಹದಲ್ಲಿಯ ಅಭದ್ರ ಪರಿಸ್ಥಿತಿಯು ಧ್ಯಾನದಿಂದ ನಿವಾರಣೆಯಾಗಬಲ್ಲುದು. ದೇಹಾತ್ಮಮತಿಯಿಂದ ವ್ಯಾಧಿಗಳು ತೀಕ್ಷ್ಣ ಸ್ವರೂಪ ಧರಿಸುತ್ತವೆ. ಮನದಲ್ಲಿ ಶೂನ್ಯ, ಶಾಂತಿ, ಸ್ತಬ್ಧತೆಯು ಸ್ಥಾಪಿತವಾಗುವದು ಧ್ಯಾನದಿಂದಲೇ. ಶಾಂತಿಯಿಲ್ಲದಿದ್ದರೆ ಆಧ್ಯಾತ್ಮ ಸಾಧನೆಯು ಪ್ರಗತಿಯನ್ನು ಹೊಂದಲಾರದು. ಜಗದಣ್ಣ ಬಸವಣ್ಣನು ಶೂನ್ಯಸಿಂಹಾಸನವನ್ನು ಅಂತರಂಗದಲ್ಲಿ ಸ್ಥಾಪಿಸಿದನು. ಅದರ ಮೇಲೆ ಪ್ರಭುಲಿಂಗನು ವಿರಾಜಮಾನವಾದನು. ಪ್ರಭುವು ಲೀಲಾಮಾತ್ರದಿಂದ ಆಧಿವ್ಯಾಧಿಗಳನ್ನು ಕಳೆಯಬಲ್ಲನು. ಮನಸ್ಸು ಶೂನ್ಯವಾಗುವದು ಪ್ರಥಮ ಕೆಲಸ. ಕೂಡಲೇ ಪ್ರಭುಶಕ್ತಿಯ ಅವತಾರವಾಗಲಿಕ್ಕೆಬೇಕು. ಇಲ್ಲದಿದ್ದರೆ ಯಾಂತ್ರಿಕ ರೀತಿಯಿಂದ ಮನವು ಕಾರ್ಯ ಪ್ರಾರಂಭಿಸಿ ಶಾಂತಿಯನ್ನು ಶೂನ್ಯವನ್ನು ಕದಡಿಸಿ ಬಿಡುತ್ತದೆ. ಶೂನ್ಯಸಿಂಹಾಸನ ಸ್ಥಾಪನೆಯು ಹೃದಯದಲ್ಲಿ, ಸಹಸ್ರದಲಕಮಲದಲ್ಲಿ,, ಶೂನ್ಯಚಕ್ರದಲ್ಲಿ ನಡೆಯುವದು. ಅಲ್ಲಿ ಪ್ರಭುಶಕ್ತಿಯ ಅವತಾರವಾದೊಡನೆ ಆಧಿವ್ಯಾಧಿಗಳೂ ಹಾರಿ ಹೋಗುತ್ತವೆ. ಆಗ ದೇಹದ ತಮಸ್ಸು ಶಮಭಾವದಲ್ಲಿ, ಜ್ಯೋತಿಯಲ್ಲಿ ಪರಿವರ್ತನವಾಗುವದು. ಶ್ರದ್ಧೆ, ಅಂತರಂಗದ ಸಮತೆ, ಶಾಂತಿ ಇವುಗಳಿಂದಲೇ ಎಲ್ಲ ರೋಗಗಳನ್ನು ಕಳೆಯಬಹುದು.

ಸಾಧಕನು ಯುಕ್ತಾಹಾರ, ವಿಹಾರ, ನಿದ್ರೆ, ಆಭೋಗ, ಪ್ರಾಣಾಯಾಮ, ಆಸನ ಮುಂತಾದ ಸಾಧನಗಳಿಂದ ರೋಗಗಳನ್ನು ಓಡಿಸಬಹುದು. ಆದರೆ ಆಧ್ಯಾತ್ಮಿಕ ಭಾವವಿಲ್ಲದೇ ಕೇವಲ ಸಾಮಾನ್ಯ ಜೀವನದಿಂದ, ಅಥವಾ ಮತಭ್ರಾಂತಿಯಿಂದ ಇಲ್ಲವೆ ಕೇವಲ ಧಾರ್ಮಿಕ ನಂಬುಗೆಯಿಂದ ಆಧಿ ವ್ಯಾಧಿಗಳನ್ನು ನಿವಾರಿಸಲಾರನು. ಆಧ್ಯಾತ್ಮಿಕ ಜೀವನವೇ ನಿಜವಾದ ಶಾಂತಿಪೂರ್ಣ ಜೀವನವು.

— — —

# ಓಂ ನಮಃ ಶಿವಾಯ

(ಬರೆದವರುः- ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ)

ಇದು ಆರು ಅಕ್ಷರಗಳ ಮಹಾಮಂತ್ರವಿದೆ. ಮೊದಲು 'ಓಂ'ಕಾರದ ಬಗೆಗೆ ವಿಚಾರಿಸುವಾ. ತೋಂಟದಾರ್ಯರು ಹೇಳುವದೇನೆಂದರೆ— "ಆ ನಿರಂಜನ ಪರಶಿವನು ನೆನೆದ ನೆನಹವೇ ನಿರಂಜನೋಂಕಾರ ಶಕ್ತಿ. ಆ ನಿರಂಜನೋಂಕಾರ ಶಕ್ತಿಯು ನೆನಹು ಮಾತ್ರದಿಂದ ವಾಚ್ಯ ಪ್ರಣವು ಸ್ವರೂಪವಾದ ಶೂನ್ಯ ಲಿಂಗವು ಪುಟ್ಟಿತು. ಆ ಶೂನ್ಯಲಿಂಗಕ್ಕಂಗವಾಗಿರುವಂಥಾದ್ದೇ ಮಹಾ ಜ್ಞಾನಚಿತ್ತು. ಮಹಾಜ್ಞಾನ ಚಿತ್ತುವಿನ ನೆನಹು ಮಾತ್ರದಿಂದ ಕಲಾಪ್ರಣವ ಸ್ವರೂಪವಾದ ನಿಃಕಲ ಬ್ರಹ್ಮವು ಹುಟ್ಟಿತ್ತು. ಆ ನಿಃಕಲ ಬ್ರಹ್ಮಕ್ಕಂಗವಾಗಿರುವಂಥಾದ್ದೇ ಜ್ಞಾನ ಚಿತ್ತು. ಆ ಚಿತ್ತಿನ ಚಿಜ್ಞಾನವೇ ಬಕಾರ, ಚಿದ್ಬಿಂದುವೇ 'ಸಕಾರ' ಚಿತ್ಕಳೆಯೇ 'ವಕಾರ.' ಈ ಚಿನ್ನಾದ ಚಿದ್ಬಿಂದು ಚಿತ್ಕಳೆ ಮೂಲ ಚಿತ್ತೆಂಬ ಚತುರ್ವಿಧವು ಗಟ್ಟಿಗೊಂಡು ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತು ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ.

"ನೀವು ನಿಮ್ಮ ಸ್ವಲೀಲೆಯಿಂದ ಜಗದ ವೈಭವಂಗಳನ್ನು ನಟಿಸಬೇಕೆಂದು ನಿಮ್ಮಲ್ಲಿ ನೆನಹುದೋರಲು ಆ ನೆನಹು ನಿರ್ಧರಿಸಿ ಚಿತ್ತೆನಿಸಿತ್ತು. ಆ ಚಿತ್ತಿನಿಂದ ಚಿನ್ನಾದ ಚಿದ್ಬಿಂದು ಚಿತ್ಕಳೆಗಳೊದಗಿದವು. ಆ ಚಿನ್ನಾದ ಚಿದ್ಬಿಂದು ಚಿತ್ಕಳೆ ಆ ಮೂಲ ಚಿತ್ತು ಸಹವಾಗಿ ಗಟ್ಟಿಗೊಂಡು ಅಖಂಡ ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತ್ತು. ಆ ಮಹಾಲಿಂಗ ಪಂಚಮುಖವನ್ನೈದಿ ಸದಾಶಿವನೆನಿಸಿತ್ತು. ಆ ಸದಾ ಶಿವನಿಂದ ಬ್ರಹ್ಮ ವಿಷ್ಣು ರುದ್ರರೆಂಬ ತ್ರೈಮೂರ್ತಿಗಳುದಿಸಿದರು. ಆ ತ್ರೈಮೂರ್ತಿಗಳಿಂದ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಲೋಕಂಗಳು ಜನಿಸಿದವು. ಇವುಗಳ ಮಧ್ಯದಲ್ಲಿ ಸಚರಾಚರ ಹೆಣ್ಣು ಗಂಡು ನಾಮ ರೂಪ ಕ್ರಿಯಾದಿ ಸಕಲ ವಿಸ್ತಾರವಾಯಿತ್ತು. ಇಂತಿವೆಲ್ಲವು ನಿಮ್ಮ ನೆನಹು ಮಾತ್ರದಿಂದಾದವ್ಗೆ ಅಖಂಡೇಶ್ವರ" ಎಂದು ಷಣ್ಮುಖ ಸ್ವಾಮಿಗಳು ಹೇಳಿದ್ದಾರೆ.

ಈ ಮೇಲಿನ ಎರಡು ವಚನಗಳು " ನಿತ್ಯ, ನಿರಂಜನ, ನಿರಾಕಾರ, ನಿರ್ವಿಕಲ್ಪ ಪರಶಿವನು ತನ್ನ ತಾನರಿಯದೆ ಇದ್ದನು. ಅವನಿಗೆ ಜಗದ ವೈಭವದ ಲೀಲೆಗಳನ್ನು ನಟಿಸಿ ನೋಡಬೇಕೆಂದು ನೆನಹು ಹುಟ್ಟಿತು. ಆಗ ಒಂದು ತರದ ಧ್ವನಿಯು ಹೊರಟಿತು. ಆ ಧ್ವನಿಯೇ ಓಂಕಾರವಾಯಿತು. ಆಗ ನಿರಂಜನ ಓಂಕಾರಶಕ್ತಿ ಹುಟ್ಟಿತು. ಈ ನಿರಂಜನ ಓಂಕಾರ ಶಕ್ತಿಯಿಂದ ವಾಚ್ಯ ಪ್ರಣವ ಸ್ವರೂಪವಾದ ಶೂನ್ಯಲಿಂಗ ಹುಟ್ಟಿತು. ಇದೇ ಈಗಿನ ನಮ್ಮ ಓಂಕಾರ. ಇದರಿಂದ ಮುಂದೆ ಮಹಾಜ್ಞಾನ ಚಿತ್ತು, ಇದರಿಂದ ಜ್ಞಾನ ಚಿತ್ತು ಹೀಗೆ ಮುಂತಾಗಿ ಜಗವು ಬ್ರಹ್ಮಾಂಡಗಳು ಬಂದವೆಂದು ಇದರಲ್ಲಿ ವರ್ಣಿಸಿದ್ದಾರೆ.

ಈ ಓಂಕಾರವು ಪರ ಶಿವನ ನಾದ ಸ್ವರೂಪವನ್ನು ಬೋಧಿಸುವದು. ಆದಕ್ಕೆ ಪರಶಿವನ ಓಂಕಾರ ರೂಪವನ್ನು ನಿರಾಕಾರದಿಂದ ಸಾಕಾರಕ್ಕೆ ಪರಶಿವನು ಮೊದಲು ಈ ಓಂಕಾರ ರೂಪದಿಂದ ನಾದ ಸ್ವರೂಪವಾಗಿ ಬಂದನು. ಆದಕ್ಕೆ ಪರಶಿವನ ಸಾಕಾರ ಪೂಜೆ, ಸಾಕಾರ ನೆನಹು, ಧ್ಯಾನ, ಸಾಕಾರ ಜಪ ಮೊದಲಾದವುಗಳೆಲ್ಲ ಈ 'ಓಂ' ಕಾರವೇ ಸರಿ. ಇದನ್ನೇ ಪುಷ್ಪದಂತನೆಂಬ ಮಹಾಶಿವಭಕ್ತನು ಸಂಸ್ಕೃತದಲ್ಲಿ ಹೇಳಿದ್ದನ್ನೇ ನಾನು ಕನ್ನಡಿಸಿದ್ದೇನೆ.

ಶೂಲಿ– 'ಓಂ' ಕಾರ ಸ್ವರೂಪನು । ಮೂರು ವೇದವ ಮೂರು ಶಾಸ್ತ್ರವ।
ಮೂರು ಲೋಕವ ಮೂರು ದೇವರ ಮೂರು ಗುಣಗಳನು ॥
ಮೂರು ಅಕ್ಷರ ಬೋಧೆ ಕೊಡುತಿವೆ । ಮೂರು ನಿನ್ನಯ ನಾದ ಶಕ್ತಿಯು
ಸಾರುತಿರುವವು ಶರಣರಕ್ಷಕ ವರದ ಶಂಕರನೆ ॥

ಈ ಓಂಕಾರವು ಪರಶಿವನಿಂದ ಎಲ್ಲಕ್ಕೂ ಮೊದಲು ಬಂದದ್ದು. ಅದು ಜಗತ್ತಿನ ಪ್ರತಿಯೊಂದು ಭಾಷೆಯಲ್ಲಿ ಪ್ರತಿಯೊಂದು ಜನಾಂಗದಲ್ಲಿ ಇರುವದು ಕಂಡು ಬರುತ್ತದೆ. ಹಿಂದು, ಮುಸಲ್ಮಾನ, ಕ್ರಿಸ್ತ, ಹಿಬ್ರು ಮೊದಲಾದವರಲ್ಲಿ ಇರುವದು. ಆದಕ್ಕೆ ಎಲ್ಲರೂ ಈ ಓಂಕಾರಕ್ಕೆ ಒಂದಿಲ್ಲೊಂದು ತರದಿಂದ ಮನ್ನಣೆ ಕೊಡುವದು ಕಂಡುಬರುತ್ತದೆ. ಕ್ರಿಶ್ಚಿಯನ್ನರು ತಮ್ಮ ಪ್ರಾರ್ಥನೆಗಳನ್ನು ಅಮೆನ (*Amen*) ಎಂದು ಹೇಳಿ ಮುಗಿಸುವರು. ಮುಸಲ್ಮಾನರು ತಮ್ಮ ಪ್ರಾರ್ಥನೆಯ ಕೊನೆಗೆ ಅಹಮೀನ (*Ahmeen*) ಎಂದು ಮುಗಿಸುವರು. ಅಮಿನ ಇದು ಮಾತುಗಳೆಲ್ಲ ನಿಲ್ಲುವ ಸ್ಥಿತಿಯನ್ನು ಹೇಳುವದು. ಇದು ಓಂಕಾರದ ಹೊರತು ಬೇರೆ ಅಲ್ಲ. ಅ. ಉ. ಮ. ಕೂಡಿ ಓಂಕಾರವಾಗುವದು. ಅ–ಮ–ನ ಕೂಡಿ ಅಮಿನ ಆಗಿರುವದು. ಬಹುತರ

ಎರಡು ಶಬ್ದಗಳ ಉಚ್ಚಾರದಲ್ಲಿ ಬಹಳ ಅಂತರವಿಲ್ಲ. ಓಂಕಾರವು ಮಾತು ಗಳಿಗತೀತ ಸ್ಥಿತಿಯನ್ನು ಹೇಳುವದು. ವೇದ ಆಗಮಗಳ ಸಾರವೇ ಈ ಓಂಕಾರವಾಗಿರುವದು. ಇದೇ ನಿಜವಾದ ದೇವರ ಹೆಸರು. ಈ ಓಂಕಾರವು ಸದಾ ನಿನ್ನೊಳಗಿಂದಲೇ ಬರುವದು ಸಕಲ ಪ್ರಾಣಿಗಳೊಳಗಿಂದ ಬರುವದು. ಇದನ್ನು ಹೊರಗಿನವರಾರೂ ಕಲಿಸುವದಿಲ್ಲ. ಇದು ಸೃಷ್ಟಿಯ ಸ್ವಾಭಾವಿಕ ಧ್ವನಿಯಾಗಿರುತ್ತದೆ.

ಓಂಕಾರವು ಕೂಸು ಜನಿಸುವಾಗ ಪ್ರಾರಂಭವಾಗುವದು. ಕೂಸಿನ ಅಳುವಿಕೆಯು ಓಂ-ಓಂ-ಓಂ ಓಂ-ಓಂ-ಓಂ ಎಂದು ಪ್ರಾರಂಭವಾಗುವದು. ಆ ಅಂ ಆ ಅಂ ಅಂ ಎಂದು ಹೇಗೆ ಅತ್ತರೂ ಕೂಡ ಈ ಪವಿತ್ರ ಓಂಕಾರದ ಸ್ಮರಣೆಯನ್ನೇ ತಂದು ಕೊಡುವದು. ಅ ಉ-ಮ ಗಳು ಅದರಲ್ಲಿಯ ಮೂರು ಅಕ್ಷರಗಳು. ಅ-ಉ ಕೂಡಿದರೆ ಓ ಆಗುವದು. ಪ್ರತಿಯೊಬ್ಬ ಮಾನವನು ಇದನ್ನು ಒಂದಿಲ್ಲೊಂದು ರೀತಿಯಿಂದ ತಿಳಿದೂ ತಿಳಿಯದೆಯೂ ಉಪಯೋಗಿಸುತ್ತಿರುವದು ಕಂಡುಬರುವದು. ಪ್ರತಿಯೊಂದು ಭಾಷೆಯಲ್ಲಿಯು ಕೆಲವು ಕೃತಿಗಳು ಅಂದರೆ ಕೂಗು ಹೊಡೆಯುವದು (ಓಹೊ) ಬಳೋರಿ ಹೊಡೆಯುವದು ( ಓ ಓ ) ಹೌದು ಎನ್ನುವುದಕ್ಕೆ ( ಹೂಂ ) ಅಲ್ಲ ಎನ್ನುವದಕ್ಕೆ ( ಹೂಂ ಹು ) ಕರೆಯುವದರ ದಂಡೆಯು ಸ್ವರ ( ಓ ) ಓ ಕೊಡುವದು. ( ಓ ) ಬೇನೆ ಬಂದಾಗ ನೆರಳುವದು (ಹುಂ, ಅಂಹ, ಓಂ ) ಅಳುವದು. ( ಅ—ಅಂ ಅಂ ) ಈ ಪ್ರಕಾರ ಸಕಲ ಭಾಷೆಗಳಲ್ಲಿ ಸಕಲ ಜನಾಂಗಗಳಲ್ಲಿ ಇವೆಲ್ಲ ಒಂದೇ ಇರುವದು ಕಂಡುಬರುತ್ತದೆ. ಇವೆಲ್ಲ ಓಂಕಾರದ ಹೋಲಿಕೆಯ ಅಕ್ಷರಗಳೇ ಇರುತ್ತವೆ. ಇದರ ಮೇಲಿಂದ ಜಗತ್ತಿಗೆ ಮೂಲವಾದದ್ದೇ ಈ ಓಂಕಾರವು. ಜಗತ್ತಿನ ದೇವರೇ ಈ ಓಂಕಾರ. ಜಗತ್ತಿನ ದೇವರ ನಾಮವೇ ಈ ಓಂಕಾರವೆಂದು ಗೊತ್ತಾಗುವದು. ರೋಗ ಬಂದಾಗ ಓಂಕಾರವನ್ನೇ ರೋಗಿಯು ಗೊತ್ತಾಗದೆ ನೆರಳುವದರಿಂದ ಬೇನೆ ಕಡಿಮೆಯಾಗುವದು ಅನುಭವದಲ್ಲಿ ಕಂಡು ಬರುವದು. ರೋಗದಲ್ಲಿ ದೇವರ ನಾಮವಾದ ಈ ಓಂಕಾರವನ್ನು ನೆರಳುತ್ತ ನುಡಿಯುವದರಿಂದ ದೇವರು ರೋಗಿಯ ಯೋಗ ಕ್ಷೇಮ ನೋಡಿಕೊಂಡು ರೋಗ ಕಡಿಮೆ ಮಾಡುವನು ಇಲ್ಲಿ ಬೇನೆಯು ತಳಮಳ ತ್ರಾಸುಗಳನ್ನು ಶಮನ ಮಾಡುವನು. ಈ ಓಂಕಾರವು ಎಲ್ಲದರ ಪ್ರಾಣದಲ್ಲಿ ಸದಾ ಧ್ವನಿಗೂಡುತ್ತ ಸಾಗಿರುವದು.

ಪ್ರತಿಯೊಂದು ಹಕ್ಕಿ ಪಕ್ಕಿ ಮೊದಲಾದ ಯಾವತ್ತೂ ಸೃಷ್ಟ ಪದಾರ್ಥ ಗಳು ಈ ಓಂಕಾರವನ್ನು ನುಡಿಯುತ್ತಿರುವದು ಕಂಡುಬರುತ್ತದೆ. ಗಾಳಿ ಸದಾ ಓ ಓ ಓಂ ಎಂದು ಬೀಸುವದು. ಬೆಳುವುಗಳು ಓಂ ಓಂ ಓಂ ಎಂದು ಹಾಡು ವವು. "ಗುಕ್ಕಲ ಗೂ, ಗುಳಬುಟಿ ಎಲ್ಹಟ್ಟಿ, ಹಳದಾಗಟ್ಟಿ, ಹೆಸ್ರ ಬಂತು, ಹರಕೊಂಡೊಯ್ತು" ಎಂದು ಇದಕ್ಕೆ ತಿಳಿಯಲಾರದವರು ಅರ್ಥ ಹಚ್ಚು ವರು. ಇಂಥ ಜನರಲ್ಲಿ ಇವುಗಳೇ ಇರುವದರಿಂದ ಹಾಗೇ ತಮ್ಮ ಅರ್ಥ ಹಚ್ಚುವರು. ಗಿಳಿ, ಕೋಗಿಲೆ, ನವಿಲು, ಹದ್ದು, ಹಾಲಕ್ಕಿ, ಗೂಗೆ, ಚಾಣಕ್ಕಿ, ಗಿಡಗ, ಓಂಕಾರ ಎಂದು ಧ್ವನಿಯನ್ನು ಮಾಡುವವು. ಪಾರಿವಾಳ ಪಿಳ್ಳಿಕ್ಕಿ, ಗುಬ್ಬಿ, ಹಕ್ಕಿಗಳೆಲ್ಲ ಒಂದು ರೀತಿಯಿಂದ ಓಂಕಾರವನ್ನೇ ಅಸ್ಪಷ್ಟ ಧ್ವನಿಯಿಂದ ನುಡಿಯುವವು. ಯಾಕಂದರೆ ಅವುಗಳಿಗೆ ನಾಲಿಗೆಯು ಮನುಷ್ಯ ನಂತೆ ಇರುವದಿಲ್ಲ. ಬೀಸುವ ಕಲ್ಲು ಬೀಸುವಾಗ ಓಂ ನುಡಿಯುತ್ತದೆ. ವಿಮಾನ ಹಾರುವಾಗ ಓಂಕಾರ ನುಡಿಯುವದು. ಹಿಂಡುವಾಗ ಪಾತ್ರೆಯಲ್ಲಿ ಹಾಲಿನ ಧಾರೆ ಬಿದ್ದ ಕೂಡಲೆ ಓಂಕಾರ ಸಪ್ಪಳ ಮಾಡುವದು. ನಾಯಿ ಬೆಕ್ಕು ಎತ್ತು ಹೋರಿ ಆಕಳು ಎಮ್ಮೆ ಮೊದಲಾದ ಪಶುಗಳು ಸರಿಯಾಗಿ ನಾಲಿಗೆ ಇರಲಾರದಕ್ಕಾಗಿ ಅಸ್ಪಷ್ಟವಾದ ಓಂಕಾರ ನಾದವನ್ನೇ ಮಾಡುವವು. ಗುಂಗಾಡಿಯಂತೂ ಓಂಕಾರ ನುಡಿಸುವದರಲ್ಲಿ ಒಳ್ಳೇ ಪ್ರಸಿದ್ಧವಾಗಿದೆ. ಗುಂಗಿ ಹುಳು ಸದಾ ಸ್ಪಷ್ಟವಾಗಿ ಓಂಕಾರ ನುಡಿಯುತ್ತಲೇ ಹಾರುವದು. ಅದರಂತೆ ಹಾರುವ ಹಕ್ಕಿಗಳೆಲ್ಲ ಹಾರುವಾಗ ಓಂಕಾರವನ್ನೇ ಧ್ವನಿಗೂಡು ವವು. ಶಗಣಿ ಹುಳು ಒಳ್ಳೇ ಅಬ್ಬರದ ಓಂಕಾರ ನುಡಿಸುತ್ತ ಹಾರುವದು. ಕಪ್ಪೆಯು ಒದರಾಟವೆಲ್ಲ ಓಂಕಾರ ನಾದವೇ ಇರುವದು. ಚಿಟಗುಬ್ಬಿಯಂತು ಓಂಕಾರ ನುಡಿಯುತ್ತ ಏರಿ. ಓಂಕಾರ ನುಡಿಯುತ್ತ ನೆಲಕ್ಕೆ ಕುಳ್ಳಿರು ವದು. ಜೇನ ಹುಳು, ಕಡಜೀರಿಗೆ ಕುರಡ ಕುಂಬಿ ಮೊದಲಾದ ಅನೇಕ ಹುಳಗಳು ಸ್ಪಷ್ಟವಾದ ಓಂಕಾರವನ್ನೇ ನುಡಿಯುತ್ತ ಹಾರಾಡುವವು. ಕಟ್ಟಿಗೆ ಕೊರೆಯುವಾಗ ಇದೇ ತರದ ಸಪ್ಪಳವಾಗುವದು. ಮೋಟಾರ, ರೇಲ, ಬಂಡಿಗಳೆಲ್ಲ ಇದೇ ಓಂಕಾರವನ್ನೇ ನಾದಗೊಡುತ್ತ ಹೋಗುವವು. ಅಲ್ಲದೆ ದಾರಿಬಿಡಲಿಕ್ಕೆ ಸಹ ಓಂಕಾರ ಕೂಗುವವು. ಎಲ್ಲ ತರದ ಗಿರಣಿಗಳು ಓಂ ಕಾರದಿಂದ ಕೂಗಿ ಜನರನ್ನು ಕರೆಯುತ್ತವೆ. ಅಲ್ಲದೆ ಕೆಲಸ ಮಾಡುವಾಗ ಅದೇ ತರದ ನಾದವನ್ನೂ ಸಹ ಮಾಡುತ್ತವೆ. ಸನಾದಿ, ಪೇಟಿ, ತಂಬೂರಿ, ಏಕಧಾರಿ, ಸಿತಾರ, ಸಾರಂಗ, ಪಿಟೀಲ, ಜಲತರಂಗ ಮೊದಲಾದ ವಾದ್ಯ

ಗಳು ಸಹ ಸ್ಪಷ್ಟವಾದ ಓಂಕಾರವನ್ನೇ ಮಾಡುವವು. ನಗಾರಿ, ಜಾಗಟೆ, ಗಂಟೆ ತಾಸೆ, ಡೊಳ್ಳು, ಹಲಿಗೆಗಳು ತಮ್ಮ ಯೋಗ್ಯತೆಯಂತೆ ಇದೇ ನಾದ ವನ್ನು ಮಾಡುವವು. ತಮ್ಮಟಗೇರ ಅಂಗಡಿಯಲ್ಲಿ ಭಾಂಡೆ ಬಡಿದು ನೆಟ್ಟಗೆ ಮಾಡುವಾಗ ಇದೇ ಓಂಕಾರ ನಾದ ಹೊರಡುವದು ತಿದಿ ಊದುವಾಗ ಇದೇ ನಾದ ಹೊರಡುವದು. ಹೊಳೆ ಹಳ್ಳ ಹರಿಯುವಾಗ ಸಹ ಇದೇ ಓಂಕಾರ ಹೊರಡುವ ಅನುಭವವಾಗುವದು. ತಡಸಲು ಧಬ ಧಬೆಗಳೂ ಇದೇ ನಾದ ವನ್ನೇ ಮಾಡುವವು. ಸಮುದ್ರ ಉಗ್ರವಾದಾಗ ಇದೇ ತರದ ನಾದವನು ಮಾಡುವದು. ಬಹುತರ ರಾಗಗಳೆಲ್ಲ ಈ ಓಂಕಾರವನ್ನೇ ತಿಳಿಸುವವು. ಎಲ್ಲ ಪಶು ಮನುಷ್ಯರು ಉಸುರು ಎಳಕೊಳ್ಳುವದು ಹಾಗು ಬಿಡುವದು ಈ ಓಂಕಾರ ನಾದವಾಗುವ ಅನುಭವವಾಗುವದು. ಹಾವು ಓಂಕಾರದಿಂದಲೇ ಬುಸುಗುಡುವುದು. ಬರಿದಾದ ಕೊಡುವನ್ನು ಗಾಳಿಯ ವಿರುದ್ಧ ದಿಕ್ಕಿಗೆ ತೆಗೆದುಕೊಂಡು ಹೋದರೆ ಒಳ್ಳೇ ಉತ್ತಮ ಓಂಕಾರ ನಾದ ಮಾಡುವದು. ಕೊಡದಲ್ಲಿ ನೀರು ತುಂಬುವಾಗ ಓಂಕಾರ ನಾದವಾಗುವದು. ಹೀಗೆ ಯಾವು ದನ್ನು ವಿಚಾರಿಸಿದರೂ ಕೂಡ ಸ್ಪಷ್ಟವಾಗಿ ಇಲ್ಲವೆ ಅಸ್ಪಷ್ಟವಾಗಿ ಓಂಕಾರ ನಾದವನ್ನೇ ಸಕಲ ಚರಾಚರಗಳು ನುಡಿಸುವವೆಂಬ ಪ್ರಜ್ಞೆ ಬರುವದು. ಆದಕ್ಕೆ ಇದು ಸೃಷ್ಟಿಯ ಸ್ವಭಾವ ಸಿದ್ಧವಾದ ನಾದವೆಂದೇ ತಿಳಿಯುವದು. ನಮ್ಮ ಕಿವಿಯಲ್ಲಿ ಇದೇ ನಾದ ಕೇಳಿಸುವದು ಎಲ್ಲರಿಗೂ ಇದು ಒಳ್ಳೇ ಅಸ್ಪಷ್ಟವಾಗಿ ಮೊತ್ತಮೊದಲು ಕೇಳಿಸುವದು. ಸಾಧನ ಬಲಿತಂತೆ ಈ ನಾದವು ಸ್ಪಷ್ಟ ಸುಸ್ಪಷ್ಟವಾಗುತ್ತ ಹೋಗುವದು. ಸರ್ವಾಂಗಲಿಂಗಿಯಾದಾಗಂತೂ ಅತಿ ಸ್ಪಷ್ಟವಾದ ಓಂಕಾರ ನಾದವು ಕಿವಿಯಲ್ಲಿ ಸದಾ ಆಗುವ ಅನುಭವ ವಾಗುವದು. ಆಗ ಇಷ್ಟ ಪ್ರಾಣ ಭಾವಲಿಂಗಗಳ ಪೂರ್ಣ ಜ್ಞಾನವಾಗಿ ಸಂಪೂರ್ಣ ಅನುಭವವಾಗಿರುವದು. ಇದರ ಮೇಲಿಂದ ನೋಡಲಾಗಿ ಓಂ ಕಾರದಿಂದಲೇ ಇದೆಲ್ಲ ಜಗವು ಎಂದು ಓಂಕಾರದಲ್ಲಿಯೇ ಲೀನವಾಗುವ ದೆಂದು ಅನಿಸುವದು. ಇದು ಸ್ವಾಭಾವಿಕವಾದ ನಾದ. ಈ ನಾದದಿಂದಲೇ ಬಿಂದುಗಳು, ಬಿಂದುಗಳಿಂದಲೇ ಕಲೆಗಳು ಎಂದು ಮೇಲಿನ ವಚನಗಳಿಂದ ತಿಳಿದು ಬರುವದು.

ಆದಿಯಲ್ಲಿ ಪರಶಿವನು ಓಂಕಾರ ಲಿಂಗರೂಪದಿಂದ ಪ್ರಕಟನಾದನು. ಇದರಲ್ಲಿ ಅ, ಉ, ಮ ಗಳುಂಟು. ಅ= ನಾದ - ಪ್ರಾಣ= ಜ್ಞಾನ= ನಾಮ ಕೂಟ ಇವೆಲ್ಲ ಪ್ರಾಣಲಿಂಗದಲ್ಲಿ ಹೊಂದಿಕೆಯಾಗುವವು. ಆದರಂತೆ ಉ=

ಬಿಂದು= ಶರೀರ= ರೂಪ= ಭಕ್ತಿ= ನೋಟ ಇವೆಲ್ಲ ಇಷ್ಟಲಿಂಗದಲ್ಲಿ ಹೊಂದಿಕೆಯಾಗುವವು. ಅದರಂತೆ ಮ= ಕಳೆ= ಮನ= ವೈರಾಗ್ಯ= ಕ್ರಿಯೆ= ಮಾಟ ಇವೆಲ್ಲ ಭಾವಲಿಂಗದಲ್ಲಿ ಹೊಂದಿಕೆಯಾಗುವವು. ಈ ಪ್ರಕಾರ ಓಂಕಾರಲಿಂಗದ ತತ್ವಗಳಿರುವವು.

ಈ ಓಂಕಾರವು ಮೂರು ಅಕ್ಷರಗಳಿಂದ ಕೂಡಿರುವದರಿಂದ ಮೂರು ಅಂಕಿಗೆ ಒಳ್ಳೇ ಮಹತ್ವವಿರುವದು. ಶಿವನಿಗೂ ಕೂಡ ಮೂರು ಕಣ್ಣುಗಳಿರುವವು. ಸ್ಥೂಲ ಶರೀರ, ಸೂಕ್ಷ್ಮ ಶರೀರ, ಕಾರಣ ಶರೀರಗಳು ಈ ಅ-ಉ-ಮ ಗಳಿಗೆ ಕ್ರಮವಾಗಿ ಹೋಲಿಕೆಯಾಗುವವು. ಇವುಗಳಿಗೆ ಕೆಳಗೆ ಬರೆದವುಗಳೆಲ್ಲ, ಕ್ರಮವಾಗಿ ಹೊಂದಿಕೆಯಾಗುವವು. ಆಯಾ ಅಕ್ಷರಗಳ ಆಯಾ ವಿಷಯ ಸಂಗತಿ ಪದಾರ್ಥಗಳನ್ನು ಬೋಧಿಸುವವು. ಸತ್ವ-ರಜ-ತಮ ಮೂರು ಗುಣಗಳು ಬ್ರಹ್ಮ-ವಿಷ್ಣು-ರುದ್ರ ಮೂರು ದೇವತೆಗಳು, ಸೃಷ್ಟಿ-ಸ್ಥಿತಿ-ಲಯ ಮೂರು ಕ್ರಿಯೆಗಳು, ಇಷ್ಟ-ಪ್ರಾಣ-ಭಾವ ಮೂರು ಲಿಂಗಗಳು, ಋಗ್ವೇದ ಯಜುರ್ವೇದ ಸಾಮವೇದ ಮೂರು ವೇದಗಳು, ಸ್ವರ್ಗ-ಮರ್ತ್ಯ-ಪಾತಾಳ ಎಂಬ ಮೂರು ಲೋಕಗಳು, ಕಾಯಾ, ವಾಚಾ, ಮನಸಾ ಎಂಬ ತ್ರಿಕರಣಗಳು, ತ್ರಿಶೂಲ, ತ್ರಿವೇಣಿ, ತ್ರಿಪುರ, ತ್ರಿಕೋಣ, ತ್ರಿಪುಟ ಇವುಗಳು ಕೂಡ ಈ ಓಂಕಾರಕ್ಕೇ ಸಂಬಂಧವಾಗುವವು. ಈ ಓಂಕಾರತ್ರಯಗಳ ಗುರುತಿಗಾಗಿ ಭಸ್ಮವನ್ನು ಮೂರು ಬೆರಳುಗಳಿಂದಲೇ ಎಲ್ಲ ಕಡೆಗೆ ಹಚ್ಚಿಕೊಳ್ಳುವರು. ಅದಕ್ಕೆ ತ್ರಿಪುಂಡ್ರ ಎಂದು ಹೆಸರು. ತ್ರಿಕಾಲ, ತ್ರಿಲಿಂಗ, ತ್ರಿವಚನಗಳೆಲ್ಲ ಕ್ರಮವಾಗಿ ಇದಕ್ಕೆ ಹೊಂದಿಕೆಯಾಗುವದು. ಈ ಪ್ರಕಾರ ಈ ಓಂಕಾರವು ಇವುಗಳನ್ನು ಬೋಧಿಸುವದು. ಈ ಮೂರರ ಓಂಕಾರದಿಂದ ಕ್ರಮವಾಗಿ ಈ ಮೂರುಗಳೆಲ್ಲ ಜನಿಸಿದವೆಂದು ತಿಳಿಯಬೇಕು. ಅದಕ್ಕೆ ಮೂರು ಬಹು ಪವಿತ್ರ ಸಂಖ್ಯೆ ಇರುವದು. ಸಂಸಾರದಲ್ಲಿ ಮೂರು ಒಳಿತಲ್ಲೆಂದು ಹೇಳುವರು. ಇದು ಸರಿಯಲ್ಲ. ಇನ್ನೂ ಮೂರರ ಲೆಕ್ಕ ಬಹಳೇ ಇರುವದು. ವಿಚಾರಿಸಿ ನೋಡಿರಿ.

ವೇದ ಅಂದರೆ ಜ್ಞಾನವನ್ನು ಹಿಂದಕ್ಕೆ ಶಂಖಾಸುರನು ತೆಗೆದುಕೊಂಡು ಹೋಗಿ ಒಂದು ದೊಡ್ಡ ಶಂಖದಲ್ಲಿ ಇಟ್ಟುಕೊಂಡು ಸಮುದ್ರದ ತಳದಲ್ಲಿ ಅಡಗಿದನಂತೆ. ಆಗ ಪರಮಾತ್ಮನು ಮೀನಿನ ಅವತಾರದಿಂದ ಸಮುದ್ರ ತಳಕ್ಕೆ ಹೋಗಿ ಆ ಶಂಖಾಸುರನ ಕೂಡ ಯುದ್ಧ ಮಾಡಿ ಅವನನ್ನು ಶಂಖದ ಹೊರಗೆ ತೆಗೆದುಕೊಂಡನು. ಆ ಶಂಖವು ಸಮುದ್ರದಿಂದ ಎದ್ದು ದಂಡೆಗೆ

ಬಂದಿತಂತೆ. ಆಗ ಆ ಶಂಖವನ್ನು ಜನರು ಎತ್ತಿಕೊಂಡು ಬಾಯಿಗೆ ಹಚ್ಚಿ ಊದಿದರೂ ಆಗ ಅದು ಓಂ ಎಂಬ ನಾದವನ್ನು ಮಾಡಿತು. ಇವೇ ಆ ವೇದವು. ವೇದ ಅಂದರೆ ಜ್ಞಾನ ಅದರಂತೆ ಓಂ ಎಂದರೂ ಕೂಡ ಜ್ಞಾನದ ಅಂತಿಮ ಸ್ಥಿತಿಯನ್ನೇ ಬೋಧಿಸುತ್ತದೆ ಅದಕ್ಕಾಗಿಯೇ ದೇವರ ಮುಂದೆ ಶಂಖಗಳನ್ನು ಇಟ್ಟು ಪೂಜಿಸುವರು. ಅಲ್ಲದೆ ಪೂಜೆಯ ಕಾಲಕ್ಕೆ ಅದನ್ನು ಊದುವರು. ಶಂಖ ಅಂದರೆ ಪೂಜಿ ಅಂದರೆ ಏನೂ ಇಲ್ಲೆಂದು ಅರ್ಥವಾಗುವದು. ವಿಷಯದಲ್ಲಿ ಏನೂ ಹುರಳಿಲ್ಲೆಂದು ಅದು ಬೋಧಿಸುವದು. ಅದಕ್ಕಾಗಿ ಅದರಿಂದ ಹೊರಡುವ ಓಂಕಾರ ಸಾಧನವನ್ನೇ ನಿತ್ಯ ಮಾಡಿರಿ ಎಂದು ಸಹ ಅದು ಬೋಧಿಸುತ್ತದೆ. ಓಂಕಾರದ ಹೊರತು ಜಗದಲ್ಲಿ ಯಾತರಲ್ಲಿ ಹುರುಳಿಲ್ಲ; ಓಂಕಾರ ಒಂದೇ ಸತ್ಯ. ಅದರಿಂದಲೇ ಸತ್ಯ ಸಿಗುವದು. ಅದೇ ಪರಶಿವನ ಮಂತ್ರವೆಂದು ಬೋಧವಾಗುವದು. ಅದಕ್ಕೆ ಶಿವನ ಅಂಶವಾದ ಪ್ರಾಣವು ಸದಾ ಶ್ವಾಸೋಚ್ಛ್ವಾಸ ಮಾಡುವಾಗ ಓಂ ಕಾರವನ್ನೇ ನಾದ ಮಾಡುವದು. ಇದು ಅನುಭವಕ್ಕೆ ಬರುವದಿಲ್ಲವೇ ? ಬಹುತರ ಎಲ್ಲ ಜೀವಿಗಳ ಕಂಠ ತುಂಬ ಓಂಕಾರವು ಇವುಗಳಲ್ಲಿ ಹುಟ್ಟುವದು. ಅದಕ್ಕೆ ಅವೆಲ್ಲ ಓಂಕಾರ ನುಡಿಯುವವು. ಅ ಕಂಠದಲ್ಲಿ ಉ ಕಂಠೋಷ್ಠಗಳ ನಡುವೆ ಮ ಓಷ್ಠದಲ್ಲಿ ಓಂಕಾರ ಕಂಠದಲ್ಲಿ ಪ್ರಾರಂಭವಾಗಿ ತುಟಿಗಳಲ್ಲಿ ಈ ಮಂತ್ರ ಮುಗಿಯುವದು. ಹೀಗಾಗಿ ಎಲ್ಲ ಪ್ರಾಣಿಗಳ ಧ್ವನಿಗಳು ಈ ಓಂಕಾರದಲ್ಲಿ ಒಳಗೊಳ್ಳುತ್ತಿರುವವು. ಎಲ್ಲ ಭಾಷೆ ಎಲ್ಲ ವಿಚಾರ ಎಲ್ಲ ಜಗತ್ತು ಎಲ್ಲ ಜ್ಞಾನ ಹೀಗೆ ಎಲ್ಲವನ್ನೂ ಇದು ಒಳಗೊಂಡಿದೆ. ಇಂಥ ದೊಡ್ಡದಿರುವದು. ಯಾಕಂದರೆ ಇದೇ ಪರಶಿವನ ಗುರುತಾಗಿರುವದು. ಪರಶಿವನು ಆಕಾರಕ್ಕೆ ಬಂದುದು ಇದೇ ಇರುವದು.

ಅ ಕಾರವು ಜಾಗ್ರತ ಸ್ಥಿತಿಯನ್ನು ಹೇಳುವದು. ಸ್ಥೂಲ ಇಂದ್ರಿಯಗಳಿಗೆ ಗೋಚರವಾಗುವ ಜಗದ ಬಗ್ಗೆ ಅರ್ಥ ಹೇಳುವದು. ಉಕಾರವು ಇದು ಸ್ವಪ್ನಾವಸ್ಥೆಯನ್ನು ಬೋಧಿಸುವದು. ಸ್ವರ್ಗ ನರಕಗಳನ್ನು ಹೇಳುವದು. ಸೂಕ್ಷ್ಮ ಜಗದ ಬಗ್ಗೆ ಬೋಧಿಸುವದು. ಬುದ್ಧಿ ಮನಸ್ಸಿನ ಜಗತ್ತನ್ನು ಸೂಚಿಸುವದು. ಮ ಕಾರವು ಸುಷುಪ್ತಾವಸ್ಥೆಯನ್ನು ತಿಳಿಸುವದು. ಜಾಗ್ರತದಲ್ಲಿ ನೋಡಲಾರದ ಕೇಳಲಾರದ ಕಾರಣ ಜಗದ ಬಗ್ಗೆ ಹೇಳುವದು ಬುದ್ಧಿಯ ಆಚೆಗಿನ ಜಗತ್ತನ್ನು ತಿಳಿಸುವದು, ಒಟ್ಟಿನಲ್ಲಿ ಓಂಕಾರವು ಮೂರು ತರದ ಜಗತ್ತಿನ ಹಾಗೂ ಮೂರು ಸ್ಥಿತಿಯ ಅನುಭವವನ್ನು

ಬೋಧಿಸುವದು. ಹಿಂದೆ ಇದಕ್ಕೂ ಎಲ್ಲ ತ್ರಿ ಎಂಬುದರ ಸಂಬಂಧವನ್ನೇ ವಿಶದಪಡಿಸಲಾಗಿದೆ. ಅವನ್ನು ಇದನ್ನು ಕೂಡಿಸಿ ನೋಡಿರಿ. ಓಂಕಾರವು ಎಲ್ಲ ಸರ್ವವನ್ನೇ ಬೋಧಿಸುವದು. ಇದರ ಹೊರತು ಯಾವದೂ ಇಲ್ಲ. ಇದರ ಜಪದಿಂದ ಎಲ್ಲದರ ಅನುಭವ ಆಗುತ್ತ ಹೋಗುವದು. ಮಾನವನ ಆತ್ಮವೇ ಓಂಕಾರವು. ಇದು ಸತ್ ಚಿತ್ ಆನಂದವನ್ನು ಬೋಧಿಸುವದು. ಅಂದರೆ ಶಿವಶಕ್ತಿಯರ ಮಿಲನವನ್ನು ಹೇಳುವದು. ಸತ್ ಅಂದರೆ ಶಿವ, ಚಿತ್ ಅಂದರೆ ಶಕ್ತಿ, ಆನಂದ ಅಂದರೆ ಇವರಿಬ್ಬರ ಮಿಲನದಿಂದ ಆಗುವಂಥಾದ್ದು. ಅದೇ ಶಿವಯೋಗವಾಗಿದೆ. ಅ ಉ ಮಗಳು ಇವುಗಳನ್ನೇ ಹೇಳುವವು. ಪರಶಿವನ ನೆನಹಿನಿಂದ ಹೊರ ಹೊರಡುವಾಗ ಈ ಓಂಕಾರ ನಾದವು ಹೊರಟಿತು. ಒಳ್ಳೇ ಸ್ಥಬ್ಧವಾಗಿದ್ದ ಆ ಬಯಲೇ ಬಯಲ ನಿರ್ಬಯಲು. ಶೂನ್ಯ ನಿಃಶೂನ್ಯವು ಸಂಕಲ್ಪ ಮಾತ್ರದಿಂದ ಚಕ್ರಾಕಾರವಾಗಿ ತಿರುಗಹತ್ತಿರಲು ಈ ಓಂಕಾರ ನಾದವಾಗಿ ಮಹಾಜ್ಞಾನ ಚಿತ್ತು ಹುಟ್ಟಿತು. ಎಂದು ಮೇಲೆ ವಚನದಲ್ಲಿ ಹೇಳಿದ್ದನ್ನು ವಿಚಾರಿಸಿದರೆ ಇದೇ ಅರ್ಥ ಹೊರಡುವದು. ಪರಶಿವನ ಓಂಕಾರ ನಾದವಾಗಿ ಪರಶಿವನಿಂದ ಪರಾಶಕ್ತಿ ಹೊರಟು ಇವೆಲ್ಲ ಬ್ರಹ್ಮಾಂಡಗಳನ್ನು ಸೃಜಿಸಿದಳು. ಪರಶಿವನ ಕೆಲಸವು ಮಾತ್ರ ಬರೇ ಸಂಕಲ್ಪ ಮಾಡುವದು ಬರೇ ಲೀಲೆ ಮಾಡಬೇಕೆಂದು ನೆನಹು ತೋರಿತು. ಆಗಲೇ ಜಗತ್ತಿಗೆ ಆರಂಭವಾಯಿತು.

ಈ ಓಂಕಾರದ ಬಗ್ಗೆ ವಚನಕಾರರು ಏನು ಹೇಳುತ್ತಾರೆಂಬದನ್ನಷ್ಟು ವಿಚಾರಿಸುವಾ. ನಿಃಕಲ ಶಿವತತ್ವದಲ್ಲಿ ಜ್ಞಾನಚಿತ್ತು ಉದಯವಾಯಿತ್ತು. ಆ ಚಿತ್ತಿನಿಂದ ಅಕಾರ, ಉಕಾರ, ಮಕಾರಗಳು ಬ ಅಕ್ಷರತ್ರಯಗಳಾದವು. ಅಕಾರವೇ ನಾದ, ಉಕಾರವೇ ಬಿಂದು, ಮಕಾರವೇ ಕಳೆ. ಇಂತೀ ತ್ರಿವಿಧಕ್ಕೆ ತಾಯಿ, ಚಿತ್ತು, ಇಂತೀ ನಾಲ್ಕು ಒಂದಾದಲ್ಲಿ ಓಂಕಾರನೆಂಬ ಪ್ರಣವು ಉತ್ಪತ್ತಿಯಾಯಿತು. ಈ ಓಂಕಾರವೆಂಬ ಪ್ರಣಮವೇ ಅಖಂಡ ಪರಿಪೂರ್ಣ ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗ ನೋಡಾ ಮಹಾಲಿಂಗ ಗುರುಶಿವಸಿದ್ಧೇಶ್ವರಾ.

ಪರಶಿವನಲ್ಲಿ ಜ್ಞಾನಚಿತ್ತು, ಅಂದರೆ ಪರಶಕ್ತಿ ಉದಯವಾಗಿ ಆ ಪರಶಕ್ತಿಯಿಂದ ಈ ಮೂರು ಅಕ್ಷರಗಳಾದವು. ಮೂರು ಅಕ್ಷರಗಳಲ್ಲಿ ಈ ಜ್ಞಾನಚಿತ್ತು (ಪರಶಕ್ತಿ) ಕೂಡಿ ಓಂಕಾರ ಜನಿಸಿತು. ಈ ಓಂಕಾರಕ್ಕೆ ತಂದೆಯಾದಂತೆ ಆಯಿತು. ತಂದೆಯ ಸಕಲ ಅಂಶಗಳು ಮಗನಲ್ಲಿ ಬರುವಂತೆ,

ತಂದೆಯೇ ಮಗನಾಗಿ ಹುಟ್ಟುವಂತೆ ಈ ಓಂಕಾರನೇ ಪರಶಿವನ ಗುರ್ತು ಎಂದು ಹೇಳಲಿಕ್ಕೆ ಎಲ್ಲಕ್ಕೂ ಮೊದಲು ಉದಹರಿಸಿದ ವಚನವು ಆಧಾರ ವಾಗಿರುವದು.

ಅ ಎಂದಡೆ ಅನಾಹುತ (ಕೇಡಿಲ್ಲದ) ಉ ಎಂದಡೆ, ನಾದ ಉಳಿಯಿತ್ತು. ಮ ಎಂದಲ್ಲಿ ಬಿಂದು ಕೂಡಲು ಶಿವಶಕ್ತಿಯಾಗುತ್ತ ಇಂತಹ ಓಂಕಾರವಾಯಿತು. ಈ ವಚನವೂ ಕೂಡ ಮೇಲಿನದನ್ನೇ ಹೇಳುವದು.

ಓಂಕಾರವೆಂಬ ಪ್ರಣಮದಲ್ಲಿ ಅ-ಉ-ಮ ಬೀಜ ಕ್ಷರ ಅ= ನಾದ, ಉ= ಬಿಂದು, ಮ= ಕಳೆ, ಇವರೇ ರುದ್ರ-ಈಶ್ವರ ಸದಾಶಿವ ಕ್ರಮವಾಗಿ ಆಗುವವು. ಅ-ಉ-ಮಗಳಿಗೆ ನಾದ-ಬಿಂದು-ಕಳೆಯೇ ಆಧಾರ. ಈ ನಾದ ಬಿಂದು ಕಳೆಗೆ ಪ್ರಕೃತಿಯೇ ಆಧಾರ. ಈ ಪ್ರಕೃತಿಗೆ ಪ್ರಾಣವೇ ಆಧಾರ. ಈ ಪ್ರಾಣಕ್ಕೆ ಲಿಂಗವೇ ಆಧಾರವಾಗಿರುವದು. ಇವೆಲ್ಲ ಒಂದೇ ಕುಟುಂಬದವರಂತೆ ತಳಕು ಮಳಕು ಇರುವವು. ಅದಕ್ಕಾಗಿಯೇ ಪರಶಿವನ ಸಾಕಾರ ರೂಪವೇ ಓಂಕಾರ, ಅವನ ಮಂತ್ರವೇ ಓಂಕಾರ ಎಂದು ಈ ವಚನಗಳು ಪುಷ್ಟಿ ಕೊಡುತ್ತವೆ.

ಮಹಾಲಿಂಗಕ್ಕಂಗವಾಗಿ ಪೀಠವಾಗಿರುವ ಓಂಕಾರವೆಂದು ಹೇಳಿಕೊಳ್ಳುವ ಪ್ರಣವದ ಪರಾಶಕ್ತಿ ಪ್ರಣವದಲ್ಲಿ ಹುಟ್ಟಿದ ವಿಚಾರ ಹೇಗೆಂದಡೆ, ಓಂಕಾರವೆಂಬ ಪ್ರಣವದ ತಾರಕಾಕೃತಿ ದಂಡಕಾಕೃತಿಗಳೆರಡರಲ್ಲಿ ಉತ್ಪತ್ತಿಯಾದದ್ದೇ ಅಕಾರ ಪ್ರಣವು, ಓ ಕಾರವೆಂಬ ಪ್ರಣವದ ಕುಂತಲಾಕೃತಿ, ಅರ್ಧಚಂದ್ರಾಕೃತಿಗಳೆರಡರಲ್ಲಿ ಉತ್ಪತ್ತಿಯಾದದ್ದೇ ಉಕಾರ ಪ್ರಣವ ಓಂಕಾರ ಪ್ರಣಮದ ಜ್ಯೋತಿರಾಕೃತಿ ದರ್ಪಣಾಕೃತಿಗಳೆರಡರಲ್ಲಿ ಉತ್ಪತ್ತಿಯಾದದ್ದೇ ಮಕಾರ ಪ್ರಣವು. ಅಕಾರವು ಚಿನ್ನಾದ ಸ್ವರೂಪದ್ದು. ಓಂ ಓಂ ಓಂ ಎಂದು ಸುನಾದ ಘೋಷವನುಳ್ಳದ್ದೇ ಅಕಾರ ನಾದ. ಉಕಾರವು ಚಿದ್ಬಿಂದು ಸ್ವರೂಪದ್ದು. ಝಗಝಗಿಸಿ ಬೆಳಗುವ ಪ್ರಕಾಶಉಳ್ಳದ್ದೇ ಉಕಾರ ಬಿಂದು. ಮಕಾರವೇ ಚಿತ್ಕಳಾ ಸ್ವರೂಪದ್ದು. ಒಳ್ಳೇ ಸೂರ್ಯ ಕೋಟಿ ಪ್ರಕಾಶವನ್ನು ಕೀಳ್ಪಡಿಸಿ ಬೆಳಗುವ ಮಹಾ ದಿವ್ಯ ಪ್ರಕಾಶಉಳ್ಳದ್ದೇ ಮಕಾರ ಕಳೆಯು.

ಅಕಾರ ರುದ್ರ, ಸಂಹಾರದ ಕೆಲಸ, ಉಕಾರ ಈಶ್ವರ, ತಿರೋಧಾನ (ಮುಚ್ಚುವ ಹೊದಿಕೆಹಾಕುವ) ಕೆಲಸ. ಮಕಾರ ಸದಾಶಿವ ಅನುಗ್ರಹ ಮಾಡುವದು. ಈ ತ್ರಿವಿಧ ಪ್ರಣವಂಗಳು ದಯಾಧಾರ ವಿಶ್ರಾಂತಿಗೆ ನಾದ

ಬಿಂದು ಕಳೆಗಳೆಯೇ ಪರನಾದ, ಪರಬಿಂದು, ಪರಕಳೆ ಎಂಬ ಬ ಸ ವ ಅಕ್ಷರಗಳೇ ಆಧಾರ. ಬ ಸ ವ ಅಕ್ಷರಗಳ ಉದಯ ಆಧಾರ ವಿಶ್ರಾಂತಿಗೆ ಪ್ರಕೃತಿಯು. ಇದಕ್ಕೆ ಮಹಾಜ್ಞಾನ ಚಿಚ್ಛಕ್ತಿಯೇ ಆಧಾರವಾಗಿರುವದು.

ಅಕಾರವು ಊರ್ಧ್ವ ಸ್ವರ ಅಂದರೆ ಶಿವಸ್ವರ ಉಕಾರ ಇಳಿಕೆಯ ಸ್ವರ ಅಂದರೆ ಶಕ್ತಿ ಸ್ವರ, ಶಿವಸ್ವರವು ಶಕ್ತಿಸ್ವರದದಲ್ಲಿ ಕೂಡಿತು. ಇದರಿಂದ ಓಂಕಾರವಾಯಿತು. ಇದರಲ್ಲಿ ಮ ಎಂಬ ಬಿಂದು ಕೂಡಲು ಮಕಾರಪ್ರಣ ಮವೆಂಬುದು ಶಿವಶಕ್ತಿಯಾಯಿತ್ತು. ಅ—ಉ—ಮ ಗಳಿಗೆ ತಾಯಿ ಚಿತ್ತು ಈ ನಾಲ್ಕು ಒಂದಾದಲ್ಲಿ ಓಂಕಾರವಾಯಿತ್ತು.

ಈ ಓಂಕಾರದ ತತ್ವಗಳೆಲ್ಲ ಇದಕ್ಕೂ ಹೆಚ್ಚಿಗೆ ಸ್ಪಷ್ಟ ಕಲ್ಪನೆ ಬರುವಂತೆ ಕೆಳಗಿನ ಕೋಷ್ಟಕವನ್ನು ಹಾಕಲಾಗಿದೆ.

ನಿಃಕಲ ಶಿವತತ್ವ (ಪರಶಿವ) + ಜ್ಞಾನಚಿತ್ತು (ಪರಶಕ್ತಿ); ಓಂಕಾರ ಊರ್ಧ್ವಸ್ವರೂಪವುಳ್ಳದ್ದು.

| ತಾರಕ, ದಂಡಕ ಆಕೃತಿ | ಕುಂಡಲಿ, ಅರ್ಧ ಚಂದ್ರ ಆಕೃತಿ | ದರ್ಪಣ ಜ್ಯೋತಿ ಆಕೃತಿ |
|---|---|---|
| ಅಕಾರ. | ಉಕಾರ | ಮಕಾರ |
| ಚಿನ್ನಾದ (ಸುನಾದ) | ಚಿದ್ಬಿಂದು (ಪ್ರಕಾಶ) | ಚಿತ್ಕಳೆ (ಮಹಾಪ್ರಕಾಶ) |
| (ರುದ್ರ) ಸಂಹಾರ | (ಈಶ್ವರ) ತಿರೋಧಾನ | (ಸದಾಶಿವ) ಅನುಗ್ರಹ |
| ನಾದ (ಋಗ್ವೇದ) | ಬಿಂದು, (ಯಜುರ್ವೇದ) | ಕಳೆ, (ಸಾಮವೇದ) |
| (ಅಗ್ನಿತೇಜ) | (ಆಕಾಶ) | (ವಿದ್ಯ ಸುಜ್ಞಾನ ಕಲಾತ್ಮಕ) |
| ನಿರ್ಜರರು ಹುಟ್ಟಿದರು. | ಅಪ್ಸರರು ಹುಟ್ಟಿದರು. | ದಿಕ್ಪಾಲಕರು |
| ಪ್ರಾಣ-ಜ್ಞಾನ ನಾಮ-ಕೂಟ (ಪ್ರಾಣಲಿಂಗ) | ಶರೀರ-ಭಕ್ತಿ-ರೂಪ-ನೋಟ (ಇಷ್ಟಲಿಂಗ) | ಮನ-ವೈರಾಗ್ಯ-ಕ್ರಿಯೆ-ಮಾಟ (ಭಾವಲಿಂಗ) |

ಇದೆಲ್ಲ ವೀರಶೈವರ, ವಚನಕಾರರ ಪ್ರಕಾರ ಹೇಳಲ್ಪಟ್ಟದ್ದಿರುತ್ತದೆ. ಮೊದಲಿನದಕ್ಕ್ಕೂ ಇದಕ್ಕೂ ಸ್ವಲ್ಪ ವ್ಯತ್ಯಾಸ ಕಂಡುಬಂದರೂ ಮೂಲ ಓಂಕಾರವು ಪರಶಿವ ನಿಃಕಲ ಶಿವತತ್ವದಿಂದಲೇ ಬಂಡಿತೆಂದು ಎಲ್ಲ ಕಡೆಗೂ ಹೇಳಿದ್ದಾಗಿದೆ.

ಅಂದರೆ ಓಂಕಾರ ಉಚ್ಚಾರವೇ ಪರಶಿವನ ನಾಮೋಚ್ಚಾರವೆಂದೇ ಅರ್ಥವಾಗುವದು. ಶ್ರೀ ರಾಮಕೃಷ್ಣ ಪರಮಹಂಸರು, ಶ್ರೀ ಅಂರವಿಂದರು, ಶ್ರೀ ಶಿವಾನಂದ ಸರಸ್ವತಿ, ಶ್ರೀ ವಿವೇಕಾನಂದ, ಶ್ರೀ ವಿದ್ಯಾರಣ್ಯ, ಶ್ರೀ ಕಾಳಿದಾಸ, ಶ್ರೀ ಶಂಕರಾಚಾರ್ಯ ಮೊದಲಾದವರ ಅಭಿಪ್ರಾಯವನ್ನು ವಿಚಾರಿಸಿದರೆ ಮೊದಲು ಪರಶಿವ, ಅವನಲ್ಲಿ ನೆನಮಮೋರಲು ಓಂಕಾರ ನಾದವಾಗಿ ಪರಾಶಕ್ತಿ ಪರಶಿವನಿಂದ ಪ್ರಕಟಳಾಗಿ ಮುಂದೆ ಕಾರ್ಯ ಪ್ರವೃತ್ತಳಾದಳೆಂದೇ ಹೊಳೆಯುವದು. ಪರಶಿವ ಪರಶಕ್ತಿಗಳಿಗೆ ಸಾಮಾನ್ಯ ಭಾಷೆಯಲ್ಲಿ ಶಿವಶಕ್ತಿಯರೆಂದು ಹೇಳುವರು. ಶಕ್ತಿಗೆ ಪಾರ್ವತೀ ಗೌರೀ ಮಹಾದೇವಿ ಎಂಬ ಹೆಸರುಗಳು ಬಹಳೇ ರೂಢವಾಗಿರುವವು. ಶಿವನಿಗೆ ಮಹಾದೇವ, ಹರ, ಶಂಕರ ಎಂದು ಬಳಿಕೆಯಲ್ಲಿ ಬಹಳೇ ಬಂದಿವೆ. ಇವರೆಲ್ಲರೂ ಪರಶಿವ ಪರಶಕ್ತಿ ಶಿವಶಕ್ತಿಯರೇ ಸರಿ. ಓಂ ಎಂದರೆ ಶಿವನೆಂದು ಹೇಳಲಿಕ್ಕೆ ಯಾವ ಅಂಜಿಕೆ ಇಲ್ಲೆಂದು ಹೇಳಲು ಅಡ್ಡಿ ಇಲ್ಲ. ಸಂಸ್ಕೃತ ॐ ಕಾರದಲ್ಲಿ ಚಂದ್ರ ಚಿಕ್ಕಿಗಳನ್ನು ಶಿವನು ಜಡೆಯಲ್ಲಿ ಧರಿಸಿದ್ದು ಕೈಯಲ್ಲಿ ತ್ರಿಸೂಲ ಹಿಡಿದಿದ್ದು ಡಮರುಗ ಧರಿಸಿದ್ದು ಹಾವನ್ನು ಆಭರಣವಾಗಿ ಮಾಡಿದ್ದು ಮೊದಲಾದವುಗಳು ಕೂಡ ಶಿವನು ಓಂ (ॐ) ಕಾರ ರೂಪನೆಂದೇ ತಿಳಿಯಬೇಕು. ಈ (ॐ) ಓಂಕಾರದಲ್ಲಿ ಚಂದ್ರನ ಗುರುತು ಬಿದಿಗೆಯ ಚಂದ್ರನನ್ನೂ ಚಿಕ್ಕೆ ಗಂಗೆಯನ್ನೂ ಉ (ॐ) ದ ಗುರ್ತು ಹಾವನ್ನೂ (ॐ) ಉಕಾರವು ತ್ರಿಶೂಲ ವನ್ನೂ ಅಲ್ಲದೆ ಡಮರುಗವನ್ನೂ ಹೋಲುವವು. ಶಿವನು ತಾನು ಓಂಕಾರ ರೂಪನೆಂದು ತಿಳಿಸಲು ಈ ಚಂದ್ರ ಚಿಕ್ಕಿ ಹಾವು ತ್ರಿಶೂಲ ಮೊದಲಾದವುಗಳನ್ನು ಧರಿಸಿರುವನೆಂದು ತೋರುವದಿಲ್ಲವೇನು ? ಅದರಂತೆ ಮಹಮ್ಮದೀಯರು ಚಂದ್ರಾಮ ಚಿಕ್ಕಿಯನ್ನೇ ತಮ್ಮ ಗುರ್ತನ್ನಾಗಿ ಸ್ವೀಕರಿಸಿದ್ದಾರೆ. ಕ್ರಿಶ್ಚಿಯನ್ನರು ತ್ರಿಶೂಲದ ಆಕಾರದ ಮೂರು ಟಿಸಿಲಿನ ಗುರ್ತನ್ನು ಧರಿಸುವರು. ಇದೇ ಗುರ್ತಿನ ಬಿಲ್ಲಿಯನ್ನು ಸ್ಟ್ಯಾಟಂಗೆ ಹಾಕುವ ರೂಢಿಯನ್ನು ಮಾಡಿದ್ದಾರೆ. ಇವು ಎಲ್ಲವುಗಳಿಂದ ನೋಡಲಾಗಿ ತಿಳಿದೂ ತಿಳಿಯದೆಯೂ ಎಲ್ಲರೂ (ॐ) ಕಾರದ ಗುರ್ತನ್ನು ಧರಿಸುವರು ಎಂದು ತಿಳಿದುಬರುತ್ತದೆ.

ಈ ಕಾರಣಗಳಿಂದ ಪರಮಾತ್ಮನಿಗೆ ಈ ತರದ ಗುತ್ತುಗಳ ಮೇಲೆ ಸಹ ಪ್ರಿಯನಾಗಿರುವನೆಂದು ತೋರುವದು. ಒಟ್ಟಿನಲ್ಲಿ ಪರಶಿವನು ಓಂಕಾರ ರೂಪನೆಂದೂ ಓಂಕಾರ ಮಂತ್ರದವನೆಂದೂ ಹೇಳಲಿಕ್ಕೆ ಯಾವ ಅಭ್ಯಂತರ ವಿಲ್ಲ. ಓಂಕಾರವೆಂದರೇನೆ ಪರಶಿವನೆಂದು ಸಹಜ ವಾಚಕರಿಗೆ ಈಗಂತೂ ಹೆಚ್ಚಾಗಿ ತಿಳದಿರಬೇಕೆಂದು ಅನಿಸುವದು. ಓಂಕಾರಕ್ಕೂ ಪರಶಿವನಿಗೂ ಒಳ್ಳೇ ನಿಕಟ ಸಂಬಂಧವಿರುವದೆಂಬುದು ಇಲ್ಲಿ ಬಹು ಸ್ಪಷ್ಟವಾಗುವದು. ಅಂದರೆ ಜಗವೆಲ್ಲ ಪ್ರಾಣಿಗಳು ಸಹವಾಗಿ ಪರಶಿವನ ಧ್ಯಾನವನ್ನೇ ಸದಾ ತಿಳಿಸೂ ತಿಳಿಯದೆಯೂ ಮಾಡುತ್ತಿರುವರೆಂದು ತೋರುವದು.

"ಓಂ ನಮಃ ಶಿವಾಯ" ಈ ಆರಕ್ಷರ ಮಂತ್ರದಲ್ಲಿಯ ಮೊದಲಿನ ಓಂಕಾರದ ಬಗೆಗೆ ಈ ತನಕ ಬರೆದುದಾಯಿತು. ಇನ್ನು ಉಳಿದ ಪಂಚ ಅಕ್ಷರಗಳ ಅರ್ಥ ವಿವರಣೆಯನ್ನು ಮಾಡುವೆವು. ನಮಃ ಅಂದರೆ ನಮಿಸು ವೆನು, ನಮಸ್ಕರಿಸುವೆನು, ವಂದಿಸುವೆನು. ಇದು ಶಬ್ದದ ಅರ್ಥವಾಗುವದು. ಹಿಂದಿನಿಂದ ಪಂಚ ಪ್ರಣವಗಳ ಬೇರೆ ಅರ್ಥವನ್ನು ವಿಚಾರಿಸುವಾ. ಶಿವಾಯ ಇದರಲ್ಲಿ ಶಿವಾ+ಯ. ಶಿವಾ ಅಂದರೆ ಪಾರ್ವತಿ. ಪಾರ್ವತಿಗೆ ಶಿವಾ ಅಥವ ಶಿವೆಯೆಂದು ಅನ್ನುವರು. ಯ ಅಂದರೆ ಸಹಿತ. "ಶಿವಾ"ಯ ಪಾರ್ವತಿ ಸಹಿತ ಎಂದು ಅರ್ಥವಾಗುವದು. "ಓಂ ನಮಃ ಶಿವಾಯ" ಪಾರ್ವತಿಸಹಿತ ಶಿವನನ್ನು ನಮಸ್ಕರಿಸುವೆನು ಎಂದು ಅರ್ಥಹೊಂದುವದು. ಬಹುತರ ಬರೇ "ಪರಿಪೂರ್ಣ ಶಿವನಿಗೆ ನಮಿಸುವೆನೆಂ"ದು ಅರ್ಥ ಬಹಳ ಜನರು ಮಾಡು ವರೆಂದು ಅನಿಸಿದೆ. ಈ ಅರ್ಥ ಸರಿಯಲ್ಲ. ಪರಿಪೂರ್ಣ ಶಿವ, ಅಪೂರ್ಣ ಶಿವ ಎಂದು ಹೇಳಿದಂತೆ ಆಗುವದು. ಶಿವನು ಯಾವಾಗಲೂ ಪರಿಪೂರ್ಣನೇ ಇರುವನು. ಇದನ್ನು ಹಿಂದಿನ ಓಂಕಾರದಲ್ಲಿ ನೋಡಿದ್ದೀರಿ. ಆದಕ್ಕೆ "ಓಂ ನಮಃ ಶಿವಾಯ" ಇದರ ಅರ್ಥವು ಪಾರ್ವತಿ ಸಹಿತ ಶಿವನಿಗೆ ನಮಿಸು ವೆನೆಂದು ಆಗುವದು. ಅದರಂತೆ "ಶಿವಾನುಭವ= ಪಾರ್ವತಿ ಸಹಿತ ಶಿವನ ಅನುಭವವೆಂದು ಆಗುವದು. ಶಿವಾ, ಶಿವೆ ಇವು ಶಿವನಿಂದ ಆಗಿವೆ ಅಂದರೆ, ಶಿವನ ಹೆಂಡತಿ ಎಂದು ಇವುಗಳ ಅರ್ಥವಾಗುವದು. ನಮ್ಮ ಇಷ್ಟಲಿಂಗವು ಶಿವಶಕ್ತ್ಯಾತ್ಮಕವಾಗಿದೆ. ಆದನ್ನು ಅಂಗೈಯಲ್ಲಿ ಇಟ್ಟುಕೊಂಡು ಓಂ ನಮಃ ಶಿವಾಯ ಎಂದು ಜಪಿಸಿ ಧ್ಯಾನಿಸಿದರೆ ಏನೆಂದು ಜಪಿಸಿದಂತೆ ಆಗುವದು. ಇಷ್ಟಲಿಂಗವು ಬರೇ ಶಿವನ ಗುರ್ತಾಗಿದ್ದರೆ ಶಿವನನ್ನೇ ಧ್ಯಾನಿಸಿದಂತೆ ಆಗು

ವದು. ಅದು ಶಿವ ಶಕ್ತಿಯರ ಬಲವಾದ ಗುರ್ತಾಗಿರುವದು. ಅಂದಮೇಲೆ ಅದರ ಅರ್ಥ ಹೇಗಾಗುವದು ನೋಡಿಕೊಳ್ಳಿರಿ. ಪಾರ್ವತಿ ಸಹಿತ ಶಿವನಿಗೆ ನಮಸ್ಕರಿಸುವೆನೆಂದೇ ಆಗುವದು.

ವೀರಶೈವವು ಶಕ್ತಿ ವಿಶಿಷ್ಟಾದ್ವೈತವಾಗಿರುವದು ಸರ್ವ ಶ್ರುತವಾಗಿದೆ. ಅದಕ್ಕೆ ತಕ್ಕಂತೆ ಅಂದರೆ ಶಿವಶಕ್ತಿಯರ ಇಷ್ಟಲಿಂಗ ಅದಕ್ಕೆ ತಕ್ಕಂತೆ ಮಂತ್ರ, ಅದಕ್ಕೆ ತಕ್ಕಂತೆ ಮಂತ್ರ, ಅದಕ್ಕೆ ತಕ್ಕಂತೆ ಮತದ ಹೆಸರು, ಅದಕ್ಕೆ ತಕ್ಕಂತೆ ತತ್ವಗಳು, ಅದಕ್ಕೆ ತಕ್ಕಂತೆ ಸಿದ್ಧಾಂತಗಳು ಸರ್ವವು ಶಿವಶಕ್ತಿಯರನ್ನು ಸೂಚಿಸುವಂತೆ ಇರಬೇಕು. ಅಂದರೆ ಮತ ಧರ್ಮದಲ್ಲಿ ತಾಳಮೇಳ ಉಂಟಾಗುವದು. ವೀರಶೈವ ಇದು ಮತದ ಹೆಸರು. ಇದರ ಅರ್ಥವೂ ಕೂಡ ಶಕ್ತಿಯುಳ್ಳ ಶಿವನ ಉಪಾಸಕರೆಂದು ಆಗುವದು. ವೀರ – ಶಕ್ತಿಯುಳ್ಳ, ಶೈವ – ಶಿವನ ಉಪಾಸಕ, ಅಂದರೆ ಶಕ್ತಿಯುಳ್ಳ ಶಿವನ ಉಪಾಸಕ ಎಂದು ಮತದ ಹೆಸರು ಇರುವದು. ಹೀಗೆ ಆ ತತ್ವಗಳೂ ಕೂಡ ಉಳಿದವರಿಗಿಂತ ಬೇರೆ ಆಗಿರುವವು ಸಿದ್ಧಾಂತವು ಉಳಿದವರಿಗಿಂತ ವಿಶೇಷವಾಗಿರುವದು. ಅದಕ್ಕೆ ತಕ್ಕಂತೆ ಮಂತ್ರವೂ ಕೂಡ ಇರುವದು. ಅದಕ್ಕೆ ಓಂ ನಮಃ ಶಿವಾಯ ಎಂದರೆ ಪಾರ್ವತಿ ಸಹಿತ ಶಿವನಿಗೆ ನಮಸ್ಕರಿಸುವೆನೆಂದೇ ಆಗುವದು. ಶಿವಾಯ ನಮಃ ಇದರ ಅರ್ಥವು ಕೂಡ ಹೀಗೇ ಆಗುವದು. ಶಿವಾ ಈ ಶಬ್ದವು ಶಿವನ ಹೆಂಡತಿ ಪಾರ್ವತಿ ಎಂದು ತಿಳಿಸುವದು. ಯಾ ಅಂದರೆ ಸಹಿತ ಶಿವನ ಹೆಂಡತಿ ಪಾರ್ವತಿ ಸಹಿತ ನಮಸ್ಕರಿಸುವೆನು, ಎಂದರೆ ಪಾರ್ವತಿ ಸಹಿತ ಶಿವನಿಗೆ ನಮಸ್ಕರಿಸುವೆನೆಂದೇ ಆಗುವದು. ವೀರಶೈವರ ಇಷ್ಟಲಿಂಗ ಷಡಕ್ಷರಿ ಅಥವಾ ಪಂಚಾಕ್ಷರಿ ಮಂತ್ರ ವೀರಶೈವ ಮತ, ಶಿವಾನುಭವ ಇವುಗಳು ಶಿವಶಕ್ತಿಯರನ್ನು ಬೋಧಿಸುವವು. ವೀರಶೈವರು ಪರಶಿವ, ಪರಶಕ್ತಿ, ಪುರುಷ ಪ್ರಕೃತಿ ಈ ನಾಲ್ಕು ತತ್ವಗಳನ್ನು ಒಪ್ಪಿಕೊಳ್ಳುವರು. ಉಳಿದವರಲ್ಲಿ ಪರ ಶಕ್ತಿ ಇಲ್ಲಾ. ೨೫ ತತ್ವಗಳು ಉಳಿದವರಲ್ಲಿ ಇದ್ದರೆ ನಮ್ಮಲ್ಲಿ ೩೬ ತತ್ವಗಳಿರುವವು. ಹೀಗೆ ಪ್ರತಿಯೊಂದರಲ್ಲಿ ವೈಶಿಷ್ಟ್ಯವಿದ್ದುದು ಕಂಡುಬರುತ್ತದೆ. ಅದಕ್ಕೆ ಪಂಚಾಕ್ಷರಿ, ಷಡಕ್ಷರಿ ಮಂತ್ರಗಳಲ್ಲಿಯೂ ಕೂಡ ವೈಶಿಷ್ಟ್ಯ ಇರುವದು ಸಹಜ ಇರುತ್ತದೆ.

"ಓಂ ನಮಃ ಶಿವಾಯ" ಇದರಲ್ಲಿ ಓಂಕಾರದ ಬಗ್ಗೆ ಹಿಂದೆ ಬರೆಯಲಾಗಿದೆ. ಈ ಮಂತ್ರದ ಅರ್ಥವನ್ನೂ ಸಹ ವಿವರಿಸಲಾಗಿದೆ. ಇನ್ನು ಉಳಿದ ಪಂಚಾಕ್ಷರಗಳ ಬಗ್ಗೆ ವಿವರಣೆ ಮಹಿಮೆಯನ್ನು ಬರೆಯುವೆವು.

ನ - ಎಂದರೆ ತಿರೋಧಾನ (ಹೊದಿಕೆ, ಮುಚ್ಚಳ) ವನ್ನು ಸೂಚಿಸುತ್ತವೆ. ಇದು ಹುಟ್ಟುವಿಕೆ ಅಂದರೆ ಸೃಷ್ಟಿಯನ್ನು ತಿಳಿಸುವದು. ( ಹುಟ್ಟಿಸುವದು ) ಸೃಷ್ಟಿ (ಬ್ರಹ್ಮನ ಕೆಲಸ)

ಮ - ಮಲ, ಹೊಲಸು. ಕಾರ್ಮಿಕ ಮಾಯಾ ಆಗಾಮಿ ಮಲಗಳು. ಇದು ಸಂರಕ್ಷಣ ಕಾರ್ಯವನ್ನು ಸೂಚಿಸುವದು. (ಸಂರಕ್ಷಿಸುವದು). ಸ್ಥಿತಿ (ವಿಷ್ಣುವಿನ ಕೆಲಸ) ಇವೆಲ್ಲ ಜೀವನಿಗೆ ಮುಟ್ಟಿದ್ದರಿಂದ ಶಿವನಲ್ಲಿ ಜೀವನು ಎಂದು ಭಾವಿಸಿದೆ.

ಶಿ - ಪರ ಶಿವ. ಜಗತ್ತಿನ ಪೂರ್ವದಲ್ಲಿ ತನ್ನ ತಾನರಿಯದೆ ಇದ್ದ ನಿರಂಜನ ಸ್ಥಿತಿ. ಇದು ಸಂಹಾರ ಕಾರ್ಯವನ್ನು ಸೂಚಿಸುವದು. ಲಯ (ಶಿವ)

ವಾ - ಪರಾಶಕ್ತಿ. ಪರಶಿವನೊಡನೆ ಅವಿನಾಭಾವ ಸಂಬಂಧದಿಂದ ಇದ್ದ ಶಕ್ತಿ. ಕ್ಷಮೆಯನ್ನು ಸೂಚಿಸುತ್ತದೆ. ಮಕ್ಕಳ ಅಪರಾಧಗಳನ್ನು ಆದಷ್ಟು ಮುಚ್ಚಿ ಮರೆಮಾಡಿ ಕ್ಷಮಿಸುವಳು.

ಯ - ಜೀವ. ಪ್ರಕೃತಿಯ ಜಾತ್ಯದಿಂದ ಅಂಗನು ಜೀವನು ಅಲ್ಪನು ಎಂದು ಭಾವಿಸಿದ್ದೇ ಆದಾಗಿದೆ.

(೧) ಹುಟ್ಟಿಸಿ, ರಕ್ಷಿಸಿ, ಸಂಹರಿಸಿ, ಕ್ಷಮಿಸಿ, ಆಶೀರ್ವಾದ ಮಾಡಿ ಮುಕ್ತನನ್ನಾಗಿ ಮಾಡುವ ಶಿವಪಾರ್ವತಿಯರು ಎಂದು ಇದೀ ಮಂತ್ರದ ಅರ್ಥವಾಗುವದು.

(೨) ಜೀವನಿಗೆ ಮುಚ್ಚಿದ ಮಾಯಾ ಕಾರ್ಮಿಕ ಆಗಾಮಿ ಮಲಗಳನ್ನು ಶಿವಶಕ್ತಿಯರು ತೆಗೆದು ಜೀವನನ್ನು ಮುಕ್ತನನ್ನಾಗಿ ಮಾಡಲೆಂದು ಓಂ ನಮಃ ಶಿವಾಯ ಅಕ್ಷರಗಳ ಎರಡನೇ ಅರ್ಥವಾಗುವದು. ಈ ಪ್ರಕಾರ ಈ ಅಕ್ಷರಗಳಿಗೆ ಎರಡು ಅರ್ಥಗಳಿರುವವು.

ನಮಃ ಅಂದರೆ ಜೀವಾತ್ಮ. ಶಿವ ಅಂದರೆ ಪರಮಾತ್ಮ. ಆಯ ಅಂದರೆ ಐಕ್ಯತೆಯನ್ನು ಸೂಚಿಸುತ್ತವೆ. ನಮಃ ಶಿವಾಯ ಅಂದರೆ ಜೀವ ಶಿವರ ಐಕ್ಯ ಎಂದು ಅರ್ಥವಾಗುವದು.

ನಮಃ ಅಂದರೆ ಅಂಗ, ಶಿವ ಅಂದರೆ ಲಿಂಗ. ಆಯ ಅಂದರೆ ಐಕ್ಯತೆ. ನಮಃಶಿವಾಯ ಅಂದರೆ ಲಿಂಗಾಂಗ ಸಮರಸ ಎಂದು ಅರ್ಥ

ಹೊರಡುತ್ತದೆ. ಎರಡು ಹೋಗಿ ಒಂದಾಗುವದೇ ಶಕ್ತಿ ವಿಶಿಷ್ಟಾದ್ವೈತದ ರಹಸ್ಯವಾಗಿದೆ. ಈ ಅರ್ಥಗಳೆಲ್ಲ ಧರ್ಮ ಗ್ರಂಥಕಾರರ ಸ್ವಂತ ಕಲ್ಪನೆಯ ಅರ್ಥಗಳಾಗಿರುವವು. ಆದರೆ ಇವು ಅರ್ಥಕೋಶದ ಅರ್ಥಗಳಲ್ಲ. ಆದರೂ ಈ ಅರ್ಥಗಳು ಬೇಕು. ಹೇಗೆ ವಿಚಾರಿಸಿದರೂ ಶಿವಶಕ್ತಿಯರಿಗೆ ನಮಸ್ಕಾರ ವೆಂದೇ ಹೊರಡುವದು. ಪಂಚಾಕ್ಷರೀ ಪ್ರಣವಗಳ ಅರ್ಥವನ್ನು ಮೇಲೆ ಮಾಡಿದ್ದರಲ್ಲಿಯೂ ಕೂಡ ಪರಶಕ್ತಿಯು ಬಂದೇ ಇರುವಳು. ಕೆಳಗಿನ 'ನಮಃ'ದ ಅರ್ಥದಲ್ಲಿ ಜೀವ ಅಂಗಗಳೆಂದು ಇದ್ದುದೂ ಕೂಡ ಶಕ್ತಿಯನ್ನೇ ಬೋಧಿಸುವವು. 'ನಮಃ' ಅಂದರೆ ಶಕ್ತಿ, ಶಿವ ಅಂದರೆ ಶಿವ. 'ಆಯ' ಅಂದರೆ ಐಕ್ಯತೆ. ನಮಃ ಶಿವಾಯ ಅಂದರೆ ಶಿವಶಕ್ತಿಯರ ಐಕ್ಯತೆ ಎಂದೇ ಅರ್ಥವಿರುವದು. ಅದಕ್ಕಾಗಿಯೇ ನಮ್ಮವರು ಶಿವಯೋಗ ಎಂಬ ಒಳ್ಳೇ ವೈಶಿಷ್ಟ್ಯಪೂರ್ಣವಾದ ಹೆಸರಿನಿಂದಲೇ ಲಿಂಗಾಂಗ ಸಮರಸಕ್ಕೆ ಶಿವಶಕ್ತಿಯರ ಐಕ್ಯಕ್ಕೆ, ಜೀವನ್ಮುಕ್ತ ಸ್ಥಿತಿಗೆ ಕರೆದಿದ್ದಾರೆ. ಯಾವ ಉಳಿದ ಭಾಷೆಯಲ್ಲಿ, ಉಳಿದ ಮತಗಳಲ್ಲಿ, ಉಳಿದ ಧರ್ಮಗಳಲ್ಲಿ ಶಿವಯೋಗವೆಂದು ಕರೆದಿಲ್ಲ. ವೀರಶೈವರೊಬ್ಬರೇ ಹೀಗೆ ಶಿವಯೋಗವೆಂದು ಕರೆದಿದ್ದಾರೆ. ಉಳಿದವರು ಭಕ್ತಿಯೋಗ, ಕರ್ಮಯೋಗ, ಜ್ಞಾನಯೋಗ, ರಾಜಯೋಗ, ಹಠಯೋಗ, ಲಯಯೋಗ, ಧ್ಯಾನಯೋಗ, ಮಂತ್ರಯೋಗ, ತಂತ್ರಯೋಗ ಹೀಗೆ ಕರೆದಿದ್ದಾರೆ. ಇವೆಲ್ಲ ಆಯಾ ಮಾರ್ಗಗಳ ಹೆಸರಿನಿಂದಲೇ ಕರೆದಿದ್ದಾರೆ. ಇದರಲ್ಲಿ ದೇವ ಎಂಬ ಅರ್ಥ ಕೊಡುವ ಶಬ್ದವೇ ಇಲ್ಲ. 'ಶಿವಯೋಗ' ಶಿವನನ್ನು ಕೂಡುವದು ಎಂದು ಇದರ ಅರ್ಥ [illegible] ವದಿಲ್ಲ. ತನ್ನ ಹೆಂಡತಿಯನ್ನೇ ಕೂಡುವನು. ಈಗ ಸಹಸ್ರಾರದಲ್ಲಿಯ ಶಿವನು ತನ್ನ ಹೆಂಡತಿಯಾದ ಶಕ್ತಿಯನ್ನು ಅಗಲಿದ್ದಾನೆ. ಅಂದರೆ ಶಕ್ತಿಯು ಆರು ಚಕ್ರವನ್ನು ದಾಟಿ ಮೂಲಾಧಾರದ ತಳದಲ್ಲಿ ತ್ರಿಕೋಣಾಕಾರದಲ್ಲಿ ಕೆಳಮುಖವಾಗಿ ಬಿದ್ದಿರುವಳು. ಇವಳೇ ಕುಂಡಲಿನಿ ಶಕ್ತಿ ಅಥವಾ ಕುಂಡಲಿನಿ ಸರ್ಪವೆನಿಸುವಳು. ಇವಳು ಮೇಲು ಮುಖ ಮಾಡಿ ಆರು ಚಕ್ರಗಳನ್ನು ಏರಿ ಹೋಗಿ ಸಹಸ್ರಾರದಲ್ಲಿ ( ತಲೆಯಲ್ಲಿ ) ಇರುವ ತನ್ನ ಪತಿಯಾದ ಪರಶಿವನನ್ನು ಕೂಡಿದಾಗ ಶಿವಯೋಗವಾಯಿತು, ಲಿಂಗಾಂಗ ಸಮರಸವಾಯಿತು, ಶಿವಜೀವರ ಐಕ್ಯವಾಯಿತು, ಶಿವಶಕ್ತಿಯರ ಯೋಗವು ಆಯಿತು. ಸತ್ ಚಿತ್ ಕೂಡಿ [illegible]

ನನ್ನೇ ಸೂಚಿಸುವದು. ಷಡಕ್ಷರವೂ ಅದನ್ನೇ ಸೂಚಿಸುವದು. ಕೋಟಿ ಮಂತ್ರಗಳಲ್ಲಿ ಇದೇ ಮಂತ್ರ ಬಹು ಹೆಚ್ಚಿನದೆಂದು ಹೇಳುವ ಕಾರಣವಾದರೂ ಏನು ? ಈ ಮಂತ್ರವು ಶಿವಶಕ್ತಿಯರನ್ನೇ ಸೂಚಿಸುವವು. ಅವರನ್ನೇ ಧ್ಯಾನ ಮಾಡಿದಂತೆ ಆಗುವದು. ಇದೆಲ್ಲ 'ಓಂ ನಮಃ ಶಿವಾಯ' ಮಂತ್ರದ ಒಳ್ಳೇ ವಿಶೇಷ ವೈಶಿಷ್ಟ್ಯವಾಗಿರುವದು. ಇಂಥ ಮಂತ್ರವನ್ನು ಪಠಿಸಿ ಸಕಲರು ಒಳ್ಳೇ ಪದವಿಯನ್ನು ಪಡೆಯಿರೆಂದು ಬೇಡಿಕೊಳ್ಳುವೆನು.

" ಓಂ ನಮಃ ಶಿವಾಯ " ಇದು " ನಮಃ ಶಿವಾಯ ಓಂ " ಎಂದು ಏರಿಕೆಯ ಕ್ರಮವನ್ನು ಸೂಚಿಸುವದು. ನ= ಭಕ್ತಸ್ಥಲ, ಮ= ಮಹೇಶ ಸ್ಥಲ, ಶಿ= ಪ್ರಸಾದಿ ಸ್ಥಲ, ವಾ= ಪ್ರಾಣಲಿಂಗಿ ಸ್ಥಲ, ಯ= ಶರಣ ಸ್ಥಲ, ಓಂ= ಐಕ್ಯಸ್ಥಲಗಳನ್ನು ಸೂಚಿಸುವವು. ಮಾನವನು ಈ ಆರು ಅಕ್ಷರಗಳ ಧ್ಯಾನದಿಂದ ಕ್ರಮವಾಗಿ ಭಕ್ತ, ಭಕ್ತಸ್ಥಲದಿಂದ ಮಹೇಶ, ಅಲ್ಲಿಂದ ಪ್ರಸಾದಿ, ಅಲ್ಲಿಂದ ಪ್ರಾಣಲಿಂಗಿ, ಅಲ್ಲಿಂದ ಶರಣ, ಅಲ್ಲಿಂದ ಐಕ್ಯಸ್ಥಲಗಳನ್ನು ಹತ್ತುವನು. ಅಥವಾ ಏರುವನು ಎಂದು ಸೂಚಿಸುವವು. ಜಗತ್ತಿನ ಉತ್ಪತ್ತಿಯು ಕೂಡ ಹೇಗಾಯಿತೆಂದು ಈ ಮಂತ್ರ ಹೇಳುವದು. ಓಂ ಅಂದರೆ ಐಕ್ಯಸ್ಥಲ ನಿರಾಲಂಬ ಸ್ಥಿತಿಯಿಂದ ಶರಣನು ಬರುವನು. ಆ ಶರಣನಿಂದ ಪ್ರಾಣಲಿಂಗಿ ಬರುವನು. ಆ ಪ್ರಾಣಲಿಂಗಿಯಿಂದ ಪ್ರಸಾದಿ, ಪ್ರಸಾದಿಯಿಂದ ಮಹೇಶ ಮಹೇಶನಿಂದ ಭಕ್ತ, ಭಕ್ತನಿಂದ ಸಕಲ ಚರಾಚರಗಳು. " ಅನಾದಿಯ ಮಗ ಆದಿ, ಆದಿಯ ಮಗನತೀತ, ಅತೀತನ ಮಗ ಆಕಾಶ, ಆಕಾಶದ ಮಗ ವಾಯು, ವಾಯುವಿನ ಮಗ ಅಗ್ನಿ, ಅಗ್ನಿಯ ಮಗ ಅಪ್ಪು, ಅಪ್ಪುವಿನ ಮಗ ಪೃಥ್ವಿ, ಪೃಥ್ವಿಯಿಂದ ಸಕಲ ಚರಾಚರಗಳು " ಈ ವಚನವು ಅದನ್ನೇ ಸೂಚಿಸುವದು. ಇವೆರಡೂ ಒಂದು ರೀತಿಯ ಜಗದುತ್ಪತ್ತಿಯ ಕ್ರಮಗಳು. ಅವುಗಳ ಗೂಢ ಅರ್ಥದ ಕಡೆಗೆ ವಿಚಾರಿಸಿರಿ.

ಸಹಜದಿಂದ ನಿರಾಲಂಬ, ನಿರಾಲಂಬದಿಂದ ನಿರಾಳ, ನಿರಾಳದಿಂದ ನಿರವಯ, ನಿರವಯದಿಂದ ಆದಿ, ಆದಿಯಿಂದ ಶರಣ, ಶರಣನಿಂದ ಸದಾಶಿವ, ಸದಾಶಿವನಿಂದ ಶಿವ, ಶಿವನಿಂದ ರುದ್ರ, ರುದ್ರನಿಂದ ವಿಷ್ಣು, ವಿಷ್ಣುವಿನಿಂದ ಬ್ರಹ್ಮ, ಬ್ರಹ್ಮನಿಂದ ಸಕಲ ಚರಾಚರ. ಈ ವಚನವನ್ನು ವಿಚಾರಿಸಿದರೂ ನೀನು ಮೇಲಿನ ಮಂತ್ರದ ಅರ್ಥವನ್ನೇ ಸೂಚಿಸುವದು. ವೀರಶೈವ ಸಿದ್ಧಾಂ

ಮಾಡಿಕೊಂಡು ಸಾಗುವದು ಕಂಡುಬರುತ್ತದೆ. ಇಷ್ಟಲಿಂಗ, ಷಡಕ್ಷರಿ ಮಂತ್ರ, ಷಟ್‌ಸ್ಥಲ, ಷಟಚಕ್ರ ಇವುಗಳೆಲ್ಲ ನಿಕಟ ಸಂಬಂಧವಿರುತ್ತದೆ. ಇವೆಲ್ಲ ಸೃಷ್ಟಿಯ ಉತ್ಪತ್ತಿ ಹಾಗೂ ಲಯಗಳ ರೀತಿ ನೀತಿಗಳನ್ನು ಬೋಧಿಸುವವು. ಇವು ನಿವೃತ್ತಿ ಹಾಗೂ ಪ್ರವೃತ್ತಿ ಪರವಾದ ಮಾರ್ಗಗಳನ್ನು ಬೋಧಿಸುವವು. ಏರಿಕೆ ಹಾಗೂ ಇಳಿಕೆಯ ಕ್ರಮಗಳನ್ನು ಸೂಚಿಸುವವು. ಒಂದರಿಂದ ಮತ್ತೊಂದು ಹೊರಗೆ ಬರುವ ಹಾಗು ಒಂದರಲ್ಲಿ ಮತ್ತೊಂದು ಒಳಸೇರುವ ಕ್ರಮಗಳನ್ನು ಬೋಧಿಸುವವು. ವೀರಶೈವ ಸಿದ್ಧಾಂತವು ವಿಚಾರಿಸಿದಂತೆ ಹೆಚ್ಚೆಚ್ಚು ಹೊಳೆಯುತ್ತ ಹೋಗುವದು. ಅದಕ್ಕೆ ಮುಕ್ತಾಯ ಕಾಣುವದಿಲ್ಲ. ಈ ಶಾಸ್ತ್ರವು ಇಂಥ ಗೂಢ ಗಂಭೀರ ವಿಶಾಲವಾಗಿರುತ್ತದೆ.

"ಓಂ ನಮ: ಶಿವಾಯ" ಮಂತ್ರವು ಏನನ್ನು ಎಷ್ಟನ್ನು ಹೇಗೆ ಯಾಕೆ ಸಂಬಂಧಿಸಿ ಒಳಗೊಳ್ಳುವದೆಂಬುದನ್ನು ಮೇಲೆ ವಿಚಾರಿಸಲಾಗಿದೆ. ಈ ಮಂತ್ರವು ಬಹು ಘನವಾದುದು. ಘನವಾದ ಮಂತ್ರವನ್ನು ಜಪಿಸುವದರಿಂದ ಧ್ಯಾನಿಸುವದರಿಂದ ಘನವಾದ ಸ್ಥಿತಿ, ಸ್ಥಾನಗಳು ಲಭಿಸುವದೆಂಬುದರಲ್ಲಿ ಸಂಶಯವೇ ಇಲ್ಲ. ಈ ಪೂರ್ಣ ಪರಿಪೂರ್ಣವಾದ ಷಡಕ್ಷರ ಮಂತ್ರವನ್ನು ಪೂರ್ಣ ಭಾವದಿಂದ ಪಠಿಸಿ ಪೂರ್ಣ ಪದವನೇರಿ ಪೂರ್ಣ ಮಾನವರು, ಪೂರ್ಣ ಯೋಗಿಗಳು, ಪೂರ್ಣ ಜ್ಞಾನಿಗಳು ಆಗಿ ಪೂರ್ಣದಲ್ಲಿ ಬೆರೆತು ಪೂರ್ಣರಾಗಿರೆಂದು ಹೇಳದೆ ಇರಲಾರೆವು. ಅದಕ್ಕಾಗಿಯೇ ಪುಷ್ಪದಂತನು ಸಂಸ್ಕೃತದಲ್ಲಿ ಹೇಳಿದ ನುಡಿಯನೇ ಕನ್ನಡಿಸಿದ್ದೇವೆ. ಅದನ್ನು ನೋಡಿರಿ.

ಶಿವಗಧಿಕತರ ದೇವರಿಲ್ಲ । ಶಿವಮಹಿಮೆಗಧಿಕ ಮಹಿಮೆ ಇಲ್ಲ ।
ಶಿವಮಂತ್ರಕಧಿಕ ಮಂತ್ರವು ಬೇರೆ ಎಲ್ಲಿಹುದು ? ॥

ಇವರಂತೆ ಅನೇಕ ಯೋಗಿಗಳ, ಶರಣರ, ಋಷಿಗಳ, ಮುನಿಗಳ ಅಭಿಪ್ರಾಯವಿರುವದೆಂದು ಮೇಲೆ ವಿವರಿಸಲಾಗಿದೆ. ಹೀಗಿದೆ ಈ ಷಡಕ್ಷರ ಮಂತ್ರದ ಮಹಿಮೆಯ ಅರ್ಥವು.

# ಆಧ್ಯಾತ್ಮ.

(ಲೇಖಕರು:— ಶ್ರೀ ಸದ್ಗುರು ಸಮರ್ಥ, ಶ್ರೀ ಗುರುಪಾದೇಶ್ವರ ಶಿಷ್ಯ ಚರಲಿಂಗಯ್ಯಾ ಬಸಯ್ಯಾ ಮಠ, ಕ. ಗಂ. ಮ. ಶಾಲಾ, ಗುಂಡಕನಾಳ)

ಇಂದು ಆಧ್ಯಾತ್ಮವು ಪ್ರತಿಯೊಬ್ಬ ಮಾನವ ಜೀವಿಗೂ ಬೇಕಾದ ವಿಷಯವಾಗಿದೆ. ಅಂತಿಯೇ ಜಗದಲ್ಲಿ ನಾನಾತರದ ಪಂಥಗಳು ಉದಯಿಸಿ ಧರ್ಮದ ಬಗ್ಗೆ ಅನೇಕ ರೀತಿಯಿಂದ ಬೋಧಿಸಿದ್ದಾಗಿದೆ. ಆ ಧರ್ಮದಲ್ಲಿ ವೀರಶೈವ ಧರ್ಮವೂ ಒಂದಾಗಿದೆ. ಅದರಲ್ಲಿಯ ಆಧ್ಯಾತ್ಮವು ಜಗದಲ್ಲಿ ಶ್ರೇಷ್ಠವೆಂದು ಸ್ವಾನುಭವದಿಂದ ತಿಳಿದುಕೊಳ್ಳಬೇಕು. ಇಂದು ಎಲ್ಲ ಮಾನವ ಜನಾಂಗಕ್ಕೆ ಬೇಕಾದದ್ದು ಸುಖ. ಆ ಸುಖವು ಬ್ರಹ್ಮಾನಂದದಲ್ಲಿ ಸಿಗುವದು. ಆ ಸುಖ ಕಂಡುಕೊಳ್ಳಬೇಕಾದರೆ ಆಧ್ಯಾತ್ಮದ ಬೆನ್ನುಹತ್ತಬೇಕು. ಆಧ್ಯಾತ್ಮದ ನಿಜವಾದ ತಿರಳನ್ನು ತಿಳಿದಲ್ಲಿ ಅದು ಅಮರತ್ವಕ್ಕೆ ಪ್ರಗತಿ ಪಥವಾದ ದಾರಿಯನ್ನು ತೋರಿಸುವದು. ಇದನ್ನು ತಿಳಿದ ಮಾನವರು ಶಾಶ್ವತವಾಗಿಯೇ ಉಳಿದಿದ್ದಾರೆ.

ಅಂದರೆ ಅವರ ಶರೀರ ಪಡಗಿದರೂ ಅವರು ತಿಳಿದುಕೊಂಡ ತತ್ವವು ಶಾಶ್ವತವಾಗಿಯೇ ಉಳಿದಿದೆ. ಹಾಗು ಶಿವಶರಣರು ಅಚ್ಚಳಿಯದ ಒಂದು ಅಮರ ನುಡಿಯನ್ನು ನುಡಿದಿದ್ದಾರೆ. ಅದು ಯಾವದೆಂದರೆ ಶರಣರಿಗೆ ಮರಣ ವಿಲ್ಲ. ಅಂದರೆ ಶರಣರು ಯಾವ ತತ್ವ ತಿಳಿದುಕೊಳ್ಳಬೇಕಾದರೆ ಸದ್ಗುರು ಅವಶ್ಯಬೇಕು. ಆ ಸದ್ಗುರುವಿನಿಂದಲೇ ಮರಣರಹಿತವಾದ ತತ್ವವು ತಿಳಿಯುವದು. ಇದರಂತೆ ಶ್ರೀ ಕಡಕೋಳ ಮಡಿವಾಳೇಶ್ವರರು ಸಹ ಹೇಳಿದ್ದಾರೆ. ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕ್ತಿಯೆಂದೂ ಇದು ಅಲ್ಲದೆ ಅನೇಕ ರೀತಿಯಲ್ಲಿ ಗಂಭೀರ ನುಡಿಯಿಂದ ಜನತೆಗೆ ಭೋದಿಸಿದ್ದಾರೆ. ಇನ್ನೂ ಅವರು ಒಂದು ಪದ್ಯದಲ್ಲಿ ಹೀಗೆ ಹೇಳಿದ್ದಾರೆ. ಸಾಕಪ್ಪ. ಏನು ಬೇಕಪ್ಪ. ರೊಕ್ಕ ಗಳಿಸಿದಿ ಬಾಳಪ್ಪ. ಅದು ನಿನ್ನ ಮಕ್ಕಳಿಗಾದೀತಪ್ಪ. ನಾಳೆಮಕೇಳಿದರೆಯೇನು ಹೇಳಿತಪ್ಪ. ಅಂದರೆ ಜನತೆಗೆ ಎಷ್ಟು ಸರಳರೀತಿಯಲ್ಲಿ ಭೋದಿಸಿದ್ದಾರೆ. ಮತ್ತು ಈ ಪ್ರಕಾರವಾಗಿ ಹೇಳಿದ್ದಾರೆ. ಧನವು

ಗಳಿಸಬೇಕೆಂಥಾದ್ದು. ಈ ಜನರಿಗೆ ತಿಳಿಯದಂತಾದ್ದು. ಇಲ್ಲಿ ನಾವು ಅಧ್ಯಾತ್ಮ ದೃಷ್ಟಿಯಿಂದ ನೋಡಿದರೆ ಧನವೆಂದರೆ ದ್ರವ್ಯವಲ್ಲ. ಜ್ಞಾನವೇ ದ್ರವ್ಯವೆಂದು ಬೋಧಿಸುವರು. ಕಾರಣ ಓ ಅಣ್ಣಗಳಿರಾ ಇನ್ನು ನಾವು ಅಧ್ಯಾತ್ಮಕ್ಕೆ ದೇಹ ಸವಿಸಬೇಕೇ ಹೊರತು ಅಲ್ಪ ಸುಖಕ್ಕಾಗಿ ವ್ಯರ್ಥ ದೇಹ ಸವಿಸ ಬಾರದು. ಅಧ್ಯಾತ್ಮವು ಪ್ರತಿಯೊಬ್ಬ ಮಾನವನಿಗೂ ಸಾಧಿಸಲು ಸಾಧ್ಯ ವಿದೆ. ಮನುಷ್ಯ ಧರ್ಮದ ಒಂದೇ ಒಂದು ಧರ್ಮವಿದೆ. ಅಂದರೆ ತತ್ವವ ತಿಳಿಯದೆ ಆತ್ಮನ ಕಾಣದೆ ಕತ್ತೆಯಂತೆ ಮತ್ತೊದರಲು ಬೇಡವೆಂಬ ಉಕ್ತಿ ಯಂತೆ ಜೀವ ಶಿವ ಐಕ್ಯ ಸಾಧಿಸಲು ಅಧ್ಯಾತ್ಮದ ಶ್ರವಣಬೇಕು. ಈ ಬಾಳು ನಮ್ಮೆಲ್ಲರನ್ನೂ ನುಂಗಲು ಹಾತೊರೆಯುತ್ತದೆ. ಬಾಳು ಎಂದರೆ ಮನಸ್ಸಿ ನಲ್ಲಿ ಚಪಳ ವಸ್ತುವಿಗಾಗಿ ಅಳುವದೇ ಬಾಳು ಇದನ್ನರಿತು ಸಮರ್ಥ ರಾಮದಾಸರು ದಾಸಭೋದೆಯಲ್ಲಿ ಆತ್ಮೋನ್ನತಿಯ ಬಗ್ಗೆ ಅನೇಕ ಉದಾ ಹರಣೆಗಳನ್ನು ಪ್ರತ್ಯಕ್ಷ ಪ್ರಮಾಣವಾಗಿ ನಮ್ಮ ಮುಂದೆ ಇಟ್ಟಿದ್ದಾರೆ. ಇದು ಅಲ್ಲದೆ ಪ್ರತಿಯೊಬ್ಬ ಮಾನವನಿಗೂ ಮನಸ್ಸು ಮಂಗನಂತೆ ಒಂದೇ ಸವನೆ ಚಲಿಸುತ್ತದೆ. ಆದಕಾರಣ ಮನಸ್ಸಿಗೆ ಉಪದೇಶ ಮಾಡುವ ಸಲುವಾಗಿ 'ಮನಾಚೆ ಶ್ಲೋಕ' ಬರೆದಿದ್ದಾರೆ. ಇದು ಅಲ್ಲದೆ ಶ್ರೀ ಸರ್ಪಭೂಷಣ ಶಿವ ಯೋಗಿಗಳು ಸಹ ಮನವೆಂಬ ಮರ್ಕಟನ ತಡೆಯಲಾರೆನು ದೇವ ಎನಿತಿ ದರಚಪಲಚೇಷ್ಟೆಗಳ ವರ್ಣಿಸಲಿ ಎಂದು ಹೇಳಿರುವರು. ಇದು ಅಲ್ಲದೆ ಸಜ್ಜ ನರಸಂಗ ಹೆಜ್ಜೇನು ಸವಿದಂತೆ ದುರ್ಜನಸಂಗ ಬಚ್ಚಲರೊಚ್ಚೆನಂತೆಯೆಂದು ಸರ್ವಜ್ಞನುಸಹ ಹೇಳಿರುವನು. ಕಾರಣ ಸಜ್ಜನರು ಅಂದರೆ ಯಾರು ಆತ್ಮಕ್ಕೆ ಸಮೀಪಿಸಿದ ಜನರು, ದುರ್ಜನರು ಅಂದರೆ ಆತ್ಮಕ್ಕೆ ದೂರಿರುವರು ಅವರೇ ಅಜ್ಞರು. ಅಜ್ಞ ವಸ್ತುವಿನ ಸಲುದಾಗಿಯೇ ಪ್ರಯತ್ನಿಸುವರು. ಕಾರಣ ಅಧ್ಯಾತ್ಮವನ್ನು ತಿಳಿಯಬೇಕಾದರೆ ಶ್ರೀ ಬಸವಣ್ಣನವರು ತಮ್ಮ ವಚನ ವಾಙ್ಮಯದಲ್ಲಿ ಹೇಳಿಲ್ಲವೇ? ಶಿವಪಥವನರಿಯಲು ಗುರುಪಥವೆ ಮೊದಲು ಯೆಂಬ ಉಕ್ತಿಯಂತೆ ಸದ್ಯದಲ್ಲಿ ಎಷ್ಟೋ ಶರಣರು ಬರೇ ಬಾಯಿ ಬ್ರಹ್ಮ ಹೇಳುತ್ತಿರುವರು. ಶ್ರೀ ಬಸವಣ್ಣನಂತೆ ಕೃತಿಯಲ್ಲಿ ತರುವದೇ ಅಧ್ಯಾತ್ಮ ಕಾರಣ ಉದರ ನಿಮಿತ್ತಮ್ ಬಹು ಕೃತ ವೇಷಮ್ ಯೆಂಬಂತೆ ಉದರ ಪೋಷ ಣೆಯ ಸಲುವಾಗಿ ಕೊಟ್ಟ ಶಾಸ್ತ್ರವನ್ನು ಬಿಟ್ಟು ನಿಜವಾದ ಅಧ್ಯಾತ್ಮವನ್ನು ಜನತೆಯಲ್ಲಿ ಬೀರಬೇಕು. ಇದಕ್ಕೂ ತಿಳಿಯದಿದ್ದರೆ ಪುರಂದರದಾಸರು ಹೇಳಿದ್ದಾರೆ, ಆರೇನು ಮಾಡುವರು ಆರಿಂದಲೇನಿಹುದು ಪೂರ್ವಜನ್ಮದ

ಕರ್ಮ ವಿಧಿ ಬೆನ್ನು ಬಿಡದುಯೆಂಬಂತೆ ಪೂರ್ವ ಜನ್ಮದ ಸಂಸ್ಕಾರದಂತೆ ನೀರಮೇಲಿನ ಗುರುಳಿ ಅಡಗಿದಂತೆ ಅಡಗಿಹೋಗುವರು. ಇಂದು ಜಗತ್ತಿನಲ್ಲಿ ಶಾಂತಿಬೇಕಾಗಿದೆ. ಶಾಂತಿಬೇಕಾದಲ್ಲಿ ಅಧ್ಯಾತ್ಮದ ಕಡೆಗೆ ಲಕ್ಷವಿಡಬೇಕು. ಇದರಿಂದಲೇ ಇಹಪರಗಳಲ್ಲಿ ಸದ್ಗತಿಯಾಗುವದು.

---

# ಹುನ್ನೂರಲ್ಲಿ
# ಶ್ರೀ ಮಲ್ಲಿಕಾರ್ಜುನ ಶಿವಯೋಗಿಯವರ
## ಪ್ರವಚನ ಸಮಾಪ್ತಿ ಸಮಾರಂಭ.

ಹುನ್ನೂರ ತಾ॥ ೪-೧೦-೧೯೫೭ ಗದುಗಿನ ಶ್ರೀ ಶಿವಯೋಗಿ ಮಲ್ಲಿಕಾರ್ಜುನ ಮಹಾ ಸ್ವಾಮಿಗಳ ಪ್ರವಚನವು ಹುನ್ನೂರಲ್ಲಿ ಈಗ ನಾಲ್ಕು (೪) ತಿಂಗಳಿಂದಲೂ ಒಳ್ಳೇ ಉತ್ಸಾಹದಿಂದ ನಡೆದಿತ್ತು. ಮುಂಜಾನೆ ಶ್ರೀ ನಿಜಗುಣ ಶಿವಯೋಗಿ ಶಾಸ್ತ್ರ, ಸಾಯಂಕಾಲ ೫ ಘಂಟೆಗೆ "ವೃತ್ತಿ ಪ್ರಭಾಕರ" ಸಾರ ಮತ್ತು ರಾತ್ರಿ ಏಳು (೭) ಘಂಟೆಗೆ ಸಾರ್ವಜನಿಕವಾಗಿ ಶ್ರೀ ಭಗವದ್ಗೀತೆ ಈ ಪ್ರಕಾರವಾಗಿ ಪ್ರತಿದಿವಸ ಮೂರು (೩) ವೇಳೆ ಮಹಾ ಸ್ವಾಮಿಯವರ ಪ್ರವಚನ ನಡೆಯುತ್ತಿತ್ತು. ತಿಳಿಗನ್ನಡದಲ್ಲಿ ಸರ್ವ ಸಾಮಾನ್ಯ ಜನರಿಗೂ ಸಹಿತ ಸುಲಭವಾಗಿ ಹೊಳೆಯುವಂತೆ ಬೋಧಿಸುವ ಅವರ ಬೋಧಾಮೃತವನ್ನು ಸವಿಯಲು ದಿನಾಲು ಸಾವಿರಾರು ಭಕ್ತರು ಹುನ್ನೂರಲ್ಲಿ ಉತ್ಕೃಷ್ಟವಾಗಿ ರಚಿಸಲ್ಪಟ್ಟ ಭವ್ಯವಾದ ಶಿವಾನುಭವ ಮಂಟಪದಲ್ಲಿ ನೆರೆಯುತ್ತಿದ್ದರು. ಇದೂ ಅಲ್ಲದೆ ಆ ಊರಿಗೆ ಸಮೀಪವಾಗುವ ಮುದರಖಂಡಿ, ಕಲ್ಲಳ್ಳಿ, ಕಂಕನವಾಡಿ, ಜಮಖಂಡಿ, ಕಡಪಟ್ಟಿ, ರಾಮತೀರ್ಥ ಮೊದಲಾದ ಊರುಗಳಿಂದ ಭಕ್ತಸಮೂಹವು ಪುಣ್ಯಾತ್ಮರ ಶ್ರವಣಾಮೃತ ಸವಿಯಲು ದಿನಾಲು ಅನುಭವ ಮಂಟಪದಲ್ಲಿ ನೆರೆಯುತ್ತಿದ್ದರು. ಈ ಮೂರು ನಾಲ್ಕು ತಿಂಗಳ ಅವಧಿಯಲ್ಲಿ ಮಹಾನುಭಾವರು ಶ್ರೀ ಭಗವದ್ಗೀತೆ, ಶ್ರೀ ನಿಜಗುಣ ಶಿವಯೋಗ ಶಾಸ್ತ್ರ ಮೊದಲಾದ ಬೋಧಸಾಧನದಿಂದ ಸಕಲ ವೇದಸಾರವನ್ನೇ ಅರುಹಿ

ಗಳಿಸಬೇಕೆಂಥಾದ್ದು. ಈ ಜನರಿಗೆ ತಿಳಿಯುದಂತಾದ್ದು. ಇಲ್ಲಿ ನಾವು ಅಧ್ಯಾತ್ಮ ದೃಷ್ಟಿಯಿಂದ ನೋಡಿದರೆ ಧನವೆಂದರೆ ದ್ರವ್ಯವಲ್ಲ. ಜ್ಞಾನವೇ ದ್ರವ್ಯವೆಂದು ಬೋಧಿಸುವರು. ಕಾರಣ ಓ ಅಣ್ಣಗಳಿರಾ ಇನ್ನು ನಾವು ಅಧ್ಯಾತ್ಮಕ್ಕೆ ದೇಹ ಸವಿಸಬೇಕೇ ಹೊರತು ಅಲ್ಪ ಸುಖಕ್ಕಾಗಿ ವ್ಯರ್ಥ ದೇಹ ಸವಿಸ ಬಾರದು. ಅಧ್ಯಾತ್ಮವು ಪ್ರತಿಯೊಬ್ಬ ಮಾನವನಿಗೂ ಸಾಧಿಸಲು ಸಾಧ್ಯ ಇದೆ. ಮನುಷ್ಯ ಧರ್ಮದ ಒಂದೇ ಒಂದು ಧರ್ಮವಿದೆ. ಅಂದರೆ ತತ್ವವ ತಿಳಿಯದೆ ಆತ್ಮನ ಕಾಣದೆ ಕತ್ತೆಯಂತೆ ಮತ್ತೊದರಲು ಬೇಡವೆಂಬ ಉಕ್ತಿ ಯಂತೆ ಜೀವ ಶಿವ ಐಕ್ಯ ಸಾಧಿಸಲು ಅಧ್ಯಾತ್ಮದ ಶ್ರವಣ ಬೇಕು. ಈ ಬಾಳು ನಮ್ಮೆಲ್ಲರನ್ನೂ ನುಂಗಲು ಹಾತೊರೆಯುತ್ತದೆ. ಬಾಳು ಎಂದರೆ ಮನಸ್ಸಿ ನಲ್ಲಿ ಚಪಳ ವಸ್ತುವಿಗಾಗಿ ಅಳುವದೇ ಬಾಳು ಇದನ್ನರಿತು ಸಮರ್ಥ ರಾಮದಾಸರು ದಾಸಬೋಧೆಯಲ್ಲಿ ಆತ್ಮೋನ್ನತಿಯ ಬಗ್ಗೆ ಅನೇಕ ಉದಾ ಹರಣೆಗಳನ್ನು ಪ್ರತ್ಯಕ್ಷ ಪ್ರಮಾಣವಾಗಿ ನಮ್ಮ ಮುಂದೆ ಇಟ್ಟಿದ್ದಾರೆ. ಇದು ಅಲ್ಲದೆ ಪ್ರತಿಯೊಬ್ಬ ಮಾನವನಿಗೂ ಮನಸ್ಸು ಮಂಗನಂತೆ ಒಂದೇ ಸವನೆ ಚಲಿಸುತ್ತದೆ. ಆದಕಾರಣ ಮನಸ್ಸಿಗೆ ಉಪದೇಶ ಮಾಡುವ ಸಲುವಾಗಿ 'ಮನಾಚೆ ಶ್ಲೋಕ' ಬರೆದಿದ್ದಾರೆ. ಇದು ಅಲ್ಲದೆ ಶ್ರೀ ಶರ್ಪಭೂಷಣ ಶಿವ ಯೋಗಿಗಳು ಸಹ ಮನವೆಂಬ ಮರ್ಕಟನ ತಡೆಯಲಾರೆನು ದೇವ ಎನಿತಿ ದರಚಪಲಚೇಷ್ಟೆಗಳ ವರ್ಣಿಸಲಿ ಎಂದು ಹೇಳಿರುವರು. ಇದು ಅಲ್ಲದೆ ಸಜ್ಜ ನರಸಂಗ ಹೆಜ್ಜೇನು ಸವಿದಂತೆ ದುರ್ಜನಸಂಗ ಬಚ್ಚಲರೊಚ್ಚೆನಂತೆಯೆಂದು ಸರ್ವಜ್ಞನುಸಹ ಹೇಳಿರುವನು. ಕಾರಣ ಸಜ್ಜನರು ಅಂದರೆ ಯಾರು ಆತ್ಮಕ್ಕೆ ಸಮೀಪಿಸಿದ ಜನರು, ದುರ್ಜನರು ಅಂದರೆ ಆತ್ಮಕ್ಕೆ ದೂರಿರುವರು ಅವರೇ ಅಜ್ಞರು. ಅಜ್ಞ ವಸ್ತುವಿನ ಸಲುದಾಗಿಯೇ ಪ್ರಯತ್ನಿಸುವರು. ಕಾರಣ ಅಧ್ಯಾತ್ಮವನ್ನು ತಿಳಿಯಬೇಕಾದರೆ ಶ್ರೀ ಬಸವಣ್ಣನವರು ತಮ್ಮ ವಚನ ವಾಙ್ಮಯದಲ್ಲಿ ಹೇಳಿಲ್ಲವೇ? ಶಿವಪಥವನರಿಯಲು ಗುರುಪಥವೆ ಮೊದಲು ಯೆಂಬ ಉಕ್ತಿಯಂತೆ ಸದ್ಯದಲ್ಲಿ ಎಷ್ಟೋ ಶರಣರು ಬರೇ ಬಾಯಿ ಬ್ರಹ್ಮ ಹೇಳುತ್ತಿರುವರು. ಶ್ರೀ ಬಸವಣ್ಣನಂತೆ ಕೃತಿಯಲ್ಲಿ ತರುವದೇ ಅಧ್ಯಾತ್ಮ ಕಾರಣ ಉದರ ನಿಮಿತ್ತಮ್ ಬಹು ಕೃತ ವೇಷಮ್ ಯೆಂಬಂತೆ ಉದರ ಪೋಷ ಣೆಯ ಸಲುವಾಗಿ ಕೊಟ್ಟ ಶಾಸ್ತ್ರವನ್ನು ಬಿಟ್ಟು ನಿಜವಾದ ಅಧ್ಯಾತ್ಮವನ್ನು ಜನತೆಯಲ್ಲಿ ಬೀರಬೇಕು. ಇದಕ್ಕೂ ತಿಳಿಯದಿದ್ದರೆ ಪುರಂದರದಾಸರು ಹೇಳಿದ್ದಾರೆ, ಆರೇನು ಮಾಡುವರು ಆರಿಂದಲೇನಿಹುದು ಪೂರ್ವಜನ್ಮದ

ಕರ್ಮ ವಿಧಿ ಬೆನ್ನು ಬಿಡದುಯೆಂಬಂತೆ ಪೂರ್ವ ಜನ್ಮದ ಸಂಸ್ಕಾರದಂತೆ ನೀರಮೇಲಿನ ಗುರುಳೆ ಅಡಗಿದಂತೆ ಅಡಗಿಹೋಗುವರು. ಇಂದು ಜಗತ್ತಿನಲ್ಲಿ ಶಾಂತಿಬೇಕಾಗಿದೆ. ಶಾಂತಿಬೇಕಾದಲ್ಲಿ ಅಧ್ಯಾತ್ಮದ ಕಡೆಗೆ ಲಕ್ಷವಿಡಬೇಕು. ಇದರಿಂದಲೇ ಇಹಪರಗಳಲ್ಲಿ ಸದ್ಗತಿಯಾಗುವದು.

---

# ಹುನ್ನೂರಲ್ಲಿ
# ಶ್ರೀ ಮಲ್ಲಿಕಾರ್ಜುನ ಶಿವಯೋಗಿಯವರ
## ಪ್ರವಚನ ಸಮಾಪ್ತಿ ಸಮಾರಂಭ.

ಹುನ್ನೂರ ತಾ॥ ೪-೧೦-೧೯೫೭ ಗದುಗಿನ ಶ್ರೀ ಶಿವಯೋಗಿ ಮಲ್ಲಿಕಾರ್ಜುನ ಮಹಾ ಸ್ವಾಮಿಗಳ ಪ್ರವಚನವು ಹುನ್ನೂರಲ್ಲಿ ಈಗ ನಾಲ್ಕು (೪) ತಿಂಗಳಿಂದಲೂ ಒಳ್ಳೇ ಉತ್ಸಾಹದಿಂದ ನಡೆದಿತ್ತು. ಮುಂಜಾನೆ ಶ್ರೀ ನಿಜಗುಣ ಶಿವಯೋಗಿ ಶಾಸ್ತ್ರ, ಸಾಯಂಕಾಲ ೫ ಘಂಟೆಗೆ "ವೃತ್ತಿ ಪ್ರಭಾಕರ" ಸಾರ ಮತ್ತು ರಾತ್ರಿ ಏಳು (೭) ಘಂಟೆಗೆ ಸಾರ್ವಜನಿಕವಾಗಿ ಶ್ರೀ ಭಗವದ್ಗೀತೆ ಈ ಪ್ರಕಾರವಾಗಿ ಪ್ರತಿದಿವಸ ಮೂರು (೩) ವೇಳೆ ಮಹಾ ಸ್ವಾಮಿಯವರ ಪ್ರವಚನ ನಡೆಯುತ್ತಿತ್ತು. ತಿಳಿಗನ್ನಡದಲ್ಲಿ ಸರ್ವ ಸಾಮಾನ್ಯ ಜನರಿಗೂ ಸಹಿತ ಸುಲಭವಾಗಿ ಹೊಳೆಯುವಂತೆ ಬೋಧಿಸುವ ಅವರ ಬೋಧಾಮೃತವನ್ನು ಸವಿಯಲು ದಿನಾಲು ಸಾವಿರಾರು ಭಕ್ತರು ಹುನ್ನೂರಲ್ಲಿ ಉತ್ಕೃಷ್ಟವಾಗಿ ರಚಿಸಲ್ಪಟ್ಟ ಭವ್ಯವಾದ ಶಿವಾನುಭವ ಮಂಟಪದಲ್ಲಿ ನೆರೆಯುತ್ತಿದ್ದರು. ಇದೂ ಅಲ್ಲದೆ ಆ ಊರಿಗೆ ಸಮೀಪವಾಗುವ ಮುದರಖಂಡಿ, ಕಲ್ಲಳ್ಳಿ, ಕಂಕನವಾಡಿ, ಜಮಖಂಡಿ, ಕಡಪಟ್ಟಿ, ರಾಮತೀರ್ಥ ಮೊದಲಾದ ಊರುಗಳಿಂದ ಭಕ್ತಸಮೂಹವು ಪುಣ್ಯಾತ್ಮರ ಶ್ರವಣಾಮೃತ ಸವಿಯಲು ದಿನಾಲು ಅನುಭವ ಮಂಟಪದಲ್ಲಿ ನೆರೆಯುತ್ತಿದ್ದರು. ಈ ಮೂರು ನಾಲ್ಕು ತಿಂಗಳ ಅವಧಿಯಲ್ಲಿ ಮಹಾನುಭಾವರು ಶ್ರೀ ಭಗವದ್ಗೀತೆ, ಶ್ರೀ ನಿಜಗುಣ ಶಿವಯೋಗ ಶಾಸ್ತ್ರ ಮೊದಲಾದ ಬೋಧಸಾಧನದಿಂದ ಸಕಲ ವೇದಸಾರವನ್ನೇ ಅರುಹಿ

ಸಾಮಾನ್ಯರಿಗೂ ಸಹಿತ ಅಧ್ಯಾತ್ಮ ಬೋಧೆಯನ್ನು ಮಾಡಿದರು. ಅವರ ಬೋಧ ಫಲದಿಂದ ಜನತೆಯಲ್ಲಿ ಸತ್ಕ್ರಿಯು, ಸುನೀತಿ, ಭಕ್ತಿ, ಸದಾಚಾರ ಮೊದಲಾದ ಸದ್ಗುಣಗಳು ಬೆಳೆದು ಜನತೆಯು ಶಾಂತಿ, ನಿಜಜ್ಞಾನ ಬೆಳಕಿನಿಂದ ಆನಂದಿತರಾಗಿ ಕೃತಾರ್ಥರಾದರು.

ಈ ಪ್ರತಿಭಾವಂತರ ಪ್ರವಚನವು ತಾ॥ ೪-೧೦-೧೯೫೭ ಶುಕ್ರವಾರ ದಿವಸ ಮುಕ್ತಾಯಗೊಂಡಿತು. ಮುಕ್ತಾಯ ಸಮಾರಂಭದ ಕಾಲಕ್ಕೆ ಸುಮಾರು ೩-೪ ಸಾವಿರ ಜನರು ಮಹಾತ್ಮರ ಕೃಪಾಶೀರ್ವಾದ ಪಡೆಯಲು ಮತ್ತು ಅವರನ್ನು ಬೀಳ್ಕೊಡುವ ಸಲುವಾಗಿ ಶಿವಾನುಭವ ಮಂಟಪದಲ್ಲಿ ಕಿಕ್ಕಿರಿದು ನೆರೆದಿದ್ದರು. ಹುನ್ನೂರ ಯಾವತ್ತು ಭಕ್ತ ಜನರ ಪತಿಯಿಂದ ಶ್ರೀ ಕೆ. ಎಸ್. ಸಾವಳಗಿಯವರು ಮಹಾತ್ಮರಿಗೆ ಮಾನಪತ್ರವನ್ನರ್ಪಿಸಿ ಎಲ್ಲ ಜನರಿಗೆ ಜ್ಞಾನೋದಯ ಮಾಡಿದ್ದಕ್ಕೆ ಅವರನ್ನು ಕೊಂಡಾಡಿ ಜನತೆಯ ಏಳ್ಗೆಯ ಸಲುವಾಗಿ ಮಹಾತ್ಮರು ಇನ್ನೂ ಪರಿಶ್ರಮಿಸಬೇಕಾಗಿದ್ದು ಪರಮಾತ್ಮನು ಅವರಿಗೆ ಆಯುರಾರೋಗ್ಯವನ್ನು ಕೊಟ್ಟು ಕಾಪಾಡಲೆಂದು ಹಾರೈಸಿದರು. ಆ ನಂತರ ಮಹಾತ್ಮರು ಆನಂದಭರಿತದಿಂದ ಎಲ್ಲರಿಗೂ ಆಶೀರ್ವದಿಸಿ ಹುನ್ನೂರ ಜನರ ಭಕ್ತಿ ಮತ್ತು ಸೇವೆಯ ಬಗ್ಗೆ ಒಳ್ಳೆ ಪ್ರಶಂಸೆ ಮಾಡಿದರು. ಆ ಬಳಿಕ ಆ ಮಹಾತ್ಮರನ್ನು ಭಕ್ತ ಜನರಿಂದ ರಮ್ಯವಾಗಿ ರಚಿಸಲ್ಪಟ್ಟ ಮತ್ತು ಎಲ್ಲ ಬಗೆಯಿಂದ ಅಲಂಕೃತವಾದ ಸಿಂಹಾಸನ ಮಂಟಪದಲ್ಲಿ ಒಳ್ಳೆ ವಿಜೃಂಬಣೆಯಿಂದ ಬೆಂಡು, ಮವಾಲಸಿ, ಕರಡಿ ಮೊದಲಾದ ನಾನಾತರದ ವಾದ್ಯನಗಳಿಂದ ಯುಕ್ತವಾಗಿ ಅವರ ಮೆರವಣಿಗೆಯನ್ನು ತೆಗೆಯಲಾಯಿತು. ಸಾವಿರಾರು ಮಹಿಳೆಯರು ಆರತಿಯನ್ನು ಹಿಡಿದುಕೊಂಡು ಮಹಾತ್ಮರನ್ನು ಬೀಳ್ಕೊಡಲು ಮೆರುವೆಣಿಗೆಯ ಸಂಗಡ ಸುಶೋಭಿತವಾಗಿ ಹಿಂಬಾಲಿಸಿದ್ದರು. ಸುಮಾರು ಮೂರು ನಾಲ್ಕು ಸಾವಿರ ಜನರು ಮೆರವಣಿಗೆಯಲ್ಲಿ ಭಾಗವಹಿಸಿದ್ದರು. ಊರೊಳಗಿನ ಪ್ರಮುಖ ಬೀದಿಗಳ ಎಡಬಲದಲ್ಲಿ ಸಾವಿರಾರು ಸ್ತ್ರೀಪುರುಷರು ಕಾಯಿ ಕರ್ಪುರಗಳನ್ನು ಹಿಡಿದುಕೊಂಡು ಮಹಾತ್ಮರ ಜಯಜಯಕಾರ ಮಾಡುತ್ತಿದ್ದರು. ಭಕ್ತಿರಸದಿಂದ ಹೊರಹೊಮ್ಮುವ ಈ ಎಲ್ಲ ಸಡಗರವನ್ನು ನೋಡಿ ಎಲ್ಲರ ಹೃದಯದಿಂದ ಕರುಣ ರಸವು ಹೊರಸೂಸಿ ಆನಂದಭಾಷ್ಪಗಳು ಧಾರೆಯಾಗಿ ಹರಿಯುತ್ತಿದ್ದವು. ಮಹಾತ್ಮರು ಗದ್ಗದಿತ ಕಂಠದಿಂದ ಎಲ್ಲರಿಗೂ ಆಶೀರ್ವದಿಸಿ ಜಮುಖಂಡಿಗೆ ದಯಮಾಡಿಸಿದರು.

# ಮಾನಪತ್ರವು.

ಸಚ್ಚಿದಾನಂದ ಸ್ವರೂಪರೂ, ನಿಜಸುಖಶಾಂತಿದಾತರೂ, ಜ್ಞಾನಸಾಗರರೂ ಆದ ಶ್ರೀ ಸದ್ಗುರು ಶಿವಯೋಗಿ ಮಲ್ಲಿಕಾರ್ಜುನ ಮಹಾನುಭಾವರೇ ತಮ್ಮ ಚರಣ ಕಮಲಗಳಿಗೆ ಶಿರಬಾಗಿ ಕರಮುಗಿದು ನಾವೆಲ್ಲರೂ ನಮ್ಮ ನೆಮ್ಮದಿಯ ವಂದನೆಗಳನ್ನು ಅರ್ಪಿಸುತ್ತೇವೆ.

ಲೋಕೋದ್ಧಾರಕರಾದ ಮಹಾತ್ಮರೇ, ಲೋಕ ಕಲ್ಯಾಣದ ಸಲುವಾಗಿ ನಿಜಧರ್ಮ ಸ್ಥಾಪನೆಯ ಸಲುವಾಗಿ ನಮ್ಮ ಕನ್ನಡ ನಾಡನ್ನು ಚಿನ್ಮಯ ಮಾಡುವ ಸಲುವಾಗಿ ತಮ್ಮ ಅವತಾರವಿದೆ. ತಮ್ಮಂಥ ಮಹಾ ಮಹಿಮರ ಸಹವಾಸ ಪಡೆದು ತಮ್ಮ ಬೋಧಾಮೃತವನ್ನು ಸವಿದ ನಾವು ನಿಜವಾಗಿಯೂ ಭಾಗ್ಯಶಾಲಿಗಳಾಗಿದ್ದೇವೆ. ನಮ್ಮ ಊರು ಪುನೀತವಾಗಿದೆ.

ಬ್ರಹ್ಮವಿದ್ಯೆಯು ಇಷ್ಟು ದಿವಸ ಕೇವಲ ಒಂದು ವರ್ಗದ ಸೊತ್ತಾಗಿತ್ತು. ದುರ್ಗಮವಾದ ಕಾಡಾರಣ್ಯದ ಗವಿಗಳೊಳಗೆ ವಾಸಿಸುವ ಹಾಗೂ ಸುಭದ್ರವಾಗಿ ಕಟ್ಟಿದ ನಾಲ್ಕು ಸಮಾಧಿ ಗೋಡೆಗಳೊಳಗೆ। ಸಮಾಧಿಸ್ಥರಾಗಿ ಕುಳಿತ ಯೋಗಿಗಳಿಗಷ್ಟೇ ಆ ಬ್ರಹ್ಮ ವಿದ್ಯೆಯು ಸಾಧ್ಯವಾಗಿತ್ತು. ಉಳಿದ ಸಾಮಾನ್ಯರಿಗೆ ಅದು ದುರ್ಲಭವಾಗಿತ್ತು. ಪ್ರತಿಭಾಶಾಲಿಗಳೇ ತಮ್ಮಂಥ ಪ್ರತಿಭಾವಂತ ಜ್ಞಾನಿಗಳ ಕೃಪೆಯಿಂದಲೂ ತಮ್ಮ ಅಪ್ರತಿಮ ಸಾಹಸದಿಂದಲೂ ಈಗ ಅದು ನಾಡಿನ ಮೂಲೆ ಮೂಲೆಗೂ ಸಹಿತ ಸುಲಭವಾಗಿ ಲಭಿಸಿ ಎಲ್ಲರಲ್ಲಿಯೂ ಒಂದೇ ಆತ್ಮದ ವಿಶ್ವಭಾವವನ್ನುಂಟುಮಾಡಲು ಮಾರ್ಗದರ್ಶಕವಾಯಿತು. ಇದರಿಂದ ತಮ್ಮ ಮಹಿಮೆಯು ಇಡೀ ಕರ್ನಾಟಕ, ಮಹಾರಾಷ್ಟ್ರ, ಮುಂಬಯಿಗಳ ವರೆಗೆ ಬೆಳೆದು ಹೋಗಯಹತ್ತಿತು.

ಸೇದುಭಾವಿಯಲ್ಲಿ ಹುಟ್ಟಿ ಅಲ್ಲಿಯೇ ಬೆಳೆದು ವಾಸಿಸುವ ಕಪ್ಪೆಗೆ ವಿಸ್ತಾರವಾದ ಮಹಾಸಾಗರದ ಕಲ್ಪನೆಯು ಹೇಗೆ ಅಸಾಧ್ಯವೋ ಅದರಂತೆ ತಾಪದಾಯಕವಾದ ಸಂಸಾರ ಕೂಪದೊಳಗೆ ಅಜ್ಞಾನದಿಂದ ತೊಳಲಿ ಬಳಲಿ ಗತಿಗಾಣದಿರುವಾಗ ಸದ್ಗುರುಗಳೇ ತಾವು ಸದಾಚಾರ, ಸತ್ಕರ್ಮ, ಸದ್ಭಕ್ತಿ

ಸತ್ಸಂಗ ಮೊದಲಾದ ಸುಭದ್ರವಾದ ಸದ್ಗುಣಗಳ ಸೋಪಾನ ಕಟ್ಟಿ ನಮ್ಮನ್ನು ಸಂಸಾರ ತಾಪದಿಂದ ಮುಕ್ತರನ್ನಾಗಿ ಮಾಡಿದಿರಿ. ನಮ್ಮಲ್ಲಿರುವ ದ್ವೇಷಾಸೂಯೆ, ವೈಮನಸ್ಸು, ಸ್ವಾರ್ಥ, ಜಾತಿ ಮತಭೇದ, ಅಹಂಕಾರ, ಮೂಢತೆ, ಅಜ್ಞಾನ ಮೊದಲಾದ ದುರ್ಗುಣಗಳನ್ನು ಹೊಡೆದೋಡಿಸಿ ನಮ್ಮೊಳಗೆ ಶಾಂತಿ, ಶಮೆ, ದಮೆ, ವೈರಾಗ್ಯ ಮೊದಲಾದ ಸುಜ್ಞಾನದ ಬೀಜ ಬಿತ್ತಿದಿರಿ. ಧರ್ಮದ ಹೆಸರಿನಿಂದ ಜಾತಿಯ ಪಂಗಡಗಳನ್ನು ಮಾಡಿ ಕೀಳು ಮೇಲುಗಳ ಜಗಳಾಟದಿಂದ ಹಾಳಾಗುತ್ತಿರುವ ಧರ್ಮಾಂಧರಿಗೆ ಇಡೀ ಮಾನವ ಕುಲ ಒಂದೇ ಎಂಬುವ ಧರ್ಮವನ್ನು ಮರ್ಮಭೇದಕವಾಗಿ ಬೋಧಿಸಿದಿರಿ. ದಯವೇ ಧರ್ಮದ ಮೂಲವೆಂದು ತಿಳಿಸಿಕೊಟ್ಟಿರಿ.

ಶ್ರೀ ಭಗವದ್ಗೀತೆ, ಶ್ರೀ ನಿಜಗುಣ ಶಿವಯೋಗಿಗಳ ಪರಮಾರ್ಥ ಗೀತೆಗಳ ಬೋಧ ಸಾಧನದಿಂದ ಎಲ್ಲರ ಮನಸ್ಸೆಳೆಯುವಂತೆ ಸರ್ವ ಸಾಮಾನ್ಯ ಜನತೆಗೂ ಸಹಿತ ಹೊಳೆಯುವಂತೆ ತಿಳಿಗನ್ನಡದಲ್ಲಿ ನಮಗೆ ಬೋಧಿಸಿ ನಿಜಜ್ಞಾನ ಮಾರ್ಗವನ್ನು ನಮಗೆ ತೋರಿಸಿಕೊಟ್ಟಿರಿ. ಪರಮ ಪೂಜ್ಯ ಗುರುಗಳೇ, ಅಜ್ಞಾನ ಗಾಢಾಂಧಕಾರದೊಳಗೆ ಮುಳುಗಿದ ನಾವು ನಿಜಜ್ಞಾನ ಬೆಳಕಿನಿಂದ ಕೃತಾರ್ಥರಾದೆವು.

ಸಮರ್ಥ ಜ್ಞಾನನಿಧಿಗಳೇ, ನಮ್ಮೂರೊಳಗೆ ಚಿಕ್ಕ ಮಕ್ಕಳ ಸಲುವಾಗಿ ಶಾಲೆಯನ್ನು ಕಟ್ಟಿಸಬೇಕೆಂದು ಈಗ ನಾಲ್ಕಾರು ವರುಷಗಳಿಂದ ಪ್ರಯತ್ನ ಮಾಡುತ್ತ ಬಂದರೂ ಸಾಧ್ಯವಾಗಿರಲಿಲ್ಲ. ಈ ಮಹತ್ಕಾರ್ಯವನ್ನು ತಾವು ಲೀಲಾ ಮಾತ್ರದಿಂದ ಸಾಧಿಸಿ ಕೊಟ್ಟು ಚಿಕ್ಕ ಮಕ್ಕಳ ಸಲುವಾಗಿ ಇನ್ನೊಂದು ವಿದ್ಯಾಲಯವನ್ನು ಕಟ್ಟಿಸುವ ಏರ್ಪಾಡು ಮಾಡಿ ಅದರ ಶಂಕುಸ್ಥಾಪನೆಯನ್ನಾದರೂ ಸಹಿತ ತಾವು ಮಾಡಿದಿರಿ. ವೇದಾಭ್ಯಾಸವು ನಮ್ಮಲ್ಲಿ ಸದಾಕಾಲವೂ ಸುಗಮವಾಗಿ ಸಾಗಲೆಂದು ಜ್ಞಾನ ಮಂದಿರವನ್ನು ಕಟ್ಟಿಸುವ ಏರ್ಪಾಡು ಮಾಡಿಕೊಟ್ಟಿರಿ. ತಂದೆಯೇ, ಮಕ್ಕಳ ಚಿಂತೆ ನಿಮಗೆ ಅಲ್ಲವೇ ?

ಕಾಡಾದ ನಮ್ಮ ನಾಡಿನ ಉದ್ಧಾರದ ಸಲುವಾಗಿ, ನಿಜಧರ್ಮ ಸ್ಥಾಪನೆಯ ಸಲುವಾಗಿ, ನಮ್ಮೆಲ್ಲರ ಏಳ್ಗೆಯ ಸಲುವಾಗಿ ತಾವು ಇನ್ನೂ ಪರಿಶ್ರಮಿಸಬೇಕಾಗಿದೆ. ನಮ್ಮೆಲ್ಲರ ಹಿತದ ಸಲುವಾಗಿ ಪರಮಾತ್ಮನು

ತಮಗೆ ಆಯುರಾರೋಗ್ಯಗಳನ್ನು ಕೊಡಲೆಂದು ಪ್ರಾರ್ಥಿಸುತ್ತೇವೆ. ತಮ್ಮಂಥ ಮಹಾತ್ಮರ ದಿವ್ಯ ತೇಜದಿಂದ ನಮ್ಮ ನಾಡು ವಿಶ್ವದಾತ್ಮವಾಗಿ ಲೋಕ ದೊಳಗೆ ಬೆಳಗಿ ನಿಜ ಸುಖ ಶಾಂತಿಯನ್ನು ಪಡೆಯಲೆಂದು ಹಾರೈ ಸುತ್ತೇವೆ.

ಗುರುದೇವಾ, ತಾವೆಲ್ಲಿದ್ದರೂ ತಮ್ಮ ಕೃಪೆಯು ನಮ್ಮ ಮೇಲೆ ಸದಾಕಾಲವಿರಲೆಂದು ಭಕ್ತಿಭಾವದಿಂದ ತಮ್ಮನ್ನು ಬೇಡಿಕೊಂಡು ತಮ್ಮ ಪಾದಾರವಿಂದಗಳಿಗೆ ಪ್ರಣಾಮ ಮಾಡುತ್ತೇವೆ.

ಹುನ್ನೂರ<br>
ತಾ|| ೪-೧೦-೫೭

ಮಹಾತ್ಮರ ಸೇವಕರಾದ<br>
**ಹುನ್ನೂರ ಭಕ್ತ ಜನರು.**

# ತೋಪಿನ ಮಠದ ಸ್ವಾಮಿಗಳ ಉಪದೇಶ ಸಾರ

(ಲೇಖಕರು:- ಶ್ರೀ. ಪು. ಮಲ್ಲಪ್ಪ ಜ್ಞಾನಮಂದಿರ, ಹಲಗೂರು.)

---

ಸೋಸಲೆಯ ತೋಪಿನ ಮಠದ ಸ್ವಾಮಿಗಳು ಶ್ರೀ ಶಿವಯೋಗಿ ಷಡಕ್ಷರ ದೇಶಿಕೇಂದ್ರರ ಪವಿತ್ರಬಾಳು, ತೀವ್ರ ವೈರಾಗ್ಯ, ನಿಷ್ಟೆಯ ನಿಸ್ವಾರ್ಥತೆ ಆದರ್ಶವಾಗಿದೆ. ಪರಮೇಶ್ವರನು ಅನಂತ ಸಾಗರ. ನಮ್ಮ ಶಕ್ತಿ, ಭಕ್ತಿಗಳಿಗೆ ಅನುಗುಣವಾಗಿ ನಾವು ಕೈಹಾಕುವ ಮಾರ್ಗಕ್ಕೆ ಅನುಸಾರವಾಗಿ ನಮಗೆ ಸಿದ್ಧಿಯು ಸಿಗುತ್ತದೆ. ಇದನ್ನು ನಮ್ಮ ಕಥಾನಾಯಕರ ಉಪದೇಶ ವಾಣಿಯಲ್ಲಿ ಆಗಾಗ್ಗೆ ನಾವು ಕಾಣಬಹುದಾಗಿದೆ. ಹಿರಿಯರ ಗುರುಗಳ ಹರಕೆಯು ಕಾರ್ಯ ಪ್ರಗತಿಗೆ ಅಗತ್ಯವಾಗಿರುತ್ತದೆ. ನಮ್ಮ ನಮ್ಮ ಕ್ರಿಯೆಯು ಅಡಿಗೆಗೆ ಅವರ ಉಪದೇಶವು ಆಹಾರಸಾಮಗ್ರಿಯೇ ಸರಿಯು. ಅತಏವ ನಮ್ಮ ಕಥಾನಾಯಕರ ಉಪದೇಶಸಾರವು ನಮ್ಮ ಸರಾಗ ಉನ್ನತಿಗೆ ಸಲೀಸಾಗಿರುತ್ತದೆ.

೧. ಜ್ಞಾನಿಗೆ ಮುಕ್ತಿಯು ಸತ್ಯಸಿದ್ಧ. ಯಥಾರ್ಥ ರೀತಿಯಲ್ಲಿ ಜ್ಞಾನಾರ್ಜನೆ ಮಾಡಿದ ಜ್ಞಾನಿಗಳು ನಿತ್ಯರಪ್ಪರು.

ಪ್ರತಿ ಬೋಧವಿದಿತಂ ಮತ ಮಮೃತತ್ವಂ ಹಿ ವಿಂದತೇ ।
ಆತ್ಮನಾ ವಿಂದತೇ ವೀರ್ಯಂ ವಿದ್ಯಯಾ ವಿಂದತ್ಯೇ ಮೃತಮ್ ॥

ನಿಜಸ್ವರೂಪದ ಧ್ಯಾನದಿಂದ ಲಭಿಸಿದ ಜ್ಞಾನವು ಅಮೃತತ್ವವನ್ನು ನಿತ್ಯತ್ವವನ್ನಾಗಿ ಮಾಡುವುದಲ್ಲದೆ ಆತ್ಮನಿಂದ ಜ್ಞಾನವನ್ನು ದೊರಕಿಸುವ ಶಕ್ತಿಯಾದ ವೀರ್ಯ ಪ್ರಾಪ್ತಿಯಾಗುತ್ತದೆ. —ಕೇನೋಪನಿಷತ್ತು.

೨. ಏನಾದರೂ ಕೆಲಸವೊಂದನ್ನು ಕೈಗೊಂಡು ಕ್ರಿಯಾಪುರುಷನಾಗಿ ಬಾಳಬೇಕು. ಕೂತು ಉಂಡವನಿಗೆ ಕುಡಿಕೆ ಹಣವು ಸಾಲದು. ಸೋಮಾರಿಯು ಭೂಮಿಗೆ ಹಾಗೂ ಸಮಾಜಕ್ಕೆ ಒಂದು ಹೊರೆಯು.

ಉದ್ಯೋಗವುಳ್ಳವನ ಹೊದ್ದುವುದು ಸಿರಿಬಂದು ।
ಉದ್ಯೋಗವಿಲ್ಲದಿರುವವನ ಕರದೊಳ ।
ಗಿದ್ದುದೂ ಪೋಕು ಸರ್ವಜ್ಞ —ಸರ್ವಜ್ಞ

೩. ತನ್ನಂತೆ ಅನ್ಯರನ್ನು ಕಾಣು; ಅದರಿಂದಲೇ ಅಂದಣಾರೋಹಣ.

೪. ಪ್ರಪಂಚದ ಒಡೆಯನು ಪರಮೇಶ್ವರನು. ಆತನಲ್ಲಿನ ಅಚಲ ನಂಬಿಕೆಯಿಂದಲೇ ಸರ್ವಸ್ವವೂ ಸಾಗುತ್ತದೆ.

೫. ಮನುಜನ ಸದ್ನಡೆ ಸದ್ನುಡಿಯಿಂದ ಆತ್ಮಜ್ಞಾನಕ್ಕೆ ಹಾದಿಯು ಸಿಕ್ಕುತ್ತದೆ.

ಸತ್ಯೇನ ಲಭ್ಯಸ್ತಪಸಾಹ್ಯೇಷ ಆತ್ಮಾಸಮ್ಯಗ್ ಜ್ಞಾನ ।
ನ ಬ್ರಹ್ಮಚರ್ಯೇಣ ನಿತ್ಯಮ ।

—ಮುಂಡಕೋಪನಿಷತ್ತು

೬. ಹರ ಎಂದಾತನಿಗೆ ಸಕಲವೂ ಪರಿಹಾರ. ಇಡೀ ಶಾಸ್ತ್ರ ಪುರಾಣ ಚರಿತ್ರೆ ಸಾಹಿತ್ಯವೇ ಭಗವಂತನ ಅಪಾರ ಮಹಿಮೆಯನ್ನು ನುತಿಸಿದೆ. ಆತನಿಗೆ ಭಕ್ತಿಬಂಧುರತೆಯೇ ಬೇಕು.

ಶಿವ ನಿನ್ನಂಘ್ರಿಯ ನಾಮನೊರ್ಮೆನೆನೆವಂ ಸದ್ಭಕ್ತಿಯಿಂದಾತನಂ ।
ಸವಿಮಾತಿಂ ನುತಿಗೈವುದಾಗಮುಚಯಂ ಶ್ರೀ ಶೈಲಜಾವಲ್ಲಭಾ ॥

—ಷಡಕ್ಷರದೇವ:

೭. ಕಾಮಕ್ರೋಧ ದುರಾಶೆಗಳಿಂದ ಮೊದಲು ಬಿಡುಗಡೆಯಾದರೆ ಸದ್ಗುಣಿಯಾಗಿ ನೀನು ನಿಲ್ಲುವೆ.

೮. ಊಟ ಉಪಚಾರಕ್ಕೆ ಎಂದು ಆತುರಪಟ್ಟು ಪಡಬಾರದ ಕಷ್ಟಗಳನ್ನು ಅನುಭವಿಸುವೆಯೋ ಅಂತೆಯೇ ಪ್ರಾರ್ಥನೆಗೂ ಸತತ ಯತ್ನದಿಂದ ಅಭಿಮಾನವಿಟ್ಟು ಆಚರಿಸು.

ಶರೀರಕ್ಕೆ ಅನ್ನವು ಅಗತ್ಯವಾದಂತೆಯೇ ಆತ್ಮಕ್ಕೆ ಪ್ರಾರ್ಥನೆಯು ಅವಶ್ಯಕ. —ಮಹಾತ್ಮಗಾಂಧಿ.

೯. ಬರೀ ಮೈ ತೊಳೆದುಕೊಳ್ಳುವುದರಿಂದ ನೀನು ಶುಚಿಯಾಗಲಾರೆ. ನಿಜವಾದ ಕೊಳೆ ದುರ್ಗುಣವನ್ನು ಧೂಳೀಪಟಮಾಡು.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ
ಮುನಿಯಲು ಬೇಡ, ಅನ್ಯರಿಗೆ ಅಸಹ್ಯಪಡಬೇಡ

ತನ್ನ ಬಣ್ಣಿಸಲುಬೇಡ, ಇದಿರ ಹಳಿಯಲುಬೇಡ
ಇದೇ ಅಂತರಂಗಶುದ್ಧಿ, ಇದೇ ಬಹಿರಂಗ ಶುದ್ಧಿ
ಕೂಡಲಸಂಗಮದೇವನೊಲಿಸುವ ಪರಿ —ಬಸವೇಶ್ವರ.

೧೦. ನರನಿಗೆ ಶಿವದೀಕ್ಷೆಯಾದ ಮೇಲೆ ಆತನು ಪರಮ ಪವಿತ್ರನಾಗಿ ನರರಿಗಿಂತ ಮೇಲಾಗಿರುತ್ತಾನೆ.

ಬ್ರಾಹ್ಮಣನಾಗಲೀ ಕ್ಷತ್ರಿಯನಾಗಲೀ ಆವ ಜಾತಿಯಲಿ ಹುಟ್ಟಿದಾತನಾದರೂ ಆಗಲೀ ಗುರುಕಾರುಣ್ಯವಪಡೆದು ಅಂಗದ ಮೇಲೆ ಲಿಂಗವ ಧರಿಸಿದವನು ಆಚಾರ ಸಂಪನ್ನ ಸತ್ಕ್ರಿಯನಾದ ಮಹಾತ್ಮನೇ ಮೂರುಲೋಕಕ್ಕೆ ಅಧಿಕಾರಿಯು ನೋಡಾ ಅಖಂಡೇಶ್ವರಾ. —ಷಣ್ಮುಖಸ್ವಾಮಿ.

೧೧. ಲಿಂಗಾಂಗಸಾಮರಸ್ಯ ಸುಖಿಯೇ ನಿತ್ಯ ಭೋಗಿಯು ಹೊಲಸನ್ನು ಹೊರಹಾಕಿ ಇದನ್ನು ಅರಿತವರು ಶಿವನೇ ಆಗುತ್ತಾರೆ.

ಸತಿಭಕ್ತೆಯಾದರೆ ಹೊಲೆಗಂಜಲಾಗದು ;
ಪತಿಭಕ್ತನಾದರೆ ಕುಲಕಂಜಲಾಗದು.
ಲಿಂಗವೇ ಪತಿಯಾದ ಬಳಿಕ ಸತಿಗೆ ಪತಿಯುಂಟೇ ಪತಿಗೆ ಸತಿಯುಂಟೇ?
ಫಾಲುಂಡು ಮೇಲುಂಬರೆ ಗುಹೇಶ್ವರಾ: —ಅಲ್ಲಮಪ್ರಭು

೧೦. ಪರಮೇಶ್ವರನು ವಿಶ್ವವ್ಯಾಪಕನು. ಪರಮೇಶ್ವರ ಎಂಬ ಪದವು ಸಕಲಕ್ಕೂ ಮೂಲವು, ಸರ್ವ ಸುಖಕ್ಕೂ ಪರಮೇಶ್ವರನೇ ಆಧಾರಭೂತನು.

ಸರ್ವ ವ್ಯಾಪೀಶ್ವರಶ್ಚೈವ ಮತಿರಾಹ್ವಾನ ಮೇವಚ ॥
ಜಗಚ್ಛಿವ ಪದವ್ಯಾಪ್ತಂ ಇತಿ ಪ್ರಜ್ಞೇವ ಪಾದ್ಯ ಪರ ।
ಮೇಶ್ವನು ಸುಖಾಬ್ಧಿ ದೇವತಿಮತಿ ರರ್ಘ್ಯಂ ಪ್ರಕೀರ್ತಿತಮ್ ॥

ಪರಮೇಶ್ವರನು ಸಕಲವ್ಯಾಪ್ತಿಯೆಂಬುದೇ ಆಹ್ವಾನ. ಪರಮೇಶ್ವರನ ಪದವು ಎಲ್ಲೆಡೆಯೂ ಇದೆಯೆಂಬಿದೇ ಪಾದ್ಯ ಪರಮೇಶ್ವರನು ಸುಖಸಾಗರ ಎಂಬುದೇ ಅರ್ಘ್ಯ. ವೀರಶೈವ ಪ್ರಕಾಶಿಕೆ.

೧೩. ಓಂಕಾರ ಧ್ಯಾನದ ಸಾಧನದಿಂದಲೇ ಅಂತರ್ವಿಹಿತವಾದ ಪರಮೇಶ್ವರನನ್ನು ಕಾಣಬೇಕು.

ಓಂಕಾರ ಸ್ವರೂಪವನರಿಯದೆ ಕೆಟ್ಟರಲ್ಲ ಕರ್ಮಕಾಂಡಿಗಳು.
ಸ್ಫಟಿಕದ ಶಿಲೆಯಲ್ಲಿ ನಿಂದ ವಾರಣದಂತೆ ನಿನ್ನ ನೀನೇ ತಿಳಿಯೆ !
ನಿಷ್ಕಳಂಕ ಮಲ್ಲಿಕಾರ್ಜುನ ಲಿಂಗದಲ್ಲಿ ಸರ್ವಾಂಗಲಿಂಗ ಭರಿತ
ನಾದವಂಗಲ್ಲದೆ ಇಲ್ಲ ಲಿಂಗಾಂಗಯೋಗ — ಮೋಳಿಗೆಮಾರಯ್ಯ.

೧೪. ತತ್ವಗಳ ಮೂಲನಿಧಿಯು ಓಂಕಾರವು.

ಓಂಕಾರಃ ಪ್ರಣವಃ ಸೂಕ್ಷ್ಮೋ ವಿದ್ಯಾನಾಂ ಬೀಜಮುತ್ತಮಂ ।
ತಸ್ಮಾದ ಶೇಷ ತತ್ವಾನಿ ಪ್ರಣವೇನ ವಿಶೋಧಯತೆ ॥

ಓಂಕಾರವು ಪ್ರಣವವು ವಿದ್ಯೆಗಳ ಶ್ರೇಷ್ಠ ಬೀಜವು. ಏವಂಚ ಸಕಲ ತತ್ವಗಳನ್ನು ಪ್ರಣವದಿಂದ ಶೋಧಿಸಬೇಕು. —ವೀರಶೈವಾನಂದ ಚಂದ್ರಿಕೆ.

೧೫. ಸಂಸಾರ ಜಂಜಡ ಜಾಡ್ಯದ ವೈದ್ಯರಾದ ಗುರುತ್ರಯರ ವಿಧಿ ನಿಯಮಗಳನ್ನು ಮೀರದೆ ಕಾರ್ಯ ಪ್ರವೃತ್ತರಾಗಿರಿ.

ಕೈಯನ್ನು ಹಿಡಿದು ನಾಲಿಗೆಯನ್ನು ನೋಡಿ ಕುಡಿಯಲು ಔಷಧವು ಇಂತಹುದು ಎಂದು ಹೇಳಿ ಹೊರಡುವ ವೈದ್ಯನೊಬ್ಬ ಕುಡಿ ಕುಡಿ ಎಂದು ಕುಳಿತು ಬೇಡುವ ವೈದ್ಯನೊಬ್ಬ ; ಕುಡಿಯದಿದ್ದರೆ ಬಿಡೆನು ಎಂದು ಬಲಾತ್ಕಾರ ಮಾಡಿ ಕುಡಿಸಿ ಹೊರಡುವ ವೈದ್ಯನೊಬ್ಬ. ಈ ಬಗೆಯಾಗಿ ವೈದ್ಯರು ಮೂರುತೆರನಿರುವಂತೆ ಗುರುತ್ರಯರೂ ಇದ್ದಾರೆ.

—ರಾಮಕೃಷ್ಣ ಪರಮಹಂಸ.

೧೬. ಅದ್ವೈತವನ್ನೇ ನಂಬಿ ನೆಚ್ಚಿ ಬಾಳಬೇಡ.

ಅದ್ವೈತ ಸಾಧಿಸಿ ಸರ್ವವೂ ಶಿವನೆಂಬರು; ಎನಲಾಗದು.
ಸರ್ವಕ್ಕೂ ಲಯಗಮನವುಂಟು; ಶಿವಂಗಿಲ್ಲನಾಗಿ.
ಯಂತ್ರವಾಹಕನೆಲ್ಲಿಯೂ ಪರಿಪೂರ್ಣನಾಗಿಹನೆಂದೆಡೆ
ಎಲ್ಲವೂ ಶಿವನಾಗಬಲ್ಲನೇ ? ಆಗಲರಿಯವು.
ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನು
ಪದ್ಮಪತ್ರ ಜಲದಂತೆ ಹೊದ್ದಿಯೂ ಹೊದ್ದದಂತಿಹನು.

—ವಚನಶಾಸ್ತ್ರಸಾರ.

೧೭. ಹುಲುಮಾನವರನ್ನು ಹೊಗಳಿ ನುತಿಸಿ ನಲಿಯದಜಗದ್ವೈಕ ಶೂರನಾದ ಪರಶಿವನನ್ನು ಆಡಿಹಾಡಿ ಪುಳಕಿತರಾಗಿ ಪುಣ್ಯಶೀಲರಾಗಿರಿ.

ಮನುಜರ ಮೇಲೆ ನಾವವರ ಮೇಲೆ ಕನಿಷ್ಠರ ಮೇಲೆ ।
ತನತನಗಿಂದ್ರಚಂದ್ರ ರವಿಕರ್ಣ ದಧೀಚಿ ಬಲೀಂದ್ರನೆಂದು ತಾ ।
ನನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ ।
ನೆನೆಪೊಗಳರ್ಚಿಸಲೆಮ್ಮ ಕಡು ಸೊಂಪಿನ ಪೆಂಪಿನ ಹಂಪೆಯಾಳ್ದನಂ ॥

— ಹಂಪೆಯ ಹರಿಹರದೇವ.

೧೮. ಆಸೆಯೇ ಬಂಧನ ನಿರಾಶೆಯೇ ಬಿಡುಗಡೆಯು ।
ಬೇಕು ಬೇಡೆಂದೆಂಬುದೊಂದ ವಿ ।
ವೇಕವುಳ್ಳನ್ನಬರ ನಾನಾ ।
ಶೋಕ ಮೋಹಾದಿಗಳು ಮುಂಗುಡಿವರಿದುದು ಮುಸುಕುವವು॥
ಲೋಕರಂಜನೆಗೆರಗಿದವರೀ ।
ಕಾಕು ತನದಲಿ ಕೆಟ್ಟು ಹೋದರು ।
ಬೇಕು ಬೇಡೆಂಬೆರಡನಳಿದರ ನಿತ್ಯರಹರೆಂದರು ॥

— ಚಾಮರಸ.

೧೯. ಪ್ರಪಂಚವು ಸಟೆಯು ಸನೀನು ।
ಸುಳ್ಳು ಸಂಸ್ಕಾರಗಳಲಿ ಜಗಬಂಧಿತವಾಗಿದೆ ।
ದೇವರ ರಹಸ್ಯ ಇನ್ನೂ ತಿಳಿಯದಂತಿದೆ ॥

— ಗುರು ನಾನಕ.

೨೦. ಲಿಂಗಾನಂದದ ಫಲಿತದ ಸೌಖ್ಯವೇ ನಿಜವಾದ ಮತ್ತು ಶಾಶ್ವತವಾದ ಸೌಖ್ಯ. ಅದೇ ಜೀವನದ ಮಹೋದಯದ ಭಾಗ್ಯ. ಲಿಂಗ ರತಿಯ ವಿಹ್ವಲತೆಯಿಂದ ಬಂದ ಭಾಗ್ಯದ ದಿನವೇ ಶುಭೋದಯದ ದಿವಸ.

ಮನದ ವಿಕಾರಮಾಗಿ ಕೆಲಸಾರಿತು ಭಕ್ತಿ ವಸಂತಕಾಲಸಂ ।
ಜನಿಸಿತು ಲಿಂಗ ಮೋಹಲತೆಯಂಕುರಿಸಿತು ನಿಜಾನುಭಾವ ಮಾ ।
ವಿನ ತರು ಪೂತು ಕಾತುದು ಶುಭೋದಯವಾದುದು ಭಾವು ಭಾಗ್ಯವೇ ।
ದಿನದಿನಕಂ ಮಹಾ ಸುದಿನವಾಯ್ತೆನಗಂ ಗುರು ಶಂಕರೇಶ್ವರಾ ॥

— ಶಂಕರದೇವರು.

೨೧. ಈ ಕಾಯವನ್ನೇ ನಂಬಿ ನೆಚ್ಚಿ ಅದನ್ನೇ ಶಾಶ್ವತ ಎಂದು ಅದರಲ್ಲಿಯೇ ಅದ್ದಿ ಹೋಗಬೇಡಿ. ಕಟ್ಟ ಮೇಲೆ ಬುದ್ಧಿ ಬಂತು, ಅಟ್ಟ ಮೇಲೆ ಒಲೆ ಉರಿಯಿತು ಎಂಬಂತೆ ಜೀವನದ ಕೊನೆಯಲ್ಲಿ ಮರುಗಲು ಅವಕಾಶ ಕೊಡಬೇಡಿ.

ಯೌವ್ವನ ಸೌಂದರ್ಯಗಳು ಎಂದೆಂದಿಗೂ ಹಾಗೆಯೇ ಉಳಿಯುವು ದೆಂದು ಭಾವಿಸಬೇಡಿ. ಪ್ರತಿದಿವಸವೂ ಮುಪ್ಪಿನ ಅವಸ್ಥೆಯು ಕಣ್ಣಿಗೆ ಕಾಣುತ್ತಿದೆ. ನೀವೂ ಸಹ ಮುಪ್ಪಿಗೆ ಒಳಗಾಗಬೇಕಾಗುತ್ತದೆ. ಅದು ಕಾರಣ ಮುಂಚಿತವಾಗಿಯೇ ಎಚ್ಚರವಾಗಿ ಬಲವಾಗಿದ್ದ ವೇಳೆಯಲ್ಲಿಯೇ ಒಳ್ಳೆಯ ಹಾದಿಯನ್ನು ಹಿಡಿಯಿರಿ.

— ಬುದ್ಧದೇವ

೨೨. ಅನ್ನ ಅನ್ನ ಎಂದು ಅರಚುತ್ತಾರೆ. ನಿಜವಾಗಿಯೂ ಆದ್ಯರ ವಚನವು ಬಾಳನ್ನು ಬೆಳಗಿಸುತ್ತದೆ.

ಮಾನವನು ರೊಟ್ಟಿ ತಿಂದು ಮಾತ್ರ ಜೀವಿಸುವದಿಲ್ಲ. ಭಗವಂತನ ಬಾಯಿಯಿಂದ ಬರುವ ಪ್ರತಿಯೊಂದು ನುಡಿಯಿಂದಲೂ ಜೀವಿಸುವನೆಂದು ಬರೆದಿದೆ.

— ಏಸು ಕ್ರಿಸ್ತ

೨೩. ಅತ್ಯಂತ ಶ್ರೇಷ್ಠ ಜನ್ಮವಾದ ಈ ಮನುಷ್ಯ ಜನ್ಮವು ನಿಜವಾಗಿಯೂ ಸಾರ್ಥಕವಾಗಬೇಕಾದರೆ ಸರಿಯಾದ ನಡೆನುಡಿಯಿಂದ ಕೂಡಿದ ಜೀವನದಿಂದ ಮಾತ್ರ ಸಾಧ್ಯವಾಗುವದು.

ಈ ಜನ್ಮವು ಅತ್ಯಧಿಕವು; ಆದರೆ ಜೀವನ ಮಾರ್ಗವು ಒಳ್ಳೆಯದಾಗಿರಬೇಕು. ಇಲ್ಲಿ ನೀವು ಮಾಡಿದುದಕ್ಕೆ ಅಲ್ಲಿಯೂ ಕೂಡ ಜವಾಬ್ದಾರರಾಗುವಿರಿ. ಇಲ್ಲಿ ಒಳ್ಳೆಯದನ್ನು ಮಾಡಿದರೆ ಅಲ್ಲಿಯೂ ಸಹ ಒಳ್ಳೆಯದನ್ನು ಹೊಂದುವಿರಿ.

—ಮಹಮ್ಮದ ಪೈಗಂಬರ

೨೪. ಮತಿವಂತ ಮನುಷ್ಯರು ಕೇವಲ ವಿಷಯಸುಖವನ್ನೇ ಕಡೆಗಾಣುತ್ತಾರೆ. ಇಂದ್ರಿಯಗಳ ಮೇಲೆ ಹತೋಟಿ ಇಟ್ಟಿರುತ್ತಾರೆ. ಇದನ್ನು ನೀನು ತಪ್ಪದೆ ಸಾಧಿಸು.

ಸಸಿಗೆ ನೀರೆರೆದರೆ ಪುಣ್ಯವೆಂದು ವಿಷಬಳ್ಳಿಗಳನ್ನು ಸಾಕುವ ಹಾಗೆ ಮೂಢರು ಸುಖವೆಂದು ವಿಷಯಗಳನ್ನು ಭೋಗಿಸುತ್ತಾರೆ. ಮೇರೆ ಮೀರುವ ಇಂದ್ರಿಯಗಳಿಗೆ ಕಡಿವಾಣ ಹಾಕಿ ಅನಂಗನೆಂಬ ದುರಾಚಾರವನ್ನು ತಪ್ಪದೆ ಧೈರ್ಯದಿಂದ ಧ್ವಂಸಮಾಡು. — ಬಾಣ ಮಹಾ ಕವಿ.

೨೫. ನರಜನ್ಮವೇ ಅತ್ಯಂತ ಶ್ರೇಷ್ಠ ಜನ್ಮವು. ಇದನ್ನರಿತೇ ಶ್ರೀ ಬಸವೇಶ್ವರರು ಕೈಲಾಸದಿಂದ ಕರೆಯು ಬರಲು ಮರ್ತ್ಯಲೋಕದ ಮಣ್ಣು ಮನೆಯವನಾಗಿಯೇ ಇರುತ್ತೇನೆ ಎಂದರು. ಈ ಜನ್ಮವು ಪರಮ ಪಾವನವಾದುದು.

Man is higher than all animals, than all angels; none is greater than man. Even the Devas will have to come down again and attain salvation through a human body. Man alone attains to perfection, not even the Devas.

— Swami Vivekanand

೨೬. ಕೈ ಬಾಯಿ ಭದ್ರವಾಗಿದ್ದು ಕಪಿಮನಸ್ಸನ್ನು ಕಡಿವಾಣ ಹಾಕಿ ಒಡಿದು ನಿಲ್ಲಿಸಿ, ದೂಷಣೆ, ನಿಂದೆ, ಹೊಗಳಿಕೆ ಸ್ತೋತ್ರಗಳಿಗೆ ಕೈಹಾಕದೆ ಆಚಾರ ವಿಚಾರಪರನಾಗಿ ಪರಮೇಶ್ವರನ ಧ್ಯಾನದಲ್ಲಿಯೇ ಮುಳುಗಿ ತೇಲಾಡಿ ಬಂದದ್ದನ್ನು ಸಹಿಸಿಕೊಂಡು ಹೋಗಿ ಲೋಕದ ಯೋಗ ಕ್ಷೇಮವನ್ನು ನೋಡುವ ತಾಮಸಿ ತಪಸ್ವಿಯೇ ಶಿವಯೋಗಿಯು.

ಶಮೋದಮೋ ವಿವೇಕಶ್ಚ ವೈರಾಗ್ಯಂ ಪೂರ್ಣ ಭಾವನಾ ।
ಶಾಂತಿಃ ಕಾರುಣ್ಯಾ ಸಂಪತ್ತಿ ಶ್ರದ್ಧಾ ಸತ್ಯ ಸಮುದ್ಭವಾ ॥
ಶಿವಭಕ್ತಿಃ ಪರೋಧರ್ಮಾಶ್ಚೈವ ಜ್ಞಾನಸ್ಯ ಬಾಂಧವಾಃ ।
ಏಕೈರ್ಯ್ಯಕ್ತೋ ಮಹಾ ಯೋಗೀ ಸಾತ್ವಿಕ: ಪರಿಕೀರ್ತಿತ: ॥

—ಸಿದ್ಧಾಂತ ಶಿಖಾಮಣಿ

೨೭. ಹೆಂಡತಿ ಮಕ್ಕಳು, ಬಂಧು ಮಿತ್ರರು, ಆಪ್ತೇಷ್ಟರು ಒಂದಲ್ಲ ಒಂದು ದಿವಸದಲ್ಲಿ ನಿನ್ನ ಕೈ ಬಿಟ್ಟಾರು.

ಅರಿ । ಮಿತ್ರ ಸತಿ ಪುತ್ರ ಬಂಧು ಬಳಗವದೆಲ್ಲ ।
ಕರುಮದವತಾರಗಳೊ, ಋಣಲತೆಯ ಚಿಗುರೋ ॥
ಕುರಿಯನಾಗಿಸಿ ನಿನ್ನ ಕಾಪಿಡುವ ಸಂಸಾರ
ವುರಿಮಾರಿಯಾದೀತೊ ಮಂಕು ತಿಮ್ಮ ॥

— ಮಂಕುತಿಮ್ಮನ ಕಗ್ಗ

೨೮. ಮೋಕ್ಷವು ಸಾಹುಕಾರನ ಪೆಟ್ಟಿಗೆಯ ಪೆಟಾರಿಯಲ್ಲಿಲ್ಲ. ಅದು ನಿನ್ನ ಮನದ ಹತ್ತೋಟಿ ಹತಾರಿನಲ್ಲಿದೆ.

೨೯ ಲಿಂಗಾನಂದವನ್ನು ತಣಿದು ಲಿಂಗಾಂಗ ಸಾಮರಸ್ಯ ಸಾಮಂತ ನಾಗಬೇಕಾದರೆ ಹೊನ್ನು ಹೆಣ್ಣು ಮಣ್ಣು ತ್ಯಾಜ್ಯ ಮಾಡಬೇಕು.

ಮೋಕ್ಷ ಲಕ್ಷ್ಮಿಯ ಕೈಹಿಡಿಯಬೇಕಾದರೆ ಹೊನ್ನು ಹೆಣ್ಣು ಮಣ್ಣು ಗಳ ಮುಖಸಂದರ್ಶನವನ್ನು ಮಾಡದಿರು.

—ರೂಪಗೋಸ್ವಾಮಿ.

೩೦. ಪರಮೇಶ್ವರನ ಒಲವು ಯಾರ ಅಳತೆಗೂ ಸಿಲುಕದಂತಹುದು, ಯಾರ ಹತೋಟಿಗೂ ಹಾಯದಂತಹುದು ಆಗಿದೆ.

ದೈವಶಕ್ತಿ ಯುಗಹನವಾದದ್ದು; ಸೂಕ್ಷ್ಮವಾದದ್ದು; ಆದರೆ ಅದರಲ್ಲಿ ಕಪಟವಿಲ್ಲ; ಕುತಂತ್ರವಿಲ್ಲ. —ಅಲ್ಬರ್ಟ ಎನಸ್ಟೈನ್

ಶ್ರೀಯವರ ಉಪದೇಶಗಹನತೆಯು ಕೊಂಚವಾದರೂ ಗೊತ್ತಾಗಲಿ ಎಂದು ಹಲವು ಹಿರಿಯರ ಸೂಕ್ತಿಗಳ ಸಂಗಡ ಶ್ರೀಯವರ ಉಪದೇಶಸಾರ ವನ್ನು ನೀಡಿದ್ದೇನೆ. ಜ್ಞಾನದಲ್ಲಿ ಸಂಕಲ್ಪ ಬಲವಿದೆ; ಅಜ್ಞಾನದಲ್ಲಿ ,ವಿಕ ಲ್ಪದ ವಿಕ್ಷೇಪವೇ ಗತಿ. ಸಂಕಲ್ಪದಲ್ಲಿ ಚಿತ್ತೈಕಾಗ್ರತೆಯಿದೆ, ಉಲ್ಲಾಸವಿದೆ, ಸಾಹಸವಿದೆ.

ಅದುಕಾರಣ ಮಾಡಿದ ಕೆಲಸವು ಸುಂದರವಾಗಿಯೂ, ಉಪಯೋಗ ಕರವಾಗಿಯೂ, ಇರುತ್ತದೆ. ಶ್ರೀಯವರ ಉಪದೇಶಾಮೃತವು ಬರೀ ಸಿಹಿ ಸುಖವಾಗಿಲ್ಲವು. ಆದರೆ ಅದು 'ಅಧರಕ್ಕೆ ಕಹಿ, ಉದರಕ್ಕೆ ಸಿಹಿ ಆಗಿದೆ. ಅತ ಏವ ಶ್ರೀಯವರ ಉಪದೇಶ ಸಾರಾಂಶವನ್ನು ಗ್ರಹಿಸಿ ಗುಣಾಢ್ಯರಾಗು ವುದು; ಅವರ ಮಾನವೀಯರಿಗೆ ಯಥೋಚಿತನಾದ ಕರ್ತವ್ಯವಾಗದೆ ಇರದು! ಸ್ವಾತಂತ್ರ್ಯವು ಲಭಿಸಿ, ಬುದ್ಧಿಯು ಅರಳಿ ಜೀದನವಿಕಾಸದ ಲಾಭವನ್ನು ಪಡೆದು ಸುಂದರ ಜಗತ್ತಿನತ್ತ ಮುಖ ತಿರುಗಿಸಿ ದೃಷ್ಟಿ ಬೀರಿದರೆ *A thing of beauty is joy for eve* ಎಂದ ಜಾನ್ ಕೇಟ್ಸನ ನುಡಿಯು ಸತ್ಯದ ನಿಲುಕಿಗೆ ಸಿಲುಕದೆ ಇರದು ! ತಪಸ್ವಿಗಳ, ಅನುಭಾವಿಗಳ ನುಡಿಯು ಅಮ ರತ್ವಕ್ಕೆ ಏರಿಸದೆ ಇರಲಾರದು ! ವಿಷಯ ಜೀವನವನ್ನು ತೃಣ ಸಮಾನ ವಾಗಿ ಕಂಡು ತ್ಯಾಗ ಯೋಗ ಜೀವನವನ್ನು ನಡೆಯಿಸಿದ ಮಹಾ ಪುಣ್ಯ ಪುರುಷರ ವಾಣಿಯು ಸುಪ್ತಚೇತನದಲ್ಲಿರುವ ನಮ್ಮನ್ನು ಹೊರಗೆ ಬರುವಂತೆ

ಮಾಡುವುದರಲ್ಲಿ ಯಾವ ಸಂಶಯವೂ ಇಲ್ಲವು. ವೈಯ್ಯಕ್ತಿಕ ಕಲ್ಪನೆ ಅಭಿರುಚಿಗಳ ಕೂಸಾಗಿರದೆ ಮಾನವ್ಯದ ಮೂಲತತ್ವಗಳಿಗೆ ಮತ್ತು ಮನುಜನ ಪರಿಶುದ್ಧ ಬುದ್ಧಿಗೆ ಒಪ್ಪುವ ಉನ್ನತ ನೈತಿಕಾದರ್ಶವಿದ್ದರೆ ಅದು ಪರಿಷ್ಕೃತ ವಿವೇಕವಿರುವ ಪ್ರತಿಯೊಬ್ಬ ಮನುಜನ ವಿಚಾರ ವ್ಯಾಸಂಗಗಳಿಗೆ ಅರ್ಹವಾದದ್ದೇ ಆಗಿರುವುದು. ನೀತಿನಿಯಮಗಳನ್ನು ಉಪದೇಶಿಸುವ ಪ್ರತಿಯೊಂದು ಧರ್ಮ ಮತ್ತು ತತ್ವಜ್ಞಾನ ಪಂಥದವರು ಆ ಆದರ್ಶವನ್ನು ಪ್ರತಿಪಾದಿಸಿ ಅದರ ದರ್ಶನವನ್ನು ತಮ್ಮ ಅನುಯಾಯಿಗಳಿಗೆ ತೋರಿಸುವರು ಅತ್ಯುನ್ನತವಾದ ಆದರ್ಶದ ವಿವೇಚನೆಯನ್ನು ಮಾಡುವುದು ಅಸಾಧ್ಯವಾದರೂ ಅಂತು ಮಾಡುವ ಪ್ರಯತ್ನವನ್ನು ಬಿಡದೆ ಕೊನೆಗೆ ಅದರ ಸ್ಥೂಲ ರೂಪರೇಷೆಯನ್ನಾದರೂ ವಿವರಣೆ ಮಾಡುವರು ನಮ್ಮ ಕಥಾನಾಯಕರು. ಉಚ್ಚ ಪಂಡಿತರಾಗಲೀ, ಯಶವೆತ್ತ ವಿದ್ಯಾಲಯದ ವ್ಯಾಸಂಗಿಗಳಾಗಲಿ, ಘನತರ ಶಿವಯೋಗಮಂದಿರದ ವಾಸಿಗಳಾಗಲೀ ಆಗಿರಲಿಲ್ಲವು. ಸಾಮಾನ್ಯ ಓದುಬರಹವನ್ನು ಕಲಿತು ಸಾಧು ಸನ್ಯಾಸಿ ಶಿವಯೋಗಿವಿರಕ್ತ ಪುಂಗವರಾದಿಯವರ ಸಹವಾಸದಿಂದ ಕಾಲಕಳೆದು, ಶಿವನಲ್ಲಿಯೇ ನೆಟ್ಟ ನೋಟವನ್ನು ಇಟ್ಟು ಶಿವಲಿಂಗ ಧ್ಯಾನಾಸಕ್ತರಾದ ಮಹಾ ಪುಣ್ಯಪುರುಷ ಪುಂಜ ಮೂರ್ತಿಗಳು ಮುಕ್ತಿ ಮಾರ್ಗದರ್ಶಕರೂ, ತಪಸ್ವಿಗಳೂ, ಶಿವಯೋಗಿಗಳೂ, ಗುರುಗಳೂ ಆಗಿ ಮೆರೆದ ಮಾರ್ತಾಂಡರು ಇವರು.

ಶ್ರೀ ಶಿವಯೋಗಿ ಷಡಕ್ಷರ ದೇಶಿಕೇಂದ್ರರ ಉಪದೇಶದ ಸಾರಾಂಶವ ಸಾರಾಯವು ಇಂತು ಇದೆ. "ಕಮಲಪತ್ರಜಲದಂತೆ ಸಂಸಾರವನ್ನು ಸಾಣಿಸಿಕೊಂಡು ಹೋಗುವ ಸಂಸಾರಿಗೂ ಸನ್ಯಾಸಿಗೂ ಸಿಗುವಂತೆಯೇ ಮೋಕ್ಷವು ಸಿಕ್ಕುತ್ತದೆ ಹಾವಾಡಿಗನೇ ಹಾವನ್ನು ಆಡಿಸಬೇಕೇ ಹೊರತು ಬೇರೆಯವರಿಗೆ ಇದು ಸಾಧ್ಯವಾಗುವದಿಲ್ಲ. ಜ್ಞಾನದ ರತ್ನವನ್ನು ಹೃದಯದಲ್ಲಿ ಹುದುಗಿಸಿಕೊಂಡ ಜ್ಞಾನನಿಧಿಗೆ ಬಾಹ್ಯಾಡಂಬರವು ಅನಗತ್ಯವು. ಈ ಜ್ಞಾನಿಯ ವಾಸಗೃಹಕ್ಕೆ ಸೊಬಗು ಸಿಂಗರ ಬೇಕಾಗಿಲ್ಲ. ಆಹಾರ ವಿಹಾರಕ್ಕೆ ಅನುಗುಣವಾಗಿ ಮನುಜನ ತೇಜಸ್ಸು ಓಜಸ್ಸು ಮೈಗೂಡುತ್ತಹೆ. ಬೇಕು ಎಂಬುದೇ ಕಷ್ಟ. ಬೇಡ ಎಂಬುದೇ ಸುಖ. ಸಕಲ ತ್ಯಾಜಕನೇ ವಿರಕ್ತನು. ಮದುವೆಯಾಗದೆ ಕೂಡುವಳಿ ಆದ ಹಾಗೆ ಮಡುವಿನ ಅಗ್ಗವಣಿ ಕಾಡುಪತ್ರೆಯಿಂದ ಲಿಂಗಪೂಜೆ ಮಾಡುವುದು ವಿರಕ್ತ ಧರ್ಮವು. ತನ್ನ ಸ್ವರೂಪವನ್ನು ತಾನರಿದೊಡೆ ಮಾತ್ರ ಮೋಹವು ನಿಕ್ಕ ಸೊತ್ತು. ಶಿವಜೀವರು ಕಾಸಿದ ತುಪ್ಪ

ಮತ್ತು ಗಟ್ಟಿ ತುಪ್ಪ. ಸಂಸಾರ ಪಾರಾವಾರದ ಬಿಡುಗಡೆಯು ಸೀಗೆ ಮುಳ್ಳಿಗೆ ಸಿಕ್ಕಿದ ಜುಟ್ಟಿನ ಬಿಡುಗಡೆಯು. ಪ್ರತಿಯೊಬ್ಬರೂ ಅವರವರ ಧರ್ಮವನ್ನು ತಪ್ಪದೆ ಪರಿಪಾಲಿಸಿದರೆ ಅದೇ ಅವರನ್ನು ತಪ್ಪದೆ ಕಾಪಾಡುತ್ತದೆ. ಕಟ್ಟಡದ ತಯಾರಿಕೆಯು ಮುಗಿದ ಮೇಲೆ ಕಾಲಾವಧಿಯು ಬೇಕಾಗಿಲ್ಲ. ಈಶ್ವರ ಸ್ವರೂಪ ಗೊತ್ತಾದ ಮೇಲೆ ಕಾಯವು ಎಂತಿದ್ದರೆ ತಾನೇ ಏನು ? ತಾಯಿಯ ಯೋನಿಯಲ್ಲಿಯೇ ಬಂದು ತಾಯಿಯ ಸ್ತನ್ಯಪಾನ ಮಾಡಿ ಅದನ್ನೇ ಬಯಸುವಾತನು ತಾಯಿ ಗಂಡ ನಿಗ್ರಹವಿಲ್ಲದೆ ದೇಹೇಂದ್ರಿಯಗಳ ಚಾಪಲ್ಯ ತೃಪ್ತಿಗಾಗಿ ನಮ್ಮನ್ನು ನಾವೇ ಮಾರಿಕೊಳ್ಳಬಾರದು. ಇಂದ್ರಿಯ ನಿಗ್ರಹವು ನಮ್ಮನ್ನು ಶಾಂತನಾಗಿರಿಸುತ್ತದೆ. ಶಾಂತಿಯಿಲ್ಲದ ಏನನ್ನೂ ಮಾಡಲಾರೆವು. ವೇದದ ಶಾಂತಿಮಂತ್ರದ ಆಚಾರ್ಯನಾಗಬೇಕಾದರೆ ಇಂದ್ರಿಯ ನಿಗ್ರಹಶೂರನಾಗು. ಇಂದ್ರಿಯನಿಗ್ರಹವು ಕೈಲಾಸದ ಸೋಪಾನ. ನಮ್ಮ ಶರೀರವನ್ನು ವಿಷಯ ಲೋಲುಪತೆಯ ನೆಪದಲ್ಲಿ ನಾವೇ ಮಾರಿಕೊಳ್ಳಕೂಡದು, ಅಧ್ಯಾತ್ಮ ಪ್ರಗತಿಯ ಪಥದಲ್ಲಿ ವಿಷಯ ಲೋಲುಪತೆಯು ಅಡ್ಡಕಟ್ಟುವ ದೊಡ್ಡ ಒಡ್ಡು. ಅದು ಚಿತ್ತೈಕಾಗ್ರತೆಗೆ ಬೇಕಾಗುವ ಬಲವನ್ನು ಬತ್ತಿಸುತ್ತಿದೆ. ಅಯೋಗ್ಯ ವಸ್ತುಗಳನ್ನು ಬೆನ್ನುಹತ್ತುವಂತೆ ಮಾಡಿ ಭಾವನೆಯನ್ನು ಅಡ್ಡಹಾದಿಗೆ ಒಯ್ಯುತ್ತದೆ. ಇಂದ್ರಿಯ ವಿಲಾಸಗಳ ಕಟ್ಟಿಗೆ ಬಿದ್ದು ಸಂಕಲ್ಪ ಶಕ್ತಿಯು ಮೆತ್ತಗಾಗಿ ನಿರ್ಬಲವಾಗಿ ಹೋಗುತ್ತದೆ. ವಿಷಯ ಭೋಗವು ಮನಸ್ಸಿನ ಕಣ್ಣೆದುರಿಗೆ ತಪ್ಪು ಮುಗಿಲನ್ನು ಮುಸುಕಿ ಸತ್ಯ ಪ್ರಕಾಶವನ್ನು ಮರೆಮಾಡುತ್ತದೆ. ಸತ್ಯಪೀಠದ ವಿರೋಧ ದಿಕ್ಕಿನಲ್ಲಿಯೂ ಆತನು ನಡಿಯುತ್ತಾನೆ. ಅಸತ್ಯ ಸ್ವರೂಪವನ್ನು ಸಂದರ್ಶಿಸುವಂತಾಗುತ್ತಾನೆ. ವಿಷಯ ಜೀವನದ ಕೊಳೆಯನ್ನು ಕಳೆದುಕೊಳ್ಳುವುದು. ಶ್ರೇಯಸ್ಕರವಾಗಿರುತ್ತದೆ. ತ್ಯಾಗವೇ ಶ್ರೇಯಸ್ಸು. ಯಾರು ಆರ್ತನಾಗಿ ಜಗದೊಡೆಯನಾದ ಪರಮೇಶ್ವರನಿಗೆ ಮೊರೆಯಿಟ್ಟು ನಿಲ್ಲುತ್ತಾರೆಯೋ ಅವರಿಗೆ ಸರ್ವವು ಲಭಿಸುತ್ತದೆ."

# ಕರ್ಮಯೋಗಿ.

ಅರ್ಥಾತ್

## ಶ್ರೀ ಮ. ನಿ. ಪ್ರ. ಶಿವಬಸವ ಸ್ವಾಮಿಗಳ ಸಾರ ಜೀವನ.

[ ಲೇಖಕಃ- ಶ್ರೀ ಈಶ್ವರ ಈ ಕಳಕಣ್ಣವರ, (ಸಃ. ಭೂ.) ಇ. ಅ. ಬೆಳಗಾವಿ]



ಮಾನವನು ಮಾಯಾಮಂದಿರದಿಂದ ಲೀಲಾಯೋಗಕ್ಕೆ ಪರಮಸ್ವರೂಪವಾದ ಮುಕ್ತಿಯನ್ನು ಹೊಂದಬೇಕಾದರೆ ನಿರಂತರವಾಗಿ ಕಾಯಕ ಇಲ್ಲದೆ ಕರ್ಮ ಇವುಗಳನ್ನು ಆಚರಿಸಲೇಬೇಕಾಗುತ್ತದೆ. ಕರ್ಮವಿಲ್ಲದೆ ಯಾವ ಕಾರ್ಯಾಂಗಗಳು ಸುಗಮ ರೀತಿಯಿಂದ ಮುನ್ನುಗ್ಗಲಾರವು. "ಆವಾವ ದಾರಿಯಲು ಹೊಳೆಹಳ್ಳ ಹರಿದರೂ ಮುನ್ನೀರನಾಳವನು ಸೇರಲೆಂದೆ." ಅನ್ನುವಂತೆ ಆ ಹೊಳೆಹಳ್ಳಗಳ ಮುಖ್ಯ ಧ್ಯೇಯವು ಸಮುದ್ರನಾಥನನ್ನು ಕೂಡಲೇಬೇಕೆಂಬ ಸಂಕಲ್ಪದೊಂದಿಗೆ ಕೃತಿಯೂ ಇರುತ್ತದೆ. ಅದರಂತೆ ಮಾನವನೂ ಕೂಡಾ ಅಖಂಡವಾದ, ಅಚಲವಾದ, ಅಸ್ತ್ರರಹಿತವಾದ ಸುಖ ಸದಾನಂದಯುತವಾದ ಸರ್ವ ಸಂಕಲ್ಪಗಳನ್ನೂ, ಸರ್ವ ಭೋಗ ವಿಷಯಗಳನ್ನೂ, ಸರ್ವ ಕಾಮನಾದಿಗಳನ್ನೂ ತ್ಯಜಿಸಿ, ನಿತ್ಯ ತೃಪ್ತವಾದ ಮುಕ್ತಿಯನ್ನು ಹೊಂದುವದೇ ಅವನ ನಿತ್ಯ ಕಾರ್ಯವಾಗಿರುತ್ತದೆ. ಅದಕ್ಕಾಗಿಯೇ ಮನುಷ್ಯನು ಮುಕ್ತಿಗೆ ಮೂರು ಪಥಗಳಿರುವದರಿಂದ ಮಾನವ ವರ್ಗದಲ್ಲಿ ಹತ್ತುಸಾವಿರ ಗುಂಪಿನಲ್ಲಿ ಎಲ್ಲಿಯೋ ಅಕಲ್ಪಿತನಾಗಿ ಒಬ್ಬನು ಕರ್ಮಮಾರ್ಗವನ್ನೂ, ಒಬ್ಬನು ಭಕ್ತಿಮಾರ್ಗವನ್ನೂ, ಇನ್ನೊಬ್ಬನು ಜ್ಞಾನ ಮಾರ್ಗವನ್ನು ಆಚರಿಸುತ್ತಾರೆ. ಇವರಲ್ಲಿ ಮಧ್ಯಮನು (ಭಕ್ತಿಮಾರ್ಗದವ) ಸುಖವಾಗಿ ತನ್ನೊಂದಿಗಷ್ಟೇ ಮುಕ್ತಿಯನ್ನು ಪಡೆಯಬಹುದು. ಇನ್ನುಳಿದೀವರಲ್ಲಿ ಜ್ಞಾನಮಾರ್ಗದವನು ಅಘೋರವಾದ ಪ್ರಯತ್ನದಿಂದ ಮುಕ್ತಿಯನ್ನು ಹೊಂದುತ್ತಾನೆ. ಇದು ಬಹುಜನ್ಮಗಳಿಂದ ಗಳಿಸಿದ ಪುಣ್ಯನಿಧಿಯ ಪ್ರಯತ್ನ. ಅದಕ್ಕಾಗಿ ಅಂಥ ನಿಧಿಯನ್ನು ಅರ್ಜನೆ ಮಾಡಬೇಕಾದರೆ ಸತತೋದ್ಯೋಗವು ಬೇಕು. ಅದಕ್ಕಾಗಿ ಲೌಕಿಕದಲ್ಲಿ 'ಕಾರ್ಯ ಅಥವಾ ಕರ್ಮವೆಂತಲೂ ಅನುವರು. ಕರ್ಮವು ವೃಕ್ಷೋಪಾದಿಯಲ್ಲಿದ್ದು ತಾನು ಆಧಾರಭೂತವಾಗಿ ಭಕ್ತಿ

ಎಂಬ ಎಲೆಗಳಿಂದ ಛಾಯೆಯನ್ನು ಪರಹಿತಕ್ಕೆ ಬೀರಿ, ಹೂ ಎಂಬ ಮರಿ ಮಳವನ್ನು ಪರಮ ತತ್ವ ವೇದಾದಿ ಶಿರದ ದೆಶೆಯಲ್ಲಿದ್ದು ಮುಕ್ತ ಜೀವಿಗಳನ್ನಾಗಿ ಮಾಡಲು ನೀತಿ ವಿಶಲ್ಯವಾಗಿಯೂ, ಫಲವೆಂಬ ಜ್ಞಾನವನ್ನು ಸರ್ವರಿಗೂ ಇತ್ತು ಚಿರಂಜೀವಿಯನ್ನು ಮಾಡಲು ಕರ್ಮರೂಪಿ ವೃಕ್ಷವು ನಿರ್ಭಯವಾಗಿದೆ. ಇಂಥ ಅಮೋಘ ಶಕ್ತಿಸಂಘಟನೆಯೂ, ನಿತ್ಯ ದುಡಿಮೆಯುಳ್ಳ ಕರುಣ ವಿಶ್ವಹೃದಯವೂ, ಮನೋವಿಷ್ಟವೂ, ವೈರಾಗ್ಯಭಾವವೂ, ನಿರಸನ ರಾಗವೂ, ನಿಷ್ಕಾಮವೃತ್ತಿಯೂ, ಪ್ರಚೋದಿಸುವದು ಅವಶ್ಯಕವಾದ ಲಿಂಗಾಂಗಗಳು. ಇಂಥ ಶಕ್ತಿಸಂಘಟನೆ, ನಿತ್ಯ ತಪಶಾಲಿ ವೈರಾಗ್ಯ ನಿಧಿ ಶಾಂತಮೂರ್ತಿಯೂ ಅಂದರೆ ಶ್ರೀಮನ್ ನಿ. ಪ್ರ. ಸ್ವರೂಪಿ ಶಿವಬಸವ ಸ್ವಾಮಿಗಳೇ ಎಂದು ಹೇಳಲು ಯಾವ ಸಂಕೋಚವೂ ಇಲ್ಲ.

ಇನ್ನು ಇವುಗಳಲ್ಲಿ ಎರಡು ಭಾದಾಂಗಗಳನ್ನು ಕಲ್ಪಿಸಬಹುದು. ಒಂದು ಅಧ್ಯಾತ್ಮದಲ್ಲಿ, ಇನ್ನೊಂದು ಲೌಕಿಕದಲ್ಲಿ. ಲೌಕಿಕದಲ್ಲಿ ನಿತ್ಯ ಕರ್ತನ ನಿಜಸುಖವು ದುಡಿಮೆಯಲ್ಲಿದೆಯಂತಲೂ ಇನ್ನೊಂದರಲ್ಲಿ ಯಾವ ಮಾನವನು ನಿತ್ಯ ಸುಖವನ್ನು ಹೊಂದಲು ಬಯಸುತ್ತಾನೆಯೋ ಅಂಥವನು ಪರಹಿತದಲ್ಲಿ ನಿರತನಾಗಿ ತನ್ನ ಕಾಯಕ್ಕೆ ಸಂಬಂಧಿಸಿದ ವಿಷಯ ವಾಸನೆಯನ್ನು ನಿರಸನ ಮಾಡಿ ಸಂಪೂರ್ಣ ಮರೆತು, ಬ್ರಹ್ಮ ಜ್ಞಾನದಲ್ಲಿ ವಿಂಗಡಿಸಿದ ಕರ್ಮ, ಮುಮುಕ್ಷ, ಅಭ್ಯಾಸಿ, ಅನುಭವಿ, ಆರೂಢ ಎಂಬ ಪಂಚ ಪಥಗಳಿರುವದರಿಂದ ಮಾನವ ವರ್ಗದಲ್ಲಿ ಹತ್ತುಸಾವಿರ ಗುಂಪಿನಲ್ಲಿ ಎಲ್ಲಿಯೋ ಅಕಲ್ಪಿತನಾಗಿ ಒಬ್ಬನು ಭಕ್ತಿಮಾರ್ಗವನ್ನು ಇನ್ನೊಬ್ಬನು ಜ್ಞಾನಮಾರ್ಗವನ್ನು ಆಚರಿಸುತ್ತಾರೆ. ಇವರಲ್ಲಿ ಮಧ್ಯಮನು (ಭಕ್ತಿಮಾರ್ಗದವ) ಸುಖವಾಗಿ ತನ್ನೊಂದಿಗಷ್ಟೆ ಮುಕ್ತಿಯನ್ನು ಪಡೆಯಬಹುದು. ಇನ್ನುಳಿದೀರ್ವರಲ್ಲಿ ಜ್ಞಾನಮಾರ್ಗದವನು ಅಘೋರವಾದ ಪ್ರಯತ್ನದಿಂದ ಮುಕ್ತಿಯನ್ನು ಹೊಂದುತ್ತಾನೆ. ಇದು ಬಹು ಜನ್ಮಗಳಿಂದ ಗಳಿಸಿದ ಪುಣ್ಯನಿಧಿಯ ಪ್ರಯತ್ನ ಅದಕ್ಕಾಗಿ ಅಂಥನಿಧಿಯನ್ನು ಅರ್ಜನ ಮಾಡಬೇಕಾದರೆ ಸತತೋದ್ಯೋಗ ಬೇಕು. ಅದಕ್ಕಾಗಿ ಲೌಕಿಕದಲ್ಲಿ ಕಾರ್ಯ ಅಥವಾ ಕರ್ಮವೆಂತಲೂ ಅನ್ನುವರು. ಕರ್ಮವು ವೃಕ್ಷದೋಪಾದಿಯಲ್ಲಿದ್ದು ತಾನು ಆಧಾರಭೂತವಾಗಿ ಭಕ್ತಿಯೆಂಬ ಎಲೆಗಳಿಂದ ಛಾಯೆಯನ್ನು ಪರಹಿತಕ್ಕೆ ಬೀರಿ, ಹೂ ಎಂಬ ಪರಿಮಳವನ್ನು ಪರಮತತ್ವವೇದಾದಿ ಶಿರದ ದೆಶೆಯಲ್ಲಿದ್ದು ಮುಕ್ತ ಜೀವಿಗಳ

ನ್ನಾಗಿ ಮಾಡಲು ಪ್ರೀತಿ ವಿಶಲ್ಯವಾಗಿಯೂ, ಫಲನೆಂಬ ಜ್ಞಾನವನ್ನು ಸರ್ವ ರಿಗೂ ಇತ್ತು ಚಿರಂಜೀವಿಯನ್ನು ಮಾಡಲು ಕರ್ಮರೂಪಿ ವೃಕ್ಷವು ನಿರ್ಭಯವಾಗಿದೆ. ಇಂಥ ಅಮೋಘ ಶಕ್ತಿಸಂಘಟನೆಯೂ ನಿತ್ಯ ದುಡಿಮೆಯೂ, ಆರ್ತನಿಗೆ ಪುಣ್ಯನಿಧಿಯಾಗಿಯೂ, ಸತ್ ಶಿಷ್ಯನಿಗೆ ಸದ್ಗುರುವಾಗಿಯೂ ಅವರ ಅಂಧಕಾರ ನಿವಾರಣೆಯನ್ನು ಮಾಡುವಂಥ ಶಕ್ತಿಯೂ, ತಪೋನಿಷ್ಠೆಯೂ ಯಾವಾತನಲ್ಲಿ ಉಂಟೋ ಅಂಥವನೇ ಪರಮ ಕರ್ಮಿಯಾಗುವನು. ಅಂಥ ಮಹಾನ್ ವ್ಯಕ್ತಿಯಂದರೆ ವರಪ್ರಸಾದವನ್ನೀಯುವ ಶ್ರೀಗುರು ಶಿವಬಸವ ಸ್ವಾಮಿಗಳಿಗೆ ಸಮರ್ಥರು.

ಇನ್ನು ಮುಮುಕ್ಷುತ್ವ ಒಂದುಬೇಕು. ಮುಮುಕ್ಷುತ್ವವೆಂದರೆ ಒಂದು ನಿತ್ಯ ಸುಖವಲ್ಲ. ಅದು ಸರ್ವ ಜೀವಿಗಳ ಸುಖದ ಸಾಧನೆಗೆ ಮಾತ್ರ. ಯಾವ ಪಥವು ಯೋಗ್ಯವೆಂಬ ಚಿಂತಸಿಚ್ಛೆಯೇ ಮುಮುಕ್ಷುತ್ವವನ್ನಾಗಿಸುವದು. ಸರ್ವರಲ್ಲಿಯ ಅಂಧಕಾರತಿಮಿರವನ್ನು ನಾಶ ಮಾಡಲು ಒಂದು ಮುಕ್ತ ಜೀವದಿಂದ ಶ್ರೀಗಳವರು ತಾವೆನ್ನದೆ, ತನ್ನವರಿಗೆನ್ನದೆ ಸರ್ವಲೋಕ ಪೀಳಿಗೆಯೇ ತನ್ನ ಸ್ವರೂಪ, ವಿಶ್ವ ಕುಟುಂಬವೇ ತನ್ನ ಕುಟುಂಬವೆಂದು ಭಾವಿಸಿ ಏಕವಾಲಅಶನವನ್ನು ಪ್ರತ್ಯಾಹಾರದೆಶೆಯಲ್ಲಿ ಸೇವಿಸುತ್ತ ಮಾನವನು ಜೀವಿಸಲಿಕ್ಕೆ ತಿನ್ನಬೇಕು, ಆದರೆ ತಿನ್ನಲಿಕ್ಕೆ ಜೀವಿಸಬಾರದು. *We are to eat to live, put not live to eat* ಎಂಬ ತತ್ವವನ್ನು ಆಳವಾಗಿ ಅನುಭವ ಮಾಡಿಕೊಂಡು ಹಗಲಿರುಳೆನ್ನದೆ ಪರಹಿತಕ್ಕಾಗಿ, ಪರರ ಕಲ್ಯಾಣಕ್ಕಾಗಿ ಭಾರತಾಂಬೆಯ ದಿವ್ಯ ಶ್ರೇಯಸ್ಸಿಗಾಗಿ ಜೀವಿಗಳ ಉದ್ಧಾರವೇ ನನ್ನ ಆದ್ಯ ಕರ್ತವ್ಯವೆಂದು ಮಹಾನುಭಾವಿಗಳು ಅರಿತು ಈ ಪವಿತ್ರವಾದ ಈರ ಸೇವೆಯನ್ನು ಸಾಗಿಸಿದ್ದಾರೆ. ಇದೊಂದು ಅವರ ಸಾರಜೀವನದಲ್ಲಿ ಸ್ತುತ್ಯವಾದ ದಿನಚರಿಯೇ ಮಹತ್ವದ ಸಾಧನೆ ಕರ್ಮಶೀಲತ್ವವಾಗಿದೆ.

ನರಪುಂಗವನಿಗಿನ್ನೊಂದು ಅಭ್ಯಾಸವೃತ್ತಿಯೊಂದುಬೇಕು. ಯಾವನರನು ಸ್ವಾರ್ಥದಲ್ಲಿ ಮುಳುಗಿ ವಾಣಿಯನ್ನು ಅನನ್ಯವಾಗಿ ಉಪಯೋಗಿಸಿ ಭ್ರಮಿಸಿ ಬ್ರಷ್ಟನಾಗುವನೋ ಅಂಥವರಿಗೆ ಆದರ್ಶಪ್ರಾಯವಾಗಿ ಅವರ ವಿರುದ್ಧ ಮಾರ್ಗದಲ್ಲಿ ಸುಸಂಸ್ಕೃತ ಹಿತನಿಧಿ ನೆಲಿಸುವದರ ದೆಶೆಯಿಂದ ಗುರುವರ್ಯರು ಕಲ್ಲು ಮುಳ್ಳೆನ್ನದೆ ದೇಹಪರಿವೆಯನ್ನು ಲಕ್ಷಿಸದೆ ಬಹಳವಾಗಿ ಪಾದಚಾರಿಗಳಾಗಿ ವರಪ್ರಸಾದ ನಿಲಯಕ್ಕೆ ಪ್ರಸಾದನಿಧಿಯನ್ನು ಯೋಜಕವನ್ನಾಗಿ ಮಾಡು

ತ್ತಿರುವರೆಂಬುವದಕ್ಕೆ ಬೆಳಗಾವಿಯ ಪುರದಲ್ಲಿ ಹನುಮನ ಬೀದಿಯಲ್ಲಿ ಆತನ ಕಣ್ಣೆದುರಿಗೆ ಭಾರತ ಸುಕುವರರಿಂದ ಸರ್ವಧರ್ಮ ಸಮನ್ವಯವಾಗಿ ಸಕಲರಿಗೂ ಅನ್ನದಾತರಾಗಿ ಭಾರತಾಂಬೆಯ ಸುಕಂಠಕ್ಕೆ ಮಂಗಲಹಾರವನ್ನಾಕಿ ತಲ್ಲಣಿಸುವ ವಿದ್ಯಾರ್ಥಿ ಪ್ರಸಾದ ನಿಲಯವೇ ಪ್ರತ್ಯಕ್ಷ ಪ್ರಮಾಣವಾಗಿದೆ.

ಇಂಥ ಮಹಾನುಭಾವರು ಜನ್ಮವೆತ್ತಿ ಜನರಲ್ಲಿಯ ಮಂಧತೆಯ ಭಾವನೆಯನ್ನು ದೂರೀಕರಿಸುತ್ತ ಜ್ಞಾನಾರ್ಜನೆಯನ್ನು ನೀಡಲೆಂದು ಲೌಕಿಕದ ಅರಿಕೆ. ಅಧ್ಯಾತ್ಮಕಲ್ಲಿ ಪ್ರತ್ಯಾಹಾರವಿದ್ದರೇ ಮಾತ್ರ ಯೋಗಕ್ಕೆ ಅರ್ಹನು ಎಂಬ ನುಡಿಯನ್ನೂ ಜ್ಞಾನಕ್ಕೆ ಕರ್ಮವು ಬೇಕೆಂಬ ಮಾತನ್ನು ಸ್ವತಃ ತಮ್ಮ ವಿದ್ಯಾನುಭವದಿಂದ ಯೋಚಿಸಿ ದೇಶಸೇವೆಯೇ ಈಶಸೇವೆಯಂಬುದನ್ನು ಧಾರಾಳವಾಗಿ ಅರಿತು ಅವೆರಡರ ನಿತ್ಯ ಕೂಡುವಿಕೆಯನ್ನು ನಿರಂತರವಾಗಿ ಮಾಡುತ್ತಿರುವ ವೃತ್ತಿಯೇ ಯೋಗಿಯಂದೆನಿಸುವದು. ಇಂಥ ನಿಯೋಜಕ ನಿತ್ಯ ಸುಖ ಸದ್ಬೋಧಕ ಸುಧೆಯಾನ್ವಿತ ಪರಮ ಮಂಗಲ ಸ್ವರೂಪಿ ಶ್ರೀ ಗುರು ನಿ. ಪ್ರ. ಸ್ವ. ಶಿವಬಸವ ಸ್ವಾಮಿಗಳೇ ನಿಜಯೋಗಿ, ಕರ್ಮಯೋಗಿ ಎಂದು ಯಾವ ಸಂಕೋಚ ಭಾವವಿಲ್ಲದೆ ಧಿಟವಾಗಿ ಹೇಳಬಹುದು. ಈ ತೆರನಾಗಿರುವ ಇಂಥ ಮಹಾತ್ಮರು ಬಹುದಿನ ಬಾಳಿ ಮಾನವರ ಉದ್ಧಾರವಾಗಲೆಂದು ಆ ಬಾಲಿಂದುಧರನಿಗೆ ಪುಷ್ಪಾಂಜಲಿಗಳು.

ಶ್ರೀ ಮತ್ಪರಮ ಪೂಜ್ಯ, ಪ್ರಣವಸ್ವರೂಪಿ, ನಿತ್ಯ ನಿರಂಜನ ಜಗದ್ಗುರು
ಶ್ರೀ ಶಿವಯೋಗಿ ಕುಲಭೂಷಣ

# ಶ್ರೀ ಸಂಗನಬಸವ ಶಿವಯೋಗಿ ಸಾರ್ವಭೌಮರು

ಸುಕ್ಷೇತ್ರ ಬಂಥನಾಳ ಅವರ ಅಡಿದಾವರೆಗಳೆಡೆಯಲ್ಲಿ

ಮಸೂತಿ ಗ್ರಾಮಪಂಚಾಯತಿ ಸಮಿತಿಯ ಸರಪಂಚ
ಹಾಗೂ ಸದಸ್ಯರು ಸಮರ್ಪಿಸಿದ

# ಬಿನ್ನವತ್ತಳೆಯ ಮಾಲಿಕೆಯು.



ಶ್ರೀ ಗುರುವೆ! ಪರಮ ವಿಬುಧ ಸಾರವೆಂದು
ಬಾಗುವೆವು ಭಯಭಕುತಿಯಲಿ
ಚಾಗ ಸೊಗವ ನೀಡಿ ಪಾಲಿಪುದೆಂದು
ಮೊಗವಿರಿಸಿದೆವು ಬೇಡುತಲಿ. ೧.

ಶಿವಭಾವವನು ಎಮ್ಮೊಳಿರಿಸುತಲಿ ನೀ
ಭವರೋಗವನು ನಿವಾರಿಸಿದಯ್ಯ
ತವಕರುಣ ನುಡಿಯ ನೀವುದಕೆ ನೀ
ತವಕದಲಿ ದಯಮಾಡಿಸಿದಯ್ಯ ೨.

ವಚನ ಪ್ರವಚನ ಬಸವರಾಜನ ಮೊಗವು
ಶುಚಿಯಾದ ನಿನ್ನ ಜಸವೆಸವು
ರಚಿಸುತಿದೆ ಎಮ್ಮೊಳು ನವನೀತಸೊಗವು
ಶುಚಿಯಾಗುತಿದೆ ನಿನ್ನದೇ ವಶವು ೩

ಯೋಗದೊಳು ಭಕ್ತಿಯೋಗ ಮಿಗಿಲೆಂದು
ಭೋಗವನು ತೆಗೆಯುತ ಭವ
ರೋಗನಿವಾರಿಸಲು ಕರುಣೆಯೊಳುಮಿಂದು
ಲೋಗರನು ತಿರುಗಿಸಿದೆ ಜವದಿ ೪.

ಗಿರ್ವಾಣಭಾಷೆ ಬೋಧವ ಶರಣಗಣ
ನಿರ್ಮಾಣಮಾಡಿತ್ತೈ ವಚನವನು
ಕರ್ಮಾದಿಗಳನು ಕಳೆದು ಸುಕರ್ಮಿಯಾದಣ್ಣ
ಧರ್ಮಾಗರ ವಚನವನು ತಿಳಿಸಿಸುದನು ೫.

ಸಾಯುಜ್ಯ ಪದನಾಲ್ಕರ ಮೀರಿದ ಪದಪ
ನೀಯುತ ನೀನವರ ಮರ್ಮವ
ತಾಯಿ ತೆರದಿ ತಿಳಿಸಿದೆನ್ನೊಳು ಏಕಪದವ
ನ್ಯಾಯ ಮಾತಿನೊಳು ಧರ್ಮವ ೬.

ರಸಿಕರನ್ನಾಗಿ ರಚಿಸಿದೆನ್ನುವರ ನೀ
ನರಸಿಕರನು ಅರಸುತಲದರ
ಪರಿಸತ್ಕರ್ಮವ ಪೇಳಿದಯ್ಯ ಅದರ
ನೆರವಿನಿಂದಂ ಗುರುಮಠದ ಸಿರಿ ೭.

ವಶವು ದೊರಕಿತು ಪರಮಪಾವನವ
ಹಿರಿ ಚಾವಡಿಯು ಮೇಣಾ
ದರಪಡೆಯಿತೋ ಪಳ್ಳವೊಂದು ಪೇಳುವ
ಕರಶೋಭಿಸಿತು ತವಪಾದವು ೮

ಭೌತಿಕವು ನಿನ್ನ ಪಡೆದ ಮುಸುವತಿಲುವು
ಪೂತಿಮಂಗಲ ತಿಲಕಮಾತೆಯು
ಸ್ಫೂರ್ತಿಸೆಲೆಯೊಡೆಯಿತೋ ಎಸೆವ ಚೆಲವು
ನೀತಿ ರೀತಿಯಿಂದ ಪಡೆದ ದಯವು ೯

ಮಕ್ಕಳು ನಾವು ಅಕ್ಕರದಿ ಹೆತ್ತವರು ನೀವು
ಚೊಕ್ಕ ಮಿಕ್ಕಲೆಂದು ಸಂತೆಯನು
ಉಕ್ಕುಮನದಿ ಉದ್ಘಾಟಿಸಿದತಿ ಮುದದಿ
ಸಿಕ್ಕ ಕ್ಷಣದಿ ಸಲ್ಲಿಸಿದೆವು ನಿವೇದನವನು ೧೦.

ಋಷಿಯೇ ಪರಮ ಭೂಷಣದಿ'ಹ
ರುಷದಿಂದ ದಯಮಾಡಿಸಿದೆ
ತುಷದಿಂದ ತಿಳಿಸಿದೆಲ್ಲವನು ವಿಸ್ತರಿಸಿಹೆ ಕ
ಲುಷಮನಕಳೆದೆಲ್ಲವನು ಮುದದಿ ೧೧.

ಈ ತೆರದಿಂ ತವಚರಣ ಕೃಪೆಯು ಎಮ್ಮ ಮೇಲಿರಿಸಿ ಸದಾ ಕಾಪಾಡುವಿರೆಂದು ಪರಮ ರಕ್ಷಣಭಾರ ಸದ್ವಿಶಾಲ ಸ್ಥಿರ ಸಂರಕ್ಷಣ ಸತ್ಪಾದ ಕಮಲದಲ್ಲಿ ಎಡೆವಿಡದೆ ಪ್ರಾರ್ಥಿಸುವೆವು.

---

# ಬಂಗಾರ ಗುದ್ದಲಿ

( ಲೇಖಕರು:- ಶ್ರೀ ಆನಂದ ಕವಿಗಳು- ಕುಳಗುಂದ. )



ರಾಗ- ಮಾಲ ಕಂಸ

ಬಾ ! ಎನ್ನ ಗುದ್ದಲಿಯೆ ! ಭಾರತದ ಬನಸಿರಿಯೆ !
ಭೂಲೋಕ ಕಾಮಧೇನುವೆ
ಬಾ ! ಎನ್ನ ಹೆಗಲ ಮೇಲೆ

ಕಾಲಲ್ಲಿ ಬಲವಿಲ್ಲ ! ಕೈಯ್ಯಲ್ಲಿ ಕಸುವಿಲ್ಲ.
ಹೊತ್ತಿಗೆಯ ಬೆಂಬತ್ತಿ ಹುಳುಕಾಗಿ ಹೋಗಿರುವೆ
ಬಾರಪ್ಪ ಗುದ್ದಲಿಯೆ ! ಬಾ ! ಎನ್ನ ಹೆಗಲ ಮೇಲೆ

ಬೇನೆಯಂ ಸಲೆಕಳೆದೆ ಬೇಸರವನೋಡಿಸಿದೆ
ಆರೋಗ್ಯ ಭಾಗ್ಯನೇ ವೈದ್ಯರಾ ಗಂಡನೇ
ಬಾ ! ಎನ್ನ ಹೆಗಲ ಮೇಲೆ

ಗೊಬ್ಬರದ ಅಡಿಗೈದೆ, ಬೀಜವಂ ಬಿತ್ತಿಸಿದೆ
ಬಾವಿಯಂ ತೋಡಿಸದೆ ಭಪ್ಪರೇ ಭಂಟನೆ !
ಬಾ ! ಎನ್ನ ಹೆಗಲ ಮೇಲೆ

ಚಂದದಲಿ ಚಿಗುರಿಸಿದೆ, ಹಂದರವ ಹಾಕಿಸಿದೆ,
ಚಲುವಿಕೆಯ ಹೆಚ್ಚಿಸಿದೆ ಬೇಸಾಯ ಚಂದಪ್ಪ
ಬಾ ! ಎನ್ನ ಹೆಗಲ ಮೇಲೆ

ತಂಪಾದ ನೆರಳನ್ನು ಕಂಪಾದ ಹೂವನ್ನು
ಇಂಪಾದ ಗಾನವನು ಗೈಯಿಸುವ ಕವಿರಾಜ
ಬಾ ! ಎನ್ನ ಹೆಗಲ ಮೇಲೆ

ಮಿರುಗುತಿಹ ಮಿಡಿಯನ್ನು ಕಸವುಳ್ಳ ಕಾಯನ್ನು
ಕಳೆಯುಳ್ಳ ಪಾಡನ್ನು ಕೊಡಬಲ್ಲ ಕಾಮಣ್ಣ !
ಬಾ ! ಎನ್ನ ಹೆಗಲ ಮೇಲೆ

ಬರಿವವರು ಕೆರೆವವರು ನಿನ್ನನ್ನು ನೆರೆಮರೆತು
ರೋಗದಿಂ ಕೊರಗುತ್ತ ಕೊಳೆತಿಹರು ನೋಡಣ್ಣ !
ಬಾ ! ಎನ್ನ ಹೆಗಲ ಮೇಲೆ

ಹರಹರಾ ! ಗುದ್ಲೆಪ್ಪ ಕರುಣೆ ನಿನಗಿಲ್ಲವೇ
ಬಾ! ಬೇಗ ಪ್ರೀತಿಯಿಂದು ದೇಶ ಗೈಯ್ಯೋಣ
ಬಾ ! ಎನ್ನ ಹೆಗಲ ಮೇಲೆ

ಹಳ್ಳಿ– ಹೊಳಲುಗಳೆಲ್ಲ ನಿನ್ನಿಂದೆ ಉದ್ಧಾರ
ಗುದ್ಲೆಪ್ಪ ಸ್ವಾಮಿಯೋ ಹಾಡುತ್ತ ಮುದ್ದಿಡುವೆ
ಬಾ ! ಎನ್ನ ಹೆಗಲ ಮೇಲೆ

ದುಡಿಯುತಿಹ ಬಡವರಿಗೆ ಬೇಡಿದುದ ಕೊಡಬಲ್ಲ
ಕೊಡುಗೈಯ್ಯ ದೊರೆಯೋ ಅನ್ನದಾನೀಶ್ವರನೆ
ಬಾ ! ಎನ್ನ ಹೆಗಲ ಮೇಲೆ

'ಕಾಯಕವೆ ಕೈಲಾಸ' ಎಂದ್ಹೇಳ್ದ ಬಸವಣ್ಣ
ದೇವರಾ ಭಕ್ತನಂ ಪೊರೆಯುಯ್ಯ ಗುದ್ದಲಿಯೆ
ಬಾ ! ಎನ್ನ ಹೆಗಲ ಮೇಲೆ

ಮೇಲಾದ ಮೋಕ್ಷವನು ಮೋದದಿಂ ಕೊಡುವಂಥ
ಬಂಗಾರ ಗುದ್ದಲಿಯೆ ಬಲಗೊಂಬೆ ನಿನ್ನನ್ನು
ಬಾ ! ಎನ್ನ ಹೆಗಲ ಮೇಲೆ

ಭಾರತದಿ ಹಬ್ಬಿರುವ ಬಡತನವ ಕಿತ್ತೊಗೆದು
ಸಂಪತ್ತು ಪುಟ್ಟಿಸಲು ಬಾರಪ್ಪ ಗುದ್ದಲಿಯೆ !
ಬಾ ! ಎನ್ನ ಹೆಗಲ ಮೇಲೆ

## ಮಾನವಗೆ ಜಗದೊಳಗೆ
## ಕಾಯಕದಿ ಮಿಗಿಲಾದ ಕೆಳೆಯನುಂಟೆ ?

---

ಮಾನವನ ಬೆಲೆಯುಳ್ಳ ಕೊಹಿನೂರವೊಂದುಂಟೆ ?

ಮಾನೋವಿ ಹಬ್ಬದಿಂ ಮಿಗಿಲಾದ ಹಬ್ಬಮುಂಟೆ ?

ಮಾನ ಧನದಿಂದ ಹಿರಿದಾದ ಧನಮುಂಟೇ ?

ಮಾನವಗೆ ಶಿವನಾಮ ಮಮಾತೆಯಿರೆ ಕೊರತೆಯೊಂದುಂಟೆ ?

ಮಾನಸ ಗ್ರಹಣದಿಂದೆ ಘನವಾದ ಮೋಕ್ಷವೊಂದುಂಟೆ ?

ಮಾನವಗೆ ಜಗದೊಳಗೆ ಕಾಯಕದಿ ಮಿಗಿಲಾದ ಕೆಳೆಯನುಂಟೆ ?

—ಶ್ರೀ ಆನಂದಕವಿಗಳು— ಕುರುಗುಂದ.

---

# ಶಿವಾನುಭವ



ಶಿವಾನುಭವವೆಂಬೈದಕ್ಷರಗಳು
ಹೃದಯದೊಳಿರಬೇಕು
ಶಿವಯೋಗಿಯೆಂಬುವ ನಾಮಸ್ಮರಣೆ
ಅದಕಾಸರವಿರಬೇಕು

ಅನ್ಯ ಜಾತಿಗಳ ನಿಂದೆಯ ಮಾಡದೆ
ಮುಂದೆ ನಡಿಯಬೇಕು
ಅಂದು ಇಂದಿನ ಕುರುಹುಗಳೆರಡನು
ಒಂದೆ ಮಾಡಬೇಕು

ವೀರಶೈವನಾಗಿ ಜನಿಸಿದ ಬಳಿಕ
ಲಿಂಗವು ಇರಬೇಕು
ಅಂಗನಾದವನು ಎಂದಿಗೂ ಬಿಡದೆ
ಧರಿಸುತಲಿರಬೇಕು

ಲಿಂಗವಾಗಿ ಲಿಂಗೈಯ್ಯನ ಪೂಜೆಯ
ಮಾಡುತಲಿರಬೇಕು
ಗುರು ಲಿಂಗ ಜಂಗಮ ತ್ರಿವಿಧಗಳು
ಒಂದೆಯನ್ನಬೇಕು

ಅಣ್ಣನ ವಚನ ಅಕ್ಕನವಿರತಿಯ
ಕಲಿಯುತಲಿರಬೇಕು
ಕಣ್ಣಿಗೆ ಕಾಣುವದೆಲ್ಲವು ಲಿಂಗವು
ಎಂದು ತಿಳಿಯಬೇಕು

ನಾನು ಎಂಬ ಮಮಕಾರದ ಕರಿಕೆಯ
ಬೇರ ಕೀಳಬೇಕು
ನೀನು ಎಂಬ ನಿಜಭಕ್ತಿಯ ಸೇವೆಯ
ಸವಿಯುತಲಿರಬೇಕು

ಶಿವಾನುಭವದ ಅಧಿಪತಿ ದೇವರು
ಮಹಾಂತ ಗುರುವಾಗಿ
ಶರಣರ ಬಳಗದ ಕ್ಷೇಮವ ನೋಡುವ
ಮೋಕ್ಷದ ಮಹಾ ಯೋಗಿ

ಕೀಳು ಮೇಲುಗಳ ಗಾಳಿಗೆ ಸೋಂಕದ
ಜಂಗಮ ತಾನಾಗಿ
ಬೆಳೆಯುತಲಿರುವ ಶಿವಾನುಭವದ
ಪೋಷಕ ಶಿವಯೋಗಿ

ಧಾರವಾಡದೊಳು ಮೆರೆಯುವ
ಪರತರ ಅಥಣಿಯ ಶಿವಯೋಗಿ
ಆತನ ಹೆಸರನು ಪಸರಿಸುತಿರುವನು
ಮೃತ್ಯುಂಜಯ ಯೋಗಿ

ಕಿಂಕರತನದಲಿ ಕುಳಿತು ಹೇಳುವನು
ಶಂಕರ ತಾನಾಗಿ
ಇಂದು ನಮ್ಮ ನಿಮ್ಮೆಲ್ಲರ ಹೃದಯದ
ಜೀವದ ಕಳೆಯಾಗಿ

— ಶಿವಯೋಗಿ ಹುಲಿಕಂತಿಮಠ,
ಸಾ॥ ಚಿಕ್ಕಕುರವತ್ತಿ

# ಎಲ್ಲರಂತಲ್ಲ ಎನ್ನ ಇನಿಯ !



ಎಲ್ಲರಂತಲ್ಲವ್ವ ಎನ್ನ ಇನಿಯ
ಬಾಳಿನೇರಿಳಿತದಲಿ ಎನ್ನನು ಮರೆಯ- ||

ಶೈಶವಸ್ಥೆಯು ಕಳೆದು ಯೌವನಕೆ ಬರಲು
ಪರಗತಿಯ ಪಥದಲ್ಲಿ ಗುರುವು ಕರೆತರಲು
ಒಲಿದು ಕೈಯಿಡಿದೆ ನಾಂ ನಿರ್ಮಾಯ ಪತಿಯ
ಪಡೆದೆನವ್ವಾ ಅದ್ಭುತದಗತಿಯ ! ||·||

ಚೆಲುವಗಂಡಗೆ ರೋಷತಾಪಗಳುಯಿಲ್ಲ
ವ್ಯಸನ ಮದಗಳು ಮೊದಲೆಯಿಲ್ಲ-ಯಿಲ್ಲ !
ಸ್ವಾರ್ಥದಿಂ ಜೀವನವ ನಡೆಸುವನು ಅಲ್ಲ
ಭಜಕಭೂಮಿಕೆಯಲ್ಲಿಯಿರುವವರ ಕೊಲ್ಲ! ||೧||

ಆಸೆ ಆಮಿಷಗಳು ಎನ್ನ ಗಂಡಗಿಲ್ಲ
ಪರರ ಹಿತವನು ಬಯಸದ ಜೀವವಲ್ಲ !
ಕಡು ಮೋಹದಿಂ ರಮಿಸುವ ಕಾಲಬಲ್ಲ
ಇಹದ ಜೀವಿಯ ಚಿಂತೆ ತಾನೆ ಬಲ್ಲ-ಬಲ್ಲ. ||೩||

ಕಡುಚೆಲುವ 'ಲಿಂಗಯ' ಎನ್ನ ಪತಿಯು
ಇಹ-ಪರಕೆ ಪತಿಯೆ ಗತಿಯು-ಮತಿಯು
ನಿಷ್ಕಾಮ ಪೂಜೆಯಲಿ, ಪರಿಶುದ್ಧ ಹೃದಯದಲಿ
ದೇದೀಪ್ಯಮಾನದಿಂ ಬೆಳಗುವಸ್ತುತಿಯು. ||೪||

—ಶ್ರೀ. ಷ. ಬ್ರ. ಗುರುಸಿದ್ಧಶಿವಾಚಾರ್ಯಸ್ವಾಮಿಗಳು,
ಗುರುವಿನಪುರಮಠ.

# ವೀರಶೈವೇತಿಹಾಸ

ಈ ವರೆಗೆ ನಾವು ಶಿವಶರಣರ ತತ್ವಗಳನ್ನು ಕುರಿತು ವಿವೇಚಿಸುತ್ತ ಅನೇಕ ಗ್ರಂಥಗಳನ್ನು ಹೊರಪಡಿಸಿದೆವು. ಹಾಗೆಯೇ ಇಕ್ಕೇರಿ, ಸ್ವಾದಿ, ಬೀಳಗಿ, ಹಾಗಲವಾಡಿ ಈ ಮೊದಲಾದ ರಾಜವಂಶಗಳ ಬಗ್ಗೆಯೂ ಗ್ರಂಥಗಳನ್ನು ಪ್ರಕಾಶಪಡಿಸಿದೆವು. ಇದಲ್ಲದೆ ಈ ರಾಜವಂಶಗಳ ಬಗ್ಗೆ ಅನೇಕ ಟೀಕೆ ಟಿಪ್ಪಣಿಗಳನ್ನು ಸಹ ಪತ್ರಿಕೆಯಲ್ಲಿ ಪ್ರಕಟಿಸಿದೆವು. ಇವಲ್ಲದೆ ಬಸವಾದಿ ಪ್ರಮಥರ ಕಾಲದಲ್ಲಿ ಆಗಿ ಹೋದ ಶಿವಶರಣರ ಬಗ್ಗೆ ನಾಲ್ಕು ದೊಡ್ಡ ಗ್ರಂಥಗಳನ್ನು ಸಹ ಬರೆದೆವು. ಆದರೆ ಬಸವಾದಿ ಪ್ರಮಥಗ ಚರಿತ್ರೆಗಳ ಬಗ್ಗೆ ಇನ್ನೂ ಅನೇಕ ಮಹತ್ವದ ವಿಷಯಗಳಿದ್ದು ಅವುಗಳ ಬಗ್ಗೆ ನಾವು ಸಾಕಷ್ಟು ಚರ್ಚೆಗಳನ್ನು ಮಾಡಿಲ್ಲ. ಆದ್ದರಿಂದ ಬಹುಜನರು ಅವರಲ್ಲಿ ಮುಖ್ಯವಾಗಿ ಜೈನ, ಬ್ರಾಹ್ಮಣರು ಬರೆದಿರುವ ಸುಳ್ಳು ವಿಧಾನಗಳನ್ನು ಸಮರ್ಥಿಸಿ ವೀರಶೈವ ಸಮಾಜ ಮತ್ತು ವೀರಶೈವ ವಿಭೂತಿಗಳ ಹೆಸರಿಗೆ ಕಲಂಕ ಹತ್ತುವಂತಹ ವಿಧಾನಗಳನ್ನು ಕಾಲ ಕಾಲಕ್ಕೆ ಮಾಡುತ್ತಲಿದ್ದಾರೆ. ಇವುಗಳನ್ನು ವೀರಶೈವ ವಿರೋಧಿಗಳು ಅನುಸರಿಸಿ ಶಿವಶರಣರ ಬಗ್ಗೆ ಮತ್ತು ಅವರ ತತ್ವಗಳ ಬಗ್ಗೆ ಅಪಪ್ರಚಾರ ಮಾಡುತ್ತಲಿದ್ದಾರೆ. ಉದಾಹರಣಾರ್ಥವಾಗಿ ಚನ್ನಬಸವಣ್ಣನಿಗೆ ತಂದೆ ಇದ್ದಿದ್ದಿಲ್ಲ. ಅವನು ಹುಟ್ಟಿದ್ದು ಒಬ್ಬ ಡೋಹರನಿಂದ. ವಿರಕ್ತೆಯಾದ ಮಹಾದೇವಿಯಕ್ಕನಿಗೆ ಲಗ್ನವಾಗಿ ಸಂಸಾರ ಸುಖದಲ್ಲಿದ್ದಳು. ವಿರಕ್ತಾಶ್ರಮಕ್ಕೆ ಮೂಲಿಗನಾದ ಅಲ್ಲಮಪ್ರಭುವು ಒಬ್ಬ ಅರಸನ ಮಂದಿರದಲ್ಲಿ ಕಾಮವಾಸನೆಗೆ ಸಿಲುಕಿಕೊಂಡು ಕಾಲ ಕಳೆದನು. ಹೀಗೆ ಅನೇಕ ವಿಧಾನಗಳನ್ನು ಮಾಡುತ್ತಿರುವರಲ್ಲದೆ ಅವುಗಳನ್ನು ಗಣ್ಯ ಸಾಹಿತಿಗಳು ಎಂದೆನಿಸಿಕೊಳ್ಳುವಂಥವರು ಸಹ ತಮ್ಮ ಗ್ರಂಥಗಳಲ್ಲಿ ಬರೆಯತೊಡಗಿದ್ದಾರೆ. ಅವುಗಳ ಬಗ್ಗೆ ಆಕ್ಷೇಪಣೆಯನ್ನು ಸಮಾಜದವರು ತೆಗೆದುಕೊಂಡರೂ ಅವುಗಳನ್ನು ಅವರು ಲಕ್ಷಿಸುವದಿಲ್ಲ. ಸರಕಾರೀ ಕಚೇರಿಗಳಲ್ಲಿ ಮತ್ತು ವಿದ್ಯಾಸಂಸ್ಥೆಗಳಲ್ಲಿ ವೀರಶೈವ ವಿರೋಧಿಗಳು ಈಗ ತುಂಬಿದ್ದಾರೆ. ಈ ಸ್ಥಿತಿಯಲ್ಲಿ ವೀರಶೈವರು ಸುಮ್ಮನೆ ಕುಳ್ಳಿರದೆ ಯಾವ ಧೋರಣದಿಂದ ನಡೆಯಬೇಕೆಂಬುದನ್ನು ಅವರು ನಿರ್ಧರಿಸುವದು ಅಗತ್ಯವಾಗಿದೆ. ಇದಕ್ಕೋಸ್ಕರ ನಾವು ಕೆಳಗಿನ ಸೂಚನೆಗಳನ್ನು ಮಾಡುತ್ತಲಿದ್ದೇವೆ.

ಈ ಕಾಲದಲ್ಲಿ ವೀರಶೈವರ ವಿದ್ವಾಂಸರ ಮತ್ತು ಸಾಹಿತಿಗಳ ಸಂಖ್ಯೆಯು ಬೆಳೆಯುತ್ತಲಿದೆ. ಅವರಲ್ಲಿ ಗಣ್ಯರಾದ ಮಹನೀಯರನ್ನು ಆರಿಸಿಕೊಂಡು ಅವರದೊಂದು ಸಭೆಯನ್ನು ಕರೆಯಬೇಕು ಇದು ಒಂದು ಮಧ್ಯವರ್ತಿ ಸ್ಥಳದಲ್ಲಿ ಉದಾ:— ಧಾರವಾಡ ಅಥವಾ ಹುಬ್ಬಳ್ಳಿ, ಬಾಗಲಕೋಟೆ ಅಥವಾ ವಿಜಾಪುರ ಅಥವಾ ಧಾವಣಗೇರಿ ಇಲ್ಲಿ ಕರೆದು ಚರ್ಚಿಸತಕ್ಕ ವಿಷಯಗಳನ್ನು ಗೊತ್ತುಪಡಿಸಿ ಅವುಗಳ ಬಗ್ಗೆ ಆದ ನಿರ್ಧಾರಗಳನ್ನು ಪ್ರಕಟಪಡಿಸಬೇಕು. ಹೀಗೆ ಪ್ರಕಟಿಸಿದನಂತರ ಕಾಲಕಾಲಕ್ಕೆ ಅನೇಕ ಭಿನ್ನಮತಗಳು ಹೊರಬೀಳುವ ಸಂಭವವದೆ. ಆಗ ಪುನಃ ಸಭೆಯನ್ನು ಕರೆದು ಅವುಗಳನ್ನು ಚರ್ಚಿಸಿ ಕೆಲವೊಂದು ನಿರ್ಣಯಕ್ಕೆ ಬರಬೇಕು. ಒಂದುವೇಳೆ ವೀರಶೈವ ವಿರೋಧಿಗಳು ಸಮಾಜದ ಮಾನ ಅಥವಾ ಇಭ್ರತಿಗೆ ವಿರೋಧವಾದ ವಿಧಾನಗಳನ್ನು ಪ್ರಕಟಿಸಿದ್ದರೆ ಅವರನ್ನು ನ್ಯಾಯಾಸನದವರೆಗೂ ಎಳೆದು ತಮ್ಮ ವಿಧಾನಗಳನ್ನು ಸರಿಪಡಿಸಿಕೊಳ್ಳಬೇಕೆಂದು ನಮ್ಮ ಸೂಚನೆ ಇದೆ.

ಈ ಪ್ರಕಾರ ಹಿಂದೆ ಒಂದುಕಾಲದಲ್ಲಿ ಶ್ರೀಯುತ ಸಿದ್ಧರಾಮಪ್ಪ ಪಾವಟೆ ವಕೀಲ ಹುಬ್ಬಳ್ಳಿ, ಶ್ರೀ ಹಾನಗಲ್ಲ ಕುಮಾರಸ್ವಾಮಿಗಳು ಮೊದಲಾದ ಮಹನೀಯರು ವರ್ತಿಸಿದ್ದಾರೆ. ಆದರೂ ಅವರು ಹಾಗೆ ಮಾಡಿದ್ದರ ಪರಿಣಾಮವು ಇನ್ನೂ ಆಗಿಲ್ಲೆಂಬದು ಕಂಡುಬರಹತ್ತಿದೆ. ಆದ್ದರಿಂದ ಇನ್ನುಮುಂದೆ ವೀರಶೈವರು ತಟಸ್ಥರಾಗಿ ಕುಳಿತುಕೊಳ್ಳಬಾರದು.

ಈ ಕಾರ್ಯದಲ್ಲಿ ಅಖಿಲಭಾರತ ಅಧ್ಯಕ್ಷರಾದ ಶ್ರೀ ಬಂಥನಾಳ ಶಿವಯೋಗಿಗಳು ಜಾಗ್ರತೆಯಿಂದ ಕಾರ್ಯಮಾಡಬೇಕೆಂದು ನಾವು ಅವರಿಗೆ ಸೂಚಿಸುತ್ತೇವೆ. ಇದರಲ್ಲಿ ಅವರಿಗೆ ಸಹಾಯಕರಾಗಿ ಡಾ|| ಎಸ್. ಸಿ. ನಂದೀಮಠ, ಡಾ|| ರಾ|| ಬ|| ಹಳಕಟ್ಟಿ, ಶ್ರೀ ನಾಗೇಶಶಾಸ್ತ್ರಿಗಳು ಬಳ್ಳಾರಿ, ಆಸ್ಥಾನವಿದ್ವಾನ್ ಬಿ. ಶಿವಮೂರ್ತಿ ಶಾಸ್ತ್ರಿಗಳು ಬೆಂಗಳೂರು ಇವರು ಮೊದಲಾದವರು ಶ್ರೀ ಸ್ವಾಮಿಗಳವರಿಗೆ ಸಲಹೆಗಾರರಾಗಿ ವರ್ತಿಸಬೇಕೆಂತಲೂ ನಮ್ಮ ಸೂಚನೆ.

ವಿಜಾಪುರ
ತಾ|| ೭-೧೧-೫೭.

ಸಂಪಾದಕ— ಶಿವಾನುಭವ.

# ಶ್ರೀಸದ್ಗುರು ಗದುಗಿನ ಶಿವಾನಂದ ಸ್ವಾಮಿಗಳವರ ಪುಣ್ಯತಿಥಿ.

(ಬರೆದವರು:— ಶ್ರೀ ಎಚ್. ಆರ್, ಬಂಡಿವಡ್ಡರ, ಟ್ರೇ.ಕಾ. ಜಮಖಂಡಿ.)



ಮಾನವ ಆತ್ಮೋದ್ಧಾರಕ್ಕೆ ಈಶ ಸಂಕಲ್ಪವು ಮಹಾಪ್ರತಿಭೆಯಾಗಿದೆ ಎಂದು ಈಶೋಪನಿಷತ್ತಿನಲ್ಲಿ ವಿವರಿಸಿದ ವಾಣಿ ಈ ಶುಭಪ್ರಸಂಗದಲ್ಲಿ ಜ್ಞಾಪಕಕ್ಕೆ ಬರುತ್ತಿದೆ. ಶಿವಾನುಭವಸಾರವನ್ನು ಮಾನವರು ಸವಿದು ಪಾವನತೆಯನ್ನು ಗಳಿಸಿಕೊಂಡು ಶಿವಸಾಯುಜ್ಯವನ್ನು ಸಂಪಾದಿಸಲಿ, ಎಂಬ ಮಹಾ ಉದ್ದೇಶವನ್ನು ಗುರಿಯಾಗಿಟ್ಟುಕೊಂಡವರು ಪುಣ್ಯಪುರುಷರು, ಅದಕ್ಕನುಗುಣವಾಗಿ ವಿಜಾಪೂರ ಜಿಲ್ಹೆಯ ಹುನ್ನೂರು ಗ್ರಾಮದಲ್ಲಿ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಶ್ರೀಮಲ್ಲಿಕಾರ್ಜುನ ಮಹಾಸ್ವಾಮಿಗಳು ಗದಗ ಅವರು ಶ್ರಾವಣದ ಶುಭಮಾಸದಲ್ಲಿ ಎಲ್ಲ ಜನತೆಯೂ ಎಲ್ಲ ಮತದವರೂ ಶಿವಾನುಭವ ಪಡೆದು ಪುನೀತರಾಗಲೆಂಬ ಮಹತ್ತಾಶೆಯಿಂದ ಪ್ರವಚನ ಕಾರ್ಯವನ್ನು ಪ್ರಾರಂಭಿಸಿದ್ದಾರೆ.

ಶ್ರೀಮತ್ ಸದ್ಗುರು ಶಿವಾನಂದ ಸ್ವಾಮಿಗಳವರ ಪುಣ್ಯತಿಥಿಯ ಪ್ರಯುಕ್ತ ಶ್ರಾವಣ ಶುದ್ಧ ಪಂಚಮಿಯ ಉದಯಕಾಲದಲ್ಲಿ ಜಪಾನುಷ್ಠಾನ ಜರುಗಿಸಿ ಪುಣ್ಯಜೀವಿಗಳ ಪ್ರಸಾದವು ಮಾನವನಿಗೆ ಪ್ರಾಪ್ತವಾಗಲೆಂದೂ ಸಾಕ್ಷಾತ್ಕರಿಸಲೆಂದೂ ಭಕ್ತಜನರು ಸಿದ್ಧರಾದರು.

ಜಪಾನುಷ್ಠಾನಕ್ಕೆ ಶ್ರೀಮನ್‌ನಿರಂಜನ ಪ್ರ. ಸ್ವ. ಶ್ರೀನಾಗನೂರ ಮಹಾಸ್ವಾಮಿಗಳೂ ಶ್ರೀ. ಕೃತ್ರಿ ಬ್ರಹ್ಮನಿಷ್ಟ ಶ್ರೀ ಶಾಂತವೀರಸ್ವಾಮಿಗಳೂ ಶ್ರೀಮನ್ ನಿರಂಜನ ಪ್ರ. ಸ್ವ. ಶ್ರೀ ಲಿಂಗಾನಂದ ಸ್ವಾಮಿಗಳೂ ಶ್ರೀಮತ್ ಸದ್ಗುರು ಶ್ರೀಶಂಕರ ಸ್ವಾಮಿಗಳು ವೀರಭಿಕ್ಷಾವತಿಮಠ ಹುಬ್ಬಳ್ಳಿ ಹಾಗೂ ಶ್ರೀ ವೇದಮೂರ್ತಿ ಚರಂತಿಸ್ವಾಮಿ ಮುತ್ತಿನಕಾಂತಿಮಠ ಜಮಖಂಡಿಯವರೂ ಶ್ರೀಮನ್ ನಿರಂಜನ ಪ್ರ. ಸ್ವ. ಶ್ರೀ ಚಿಕ್ಕವೀರಸ್ವಾಮಿಗಳೂ ಉಪಸ್ಥಿತರಿದ್ದರು. ಶ್ರೀಮಾನ್ ನಿರಂಜನ ಪ್ರ. ಸ್ವ. ನಾಗನೂರ ಸ್ವಾಮಿಗಳವರು ಅಧ್ಯಕ್ಷತೆಯನ್ನು ವಹಿಸಿದ್ದರು.

ಜಪಾನುಷ್ಠಾನವು ಆತ್ಮೋದ್ಧಾರದ ಸಾಧನವು. ಜಪಸಾಧನೆಯಿಂದ ಮನದ ದೃಢತೆ ನಿಶ್ಚಲತೆ ಲಭಿಸಿ ಆತ್ಮವಿಕಾಸವಾಗಿ ಶಿವಸಾನಿಧ್ಯವನ್ನು ಸರಾಗ